# ಶ್ರೀಮದ್ಭಾಗವತ

## ಅಷ್ಟಮಸ್ಕಂಧ



ಅನುವಾದ ಹಾಗೂ ಸಂಪಾದನೆ

ಪಂ. ಪೂ. ಗುತ್ತಲ ರಂಗಾಚಾರ್ಯರು

ಕುಲಪತಿಗಳು, ಶ್ರೀಜಯತೀರ್ಥವಿದ್ಯಾಪೀಠ

ವಿಶ್ವಮಧ್ವಮಹಾಪರಿಷತ್ ಗ್ರಂಥಮಾಲಾ -೧೫೯

# ಶ್ರೀಮದ್ಭಾಗವತ

## ಅಷ್ಟಮಸ್ಕಂಧ

*ಅನುವಾದ ಹಾಗೂ ಸಂಪಾದನೆ*
ಪಂ.ಪೂ.ಗುತ್ತಲ ರಂಗಾಚಾರ್ಯರು
ಕುಲಪತಿಗಳು, ಶ್ರೀಜಯತೀರ್ಥವಿದ್ಯಾಪೀಠ

ಸಹ ಸಂಪಾದನೆ :
ಪಂ. ವಾದಿರಾಜಾಚಾರ್ಯ ಕರಣಂ

ಪ್ರಕಾಶನ :
ಜಗದ್ಗುರು ಶ್ರೀಮನ್ಮಧ್ವಾಚಾರ್ಯಮೂಲಮಹಾಸಂಸ್ಥಾನ
ಶ್ರೀಉತ್ತರಾದಿಮಠ
ವಿಶ್ವಮಧ್ವಮಹಾಪರಿಷತ್, ಬೆಂಗಳೂರು - ೪

**Srimad Bhagavata Ashtama Skandha**

A highly scholarly yet simple translation in Kannada with word by word meaning, summary and detailed in-depth notes based on Bhavata Tatparya of Sri Madhwacharya a deptly summarizing all available commentaries on the subject by Sudha Visharada Pandita Poojya **Rangacharya Guttal**, Kulapati of Sri Jayateertha Vidyapitha.

Published by : **Vishva Madhwa Maha Parishat**

Copies : **1000**

First Edition : **April 2016**

No.of Pages : **16+104+544**



**Price** : **₹. 300/-**

**Copies can be had from :**

**Vishva Madhwa Maha Parishat**
Research Center, #11, 2nd Floor,
Uttaradimath Building. Uttaradi Math Road,
Shankarpuram, Basavanagudi
BANGALORE - 4, Ph : 080 26603692, mail:vmmp05@gmail.com

Type Setting : V.M.M.P Research wing.

Cover Design : **K M Sheshagiri**

Printed by : **Vagartha, 149, 8th Cross, N.R.Colony, Bng - 19**



ಶ್ರೀಮಜ್ಜಗದ್ಗುರುಮಧ್ವಾಚಾರ್ಯಮೂಲಮಹಾಸಂಸ್ಥಾನ
ಶ್ರೀಮದುತ್ತರಾದಿಮಠಾಧೀಶರಾದ, ಶ್ರೀಜಯತೀರ್ಥವಿದ್ಯಾಪೀಠದ
ಸಂಸ್ಥಾಪಕರಾದ ಶ್ರೀ 1008 ಶ್ರೀ ಸತ್ಯಪ್ರಮೋದತೀರ್ಥಶ್ರೀಪಾದಂಗಳವರ
ಅಡಿದಾವರೆಗಳಲ್ಲಿ ಭಕ್ತಿಪೂರ್ವಕ ಸಮರ್ಪಣೆ

ಶ್ರೀಮಜ್ಜಗದ್ಗುರುಮಧ್ವಾಚಾರ್ಯಮೂಲಮಹಾಸಂಸ್ಥಾನಶ್ರೀಮದುತ್ತರಾದಿಮಠಾಧೀಶರಾದ,
ಶ್ರೀ 1008 ಶ್ರೀಸತ್ಯಾತ್ಮತೀರ್ಥಶ್ರೀಪಾದಂಗಳವರ ಅಡಿದಾವರೆಗಳಲ್ಲಿ
ಭಕ್ತಿಪೂರ್ವಕ ಸಮರ್ಪಣೆ




॥ ಶ್ರೀದಿಗ್ವಿಜಯರಾಮೋ ವಿಜಯತೇ ॥

ಜಗದ್ಗುರು ಶ್ರೀಮನ್ಮಧ್ವಾಚಾರ್ಯಮೂಲಮಹಾಸಂಸ್ಥಾನ

ಶ್ರೀಮದುತ್ತರಾದಿಮಠಾಧೀಶರಾದ

## ಶ್ರೀ ಶ್ರೀ 1008 ಶ್ರೀಸತ್ಯಾತ್ಮತೀರ್ಥ ಶ್ರೀಪಾದಂಗಳವರ

# ಅನುಗ್ರಹ ಸಂದೇಶ

1. ಭಗವಂತನ ವಾಙ್ಮಯ ವಿಗ್ರಹ ಶ್ರೀಮದ್ಭಾಗವತ.
2. ಕ್ಷುಧೆ-ತೃಷೆಗಳನ್ನು ದೂರೀಕರಿಸುವ ಸುರಸಸಿಂಧು, ತತ್ತ್ವಸುಧಾಸಾಗರ ಶ್ರೀಮದ್ಭಾಗವತ.
3. ದಿವ್ಯರಸ ತುಂಬಿದ ರಸಾಲ ಶ್ರೀಮದ್ಭಾಗವತ.
4. ಅವಾಙ್ಮನಸಗೋಚರ ಶ್ರೀಮದ್ಭಾಗವತ.
5. ಭಗವಂತನ ಸನ್ನಿಧಿಯಲ್ಲಿಯೇ ವಿಹಾರ ಮಾಡಿಸುತ್ತಾ, ಸಂಸಾರದಲ್ಲಿ ದಣಿದ ಸಜ್ಜೀವರನ್ನು ತಣಿಸುವ ದಿವ್ಯಯಾನ ಶ್ರೀಮದ್ಭಾಗವತ.
6. ಸವೆಯದ ಸವಿಯಾದ ಆಸ್ತಿ ಶ್ರೀಮದ್ಭಾಗವತ.
7. ಧರ್ಮಪಾಂಥರಿಗೆ ಸುಗಮವಾದ ದಾರಿಯನ್ನು ತೋರಿಸುವ ಸಹಸ್ರಭಾನು ಶ್ರೀಮದ್ಭಾಗವತ.
8. ವಿಷಯವಿಷಸಂತಪ್ತರನ್ನು ಪ್ರಶಾಂತಗೊಳಿಸುವ ಶೀತಲಭಾನು ಶ್ರೀಮದ್ಭಾಗವತ.
9. ವಿಷಯಾಭಿಲಾಷೆ-ಅಜ್ಞಾನ-ವಿಪರೀತಜ್ಞಾನ-ಸಂದೇಹ ಮುಂತಾದ ಅನೇಕ ಅಂಧಕಾರಗಳನ್ನು ತರಿದು ಹಾಕುವ ಏಕಮೇವ ದಿವ್ಯತೇಜ ಶ್ರೀಮದ್ಭಾಗವತ.
10. ಎಲ್ಲ ಸ್ತರದ ಸಾಧಕರಿಗೂ ಮನೆ-ಮನ ತುಂಬುವಂತೆ ಸಾಧನ-ಧನಗಳನ್ನು ದಾನ ಮಾಡುವ ಗ್ರಂಥ ಶ್ರೀಮದ್ಭಾಗವತ.
11. ಮಮತೆಯನ್ನು ಕಳೆದುಕೊಂಡ, ಪರಮವಿರಕ್ತರಾದ ಶುಕಾಚಾರ್ಯರಂಥ ಮುನಿಗಳ ಮಾನಸದಲ್ಲಿಯೂ ರಾಗವನ್ನು, ಮಮತೆಯನ್ನು ತುಂಬುವ ರಂಗಿನ ರಸಕಾರಂಜಿ ಶ್ರೀಮದ್ಭಾಗವತ.
12. ಭಗವಂತನ ಅನುಗ್ರದಿಂದಲೇ ಸಂವೇದ್ಯ ಶ್ರೀಮದ್ಭಾಗವತ.

ಶ್ರೀಮದಾಚಾರ್ಯರ ತಾತ್ಪರ್ಯವಿಲ್ಲದೇ ಶ್ರೀಮದ್ಭಾಗವತವನ್ನು ಸರಿಯಾಗಿ ಅರ್ಥಮಾಡಿಕೊಳ್ಳಲು ಸಾಧ್ಯವೇ ಇಲ್ಲ. ವಿಜಯಧ್ವಜೀಯ-ಯಾದುಪತ್ಯ ಮುಂತಾದ ವ್ಯಾಖ್ಯಾನಗಳನ್ನು ಅಧ್ಯಯನ ಮಾಡಿದಾಗ ಭಾಗವತದ ಅಧ್ಯಯನವು ಪುಷ್ಟವಾಗುತ್ತದೆ. ಈ ವಿಧವಾದ ಅಧ್ಯಯನದ ಆನಂದ ಘನವಿದ್ವಾಂಸರಿಗೆ ಮಾತ್ರ ಸಾಧ್ಯವಾಗುತ್ತದೆ.

ಆದರೆ ಸಾಮಾನ್ಯಜನರಿಗೆ ಈ ಆನಂದವು ಕೈಗೆಟುಕಲು ಸಾಧ್ಯವೇ ಇಲ್ಲ. ಇದರ ಸ್ವಾದವನ್ನು ಬೋಧಿಸಲು ನಮ್ಮ ಸ್ವರೂಪೋದ್ಧಾರಕ ಗುರುಗಳಾದ ಶ್ರೀ ಶ್ರೀ ಶ್ರೀ ೧೦೦೮ ಶ್ರೀಸತ್ಯಪ್ರಮೋದತೀರ್ಥಶ್ರೀಪಾದಒಡೆಯರ ಪರಮಪ್ರಿಯಶಿಷ್ಯರಾದ, ಅವರ ಪೂರ್ವಾಶ್ರಮದ ಪುತ್ರರೂ ಆದ, ನಮ್ಮ ಪೂರ್ವಾಶ್ರಮದ ಪಿತೃಚರಣರೂ ಆದ, ಶ್ರೀಜಯತೀರ್ಥವಿದ್ಯಾಪೀಠದ ಕುಲಪತಿಗಳಾದ, ಪಂಡಿತವರೇಣ್ಯ **ಶ್ರೀಗುತ್ತಲ ಆಚಾರ್ಯರವರು** (ಪಂ.ರಂಗಾಚಾರ್ಯರು) ಸಕಲ ವ್ಯಾಖ್ಯಾನಗಳಿಂದ ಸಹಿತವಾದ ಶ್ರೀಮದ್ಭಾಗವತದ ಕನ್ನಡಾನುವಾದದ ತಪಸ್ಸನ್ನು ಸಂಪೂರ್ಣಗೊಳಿಸಿದ್ದಾರೆ.

ಇದು ಕೇವಲ ಭಾಗವತದ ಭಾವಾನುವಾದ ಮಾತ್ರ ಆಗಿರದೆ ಭಾಗವತತಾತ್ಪರ್ಯ ಹಾಗೂ ಶ್ರೀವಿಜಯಧ್ವಜರು, ಶ್ರೀಸತ್ಯಧರ್ಮತೀರ್ಥರು, ಶ್ರೀಯಾದವಾರ್ಯರು, ಛಲಾರೀಆಚಾರ್ಯರು, ಲಿಂಗೇರೀಆಚಾರ್ಯರು ಮುಂತಾದವರು ರಚಿಸಿದ ಎಲ್ಲ ವ್ಯಾಖ್ಯಾನಗಳ ಅನುವಾದವೂ ಆಗಿರುವುದು ಇದರ ವೈಶಿಷ್ಟ್ಯ. ಸಾಮಾನ್ಯ ಜಿಜ್ಞಾಸುವಿಗೆ ಹಾಗೂ ಪಂಡಿತರಿಗೂ ಇವರ ಅನುವಾದ ಉಪಕಾರಿಯಾಗಿದೆ. ಈಗಾಗಲೇ ಸಜ್ಜನೋಪಯೋಗಿಯಾಗಿ ಸುಪ್ರಸಿದ್ಧವಾಗಿದೆ.

ಪ್ರಕೃತ ಭಾಗವತ-ತಾತ್ಪರ್ಯ-ವ್ಯಾಖ್ಯಾನಗಳಿಂದ ಸಹಿತವಾದ ಅಷ್ಟಮಸ್ಕಂಧದ ಅನುವಾದರೂಪವಾದ ಈ ಕೃತಿಯನ್ನು ವಿಶ್ವಮಧ್ವಮಹಾಪರಿಷತ್ತಿನಿಂದ ಪ್ರಕಾಶನ ಮಾಡಲಾಗುತ್ತಿದೆ. ಇಂತಹ ಮಹತ್ ಕಾರ್ಯವನ್ನು ಮಾಡಿದ ಆಚಾರ್ಯರವರಿಗೆ ಜ್ಞಾನ-ಭಕ್ತಿ-ವೈರಾಗ್ಯಾದಿಗಳನ್ನು ಕೊಟ್ಟು ನಿರಂತರ ಸುಧಾದಿಗ್ರಂಥಗಳ ಪಾಠಪ್ರವಚನದ ಕಾರ್ಯವು, ಗ್ರಂಥಲೇಖನಾದಿಗಳು ಇವರಿಂದ ನಡೆಸಲಿ ಎಂದು ನಮ್ಮ ಉಪಾಸ್ಯಮೂರ್ತಿಗಳಾದ ಶ್ರೀಮನ್ಮೂಲಸೀತಾಸಮೇತ ಶ್ರೀಮೂಲರಾಮ- ದಿಗ್ವಿಜಯರಾಮ ವೇದವ್ಯಾಸದೇವರಲ್ಲಿ ಪ್ರಾರ್ಥಿಸುತ್ತೇವೆ.

ಈ ಸಂಪುಟದ ಸಹ ಸಂಪಾದನಾಕಾರ್ಯವನ್ನು ನಮ್ಮ ಶಿಷ್ಯನಾದ ಪಂ. ವಾದಿರಾಜಾಚಾರ್ಯನು ವಿಶೇಷ ಶ್ರದ್ಧೆಯಿಂದ ಮಾಡಿದ್ದಾನೆ. ಅವನಿಗೂ ಭಗವಂತ ಜ್ಞಾನ-ಭಕ್ತಿ-ವೈರಾಗ್ಯಗಳನ್ನು ನೀಡಿ ಇದೇ ತರಹದ ವೇದವ್ಯಾಸದೇವರ ಸೇವೆ ಅವನಿಂದ ನಡೆಯುವಂತೆ ಅನುಗ್ರಹಿಸಲಿ ಎಂದು ಪ್ರಾರ್ಥಿಸುತ್ತೇವೆ.

ಇತ್ಯನೇಕ ನಾರಾಯಣಸ್ಮರಣೆಗಳು

श्रीसत्यात्मतीर्थश्रीपादैः. उत्तरादिमठ

ಶ್ರೀ 1008 ಶ್ರೀ ಸತ್ಯಾತ್ಮತೀರ್ಥ ಶ್ರೀಪಾದಂಗಳವರು
ಉತ್ತರಾದಿಮಠ

 

# ಮುನ್ನುಡಿ

''ಜ'' ಎಂಬ ಅಕ್ಷರದಿಂದ ಪ್ರಾರಂಭವಾಗುವ ಶ್ರೀಮದ್ಭಾಗವತ ''ಯ'' ಎಂಬ ಅಕ್ಷರಕ್ಕೆ ಸಮಾಪ್ತವಾಗುತ್ತದೆ. ಅಂತೆಯೇ ಸಂಸಾರವೆಂಬ ದುರ್ಜಯವಾದ ಸಂಗ್ರಾಮದಲ್ಲಿ ಜಯವನ್ನು ತಂದುಕೊಡುವ ದಿಟ್ಟವಾದ ಗ್ರಂಥವಿದಾಗಿದೆ.

ಅನಾದಿಕಾಲದಿಂದ ಅಂಟಿಕೊಂಡ ಸಂಸಾರರೋಗವನ್ನು ಸಮೂಲ ನಾಶಮಾಡುವ ಭೇಷಜ ಶ್ರೀಮದ್ಭಾಗವತ. ಶುಕಾಚಾರ್ಯರ ಮುಖದಿಂದ ಸುಖವಾಗಿ ಹರಿದು ಬಂದ ಸುಧಾಸಾಗರ ಶ್ರೀಮದ್ಭಾಗವತ.

ಜೀವಕೋಟಿಯ ಸೌಭಾಗ್ಯ ಶ್ರೀಮದ್ಭಾಗವತ. ಶ್ರೀಹರಿಯಲ್ಲಿ ನಿರ್ವ್ಯಾಜವಾದ ಭಕ್ತಿಯನ್ನು ಅಭಿವೃದ್ಧಗೊಳಿಸುವುದು ಶ್ರೀಮದ್ಭಾಗವತ. ಅವ್ಯಾಹತವಾದ ಐಶ್ವರ್ಯ, ಅಳಿಯಲಾಗದ ಜ್ಞಾನ ತುಂಬಿದ ಗಣಿ ಶ್ರೀಮದ್ಭಾಗವತ.

ಅಜ್ಞಾನ, ಭಯ, ಶೋಕ, ಅಸಮಾಧಾನ, ರೋಗ, ದ್ವೇಷ, ದುರ್ಮತಿ, ದುರಾಚಾರ, ದುರ್ಗತಿ, ದುರ್ಮರಣ, ದುರ್ಜನರ ಸಂಸರ್ಗ ಇತ್ಯಾದಿ ದುರವಸ್ಥೆಗಳನ್ನು ಪರಿಹರಿಸುವ ಪವಿತ್ರ ಗ್ರಂಥ ಶ್ರೀಮದ್ಭಾಗವತ.

ತತ್ತ್ವಜ್ಞಾನ, ಅಭಯ, ಸಂತೋಷ, ಸಮಾಧಾನ, ಸಂಪ್ರೀತಿ, ಸದಾಚಾರ, ಸದ್ಗತಿ, ಸಜ್ಜನರ ಸಹವಾಸ, ಇತ್ಯಾದಿಗಳನ್ನು ಅನುಗ್ರಹಿಸುವ ಗ್ರಂಥ ಶ್ರೀಮದ್ಭಾಗವತ. ಶುದ್ಧವಾದ ತತ್ತ್ವಜ್ಞಾನದ ಮೂಲಕ ಮುಕ್ತಿಯನ್ನು ಪ್ರಸಾದಿಸುವ ಗ್ರಂಥ ಶ್ರೀಮದ್ಭಾಗವತ. ಭಗವದ್ಭಕ್ತರ ಕಥೆಗಳನ್ನು ತಿಳಿಸುವ ಮೂಲಕ ಶ್ರೀಹರಿ ಭಕ್ತರನ್ನು ಹೇಗೆ ಸಲಹುತ್ತಾನೆಂದು ರೋಮಾಂಚನಕಾರಿಯಾಗಿ ತಿಳಿಸುವ ಗ್ರಂಥವೇ ಶ್ರೀಮದ್ಭಾಗವತ.

ಸಂಪದ್ಭರಿತವಾದ ಪದಗಳಿಂದ ಕಂಗೊಳಿಸುವ ಕೋಶಾಗಾರ ಶ್ರೀಮದ್ಭಾಗವತ. ಭಾಗವತದಲ್ಲಿಯ ವಾಕ್ಯ , ಪದ, ಅಕ್ಷರವೂ ವ್ಯರ್ಥವಲ್ಲ. ಅನೇಕಾರ್ಥಗಳಿಂದ ತುಂಬಿದೆ. ಸಾವಿರಾರು ಜನ ಇದಕ್ಕೆ ವ್ಯಾಖ್ಯಾನ ಮಾಡಿದರೂ ಇದರ ಸವಿ ಇನ್ನೂ ಮುಗಿಯದಿರುವುದು ಅತ್ಯಾಶ್ಚರ್ಯವೆನಿಸುತ್ತದೆ. ಅದ್ವೈತ-ವಿಶಿಷ್ಟಾದ್ವೈತ-ದ್ವೈತ ಹೀಗೆ ಎಲ್ಲ ಮತದವರೂ ಈ ಗ್ರಂಥಕ್ಕೆ ವ್ಯಾಖ್ಯಾನವನ್ನು ರಚಿಸಿದ್ದಾರೆ. ಅದರಲ್ಲೂ ಶ್ರೀಮದಾಚಾರ್ಯರ ವ್ಯಾಖ್ಯಾನವಂತೂ ಅತ್ಯಂತ ಅಪೂರ್ವ. ಆಮೂಲಾಗ್ರ ಅತ್ಯಂತ ಸಂಗತ.

ಇಂತಹ ಭಾಗವತವನ್ನು ವ್ಯಾಖ್ಯಾನ ಮಾಡುವಲ್ಲಿಯೇ ತಮ್ಮ ಜೀವನವನ್ನು ಸಾರ್ಥಕಮಾಡಿಕೊಂಡವರು ಶ್ರೀವಿಜಯಧ್ವಜತೀರ್ಥರು, ಶ್ರೀಯಾದವಾರ್ಯರು,

ಶ್ರೀಸತ್ಯಧರ್ಮತೀರ್ಥರು, ಛಲಾರೀ ಆಚಾರ್ಯರು, ಲಿಂಗೇರೀ ಆಚಾರ್ಯರು ಮುಂತಾದವರು. ಈ ಮಹಾನುಭಾವರೆಲ್ಲರೂ ವ್ಯಾಖ್ಯಾನಮಾಡಿದ ಶ್ರೀಮದ್ಭಾಗವತವನ್ನು ಕನ್ನಡದಲ್ಲಿ ಅನುವಾದ ಮಾಡಲು ಪ್ರೇರಿಸಿದ ನಮ್ಮ ಕುಲಸ್ವಾಮಿಯಾದ ಶ್ರೀತೊರವೀ ಲಕ್ಷ್ಮೀನಾರಸಿಂಹನಿಗೆ ಭಕ್ತಿ-ಶ್ರದ್ಧಾಪೂರ್ವಕವಾದ ಅನಂತ ನಮಸ್ಕಾರಗಳು. ಬಹುಜನ್ಮಗಳ ಸುಕೃತದ ಪರಿಪಾಕದಿಂದಲೇ ಈ ಅನುವಾದದ ಸೌಭಾಗ್ಯ ನನಗೆ ಒದಗಿ ಬಂದಿದೆ.

ಪ್ರಾತಃಸ್ಮರಣೀಯರಾದ, ಗುರುಗಳಾದ ಶ್ರೀ೧೦೦೮ಶ್ರೀಸತ್ಯಪ್ರಮೋದತೀರ್ಥರ ಅನುಗ್ರಹ ಹಾಗೂ ಆಜ್ಞೆಯ ಸಾಮರ್ಥ್ಯದಿಂದಲೇ ಈ ಭಾಗವತದ ಅನುವಾದ ಕಾರ್ಯ ಸಮಗ್ರವಾಗಿ ಮುಕ್ತಾಯವಾಗಿದೆ. ಶ್ರೀಪಾದಂಗಳವರ ಅಡಿದಾವರೆಗಳಲ್ಲಿ ಅನಂತಸಾಷ್ಟಾಂಗ ಪ್ರಣಾಮಗಳನ್ನು ಸಮರ್ಪಿಸುತ್ತೇನೆ. ಮತ್ತು ಗುರುಗಳಾದ ಉತ್ತರಾದಿಮಠಾಧೀಶ್ವರರಾದ ಶ್ರೀ೧೦೦೮ಶ್ರೀಸತ್ಯಾತ್ಮತೀರ್ಥರ ಅನುಗ್ರಹವಚನಗಳು ನಮಗೆ ಸಂರಕ್ಷಣಾಕವಚವಾಗಿವೆ. ಅಂತಹ ಶ್ರೀಪಾದಂಗಳವರಿಗೆ ಅನಂತ ನಮನಗಳನ್ನು ಸಮರ್ಪಿಸುತ್ತೇನೆ.

ಪ್ರಕೃತ ಶ್ರೀಮದ್ಭಾಗವತದ ಎಂಟನೆಯ ಸ್ಕಂಧವನ್ನು ಹರಿಭಕ್ತರಾದ ಓದುಗರ ಮುಂದಿಡಲು ಸಂತೋಷವಾಗುತ್ತಿದೆ.

ಈ ಗ್ರಂಥದ ಸಂಪಾದನಾ ಕಾರ್ಯದಲ್ಲಿ ವಿಶೇಷ ಪರಿಶ್ರಮ ವಹಿಸಿದ ಪಂ. ವಾದಿರಾಜಾಚಾರ್ಯ ಕರಣಂ ಇವನಿಗೆ ಕುಲಸ್ವಾಮಿ ತೊರವೆಯ ನಾರಸಿಂಹ ಆಯುರಾರೋಗ್ಯಗಳನ್ನು ನೀಡಿ ಅನುಗ್ರಹಿಸಲಿ ಎಂದು ಪ್ರಾರ್ಥಿಸುವೆ.

ಅದರಂತೆ ಈ ಗ್ರಂಥಕ್ಕೆ ಸುಂದರವಾದ ರೂಪವನ್ನು ನೀಡಿರುವ ಪಂ. ಮಹಿದಾಸಾಚಾರ್ಯ ಜೋಶಿ ಇವನಿಗೆ, ಟೈಪ್ ಮಾಡಿರುವ ಶ್ರೀ ವೇಣುಗೋಪಾಲ ಇವನಿಗೆ, ಸುಂದರವಾದ ಮುಖಪುಟವನ್ನು ಒದಗಿಸಿದ ಶ್ರೀ ಕೆ.ಎಂ.ಶೇಷಗಿರಿ ಇವರಿಗೆ ಭಗವಂತ ಅನುಗ್ರಹಿಸಲೆಂದು ಪ್ರಾರ್ಥಿಸುತ್ತೇನೆ.

ಇನ್ನು ಮುಂದೆ ನನ್ನಿಂದ ಇದೇ ರೀತಿಯಾಗಿ ಸತ್ಕರ್ಮಗಳನ್ನು ಮಾಡಿಸಲಿ ಎಂದು ಗುರ್ವಂತರ್ಯಾಮಿಯಾದ ಭಾರತೀರಮಣ ಮುಖ್ಯಪ್ರಾಣಾಂತರ್ಯಾಮಿಯಾದ ಕುಲದೈವ ತೊರವಿಲಕ್ಷ್ಮೀನರಸಿಂಹನಲ್ಲಿ ಪ್ರಾರ್ಥಿಸುತ್ತೇನೆ.

ದುರ್ಮುಖ ಚೈತ್ರ ಶುಕ್ಲ ನವಮೀ
೧೫.೦೪.೨೦೧೬

ಭಾಗವತ ಜನಸೇವಕ
ಪಂ.ರಂಗಾಚಾರ್ಯ ಗುತ್ತಲ
ಕುಲಪತಿಗಳು ಶ್ರೀಜಯತೀರ್ಥವಿದ್ಯಾಪೀಠ

# ಪ್ರಕಾಶಕರ ನುಡಿ

ಶ್ರೀ ೧೦೦೮ ಶ್ರೀ ಸತ್ಯಪ್ರಮೋದತೀರ್ಥಶ್ರೀಪಾದಂಗಳವರ ಮಹದಪೇಕ್ಷೆಯಂತೆ ಪ್ರಾಚೀನಗ್ರಂಥಗಳ ಸಂರಕ್ಷಣೆ ಹಾಗೂ ಅವುಗಳ ಸಂಶೋಧನ, ಪ್ರಕಾಶನ ಮೊದಲಾದ ಅನೇಕ ಉನ್ನತಮಟ್ಟದ ಉದ್ದೇಶಗಳಿಂದ ಉತ್ತರಾದಿಮಠಾಧೀಶರಾದ ಶ್ರೀ ೧೦೦೮ ಶ್ರೀ ಸತ್ಯಾತ್ಮತೀರ್ಥ ಶ್ರೀಪಾದಂಗಳವರಿಂದ ಸಂಸ್ಥಾಪಿತವಾದ ಸಂಸ್ಥೆ ''**ವಿಶ್ವಮಧ್ವಮಹಾಪರಿಷತ್**''

ನಮ್ಮ ಸಂಸ್ಥೆಯು ಪ್ರಾಚೀನವಾದ, ಅಪ್ರಕಟಿತವಾದ ಗ್ರಂಥಗಳನ್ನು ವಿದ್ವಾಂಸರಿಂದ ಸಂಶೋಧನೆ ಮಾಡಿಸಿ ಅವುಗಳನ್ನು ಪ್ರಕಾಶಿಸುವ ಮಹತ್ತರ ಧ್ಯೇಯವನ್ನು ಹೊಂದಿದೆ. ಈ ದೃಷ್ಟಿಯಲ್ಲಿ ವಿದ್ವಾಂಸರಿಗೆ, ವಿದ್ಯಾರ್ಥಿಗಳಿಗೆ ಉಪಯುಕ್ತವಾದ ಅನೇಕ ಮಹತ್ವದ ಗ್ರಂಥಗಳನ್ನು ಅನೇಕ ಟೀಕಾ- ಟಿಪ್ಪಣಿಗಳೊಂದಿಗೆ ಪ್ರಕಾಶಿಸಿದೆ. ಇದಲ್ಲದೇ ಜನರಲ್ಲಿ ಧರ್ಮಜಾಗೃತಿಗಾಗಿ ಪ್ರಶ್ನೋತ್ತರರೂಪದಲ್ಲಿ ಹಾಗೂ ಪ್ರವಚನರೂಪದಲ್ಲಿ ಅನೇಕ ಉಪಯುಕ್ತ ಪುಸ್ತಕಗಳನ್ನು ಈಗಾಗಲೇ ಹೊರತರಲಾಗಿದೆ. ಸಂಸ್ಕೃತ-ಕನ್ನಡ-ತೆಲುಗು-ತಮಿಳು ಹಾಗೂ ಆಂಗ್ಲ ಮೊದಲಾದ ಭಾಷೆಗಳಲ್ಲಿ ಸಂಸ್ಥೆಯಿಂದ ಅನೇಕ ಗ್ರಂಥಗಳು ಪ್ರಕಾಶಿತವಾಗಿವೆ.

ಪ್ರಕೃತ ಪಂ.ಪೂಜ್ಯ ಗುತ್ತಲಾಚಾರ್ಯರವರು ಸಮಗ್ರ ಶ್ರೀಮದ್ಭಾಗವತದ ಕನ್ನಡ ಅನುವಾದವನ್ನು ಅನೇಕ ವ್ಯಾಖ್ಯಾನಗಳ ವಿಶೇಷ ಅಂಶಗಳೊಂದಿಗೆ ಮಾಡಿದ್ದಾರೆ. ಈಗಾಗಲೇ 1, 2, 3, 4, 5, 6, 7, 9, 10, 11, 12 ಈ ಸ್ಕಂಧಗಳ ಪ್ರಕಾಶನವನ್ನು ಮಾಡಿ ಪರಿಷತ್ತು ಸಜ್ಜನರ ಮುಂದಿಟ್ಟಿದೆ. ಈಗ ''**ಶ್ರೀಮದ್ಭಾಗವತ ಅಷ್ಟಮಸ್ಕಂಧ**'' ವನ್ನು ಜಿಜ್ಞಾಸುಗಳ ಮುಂದಿಡುತ್ತಿದ್ದೇವೆ. ಎಲ್ಲ ಪುಸ್ತಕಗಳಂತೆ ಇದನ್ನೂ ತಾವು ಸ್ವಾಗತಿಸುತ್ತೀರಿ ಎಂದು ನಂಬಿದ್ದೇವೆ.

ಪ್ರಧಾನ ಕಾರ್ಯದರ್ಶಿಗಳು
ವಿಶ್ವಮಧ್ವಮಹಾಪರಿಷತ್ ಉತ್ತರಾದಿಮಠ
ಬಸವನಗುಡಿ ಬೆಂಗಳೂರು-4

# ವಿಷಯಾನುಕ್ರಮಣಿಕಾ

**ಒಂಬತ್ತನೆಯ ಅಧ್ಯಾಯ ........................................ ೨೫೮-೨೭೫**



**ಹತ್ತನೆಯ ಅಧ್ಯಾಯ ........................................ ೨೭೬-೨೯೩**



**ಹನ್ನೊಂದನೆಯ ಅಧ್ಯಾಯ ........................................ ೨೯೪-೩೦೬**



**ಹನ್ನೆರಡನೆಯ ಅಧ್ಯಾಯ ........................................ ೩೦೭-೩೨೮**

# ಅಷ್ಟಮಸ್ಕಂಧ - ಕಥಾಸಾರ

## ಅಥ ಪ್ರಥಮೋऽಧ್ಯಾಯಃ

ಶ್ರುತಿಪತಿಗಳಾದ ವೇದವ್ಯಾಸರ ಸುಪುತ್ರರು ಶುಕಾಚಾರ್ಯರು. ಅಂಥ ಮಹಾನುಭಾವರಿಂದ ಶ್ರೀಮದ್ಭಾಗವತವನ್ನು ಆಲಿಸುತ್ತಿದ್ದಾನೆ ಪರೀಕ್ಷಿತ ಮಹಾರಾಜ.

ಸಪ್ತಮಸ್ಕಂಧದಲ್ಲಿ ಪ್ರಹ್ಲಾದನನ್ನು ಸಂರಕ್ಷಿಸಿದ ಶ್ರೀಲಕ್ಷ್ಮೀನೃಸಿಂಹನ ವಿಚಿತ್ರವಾದ ಮಹಿಮೆಯನ್ನು ಶ್ರವಣ ಮಾಡಿದ. ನಂತರ ಅನೇಕ ಧರ್ಮಗಳ ಬಗ್ಗೆ ತಿಳಿದ.

ಈ ಅಷ್ಟಮಸ್ಕಂಧದಲ್ಲಿ ಹದಿನಾಲ್ಕು ಮನ್ವಂತರಗಳ ವಿಚಾರವನ್ನು ಶ್ರೀಶುಕಾಚಾರ್ಯರು ಪರೀಕ್ಷಿತಮಹಾರಾಜರಿಗೆ ಉಪದೇಶಿಸುತ್ತಿದ್ದಾರೆ. ಮೊದಲನೇ ಅಧ್ಯಾಯದಲ್ಲಿ ಸ್ವಾಯಂಭುವ, ಸ್ವಾರೋಚಿಷ, ಉತ್ತಮ, ತಾಪಸ ಎಂಬ ನಾಲ್ಕು ಮನುಗಳ ಚರಿತೆಯನ್ನು ತಿಳಿಸುತ್ತಾರೆ.

ಪರಮಾತ್ಮ ಮುರನಾಮಕದೈತ್ಯನನ್ನು ಸಂಹರಿಸಿದ್ದಾನೆ. ಅಂಥ ಶ್ರೀಹರಿಯ ಚರಿತ್ರೆ ಅತ್ಯಂತಪರಿಶುದ್ಧವಾಗಿದೆ. ಪಾಪನಾಶಕವಾಗಿದೆ. ಶ್ರೀಹರಿಚರಿತೆ ಎಂಬ ಅಮೃತಪಾನದಿಂದ ತೃಪ್ತನಾಗಿದ್ದಾನೆ ಪರೀಕ್ಷಿತ. ಉಪವಾಸದ ಕಷ್ಟವನ್ನೇ ಮರೆತಿದ್ದಾನೆ. ಸಾಂಸಾರಿಕ ಕ್ಲೇಶಗಳಿಂದಲೂ ಮುಕ್ತನಾಗಿದ್ದಾನೆ. ಆನಂದದ ಹೊಳೆಯಲ್ಲಿ ತೇಲುತ್ತಿದ್ದಾನೆ. ಶ್ರವಣದ ಮಹಿಮೆಯೇ ಇಷ್ಟು. ಪರೀಕ್ಷಿತರು ಶ್ರೀಶುಕಾಚಾರ್ಯರಿಗೆ ಪ್ರಶ್ನಿಸಿದರು.

ಮಹಾತ್ಮರಾದ ಶ್ರೀಶುಕಾಚಾರ್ಯರೇ! ನಿಮ್ಮ ಬ್ರಹ್ಮಜ್ಞಾನ ಅನುಪಮವಾಗಿದೆ. ಎರಡನೆಯ ಸ್ಕಂಧದಿಂದ ಏಳನೆಯ ಸ್ಕಂಧದ ತನಕ ಸ್ವಾಯಂಭುವಮನುವಿನ ವಂಶದ ವಿಸ್ತಾರವನ್ನು ನಮಗೆ ಉಪದೇಶ ಮಾಡಿದ್ದೀರಿ. ಸ್ವಾಯಂಭುವಿನ ಮಗಳು ಆಕೂತಿ ಮತ್ತು ದೇವಹೂತಿ. ಆಕೂತಿಯಲ್ಲಿ ಮತ್ತು ದೇವಹೂತಿಯಲ್ಲಿ ಅವತರಿಸಿದ ಭಗವಂತನ ಕಥೆಗಳನ್ನು ಅತ್ಯಂತ ಸ್ಪಷ್ಟವಾಗಿ ತಿಳಿಸಿರುವಿರಿ. ಪ್ರಕೃತ ಸ್ವಾರೋಚಿಷ ಮುಂತಾದ ಹದಿಮೂರು ಮನುಗಳ ವಂಶವನ್ನು ವಿಸ್ತಾರವಾಗಿ ನನಗೆ ಉಪದೇಶಿಸಬೇಕು.

ಎಲ್ಲ ಮನುಗಳೂ ಮುನಿಗಳಾಗಿದ್ದಾರೆ. ತಮ್ಮ ಆಳ್ವಿಕೆಯಲ್ಲಿ ಬ್ರಾಹ್ಮಣ ಮುಂತಾದ ವರ್ಣಗಳ, ಬ್ರಹ್ಮಚಾರಿ ಮುಂತಾದ ಚತುರಾಶ್ರಮಗಳ ಧರ್ಮಗಳು ನೆಲೆಯೂರುವಂತೆ ಮಾಡಿದ್ದಾರೆ. ಮುಕ್ತಿಗೆ ಸಾಧನವಾದ ಇನ್ನಿತರ ಧರ್ಮಗಳನ್ನು ಸರ್ವತ್ರ ಸ್ಥಾಪಿಸಿದ್ದಾರೆ.

ಆಯಾ ಮನ್ವಂತರಗಳಲ್ಲಿ ಭಗವಂತ ವಿಶೇಷ ರೂಪವನ್ನು ಧರಿಸಿ ಅವತರಿಸಿದ್ದಾನೆ. ಜಗತ್ತಿನ ಸಂರಕ್ಷಣೆಯನ್ನು ಮಾಡಿದ್ದಾನೆ. ಅಂಥ ಭಗವಂತ ಮಾಡಿದ ಜಗದೋದ್ಧಾರಕವಾದ ಲೀಲೆಗಳ ಶ್ರವಣವೂ ನನಗಾಗಬೇಕು. ಇವುಗಳ ಶ್ರವಣ ನನಗಾಗಬೇಕಾದರೆ ಮನುಗಳ ವಂಶವಿಸ್ತಾರದ ಶ್ರವಣ ಅತ್ಯಂತ ಆವಶ್ಯಕ. ಆದ್ದರಿಂದ ಆ ಮನುಗಳ ವಂಶವನ್ನು ವಿಸ್ತಾರವಾಗಿ ತಿಳಿಸಬೇಕು. ಆ ಮಹಿಮೆಗಳನ್ನು ತಿಳಿಯಬೇಕೆಂಬ ತವಕ ನಮ್ಮಲ್ಲಿ ಕ್ಷಣೇ ಕ್ಷಣೇ ಪ್ರಬಲವಾಗುತ್ತಿದೆ.

ಜ್ಞಾನಿಗಳಾದ ಲಕ್ಷ್ಮೀ-ಬ್ರಹ್ಮಾದಿಗಳು ಕೂಡಾ ಆ ಭಗವಂತನ ಲೀಲೆಗಳನ್ನು ನಿರಂತರ ಕೀರ್ತಿಸುತ್ತಲೇ ಧನ್ಯತೆಯನ್ನು ಅನುಭವಿಸುತ್ತಾರೆ. ಆನಂದತುಂದಿಲರಾಗುತ್ತಾರೆ. ಭಗವಂತ ಜಗದುತ್ಪಾದಕ. ಅತ್ಯಂತ ಸಮರ್ಥರಾದ ವಾಯುದೇವರಿಗೂ ಆ ವಿಷ್ಣುವೇ ಜನಕನಾಗಿದ್ದಾನೆ. ಅಂಥ ಭಗವಂತ ಕಳೆದ ಆರು ಮನ್ವಂತರಗಳಲ್ಲಿ ಹೇಗೆ ಅವತರಿಸಿದ? ಆ ಭಗವಂತ ಸಾಧಿಸಿದ ಕಾರ್ಯಗಳಾವು? ಈ ವೈವಸ್ವತಮನ್ವಂತರದಲ್ಲಿ ಯಾವ ಕಾರ್ಯದ ಸಾಧನೆಗಾಗಿ ಭಗವಂತ ಅವತರಿಸುತ್ತಾನೆ? ಮುಂದೆ ಬರುವ ಮನ್ವಂತರಗಳಲ್ಲಿ ಭಗವಂತ ಮಾಡುವ ವ್ಯಾಪಾರವೇನು? ದೇವರ ವ್ಯಾಪಾರಗಳು ಅನ್ಯಸಾಧಾರಣವಲ್ಲ. ದೇವರ ವ್ಯಾಪಾರಗಳನ್ನು ನಕಲು ಮಾಡಲು ಯಾರಿಂದಲೂ ಸಾಧ್ಯವಿಲ್ಲ. ಅವುಗಳನ್ನು ಆಲಿಸಲೇಬೇಕು. ಅಂಥವನು ಬದುಕಿ ಸಾರ್ಥಕ. ಹಾಗೆ ಭಗವಂತನ ಮಹಿಮೆಗಳನ್ನು ಕೇಳಿ ಮೃತನಾದವನ ಬದುಕೂ ಹಸನಾಗುತ್ತದೆ. ಆ ಬದುಕಿನ ಪಯನ ಮುಕ್ತಿಯತ್ತ ಸಾಗುತ್ತದೆ. ಆದ್ದರಿಂದ ಆ ಕಥೆಗಳನ್ನು ನಮಗಾಗಿ ಹೇಳಿರಿ. ನಿಮ್ಮ ಮುಖದಿಂದ ಹರಿದು ಬರುವ ಹರಿಯ ಕಥೆಗಳು ನಮ್ಮ ಆರು ಅರಿಗಳನ್ನು ತರಿಯುವಲ್ಲಿ ಸಮರ್ಥವಾಗಿವೆ. ಪದೇ ಪದೇ ನನ್ನ ಅನುಭವಕ್ಕೆ ಈ ಮಹಿಮೆಯು ಗೋಚರಿಸುತ್ತಿದೆ.

ಪರೀಕ್ಷಿತನ ಜಿಜ್ಞಾಸೆಯನ್ನು ಕಂಡ ಶುಕಾಚಾರ್ಯರು ಪ್ರಸನ್ನರಾದರು. ಉಪದೇಶಿಸಲು ಉಪಕ್ರಮಿಸಿದರು. ಪರೀಕ್ಷಿತನೇ ಶ್ರದ್ಧೆಯಿಂದ ಆಲಿಸು. ಈಗಾಗಲೇ ಸ್ವಾಯಂಭುವ, ಸ್ವಾರೋಚಿಷ, ಉತ್ತಮ, ತಾಪಸ, ರೈವತ, ಚಾಕ್ಷುಷ ಎಂಬ ಆರು ಮನ್ವಂತರಗಳು ಕಳೆದಿವೆ. ಏಳನೆಯದಾದ ವೈವಸ್ವತಮನ್ವಂತರದಲ್ಲಿ ಆಗಬೇಕಾದ ಶ್ರೀಹರಿಯ ಅವತಾರಗಳೆಲ್ಲ ಆಗಿವೆ. ಕಲ್ಕಿಯ ಅವತಾರ ಮಾತ್ರ ಆಗಬೇಕಿದೆ. ಸ್ವಾಯಂಭುವ ಮನ್ವಂತರದ ಬಗ್ಗೆ ಈಗಾಗಲೇ ತಿಳಿಸಿಯಾಗಿದೆ. ಪ್ರಕೃತ ಎಲ್ಲ ಮನ್ವಂತರಗಳನ್ನು ತಿಳಿಯುವ ಪ್ರಸಂಗದಲ್ಲಿ ಮತ್ತೆ ಆ ಮನುವಿನ ವೈಭವವನ್ನು ವಿಸ್ತರಿಸುತ್ತೇನೆ ಆಲಿಸು.

## ೧. ಸ್ವಾಯಂಭುವ

ಸ್ವಾಯಂಭುವ ಮನ್ವಂತರವನ್ನು ವಿಸ್ತಾರವಾಗಿ ಈಗಾಗಲೇ ನಿನಗೆ ಹೇಳಿದ್ದೇನೆ. ಈ ಮನ್ವಂತರದಲ್ಲಿ ಭಗವಂತ ಮನುವಿಗೆ ದೌಹಿತ್ರನಾಗಿ ಯಜ್ಞನಾಮಕನಾಗಿ ಅವತರಿಸಿದ. ಈ ಮನ್ವಂತರದಲ್ಲಿಯ ದೇವತೆಗಳ, ಮನುಪುತ್ರರ, ಸಪ್ತಋಷಿಗಳ, ಇಂದ್ರನ ಅವತಾರಗಳನ್ನು ತಿಳಿಸಿಯಾಗಿದೆ. ಈ ಮನ್ವಂತರದಲ್ಲಿ ನಡೆದ ವರಾಹಾದ್ಯವತಾರಗಳನ್ನೂ ವಿಸ್ತಾರವಾಗಿ ಉಪದೇಶಿಸಿದ್ದೇನೆ.

ಆದರೇ ಸ್ವಾಯಂಭುವ ಮನ್ವಂತರದಲ್ಲಿ ಮನುವನ್ನು ಯಜ್ಞ ಹೇಗೆ ಸಂರಕ್ಷಿಸಿದ ಎಂಬ ವಿಚಾರವನ್ನು ಮಾತ್ರ ತಿಳಿಸಿಲ್ಲ. ಅದನ್ನು ಈಗ ನಿರೂಪಿಸುತ್ತೇನೆ. ಕೇಳು.

ಪರೀಕ್ಷಿತನೇ! ನೀನು ಈಗ ಮಾಡುತ್ತಿರುವ ಶ್ರವಣವು ನಿನಗೆ ಮಾತ್ರ ತಾರಕವಲ್ಲ. ಶ್ರೀಹರಿಯ ಕಥೆಗಳನ್ನು ಶ್ರವಣ ಮಾಡುವ ಮೂಲಕ ಇಡಿಯ ಕುರುಕುಲವನ್ನೇ ನೀನು ಉದ್ಧರಿಸುತ್ತಿರುವಿ.

ಧರ್ಮಜ್ಞಾನವನ್ನು ಉಪದೇಶಮಾಡಲೋಸುಗ ಭಗವಂತ ಯಜ್ಞನಾಗಿ, ಕಪಿಲನಾಗಿ ಅವತರಿಸಿದ. ಇವರಿಬ್ಬರೂ ಮನುವಿನ ದೌಹಿತ್ರರು. ಯಜ್ಞ ಆಕೂತಿಯ ಮಗ. ಕಪಿಲ ದೇವಹೂತಿಯ ಮಗ.

ಹಿಂದೆ ಮೂರನೆಯ ಅಧ್ಯಾಯದಲ್ಲಿ ಕಪಿಲರ ಚರಿತೆಯನ್ನು ವಿಸ್ತಾರವಾಗಿ ನಿರೂಪಿಸಿದ್ದೇವೆ. ಯಜ್ಞನಾಮಕನಾಗಿ ಅವತರಿಸಿದ ಭಗವಂತ ಮಾಡಿದ ಕಾರ್ಯವೇನೆಂದು ಈಗ ಹೇಳುತ್ತೇವೆ. ಆಲಿಸು.

ಸ್ವಾಯಂಭುವಮನು ಅತ್ಯಂತ ವಿರಕ್ತ. ಗೃಹಸ್ಥನಾಗಿಯೂ ವೈರಾಗ್ಯವನ್ನು ಕಾಯ್ದುಕೊಂಡ ಸನ್ಯಾಸಿ. ಆ ವೈರಾಗ್ಯ ಈಗ ಪರಿಪಕ್ವವಾಗಿದೆ. ವಿಷಯಗಳಲ್ಲಿ ಹೇಯತ್ವಬುದ್ಧಿಯು ಅತ್ಯಂತ ದೃಢವಾಗಿದೆ. ರಾಜ್ಯವನ್ನು ಬಿಡಲು ಬಯಸಿದ. ಶತರೂಪೆಯೂ ಅದಕ್ಕೆ ಸಿದ್ಧಳಾದಳು. ಗಂಡನ ಹಿಂದೆ ನಡೆಯಲು ಬದ್ಧಳಾದಳು. ಅಕ್ಕರೆಯ ಪ್ರಜೆಗಳನ್ನು, ಸಕ್ಕರೆಯ ಮಕ್ಕಳನ್ನು ಪರಿತ್ಯಜಿಸಿದ. ಪತ್ನೀಸಮೇತನಾಗಿ ವನವನ್ನು ಪ್ರವೇಶಿಸಿದ. ಇದುವೇ ನಿಜವಾದ ವೈರಾಗ್ಯ. ವಿಕಾರಜನಕವಾದ ವಿಷಯಗಳಿರುವಾಗ ಅವುಗಳನ್ನು ಪರಿತ್ಯಜಿಸುವುದೇ ನಿಜವಾದ ವೈರಾಗ್ಯ. ವನಕ್ಕೆ ನಡೆಯುವಾಗ ಮನುವಿನ ಮುಖ ವನಜದಂತೆಯೇ ಅರಳಿತ್ತು. ನಗುತ್ತಲೇ, ನಗುನಗುತ್ತಲೇ, ಅಳುವ ತನ್ನ ಜನರನ್ನು ಸಮಾಧಾನ ಪಡಿಸುತ್ತಲೇ ವನಕ್ಕೆ ನಡೆದ.

ಸ್ವಾಯಂಭುವಮನು ಪ್ರಯಾಣಿಸುತ್ತಾ ಅಲಕನಂದೆಯ ತೀರ ಸೇರಿದ. ಗಂಗೆಯ ತೀರವೇ ಗಂಗಾಜನಕನ ತೀರವನ್ನು ಸೇರಿಸುವುದೆಂದು ನಂಬಿದ್ದ. ಅಲ್ಲಿಯೇ ನಿಂತ. ತಪಸ್ಸು ಮಾಡಿದ. ಮನು ಧ್ಯಾನದಲ್ಲಿ ಮಗ್ನನಾದ. ಅವನಿಗೆ ಲೌಕಿಕದ ಪರಿವೆಯೇ ಇರಲಿಲ್ಲ.

ಮನದಲ್ಲಿ ದೇವರ ಗುಣಗಳನ್ನು ಚಿಂತಿಸುತ್ತಲೇ ಇದ್ದ. ಮನುವಿನ ಮನದಲ್ಲಿಯ ಅನುಸಂಧಾನದ ಪ್ರವಾಹಗಳನ್ನು ಕಂಡು ಅಲಂಕರನಂದೆಯೂ ತುಸು ಮುನಿಸಿದಂತೆ ತೋರುತ್ತಿತ್ತು. ಒಂದೇ ಕಾಲನ್ನು ನೆಲದ ಮೇಲೆ ಇರಿಸಿದ್ದ. ಇನ್ನು ಭೂಲೋಕ ಸಾಕು ಎಂಬಂತೆ. ಮತ್ತೊಂದು ಕಾಲನ್ನು ಮೇಲೆಯೇ ಇಟ್ಟಿದ್ದ. ಮೇಲಕ್ಕೆ ಹೋಗಲು ಸನ್ನದ್ಧನಾದಂತೆ. ಹೀಗೆಯೇ ನೂರುವರ್ಷ ನಿಂತ. ಮನುವಿನ ತಪಸ್ಸನ್ನು ಕಂಡು ಕಾಲವೇ ನಿಂತು ಬಿಟ್ಟಂತೆ ತೋರಿತು. ಅವಿರಕ್ತರಾದ ಜನರಿಗೆ ಮನುವಿನ ತಪಸ್ಸು ಅತ್ಯಂತ ಘೋರವೆನಿಸುತ್ತದೆ. ತಪಸ್ಸು ಮಾಡುತ್ತಾ ಉಪನಿಷತ್ತನ್ನು ಚಿಂತಿಸಿದ. ಜಗತ್ತಿಗೆ ಸಂದೇಶವನ್ನು ರವಾಣಿಸಿದ. ಈಶಾವಾಸ್ಯಮಿದಂ ಸರ್ವಂ ಇತ್ಯಾದಿ ಮಂತ್ರಗಳಿಂದ ಯಜ್ಞನನ್ನು ಪೂಜಿಸಿದ. ಸ್ತುತಿಸಿದ.

ಭಗವಂತನಿಂದ ಪ್ರೇರಿತನಾದ ಆದಿತ್ಯ ಸಮಸ್ತ ಜಗತ್ತನ್ನು ಬೆಳಗುತ್ತಾನೆ. ಈ ಎಲ್ಲ ಜಗತ್ತು ಭಗವಂತನಿಂದಲೇ ಸಶಕ್ತವಾಗುತ್ತದೆ. ಸೂರ್ಯ ಮುಂತಾದ ಎಲ್ಲ ದೇವತೆಗಳಿಗೂ ಶ್ರೀಮನ್ನಾರಾಯಣನೇ ನಿಯಾಮಕನಾಗಿದ್ದಾನೆ. ತಮಗೆಲ್ಲರಿಗೂ ನಿಯಾಮಕನಾದ ಪರಮಾತ್ಮನನ್ನು ಯಾವ ದೇವತೆಗಳೂ ಪರಿಪೂರ್ಣವಾಗಿ ತಿಳಿಯಲು ಸಮರ್ಥರಲ್ಲ. ಪರಮಾತ್ಮ ಮಾತ್ರ ಅನಾದಿಕಾಲದಿಂದಲೇ ಸರ್ವರನ್ನೂ ತಿಳಿದಿದ್ದಾನೆ. ಅಂಥ ಪರಮಾತ್ಮನ ಧ್ಯಾನವನ್ನು ಮಾಡಿದ. ದೇವರ ಧ್ಯಾನ ಮಾಡಬೇಕೆಂದು ಮನುಜರಿಗೆಲ್ಲರಿಗೂ ಉಪದೇಶಿಸಿದ.

ಈ ಸಮಸ್ತ ಪ್ರಕೃತಿ ಭಗವಂತನ ಅಧೀನವಾಗಿದೆ. ದೇವರಿಗೆ ಅಧೀನ- ವಾಗದ ಸಣ್ಣಪದಾರ್ಥವೂ ಇಲ್ಲ. ಸಮಸ್ತವೂ ಭಗವಂತನ ಆವಾಸಕ್ಕೆ ಯೋಗ್ಯವಾಗಿದೆ. ಸಮಸ್ತವೂ ದೇವರ ಸಂಪತ್ತಾಗಿದೆ. ಹೀಗಾಗಿ ಯದೃಚ್ಛಾಲಾಭತೃಪ್ತನಾಗಿ ಜೀವನವನ್ನು ಸಾಗಿಸಬೇಕು. ಇತ್ಯಾದಿಯಾಗಿ ತನ್ನ ಮನಸ್ಸಿಗೆ ಉಪದೇಶಿಸಿಕೊಂಡ ಸ್ವಾಯಂಭುವಮನು. ಮತ್ತು ಮುಕ್ತಿಯೋಗ್ಯರಾದ ಜೀವರಿಗೆ ಉಪದೇಶಿಸಿದ.

ಭಗವಂತನನ್ನು ತಿಳಿಯಬೇಕು. ಅದಕ್ಕಾಗಿ ಮಾನಸ ತಿಳಿಯಾಗಿ ಇರಬೇಕು. ವಿಷಯಗಳಿಂದ ವ್ಯಾಕುಲವಾಗಿರಬಾರದು. ದುಷ್ಕರ್ಮಗಳಲ್ಲಿ ಆಸಕ್ತನಾದವನ ಮನಸ್ಸು ವ್ಯಾಕುಲವಾಗುತ್ತದೆ. ಆ ದುಷ್ಕರ್ಮಗಳು ಜ್ಞಾನಕ್ಕೆ ಪ್ರತಿಬಂಧಕಗಳಾಗಿವೆ. ಆ ವ್ಯಾಕುಲತೆಯನ್ನು, ಪ್ರತಿಬಂಧಕಗಳನ್ನು ಕಳೆದು ಕೊಳ್ಳಬೇಕು. ಅದಕಾಗಿ ಯಜ್ಞ-ಯಾಗ ಮುಂತಾದ ಸತ್ಕರ್ಮಗಳನ್ನು ಅನುಷ್ಠಾನ ಮಾಡಬೇಕು. ಈ ಮಾರ್ಗದಲ್ಲಿ ಪ್ರಯಾಣ ಮಾಡಿದಾಗಲೇ ತತ್ತ್ವಜ್ಞಾನವು ಸಂಪನ್ನವಾಗುತ್ತದೆ.

ಮನುವಿನ ಮನನ ಹೀಗೆ ಸಾಗಿತ್ತು . ಈಶಾವಾಸ್ಯ ಉಪನಿಷತ್ತಿನಿಂದ ಯಜ್ಞನಾಮಕ ಪರಮಾತ್ಮನ ಸ್ತೋತ್ರ ನಡೆದಿತ್ತು . ಶ್ರೀಹರಿಯ ಆ ಸ್ತುತಿಯನ್ನು ಅಲ್ಲಿಯ ದೈತ್ಯರಿಗೆ

ಕೇಳಲಾಗಲಿಲ್ಲ. ದೈತ್ಯರಿಗೆ ಸಿಟ್ಟು ಬಂದಿತು. ಸ್ತೋತ್ರ ಮಾಡುತ್ತಿರುವ ಮನುವನ್ನು ಸಿಟ್ಟಿನಿಂದ ತಿನ್ನಲು ಬಂದರು. ಈ ದುಷ್ಟತನ ದೈತ್ಯರಿಗೆ ಉಚಿತವೇ ಆಗಿದೆ.

ಮನುವೂ ಸಹ ರಾಜನೇ ಆಗಿದ್ದಾನೆ. ದೈತ್ಯರನ್ನು ಸಂಹರಿಸುವ ಸಾಮರ್ಥ್ಯ ಅವನಿಗೆ ಇದ್ದೇ ಇದೆ.

ಆದರೆ ಆ ಸಂದರ್ಭದಲ್ಲಿ ಮನುವು ಸಮಾಧಿಸ್ಥನಾಗಿದ್ದ. ಹೀಗಾಗಿ ದೈತ್ಯರು ಬಂದುದೇ ಆತನಿಗೆ ತಿಳಿಯಲಿಲ್ಲ. ಹೀಗಾಗಿ ಮನುವು ದೈತ್ಯರನ್ನು ಸಂಹರಿಸಲಿಲ್ಲ. ಮನುವಿನ ಅನನ್ಯತೆಯನ್ನು ಗಮನಿಸಿದ ಭಗವಂತ ಆ ಎಲ್ಲ ದೈತ್ಯರನ್ನು ತಾನೇ ಸಂಹರಿಸಿದ.

ಮೊದಲ ಮನ್ವಂತರದಲ್ಲಿ ಸ್ವಾಯಂಭುವನೇ ಮನು. ಪ್ರಿಯವ್ರತ, ಉತ್ತಾನಪಾದರು ಮನುಪುತ್ರರು. ಮರೀಚಿ ಮುಂತಾದವರು ಸಪ್ತ ಋಷಿಗಳು. ಯಜ್ಞನು (ಪುತ್ರಿಕಾಪುತ್ರನ್ಯಾಯದಿಂದ ಮನುವಿನಿಂದ ಗೃಹೀತನು) ಹರಿಯ ಅವತಾರ. ಆ ಯಜ್ಞನೇ ಇಂದ್ರ. ಯಾಮಾದಿಗಳು ದೇವತೆಗಳು. ಹೀಗೆ ಈ ಮನ್ವಂತರ ಐದುವಿಧವೆಂದು ತಿಳಿಯುವುದು.

೧. ಮನು, ೨. ಮನುಪುತ್ರರು, ೩. ಸಪ್ತರ್ಷಿಗಳು, ೪. ಇಂದ್ರ, ೫. ದೇವತೆಗಳು, ೬. ಭಗವದವತಾರ. ಹೀಗೆ ಮನ್ವಂತರಗಳು ಷಡ್ವಿಧವಾಗಿರುತ್ತವೆ. ಆದರೆ ಪ್ರಕೃತ ಈ ಸ್ವಾಯಂಭುವಮನ್ವಂತರ ಪಂಚವಿಧ ಎಂದು ತಿಳಿಸುತ್ತಿದ್ದಾರೆ. ಯಾಕೆಂದರೆ ಈ ಮನ್ವಂತರದಲ್ಲಿ ಇಂದ್ರನೂ ಭಗವದವತಾರವೂ ಒಂದೇ ಆಗಿರುತ್ತದೆ. ಆದ್ದರಿಂದ ಮೊದಲ ಸ್ವಾಯಂಭುವಮನ್ವಂತರ ಪಂಚವಿಧ. ಉಳಿದ ಮನ್ವಂತರಗಳಲ್ಲಿ ಇಂದ್ರ ಮತ್ತು ಭಗವದವತಾರ ಬೇರೆ ಬೇರೆಯಾಗಿರುತ್ತಿವೆ. ಆದ್ದರಿಂದ ಸ್ವಾರೋಚಿಷ ಮುಂತಾದ ಎಲ್ಲ ಮನ್ವಂತರಗಳೂ ಷಡ್ವಿಧವಾಗಿವೆ.

**೨. ಸ್ವಾರೋಚಿಷ**

ಅಗ್ನಿಯ ಮಗನಾದ ಸ್ವಾರೋಚಿಷನು ಎರಡನೆಯ ಮನುವಾಗಿದ್ದಾನೆ. ಆ ಸ್ವಾರೋಚಿಷನಿಗೆ ದ್ಯುಮಾನ್, ಸುಷೇಣ, ರೋಚಿಷ್ಮಾನ್ ಮುಂತಾದವರು ಮಕ್ಕಳಾದರು.

ರೋಚನನಾಮಕರಾದ ವಾಯುದೇವರು ಸ್ವಾರೋಚಿಷ ಮನ್ವಂತರದಲ್ಲಿ ಇಂದ್ರರಾದರು. ತುಷಿತ ಮುಂತಾದವರು ದೇವತೆಗಳಾದರು. ಊರ್ಜಸ್ತಂಭ ಮುಂತಾದವರು ಸಪ್ತರ್ಷಿಗಳಾದರು.

ವೇದಶಿರಸ್ಸಿನ ಮಡದಿ ತುಷಿತಾ. ಅವಳಲ್ಲಿ ಕ್ರೀಡಾದಿಗುಣಸಂಪನ್ನನಾದ ಪರಮಾತ್ಮ ವಿಭುನಾಮಕನಾಗಿ ಅವತರಿಸಿದ. ಬಾಲ್ಯದಿಂದಲೇ ವ್ರತಧಾರಿಗಳಾದ ಎಂಭತ್ತೆಂಟುಸಾವಿರ ಋಷಿಗಳಿದ್ದರು. ಅವರೆಲ್ಲರೂ ವಿಭುನಾಮಕನಾದ ಪರಮಾತ್ಮನಿಂದ ಮೋಕ್ಷಸಾಧನವಾದ ವ್ರತವನ್ನು ಕಲಿತರು. ತಮ್ಮ ಮುಕ್ತಿಮಾರ್ಗವನ್ನು ಕಂಡುಕೊಂಡರು.

### ೩. ಉತ್ತಮ

ಸ್ವಾಯಂಭುವ ಮನುವಿನ ಮಗ ಪ್ರಿಯವ್ರತ. ಪ್ರಿಯವ್ರತನ ಮಗ ಉತ್ತಮ. ಈ ಉತ್ತಮನೇ ಮೂರನೆಯ ಮನ್ವಂತರಕ್ಕೆ ಅಧಿಪತಿ. ಪವನ, ಸೃಂಜಯ, ಯಜ್ಞಹೋತ್ರ ಮುಂತಾದವರು ಉತ್ತಮನ ಮಕ್ಕಳು. ವಸಿಷ್ಠರ ಮಕ್ಕಳಾದ ಪ್ರಮದ ಮುಂತಾದವರು ಉತ್ತಮಮನ್ವಂತರದಲ್ಲಿ ಸಪ್ತರ್ಷಿಗಳಾಗಿದ್ದರು. ಸತ್ಯ-ವೇದಶ್ರುತ-ಭದ್ರ ಹೆಸರಿನವರು ದೇವತೆಗಳಾಗಿದ್ದರು. ಸತ್ಯಜಿತ್ ನಾಮಕನಾಗಿ ಯಮಧರ್ಮನು ಇಂದ್ರನಾಗಿದ್ದನು.

ಯಮಧರ್ಮನಿಂದ ಸೂನೃತಾ ಎಂಬುವವಳಲ್ಲಿ ಸತ್ಯವ್ರತನಾಮಕರಾದ ದೇವತೆಗಳಿಂದ ಸಹಿತನಾಗಿ, ಸತ್ಯಸೇನನಾಮಕನಾಗಿ ಭಗವಂತ ಅವತಾರ ತಾಳಿದ.

ಈ ಸತ್ಯಜಿತ್ ನಾಮಕನಾದ ಇಂದ್ರನು ತನಗೆ ಮಗನಾಗಿ ಅವತರಿಸಿದ ಸತ್ಯಸೇನನಾಮಕನಾದ ಪರಮಾತ್ಮನನ್ನು ಸ್ತುತಿಸಿದ. ಸತ್ಯಜಿತನಿಂದ ಸ್ತುತನಾದ ಸತ್ಯಸೇನನು ದುಷ್ಟಸ್ವಭಾವದ ದುರುಳರನ್ನು ಸಂಹರಿಸಿದ. ಆ ಮನ್ವಂತರವನ್ನು ಸಂರಕ್ಷಿಸಿದ.

### ೪. ತಾಪಸ

ಪ್ರಿಯವ್ರತನ ಮಗ ಉತ್ತಮ. ಉತ್ತಮನ ತಮ್ಮನೇ ತಾಪಸ. ಈ ತಾಪಸನು ನಾಲ್ಕನೆಯ ಮನ್ವಂತರದ ಅಧಿಪತಿಯಾದ. ವೃಷ, ಖ್ಯಾತಿ, ನರ, ಕೇತು ಮುಂತಾದ ಹತ್ತುಜನ ಮಕ್ಕಳು ಈ ತಾಪಸನಿಂದ ಜನಿಸಿದರು.

ಸತ್ಯಕ, ಹರಿ, ವೀರನಾಮಕರಾದವರು ತಾಪಸಮನ್ವಂತರದ ದೇವತೆಗಳು. ಅಶ್ವಿನೀದೇವತೆಗಳಲ್ಲಿಯ ನಾಸತ್ಯನು ತ್ರಿಶಿಖನಾಮಕನಾಗಿ ಇಂದ್ರನಾದ. ತಾಪಸನಾಮಕನಾದ ಮನುವೇ ಈ ಮನ್ವಂತರದಲ್ಲಿ ಭಗವಂತ. ಈ ತಾಪಸನಿಗೆ ಹರಿ ಎಂದೂ ನಾಮವಿದೆ. ಹರಿಮೇಧಸ್ ಎಂಬುವವನಿಂದ ಹರಿಣಿಯಲ್ಲಿ ಹರಿನಾಮಕನಾಗಿ ಭಗವಂತ ಅವತರಿಸಿದ.

ವಿಧೃತಿಯ ಮಕ್ಕಳಾದ ವೈಧೃತಿಗಳು ತಾಪಸಮನ್ವಂತರದ ದೇವತೆಗಳು. ಕಾಲಕ್ರಮದಿಂದ ಅಪಪಾಠಾದಿಗಳಿಂದ ನಷ್ಟವಾದ ವೇದಗಳನ್ನು ಇವರು ತಮ್ಮ ಸಾಮರ್ಥ್ಯದಿಂದ ಮತ್ತೆ ಧರಿಸಿದರು. ಅದ್ದರಿಂದ ವೈಧೃತಿ ಎಂಬ ಇವರ ನಾಮವು ಸಾರ್ಥಕವಾಯಿತು.

**॥ ಇತಿ ಶ್ರೀಮದ್ಭಾಗವತೇ ಅಷ್ಟಮಸ್ಕಂಧೇ ಪ್ರಥಮೋಽಧ್ಯಾಯಃ ॥**

★★★

# ಅಥ ದ್ವಿತೀಯೋಽಧ್ಯಾಯಃ

ಪರೀಕ್ಷಿತ ಪ್ರಾಯೋಪವೇಶಕ್ಕೆ ಕುಳಿತಿದ್ದ. ಅನಶನವ್ರತವನ್ನು ಮಾಡುತ್ತಲೇ ಶ್ರೀಹರಿಯ ಕಥಾಶ್ರವಣದಲ್ಲಿ ತೊಡಗಿಕೊಂಡಿದ್ದ. ಶ್ರೀಶುಕಾಚಾರ್ಯರು ಹೇಳುತ್ತಿರುವ ಅನೇಕ ತತ್ತ್ವಗಳನ್ನು ಎಲ್ಲರೂ ಕುತೂಹಲದಿಂದ ಆಲಿಸುತ್ತಿದ್ದಾರೆ. ಪರೀಕ್ಷಿತನೂ ಕ್ಷಣಕ್ಷಣಕ್ಕೂ ಅಭಿವೃದ್ಧವಾದ ಕುತೂಹಲದಿಂದಲೇ ಪ್ರಶ್ನಿಸುತ್ತಿದ್ದಾನೆ.

ಪರೀಕ್ಷಿತನ ಈ ನಿಷ್ಠೆಗೆ ಶುಕಾಚಾರ್ಯರು ಸಂತುಷ್ಟರಾದರು. ಪರೀಕ್ಷಿತನನ್ನು ಪ್ರಶಂಸಿಸಿದರು. ಸಂತೋಷದಿಂದ ಹರಿಕಥೆಯನ್ನು ಮುಂದುವರಿಸಿದರು.

## ಗಜೇಂದ್ರಮೋಕ್ಷ

ಶ್ರೀಹರಿಯನ್ನು ಸಂತೋಷಪಡಿಸಲು ಭಕ್ತಿಯೊಂದೇ ಪ್ರಯೋಜಕ. ಜಾತಿ-ಲಿಂಗಗಳೆಲ್ಲವೂ ಅಪ್ರಯೋಜಕ. ಈ ವಿಷಯವನ್ನು ಸಪ್ತಮಸ್ಕಂಧದಲ್ಲಿ ವಿವರಿಸಿದ್ದಾರೆ. ಗಜೇಂದ್ರಮೋಕ್ಷದ ಕಥಾನಕವನ್ನು ನಿರೂಪಿಸುವ ಮೂಲಕ ಮತ್ತೆ ಅದೇ ವಿಷಯವನ್ನು ತಿಳಿಸುತ್ತಿದ್ದಾರೆ.

ಗಜೇಂದ್ರ ತನ್ನ ಯೋಗ್ಯತೆಗೆ ತಕ್ಕಂತೆಯೇ ದೇವರನ್ನು ಆರಾಧಿಸಿದ. ಗಜೇಂದ್ರನ ಆರಾಧನೆಗೆ ಭಗವಂತ ಸಂತುಷ್ಟನಾದ. ಪ್ರತ್ಯಕ್ಷನಾದ. ಗ್ರಾಹಗ್ರಸ್ತವಾದ ಗಜೇಂದ್ರನನ್ನು ಮೋಚನ ಮಾಡಿದ.

ಗಜೇಂದ್ರನಂತೆಯೇ ನಾವೆಲ್ಲರೂ ಸಂಸಾರಗ್ರಾಹದಿಂದ ಗ್ರಸ್ತರಾಗಿದ್ದೇವೆ. ಭಗವಂತನ ಸ್ತೋತ್ರಾದಿರೂಪವಾದ ಆರಾಧನೆಯನ್ನು ಮಾಡಿದಾಗಲೇ ಪರಮಾತ್ಮ ಪರಿತುಷ್ಟನಾಗುತ್ತಾನೆ. ಪರಮಾತ್ಮನ ಪ್ರಸಾದದಿಂದ ಸಂಸಾರರೂಪಗ್ರಾಹದಿಂದ ನಾವೆಲ್ಲ ಮುಕ್ತರಾಗುತ್ತೇವೆ. ಈ ಕಥೆ ಈ ವಿಷಯವನ್ನು ಚೆನ್ನಾಗಿ ಬೋಧಿಸುತ್ತದೆ.

ಕ್ಷೀರಸಾಗರದಿಂದ ಆವೃತವಾದ ಪರ್ವತ ತ್ರಿಕೂಟ. ರತ್ನ ಮುಂತಾದ ಸಂಪತ್ತುಗಳಿಂದ ಸಂಪನ್ನವಾದ ಪರ್ವತ. ಹತ್ತುಸಾವಿರ ಯೋಜನದಷ್ಟು ಎತ್ತರವಾಗಿದೆ. ಅಷ್ಟೇ ಅಗಲವಾಗಿದೆ. ಬೆಳ್ಳಿ-ಕಬ್ಬಿಣ-ಬಂಗಾರದ ಮೂರು ಶಿಖರಗಳಿಂದ ಪ್ರಕಾಶಿತವಾಗಿದೆ. ಮೂರು ಕೂಟಗಳು ಶಿಖರಗಳು ಇರುವುದರಿಂದ ಇದು ತ್ರಿಕೂಟ ಎಂದು ಪ್ರಸಿದ್ಧವಾಗಿದೆ.

ವಿಧವಿಧವಾದ ಪೊದೆಗಳು, ಬಳ್ಳಿಗಳು, ವೃಕ್ಷಗಳಿಂದ ಅಲಂಕೃತವಾಗಿದೆ. ನಾನಾವಿಧವಾದ ಶಿಖರಗಳಿಂದ ಉತ್ಕೃಷ್ಟವಾಗಿದೆ. ಜುಳು ಜುಳು ಹರಿವ ನಿರ್ಝರಗಳಿಂದ ತುಂಬಿದೆ. ಪಚ್ಚೆ ಮುಂತಾದ ಅತ್ಯಂತ ಅಮೂಲ್ಯವಾದ ದ್ರವ್ಯಗಳಿಂದ ಶ್ರೀಮಂತವಾಗಿದೆ ಈ ತ್ರಿಕೂಟಪರ್ವತ.

ಅತ್ಯಂತ ರಮಣೀಯವಾದ ಈ ಪ್ರದೇಶದಲ್ಲಿ ಸಿದ್ಧ-ಚಾರಣ- ಗಂಧರ್ವ-ವಿದ್ಯಾಧರ ಮುಂತಾದವರು ಸಂಚರಿಸುತ್ತಾರೆ. ಗಂಧರ್ವರ ಮಧುರವಾದ ಗಾನದಿಂದ ಇಲ್ಲಿಯ ಗುಹೆಗಳು ಪ್ರತಿಧ್ವನಿಸುತ್ತವೆ. ಇಷ್ಟೆಲ್ಲ ಮಹಾನುಭಾವರ ದೇವಾಧಿದೇವತೆಗಳ ಸಂಸರ್ಗದಿಂದ ಈ ಪರ್ವತ ಪ್ರಾಂತ ಅತ್ಯಂತ ಪುಣ್ಯಮಯವಾಗಿದೆ.

ಈ ಪರ್ವತದಲ್ಲಿ ವರುಣದೇವರ ಕ್ರೀಡೆಗೆ ಯೋಗ್ಯವಾದ ಸ್ಥಳ ಒಂದಿದೆ. ಅದರ ಹೆಸರು ಋತುಮತ್. ಎಲ್ಲ ಋತುಗಳಲ್ಲಿ ಬೆಳೆಯುವ ಫಲ-ಪುಷ್ಪಗಳಿಂದ ಸಂಪನ್ನವಾದ ಉದ್ಯಾನವಿದು.

ಈ ಉದ್ಯಾನವನದಲ್ಲಿಯೇ ಉತ್ಕೃಷ್ಟವಾದ ಸರೋವರ ಒಂದಿದೆ. ಅತ್ಯಂತ ರಮಣೀಯವಾಗಿದೆ. ಕಮಲ ಮುಂತಾದ ಪುಷ್ಪಗಳಿಂದ, ಹಂಸ ಮುಂತಾದ ಪಕ್ಷಿಗಳಿಂದ ಮನೋಹರವಾಗಿದೆ.

ಈ ತ್ರಿಕೂಟಪರ್ವತದ ಗುಹೆಯಲ್ಲಿ ಒಂದು ಸಲಗ ವಾಸವಾಗಿದೆ. ಈ ಸಲಗವೇ ವನದ ರಾಜ. ಈ ಗಜರಾಜನ ಮದಗಂಧದಿಂದಲೇ ಸಿಂಹ-ಹುಲಿ ಮುಂತಾದ ಪ್ರಾಣಿಗಳು ನಡುಗುತ್ತವೆ. ಅದೃಶ್ಯವಾಗಿ ಹೋಗುತ್ತವೆ. ಈ ಗಜರಾಜನಿಗೆ ಎದುರಾಗಿ ನಿಲ್ಲುವ ಯಾವ ಪ್ರಾಣಿಯೂ ಆ ಪರ್ವತಪ್ರಾಂತದಲ್ಲಿ ಇರಲೇ ಇಲ್ಲ.

ಇಂಥ ಗಜರಾಜ ತನ್ನ ಪರಿವಾರದೊಂದಿಗೆ ಋತುಮತ್ ಎಂಬ ಉದ್ಯಾನದಲ್ಲಿ ಸಂಚರಿಸುತ್ತಾ ಹಿಂದೆ ತಿಳಿಸಿದಂಥ ಸರೋವರಕ್ಕೆ ಬಂದಿತು. ಅಲ್ಲಿಯ ವೃಕ್ಷಗಳನ್ನೆಲ್ಲ ಕಿತ್ತು ಹಾಕಿತು. ಮದೋನ್ಮತ್ತವಾಗಿ ಸಂಚರಿಸಿತು.

ಆನೆಯನ್ನು ಕೊಲ್ಲುವ ಸಿಂಹಗಳಿಗೆ ಆನೆಯ ಭಯವೇ? ನಿಜ. ಆನೆಯನ್ನು ಕೊಲ್ಲುವುದು ಸಿಂಹದ ಸ್ವಭಾವ. ಆದರೆ ಇದು ಸಾಮಾನ್ಯವಾದ ಆನೆಯಲ್ಲ. ಇಂದ್ರದ್ಯುಮ್ನರಾಜನೇ ಶಾಪದಿಂದ ಆನೆಯ ದೇಹ ಪಡೆದಿದ್ದಾನೆ. ಆದ್ದರಿಂದ ಸಿಂಹ ಮುಂತಾದ ಎಲ್ಲವನ್ನೂ ಆ ಆನೆ ಹೆದರಿಸುತ್ತಿತ್ತು . ಹರಿಯ ಅರ್ಚನೆಯ ಪ್ರಭಾವ ಉಳ್ಳವರು ಯಾರಾದರೇನು? ಅವರನ್ನು ಕಂಡು ಎಲ್ಲರೂ ಅಂಜಲೇ ಬೇಕಲ್ಲವೇ?

ಅದು ಬೇಸಗೆಯ ಕಾಲ. ಬಿಸಿಲಿನ ತಾಪ ಒಂದೆಡೆ. ಸಂಚಾರದ ಸಂತಾಪ ಮತ್ತೊಂದೆಡೆ. ಸಂತಾಪದ ಪರಿಹಾರಕ್ಕಾಗಿ ಅಲ್ಲಿಯ ಸರೋವರವನ್ನು ಪ್ರವೇಶಿಸಿತು. ಎಲ್ಲ ಪರಿವಾರದೊಂದಿಗೆ ಸರೋವರದಲ್ಲಿ ಸ್ನಾನ ಮಾಡಿತು. ಶಾಂತವಾಯಿತು. ತನ್ನ ಸೊಂಡಿಲಿಂದ ಮಕ್ಕಳಿಗೆ, ಮೊಮ್ಮಕ್ಕಳಿಗೆ ಸ್ನಾನ ಮಾಡಿಸಿತು. ಪ್ರಶಾಂತವಾಯಿತು. ಯಥೇಚ್ಛವಾಗಿ ನೀರನ್ನು ಕುಡಿದು ಎಲ್ಲರಿಗೂ ಕುಡಿಸಿತು.

ವಿಷಯಗಳಲ್ಲಿ ಆಸಕ್ತನಾದ ಮನುಷ್ಯನಿಗೆ ಮುಂದೆ ಬರುವ ಕಷ್ಟಗಳ ಪರಿಜ್ಞಾನ ಆಗೋದಿಲ್ಲ. ಆ ಆನೆಗೂ ಮುಂದೆ ಆಗುವ ಅನಾಹುತದ ಜ್ಞಾನವಾಗಲೇ ಇಲ್ಲ. ಕಷ್ಟ

ಬರುವಾಗ ಹೇಳೋದೇ ಇಲ್ಲ. ಗೊತ್ತಾಗೋದೇ ಇಲ್ಲ. ಸುಮ್ಮನೇ ನಿಶ್ಶಬ್ದವಾಗಿ ಕಷ್ಟಗಳು ಬಂದೇ ಬಿಡುತ್ತವೆ. ಸಪ್ಪಳ ಇಲ್ಲದೇ ನಕ್ರ ಬಂದಂತೆ.

ಆ ನಕ್ರ ಆನೆಗಿಂತಲೂ ಬಲಿಷ್ಠ. ಅದು ಕೂಡಾ ಶಾಪಗ್ರಸ್ತ. ಅಂಥ ನಕ್ರವನ್ನು ಆನೆಯು ತುಳಿಯಿತು. ತುಳಿತಕ್ಕೆ ಒಳಗಾದ ನಕ್ರ ಕುಪಿತವಾಯಿತು. ಆನೆಯ ಕಾಲನ್ನು ಹಿಡಿಯಿತು. ನೋಡ ನೋಡುತ್ತಿದ್ದಂತೆಯೇ ಅತಿಬಲಶಾಯಿನಾದ ಆನೆಯು ಗ್ರಾಹಗ್ರಸ್ತವಾಯಿತು.

ಹಾಗೆ ನಕ್ರಗ್ರಸ್ತವಾದ ಆನೆ ಮೊದಲು ಹೆದರಲಿಲ್ಲ. ನನ್ನ ಶಕ್ತಿಯಿಂದ ಈ ನಕ್ರವನ್ನು ನಾಶಪಡಿಸುವೆ ಎಂದು ತಿಳಿಯಿತು. ಬಲ ಪ್ರಯೋಗಿಸಿ ಬಿಡಿಸಿಕೊಳ್ಳಲು ಪ್ರಯತ್ನಿಸಿತು. ತನ್ನ ಬಲ ಸಾಕಾಗಲಿಲ್ಲ. ಹೆಂಡತಿ, ಮಕ್ಕಳು, ಮೊಮ್ಮಕ್ಕಳು ಎಲ್ಲ ಪರಿವಾರ ಸೇರಿತು. ಮೇಲಿನಿಂದ ಆ ಗಜರಾಜವನ್ನು ಎಳೆದವು. ಆದರೂ ಇಂಚಿನಷ್ಟೂ ಗಜರಾಜ ಕದಲಲಿಲ್ಲ. ಎಳೆದು ಎಳೆದು ಪರಿವಾರವೆಲ್ಲ ಬಳಲಿತು. ಎಲ್ಲ ಗಜಗಳೂ ಹತಾಶವಾದವು. ಆದರೂ ತಮ್ಮ ಪ್ರಯತ್ನವನ್ನು ಮಾತ್ರ ಬಿಡಲೇ ಇಲ್ಲ. ಯಾವ ಪ್ರಯತ್ನವೂ ಸಫಲವಾಗದಿರುವುದನ್ನು ನೋಡಿ ಜೋರಾಗಿ ಆಕ್ರಂದಿಸಿದವು. ತಮ್ಮ ಯಜಮಾನನು ಸಂಕಷ್ಟಕ್ಕೆ ಸಿಲುಕಿರುವುದನ್ನು ಕಂಡು ಗೋಳಿಟ್ಟವು.

ಮೊಸಳೆ ಆನೆಯನ್ನು ಒಳಗೆ ಎಳೆಯುತ್ತಿದೆ. ಆನೆ ಬಿಡಿಸಿಕೊಳ್ಳಲು ಪ್ರಯತ್ನಿಸುತ್ತಿದೆ. ಹೀಗೆ ಗಜ-ಮಕರಗಳ ಯುದ್ಧ ದಿನೇ ದಿನೇ ಬೆಳೆಯಿತು. ಸಾವಿರ ವರ್ಷಗಳು ಯುದ್ಧದಲ್ಲಿಯೇ ಕಳೆದವು. ನೀರು-ಆಹಾರವಿಲ್ಲದೇ ಯುದ್ಧ ಮಾಡುತ್ತ ಬದುಕಿರುವ ಆ ಪ್ರಾಣಿಗಳನ್ನು ನೋಡಿ ದೇವತೆಗಳೂ ವಿಸ್ಮಿತರಾದರು.

ಎಷ್ಟಾದರೂ ಜಲಾಶಯ ಮಕರದ ವಾಸಸ್ಥಾನ. ಸ್ವಸ್ಥಾನ. ಅಲ್ಲಿ ಮೊಸಳೆಯೇ ಪ್ರಬಲ. ತನ್ನ ಪ್ರಾಬಲ್ಯವನ್ನು ಮೆರೆಯಿತು. ಕ್ರಮವಾಗಿ ಆನೆಯ ಶಕ್ತಿ ಕ್ಷೀಣಿಸತೊಡಗಿತು.

ತನ್ನ ಶಕ್ತಿಯನ್ನೆಲ್ಲ ಕಳೆದುಕೊಂಡಮೇಲೆ ಆ ಆನೆಗೆ ದೇವರ ನೆನಪಾಯಿತು. ಎಲ್ಲ ಜೀವರ ಹಣೆಬರಹವೂ ಇಷ್ಟೇ. ಈ ಪ್ರಸಂಗದಲ್ಲಿ ಕಾಯುವ ದೊರೆ ಅವನೊಬ್ಬನೇ ಎಂದು ತೀರ್ಮಾನಿಸಿತು.

ಈ ಬಂಧು-ಬಾಂಧವರಿಗೆ ನನ್ನನ್ನು ರಕ್ಷಿಸಲಾಗಲಿಲ್ಲ. ಸ್ವಯಂ ಸಮರ್ಥನೆಂದು ನಾನು ಇಲ್ಲಿಯ ತನಕ ತಿಳಿದಿದ್ದೆ. ಆದರೆ ನನ್ನ ರಕ್ಷಣೆಯನ್ನು ನನಗೆ ಮಾಡಿಕೊಳ್ಳಲೂ ಆಗುತ್ತಿಲ್ಲ. ಸರ್ವಸಂರಕ್ಷಕ ಆ ಪರಮಾತ್ಮನೇ ಆಗಿದ್ದಾನೆ. ಆ ಭಗವಂತನೇ ನನ್ನ ದುಃಖವನ್ನು ಪರಿಹರಿಸಬಲ್ಲ ಬಲವಂತ ಎಂದು ತೀರ್ಮಾನಿಸಿತು. ಆ ಭಗವಂತನಿಗೆ ಶರಣು ಹೋಯಿತು.

॥ ಇತಿ ಶ್ರೀಮದ್ಭಾಗವತೇ ಅಷ್ಟಮಸ್ಕಂಧೇ ದ್ವಿತೀಯೋऽಧ್ಯಾಯಃ ॥

## ಅಥ ತೃತೀಯೋಽಧ್ಯಾಯಃ

ಭಗವಂತನಿಗೆ ಶರಣು ಹೋದ ಆನೆ ಭಗವಂತನ ಗುಣಗಳನ್ನು ಚಿಂತಿಸತೊಡಗಿತು. ಪೂರ್ವಜನ್ಮದಲ್ಲಿ ತಾನು ಕಲಿತ ವಿದ್ಯೆಗಳು ಆ ಆನೆಗೆ ಪ್ರತಿಭಾತವಾದವು. ಭಗವತ್ತತ್ತ್ವದ ಅರಿವು ವಿಜೃಂಭಿಸಿತು. ಚಿಂತಿಸತೊಡಗಿತು.

ಭಗವಂತ ಲೋಕವಿಲಕ್ಷಣ. ಸರ್ವನಿಯಾಮಕ. ಅತ್ಯಂತ ಅಸಾಧ್ಯವಾದುದೂ ಅವನಿಗೆ ಅತಿಸುಲಭ. ಆ ಪರಮಾತ್ಮನ ಶಕ್ತಿ ರಮಾಬ್ರಹ್ಮಾದಿಗಳಿಗೂ ಅಚಿಂತ್ಯ.

ಪ್ರಕೃತ ಮರಣ ನನ್ನ ಕಡೆ ಓಡಿ ಬರುತ್ತಿದೆ. ಈ ಮರಣವನ್ನು ತಪ್ಪಿಸಿಕೊಳ್ಳಲು ಯಾರಿಗೂ ಸಾಧ್ಯವಿಲ್ಲ. ಮರಣ ಬಲಿಷ್ಠವೇ. ನಿಜ. ಭಗವಂತನಿಗಿಂತಲೂ ಬಲವಂತರು ಯಾರೂ ಇಲ್ಲ. ಯಾವುದೂ ಅಲ್ಲ. ದೇವರ ಅನುಗ್ರಹ ಇದ್ದವರು ಮಾತ್ರ ಮರಣದಿಂದ ಪಾರಾಗುತ್ತಾರೆ. ಭಗವಂತನಿಗೆ ಶರಣಾದವರು ಮಾತ್ರ ಜನನ-ಮರಣಗಳನ್ನು ಶಾಸಿಸುತ್ತಾರೆ. ಭಗವದ್ಭಕ್ತನ ಬಳಿ ಸೇರಲು ಯಮನೂ ಭೀತನಾಗುತ್ತಾನೆ. ಅಂಥ ಪರಮಾತ್ಮನೇ ನನ್ನನ್ನು ಈಗ ಸಂರಕ್ಷಿಸಬೇಕು. ಆ ಪರಮಾತ್ಮನನ್ನೇ ಶರಣು ಹೋಗುತ್ತೇನೆ.

ಹೀಗೆ ಗಜೇಂದ್ರನು ನಿರ್ಧಾರ ಮಾಡಿಕೊಂಡ. ಮೊಸಳೆಯಿಂದ ತಪ್ಪಿಸಿಕೊಳ್ಳಬೇಕೆಂಬ ಪ್ರಯತ್ನವನ್ನು ಬಿಟ್ಟ. ಕ್ಲೇಶದ ಆ ಪ್ರಸಂಗದಲ್ಲಿಯೂ ಮನಸ್ಸನ್ನು ಏಕಾಗ್ರಗೊಳಿಸಿದ. ವಿವೇಕಹೀನವಾದ ಆನೆಯ ಜನ್ಮ ಅದು. ಆದರೂ ಭಗಂತನ ಅನುಗ್ರಹದಿಂದ ಪೂರ್ವಜನ್ಮದ ಸ್ಮರಣೆಯಾಯಿತು. ತಾನು ಹಿಂದಿನ ಜನ್ಮದಲ್ಲಿ ಉಪದೇಶ ಪಡೆದ ಮಂತ್ರವು ಸ್ಫುರಿತವಾಯಿತು. ಅನುಸಂಧಾನಪೂರ್ವಕವಾಗಿ ಆ ಮಂತ್ರವನ್ನು ಉಚ್ಚರಿಸಿತು.

ಭಗವಂತನಿಂದಲೇ ಈ ಚೇತನ ಸಮುದಾಯವೆಲ್ಲ ತಮ್ಮ ತಮ್ಮ ಅಭೀಷ್ಟಗಳನ್ನು ಪೂರೈಸಿಕೊಳ್ಳುತ್ತದೆ. ಆ ಪರಮಾತ್ಮ ಜಗತ್ತಿಗೆ ಮೂಲಕಾರಣನಾಗಿದ್ದಾನೆ. ಷಡ್ಗುಣಗಳಿಂದ ಪರಿಪೂರ್ಣನಾಗಿದ್ದಾನೆ. ಅನಂತಗುಣಗಳಿಂದ ಸಂಪನ್ನನಾಗಿದ್ದಾನೆ. ಎಲ್ಲರ ಶರೀರದಲ್ಲಿಯೂ ನಿಯಾಮಕನಾಗಿ ಸನ್ನಿಹಿತನಾಗಿದ್ದಾನೆ. ಸರ್ವತ್ರ ವಾಸವಾಗಿದ್ದಾನೆ. ಸರ್ವತ್ರ ವಾಸದಿಂದ ಭಗವಂತನಿಗೆ ದುಃಖವೇ ಇಲ್ಲ. ಕ್ರೀಡಾರೂಪನಾಗಿ ಆನಂದರೂಪನಾಗಿ ಸರ್ವತ್ರ ವಾಸವಾಗಿದ್ದಾನೆ. ಅಂಥ ಪರಮಾತ್ಮನಿಗೆ ನಾನು ವಿನೀತನಾಗಿದ್ದೇನೆ. ಇಂಥ ಪರಬ್ರಹ್ಮನನ್ನು ನಾನು ಧ್ಯಾನ ಮಾಡುತ್ತೇನೆ.

ಈ ಸಮಸ್ತ ಪ್ರಪಂಚ ಪ್ರಮಾಣಪ್ರಮಿತವಾಗಿದೆ. ಇದು ಸತ್ಯ. ಸತ್ಯವಾದ ಸಮಸ್ತಪ್ರಪಂಚಕ್ಕೆ ವಿಷ್ಣುವೇ ಆಶ್ರಯನಾಗಿದ್ದಾನೆ. ವಿಷ್ಣುವೇ ಆಧಾರನಾಗಿದ್ದಾನೆ. ಈ ಸಮಸ್ತಪ್ರಪಂಚದ ಸೃಷ್ಟಿ-ಸ್ಥಿತಿ-ಸಂಹಾರ-ನಿಯಮನ-ಜ್ಞಾನ-ಅಜ್ಞಾನ-ಬಂಧ-ಮೋಕ್ಷಗಳಿಗೆಲ್ಲ ವಿಷ್ಣುವೇ ಕಾರಣನಾಗಿದ್ದಾನೆ. ಆ ಪರಮಾತ್ಮನಿಗೆ ಕಾರಣರಾದವರು

ಯಾರೂ ಇಲ್ಲ. ಭಗವಂತನ ಜ್ಞಾನಕ್ಕೆ ಅಡೆ-ತಡೆಗಳಿಲ್ಲ. ಎಲ್ಲವನ್ನೂ ಪ್ರತ್ಯಕ್ಷವಾಗಿ ಕಾಣುವ ಸಮರ್ಥ. ಆ ವಿಷ್ಣುವೇ ನನಗೆ ಸಂರಕ್ಷಕನಾಗಿದ್ದಾನೆ.

ಬ್ರಹ್ಮಾದಿದೇವತೆಗಳಾಗಲೀ, ನಾರದಾದಿಋಷಿಗಳಾಗಲೀ ಭಗವಂತನ ಸ್ವರೂಪವನ್ನು ಸಮಗ್ರವಾಗಿ ತಿಳಿಯಲು ಸಮರ್ಥರಲ್ಲ. ಅಂಥ ಪರಮಾತ್ಮನನ್ನು ತಿಳಿಯಲು ಮತ್ತಾರು ಸಮರ್ಥರಾದಾರು? ಅಂಥ ಪರಮಾತ್ಮ ನನಗೆ ಸಂರಕ್ಷಕನಾಗಲಿ.

ಭಗವಂತನ ಸ್ವರೂಪ ಪರಮಮಂಗಳಕರವಾಗಿದೆ. ಲೋಕವಿಲಕ್ಷಣವಾದ ಸೃಷ್ಟ್ಯಾದಿವ್ಯಾಪಾರಗಳನ್ನು ಮಾಡುವ ಸಮರ್ಥ ಭಗವಂತ. ದೋಷಾತೀತ. ಅಂಥ ಪರಮಾತ್ಮನ ಸ್ವರೂಪವನ್ನು ತಿಳಿಯಬೇಕೆಂದು ಜ್ಞಾನಿಗಳು ತವಕಿಸುತ್ತಾರೆ. ಸರ್ವವನ್ನೂ ತೊರೆಯುತ್ತಾರೆ. ಅರಣ್ಯವನ್ನು ಅರಸುತ್ತಾರೆ. ಏಕಾಂತದ ಸಹವಾಸದಲ್ಲಿ ಮೆರೆಯುತ್ತಾರೆ. ಅಲ್ಲಿಯೇ ಕಂದ-ಮೂಲ-ಫಲಗಲನ್ನು ತಿನ್ನುತ್ತಾ ತಪವ ಗೈಯುತ್ತಾರೆ. ಅಂಥ ಪರಮಾತ್ಮ ನನಗೆ ಗತಿಯಾಗಲಿ.

ದುಷ್ಕರ್ಮಗಳಿಂದ, ಅನ್ಯರ ಪ್ರೇರಣೆಯಿಂದ ನಮಗೆ ಜನನ-ಮರಣಗಳು ಸಂಭವಿಸುತ್ತವೆ. ಕರ್ಮಾತೀತನಾದ, ಸ್ವತಂತ್ರನಾದ ಪರಮಾತ್ಮನಿಗೆ ಈ ಜನನ-ಮರಣಗಳಿಲ್ಲ. ಅಪೇಕ್ಷಿತವಾದ ಫಲಗಳ ಪ್ರಾಪ್ತಿಗಾಗಿ ಯಾವ ಕರ್ಮವನ್ನೂ ಭಗವಂತ ಮಾಡಬೇಕಿಲ್ಲ. ಅವನು ನಿತ್ಯತೃಪ್ತ. ಸಾಂಕೇತಿಕವಾದ, ನಿರರ್ಥಕವಾದ ಹೆಸರುಗಳು ಆ ಪರಮಾತ್ಮನಿಗೆ ಇಲ್ಲವೇ ಇಲ್ಲ. ಎಲ್ಲ ನಾಮಗಳೂ ಸಾರ್ಥಕವೇ ಆಗಿವೆ. ಪ್ರತಿಯೊಂದು ನಾಮವೂ ಭಗವಂತನ ಮಹಿಮೆಗಳನ್ನು, ಗುಣಗಳನ್ನು ಬೋಧನ ಮಾಡುತ್ತವೆ. ಭಗವಂತನಿಗೆ ಪ್ರಾಕೃತವಾದ ರೂಪವೇ ಇಲ್ಲ. ಭೂಮಿಯಲ್ಲಿ ರಾಮ-ಕೃಷ್ಣಾದಿ ರೂಪಗಳಿಂದ ಅವತರಿಸುವಾಗಲೂ ಅಪ್ರಾಕೃತವಾದ ರೂಪದಿಂದಲೇ ಅವತರಿಸುತ್ತಾನೆ. ಮಂದರು ಮಾತ್ರ ಪರಮಾತ್ಮನ ರೂಪವನ್ನು ಪ್ರಾಕೃತ ಎಂದು ಭ್ರಮಿಸುತ್ತಾರೆ.

ಭಗವಂತ ಸತ್ತ್ವ-ರಜಸ್ಸು-ತಮಸ್ಸು ಎಂಬ ಮೂರುಗುಣಗಳಿಂದ ರಹಿತನಾಗಿದ್ದಾನೆ. ಸಾದಿತ್ವ-ವಿನಾಶಿತ್ವ ಮುಂತಾದ ದೋಷಗಳು ಭಗವಂತನಲ್ಲಿ ಇಲ್ಲ. ಆದರೂ ಭಗವಂತ ಕಾಲಕ್ಕೆ ತಕ್ಕಂತೆ ಅವತರಿಸುತ್ತಾನೆ. ಸಮಸ್ತಲೋಕದಲ್ಲಿಯ ಜನರಿಗೆ ಮಂಗಳವನ್ನುಂಟು-ಮಾಡಲು ನಾನಾ ಅವತಾರಗಳನ್ನು ತಾಳುತ್ತಾನೆ. ಅಂಥ ಪರಮಾತ್ಮನಿಗೆ ಸದಾ ವಿನೀತನಾಗಿ ಬಾಳುತ್ತೇನೆ. ಆ ಪರಮಾತ್ಮ ನನಗೆ ಸಂರಕ್ಷಕನಾಗಲಿ.

ಭಗವಂತ ಸ್ವಪ್ರಕಾಶನಾಗಿದ್ದಾನೆ. ಜೀವನ ಸ್ವರೂಪಕ್ಕೂ ಭಗವಂತನೇ ಪ್ರಕಾಶಕ. ಮುಕ್ತಿಯೋಗ್ಯರಾದ ಜೀವರಾಶಿಗಳಿಗೆ ಮಾತ್ರ ತನ್ನ ದರ್ಶನ ಮಾಡಿಸುತ್ತಾನೆ. ಅವರಿಗೆ ಮಾತ್ರ ಭಗವಂತನ ಅಪರೋಕ್ಷವಾಗುತ್ತದೆ. ವೇದಗಳೂ ಭಗವಂತನನ್ನು ಪರಿಪೂರ್ಣವಾಗಿ ತಿಳಿಸಲಾರವು. ಮನಸ್ಸಿಗೂ ನಿಲುಕದ ಅಗಮ್ಯ ಭಗವಂತ. ಅಂಥ ಪರಮಾತ್ಮನಿಗೆ ವಿನೀತನಾಗಿ ನಾನು ಬಾಳುತ್ತೇನೆ.

ಧರ್ಮ-ಅರ್ಥ-ಕಾಮ-ಮೋಕ್ಷಗಳನ್ನು ಬಯಸುವ ಪ್ರತಿಯೊಬ್ಬರೂ ಭಗವಂತನನ್ನೇ ಬೇಡುತ್ತಾರೆ. ತಮ್ಮ ಅಭೀಷ್ಟಸಿದ್ಧಿಗಾಗಿ ಭಗವಂತನ ಆರಾಧನೆಯನ್ನೇ ಮಾಡುತ್ತಾರೆ. ತಮಗೆ ಇಷ್ಟವಾದ ಸಿದ್ಧಿಗಳನ್ನು ಪಡೆಯುತ್ತಾರೆ. ಅಂಥ ಪರಮಾತ್ಮ ಈ ಗ್ರಾಹದಿಂದಲೂ, ಸಂಸಾರಗ್ರಾಹದಿಂದಲೂ ನನ್ನನ್ನು ಮುಕ್ತನನ್ನಾಗಿಸಲಿ.

ಏಕಾಂತಭಕ್ತರಂತೂ ದೇವರಿಗೆ ಏನನ್ನೂ ಬೇಡುವುದಿಲ್ಲ. ಭಗವಂತನ ಚರಿತ್ರೆಯನ್ನೇ ನಿತ್ಯವೂ ಗಾನಮಾಡುತ್ತಾ ಇರುತ್ತಾರೆ. ಯಾವ ಕಾಮನೆಗಳಿಗೂ ಅವರು ಬಲಿಯಾಗುವುದಿಲ್ಲ. ಶ್ರೀಹರಿಯನ್ನು ಆರಾಧಿಸುತ್ತಾ ಆನಂದಸಾಗರದಲ್ಲಿ ಮಗ್ನರಾಗುತ್ತಾರೆ. ಭಗವಂತನಿಗೆ ಮುಕ್ತಿಯನ್ನೂ ಬೇಡುವುದಿಲ್ಲ. ಅಂಥ ಪರಮಾತ್ಮನ ಸ್ತುತಿಯನ್ನು ನಾನು ಮಾಡುತ್ತೇನೆ. ನನ್ನ ಈ ವಿಪತ್ತನ್ನು ಆ ಭಗವಂತ ಪರಿಹರಿಸಲಿ.

ಭಗವಂತ ಬ್ರಹ್ಮಾದಿಗಳಿಗೆ ಜನಕನಾಗಿದ್ದಾನೆ. ಅವನು ದೇವತೆಯಲ್ಲ. ಅಸುರನೂ ಅಲ್ಲ. ಮನುಷ್ಯನಂತೂ ಅಲ್ಲವೇ ಅಲ್ಲ. ಪಶುವೂ ಅಲ್ಲ.

ಸ್ತ್ರೀಯರಿಗೆ ಪುರುಷರ ಅಪೇಕ್ಷೆ ಇರುತ್ತದೆ. ಪುರುಷರಿಗೆ ಸ್ತ್ರೀಯರ ಅಪೇಕ್ಷೆ ಇರುತ್ತದೆ. ಭಗವಂತನಿಗೆ ಸ್ತ್ರೀಯರ ಅಪೇಕ್ಷೆ ಇಲ್ಲ. ಆದ್ದರಿಂದ ಪುರುಷನಲ್ಲ. ಶಾಪಾದಿಗಳಿಂದ ಪುರುಷತ್ವವನ್ನು ಕಳೆದುಕೊಳ್ಳುವ ಪುರುಷನೂ ಅಲ್ಲ. ಪುರುಷರ ಅಪೇಕ್ಷೆಯೂ ಇಲ್ಲ. ಆದ್ದರಿಂದ ಅವನು ಸ್ತ್ರೀಯೂ ಅಲ್ಲ.

ನಪುಂಸಕರೂಪವಂತೂ ಭಗವಂತನಿಗೆ ಇಲ್ಲವೇ ಇಲ್ಲ. ಕ್ರಿಮಿ ಮುಂತಾದ ಪ್ರಾಣಿಯೂ ಅಲ್ಲ. ಭಗವಂತ ರೂಪಾದಿಗುಣಸ್ವರೂಪನೂ ಅಲ್ಲ. ಪರಿಸ್ಪಂದಾದಿ ಕ್ರಿಯಾಸ್ವರೂಪನೂ ಅಲ್ಲ. ಪೃಥಿವೀ-ಅಪ-ತೇಜಸ್ಸುಗಳಲ್ಲಿ ಒಂದಲ್ಲ. ವಾಯು ಅಲ್ಲ. ಆಕಾಶವಲ್ಲ. ದೇವರು ಏನೂ ಅಲ್ಲ ಎಂದಾದರೆ ಶೂನ್ಯನೇ? ಛೇ ಛೇ... ಭಗವಂತ ಶೂನ್ಯನಲ್ಲ. ಭಗವಂತ ಇದಾವುದೂ ಅಲ್ಲ. ಇವೆಲ್ಲವುಗಳಿಗಿಂತಲೂ ವಿಲಕ್ಷಣನಾದವನು. ಇವೆಲ್ಲವೂ ಅಪರಿಪೂರ್ಣವಾಗಿವೆ. ಪರಮಾತ್ಮ ಮಾತ್ರ ಪರಿಪೂರ್ಣನಾಗಿದ್ದಾನೆ. ಅಂಥ ಪರಮಾತ್ಮ ನನ್ನ ಅನಿಷ್ಟವನ್ನು ಪರಿಸಹರಿಸಲಿ. ಸದಾ ಉತ್ಕೃಷ್ಟನಾಗಿಯೇ ಇರಲಿ.

ಭಗವಂತನ ಶಕ್ತಿ ಅದ್ಭುತ. ಆ ಶಕ್ತಿಗೆ ಒಳಗಾಗಿಯೇ ಸರ್ವರೂ ಸರ್ವ ಕಾರ್ಯಗಳನ್ನು ಮಾಡುತ್ತಾರೆ. ನಾನು ಕೂಡಾ ಭಗವಂತನ ಶಕ್ತಿಗೆ ಬದ್ಧನಾಗಿರುವೆ. ದೇವರ ಮಹಿಮೆಯನ್ನು ತಿಳಿಯಲು ನನಗೆ ಆಗಲಿಲ್ಲ. ಪ್ರಸ್ತುತವೂ ಭಗವಂತನ ಶಕ್ತಿಗೆ ಅಧೀನನಾಗಿದ್ದೇನೆ. ಭಗವಂತನ ಶಕ್ತಿಯಿಂದಲೇ ಆ ದೇವರನ್ನು ತಿಳಿಯುವ ಸೌಭಾಗ್ಯ ಈಗ ನನಗೆ ಬಂದಿದೆ. ದೇವರ ಮಹಿಮೆಯನ್ನು ಮೀರುವ ಸಾಮರ್ಥ್ಯ ಯಾರಿಗೂ ಇಲ್ಲ. ಅಂಥ ಪರಮಾತ್ಮನಿಗೆ ವಿನೀತನಾಗಿ ನನ್ನ ಜೀವನವನ್ನು ಬೆಳಗಿಸಿಕೊಳ್ಳುತ್ತೇನೆ.

ಗಜೇಂದ್ರ ಹೀಗೆ ಸುಂದರವಾಗಿ ಸ್ತೋತ್ರ ಮಾಡಿದ. ಬ್ರಹ್ಮಾದಿದೇವತೆಗಳನ್ನು ಕುರಿತಾಗಿ ಈ ಸ್ತೋತ್ರವನ್ನು ಗಜೇಂದ್ರ ಮಾಡಿದ ಎಂದು ತೋರುತ್ತದೆ. ಆದರೆ ಈ ಸ್ತುತಿಯನ್ನು ಕೇಳಿ ಬ್ರಹ್ಮಾದಿಗಳು ಬರಲಿಲ್ಲ. ಕಿಂತು ಭಗವಂತನೇ ಬಂದ. ಇದರಿಂದ ಗಜೇಂದ್ರ ಮಾಡಿದ್ದು ವಿಷ್ಣುಸ್ತೋತ್ರವೇ ಎಂದು ಸಿದ್ಧವಾಗುತ್ತದೆ.

ಗಜೇಂದ್ರನ ಕರುಣಾಜನಕವಾದ ಆರ್ತಿಯನ್ನು ಬ್ರಹ್ಮಾದಿಗಳೂ ಗಮನಿಸಿದರು. ಆ ಗಜೇಂದ್ರನನ್ನು ಸಂರಕ್ಷಿಸಬೇಕೆಂದು ಭಗವಂತನಿಗೆ ಬೇಡಿದರು. ದೇವಾಧಿದೇವತೆಗಳಿಂದ ಪ್ರಾರ್ಥಿತನಾದ ಪರಮಾತ್ಮ ಗರುಡನ ಮೇಲೆ ಏರಿದ. ಗರುಡನ ರೆಕ್ಕೆಗಳಿಂದಲೇ ದಿವ್ಯವಾದ ವೇದನಾದ ಹೊರಹೊಮ್ಮಿತು. ಗರುಡಾರೂಢನಾದ ಭಗವಂತ ಗಜೇಂದ್ರನೆಡೆಗೆ ಪ್ರಯಾಣ ಬೆಳೆಸಿದ.

ಭಗವಂತ ಸಕಲ ಜಗತ್ತಿಗೂ ಆಶ್ರಯ. ಬಳಲಿದ ಗಜೇಂದ್ರನನ್ನು ರಕ್ಷಿಸಲು ಧಾವಿಸಿ ಬಂದ. ಮೊಸಳೆಯ ಬಾಯಿಯನ್ನು ಸೀಳಲು ಚಕ್ರವನ್ನು ಧರಿಸಿದ.

ಆಕಾಶದಲ್ಲಿ ಚಕ್ರಧಾರಿಯಾದ ಭಗವಂತನ್ನು ಕಂಡ ಗಜೇಂದ್ರ . ತನ್ನ ಸೊಂಡಿಲಿಂದ ಆ ಸರೋವರದಲ್ಲಿ ಬೆಳೆದ ಕಮಲವನ್ನು ತೆಗೆದ. ಸೊಂಡಿಲನ್ನು ಮೇಲಕ್ಕೆ ಎತ್ತಿ ಆ ಪರಮಾತ್ಮನಿಗೆ ಕಮಲದ ಹೂವಿಂದ ಅರ್ಚಿಸಿದ.

ಹೇ ಭಗವನ್! ನೀನು ಸಮಸ್ತ ಲೋಕಕ್ಕೆ ಗುರುವಾಗಿರುವಿ. ಷಡ್ಗುಣಪರಿಪೂರ್ಣನಾಗಿರುವಿ. ನಿನಗೆ ನನ್ನ ನಮಸ್ಕಾರ ಎಂದು ತನ್ನ ಧ್ವನಿಯಿಂದಲೇ ಹೇಳಿದ. ಗಜೇಂದ್ರ ತುಂಬ ಬಳಲಿದ್ದ. ತುಂಬ ಪ್ರಯಾಸದಿಂದಲೇ ಶ್ರೀಹರಿಯನ್ನು ನಮಸ್ಕರಿಸಿದ. ಆಹಾರವಿಲ್ಲದೇ ಬಹಳ ವರ್ಷಗಳು ಕಳೆದಿದ್ದವು. ಆದ್ದರಿಂದ ಗಜೇಂದ್ರ ಶ್ರಾಂತನಾಗಿದ್ದ. ಹೀಗಾಗಿ ಅತಿ ಪ್ರಯಾಸದಿಂದಲೇ ಭಗವಂತನನ್ನು ಸ್ತುತಿಸಿದ ಗಜೇಂದ್ರ.

ಗ್ರಾಹಪೀಡಿತವಾದ ಗಜೇಂದ್ರನನ್ನು ಕರುಣೆಯಿಂದ ನೋಡಿದ ಭಗವಂತ. ಕೂಡಲೇ ಗರುಡನಿಂದ ಕೆಳಗೆ ಇಳಿದ. ಆನೆಯನ್ನು ಸರೋವರದಿಂದ ಮೇಲಕ್ಕೆ ಎತ್ತಿದ. ಮೊಸಳೆ ಸಮೇತವಾಗಿಯೇ ಗಜೇಂದ್ರ ಮೇಲಕ್ಕೆ ಬಂದಿತು. ಎಲ್ಲ ದೇವತೆಗಳು ನೋಡುತ್ತಿರುವಂತೆಯೇ ಮೊಸಳೆಯ ಮೇಲೆ ಚಕ್ರಾಯುಧವನ್ನು ಪ್ರಯೋಗಿಸಿದ. ಮೊಸಳೆಯ ಮುಖವನ್ನು ಸೀಳಿತು ಆ ಚಕ್ರ . ಗಜೇಂದ್ರನ ಬಿಡುಗಡೆಯಾಯಿತು.

**॥ ಇತಿ ಶ್ರೀಮದ್ಭಾಗವತೇ ಅಷ್ಟಮಸ್ಕಂಧೇ ತೃತೀಯೋಽಧ್ಯಾಯಃ ॥**

★★★

# ಅಥ ಚತುರ್ಥೋಽಧ್ಯಾಯಃ

**ಮೊಸಳೆಯಿಂದ** ಪೀಡಿತವಾದ ಗಜೇಂದ್ರವನ್ನು ಭಗವಂತ ಮೋಚನಗೊಳಿಸಿದ. ಆ ಸಂದರ್ಭದಲ್ಲಿ ಬ್ರಹ್ಮ-ರುದ್ರ ಮುಂತಾದ ದೇವತೆಗಳು, ದೇವರ್ಷಿ ನಾರದ ಮುಂತಾದವರು, ವಸಿಷ್ಠ ಮುಂತಾದ ಋಷಿಗಳು ತಾಪಸನಾಮಕನಾದ ಶ್ರೀಹರಿಯ ಗಜೇಂದ್ರಮೋಚನ- ರೂಪವಾದ ಕರ್ಮವನ್ನು ಸ್ತುತಿಸಿದರು. ಪರಮಾತ್ಮನ ಕಾರುಣ್ಯವನ್ನು ಕಂಡು ಆ ಪರಮಾತ್ಮನ ಮೇಲೆ ಪುಷ್ಪವೃಷ್ಟಿ ಗೈದರು.

ಆ ಸಂದರ್ಭದಲ್ಲಿ ದೇವದುಂದುಭಿಗಳು ತಾವಾಗಿಯೇ ಮೊಳಗಿದವು. ಗಂಧರ್ವರು ಗಾನ ಮಾಡಿದರು. ಗಂಧರ್ವಸ್ತ್ರೀಯರು ನರ್ತಿಸಿದರು. ಋಷಿಗಳು, ಚಾರಣರು, ಸಿದ್ಧರು ಕ್ಷರಾಕ್ಷರಪುರುಷರಿಗಿಂತ ಉತ್ತಮನಾದ ಶ್ರೀಹರಿಯನ್ನು ಸ್ತುತಿಸಿದರು.

ಹೂಹೂ ಎಂಬ ಗಂಧರ್ವ ದೇವಲರ ಶಾಪದಿಂದ ಈ ದುರ್ಯೋನಿಯಾದ ಮೊಸಳೆಯ ದೇಹವನ್ನು ಪಡೆದಿದ್ದ. ಆ ಗಂಧರ್ವಶ್ರೇಷ್ಠನಾದ ಹೂಹೂ ಎಂಬ ಗಂಧರ್ವ ಶ್ರೀಹರಿಯ ಸ್ಪರ್ಷದಿಂದ ಮತ್ತು ಪೂರ್ವಜನ್ಮದಲ್ಲಿ ಮಾಡಿದ ಪುಣ್ಯಪ್ರಭಾವದಿಂದ ಶ್ರೀಹರಿಯನ್ನು ಸ್ತುತಿಸಿದ. ಆ ಸ್ತುತಿಯಿಂದ ಪರಮಾತ್ಮನ ಪ್ರಸಾದವನ್ನು ಪಡೆದ. ಪರಮಾತ್ಮನ ಪ್ರಸಾದದಿಂದ ದೇವಲರ ಶಾಪದಿಂದ ಮುಕ್ತನಾದ. ಆ ದುರ್ಯೋನಿಯನ್ನು ಪರಿತ್ಯಜಿಸಿದ. ಎಲ್ಲರನ್ನೂ ಬೆರಗುಗೊಳಿಸುವ ರೂಪವನ್ನು ಧರಿಸಿದ. ಗಂಧರ್ವರೂಪ ಧರಿಸಿದ.

**(ಛಲಾರಿ ಆಚಾರ್ಯರು ಈ ಪ್ರಸಂಗದಲ್ಲಿ ಈ ರೀತಿಯಾಗಿ ಕಥೆಯನ್ನು ತಿಳಿಸುತ್ತಾರೆ.)**

ಹೂಹೂ ಗಂಧರ್ವ ಒಂದು ಸರೋವರದಲ್ಲಿ ಸ್ತ್ರೀಯರೊಡನೆ ಜಲಕ್ರೀಡೆ ಮಾಡುತ್ತಲಿದ್ದ. ಆ ಸಂದರ್ಭದಲ್ಲಿ ದೇವಲ ಋಷಿಗಳು ಸ್ನಾನ ಮಾಡಲು ಸರೋವರವನ್ನು ಪ್ರವೇಶಿಸಿದರು. ಹೂಹೂಗಂಧರ್ವ ಆ ಮುನಿಯ ಕಾಲು ಹಿಡಿದು ಎಳೆದ. ದೇವಲಮುನಿಗಳಿಗೆ ಸಿಟ್ಟು ಬಂದಿತು. ಮೊಸಳೆಯಾಗೆಂದು ಹೂಹೂಗಂಧರ್ವನನ್ನು ಶಪಿಸಿದರು. ಹೂಹೂಗಂಧರ್ವ ಆ ಶಾಪದಿಂದ ಭೀತನಾದ. ಋಷಿಗಳನ್ನು ಶಾಪವಿಮೋಚನೆಗಾಗಿ ಬೇಡಿಕೊಂಡ. ಆ ಸಂದರ್ಭದಲ್ಲಿ ದೇವಲರು ಹೇಳಿದರು. ನನ್ನನ್ನು ಹಿಡಿದಂತೆ ಗಜೇಂದ್ರನನ್ನು ಹಿಡಿದುಕೋ. ಆಗ ಗಜೇಂದ್ರನನ್ನು ಉದ್ಧರಿಸುವ ಹರಿಯು ನಿನ್ನನ್ನೂ ಶಾಪದಿಂದ ಬಿಡಿಸುವನು. ಎಂದು ದೇವಲರು ಹೇಳಿದರು.

ಭಗವಂತ ಬ್ರಹ್ಮಾದಿದೇವತೆಗಳಿಂದಲೂ ಸ್ತುತ್ಯನಾಗಿದ್ದಾನೆ. ಚತುರ್ವಿಧವಾದ ನಾಶಶೂನ್ಯನಾಗಿದ್ದಾನೆ. ದೇವರು ಸ್ವರೂಪತಃ ಅನಿತ್ಯನಲ್ಲ. ದೇವರ ದೇಹಕ್ಕೂ ನಾಶವಿಲ್ಲ. ದುಃಖಪ್ರಾಪ್ತಿಯು ಭಗವಂತನಿಗೆ ಇಲ್ಲವೇ ಇಲ್ಲ. ದೇವರು ಅಪೂರ್ಣನಲ್ಲ. ಈ ನಾಲ್ಕು ರೀತಿಯ ಅನಿತ್ಯತ್ವಗಳಿಲ್ಲದವನು ಭಗವಂತ. ದೇವರು ತೋರುವ, ತೋರುತ್ತಿರುವ,

ತೋರಿದ ಕಾರುಣ್ಯವನ್ನು ಅನಂತ ಜೀವರಾಶಿಗಳು ಹಾಡಿಹೊಗಳಿದರೂ ಪೂರ್ಣವಾಗೋದಿಲ್ಲ. ಭಗವಂತ ಸರ್ವನಿಯಾಮಕ. ಈ ವಿಧವಾಗಿ ಭಗವಂತನ ಗುಣಗಳನ್ನು ಚಿಂತಿಸಿದ.

ಹೂಹೂಗಂಧರ್ವ ಮಾಡಿದ ಸ್ತುತಿಯಿಂದ ಪರಮಾತ್ಮ ಪ್ರಸನ್ನನಾದ. ದೇವರ ಪ್ರಸಾದವನ್ನು ಪಡೆದವನು ಪಾಪಗಳೆಲ್ಲವನ್ನೂ ಕಳೆದುಕೊಳ್ಳುತ್ತಾನೆ. ಪಾಪನಿರ್ಮುಕ್ತನಾದ ಆ ಹೂಹೂಗಂಧರ್ವ ಭಗವಂತನಿಗೆ ಭಕ್ತಿಯಿಂದ ಪ್ರದಕ್ಷಿಣೆ ಹಾಕಿದ. ನಮಸ್ಕರಿಸಿದ. ಗಂಧರ್ವಲೋಕಕ್ಕೆ ತೆರಳಿದ.

ಆನೆಯೂ ಭಗವಂತನ ಸ್ಪರ್ಶದಿಂದ, ಗರುಡಾರೂಢನಾದ ಭಗವಂತನ ದರ್ಶನದಿಂದ ತನ್ನ ಪಾಪಗಳನ್ನೆಲ್ಲ ಕಳೆದುಕೊಂಡತು. ಅಜ್ಞಾನಬದ್ಧವಾದ ಗಜಯೋನಿಯನ್ನು ಕಳೆದುಕೊಂಡಿತು. ದುಷ್ಟಯೋನಿಯಿಂದ ಮುಕ್ತವಾಯಿತು.

ಈ ಜನ್ಮದಲ್ಲಿ ಗಜರಾಜನಾದವನು ಹಿಂದಿನ ಜನ್ಮದಲ್ಲಿ ರಾಜನಾಗಿಯೇ ಇದ್ದ. ಪಾಂಡ್ಯದೇಶದ ಅಧಿಪತಿಯಾಗಿ ಇದ್ದ. ವಿಷ್ಣುವಿಗೆ ಪ್ರಿಯವಾದ ವ್ರತೋಪವಾಸಗಳಲ್ಲಿ ತನ್ನನ್ನು ತೊಡಗಿಸಿಕೊಂಡಿದ್ದ. ಆತನ ಹೆಸರು ಇಂದ್ರದ್ಯುಮ್ನ. ದ್ರವಿಡದೇಶದ ಅಧಿಪತಿ. ಪ್ರಜಾರಂಜಕವಾಗಿ ರಾಜ್ಯವನ್ನಾಳಿದ.

ಅದೊಂದು ದಿನ. ಎಂದಿನಂತೆ ದೇವರ ಪೂಜೆಯಲ್ಲಿ ಆ ಇಂದ್ರದ್ಯುಮ್ನ ಆಸಕ್ತನಾಗಿದ್ದ. ದೇವರ ಪೂಜೆ ಮಾಡುವಾಗ ವಿಶೇಷವಾಗಿ ಮೌನಿಯಾಗಬೇಕು. ರಾಜನೂ ಮೌನಧಾರಣೆ ಮಾಡಿದ್ದ. ಆ ಪ್ರಸಂಗದಲ್ಲಿಯೇ ಅಗಸ್ತ್ಯರು ಶಿಷ್ಯಸಮೇತರಾಗಿ ಅಲ್ಲಿಗೆ ಬಂದರು. ಆಗಲೂ ರಾಜನು ಸುಮ್ಮನೇ ಕುಳಿತಿದ್ದ. ಬಂದ ಅತಿಥಿಗಳಾದ ಅಗಸ್ತ್ಯರಿಗೆ ಸ್ವಾಗತ ಹೇಳಲಿಲ್ಲ. ಸ್ವಾಗತ ಹೇಳಿದರೆ ಮೌನ ಮುರಿಯುತ್ತದೆಂದು ರಾಜ ಭ್ರಮಿಸಿದ್ದ. ಬಂದ ಅಗಸ್ತ್ಯರ ಪೂಜೆಯನ್ನೂ ಮಾಡಲಿಲ್ಲ. ಎದುರಾಗಿ ಹೋಗಲಿಲ್ಲ. ಅರ್ಘ್ಯವಿಲ್ಲ. ಪಾದ್ಯವಿಲ್ಲ. ಆಸನವಿಲ್ಲ. ಮಾತಿನಿಂದ ಉಪಚಾರವಂತೂ ಇಲ್ಲವೇ ಇಲ್ಲ. ಹೀಗೆ ಏಕಾಂತದಲ್ಲಿಯೇ ಕುಳಿತ ರಾಜನನ್ನು ನೋಡಿದರು ಅಗಸ್ತ್ಯರು. ಇಂದ್ರದ್ಯುಮ್ನನ ಈ ವರ್ತನೆಗೆ ಕ್ರುದ್ಧರಾದರು. ಶಾಪ ನೀಡಿದರು. ನೀನು ಅಶಿಕ್ಷಿತಬುದ್ಧಿಯಾಗಿರುವಿ. ಬಂದಿರುವ ಅತಿಥಿಗಳನ್ನೂ ಗಮನಿಸುತ್ತಿಲ್ಲ. ಅತಿಥಿಗಳನ್ನು ಪೂಜಿಸುತ್ತಿಲ್ಲ. ಬಂದಿರುವ ನನ್ನನ್ನು ತಿರಸ್ಕರಿಸಿರುವಿ. ಮದೋನ್ಮತ್ತನಾಗಿರುವಿ. ಆದ್ದರಿಂದ ಮದೋನ್ಮತ್ತವಾದ ಆನೆಯ ಜನ್ಮವೇ ನಿನಗೆ ಬರಲಿ.

ಹೀಗೆ ರಾಜನಿಗೆ ಶಾಪವಿತ್ತು ಅಗಸ್ತ್ಯರು ಅಲ್ಲಿಂದ ಹೊರಟರು. ರಾಜರ್ಷಿಯಾದ ಇಂದ್ರದ್ಯುಮ್ನನೂ ಆಲೋಚಿಸಿದ. ಅಗಸ್ತ್ಯರು ಶಾಪವನ್ನು ಮಾತ್ರ ನೀಡಿದ್ದಾರೆ. ಈ ಶಾಪವು ನನಗೆ ಗಜಜನ್ಮ ಬರುವುದಕ್ಕೆ ಸೂಚಕವೇ ಆಗಿದೆ. ಈ ಶಾಪವೇ ಗಜಜನ್ಮಕ್ಕೆ ಕಾರಕವಲ್ಲ.

ನನ್ನ ಪ್ರಾರಬ್ಧದಿಂದಲೇ ಈ ಗಜಜನ್ಮ ಬರುವುದಿದೆ. ಇದನ್ನು ತಪ್ಪಿಸಿಕೊಳ್ಳಲು ಸಾಧ್ಯವಿಲ್ಲ. ಅವಶ್ಯವಾಗಿ ಇದನ್ನು ಅನುಭವಿಸಲೇಬೇಕು. ಎಂಬುದಾಗಿ ನಿಶ್ಚಯಿಸಿಕೊಂಡ.

ಹಾಗೆಯೇ ಆನೆಯ ಜನ್ಮವನ್ನು ಪಡೆದ. ಆನೆಯ ಜನ್ಮದಲ್ಲಿ ಭಗವಂತನ ಜ್ಞಾನ ಇರಲು ಸಾಧ್ಯವೇ ಇಲ್ಲ. ಆದರೆ ಇಂದ್ರದ್ಯುಮ್ನನಾದಾಗ ಶ್ರೀಹರಿಯ ಅರ್ಚನೆಯನ್ನು ವಿಶಿಷ್ಟವಾಗಿಯೇ ಮಾಡಿದ್ದ. ಅದರ ಪ್ರಭಾವದಿಂದಾಗಿ ಗಜಜನ್ಮದಲ್ಲಿಯೂ ಭಗವಂತನ ಸ್ಮೃತಿಯು ಮಾಸದೇ ಇದ್ದಿತು. ಈ ನಕ್ರಗಜಗಳ ಪೂರ್ವದ ಕಥೆ ಈ ರೀತಿಯಾಗಿದೆ.

ಇಂಥ ನಕ್ರಗಜಗಳನ್ನು ಭಗವಂತ ಉದ್ಧರಿಸಿದ. ಮತ್ತೆ ತನ್ನ ಸೇವಕರಾದ ಗಂಧರ್ವರನ್ನಾಗಿ ಮಾಡಿದ. ಶ್ರೀಹರಿಯ ಈ ಕರ್ಮವನ್ನು ಗಂಧರ್ವರು, ಸಿದ್ಧರು, ದೇವತೆಗಳೆಲ್ಲರೂ ಸ್ತುತಿಸಿದರು. ಆ ಕಾಲದಲ್ಲಿಯೇ ಭಗವಂತ ಗರುಡನ ಮೇಲೆ ಕುಳಿತ. ತನ್ನ ಲೋಕವಾದ ವೈಕುಂಠವನ್ನು ಕುರಿತು ಹೊರಟೇ ಬಿಟ್ಟ.

ಈ ಗಜೇಂದ್ರನ ಚರಿತೆ ಪಾಪಪರಿಹಾರಕವಾಗಿದೆ. ಈ ಕಥೆಯನ್ನು ಹೇಳಿದವರೂ, ಕೇಳಿದವರೂ ಕೀರ್ತಿಯಿಂದ ಸಂಪನ್ನರಾಗುತ್ತಾರೆ. ಅವರು ಸ್ವರ್ಗದಲ್ಲಿ ಸುಖಿಸುತ್ತಾರೆ.

ಕಲ್ಯಾದಿದೈತ್ಯರ ಪ್ರಭಾವದಿಂದ ಘಟಿಸುವ ಪಾಪಗಳನ್ನು ಪರಿಹರಿಸುತ್ತದೆ ಈ ಕಥಾಶ್ರವಣ. ದುಃಸ್ವಪ್ನಗಳಿಂದ ಸೂಚಿತವಾದ ಅನಿಷ್ಟಗಳನ್ನು ದೂರ ಮಾಡುತ್ತದೆ. ಈ ಗಜೇಂದ್ರನ ಚರಿತೆಯು ಶ್ರೀಕೃಷ್ಣನ ಮಹಿಮೆಯೇ ಆಗಿದೆ.

ಈ ಗಜೇಂದ್ರಮೋಕ್ಷರೂಪವಾದ ಶ್ರೀಕೃಷ್ಣನ ಚರಿತೆಯು ಸರ್ವಪುರುಷಾರ್ಥ ಸಾಧನವಾಗಿದೆ. ಬ್ರಾಹ್ಮಣರು, ಕ್ಷತ್ರಿಯರು, ವೈಶ್ಯರು ಈ ಸ್ತೋತ್ರವನ್ನು ಪ್ರಾತಃಕಾಲದಲ್ಲಿ ನಿದ್ರೆಯಿಂದ ಎದ್ದ ಕೂಡಲೇ ಪಠಿಸಬೇಕು. ಶುದ್ಧವಾದ ವಸ್ತ್ರವನ್ನು ಧರಿಸಿ, ಈ ಸ್ತೋತ್ರವನ್ನು ಪಠಿಸುವುದರಿಂದ ಸಕಲವಿಧವಾದ ಅಪೇಕ್ಷೆಗಳೂ ಪರಿಪೂರ್ಣವಾಗುತ್ತವೆ.

ಗಜೇಂದ್ರ ಮಾಡಿದ ಭಕ್ತಿಯುಕ್ತವಾದ ಸ್ತೋತ್ರದಿಂದ ಪರಮಾತ್ಮ ಸಂಪ್ರೀತನಾದ. ನೆರೆದ ಎಲ್ಲರೂ ಕೇಳುವಂತೆಯೇ ಗಜೇಂದ್ರನಿಗೆ ಹೀಗೆ ಹೇಳಿದ. ವರಗಳನ್ನು ನೀಡಿದ.

ನನ್ನನ್ನು, ಗಜೇಂದ್ರನಾದ ನಿನ್ನನ್ನು, ಈ ಸರೋವರವನ್ನು, ತ್ರಿಕೂಟಪರ್ವತದ ಈ ಗುಹೆಯನ್ನು ಈ ಅಡವಿಯನ್ನು, ಇಲ್ಲಿ ಬೆಳೆದ ಬೆತ್ತ-ಬಿದಿರುಗಳ ಪೊದೆಗಳನ್ನು, ದೇವವೃಕ್ಷಗಳಾದ ಮಂದಾರ,ಪಾರಿಜಾತ, ಸಂತಾನ,ಕಲ್ಪವೃಕ್ಷ,ಹರಿಚಂದನ ವೃಕ್ಷಗಳನ್ನು ಯಾರು ಸ್ಮರಿಸುತ್ತಾರೋ ಅವರು ಎಲ್ಲವಿಧವಾದ ಪಾಪಗಳಿಂದ ನಿರ್ಮುಕ್ತರಾಗುತ್ತಾರೆ.

ಈ ಮೂರು ಶಿಖರಗಳು ಬ್ರಹ್ಮದೇವರಿಗೆ, ನನಗೆ, ರುದ್ರದೇವರಿಗೆ ಆವಾಸಸ್ಥಾನ-ಗಳಾಗಿವೆ. ಈ ಶಿಖರಗಳನ್ನು ಸ್ಮರಿಸಿದವನು ಕೀರ್ತಿಶಿಖರವನ್ನೇರುತ್ತಾನೆ.

ನನ್ನ ಸ್ಥಾನವಾದ ವೈಕುಂಠವನ್ನು, ಬ್ರಹ್ಮದೇವರ ಮನೆಯಾದ ಸತ್ಯಲೋಕವನ್ನು, ರುದ್ರದೇವರ ಆವಾಸವಾದ ಕೈಲಾಸಗಳನ್ನು ಸ್ಮರಿಸಿದವನೂ ಪರಿಶುದ್ಧನಾಗುತ್ತಾನೆ. ನನಗೆ ಪ್ರಿಯವಾದ ಕ್ಷೀರಸಾಗರವನ್ನು, ಪ್ರಕಾಶಮಾನವಾದ ಶ್ವೇತದ್ವೀಪವನ್ನು ಸ್ಮರಿಸಿದವರೂ ಸುಖಸಂಪನ್ನರಾಗುತ್ತಾರೆ.

ನನ್ನ ಚಿಹ್ನೆಗಳಾದ ಶ್ರೀವತ್ಸವನ್ನು, ಕೌಸ್ತುಭಮಣಿಯನ್ನು, ವೈಜಯಂತೀ-ಮಾಲೆಯನ್ನು, ವನಮಾಲೆಯನ್ನು ಕೌಮೋದಕಿ ಎಂಬ ಗದೆಯನ್ನು, ಸುದರ್ಶನಚಕ್ರವನ್ನು, ಪಾಂಚಜನ್ಯನಾಮಕವಾದ ಶಂಖವನ್ನು, ಪಕ್ಷಿಶ್ರೇಷ್ಠನಾದ ಗರುಡನನ್ನು, ಶೇಷನನ್ನು ಸ್ಮರಿಸಿದವರು ಕೂಡಾ ಸುಖಿಸುತ್ತಾರೆ.

ರಮಾದೇವಿಯು ನನ್ನ ಪತ್ನಿ. ಸದಾ ನನ್ನನ್ನು ಆಶ್ರಯಿಸಿದ್ದಾಳೆ. ನನ್ನ ವಕ್ಷಸ್ಥಳದಲ್ಲಿಯೇ ವಾಸವಾಗಿದ್ದಾಳೆ. ಅಂಥ ಲಕ್ಷ್ಮೀದೇವಿಯನ್ನು ಸ್ಮರಿಸಿದವನು ಕೂಡಾ ಪಾಪನಿರ್ಮುಕ್ತ-ನಾಗುತ್ತಾನೆ.

ಬ್ರಹ್ಮದೇವರನ್ನು, ರುದ್ರದೇವರನ್ನು ಜ್ಞಾನಿಯಾದ ನಾರದರನ್ನು ಮತ್ತು ನನ್ನ ಭಕ್ತನಾದ ಪ್ರಹ್ಲಾದನನ್ನು ಸ್ಮರಿಸಿದವರ ಜೀವನ ಆಹ್ಲಾದಮಯವಾಗುತ್ತದೆ.

ಮತ್ಸ್ಯ-ಕೂರ್ಮ-ವರಾಹ ಮುಂತಾದ ಸ್ವರೂಪಾವತಾರಗಳಿಂದ ಮಾಡಿದ, ಅನಂತ ಪುಣ್ಯಕೊಡುವ ಕಾರ್ಯಗಳನ್ನು (ಚರಿತ್ರೆಗಳನ್ನು) ಸೂರ್ಯ-ಚಂದ್ರ ಮತ್ತು ಅಗ್ನಿಗಳನ್ನು ಸ್ಮರಿಸಿದವರ ಪಾಪ ಭಸ್ಮವಾಗುತ್ತದೆ.

ಮೂರು ಮಾತ್ರೆಗಳಿಂದ ಆರಂಭಿಸಿ ಅನಂತಮಾತ್ರಾಗಳುಳ್ಳ ಓಂಕಾರವನ್ನು, ಅನಾರೋಪಿತವಾದ ಜಗತ್ತನ್ನು, ಸತ್ಯನಾದ ಬ್ರಹ್ಮನನ್ನು, ಮಾತನಾಡುವ ದೇವಿಯನ್ನು, ಜಡಪ್ರಕೃತಿಯನ್ನು, ನಾಶರಹಿತವಾದ ಫಲವನ್ನು ಕೊಡುವ ಹರಿಭಕ್ತಿ ಎಂಬ ಧರ್ಮವನ್ನು, ಅಥವಾ ಯಮಧರ್ಮನನ್ನು, ಯಮಧರ್ಮನ ಹೆಂಡತಿಯಾದ ದಕ್ಷನ ಮಗಳಾದ ಮೂರ್ತಿ ಎಂಬುವಳನ್ನು, ಚಂದ್ರನ ಹೆಂಡತಿಯರಾದ ರೋಹಿಣೀ- ಮುಂತಾದವರನ್ನು, ಕಶ್ಯಪನ ಹೆಂಡತಿಯರಾದ ಅದಿತಿ ಮುಂತಾದವರನ್ನು ಆಕಳು ಮತ್ತು ಬ್ರಾಹ್ಮಣರನ್ನು ಸ್ಮರಿಸಿದವರು ಭಗವಂತನ ಪ್ರಸಾದಕ್ಕೆ ಪಾತ್ರರಾಗುತ್ತಾರೆ.

ಗಂಗಾನದಿಯನ್ನು, ಸರಸ್ವತೀನದಿಯನ್ನು, ನಂದಾನದಿಯನ್ನು, ಯಮುನಾ ನದಿಯನ್ನು, ಬಿಳಿಯ ಆನೆ ಅಂದರೆ ಐರಾವತವನ್ನು, ಧ್ರುವರಾಜನನ್ನು, ಮರೀಚಿ ಮುಂತಾದ ಏಳು ಬ್ರಹ್ಮಋಷಿಗಳನ್ನು, ಪುಣ್ಯಕೀರ್ತಿಗಳಾದ ನಲ-ಗಯಾದಿಗಳನ್ನು, ಪ್ರಿಯವ್ರತಾದಿ ಚಕ್ರವರ್ತಿಗಳನ್ನು, ಮನುಪುತ್ರರನ್ನು ಸ್ಮರಿಸಿದವರು ಸಂತುಷ್ಟರಾಗುತ್ತಾರೆ.

ಪ್ರತಿನಿತ್ಯವೂ ಬ್ರಾಹ್ಮಮುಹೂರ್ತದಲ್ಲಿ ಅರುಣೋದಯದ ಪ್ರಾರಂಭದಲ್ಲಿ ಎಚ್ಚತ್ತುಕೊಳ್ಳಬೇಕು. ವಾಙ್ನಿಯಮವನ್ನು ಸಂಪಾದಿಸಿಕೊಳ್ಳಬೇಕು. ಬೇರೆ ಯಾವ

ಮಾತುಗಳನ್ನೂ ಆಡಬಾರದು. ಇಂದ್ರಿಯಗಳನ್ನು ಹಿಡಿತದಲ್ಲಿಟ್ಟುಕೊಳ್ಳಬೇಕು. ಹೀಗೆ ಪರಿಶುದ್ಧರಾಗಬೇಕು. ಏಕಾಗ್ರಮನಸ್ಕರಾಗಬೇಕು. ಇಲ್ಲಿಯೇ ಉಕ್ತವಾದ ನನ್ನ ಸ್ವರೂಪಭೂತವಾದ ರೂಪಗಳನ್ನು ಮತ್ತು ಆವಿಷ್ಟರೂಪಗಳನ್ನು ಸ್ಮರಿಸಬೇರು. ಅವರು ಎಲ್ಲ ಪಾಪಗಳಿಂದ ಮುಕ್ತರಾಗುತ್ತಾರೆ.

ಹೇ ಗಜೇಂದ್ರನೇ! ನೀನು ನನಗೆ ಪ್ರಿಯನಾಗಿರುವಿ. ಉಷಃಕಾಲದಲ್ಲೆದ್ದು ಈ ಸ್ತುತಿಯಿಂದ ನನ್ನನ್ನು ಸ್ತುತಿಸಬೇಕು. ಅಂಥ ಸಾಧಕರಿಗೆ ಪ್ರಾಣೋತ್ಕ್ರಮಣ ಕಾಲದಲ್ಲಿ, ಉಳಿದ ಕಾಲದಲ್ಲಿಯೂ ಶುದ್ಧವಾದ ನನ್ನ ಜ್ಞಾನವನ್ನು ಕೊಡುತ್ತೇನೆ.

ಹೀಗೆ ಉಪದೇಶಮಾಡಿದ ಪರಮಾತ್ಮ. ಇಂದ್ರಿಯಪ್ರೇರಕನಾದ ಆ ಶ್ರೀಹರಿ ಶಂಖವನ್ನು ಪೂರೈಸಿದ. ತನ್ನ ದಿಗ್ವಿಜಯದ ಘೋಷಣೆಯನ್ನು ತಾನೇ ಮಾಡಿಕೊಂಡ. ಎಲ್ಲ ದೇವತೆಗಳನ್ನು ಆನಂದ ಪಡಿಸಿದ. ಗರುಡಾರೂಢನಾಗಿ ವೈಕುಂಠಕ್ಕೆ ತೆರಳಿದ.

**॥ ಇತಿ ಶ್ರೀಮದ್ಭಾಗವತೇ ಅಷ್ಟಮಸ್ಕಂಧೇ ಚತುರ್ಥೋಽಧ್ಯಾಯಃ ॥**

★★★

## ಅಥ ಪಂಚಮೋಽಧ್ಯಾಯಃ

### ೫. ರೈವತ

ಹೇ ಪರೀಕ್ಷಿತನೇ! ಇಲ್ಲಿಯ ವರೆಗೆ ನಿನಗೆ ಗಜೇಂದ್ರಮೋಕ್ಷದ ಕಥಾನಕವನ್ನು ತಿಳಿಸಿದ್ದೇನೆ. ಈ ಕಥೆಯ ಶ್ರವಣಾದಿಗಳಿಂದ ಪಾಪಗಳ ಪರಿಹಾರವಾಗುತ್ತದೆ. ತಾಪಸ ಮನ್ವಂತರಾಧಿಪತಿಯಾದ ಶ್ರೀಹರಿಯ ಪುಣ್ಯವಾದ ಚರಿತೆ ಇದಾಗಿದೆ. ಇನ್ನು ಮುಂದೆ ರೈವತಮನ್ವಂತರದಲ್ಲಿಯ ಪರಿಸ್ಥಿತಿಯನ್ನು ವರ್ಣಿಸುತ್ತೇನೆ. ಸಮಾಧಾನದಿಂದ ಆಲಿಸು.

ತಾಪಸಮನುವಿನ ತಮ್ಮನೇ ರೈವತ. ಇವನು ಐದನೆಯ ಮನುವಾಗಿದ್ದಾನೆ. ಈ ರೈವತ ಮನುವಿಗೆ ಅರ್ಜುನ ಎಂಬ ಹೆಸರಿನ ಹಿರಿಯ ಮಗನಿದ್ದ. ಬಲ ಮತ್ತು ವಿಂಧ್ಯ ಮುಂತಾದವರು ಈ ಅರ್ಜುನನ ಸಹೋದರರು.

ಈ ರೈವತಮನ್ವಂತರದಲ್ಲಿ ವಿಭುನಾಮಕನು ಇಂದ್ರನಾಗಿದ್ದಾನೆ. ಅಶ್ವಿನೀ ದೇವತೆಗಳಲ್ಲಿಯ ದಸ್ರನೇ ಈ ವಿಭು. ಭೂತರಯ ಮೊದಲಾದವರೇ ದೇವತೆಗಳಾಗಿದ್ದಾರೆ. ಹಿರಣ್ಯರೋಮ, ವೇದಶಿರ, ಊರ್ಧ್ವಬಾಹು ಮುಂತಾದವರು ಸಪ್ತಋಷಿಗಳಾಗಿದ್ದಾರೆ.

ಶುಭ್ರ ಎಂಬ ಹೆಸರಿನ ಋಷಿಯೋರ್ವನಿದ್ದ. ವಿಕುಂಠಾ ಅವನ ಧರ್ಮಪತ್ನಿ. ಈ ಶುಭ್ರ-ವಿಕುಂಠೆಯರಿಗೆ ವೈಕುಂಠನಾಮಕರಾದ ದೇವತೆಗಳಿಂದ ಸಹಿತನಾಗಿ ಪರಮಾತ್ಮನೇ ವೈಕುಂಠನಾಮಕನಾಗಿ ಅವತರಿಸಿದ.




ಈ ವೈಕುಂಠನು ಲಕ್ಷ್ಮೀದೇವಿಯಿಂದ ಪ್ರಾರ್ಥಿತನಾದ. ಲಕ್ಷ್ಮೀದೇವಿಯ ಪ್ರಾರ್ಥನೆಯನ್ನು ಈಡೇರಿಸಲು ನಿತ್ಯವಾದ ವೈಕುಂಠ ಎಂಬ ಲೋಕವನ್ನು ಅಭಿವ್ಯಕ್ತಿಗೊಳಿಸಿದ. ಈ ಲೋಕ ಸಕಲಲೋಕನಮಸ್ಕೃತವಾಯಿತು.

ಈ ವೈಕುಂಠನಾಮಕನಾದ ಪರಮಾತ್ಮನ ಮಹಿಮೆಯನ್ನು ಶ್ರುತಿ-ಸ್ಮೃತಿಗಳು ಅತ್ಯದ್ಭುತವಾದ ರೀತಿಯಲ್ಲಿ ವರ್ಣಿಸಿವೆ. ಈ ಪರಮಾತ್ಮನ ಮಹಿಮೆಯನ್ನು, ಅವನ ಗುಣಗಳನ್ನು ಚಿಂತಿಸುವ ಸಾಧಕರು ಐಶ್ವರ್ಯಾದಿಗಳಿಂದ ಸುಸಂಪನ್ನರಾಗುತ್ತಾರೆ. ಶ್ರವಣಾದಿ ಸಾಧನೆಗಳನ್ನು ಸಂಪಾದಿಸಿಕೊಳ್ಳುತ್ತಾರೆ. ಕ್ರಮವಾಗಿ ಮುಕ್ತರಾಗುತ್ತಾರೆ. ಪರಮಾತ್ಮನ ಲೋಕವಾದ ಈ ವೈಕುಂಠವನ್ನು ಸೇರುತ್ತಾರೆ. ಸುಖಿಸುತ್ತಾರೆ.

ಇಂಥ ಪರಮಾತ್ಮನ ಮಹಿಮೆಯನ್ನು ಪರಿಪೂರ್ಣವಾಗಿ ವರ್ಣಿಸಲು ಯಾರಿಂದಲೂ ಆಗದು. ಭೂಮಿಯ ಕಣಗಳನ್ನೇ ವರ್ಣಿಸುವ ಸಮರ್ಥರಿಲ್ಲ. ಭಗವಂತನ ಗುಣಗಳನ್ನು ಸಮಗ್ರವಾಗಿ ಎಣಿಸುವ ಸಾಮರ್ಥ್ಯ ಅದಾರಿಗೆ? ರಮೆಯೂ ಪರಮಾತ್ಮನ ಗುಣಗಳನ್ನು ಸಮಗ್ರವಾಗಿ ವರ್ಣಿಸಲು ಅಸಮರ್ಥಳು. ಉಳಿದವರ ಪಾಡೇನು?

## ೬. ಚಾಕ್ಷುಷ

ಚಕ್ಷುಷ್ ಎಂಬ ಮುನಿಯ ಮಗನೇ ಚಾಕ್ಷುಷ. ಈತ ಆರನೆಯ ಮನುವು. ಪುರು-ಪುರುಷ-ಸುದ್ಯುಮ್ನ ಮುಂತಾದವರು ಚಾಕ್ಷುಷಮನುವಿನ ಪುತ್ರರು. ಈ ಚಾಕ್ಷುಷಮನ್ವಂತರದಲ್ಲಿ ಮಂದ್ರದ್ರುಮನು ಇಂದ್ರನಾಗಿದ್ದಾನೆ. ಇವನು ಮತ್ತು ಮುಂದಿನ ವೈವಸ್ವತಮನ್ವಂತರದಲ್ಲಿ ಆಗುವ ಪುರಂದರ ನಾಮಕನಾದ ಇಂದ್ರನು ಸ್ವರೂಪತಃ ಒಬ್ಬರೇ ಆಗಿದ್ದಾರೆ. ಆಪ್ಯ ಮೊದಲಾದ ಗಣಗಳು ದೇವತೆಗಳು. ಈ ಮನ್ವಂತರದಲ್ಲಿ ವೈರಾಜ ಹವಿಷ್ಮತ್ ವೀರಕ ಮುಂತಾದವರು ಸಪ್ತಋಷಿಗಳಾಗಿದ್ದಾರೆ.

ಈ ಚಾಕ್ಷುಷಮನ್ವಂತರದಲ್ಲಿ ವೈರಾಜನೆಂಬ ಮುನಿಯಿಂದ ಸಂಭೂತಿ ಎಂಬುವವಳಲ್ಲಿ ಅಜಿತನಾಮಕನಾಗಿ ಪರಮಾತ್ಮ ಅವತರಿಸಿದ. ಈ ಅಜಿತರೂಪಿಯಾದ ಪರಮಾತ್ಮನೇ ಕ್ಷೀರಸಾಗರವನ್ನು ಸ್ವತಂತ್ರವಾಗಿ ಮಥನ ಮಾಡಿದ. ಎಲ್ಲೆಡೆ ತಾನೇ ಸ್ವಯಂ ನಿಂತು ಆ ಸಾಗರವನ್ನು ಕಡೆದ. ದೇವತೆಗಳಿಗೆ ಅಮೃತವನ್ನು ಸಂಪಾದಿಸಿಕೊಟ್ಟ. ಇಂಥ ರೂಪವೇ ಈ ಅಜಿತರೂಪ.

ಸಂಕ್ಷೇಪವಾಗಿ ಸಮುದ್ರಮಥನದ ಕಥೆಯನ್ನು ಪ್ರಸ್ತಾವಿಸುತ್ತಿದ್ದಂತೆಯೇ ರಾಜನ ಕುತೂಹಲ ಮತ್ತು ಭಕ್ತಿಯು ಅರಳಿತು. ಅತ್ಯಂತ ಆದರದಿಂದ ಮತ್ತೆ ಪ್ರಶ್ನಿಸಿದ. ಶುಕಾಚಾರ್ಯರು ಎಲ್ಲಿ ಈ ಕಥೆಯನ್ನು ಸಂಕ್ಷೇಪವಾಗಿ ಹೇಳಿ ಮುಗಿಸಿ ಬಿಡುವರೋ ಎಂದು ರಾಜನಿಗೆ ಸಂಕಟ. ವಿಸ್ತಾರವಾಗಿ ಆ ಕಥೆಯನ್ನು ಕೇಳಬೇಕೆಂಬ ಕುತೂಹಲ. ಹೀಗಾಗಿ ಕೇಳಿಯೇ ಬಿಟ್ಟ.

ಶುಕಾಚಾರ್ಯರೇ! ತಾವು ಬ್ರಹ್ಮಜ್ಞಾನಿಗಳು. ಬ್ರಹ್ಮಜ್ಞಾನಿಗಳಿಗೆ ಗೋಚರವಾಗದಿರುವ ವಿಷಯ ಇರುವುದೇ ಇಲ್ಲ. ಈ ಸಮುದ್ರಮಥನದ ಕಥೆಯನ್ನು ವಿಸ್ತಾರವಾಗಿ ತಾವು ನಿರೂಪಿಸಬೇಕು. ಭಗವಂತ ಕ್ಷೀರಸಾಗರವನ್ನು ಹೇಗೆ ಮಥಿಸಿದ? ಯಾವ ಪ್ರಯೋಜನಕ್ಕಾಗಿ ಭಗವಂತ ಜಲಚರನಾದ? ದೇವತೆಗಳು ಅಮೃತವನ್ನು ಹೇಗೆ ಪಡೆದರು? ಆ ಸಮುದ್ರದಿಂದ ಅಮೃತವಲ್ಲದೇ ಮತ್ತೇನು ಪದಾರ್ಥಗಳು ಜನಿಸಿದವು? ಅಮೃತಪಾನ ಮಾಡಿದ ಮೇಲೆ ಮತ್ತೇನಾಯಿತು? ಅಜಿತಾವತಾರಿಯಾದ ಪರಮಾತ್ಮನು ಮಾಡಿದ ಅತ್ಯದ್ಭುತವಾದ ಕಾರ್ಯವಿದು. ಈ ಕಾರ್ಯವನ್ನು ನಮಗೆ ವಿಸ್ತಾರವಾಗಿ ನಿರೂಪಿಸಬೇಕು. ಭಗವಂತನ ಕರ್ಮಗಳನ್ನು ತಿಳಿಯುವ ಜ್ಞಾನ ನಮಗಿಲ್ಲ. ಆದರೆ ತವಕ ಇದೆ. ನಿಮಗೆ ದೇವರ ಕರ್ಮಗಳನ್ನು ತಿಳಿಯುವ ಸಾಮರ್ಥ್ಯವೂ ಇದೆ. ತಿಳಿಸುವ ತವಕವೂ ಇದೆ. ನೀವಲ್ಲದೇ ನಮ್ಮ ಉದ್ಧಾರಕರು ಅದಾರು?

ಇದುವರೆವಿಗೂ ತಾವು ಅನೇಕ ಕಥಾನಕಗಳನ್ನು ನಿರೂಪಿಸಿದ್ದೀರಿ. ತಮ್ಮ ಮುಖದಿಂದ ಹೊರಹೊಮ್ಮಿದ ಭಗವಂತನ ಮಹಿಮೆಯನ್ನು ಕೇಳಿಯೇ ನಮ್ಮ ತಾಪಗಳೆಲ್ಲ ಶಾಂತವಾಗಿವೆ.

ನಮ್ಮ ಮನಸ್ಸು ಆಧ್ಯಾತ್ಮಿಕಾದಿ ತಾಪಗಳಿಂದ ಬೆಂದು ಹೋಗಿದೆ. ನೊಂದು ನಿಂತಿದೆ. ಅಂಥ ಮನಸ್ಸು ಮತ್ತಿಷ್ಟು ತೃಪ್ತವಾಗಬೇಕು. ಸಂತೃಪ್ತವಾಗಬೇಕು. ಸಂತಾಪಸಂತಪ್ತವಾದ ಮನಸ್ಸನ್ನು ಪ್ರಶಾಂತ ಪಡಿಸುವ ಸಾಧನ ಶ್ರೀಹರಿಮಹಿಮಾಶ್ರವಣ. ಎಷ್ಟು ಕೇಳಿದರೂ ಇನ್ನಿಷ್ಟು ಮತ್ತಿಷ್ಟು ಕೇಳಬೇಕೆಂದೇ ನಮ್ಮ ಮನ ಬಯಸುತ್ತಿದೆ. ನಮ್ಮ ಈ ಮನದ ಬಯಕೆಯನ್ನು ಪೂರ್ಣಮಾಡಿರಿ. ನಮ್ಮನ್ನು ಉದ್ಧರಿಸಿರಿ.

ಇನಿತು ಪರೀಕ್ಷಿತ ಪ್ರಶ್ನಿಸಿದ. ರಾಜನಲ್ಲಿ ಕ್ಷಣೇ ಕ್ಷಣೇ ಭಕ್ತಿಯು ಅಭಿವೃದ್ಧವಾಗುತ್ತಿತ್ತು. ಶುಕಾಚಾರ್ಯರು ಅದನ್ನು ಗಮನಿಸುತ್ತಲೇ ಇದ್ದರು. ರಾಜನ ಭಕ್ತಿಯುತವಾದ ಪ್ರಶ್ನೆಗೆ ಶುಕಾಚಾರ್ಯರು ಸಂತುಷ್ಟರಾದರು. ಪ್ರಾಂಜಲವಾಗಿ ಪರೀಕ್ಷಿತನನ್ನು ಪ್ರಶಂಸಿಸಿದರು. ರಾಜನನ್ನು ಸಂತೋಷಪಡಿಸಲು ಅಜಿತನ ಕಥೆಯನ್ನು ಹೇಳಲು ಉಪಕ್ರಾಂತರಾದರು.

ದೇವತೆಗಳಿಗೆ, ದೈತ್ಯರಿಗೆ ಘನಘೋರವಾದ ಯುದ್ಧವು ಪ್ರಾರಂಭವಾಗಿದೆ. ಅಸುರರು ಪ್ರಯೋಗಿಸುತ್ತಿರುವ ನಿಶಿತವಾದ ಬಾಣಗಳಿಂದ ದೇವತೆಗಳೆಲ್ಲ ಪೀಡಿತರಾಗಿದ್ದಾರೆ. ದೇವತೆಗಳ ಸಾಮರ್ಥ್ಯವೆಲ್ಲ ಹುಸಿಯಾಗುತ್ತಿದೆ. ದೇವತೆಗಳು ಕ್ರಮವಾಗಿ ಬಲವನ್ನು ಕಳೆದುಕೊಳ್ಳುತ್ತಿದ್ದಾರೆ. ದೈತ್ಯರು ಬಲಸಂಪನ್ನರಾಗುತ್ತಿದ್ದಾರೆ.

ಯದ್ಯಪಿ ದೇವತೆಗಳು ಮಹಾಸಮರ್ಥರು. ಆದರೆ ಪ್ರಾರಬ್ಧವನ್ನು ಅತಿಕ್ರಮಿಸಲು ಯಾರಿಂದಲೂ ಸಾಧ್ಯವಿಲ್ಲ. ಅವರ ಪ್ರಾರಬ್ಧಕ್ಕೆ ದೂರ್ವಾಸರ ಶಾಪವು ಸೂಚಕವಾಗಿ ಇದೆ. ಹೀಗಾಗಿ ಯುದ್ಧದಲ್ಲಿ ಸಾಮರ್ಥ್ಯ ಕಳೆದುಕೊಂಡ ದೇವತೆಗಳಿಗೆ ಮತ್ತೆ ಬಲವನ್ನು ಪಡೆಯಲು ಆಗುತ್ತಿಲ್ಲ.

ದುರ್ವಾಸರ ಶಾಪದಿಂದಾಗಿ ತ್ರಿಲೋಕವೇ ಕಳೆಗುಂದಿದೆ. ಎಲ್ಲಿಯೂ ಯಜ್ಞ-ಯಾಗಾದಿಗಳು ನಡೆಯುತ್ತಿಲ್ಲ. ಯಾರಿಗೂ ಧರ್ಮದಲ್ಲಿ ಅಭಿರುಚಿಯೇ ಕಾಣಿಸುತ್ತಿಲ್ಲ. ಎಲ್ಲ ಧರ್ಮಗಳೂ ಸ್ಥಗಿತಗೊಂಡಿವೆ.

ತ್ರಿಲೋಕಾಧಿಪತಿಯಾದ ಮಹೇಂದ್ರ , ಜಲಾಭಿಮಾನಿಯಾದ ವರುಣ ಮುಂತಾದ ದೇವತೆಗಳೆಲ್ಲ ಈ ವಿಧಿವೈಚಿತ್ರ್ಯವನ್ನು ಕಂಡರು. ಇದರ ಪರಿಹಾರಕ್ಕೆ ಉಪಾಯವೇನೆಂದು ತಾವೇ ಸ್ವಯಂ ವಿಚಾರಿಸಿದರು. ಆದರೆ ಯಾವ ಉಪಾಯವೂ ಅವರಿಗೆ ತಿಳಿಯಲಿಲ್ಲ. ಈ ಗಂಡಾಂತರವನ್ನು ಹೇಗಾದರೂ ಪರಿಹರಿಸಿಕೊಳ್ಳಬೇಕೆಂದು ಬಯಸಿದರು. ಮೇರುಮೂರ್ಧದಲ್ಲಿಯ ಬ್ರಹ್ಮದೇವರ ಸದನಕ್ಕೆ ಎಲ್ಲ ದೇವತೆಗಳೂ ನಡೆದರು. ಚತುರ್ಮುಖಗಳಿಂದ ಪರಮಾತ್ಮನನ್ನು ಸ್ತುತಿಸುತ್ತಿರುವ ಬ್ರಹ್ಮದೇವರನ್ನು ಕಂಡರು. ಸಾಷ್ಟಾಂಗ ಎರಗಿದರು. ತಮಗಾದ ಸೋಲನ್ನು ಹೇಳಿದರು. ದೂರ್ವಾಸರ ಶಾಪದಿಂದ ನಾವು ವಿಜಯಭ್ರಷ್ಟರಾಗಿದ್ದೇವೆಂದು ಹೇಳಿಕೊಂಡರು.

ಭಗವಂತನ ಅನುಗ್ರಹದ ಬಲದಿಂದ ಬ್ರಹ್ಮದೇವರು ಸರ್ವಸಮರ್ಥರಾಗಿದ್ದಾರೆ. ಇಂದ್ರಾದಿಗಳ ಪದವಿಯನ್ನು ಬಲಿಮುಂತಾದವರು ಅಪಹರಿಸಿದ ಪ್ರಸಂಗಗಳು ಸಾಕಷ್ಟು ಇವೆ. ಆದರೆ ಬ್ರಹ್ಮಪದವಿಯನ್ನು ಕಸೆದುಕೊಳ್ಳುವ ಸಮರ್ಥರು ಈ ಪ್ರಪಂಚದಲ್ಲಿ ಯಾರೂ ಇಲ್ಲ. ಆ ಪದವಿಯನ್ನು ಯೋಗ್ಯತೆಯಿಂದಲೇ ಸಂಪಾದಿಸಿಕೊಳ್ಳಬೇಕು.

ಅಂಥ ಬ್ರಹ್ಮದೇವರು ದೇವತೆಗಳನ್ನು ನೋಡಿದರು. ದೇವತೆಗಳು ಈ ಪ್ರಸಂಗದಲ್ಲಿ ನಿಜವಾಗಿಯೂ ನಿಸ್ತೇಜರಾಗಿದ್ದಾರೆ. ಆ ನಿಸ್ತೇಜತೆಯ ಹಿಂದೆ ಪ್ರಾರಬ್ಧವನ್ನೂ ಬ್ರಹ್ಮದೇವರು ಪರೀಕ್ಷಿಸಿದರು. ಸಮಾಹಿತರಾದರು. ಎಲ್ಲರ ಎಲ್ಲ ಕಷ್ಟಗಳನ್ನು ಪರಿಹರಿಸುವ ಹರಿಯನ್ನು ಏಕಾಗ್ರರಾಗಿ ಮನದಲ್ಲಿ ಸ್ಮರಿಸಿದರು. ಭಗವಂತನ ಇಚ್ಛೆಯನ್ನು ಮನದಲ್ಲಿಯೇ ನೆನೆದರು. ಎಲ್ಲ ದೇವತೆಗಳೊಂದಿಗೆ ಮಾತನಾಡಿದರು.

ಬ್ರಹ್ಮ-ರುದ್ರ ಮೊದಲು ಸಮಸ್ತ ಪ್ರಪಂಚವೆಲ್ಲ ಪರತಂತ್ರವಾಗಿದೆ. ಪರಮಾತ್ಮತಂತ್ರವಾಗಿದೆ. ಹೀಗಾಗಿ ನಾವೆಲ್ಲರೂ ಆ ಮಹಾವಿಷ್ಣುವಿಗೆ ಶರಣಾಗಬೇಕು.

ಭಗವಂತ ಲೋಕಗಳನ್ನೆಲ್ಲ ಸಂಹರಿಸುತ್ತಾನೆ. ಸ್ವಾರ್ಥದಿಂದ ಅಲ್ಲ. ದೇವರು ಲೋಕವನ್ನು ಸಂರಕ್ಷಿಸುತ್ತಾನೆ. ಪ್ರಯೋಜನವನ್ನು ಬಯಸಿ ಅಲ್ಲ. ಭಗವಂತ ಹಲವರನ್ನು ಆದರಿಸುತ್ತಾನೆ, ಕೆಲವರನ್ನು ಉದಾಸೀನ ಮಾಡುತ್ತಾನೆ. ಫಲದ ಅಪೇಕ್ಷೆಯಿಂದಲ್ಲ. ಅವರವರ ಯೋಗ್ಯತೆಯನ್ನು ಕಂಡು ದೇವರು ಹಾಗೆ ಹಾಗೆ ಮಾಡುತ್ತಾನೆ. ಅಷ್ಟೇ.

ದೇವತೆಗಳೆಲ್ಲರೂ ಹರಿಭಕ್ತ್ಯಾದಿ ಗುಣಗಳಿಂದ ಸಂಪನ್ನರಾಗಿದ್ದಾರೆ. ಆದ್ದರಿಂದ ಅವರನ್ನು ಅನುಗ್ರಹಿಸಬೇಕು. ಹೀಗಾಗಿ ದೇವತೆಗಳು ಆದರಣೀಯರಾಗುತ್ತಾರೆ. ಹೊರತು ತನ್ನ ಪ್ರಯೋಜನಕ್ಕಾಗಿ ಆದರಣೀಯರಲ್ಲ.

ಶುಕಾಚಾರ್ಯರೇ! ತಾವು ಬ್ರಹ್ಮಜ್ಞಾನಿಗಳು. ಬ್ರಹ್ಮಜ್ಞಾನಿಗಳಿಗೆ ಗೋಚರವಾಗದಿರುವ ವಿಷಯ ಇರುವುದೇ ಇಲ್ಲ. ಈ ಸಮುದ್ರಮಥನದ ಕಥೆಯನ್ನು ವಿಸ್ತಾರವಾಗಿ ತಾವು ನಿರೂಪಿಸಬೇಕು. ಭಗವಂತ ಕ್ಷೀರಸಾಗರವನ್ನು ಹೇಗೆ ಮಥಿಸಿದ? ಯಾವ ಪ್ರಯೋಜನಕ್ಕಾಗಿ ಭಗವಂತ ಜಲಚರನಾದ? ದೇವತೆಗಳು ಅಮೃತವನ್ನು ಹೇಗೆ ಪಡೆದರು? ಆ ಸಮುದ್ರದಿಂದ ಅಮೃತವಲ್ಲದೇ ಮತ್ತೇನು ಪದಾರ್ಥಗಳು ಜನಿಸಿದವು? ಅಮೃತಪಾನ ಮಾಡಿದ ಮೇಲೆ ಮತ್ತೇನಾಯಿತು? ಅಜಿತಾವತಾರಿಯಾದ ಪರಮಾತ್ಮನು ಮಾಡಿದ ಅತ್ಯದ್ಭುತವಾದ ಕಾರ್ಯವಿದು. ಈ ಕಾರ್ಯವನ್ನು ನಮಗೆ ವಿಸ್ತಾರವಾಗಿ ನಿರೂಪಿಸಬೇಕು. ಭಗವಂತನ ಕರ್ಮಗಳನ್ನು ತಿಳಿಯುವ ಜ್ಞಾನ ನಮಗಿಲ್ಲ. ಆದರೆ ತವಕ ಇದೆ. ನಿಮಗೆ ದೇವರ ಕರ್ಮಗಳನ್ನು ತಿಳಿಯುವ ಸಾಮರ್ಥ್ಯವೂ ಇದೆ. ತಿಳಿಸುವ ತವಕವೂ ಇದೆ. ನೀವಲ್ಲದೇ ನಮ್ಮ ಉದ್ಧಾರಕರು ಅದಾರು?

ಇದುವರೆವಿಗೂ ತಾವು ಅನೇಕ ಕಥಾನಕಗಳನ್ನು ನಿರೂಪಿಸಿದ್ದೀರಿ. ತಮ್ಮ ಮುಖದಿಂದ ಹೊರಹೊಮ್ಮಿದ ಭಗವಂತನ ಮಹಿಮೆಯನ್ನು ಕೇಳಿಯೇ ನಮ್ಮ ತಾಪಗಳೆಲ್ಲ ಶಾಂತವಾಗಿವೆ.

ನಮ್ಮ ಮನಸ್ಸು ಆಧ್ಯಾತ್ಮಿಕಾದಿ ತಾಪಗಳಿಂದ ಬೆಂದು ಹೋಗಿದೆ. ನೊಂದು ನಿಂತಿದೆ. ಅಂಥ ಮನಸ್ಸು ಮತ್ತಿಷ್ಟು ತೃಪ್ತವಾಗಬೇಕು. ಸಂತೃಪ್ತವಾಗಬೇಕು. ಸಂತಾಪಸಂತಪ್ತವಾದ ಮನಸ್ಸನ್ನು ಪ್ರಶಾಂತ ಪಡಿಸುವ ಸಾಧನ ಶ್ರೀಹರಿಮಹಿಮಾಶ್ರವಣ. ಎಷ್ಟು ಕೇಳಿದರೂ ಇನ್ನಿಷ್ಟು ಮತ್ತಿಷ್ಟು ಕೇಳಬೇಕೆಂದೇ ನಮ್ಮ ಮನ ಬಯಸುತ್ತಿದೆ. ನಮ್ಮ ಈ ಮನದ ಬಯಕೆಯನ್ನು ಪೂರ್ಣಮಾಡಿರಿ. ನಮ್ಮನ್ನು ಉದ್ಧರಿಸಿರಿ.

ಇನಿತು ಪರೀಕ್ಷಿತ ಪ್ರಶ್ನಿಸಿದ. ರಾಜನಲ್ಲಿ ಕ್ಷಣೇ ಕ್ಷಣೇ ಭಕ್ತಿಯು ಅಭಿವೃದ್ಧವಾಗುತ್ತಿತ್ತು. ಶುಕಾಚಾರ್ಯರು ಅದನ್ನು ಗಮನಿಸುತ್ತಲೇ ಇದ್ದರು. ರಾಜನ ಭಕ್ತಿಯುತವಾದ ಪ್ರಶ್ನೆಗೆ ಶುಕಾಚಾರ್ಯರು ಸಂತುಷ್ಟರಾದರು. ಪ್ರಾಂಜಲವಾಗಿ ಪರೀಕ್ಷಿತನನ್ನು ಪ್ರಶಂಸಿಸಿದರು. ರಾಜನನ್ನು ಸಂತೋಷಪಡಿಸಲು ಅಜಿತನ ಕಥೆಯನ್ನು ಹೇಳಲು ಉಪಕ್ರಾಂತರಾದರು.

ದೇವತೆಗಳಿಗೆ, ದೈತ್ಯರಿಗೆ ಘನಘೋರವಾದ ಯುದ್ಧವು ಪ್ರಾರಂಭವಾಗಿದೆ. ಅಸುರರು ಪ್ರಯೋಗಿಸುತ್ತಿರುವ ನಿಶಿತವಾದ ಬಾಣಗಳಿಂದ ದೇವತೆಗಳೆಲ್ಲ ಪೀಡಿತರಾಗಿದ್ದಾರೆ. ದೇವತೆಗಳ ಸಾಮರ್ಥ್ಯವೆಲ್ಲ ಹುಸಿಯಾಗುತ್ತಿದೆ. ದೇವತೆಗಳು ಕ್ರಮವಾಗಿ ಬಲವನ್ನು ಕಳೆದುಕೊಳ್ಳುತ್ತಿದ್ದಾರೆ. ದೈತ್ಯರು ಬಲಸಂಪನ್ನರಾಗುತ್ತಿದ್ದಾರೆ.

ಯದ್ಯಪಿ ದೇವತೆಗಳು ಮಹಾಸಮರ್ಥರು. ಆದರೆ ಪ್ರಾರಬ್ಧವನ್ನು ಅತಿಕ್ರಮಿಸಲು ಯಾರಿಂದಲೂ ಸಾಧ್ಯವಿಲ್ಲ. ಅವರ ಪ್ರಾರಬ್ಧಕ್ಕೆ ದೂರ್ವಾಸರ ಶಾಪವು ಸೂಚಕವಾಗಿ ಇದೆ. ಹೀಗಾಗಿ ಯುದ್ಧದಲ್ಲಿ ಸಾಮರ್ಥ್ಯ ಕಳೆದುಕೊಂಡ ದೇವತೆಗಳಿಗೆ ಮತ್ತೆ ಬಲವನ್ನು ಪಡೆಯಲು ಆಗುತ್ತಿಲ್ಲ.

ದುರ್ವಾಸರ ಶಾಪದಿಂದಾಗಿ ತ್ರಿಲೋಕವೇ ಕಳೆಗುಂದಿದೆ. ಎಲ್ಲಿಯೂ ಯಜ್ಞ-ಯಾಗಾದಿಗಳು ನಡೆಯುತ್ತಿಲ್ಲ. ಯಾರಿಗೂ ಧರ್ಮದಲ್ಲಿ ಅಭಿರುಚಿಯೇ ಕಾಣಿಸುತ್ತಿಲ್ಲ. ಎಲ್ಲ ಧರ್ಮಗಳೂ ಸ್ಥಗಿತಗೊಂಡಿವೆ.

ತ್ರಿಲೋಕಾಧಿಪತಿಯಾದ ಮಹೇಂದ್ರ , ಜಲಾಭಿಮಾನಿಯಾದ ವರುಣ ಮುಂತಾದ ದೇವತೆಗಳೆಲ್ಲ ಈ ವಿಧಿವೈಚಿತ್ರ್ಯವನ್ನು ಕಂಡರು. ಇದರ ಪರಿಹಾರಕ್ಕೆ ಉಪಾಯವೇನೆಂದು ತಾವೇ ಸ್ವಯಂ ವಿಚಾರಿಸಿದರು. ಆದರೆ ಯಾವ ಉಪಾಯವೂ ಅವರಿಗೆ ತಿಳಿಯಲಿಲ್ಲ. ಈ ಗಂಡಾಂತರವನ್ನು ಹೇಗಾದರೂ ಪರಿಹರಿಸಿಕೊಳ್ಳಬೇಕೆಂದು ಬಯಸಿದರು. ಮೇರುಮೂರ್ಧದಲ್ಲಿಯ ಬ್ರಹ್ಮದೇವರ ಸದನಕ್ಕೆ ಎಲ್ಲ ದೇವತೆಗಳೂ ನಡೆದರು. ಚತುರ್ಮುಖಗಳಿಂದ ಪರಮಾತ್ಮನನ್ನು ಸ್ತುತಿಸುತ್ತಿರುವ ಬ್ರಹ್ಮದೇವರನ್ನು ಕಂಡರು. ಸಾಷ್ಟಾಂಗ ಎರಗಿದರು. ತಮಗಾದ ಸೋಲನ್ನು ಹೇಳಿದರು. ದೂರ್ವಾಸರ ಶಾಪದಿಂದ ನಾವು ವಿಜಯಭ್ರಷ್ಟರಾಗಿದ್ದೇವೆಂದು ಹೇಳಿಕೊಂಡರು.

ಭಗವಂತನ ಅನುಗ್ರಹದ ಬಲದಿಂದ ಬ್ರಹ್ಮದೇವರು ಸರ್ವಸಮರ್ಥರಾಗಿದ್ದಾರೆ. ಇಂದ್ರಾದಿಗಳ ಪದವಿಯನ್ನು ಬಲಿಮುಂತಾದವರು ಅಪಹರಿಸಿದ ಪ್ರಸಂಗಗಳು ಸಾಕಷ್ಟು ಇವೆ. ಆದರೆ ಬ್ರಹ್ಮಪದವಿಯನ್ನು ಕಸೆದುಕೊಳ್ಳುವ ಸಮರ್ಥರು ಈ ಪ್ರಪಂಚದಲ್ಲಿ ಯಾರೂ ಇಲ್ಲ. ಆ ಪದವಿಯನ್ನು ಯೋಗ್ಯತೆಯಿಂದಲೇ ಸಂಪಾದಿಸಿಕೊಳ್ಳಬೇಕು.

ಅಂಥ ಬ್ರಹ್ಮದೇವರು ದೇವತೆಗಳನ್ನು ನೋಡಿದರು. ದೇವತೆಗಳು ಈ ಪ್ರಸಂಗದಲ್ಲಿ ನಿಜವಾಗಿಯೂ ನಿಸ್ತೇಜರಾಗಿದ್ದಾರೆ. ಆ ನಿಸ್ತೇಜತೆಯ ಹಿಂದೆ ಪ್ರಾರಬ್ಧವನ್ನೂ ಬ್ರಹ್ಮದೇವರು ಪರೀಕ್ಷಿಸಿದರು. ಸಮಾಹಿತರಾದರು. ಎಲ್ಲರ ಎಲ್ಲ ಕಷ್ಟಗಳನ್ನು ಪರಿಹರಿಸುವ ಹರಿಯನ್ನು ಏಕಾಗ್ರರಾಗಿ ಮನದಲ್ಲಿ ಸ್ಮರಿಸಿದರು. ಭಗವಂತನ ಇಚ್ಛೆಯನ್ನು ಮನದಲ್ಲಿಯೇ ನೆನೆದರು. ಎಲ್ಲ ದೇವತೆಗಳೊಂದಿಗೆ ಮಾತನಾಡಿದರು.

ಬ್ರಹ್ಮ-ರುದ್ರ ಮೊದಲು ಸಮಸ್ತ ಪ್ರಪಂಚವೆಲ್ಲ ಪರತಂತ್ರವಾಗಿದೆ. ಪರಮಾತ್ಮತಂತ್ರವಾಗಿದೆ. ಹೀಗಾಗಿ ನಾವೆಲ್ಲರೂ ಆ ಮಹಾವಿಷ್ಣುವಿಗೆ ಶರಣಾಗಬೇಕು.

ಭಗವಂತ ಲೋಕಗಳನ್ನೆಲ್ಲ ಸಂಹರಿಸುತ್ತಾನೆ. ಸ್ವಾರ್ಥದಿಂದ ಅಲ್ಲ. ದೇವರು ಲೋಕವನ್ನು ಸಂರಕ್ಷಿಸುತ್ತಾನೆ. ಪ್ರಯೋಜನವನ್ನು ಬಯಸಿ ಅಲ್ಲ. ಭಗವಂತ ಹಲವರನ್ನು ಆದರಿಸುತ್ತಾನೆ, ಕೆಲವರನ್ನು ಉದಾಸೀನ ಮಾಡುತ್ತಾನೆ. ಫಲದ ಅಪೇಕ್ಷೆಯಿಂದಲ್ಲ. ಅವರವರ ಯೋಗ್ಯತೆಯನ್ನು ಕಂಡು ದೇವರು ಹಾಗೆ ಹಾಗೆ ಮಾಡುತ್ತಾನೆ. ಅಷ್ಟೇ.

ದೇವತೆಗಳೆಲ್ಲರೂ ಹರಿಭಕ್ತ್ಯಾದಿ ಗುಣಗಳಿಂದ ಸಂಪನ್ನರಾಗಿದ್ದಾರೆ. ಆದ್ದರಿಂದ ಅವರನ್ನು ಅನುಗ್ರಹಿಸಬೇಕು. ಹೀಗಾಗಿ ದೇವತೆಗಳು ಆದರಣೀಯರಾಗುತ್ತಾರೆ. ಹೊರತು ತನ್ನ ಪ್ರಯೋಜನಕ್ಕಾಗಿ ಆದರಣೀಯರಲ್ಲ.

ದೈತ್ಯರಲ್ಲಿ ಹರಿಭಕ್ತಿ ಮುಂತಾದ ಗುಣಗಳು ಇಲ್ಲವೇ ಇಲ್ಲ. ಹೀಗಾಗಿ ನಿಗ್ರಾಹ್ಯರಾಗಿದ್ದಾರೆ. ಆದ್ದರಿಂದ ದೈತ್ಯರು ಉಪೇಕ್ಷಣೀಯರಾಗಿದ್ದಾರೆ. ಸ್ವಾಭಾವಿಕವಾಗಿ ಭಗವಂತ ವಿಷಮನಾಗಿ ಅವರನ್ನು ಉಪೇಕ್ಷಿಸುವುದಿಲ್ಲ.

ಅಂಥ ಶ್ರೀಹರಿಗೆ ನಾವೆಲ್ಲರೂ ಶರಣು ಹೋಗೋಣ. ಭಕ್ತರನ್ನು ಸಂರಕ್ಷಿಸುವ ಜವಾಬ್ದಾರಿ ಭಗವಂತನಿಗೆ ಇದೆ. ಆ ಭಗವಂತನೇ ನಮಗೆ ಸುಖವನ್ನು ನೀಡುತ್ತಾನೆ. ಹೀಗೆಂದು ಹೇಳಿ ದೇವತೆಗಳನ್ನು ಸಮಾಧಾನ ಪಡಿಸಿದರು ಬ್ರಹ್ಮದೇವರು.

ನಂತರ ಅಜಿತನಾಮಕನಾದ ಪರಮಾತ್ಮನು ವ್ಯಕ್ತವಾಗಿ ಇರುವ ಕ್ಷೀರಸಮುದ್ರಕ್ಕೆ ನಡೆದರು. ತಮ್ಮ ದಿವ್ಯವಾದ ವಾಣಿಯಿಂದ ಭಗವಂತನನ್ನು ಸ್ತುತಿಸಿದರು. ಭಗವಂತನ ದಿವ್ಯವಾದ ಗುಣಗಳನ್ನು ಸ್ಮರಿಸಿಕೊಳ್ಳುತ್ತಾ **ಪ್ರಸೀದತಾಂ ನಃ ಸ ಮಹಾವಿಭೂತಿಃ** ಎಂಬುದಾಗಿ ಪರಮಾತ್ಮನ ಪ್ರಸಾದವನ್ನು ಪ್ರಾರ್ಥಿಸಿದರು. ನಿನ್ನ ಪ್ರಸಾದವೇ ನಿನ್ನ ದರ್ಶನಕ್ಕೆ ಸಾಧನವಾಗಿದೆ. ಹೀಗಾಗಿ ನಮ್ಮಲ್ಲಿ ಪ್ರಸನ್ನನಾಗು. ನಮ್ಮ ಇಂದ್ರಿಯಗಳಿಗೆ ವಿಷಯನಾಗು. ನಿನ್ನನ್ನು ನೋಡಬೇಕೆಂದು ನಾವೆಲ್ಲರೂ ಬಯಸಿದ್ದೇವೆ. ಸಸ್ಮಿತವಾದ ನಿನ್ನ ರೂಪವನ್ನು ನಮಗೆ ತೋರಿಸು. ನಿನ್ನ ದರ್ಶನವೇ ಸಕಲ ಅನಿಷ್ಟಗಳನ್ನು ಪರಿಹರಿಸುತ್ತದೆ. ಅನಿಷ್ಟಗಳ ಪರಿಹಾರಕ್ಕಾಗಿ ಮತ್ತಾವ ಉಪಾಯಗಳನ್ನೂ ಮಾಡಬೇಕಾಗಿಲ್ಲ.

ಹೇ ಭಗವನ್! ನೀನು ಸರ್ವಸಮರ್ಥ. ನಾವು ನಿನ್ನ ಭಕ್ತರಾಗಿದ್ದೇವೆ. ರಾವಣ ಮುಂತಾದ ಅಸುರರು ಇಂದ್ರಾದಿದೇವತೆಗಳನ್ನು ಪೀಡಿಸುತ್ತಲೇ ಇರುತ್ತಾರೆ. ನೀನು ರಾಮ ಮುಂತಾದ ಅವತಾರಗಳನ್ನು ತಾಳಿ ಆ ರಾವಣಾದಿಗಳನ್ನು ಸಂಹರಿಸುವಿ. ದೇವತೆಗಳನ್ನು ಸಂರಕ್ಷಿಸುವಿ. ದೇವತೆಗಳಿಗೆ ಬಂದ ಆಪತ್ತುಗಳನ್ನೆಲ್ಲ ಪರಿಹರಿಸುವಿ. ಪ್ರಕೃತವೂ ಈ ದೇವತೆಗಳನ್ನು ಸಂರಕ್ಷಿಸುವ ಕಾಲ ಆಸನ್ನವಾಗಿದೆ. ಈ ದೇವತೆಗಳನ್ನು ಅನುಗ್ರಹಿಸು. ಹೀಗೆ ಬ್ರಹ್ಮದೇವರು ಭಗವಂತನನ್ನು ಸ್ತುತಿಸಿದರು.

**॥ ಇತಿ ಶ್ರೀಮದ್ಭಾಗವತೇ ಅಷ್ಟಮಸ್ಕಂಧೇ ಪಂಚಮೋಽಧ್ಯಾಯಃ ॥**

★★★

## ಅಥ ಷಷ್ಠೋಽಧ್ಯಾಯಃ

ರಾಜನಾದ ಪರೀಕ್ಷಿತನೇ! ಬ್ರಹ್ಮದೇವರು ಮಾಡಿದ ಸ್ತುತಿಯಿಂದ ಭಗವಂತ ಪ್ರಸನ್ನನಾದ. ಆ ದೇವತೆಗಳಿಗೆ ಪ್ರತ್ಯಕ್ಷನಾದ. ಕೋಟಿ-ಕೋಟಿಸೂರ್ಯರ ಪ್ರಕಾಶವನ್ನು ಹೊತ್ತು ಬಂದ ದೇವರನ್ನು ನೋಡಲು ದೇವತೆಗಳಿಗೆ ಆಗಲಿಲ್ಲ. ಅವರ ಕಣ್ಣುಗಳು ಕುಕ್ಕಿದವು. ಅವರಿಗೆ ಏನೂ ಕಾಣದಾಯಿತು. ಪ್ರಕಾಶ ಮಾತ್ರ ಕಾಣಿಸಿತು. ಅದರಿಂದ ಕುರುಡರಂತಾದರು. ತಮ್ಮೆದುರಿಗಿರುವ ಯಾವ ಪದಾರ್ಥಗಳೂ ಕಾಣದಾದವು.

ಬ್ರಹ್ಮದೇವರು ದೇವೋತ್ತಮರು. ರುದ್ರದೇವರು ವೈಷ್ಣವಾಗ್ರೇಸರರು. ಇವರು ಭಗವಂತನ ರೂಪವನ್ನು ಪ್ರತ್ಯಕ್ಷವಾಗಿ ಕಂಡರು. ಭಗವಂತನ ರೂಪ ಅಪ್ರಾಕೃತ. ಅತ್ಯಂತ ಸ್ವಚ್ಛವಾದ ರೂಪ ಅದು. ಆ ರೂಪದಲ್ಲಿ ಕಿಂಚಿತ್ತೂ ದೋಷವಿಲ್ಲ. ಇಂದ್ರನೀಲಮಣಿಯಂತೆ ಕಂಗೊಳಿಸುವ ರೂಪ. ಪೀತಾಂಬರದಿಂದ ಪರಿಶೋಭಿತವಾದ ರೂಪ. ಎಲ್ಲ ಅವಯವಗಳೂ ಸುಂದರವಾಗಿವೆ. ಚೇತೋಹಾರಿಯಾದ ಮುಖ. ವಿಧವಿಧವಾದ ಆಭರಣಗಳಿಂದ ಅಲಂಕೃತನಾಗಿದ್ದಾನೆ. ಅಂಥ ಪರಮಾತ್ಮನ ದರ್ಶನ ಮಾಡಿಕೊಂಡರು. ದೇವರನ್ನು ದರ್ಶನ ಮಾಡಿಕೊಂಡು ಬ್ರಹ್ಮ-ರುದ್ರರು ಧನ್ಯರಾದರು. ಬ್ರಹ್ಮದೇವರು ಮತ್ತೆ ದೇವರನ್ನು ಸ್ತುತಿಸಿದರು.

ಈ ಇಂದ್ರಾದಿಗಳು ಅಸುರರಿಂದ ಪೀಡಿತರಾಗಿದ್ದಾರೆ. ಧ್ಯಾನಾದಿಗಳಿಂದ ಸದಾ ನಿನ್ನ ಸೇವೆಯಲ್ಲಿಯೇ ತೊಡಗಿದ್ದಾರೆ. ಅವರ ಅಪೇಕ್ಷೆಯನ್ನು ಈಡೇರಿಸುವ ಸಾಮರ್ಥ್ಯ ನನಗಿಲ್ಲ. ಈ ರುದ್ರನೂ ಸಮರ್ಥನಲ್ಲ. ನೀನೇ ಅವರ ಅಪೇಕ್ಷೆಗಳನ್ನು ಈಡೇರಿಸಬೇಕು. ನೀನಾಗಲು, ನಿನ್ನಂತಾಗಲು ನಮಗಾರಿಗೂ ಸಾಧ್ಯವೇ ಇಲ್ಲ. ಹೀಗಾಗಿ ಈ ಇಂದ್ರಾದಿಗಳಿಗೆ ಸುಖವಾಗುವ ಉಪಾಯವನ್ನು ನೀನೇ ಹೇಳು. ನೀನೇ ಆಜ್ಞಾಪಿಸು. ಹೀಗೆ ಬ್ರಹ್ಮದೇವರು ಸ್ತುತಿಸಿ ಪ್ರಾರ್ಥಿಸಿದರು.

ದೇವತೆಗಳ ಅಭಿಪ್ರಾಯವನ್ನು ಯಥಾವತ್ತಾಗಿ ತಿಳಿದ ಪರಮಾತ್ಮ. ಕೈಮುಗಿದು ನಿಂತಿರುವ ದೇವತೆಗಳನ್ನು ವಾತ್ಸಲ್ಯದಿಂದ ನೋಡಿದ. ಎಲ್ಲ ದೇವತೆಗಳಿಗೆ ಆಜ್ಞಾಪಿಸಿದ.

ಭಗವಂತ ಸರ್ವೇಶ್ವರ. ಬ್ರಹ್ಮಾದಿಗಳೆಲ್ಲರಿಗೂ ಏಕಮೇವ ಸ್ವಾಮಿ. ಯಾರ ಅಪೇಕ್ಷೆಯೂ ಇಲ್ಲದೇ ಈ ಸುರಕಾರ್ಯವನ್ನು ಸಾಧಿಸುವ ಸಾಮರ್ಥ್ಯ ದೇವರಿಗೆ ಇದೆ. ಆದರೂ ಕೂರ್ಮನಾಗಿ, ಅಜಿತನಾಗಿ, ಧನ್ವಂತರಿಯಾಗಿ, ಮೋಹಿನಿಯಾಗಿ ಕ್ರೀಡೆ ಮಾಡಲು ಬಯಸಿದ. ಅದಕ್ಕೆ ಪೂರಕವಾಗುವಂತೆ ದೇವತೆಗಳಿಗೆ ಉಪಾಯಗಳನ್ನು ಉಪದೇಶಿಸಿದ.

ಈ ಇಂದ್ರಾದಿಗಳೆಲ್ಲ ದೈತ್ಯರಿಗೆ ಭೀತರಾಗಿದ್ದಾರೆ ಎಂಬ ವಾರ್ತೆಯು ಆಶ್ಚರ್ಯಕರವಾಗಿದೆ. ಆಯಿತು. ಆದದ್ದಾಯಿತು. ಮತ್ತೆ ಮೊದಲಿನಂತೆ ಇಂದ್ರಾದಿಗಳು

ಐಶ್ವರ್ಯಸಂಪನ್ನರಾಗುತ್ತಾರೆ. ಅಂಥ ಉಪಾಯವನ್ನು ನಾನು ಹೇಳುತ್ತೇನೆ. ಸಾವಧಾನರಾಗಿ ಆಲಿಸಿರಿ.

ಈಗ ದೈವ ದೈತ್ಯರ ಪಕ್ಷದಲ್ಲಿಯೇ ಇದೆ. ನನ್ನ ಅನುಕೂಲ್ಯ ಆ ದೈತ್ಯರೊಂದಿಗೆ ಇದೆ. ಹೀಗಾಗಿ ಬಲಿ ಮುಂತಾದ ದೈತ್ಯರು ಬಲಿಷ್ಠರಾಗಿದ್ದಾರೆ. ಬಲಿಷ್ಠರೊಂದಿಗೆ ಕಾದಾಡುವುದು ತರವಲ್ಲ. ಅವರೊಂದಿಗೆ ಸಂಧಾನ ಮಾಡಿಕೊಳ್ಳಿರಿ. ನಿಮಗೆ ಶುಭ ತರುವ ಕಾಲ ದೂರದಲ್ಲಿ ಇಲ್ಲ. ಹೀಗಾಗಿ ದೈತ್ಯರೊಂದಿಗೆ ಒಮ್ಮತದಿಂದಲೇ ಕಾಲ ಕಳೆಯಿರಿ. ಕಾಲರೂಪಿಯಾದ ಪರಮಾತ್ಮ ನಿಮ್ಮ ಪಕ್ಷಕ್ಕೆ ಬರುವ ತನಕ ಯಾವುದೇ ವಿಧವಾದ ಯುದ್ಧದ ಪ್ರಯತ್ನಗಳನ್ನು ಮಾಡಬೇಡಿರಿ.

ಭಗವಂತನ ಮಾತುಗಳನ್ನು ಕೇಳಿದರು ದೇವತೆಗಳು. ಶತ್ರುಗಳೊಂದಿಗೆ ಸಂಧಾನವನ್ನು ಯಾಕೆ ಮಾಡಿಕೊಳ್ಳಬೇಕು? ಹೇಗೆ ಮಾಡಿಕೊಳ್ಳಬೇಕೆಂದು ವಿಚಾರಿಸಿದರು. ಅದಕ್ಕೆ ಭಗವಂತ ಲೌಕಿಕವಾದ ಸುಂದರವಾದ ಒಂದು ಕಿಂವದಂತಿಯನ್ನು ದೇವತೆಗಳಿಗೆ ಉಪದೇಶಿಸಿದ.

ಹೇ ದೇವತೆಗಳೇ! ಹಿರಿದಾದ ಕಾರ್ಯದಲ್ಲಿ ತೊಡಗಿದ ಮನುಷ್ಯ ಬಲಿಷ್ಠನಾಗಬೇಕು. ಜನಬಲವನ್ನು ಸಂಪಾದಿಸಿಕೊಳ್ಳಬೇಕು. ಇವನು ನನ್ನ ಶತ್ರು, ಇವನು ಉದಾಸೀನ, ಇವನು ಮಿತ್ರ ಎಂಬ ಭಾವನೆಯನ್ನು ತೊರೆಯಬೇಕು. ಎಲ್ಲರೊಂದಿಗೆ ಬೆರೆಯಬೇಕು. ಅಂದಾಗಲೇ ಲೋಕದಲ್ಲಿ ದೊಡ್ಡ ದೊಡ್ಡ ಕೆಲಸಗಳು ಸಾಧ್ಯವಾಗುತ್ತವೆ. ಅಹಿ-ಮೂಷಕನ್ಯಾಯವನ್ನು ಈ ಪ್ರಸಂಗದಲ್ಲಿ ಅನುಸರಿಸಬೇಕು.

**(ಏನಿದು ಅಹಿಮೂಷಕ ನ್ಯಾಯ?**

೧. ನವಿಲಿಗೆ ಹಾವು ಬೆದರಿದೆ. ನವಿಲಿನಿಂದ ತನ್ನನ್ನು ರಕ್ಷಿಸಿಕೊಳ್ಳಲು ಆಲೋಚಿಸಿದೆ. ಹತ್ತಿರದಲ್ಲಿಯೇ ಇಲಿಯ ಬಿಲವಿದೆ. ಅಲ್ಲಿ ತಾನು ಪ್ರವೇಶಿಸಿದರೆ ನವಿಲಿನಿಂದ ತೊಂದರೆ ಇಲ್ಲವೇ ಇಲ್ಲ ಎಂದು ಆಲೋಚಿಸಿತು. ಆದರೆ ಇಲಿಯು ಅಲ್ಲಿ ಇರಲು ತನಗೆ ಅವಕಾಶ ಹೇಗೆ ಕೊಟ್ಟೀತು. ಹೀಗೆಲ್ಲ ವಿಚಾರಿಸಿತು. ಶತ್ರುವಾದರೂ ಇಲಿಯ ಜೊತೆ ಸಂಧಾನವೇ ಯೋಗ್ಯವೆಂದು ತಿಳಿಯಿತು. ಕೆಲವು ಕಾಲ ತನ್ನ ಶತ್ರುವಾದ ಇಲಿಯೊಂದಿಗೆ ಸಂಧಿ ಮಾಡಿಕೊಂಡಿತು. ನವಿಲು ಹೊರಟು ಹೋದ ಮೇಲೆ ಸರ್ಪವು ಭಯರಹಿತವಾಯಿತು. ಬಿಲದಿಂದ ಹೊರ ಬರುತ್ತ ಇಲಿಯನ್ನು ತಿಂದು ಹೊರಟಿತು. ಈ ರೀತಿಯಾದ ಅಹಿ-ಮೂಷಿಕನ್ಯಾಯವು ಪಂಚತಂತ್ರ ಮುಂತಾದ ರಾಜನೀತಿ ಗ್ರಂಥಗಳಲ್ಲಿ ಪ್ರಸಿದ್ಧವಾಗಿದೆ.

**ಮತ್ತೊಂದು ವಿಧವಾಗಿಯೂ ಈ ಅಹಿಮೂಷಕನ್ಯಾಯವು ಪ್ರಚಲಿತವಾಗಿದೆ.**

೨) ಹಾವಾಡಿಗನೊಬ್ಬ ಹಾವನ್ನು, ಇಲಿಯನ್ನು ಹಿಡಿದು ಒಂದೇ ಬುಟ್ಟಿಯೊಳಗೆ ಇಟ್ಟ. ಹಾವನ್ನು ನಿರ್ವೀರ್ಯಗೊಳಿಸ ಬಯಸಿದ. ತಿಂಡಿ ಇಲ್ಲ. ತೀರ್ಥವಿಲ್ಲ. ಉಪವಾಸವಿದ್ದ ಹಾವು ಆಲೋಚಿಸಿತು. ಇಲ್ಲಿಯೇ ಇರುವ ಈ ಇಲಿಯನ್ನು ತಿನ್ನಬಹುದು. ಒಂದು ದಿನ ಹೊಟ್ಟೆ ತುಂಬಿಕೊಳ್ಳಬಹುದು. ಮುಂದೇನು? ಈ ಒಂದು ದಿನ ಹೊಟ್ಟೆ ತುಂಬಿಕೊಳ್ಳುವುದಕ್ಕಿಂತಲೂ ಇಲ್ಲಿಂದ ತಪ್ಪಿಸಿಕೊಂಡು ಬದುಕಬೇಕೆಂದು ಆಲೋಚಿಸಿತು.

ಇಲಿಯ ಜೊತೆ ಸಂಧಾನಕ್ಕೆ ಸಿದ್ಧವಾಯಿತು. ಪ್ರೀತಿಯಿಂದ ಮೃದುವಾಗಿ ಮಾತನಾಡಿತು. ಹೇ ಗೆಳೆಯ ಇಲಿಯೇ! ನಾನು ಹೆಡೆಯನ್ನು ಎತ್ತಿ ನಿಲ್ಲುತ್ತೇನೆ. ನೀನು ಆ ಹೆಡೆಯ ಮೇಲೆ ಹತ್ತು . ಬುಟ್ಟಿಯ ಮುಚ್ಚಳವನ್ನು ಕೊರೆದು ಬಿಡು. ಆ ಮಾರ್ಗದಿಂದ ನಾವಿಬ್ಬರೂ ತಪ್ಪಿಸಿಕೊಂಡು ಹೊರಗೆ ಹೋಗೋಣ. ಇಬ್ಬರೂ ಸುಖವಾಗಿ ಇರೋಣವೆಂದಿತು. ಆ ಮಾತಿಗೆ ಇಲಿಯೂ ಸಮ್ಮತಿಸಿತು. ಇಲಿಯು ರಂಧ್ರವನ್ನು ಮಾಡಿತು. ಹೊರಗೆ ಬಂದಿತು. ಹೊರಗೆ ಬೆಕ್ಕು ನಿಂತಿತ್ತು . ಆ ಬೆಕ್ಕನ್ನು ಕಂಡು ಇಲಿಯು ಗಾಬರಿಯಾಯಿತು. ಇದೇ ಪ್ರಸಂಗವೆಂದು ತಿಳಿದ ಹಾವು ಇಲಿಯನ್ನು ತಿಂದಿತು. ಹೊಟ್ಟೆ ತುಂಬಿಕೊಂಡಿತು. ತನ್ನ ಪಾಡಿಗೆ ತಾನು ಹೊರಟಿತು.)

ನೀವು ಕೂಡಾ ದೈತ್ಯರೊಂದಿಗೆ ಸಂಧಾನ ಮಾಡಿಕೊಳ್ಳಿರಿ. ಪ್ರಸಂಗವು ನಿಮಗೆ ಅನುಕೂಲವಾದಾಗ ದೈತ್ಯರೊಂದಿಗೆ ಯುದ್ಧವನ್ನು ಮಾಡಿರಿ. ಅವರನ್ನು ಗೆದ್ದು ನಿಮ್ಮ ಐಶ್ವರ್ಯವನ್ನು ಮತ್ತೆ ಪಡಿಯಿರಿ. ದೇವರು ಹೀಗೆ ಉಪದೇಶ ಮಾಡಿದ.

ಇದು ಮೋಸದ ಉಪದೇಶವಲ್ಲವೇ? ಹೀಗೆ ವಂಚನೆಮಾಡುವುದನ್ನು ಭಗವಂತ ದೇವತೆಗಳಿಗೆ ಕಲಿಸಬೇಕೇ? ಇತ್ಯಾದಿಯಾಗಿ ಇಲ್ಲಿ ಪ್ರಶ್ನೆಗಳು ಬರುತ್ತವೆ. ಇದಕ್ಕೆಲ್ಲ ಒಂದೇ ಉತ್ತರ. ''ನಿಕೃತ್ಯಾ ನಿಕೃತಿಂ ಹನ್ಯಾತ್'' ವಂಚನೆಯನ್ನು ವಂಚನೆಯಿಂದಲೇ ಗೆಲ್ಲಬೇಕು. ಇದುವೇ ನ್ಯಾಯ. ವಂಚಕರನ್ನು ಧರ್ಮದಿಂದ ಗೆಲ್ಲಲು ಸಾಧ್ಯವೇ ಇಲ್ಲ. ಗೆಲ್ಲಲೂ ಬಾರದು. ಇದು ಶಾಸ್ತ್ರದ ರಹಸ್ಯ . ಲೋಕದ ನೀತಿಯೂ ಹೀಗೆಯೇ ಇದೆ. ಆದ್ದರಿಂದ ದೇವರು ಹೀಗೆ ಉಪದೇಶಿಸಿದ್ದು ಅಧರ್ಮವೇನಲ್ಲ. ಧರ್ಮವೇ ಆಗಿದೆ.

ಕೇವಲ ಕ್ಷೀರಸಾಗರದ ಮಥನದಿಂದ ಅಮೃತದ ಉತ್ಪತ್ತಿಯಾಗುವುದಿಲ್ಲ. ಬಳ್ಳಿ, ಹುಲ್ಲು, ಓಷಧಿವನಸ್ಪತಿಗಳನ್ನು ತಂದು ಆ ಸಮುದ್ರದಲ್ಲಿ ಹಾಕಿರಿ. ಮಂದರವನ್ನು ಕಡುಗೋಲಾಗಿಸಿಕೊಳ್ಳಿರಿ. ವಾಸುಕಿಯನ್ನು ಹಗ್ಗವಾಗಿ ಆ ಪರ್ವತಕ್ಕೆ ಸುತ್ತಿರಿ. ದೈತ್ಯರ ಸಹಾಯವನ್ನು ಪಡೆಯಿರಿ. ಎಲ್ಲದಕ್ಕೂ ಮಿಗಿಲಾಗಿ ನಾನೇ ನಿಮ್ಮ ಪಕ್ಷದಲ್ಲಿ ಇದ್ದು ನಿಮಗೆ ಸಹಾಯ ಮಾಡುತ್ತೇನೆ. ಸಾಗರಮಥನದ ದುಃಖ ಮಾತ್ರ ದೈತ್ಯರಿಗೆ ಮಿಗುಲುತ್ತದೆ. ನನ್ನ ಅನನ್ಯಭಕ್ತರಾದ ನೀವು ಅಮೃತವನ್ನು ಪಡೆದು ಸುಖಿಸುತ್ತೀರಿ.

ಸಮುದ್ರದಲ್ಲಿ ಮರ-ಬಳ್ಳಿಗಳನ್ನು ಹಾಕುವುದೆಂದರೆ ಭೂಮಿಯಲ್ಲಿ ಬೀಜ ಬಿತ್ತಿದಂತೆ. ಯಾವ ಕಾರಣವೂ ಇಲ್ಲದೇ ಕಾರ್ಯ ಹುಟ್ಟಲಾರದು. ಕಾಡುಗಿಚ್ಚಿನಿಂದ ಸುಟ್ಟಿರುವ ಬಿದರಿನ ಬೀಜಗಳು ಬಾಳೇಗಿಡವನ್ನು ಹುಟ್ಟಿಸುತ್ತವೆ. ಹಾಗೆ ಭಗವಂತನ ಇಚ್ಛೆಯ ಸಹಕಾರವನ್ನು ಪಡೆದ ಬಳ್ಳಿ-ಹುಲ್ಲುಗಳು ಅಮೃತವನ್ನು ಹುಟ್ಟಿಸುತ್ತವೆ. ಹೀಗೆ ವಿಚಿತ್ರವಾದ ಕಾರ್ಯಗಳು ಈ ಪ್ರಪಂಚದಲ್ಲಿ ಎಷ್ಟೋ ಆಗುತ್ತವೆ. ಹೀಗಾಗಿ ಬಳ್ಳಿ-ಹುಲ್ಲುಗಳಿಂದ ಅಮೃತ ಹೇಗೆ ಹುಟ್ಟಿತು? ಎಂಬ ಚಿಂತೆಗೆ ಅವಕಾಶವಿಲ್ಲ.

ಸಮುದ್ರಮಥನ ಮಾಡುವಾಗ ಮೊದಲಿಗೆ ಕಾಲಕೂಟವಿಷವು ಹುಟ್ಟುತ್ತದೆ. ಅದನ್ನು ಕಂಡು ಹೆದರಬೇಡಿರಿ. ಮುಂದೆ ಮುಂದೆ ಹುಟ್ಟುವ ಯಾವ ಪದಾರ್ಥಗಳನ್ನೂ ಬಯಸಬೇಡಿರಿ. ದೈತ್ಯರಲ್ಲಿ ಕೋಪಿಸಿ- ಕೊಳ್ಳಬೇಡಿರಿ. ದೈತ್ಯರ ಪಾಲಿಗೆ ಅವರನ್ನು ಬಿಟ್ಟು ಬಿಡಿ. ಅವರು ತೆಗೆದುಕೊಳ್ಳಲು ಅಪೇಕ್ಷಿಸಿದ ವಸ್ತುಗಳನ್ನು ತೆಗೆದುಕೊಳ್ಳಲು ಬಿಡಿ. ಸಮಾಧಾನವಾಗಿ ಇರಿ. ಯಾವುದಕ್ಕೂ ದುಡುಕಬೇಡಿ. ಸಮಾಧಾನದಿಂದಲೇ ಎಲ್ಲ ಕಾರ್ಯಗಳೂ ಸಿದ್ಧಿಸುತ್ತವೆ. ದುಡಿಕಿನಿಂದ ಕೆಲಸಗಳೆಲ್ಲ ಕೆಡುತ್ತವೆ.

ಭಗವಂತ ತನಗೆ ಇಷ್ಟಬಂದಂತೆ ನಡೆದುಕೊಳ್ಳುತ್ತಾನೆ. ಆತ ಸ್ವತಂತ್ರ . ಯಾರ ಮಾತನ್ನೂ ಕೇಳುವುದಿಲ್ಲ. ಸರ್ವನಿಯಾಮಕ ಭಗವಂತ. ಹೀಗೆ ದೇವತೆಗಳಿಗೆ ಆದೇಶ ಮಾಡಿದ. ಅವರು ನೋಡುತ್ತಿದ್ದಂತೆಯೇ ಅಂತರ್ಹಿತನಾದ.

ಭಗವಂತ ಅದೃಶ್ಯವಾದ ಆ ಸ್ಥಳಕ್ಕೆ ಬ್ರಹ್ಮದೇವರು ರುದ್ರದೇವರು ನಮಸ್ಕರಿಸಿದರು. ತಮ್ಮ ತಮ್ಮ ವಾಸಸ್ಥಳಗಳಿಗೆ ತೆರಳಿದರು. ದೇವತೆಗಳೆಲ್ಲರೂ ಸಂಧಾನಕ್ಕಾಗಿ ಬಲಿಚಕ್ರವರ್ತಿಯ ಬಳಿಗೆ ತೆರಳಿದರು.

ಬಲಿಯು ದೈತ್ಯರ ಚಕ್ರವರ್ತಿ. ಮಹಾಸಮರ್ಥ. ಭಗವಂತನ ಭಕ್ತನೇ. ಯುದ್ಧ ಮತ್ತು ಸಂಧಿಗಳನ್ನು ಯಾವಾಗ ಮಾಡಿಕೊಳ್ಳಬೇಕೆಂಬುದನ್ನು ಚೆನ್ನಾಗಿ ತಿಳಿದವನು. ಪ್ರಕೃತ ದೇವತೆಗಳ ಸಂಧಿಯ ವಚನಗಳನ್ನು ಕೇಳಿದ. ಭಗವಂತನ ಅನುಗ್ರಹದ ಬಲದಿಂದ ದೇವತೆಗಳು ಸಂಪನ್ನರಾಗಿದ್ದಾರೆಂದು ಬಲಿಯು ತಿಳಿದ. ತಮ್ಮಲ್ಲಿ ಭಗವಂತನ ಅನುಗ್ರಹವಿಲ್ಲದಿರುವುದನ್ನೂ ಮನಗಂಡ. ದೇವತೆಗಳನ್ನು ನೋಡಿ ಯುದ್ಧಕ್ಕೆ ಸಿದ್ಧರಾಗುತ್ತಿರುವ ತಮ್ಮ ಸೈನ್ಯವನ್ನು ತಡೆದು ನಿಲ್ಲಿಸಿದ.

ಇಂದ್ರ ಮಹಾಮತಿ. ಯಾರೊಂದಿಗೆ ಹೇಗೆ ವ್ಯವಹರಿಸಬೇಕೆಂದು ಕ್ಷುಣ್ಣವಾಗಿ ತಿಳಿದವನು. ಭಗವಂತನ ಉಪದೇಶದಿಂದ ಈಗ ಮತ್ತಿಷ್ಟು ಸುಶಿಕ್ಷಿತನಾಗಿದ್ದಾನೆ. ಹೀಗಾಗಿ ಮಧುರವಾದ ಮಾತುಗಳಿಂದ ಶತ್ರುವಾದ ಬಲಿಯನ್ನು ಸಾಂತ್ವನಗೊಳಿಸಿದ. ಅಮೃತಮಥನಕ್ಕೆ ಸಂಬಂಧಿಸಿದ ಎಲ್ಲ ವಿಷಯಗಳನ್ನೂ ವಿವರವಾಗಿ ಹೇಳಿದ. ಇಂದ್ರನ ಭಾಷಣವನ್ನು ಕೇಳಿದ ಕೂಡಲೇ ಎಲ್ಲ ದೈತ್ಯರೂ ತಲೆದೂಗಿದರು. ಬಲಿಯಂತೂ

ಋಷಿಯಿಂದ ಮನದಲ್ಲಿಯೇ ಕುಪ್ಪಳಿಸಿದ. ಶಂಬರ, ಅರಿಷ್ಟನೇಮಿ, ಮುಂತಾದ ಅಸುರಾಧಿಪತಿಗಳೆಲ್ಲರೂ ಈ ವಾರ್ತೆಯಿಂದ ಸಂತೋಷಪಟ್ಟರು.

ಹೀಗೆ ದೈತ್ಯರೆಲ್ಲರೂ ಅಮೃತಮಥನಕ್ಕೆ ಸಹಾಯ ಮಾಡಲು ಅಂಗೀಕರಿಸಿದರು. ನಂತರ ಸ್ನೇಹದಿಂದ ಏಕವಾದರು. ಏಕಾಂತಭಾಷಣ ಮಾಡಿದರು. ಸಂತೋಷಚಿತ್ತದಿಂದ ಚಿಂತನ-ಮಂಥನ ಮಾಡಿದರು.

ದೇವ-ದೈತ್ಯರು ಪ್ರಯತ್ನಗಳನ್ನು ಪ್ರಾರಂಭಿಸಿದರು. ದೇವ-ದೈತ್ಯರು ಮಹಾಸಮರ್ಥರು. ಪರ್ವತಗಳನ್ನು ಕಿತ್ತಿತರುವ ಸಾಮರ್ಥ್ಯ ಅವರಿಗೆ ಇದೆ. ಪರ್ವತವನ್ನು ಎತ್ತಿಕೊಂಡು ತಂದು ಸಮುದ್ರದಲ್ಲಿ ಇರಿಸಿದರು.

**ಕಥಾನಿರ್ಣಯ**

ಹೀಗೆ ಭಾಗವತವು ಕಥೆಯನ್ನು ಹೇಳುತ್ತದೆ.

ಆದರೆ ಪ್ರಕೃತ ಈ ಕಥೆಯನ್ನು ಭಾರತ ಮತ್ತು ಭಾರತತಾತ್ಪರ್ಯನಿರ್ಣಯಕ್ಕೆ ಅನುಗುಣವಾಗಿ ಹೀಗೆ ತಿಳಿಯಬೇಕು.

ದೇವ-ದೈತ್ಯರು ಪರ್ವತವನ್ನು ಎತ್ತಲು ಪ್ರಯತ್ನಿಸಿದರು. ಆದರೆ ಪ್ರಕೃತ ಅವರಿಗೆ ಮಂದರಪರ್ವತವನ್ನು ಅಲುಗಾಡಿಸಲೂ ಆಗಲಿಲ್ಲ. ರುದ್ರದೇವರ ವರಬಲದಿಂದ ಆ ಮಂದರ ಅಚಾಲ್ಯವಾಗಿತ್ತು . ಭಗವಂತನೇ ಬಂದು ಆ ಪರ್ವತವನ್ನು ಕಿತ್ತಿದ. ಅನಂತನಾಮಕನಾದ ಗರುಡನ ಮೇಲೆ ಇಟ್ಟ.

ನೆಲದಿಂದ ನಮಗೆ ಎತ್ತಲಾಗದಿದ್ದರೂ ಗರುಡನ ಹಾಗೆ ಹೆಗಲ ಮೇಲೆ ಹೊತ್ತುಕೊಳ್ಳಬಹುದೆಂದು ದೇವತೆಗಳು ಚಿಂತಿಸಿದರು. ಪ್ರಯತ್ನವನ್ನೂ ಮಾಡಿದರು. ಆದರೆ ದೇವ-ದೈತ್ಯರಿಗೆ ಆ ಪರ್ವತವನ್ನು ಹೊತ್ತುಕೊಳ್ಳಲು ಆಗಲಿಲ್ಲ. ಆ ಪರ್ವತ ಕೈಜಾರಿ ಅವರ ಮೇಲೆಯೇ ಬಿದ್ದಿತು. ಅದರಿಂದ ದೇವ-ದೈತ್ಯರು ಪುಡಿಯಾದರು.

ಹಲವರ ಕೈಗಳು ಮುರಿದವು. ತೊಡೆಗಳು ಭಗ್ನವಾದವು. ಕುತ್ತಿಗೆಗಳು ಕಡಿದು ಬಿದ್ದವು. ಎಲ್ಲರೂ ಸಂತ್ರಸ್ತರಾದರು. ಸಮುದ್ರವನ್ನು ಮಥನ ಮಾಡುವ ಆಸೆಯನ್ನು ಕಳೆದುಕೊಂಡರು. ಬದುಕುವುದೇ ಭಾರವೆಂದು ತೀರ್ಮಾನಿಸಿದರು. ಅಲ್ಲಿ ಭಗವಂತ ಗರುಡಾರೂಢನಾಗಿ ಪ್ರಾದುರ್ಭೂತನಾದ. ವಿಕಲಿತಾಂಗರಾಗಿ ಬಿದ್ದಿರುವ ದೇವ-ದೈತ್ಯರನ್ನು ತನ್ನ ಕಣ್ಣಿಂದ ನೋಡಿದ. ಆ ಕೃಪಾದೃಷ್ಟಿಯೇ ಎಲ್ಲರನ್ನೂ ಸಚೇತನರನ್ನಾಗಿಸಿತು. ಎಲ್ಲರ ಎಲ್ಲ ಅವಯವಗಳೂ ಮತ್ತೆ ಮೊದಲಿನಂತಾದವು.

ಕರುಣಾಪೂರ್ಣನಾದ ಪರಮಾತ್ಮ ಮತ್ತೆ ಆ ಪರ್ವತವನ್ನು ಒಂದೇ ಕೈಯಿಂದ ಎತ್ತಿದ. ಗರುಡನ ಮೇಲೆ ಇಟ್ಟ. ದೇವ-ದಾನವರಿಂದ ಯುಕ್ತನಾಗಿ ಕ್ಷೀರಸಮುದ್ರಕ್ಕೆ ತೆರಳಿದ.

ಗರುಡ ತಾನು ಹೊತ್ತಿರುವ ಪರ್ವತವನ್ನು ಲೀಲಾಜಾಲವಾಗಿ ಸಮುದ್ರದಲ್ಲಿ ಇರಿಸಿದ. ಭಗವಂತನಿಂದ ಆಜ್ಞಪ್ತನಾಗಿ ತನ್ನ ಸ್ಥಾನಕ್ಕೆ ತಾನು ತೆರಳಿದ.

ಭಾಗವತದಲ್ಲಿ ದೇವ-ದೈತ್ಯರು ಪರ್ವತವನ್ನೆತ್ತಲು ಸಮರ್ಥರಾದರು ಎಂದು ಹೇಳಲಾಗಿದೆ. ಇದನ್ನು ಹೀಗೆ ಅರ್ಥೈಸಿಕೊಳ್ಳಬೇಕು. ದೇವ-ದೈತ್ಯರು ಸ್ವಾಭಾವಿಕವಾಗಿ ಮಂದರವನ್ನು ಎತ್ತಲು ಶಕ್ತರೇ ಆಗಿದ್ದಾರೆ. ಆದರೆ ಪ್ರಕೃತ ರುದ್ರದೇವರ ವರವಿದ್ದುದರಿಂದ ಪರ್ವತವನ್ನು ಎತ್ತಲಾಗುತ್ತಿಲ್ಲ. ದೇವತೆಗಳಿಗೆ ಸ್ವಾಭಾವಿಕಶಕ್ತಿ ಇದೆ ಎಂದು ತಿಳಿಸುವುದಕ್ಕಾಗಿ ಭಾಗವತವು ಹೀಗೆ ಕಥೆಯನ್ನು ಹೇಳಿದೆ ಎಂದು ತಿಳಿಯಬೇಕು.

**॥ ಇತಿ ಶ್ರೀಮದ್ಭಾಗವತೇ ಅಷ್ಟಮಸ್ಕಂಧೇ ಷಷ್ಠೋಽಧ್ಯಾಯಃ ॥**

★★★

## ಅಥ ಸಪ್ತಮೋಽಧ್ಯಾಯಃ

ದೇವತೆಗಳು ಅಮೃತವನ್ನು ಕೊಡುತ್ತೇವೆಂದು ಒಪ್ಪಿಸಿ ವಾಸುಕಿಯನ್ನು ಕರೆತಂದರು. ದೇವತೆಗಳ ಆಹ್ವಾನಕ್ಕೆ ವಾಸುಕಿ ಸಂತುಷ್ಟನಾಗಿಯೇ ಬಂದ. ಎಲ್ಲರೂ ಸನ್ನದ್ಧರಾದರು. ಪರ್ವತಕ್ಕೆ ವಾಸುಕಿಯನ್ನು ಬಿಗಿದರು. ಮಥನ ಮಾಡಲು ಪ್ರಾರಂಭಿಸಿದರು. ಮಥನ ಮಾಡುವ ಮೊದಲು ದೇವರು ವಾಸುಕಿಯ ಮುಖಭಾಗಕ್ಕೆ ಹೊರಟ. ಮುಖವನ್ನು ಹಿಡಿದ. ದೇವತೆಗಳೂ ದೇವರ ಹಿಂದೆ ಹೋದರು. ವಾಸುಕಿಯ ಮುಖವನ್ನು ಹಿಡಿದರು.

ಆದರೆ ದೈತ್ಯರಿಗೆ ದೇವತೆಗಳ ಈ ಕೆಲಸ ಒಪ್ಪಿಗೆಯಾಗಲಿಲ್ಲ. ಅಮಂಗಲವಾದ ಬಾಲವನ್ನು ನಾವು ಹಿಡಿಯುವುದಿಲ್ಲ. ನಮಗೆ ಮುಖಭಾಗವೇ ಬೇಕೆಂದು ಹಠ ಹಿಡಿದರು. ಆಗ್ರಹ ಮಾಡಿದರು. ದೈತ್ಯರ ಆಗ್ರಹಕ್ಕೆ ಮಣಿದಂತೆ ದೇವರು ನಟಿಸಿದ. ಮುಖಭಾಗವನ್ನು ಹಿಡಿದಾಗ ವಾಸುಕಿಯ ವಿಷದಿಂದ ಆಗುವ ಪೀಡೆಯ ಪರಿಕಲ್ಪನೆ ಈ ದೈತ್ಯರಿಗೆ ಇಲ್ಲವೆಂದು ನಕ್ಕ. ದೈತ್ಯರ ಅಜ್ಞಾನವನ್ನು ಕಂಡು ಮಂದಹಾಸ ಮಾಡಿದ. ನಸು ನಗುತ್ತಲೇ ಮುಖವನ್ನು ಬಿಟ್ಟ. ಬಾಲ ಹಿಡಿದ. ದೇವತೆಗಳೆಲ್ಲರೂ ದೇವರ ಹಿಂದೆಯೇ ಬಂದು ವಾಸುಕಿಯ ಬಾಲವನ್ನು ಹಿಡಿದರು. ಮಥನವನ್ನು ಪ್ರಾರಂಭಿಸಿದರು.

ಸಮುದ್ರ ಮಥನ ಪ್ರಾರಂಭವಾಯಿತು. ಆದರೆ ಮಂದರಕ್ಕೆ ಆಶ್ರಯ ಯಾವುದೂ ಇರಲಿಲ್ಲ. ಹೀಗಾಗಿ ಕ್ರಮವಾಗಿ ಆ ಸಮುದ್ರದಲ್ಲಿ ಮಂದರವು ಮುಳುಗಲು ಆರಂಭಿಸಿತು.

ನಾನು ಬಲಿಷ್ಠ. ಅವನು ಬಲವಂತ. ಎಂದು ನಮ್ಮಷ್ಟಕ್ಕೆ ನಾವೇ ತೀರ್ಮಾನ ಮಾಡಿ ಬಿಡುತ್ತೇವೆ. ಆದರೆ ಅದೃಷ್ಟ, ದೈವ ಎಲ್ಲರ ತಲೆಯನ್ನೂ ಬಾಗಿಸುತ್ತದೆ.

ತಮ್ಮ ಪೌರುಷವೆಲ್ಲ ವ್ಯರ್ಥವಾಗುತ್ತಿದೆ ಎಂದು ದೇವ-ದಾನವರಿಗೆ ಮತ್ತೆ ಮನವರಿಕೆಯಾಯಿತು. ಪರ್ವತವನ್ನು ಎತ್ತಲು ಹೋಗಿ ಅಲ್ಲಿ ಕ್ಲೇಶಗೊಂಡರು. ಇಲ್ಲಿಯೂ

ಪರ್ವತವನ್ನು ಗಟ್ಟಿಯಾಗಿ ಹಿಡಿದು ಮಥನ ಮಾಡಲು ಆಗುತ್ತಿಲ್ಲ. ಹೀಗೆ ಆಲೋಚಿಸುತ್ತಿರುವ ಅವರ ಮುಖ ಮ್ಲಾನವಾಯಿತು. ಅಮೃತದ ಆಸೆಯನ್ನು ಪರಿತ್ಯಜಿಸಿದರು. ಕಿಂಕರ್ತವ್ಯವಿಮೂಢರಾದರು. ಸುಮ್ಮನೆ ಕುಳಿತರು.

ನಮ್ಮ ಬಲ ನಡೆಯುವುದಿಲ್ಲ ಎಂದು ಅವರು ತಿಳಿದಾಗ ಭಗವಂತ ಮತ್ತೆ ತನ್ನ ವ್ಯಾಪಾರವನ್ನು ಮುಂದುವರಿಸಿದ. ಯಾವುದೇ ಕಾರ್ಯವನ್ನು ಮಾಡುವಾಗ ಗಣಪತ್ಯಂತರ್ಗತ ವಿಶ್ವಂಭರನ ಪೂಜೆ ಮಾಡಬೇಕು. ವಿಶ್ವಂಭರನ ಅನುಗ್ರಹದಿಂದಲೇ ಕಾರ್ಯಗಳೆಲ್ಲ ನಿರ್ವಿಘ್ನವಾಗುತ್ತವೆ. ಇಲ್ಲದಿದ್ದರೆ ಹೀಗೆಯೇ ವಿಘ್ನಗಳು ಬರುತ್ತಲೇ ಇರುತ್ತವೆ ಎಂಬುದಾಗಿ ಭಗವಂತ ತಿಳಿಸಿದ. ತಾನು ಕೂರ್ಮರೂಪವನ್ನು ಧರಿಸಿದ. ಪರ್ವತವನ್ನು ಧರಿಸಿದ.

ಸಚ್ಚಿದಾನಂದಾತ್ಮಕವಾದ ಆ ವಿಗ್ರಹವನ್ನು ಕಂಡು ದೇವತೆಗಳು ಸಂತುಷ್ಟರಾದರು. ಆ ಕೂರ್ಮ ನೀರಲ್ಲಿ ಪ್ರವೇಶಿಸಿತು. ಮಂದರವನ್ನು ತನ್ನ ಬೆನ್ನ ಮೇಲೆ ಧರಿಸಿತು. ಮುಳುಗಿದ ಪರ್ವತವನ್ನು ಮತ್ತೆ ಮೇಲೆ ತಂದಿತು.

ಹನ್ನೊಂದು ಸಾವಿರ ಯೋಜನ ಮೇಲೆ, ಹನ್ನೊಂದು ಸಾವಿರ ಯೋಜನೆ ಭೂಮಿಯ ಒಳಗೆ ಹೀಗೆ ೨೨ಸಾವಿರ ಯೋಜನದಷ್ಟು ಈ ಮಂದರಪರ್ವತ ಇದೆ. ಇಂಥ ಮಂದರಪರ್ವತವನ್ನು ಸುಖವಾಗಿ ಹೊತ್ತು ನಿಂತ ಪರಮಾತ್ಮ.

ಮೇಲೆ ಬಂದಿರುವ ಪರ್ವತವನ್ನು ಕಂಡರು. ಸುರಾಸುರರೆಲ್ಲ ಪರ್ವತವನ್ನು ಮಥಿಸಲು ಪ್ರಾರಂಭಿಸಿದರು. ಆ ಪರ್ವತ ಕೂರ್ಮನ ಬೆನ್ನಮೇಲೆ ಜೋರಾಗಿ, ಜೋರು ಜೋರಾಗಿ ಭ್ರಮಿಸಲು ಪ್ರಾರಂಭಿಸಿತು. ಪರ್ವತವನ್ನು ಹೊತ್ತ ಕೂರ್ಮನಿಗೆ ಇದು ಅಂಗಕಂಡೂಯನದಂತೆ ಆನಂದಕರವಾಯಿತು.

ಪರ್ವತ ಸ್ಥಿರವಾಯಿತು ಎನ್ನುವಷ್ಟರಲ್ಲಿಯೇ ದೈತ್ಯರ, ವಾಸುಕಿಯ, ದೇವತೆಗಳ ಶಕ್ತಿಯು ಕಡಿಮೆಯಾಗತೊಡಗಿತು. ಎಲ್ಲರೂ ಶ್ರಾಂತರಾದರು. ಕಂಗೆಟ್ಟು ಹೋದರು. ಇನ್ನೇನು ಕೈಚೆಲ್ಲಿ ಕೂಡಬೇಕೆನ್ನುವಷ್ಟರಲ್ಲಿ ದೇವರು ಆ ದೈತ್ಯರಲ್ಲಿ, ವಾಸುಕಿಯಲ್ಲಿ, ದೇವತೆಗಳಲ್ಲಿ ಪ್ರವೇಶಮಾಡಿದ. ಈ ಶಕ್ತಿ ಯಾರಿಂದ ಬಂದಿತೆಂದು ಯಾರಿಗೂ ಅರ್ಥವಾಗಲೇ ಇಲ್ಲ. ಎಲ್ಲರಲ್ಲಿಯೂ ವಿಶೇಷವಾಗಿ ಪ್ರವೇಶಮಾಡಿದ ಪರಮಾತ್ಮನನ್ನು ಯಾರೂ ತಿಳಿಯಲಿಲ್ಲ. ಪರಮಾತ್ಮನ ಪ್ರವೇಶದಿಂದ ಎಲ್ಲರ ಶಾರೀರಿಕಬಲವೂ ದ್ವಿಗುಣಿತವಾಯಿತು. ಎಲ್ಲರ ಮನಸ್ಸೂ ಸುಸ್ಥಿರವಾಯಿತು. ಹೊಸ ಹುರುಪನ್ನು ಪಡೆದ ಸುರಾಸುರರು ಉತ್ಸಾಹದಿಂದ ಮಥಿಸಲು ಪ್ರಾರಂಭಿಸಿದರು. ಭಗವಂತನ ಈ ವ್ಯಾಪಾರವನ್ನು ನೋಡಲು ಬ್ರಹ್ಮಾದಿಗಳು ಆಕಾಶದಲ್ಲಿ ನಿಂತರು. ದೇವರನ್ನು ಸ್ತುತಿಸಿದರು. ಸಂತೋಷಪಡಿಸಿದರು.

ವಾಸುಕಿಯ ಹೆಡೆಗಳಿಂದ ಹೊರಟ ಶ್ವಾಸಾಗ್ನಿಯಿಂದ ದೈತ್ಯರೆಲ್ಲ ಕಂಗಾಲಾಗಿ ಹೋದರು. ದಿಕ್ಕು ತೋಚದಾಯಿತು. ಈ ಪ್ರಸಂಗ ಅವರಿಗೆ ಬಿಸಿತುಪ್ಪವಾಯಿತು. ಮುಖವನ್ನು ಬಿಡುವ ಹಾಗಿಲ್ಲ. ಹಿಡಿಯುವ ಹಾಗಿಲ್ಲ. ಇಂಥ ಪ್ರಸಂಗ ದೈತ್ಯರಿಗೆ ಒರಗಿ ಬಂದಿತು. ಹಾಗೆಯೇ ಕಷ್ಟದಿಂದ ಮಥಿಸತೊಡಗಿದರು.

ಅದರ ಪ್ರಭಾವ ದೇವತೆಗಳಿಗೂ ಆಯಿತು. ಭಗವಂತನ ಆಜ್ಞೆಯಿಂದ ದೇವತೆಗಳಿರುವ ಪ್ರದೇಶದಲ್ಲಿ ಮಾತ್ರ ಮಳೆಯು ಸುರಿಯಿತು. ತಂಗಾಳಿಯಿಂದ ಆ ಪ್ರದೇಶವೆಲ್ಲ ತುಂಬಿಕೊಂಡಿತು. ಆ ತಂಗಾಳಿಯಲ್ಲಿ ಕಷ್ಟವನ್ನು ಮರೆತರು. ತಾಪವನ್ನು ಕಳೆದುಕೊಂಡರು. ಸುಖವಾಗಿ ಮಥಿಸತೊಡಗಿದರು.

ದೇವತೆಗಳ, ದೈತ್ಯರ ಕೈಗಳು ಸೋಲುತ್ತಿವೆ. ಎಲ್ಲರೂ ನಿರ್ವಿಣ್ಣರಾಗುತ್ತಿದ್ದಾರೆ. ಇನ್ನೇನು ಅಮೃತ ಇಲ್ಲ. ಏನೂ ಇಲ್ಲ. ಎಂದು ಪ್ರತಿಯೊಬ್ಬರೂ ನಿರ್ಧಾರಕ್ಕೆ ಬರುತ್ತಿದ್ದಾರೆ. ಆ ಸಂದರ್ಭದಲ್ಲಿ ಅಜಿತನಾಮಕನಾದ ಪರಮಾತ್ಮನು ತಾನೇ ಸಮುದ್ರವನ್ನು ಮಥನ ಮಾಡಿದ.

ಸಮುದ್ರಮಥನದ ಪ್ರಾರಂಭದಲ್ಲಿ ಹಾಲಾಹಲವಿಷವು ಜನಿಸಿತು. ಆ ವಿಷದ ವಾಯುವು ಎಲ್ಲೆಡೆ ಪ್ರಸರಿಸಿತು. ಎಲ್ಲವನ್ನೂ, ಎಲ್ಲರನ್ನೂ ತಲ್ಲಣಗೊಳಿಸಿತು. ಅದರ ಪ್ರಭಾವವನ್ನು ತಾಳಲಾರದೆ ಇಂದ್ರಸಮೇತರಾಗಿ ಎಲ್ಲರೂ ಕೈಲಾಸಕ್ಕೆ ಓಡಿದರು. ರುದ್ರದೇವರಿಗೆ ಶರಣುಹೋದರು.

ತಾನೇ ಹುಟ್ಟಿಸಿದ ವಿಷವನ್ನು ಸಂಹರಿಸುವ ಸಾಮರ್ಥ್ಯ ಪರಮಾತ್ಮನಿಗೆ ಇದೆ. ಆದರೂ ರುದ್ರದೇವರಿಗೆ ಕೀರ್ತಿಯನ್ನು ನೀಡುವ ಉದ್ದೇಶದಿಂದ ವಿಷವನ್ನು ಸಂಹರಿಸಲಿಲ್ಲ. ಮತ್ತು ಜಗತ್ತಿನ ಪ್ರಶಾಂತಿಗಾಗಿ ವಾಯುದೇವರಿಗೆ ವಿಷವನ್ನು ಕುಡಿಯಲು ಆಜ್ಞೆ ನೀಡಿದ. ವಾಯುದೇವರೇ ವಿಷವನ್ನು ಪಾನ ಮಾಡಿದರು. ರುದ್ರದೇವರ ಅಪೇಕ್ಷೆಗೆ ಅನುಗುಣವಾಗಿ ಅತ್ಯಲ್ಪವಾದ ವಿಷವನ್ನು ರುದ್ರದೇವರಿಗೆ ನೀಡಿದರು. ವಾಯುದೇವರು ತಮ್ಮ ಕೈಯಲ್ಲಿ ವಿಷವನ್ನು ಹಾಕಿಕೊಂಡು ಅದನ್ನು ಮಥನ ಮಾಡಿ ರುದ್ರದೇವರಿಗೆ ನೀಡಿದರು. ಆ ವಿಷವನ್ನು ಕುಡಿದ ರುದ್ರದೇವರು ವಿಷಕಂಠರಾದರು. ಮೂರ್ಛಿತರಾದರು. ಅಚ್ಯುತ-ಅನಂತ-ಗೋವಿಂದ ಎಂಬ ನಾಮತ್ರಯಮಂತ್ರದಿಂದ ಮತ್ತೆ ಸಚೇತನರಾದರು. ಋಗ್ವೇದದಲ್ಲಿಯ ಕೇಶೀಸೂಕ್ತದಲ್ಲಿ ಬಂದಿರುವ ಈ ಕಥೆಯನ್ನು ಇಲ್ಲಿ ಅನುಸಂಧಾನ ಮಾಡಿಕೊಳ್ಳಬೇಕು.

ಇಂದ್ರಾದಿದೇವತೆಗಳು ಕೈಲಾಸಕ್ಕೆ ತೆರಳಿದರು. ರುದ್ರದೇವರು ಆ ಪ್ರಸಂಗದಲ್ಲಿ ಮುನಿಗಳ ಮಧ್ಯದಲ್ಲಿ ಕುಳಿತುಕೊಂಡಿದ್ದರು. ತತ್ತ್ವಾರ್ಥದ ವಿಚಾರವನ್ನು ಮಾಡುತ್ತಿದ್ದರು. ಅಲ್ಲಿಗೆ ತೆರಳಿದ ದೇವತೆಗಳೆಲ್ಲರೂ ರುದ್ರದೇವರನ್ನು ತದಂತರ್ಯಾಮಿಯಾದ ಭಗವಂತನನ್ನು ಸ್ತುತಿಸಿದರು.

ಮೂರುಲೋಕಗಳನ್ನು ಸುಟ್ಟು ಹಾಕುತ್ತಿರುವ ವಿಷದಿಂದ ಎಲ್ಲರನ್ನೂ ಸಂರಕ್ಷಿಸಬೇಕೆಂದು ಪ್ರಾರ್ಥಿಸಿದರು.

ಎಲ್ಲ ಪ್ರಜರಿಗೆ ಆಗುತ್ತಿರುವ ಕಷ್ಟವನ್ನು ಕೇಳಿದರು ರುದ್ರದೇವರು. ಅದನ್ನು ಪ್ರತ್ಯಕ್ಷವಾಗಿ ಕಂಡರು. ರುದ್ರದೇವರು ಕರುಣಾಭರಿತರಾದರು. ಅವರ ಮನಸ್ಸು ಕರಗಿತು.

ನನ್ನ ಸಾಮರ್ಥ್ಯ ಈ ಭವಾನಿಗೆ ತಿಳಿದಿಲ್ಲ. ಇದನ್ನು ವಿಚಾರಿಸದೇ ವಿಷಪಾನ ಮಾಡಲು ನನ್ನನ್ನು ತಡೆಯಬಹುದು. ಈ ಶಂಕೆಯಿಂದ ಅವಳ ಅನುಮೋದನೆ ಪಡೆಯುವಂತೆ ರುದ್ರದೇವರು ಭವಾನಿಗೆ ಹೇಳಿದರು.

ಭವಾನಿಯೇ! ಈ ಜೀವರೆಲ್ಲರೂ ವಿಷದಿಂದ ವಿಷಣ್ಣರಾಗಿದ್ದಾರೆ. ಅವರ ಪ್ರಾಣವನ್ನು ಉಳಿಸಬೇಕಾಗಿದೆ. ಅವರ ಪ್ರಾಣಭಯವನ್ನು ನಾನು ಪರಿಹರಿಸಬೇಕಿದೆ. ಸಮರ್ಥರಾದವರು ದುಃಖಿತರ ದುಃಖಗಳನ್ನು ಪರಿಹರಿಸಬೇಕು. ಇದು ಶಾಸ್ತ್ರಸಿದ್ಧವಾಗಿದೆ. ದೀನರನ್ನು ಪರಿಪಾಲಿಸಿದರೆ ಮಾತ್ರ ಸಮರ್ಥನಾದದ್ದು ಸಾರ್ಥಕವಾಗುತ್ತದೆ.

ದಯೆ ಮಾಡುವ ಪುರುಷನ ಮೇಲೆ ಸರ್ವಾಂತರ್ನಿಯಾಮಕನಾದ ಪುರುಷೋತ್ತಮನು ಸಂಪ್ರೀತನಾಗುತ್ತಾನೆ. ದೇವರು ಸಂಪ್ರೀತನಾದರೆ ನನ್ನ ಅಧಿಕಾರ ಸಾರ್ಥಕವಾಯಿತೆಂದು ನನಗೆ ಸಂತೋಷವಾಗುತ್ತದೆ. ಶ್ರೀಹರಿಯ ಪ್ರೀತಿಗೆ ಕಾರಣವಾದದ್ದರಿಂದ ಈ ವಿಷವನ್ನು ನಾನು ಕುಡಿಯುತ್ತೇನೆ.

ನನ್ನಿಂದ ಎಲ್ಲ ಜನರಿಗೆ ಕ್ಷೇಮವಾಗಲಿ. ಸರ್ವಸ್ವಾಮಿಯಾದ ಶ್ರೀಹರಿಯಿಂದ ನನಗೂ ಕ್ಷೇಮವಾಗುತ್ತದೆ. ಹೀಗೆ ಹೇಳಿದರು. ಪ್ರಾಣಪ್ರಿಯಳಾದ ಪಾರ್ವತಿಯ ಅನುಮತಿಯನ್ನು ಪಡೆದರು.

(ರುದ್ರದೇವರು ಪಾರ್ವತಿಗೆ ಹೇಳಿದ ವಿಷಯವು ಪದ್ಮಪುರಾಣದ ಉತ್ತರಖಂಡದಲ್ಲಿ ಉಲ್ಲಿಖಿತವಾಗಿದೆ. ಅದನ್ನು ಶ್ರೀಸತ್ಯಧರ್ಮರು ಉಲ್ಲೇಖಿಸಿದ್ದಾರೆ. ಆ ವಿಷಯದ ವಿವರಣೆ ಹೀಗೆ ಇದೆ.

ವಾಯುದೇವರು ವಿಷದ ಪಾತ್ರೆಯಲ್ಲಿಯ ಒಂದು ವಿಷದ ಹನಿಯನ್ನು ಪ್ರತ್ಯೇಕವಾಗಿ ತೆಗೆದುಕೊಂಡರು. ಆ ಹನಿ ವಿಷವನ್ನೂ ತಮ್ಮ ಕೈಯಿಂದ ತಿಕ್ಕಿದರು. ಆ ವಿಷದ ಬಲವನ್ನು ಕುಂದಿಸಿದರು. ನನ್ನ ಕೈಗಿತ್ತರು. ತಿನ್ನು ಎಂದು ಹೇಳಿದರು. ಜೊತೆಗೆ ನಾಮತ್ರಯಮಂತ್ರವನ್ನೂ ಉಪದೇಶಿಸಿದರು. ಆ ವಿಷವನ್ನು ಕುಡಿದಾಗ ನನಗೆ ದಾಹ ಉಂಟಾಯಿತು. ಆ ವಿಷವನ್ನು ನಾಲಿಗೆ ಮೇಲಿಟ್ಟುಕೊಂಡಾಗಲೇ ಪ್ರಾಣ ಹೋಗುವಂತಾಯಿತು. ವಾಯುದೇವರ ಅನುಗ್ರಹದಿಂದ ಹಾಗೂ ಅಚ್ಯುತ-ಅನಂತ-ಗೋವಿಂದ ಎಂಬ ನಾಮತ್ರಯಮಂತ್ರದ ಸಾಮರ್ಥ್ಯದಿಂದ ನಾನು ಮತ್ತೆ ಸಚೇತನನಾದೆ.

ನಂತರ ಪಾತ್ರೆಯಲ್ಲಿಯ ಎಲ್ಲ ವಿಷವನ್ನು, ಎಲ್ಲರ ರಕ್ಷಣೆಗಾಗಿ, ಶ್ರೀಹರಿಯ ಪ್ರೀತಿಗಾಗಿ ಬ್ರಹ್ಮದೇವರ ಮಾತಿನಂತೆ ಅನಾಯಾಸವಾಗಿ ವಾಯುದೇವರು ಪಾನ ಮಾಡಿದರು. ಹೇ ಪಾರ್ವತಿಯೇ ! ವಿಷ್ಣುಭಕ್ತರಾದ ವಾಯುದೇವರ ಮಹತ್ವ ಇಷ್ಟು ಅಪಾರವಾಗಿದೆ. ಈ ವಿಷಯವನ್ನು ''ಕೇಶೀ ವಿಷಸ್ಯ ಪಾತ್ರೇಣ...'' ಎಂಬ ಋಗ್ವೇದಮಂತ್ರವು ಪ್ರತಿಪಾದಿಸುತ್ತದೆ. ಇಷ್ಟು ವಿಷಯವನ್ನು ಇಲ್ಲಿ ಗಮನಿಸಬೇಕು.)

ಭವನ ಮಾತನ್ನು ಕೇಳಿ ಭವಾನಿಯು ಅನುಮತಿಸಿದಳು. ವಾಯುದೇವರು ನೀಡಿದ ವಿಷವನ್ನು ಕೈಯಲ್ಲಿ ಹಾಕಿಕೊಂಡರು. ಕ್ಷಣದಲ್ಲಿಯೇ ಕೈಯೆಲ್ಲ ಆ ವಿಷವು ವ್ಯಾಪಿಸಿತು. ಆ ವಿಷವನ್ನು ರುದ್ರದೇವರು ತಿಂದರು.

ಸಾಧುಜನರ ಸ್ವಭಾವವೇ ಹೀಗೆ. ಜನರಿಗೆ ನೋವಾದಾಗ ಸಾಧುಜನರು ಸಂತಪ್ತರಾಗುತ್ತಾರೆ. ಜನರ ಸಂತಾಪವನ್ನು ಪರಿಹರಿಸುವ ಪ್ರಯತ್ನವನ್ನು ಪ್ರಾಮಾಣಿಕವಾಗಿ ಮಾಡುತ್ತಾರೆ. ತಮ್ಮ ಪ್ರಾಣಗಳನ್ನು ನೀಡಲೂ ಸಿದ್ಧರಾಗುತ್ತಾರೆ. ಇದುವೇ ಭಗವಂತನ ಆರಾಧನೆ ಎಂಬುದಾಗಿ ತಿಳಿಯುತ್ತಾರೆ. ಈ ಆರಾಧನೆಯಿಂದ ಭಗವಂತ ಸಂಪ್ರೀತನಾಗುತ್ತಾನೆ.

ರುದ್ರದೇವರು ವಿಷವನ್ನು ಕುಡಿಯುವಾಗ ಅವರ ಕೈಯಿಂದ ಜಾರಿ ಅತ್ಯಲ್ಪವಾದ ವಿಷವು ನೆಲಕ್ಕೆ ಬಿದ್ದಿತು. ಆ ವಿಷವನ್ನು ಚೇಳುಗಳು, ಹಾವುಗಳು, ವಿಷೌಷಧಿಗಳು ಹುಲಿ ಮುಂತಾದ ಪ್ರಾಣಿಗಳು ಸ್ವೀಕರಿಸಿದವು. ತಮ್ಮ ಪ್ರಾಣರಕ್ಷಣೆಗೆ ಆ ವಿಷವನ್ನು ಬಳಸಿಕೊಂಡವು.

**॥ ಇತಿ ಶ್ರೀಮದ್ಭಾಗವತೇ ಅಷ್ಟಮಸ್ಕಂಧೇ ಸಪ್ತಮೋಽಧ್ಯಾಯಃ ॥**

★★★

# ಅಥ ಅಷ್ಟಮೋऽಧ್ಯಾಯಃ

ನಂದಿಧ್ವಜರಾದ ರುದ್ರದೇವರು ವಿಷವನ್ನು ಪಾನ ಮಾಡಿದರು. ವಿಷಭಯವನ್ನು ಪರಿಹರಿಸಿದರು. ಮತ್ತೆ ದೇವತೆಗಳು ದಾನವರು ಸೇರಿ ಸಮುದ್ರವನ್ನು ಮಥನ ಮಾಡಲು ಪ್ರಾರಂಭಿಸಿದರು. ನಂತರ ಕಾಮಧೇನುವು ಜನಿಸಿತು.

ಆ ಕಾಮಧೇನು ಯಜ್ಞೋಪಯೋಗಿಯಾದ ಹಸು. ಪರಬ್ರಹ್ಮಪ್ರತಿಪಾದಕವಾದ ವೇದಗಳನ್ನು ಅಧ್ಯಯನ ಮಾಡುವ, ನಿರಂತರ ಅಗ್ನಿಹೋತ್ರಾದಿ ವೈದಿಕಕರ್ಮಗಳಲ್ಲಿ ತಲ್ಲೀನರಾದ ಋಷಿಗಳು, ಮುನಿಗಳು ಆ ಕಾಮಧೇನುವನ್ನು ಬಯಸಿದರು. ತಾವು ತೆಗೆದುಕೊಂಡರು.

ನಂತರ ಸಮುದ್ರದಿಂದ ಚಂದ್ರನಂತೆ ಅತ್ಯಂತಶುಭ್ರವಾದ ಉಚ್ಚೈಃಶ್ರವಾ ಎಂಬ ಅಶ್ವವು ಜನಿಸಿತು. ಬಲಿಯು ಆ ಅಶ್ವವು ತನಗೆ ಬೇಕೆಂದು ಅಪೇಕ್ಷಿಸಿದನು. ಭಗವಂತನು ಮೊದಲೇ ಶಿಕ್ಷಣೆ ನೀಡಿದಂತೆ ಇಂದ್ರನು ಆ ಅಶ್ವವನ್ನು ಅಪೇಕ್ಷಿಸಲಿಲ್ಲ.

ನಂತರ ಐರಾವತವು ಆ ಸಮುದ್ರದಿಂದ ಉದಿಸಿತು. ನಾಲ್ಕು ಹಲ್ಲುಗಳು ಶುಭ್ರವಾದ ವರ್ಣದಿಂದ ಪರಿಶೋಭಿತವಾದ ಆ ಐರಾವತವನ್ನು ಇಂದ್ರನು ಸ್ವೀಕರಿಸಿದನು.

ಐರಾವತದ ಜನನವಾದ ನಂತರ ಪಾರಿಜಾತವೃಕ್ಷವು ಆ ಸಮುದ್ರದಿಂದ ಉದಿಸಿತು. ಹೇ ಪರೀಕ್ಷಿತರಾಜನೇ! ನಿನ್ನಂತೆಯೇ ಎಲ್ಲರ ಎಲ್ಲ ಯಾಚನೆಗಳನ್ನು ಪೂರ್ಣಗೊಳಿಸುವ ಸಾಮರ್ಥ್ಯ ಆ ಪಾರಿಜಾತಕ್ಕೆ ಇದೆ. ಅದು ಸುರಲೋಕಕ್ಕೆ ಅಲಂಕಾರಪ್ರಾಯವಾಯಿತು.

ನಂತರ ವಿಧವಿಧವಾದ ಆಭರಣಗಳಿಂದ ಯುಕ್ತರಾದ, ಉತ್ತಮ ವಸ್ತ್ರಗಳನ್ನು ಧರಿಸಿದ, ತಮ್ಮ ಹಾವ-ಭಾವಗಳಿಂದ ಸರ್ವರನ್ನೂ ಮೋಹಿಸುವಂಥ ಅಪ್ಸರಾಸ್ತ್ರೀಯರು ಜನಿಸಿದರು.

ಎಲ್ಲ ಅಪ್ಸರಾಸ್ತ್ರೀಯರು ಜನಿಸಿದ ನಂತರ ಶ್ರೀಶಬ್ದದಿಂದ ವಾಚ್ಯಳಾದ, ಜನನ-ಮರಣಗಳ ಗೊಡವೆಯೇ ಇಲ್ಲದ, ನಿತ್ಯಮುಕ್ತಳಾದ, ಭಾರತ್ಯಾದಿಗಳಿಂದ ವಿಲಕ್ಷಣಳಾದ, ಪರಮಾತ್ಮನ ವಕ್ಷಃಸ್ಥಳವನ್ನು ಆಶ್ರಯಿಸಿ ಸದಾ ರಮಿಸುವ, ಅಂತೆಯೇ ರಮಾಶಬ್ದವಾಚ್ಯಳಾದ, ಲಕ್ಷ್ಮೀದೇವಿಯು ಅವತರಿಸಿದಳು. ತನ್ನ ದೇಹದ ಕಾಂತಿಯಿಂದ ಎಲ್ಲ ದಿಕ್ಕುಗಳನ್ನು ಪ್ರಕಾಶಗೊಳಿಸಿದಳು. ಅವಳ ದರ್ಶನದಿಂದಲೇ ಇಂದ್ರಾದಿಗಳೆಲ್ಲ ಸಂತುಷ್ಟರಾದರು. ಕಳೆದುಕೊಂಡ ಸಂಪತ್ತನ್ನು ಮತ್ತೆ ಪಡೆದಂತೆ ಆನಂದಪಟ್ಟರು.

ರಮಾದೇವಿಯ ರೂಪವನ್ನು ಕಂಡು ಅವಳ ಮಹಿಮೆಯನ್ನು ತಿಳಿದ ದೇವತೆಗಳೆಲ್ಲ ಅವಳನ್ನು ನಿತ್ಯವೂ ಸೇವಿಸಬೇಕೆಂದು ಅಪೇಕ್ಷಿಸಿದರು. ಅಸುರರೆಲ್ಲರೂ ಈ ಲಕ್ಷ್ಮೀದೇವಿಯನ್ನು ವಿವಾಹಮಾಡಿಕೊಳ್ಳಬೇಕೆಂದು ತಾಮಸೀಬುದ್ಧಿಯಿಂದ ಆಲೋಚಿಸಿದರು. ಮಾನವರು ಐಶ್ವರ್ಯಪ್ರಾಪ್ತಿಗೆ ಇವಳ ಪೂಜೆಯನ್ನು ಮಾಡಬೇಕೆಂದು

ಅಪೇಕ್ಷಿಸಿದರು. ಹೀಗೆ ಸುರರು, ಅಸುರರು, ಮನುಷ್ಯರು ಎಲ್ಲರೂ ಒಂದೊಂದು ಭಾವನೆಯಿಂದ ರಮೆಯನ್ನು ಅಪೇಕ್ಷಿಸಿದರು.

ಲಕ್ಷ್ಮಿಯ ಅವತಾರದಿಂದ ಇಂದ್ರದೇವರು ಅತ್ಯಂತ ಸಂತುಷ್ಟರಾದರು. ಆ ರಮಾದೇವಿಗೆ ಅತ್ಯದ್ಭುತವಾದ ಸಿಂಹಾಸನವನ್ನು ತಂದಿತ್ತರು. ಆ ಪ್ರಸಂಗದಲ್ಲಿ ನದ್ಯಭಿಮಾನಿಗಳಾದ ಗಂಗಾದಿದೇವತೆಗಳು ದೇಹ ಧರಿಸಿ ರಮೆಯನ್ನು ಸೇವಿಸಲು ಬಂದರು. ಹೇಮಕುಂಭಗಳಲ್ಲಿ ತಮ್ಮಿಂದ ಅಭಿಮನ್ಯವಾದ ತೀರ್ಥಜಲಗಳನ್ನು ತುಂಬಿಕೊಂಡು ಬಂದರು.

ಭೂಮಿಗೆ ಅಭಿಮಾನಿನಿಯಾದ ಭೂದೇವಿಯು ಅಭಿಷೇಕಕ್ಕೆ ಯೋಗ್ಯವಾದ ಎಲ್ಲ ಸುವಾಸನೆಯುಕ್ತವಾದ ಧಾನ್ಯಗಳನ್ನು ತಂದಿತ್ತಳು. ರಮೆಯನ್ನು ಈ ಮೂಲಕವಾಗಿ ಸೇವಿಸಿದಳು.

ದೇಹವನ್ನು, ಸ್ಥಳವನ್ನು ಪವಿತ್ರಗೊಳಿಸುವ ಪಂಚಗವ್ಯಗಳನ್ನು ಆಕಳುಗಳು ತಂದಿತ್ತವು. ವಸಂತಋತುವಿನ ಅಭಿಮಾನಿಯು ವೈಶಾಖಮಾಸದಲ್ಲಿ ಲಭಿಸುವ ಪರಿಶುದ್ಧವಾದ ಜೇನುತುಪ್ಪವನ್ನು, ಹೂ-ಹಣ್ಣುಗಳನ್ನು ರಾಶಿರಾಶಿಯಾಗಿ ತಂದಿತ್ತನು.

ವಸಿಷ್ಠಾದಿಋಷಿಗಳು ಸೇರಿ ರಮಾದೇವಿಗೆ ಅಭಿಷೇಕದ ಸಿದ್ಧತೆಯ ವಿಧಿ-ವಿಧಾನಗಳನ್ನು ನೆರವೇರಿಸಿದರು. ಸಕಲೈಶ್ವರ್ಯಚಕ್ರವರ್ತಿನಿ ಎಂಬುದಾಗಿ ಪಟ್ಟಾಭಿಷೇಕವನ್ನು ಮಾಡಿದರು. ಆ ಕಾಲದಲ್ಲಿ ಗಂಧರ್ವರು ಮಂಗಳಕರವಾದ ಹಾಡುಗಳನ್ನು ಹಾಡಿದರು. ಅಪ್ಸರೆಯರು ನರ್ತನ ಮಾಡಿದರು.

ಮೇಘಾಭಿಮಾನಿಗಳಾದ ದೇವತೆಗಳು ಶಂಖ-ವೇಣು- ವೀಣಾ-ಕೊಳಲು, ಮದ್ದಳೆ-ನಗಾರಿ-ತಮಟೆ, ಮುಂತಾದ ವಾದ್ಯಗಳನ್ನು ಬಾರಿಸಿದರು.

ಬ್ರಾಹ್ಮಣರೆಲ್ಲರೂ ಶ್ರೀಸೂಕ್ತ ಮುಂತಾದ ಲಕ್ಷ್ಮೀಪ್ರತಿಪಾದಕವಾದ ಸೂಕ್ತಗಳನ್ನು ಪಠಿಸಿದರು. ಈ ಸಂದರ್ಭದಲ್ಲಿ ಐರಾವತ-ಪುಂಡರೀಕ ಮುಂತಾದ ಅಷ್ಟದಿಗ್ಗಜಗಳು ಅಲ್ಲಿಗೆ ಬಂದವು. ತಮ್ಮ ಸೊಂಡಿಲುಗಳಿಂದ ಗಂಗಾದಿಜಲಗಳಿಂದ ಪೂರ್ಣವಾದ ಕಲಶಗಳನ್ನು ಸ್ವೀಕರಿಸಿದವು. ಲಕ್ಷ್ಮೀದೇವಿಗೆ ಅಭಿಷೇಕ ಮಾಡಿದವು.

ಆ ಸಮುದ್ರಕ್ಕೆ ವರುಣನು ಅಭಿಮಾನಿಯು. ಹೀಗಾಗಿ ಪ್ರಕೃತ ರಮಾದೇವಿಗೆ ತಂದೆಯ ಸ್ಥಾನದಲ್ಲಿದ್ದಾನೆ. ತಂದೆಯಾದ ಆ ವರುಣನು ರೇಶ್ಮೆಯ ಪೀತಾಂಬರಗಳನ್ನು, ವೈಜಯಂತೀಮಾಲೆಯನ್ನೂ ತಂದು ತನ್ನ ಮಗಳಾದ ಲಕ್ಷ್ಮೀದೇವಿಗೆ ಇತ್ತನು.

ಪ್ರಜಾಪತಿಗಳಾದ, ದೇವಶಿಲ್ಪಿಗಳಾದ ವಿಶ್ವಕರ್ಮನು ವಿಚಿತ್ರವಾದ, ಅತ್ಯದ್ಭುತವಾದ ಅನೇಕ ಆಭರಣಗಳನ್ನು ಸಿದ್ಧಪಡಿಸಿಕೊಂಡು ರಮಾದೇವಿಗೆ ನೀಡಿದನು. ರಮಾದೇವಿಯ

ಸೊಸೆಯಾದ ಸರಸ್ವತೀದೇವಿಯು ಮುತ್ತಿನ ಹಾರವನ್ನು ತಂದಿತ್ತಳು. ಬ್ರಹ್ಮದೇವರು ಕಮಲವನ್ನು ತಂದಿತ್ತರು. ನಾಗಗಳು ಕರ್ಣಾಭರಣಗಳನ್ನು ರಮಾದೇವಿಗೆ ನೀಡಿದರು.

ಹೀಗೆ ಆಯಾ ದೇವತೆಗಳು ತಮ್ಮ ತಮ್ಮ ಯೋಗ್ಯತೆಗೆ ತಕ್ಕಂತೆ ಲಕ್ಷ್ಮೀದೇವಿಯ ಸೇವೆಯನ್ನು ಮಾಡಿದರು. ನಂತರ ಕಲ್ಯಾಣಾಂಗಭೂತವಾದ ಪುಣ್ಯಾಹವಾಚನವು ಸಂಪನ್ನವಾಯಿತು. ಜಗದೇಕಸುಂದರಿಯಾದ ಲಕ್ಷ್ಮೀದೇವಿಯು ತನ್ನ ಮುಖದಲ್ಲಿ ನಾಚಿಕೆಯನ್ನು ಸಿಂಗರಿಸಿಕೊಂಡಳು. ಮತ್ತಿಷ್ಟು ಸುಂದರಿಯಾದಳು. ಕೈಯಲ್ಲಿ ಮಾಲೆಯನ್ನು ತೆಗೆದುಕೊಂಡು ಸ್ವಯಂವರಕ್ಕಾಗಿ ನಡೆದಳು.

ತನಗೆ ಯೋಗ್ಯನಾದ ಪತಿ ಯಾರೆಂಬುದನ್ನು ಲೌಕಿಕರಂತೆ ಹುಡುಕುತ್ತಾ ಆ ಬಂಗಾರದ ಬಳ್ಳಿಯು ನಡೆದು ನಿಂತಳು. ಗಂಧರ್ವ-ಯಕ್ಷ-ಅಸುರ- ಸಿದ್ಧ-ಚಾರಣ ಮುಂತಾದ ಸ್ವರ್ಗವಾಸಿಗಳಾದ ದೇವತೆಗಳು ಯಾರೂ ತನಗೆ ಯೋಗ್ಯನಾದ ಪತಿಯಲ್ಲವೆಂದು ಅವರನ್ನೆಲ್ಲ ನಿರಾಕರಿಸಿದಳು. ಮುಂದೆ ನಡೆದಳು. ತನ್ನ ಪತಿ ನಿರ್ದುಷ್ಟ. ಅವನು ನಾರಾಯಣ. ಇವರಾರೂ ನನ್ನ ಪತಿಯಲ್ಲ. ಇವರಾರೂ ನಾರಾಯಣರಲ್ಲ ಎಂಬುದನ್ನು ಜಗತ್ತಿಗೆ ತಿಳಿಸುತ್ತಾ ನಡೆದಳು.

ನಾರಾಯಣ ಮಾತ್ರ ಸರ್ವದೋಷರಹಿತ. ಉಳಿದವರೆಲ್ಲರೂ ಸದೋಷರಾಗಿದ್ದಾರೆ. ಆದ್ದರಿಂದ ಭಗವಂತ ಸುರಾಸುರಮನುಷ್ಯರಿಗಿಂತಲೂ ಅತ್ಯಂತ ವಿಲಕ್ಷಣನಾಗಿದ್ದಾನೆ. ಎಂಬುದನ್ನು ಎಲ್ಲರಿಗೂ ತಿಳಿಸಿದಳು.

ದುರ್ವಾಸ ಮುಂತಾದ ಋಷಿಗಳು ತಪೋಧನರಾಗಿದ್ದಾರೆ. ವಿಧ್ಯುಕ್ತವಾದ ರೀತಿಯಲ್ಲಿಯೇ ಕೃಚ್ಛ್ರ-ಚಾಂದ್ರಾಯಣ ಮುಂತಾದ ಅನೇಕ ವ್ರತಗಳನ್ನು ಪಾಲಿಸುತ್ತಾರೆ. ಆದರೆ ಇವರಾರೂ ಕ್ರೋಧವನ್ನು ಗೆದ್ದವರಲ್ಲ. ಅಂಬರೀಷಾದಿಗಳಲ್ಲಿ ಕಾರಣವಿಲ್ಲದೇ ದುರ್ವಾಸಾದಿಗಳು ಕ್ರುದ್ಧರಾಗಿದ್ದಾರೆ. ಕ್ರೋಧ ಎಂಬ ದೋಷ ಇವರಲ್ಲಿ ಇದೆ. ಆದ್ದರಿಂದ ದುರ್ವಾಸಾದಿಗಳನ್ನು ಪರಿತ್ಯಜಿಸಿದಳು.

ಬೃಹಸ್ಪತ್ಯಾಚಾರ್ಯರು ಮುಂತಾದವರಲ್ಲಿ ಜ್ಞಾನವಿದೆ. ಆದರೆ ಫಲಕಾಮನಾರಹಿತರಾಗಿಲ್ಲ. ಬೃಹಸ್ಪತ್ಯಾಚಾರ್ಯರು ಪೂರ್ಣಗರ್ಭಿಣಿಯಾದ ತನ್ನ ತಮ್ಮನ ಹೆಂಡತಿಯನ್ನು ಬಲಾತ್ಕಾರ ಮಾಡಿದ್ದು ಪುರಾಣಗಳಲ್ಲಿ ಪ್ರಸಿದ್ಧವಾಗಿದೆ.

ಮತ್ತೊಬ್ಬ ಮಹತ್ತತ್ತ್ವದ ಅಭಿಮಾನಿಯಾಗಿದ್ದಾನೆ. ಎಲ್ಲರಿಗಿಂತಲೂ ವಯೋಽಧಿಕನಾಗಿದ್ದಾನೆ. ಅಂಥ ಚತುರ್ಮುಖ ಕಾಮನನ್ನು ಗೆಲ್ಲಲಿಲ್ಲ. ಹೀಗಾಗಿ ಬ್ರಹ್ಮದೇವರು ಕೂಡಾ ಸದೋಷರೇ ಆಗಿದ್ದಾರೆ. ಹೀಗೆ ಲಕ್ಷ್ಮೀದೇವಿಯು ಬ್ರಹ್ಮದೇವರಲ್ಲಿ ಕಾಮನಿರ್ಜಯ ಇಲ್ಲ ಎಂದು ಹೇಳಿದಳು. ಆದರೆ ಈ ದೋಷ ವಾಸ್ತವಿಕವಾಗಿ ಬ್ರಹ್ಮದೇವರಲ್ಲಿ ಇಲ್ಲ. ನ ಮೇ ಹೃಷೀಕಾಣಿ ಪತಂತ್ಯಸತ್ಪಥೇ ಎಂದು ಅವರೇ

ಹೇಳಿಕೊಂಡಂತೆ ಅವರ ಇಂದ್ರಿಯಗಳು ಎಂದಿಗೂ ಅಸನ್ಮಾರ್ಗದಲ್ಲಿ ಹೋಗುವುದೇ ಇಲ್ಲ. ಆದರೂ ಅವರು ನಟನೆಗಾಗಿ ಕಾಮನೆಯನ್ನು ತೋರಿಸಿದರು ಅಷ್ಟೇ. ಮಂದರ ದೃಷ್ಟಿಯಲ್ಲಿ ಬ್ರಹ್ಮದೇವರು ಕೂಡಾ ಸದೋಷರಾಗಿದ್ದಾರೆ.

ಇಂದ್ರನಿದ್ದಾನೆ. ತನ್ನ ಐಶ್ವರ್ಯಪ್ರಾಪ್ತಿಗಾಗಿ ಮತ್ತೆ ಮತ್ತೆ ನಾರಾಯಣನನ್ನೇ ಆಶ್ರಯಿಸುತ್ತಾನೆ. ಹೀಗೆ ಇನ್ನೊಬ್ಬರನ್ನು ಸದಾ ಆಶ್ರಯಿಸುವ ವ್ಯಕ್ತಿ ನನ್ನ ಪತಿ ಹೇಗಾದಾನು? ಹೀಗಾಗಿ ಇಂದ್ರನು ಕೂಡಾ ನನ್ನ ಪತಿಯಾಗಲು ಯೋಗ್ಯನಲ್ಲ.

ರುದ್ರದೇವರು ಈಶ್ವರನಾದರೂ ಸರ್ವೇಶ್ವರನಲ್ಲ. ಆದ್ದರಿಂದ ಅವನಲ್ಲಿಯೂ ದೋಷಗಳಿವೆ. ಯಮಧರ್ಮನಲ್ಲಿ ಧರ್ಮವೆಂಬ ಗುಣವಿದೆ. ಆದರೆ ಪ್ರಾಣಿಗಳಲ್ಲಿ ದಯೆ ಎಂಬುದೇ ಇಲ್ಲ. ಯಮನು ಶಿಕ್ಷಾಧಿಕಾರಿಯಾದುದರಿಂದ ದಯೆಯನ್ನು ಅವನು ತೋರಿಸುವ ಹಾಗೆ ಇಲ್ಲ. ಕುಬೇರನಲ್ಲಿ ತ್ಯಾಗವಿದೆ. ಆದರೆ ಸತ್ಪಾತ್ರರಿಗೆ ದಾನ ಮಾಡುವುದಿಲ್ಲ.

ಸನಕಾದಿಗಳು ಕಾಮಾದಿಗಳನ್ನು ಜಯಿಸಿದ್ದಾರೆ. ಆದರೆ ಅವರು ನಿತ್ಯಬ್ರಹ್ಮಚಾರಿ ಗಳಾಗಿದ್ದಾರೆ. ಆದ್ದರಿಂದ ಅವರನ್ನು ವರಿಸುಂತಿಲ್ಲ.

ಅಶ್ವತ್ಥಾಮಾಚಾರ್ಯರು, ಮಾರ್ಕಂಡೇಯ ಮುಂತಾದವರು ಚಿರಂಜೀವಿಗಳಾಗಿದ್ದಾರೆ. ಆದರೆ ಅಶ್ವತ್ಥಾಮಾಚಾರ್ಯರು ಮಂಗಲರಲ್ಲ. ಶಿರೋರತ್ನರಹಿತರಾಗಿದ್ದಾರೆ. ಆದ್ದರಿಂದ ದುರ್ಗಂಧದಿಂದ ಯುಕ್ತರಾಗಿದ್ದಾರೆ. ಮಾರ್ಕಂಡೇಯನು ಅನುಕೂಲಸ್ವಭಾದವನಲ್ಲ. ಅವನು ಇಂದ್ರಿಯಗಳನ್ನು ನಿಗ್ರಹಿಸಿಕೊಂಡು ಇದ್ದಾನೆ.

ಹಲವರಲ್ಲಿ ಶೀಲವೂ ಇದೆ. ಮಾಂಗಲ್ಯವೂ ಇದೆ. ಆದರೆ ಆಯುಷ್ಯವಿಲ್ಲ. ರುದ್ರಾದಿಗಳಲ್ಲಿ ಶೀಲವೂ ಇದೆ, ದೀರ್ಘಾಯುಷ್ಯವೂ ಇದೆ. ಆದರೆ ಮಂಗಲರಲ್ಲ. ಸ್ಮಶಾನವಾಸಿಗಳಾಗಿದ್ದಾರೆ.

ಸೂರ್ಯನಲ್ಲಿ ತಾಪಕತ್ವ ಇದೆ. ಕ್ರೋಧವಿದೆ. ಚಂದ್ರನಲ್ಲಿ ಜ್ಞಾನವಿದೆ. ಆದರೆ ತಾರೆಯ ಜೊತೆ ರಮಿಸಿದ್ದಾನೆ. ಅಮುಖ್ಯವಾಯುಯು ಯಾರ ಸಂಗವನ್ನೂ ಮಾಡಿಲ್ಲ. ಶ್ರೀಹರಿಯ ವಿಷಯದಲ್ಲಿ ಅಜ್ಞಾನವಿದೆ. ಹಿರಣ್ಯಕಶಿಪುವಿನಲ್ಲಿ ತಪಸ್ಸಿದೆ. ಆದರೆ ಕ್ರೋಧದಿಂದ ದುಷ್ಟನಾಗಿದ್ದಾನೆ.

ತುಂಬುರುವಿನಲ್ಲಿ ಭೂತಸೌಹಾರ್ದ ಇದೆ. ಶಿಖಂಡಿಗೆ ತನ್ನ ಶರೀರವನ್ನೇ ದಾನ ಮಾಡಿದ. ಆದರೆ ತನ್ನ ಯಜಮಾನನಲ್ಲಿ ಗೌರವವಿಲ್ಲ. ತನ್ನ ಯಜಮಾನನಾದ ಕುಬೇರನು ಬಂದಾಗ ಎದ್ದು ನಿಲ್ಲಲಿಲ್ಲ.

ಒಟ್ಟಾರೆ ಹೇಳುವುದಾದರೆ ಬ್ರಹ್ಮ ಅತಿವೃದ್ಧ, ಸೂರ್ಯ ಸಂತಾಪಕಾರಿ, ವಾಯು ಚಂಚಲ, ರುದ್ರ ದಿಗಂಬರ, ಇಂದ್ರ ಗರ್ವಿಷ್ಠ, ಚಂದ್ರ ಪ್ರತಿದಿನ ಕ್ಷಯಯುಕ್ತ ಹೀಗೆ ದೇವತೆಗಳೆಲ್ಲರೂ ದೋಷಯುಕ್ತರಾಗಿದ್ದಾರೆಂದು ತಿಳಿಯುತ್ತಾ , ಎಲ್ಲರಿಗೆ ತಿಳಿಸುತ್ತಾ ಎಲ್ಲ ದೇವತೆಗಳನ್ನು ಪರಿತ್ಯಜಿಸಿದಳು.

ಇವರೆಲ್ಲರಿಂದ ವ್ಯತಿರಿಕ್ತನಾದ ವ್ಯಕ್ತಿಯೊಬ್ಬನಿದ್ದಾನೆ. ಅವನಲ್ಲಿ ಈ ಯಾವ ದೋಷಗಳೂ ಇಲ್ಲ. ಆದರೆ ಅವನು ನನ್ನನ್ನು ಅಪೇಕ್ಷಿಸುವುದಿಲ್ಲ. ನಿರಪೇಕ್ಷನಾಗಿದ್ದಾನೆ. ನನಗೆ ಅವನ ಅಪೇಕ್ಷೆ ಇದೆ. ಅವನಿಗೆ ನನ್ನ ಅಪೇಕ್ಷೆ ಇಲ್ಲ. ಅವನು ಸ್ವರಮಣನಾಗಿದ್ದಾನೆ. ಅಂಥ ಪರಮಾತ್ಮನೇ ವರಣೀಯನಾಗಿದ್ದಾನೆ.

ನಾನು ಯಾವಾಗಲೂ ನಾರಾಯಣನ ಪತ್ನಿಯೇ ಆಗಿದ್ದೇನೆ. ನಾರಾಯಣನು ಸರ್ವಚೇತನವಿಲಕ್ಷಣನಾಗಿದ್ದಾನೆ. ಸದಾ ಸಕಲಮಂಗಳಗುಣಸಂಪನ್ನನಾಗಿದ್ದಾನೆ.

ಅನಾದ್ಯನಂತಕಾಲದಲ್ಲಿಯೂ ಲಕ್ಷ್ಮೀದೇವಿ ಶ್ರೀವಿಷ್ಣುವನ್ನೇ ಆಶ್ರಯಿಸಿ ಕೊಂಡಿದ್ದಾಳೆ. ಬ್ರಹ್ಮಾದಿಗಳೆಲ್ಲರೂ ದೋಷ ಉಳ್ಳವರು, ಶ್ರೀಹರಿಯೊಬ್ಬನೇ ನಿರ್ದುಷ್ಟನಾಗಿದ್ದಾನೆ. ಈ ವಿಷಯವನ್ನು ಪ್ರಸಿದ್ಧಪಡಿಸುವುದಕ್ಕಾಗಿ ದೇವಾದಿಗಳಲ್ಲಿ ದೋಷಗಳನ್ನು ಹೇಳಿ ಅವರನ್ನು ಬಿಟ್ಟಳು. ಹೀಗೆ ಮಾಡದಿದ್ದರೆ ಒಮ್ಮೆಲೇ ಶ್ರೀಹರಿಯನ್ನು ಸ್ವೀಕರಿಸಿದ್ದರೆ ಇತರರು ದೋಷಿಗಳು, ಇವನೊಬ್ಬನೇ ನಿರ್ದೋಷನೆಂದಾಗುತ್ತಿರಲಿಲ್ಲ. ಅದಕ್ಕೆ ಹೀಗೆ ಮಾಡಿದ್ದಾಳೆ. ಅಜ್ಞಾನದಿಂದ ಹೀಗೆ ಮಾಡಿದಳು ಎಂದು ತಿಳಿಯಬಾರದು.

ನಿರ್ದುಷ್ಟನಾದ, ಗುಣಪೂರ್ಣನಾದ ಸ್ವತಂತ್ರನಾದ ಪರಮಾತ್ಮನ ಕೊರಳಲ್ಲಿ ಮಾಲೆಯನ್ನು ಹಾಕಿದಳು. ನಾಚಿಕೆಯಿಂದ, ಅರಳಿದ ಕಂಗಳಿಂದ ತನ್ನ ವಾಸಸ್ಥಳವಾದ ಭಗವಂತನ ವಕ್ಷಃಸ್ಥಳವನ್ನು ಸೇರಿದಳು. ಪರಮಾತ್ಮನ ಹತ್ತಿರದಲ್ಲಿ ನಿಂತಳು.

ತನ್ನನ್ನು ವರಿಸಿಕೊಂಡು ಬಂದಿರುವ ಆ ರಮಾದೇವಿಗೆ ತನ್ನ ವಕ್ಷಃಸ್ಥಳವನ್ನು ನೀಡಿದ ಪರಮಾತ್ಮ. ಆ ವಕ್ಷಃಸ್ಥಳದಲ್ಲಿ ಸುಖವಾಗಿ ಸಂಸ್ಥಿತಳಾಗಿ ದಯಾಯುಕ್ತವಾದ ನಿರೀಕ್ಷಣದಿಂದ ಬ್ರಹ್ಮಾದಿಸಮೇತವಾದ ತ್ರಿಲೋಕವನ್ನು ಬೆಳಗಿಸುತ್ತಾಳೆ. ಮೂಲೋಕಗಳನ್ನೂ ಬೆಳೆಸುತ್ತಾಳೆ. ಲಕ್ಷ್ಮೀ-ನಾರಾಯಣರ ವಿವಾಹಮಹೋತ್ಸವ ಕಾಲದಲ್ಲಿ ಶಂಖ-ಮೃದಂಗ ಮುಂತಾದ ವಾದ್ಯಗಳು ಸುಸ್ವರವಾಗಿ ಮೊಳಗಿದವು. ಗಂಧರ್ವರು ಮತ್ತು ಅಪ್ಸರಾಸ್ತ್ರೀಯರು ಗಾನ ಮಾಡುತ್ತಾ ನರ್ತಿಸಿದರು.

ಬ್ರಹ್ಮ-ರುದ್ರ ಮುಂತಾದ ದೇವತೆಗಳೆಲ್ಲರೂ ಲಕ್ಷ್ಮೀ-ನಾರಾಯಣರ ಮೇಲೆ ಪುಷ್ಪವೃಷ್ಟಿಯನ್ನು ಮಾಡಿದರು. ವಿಷ್ಣುಸೂಕ್ತ-ಶ್ರೀಸೂಕ್ತಗಳಿಂದ ಸ್ತೋತ್ರಮಾಡಿದರು.

ವಿಷ್ಣುವಕ್ಷೋನಿವಾಸಿನಿಯಾದ ರಮಾದೇವಿಯ ಕರುಣಾಕಟಾಕ್ಷಕ್ಕೆ ಪಾತ್ರರಾದ ಬ್ರಹ್ಮಾದಿಗಳೆಲ್ಲರೂ ಶೀಲ-ಸೌಶೀಲ್ಯಾದಿಗುಣಗಳಿಂದ ಭರಿತರಾದರು. ಜ್ಞಾನಾದಿಗುಣಗಳಿಂದ ಸಂಪನ್ನರಾದರು. ಅತಿಶಯಿತವಾದ ಆನಂದವನ್ನು ಅನುಭವಿಸಿದರು.

ಲಕ್ಷ್ಮೀದೇವಿಯ ಕಟಾಕ್ಷದಿಂದ ವಂಚಿತರಾದ ದಾನವರೆಲ್ಲರೂ ಸತ್ತ್ವಹೀನರಾದರು. ತೇಜೋಹೀನರೂ ಆದರು. ಅವರಲ್ಲಿ ವಿಷಯಾಸಕ್ತಿಯು ವಿಜೃಂಭಿಸಿತು. ಪ್ರಯತ್ನರಹಿತರಾದರು. ನಿರ್ಲಜ್ಜರಾದರು. ಆದ್ದರಿಂದ ರಮಾದೇವಿಯ ಕೃಪಾಕಟಾಕ್ಷಕ್ಕೆ ಪಾತ್ರರಾಗುವಂಥ ಕಾರ್ಯಗಳಲ್ಲಿ ತತ್ಪರರಾಗಿ ಇರಬೇಕು.

ಲಕ್ಷ್ಮೀದೇವಿಯು ಸಮುದ್ರದಿಂದ ಉದಿಸಿ, ನಾರಾಯಣನನ್ನು ವಿವಾಹವಾದಳು. ನಂತರ ಮದ್ಯಕ್ಕೆ ಅಭಿಮಾನಿನಿಯಾದ ವಾರುಣಿಯು ಜನಿಸಿದಳು. ಶ್ರೀಹರಿಯ ಅನುಮತಿಯಿಂದ ಆ ವಾರುಣಿಯನ್ನು ಅಸುರರು ಸ್ವೀಕರಿಸಿದರು. ಮತ್ತೆ ಬೇಸರಿಸದೇ ಮಥನವನ್ನು ಪ್ರಾರಂಭಿಸಿದರು.

ವಾರುಣಿಯ ಜನನವಾದ ನಂತರ ಸ್ವಯಂ ವಿಷ್ಣುವು ಜನಿಸಿದ. ಧನ್ವಂತರಿರೂಪದಿಂದ ಭಗವಂತ ಪ್ರಾದುರ್ಭೂತನಾದ. ಆ ರೂಪ ಅತ್ಯಾಶ್ಚರ್ಯಕರವಾಗಿತ್ತು . ಸುಂದರವಾದ ಮುಖಾದ್ಯವಯವಗಳಿಂದ ಸುಸಂಪನ್ನವಾಗಿತ್ತು .

ಪೀತಾಂಬರಧಾರಿಯಾಗಿ ಪರಮಾತ್ಮ ಪರಿಶೋಭಿಸುತ್ತಿದ್ದ. ಆ ಪರಮಾತ್ಮ ತನ್ನ ಕೈಯಲ್ಲಿ ಅಮೃತಪೂರ್ಣವಾದ ಕಲಶವನ್ನು ಧರಿಸಿಕೊಂಡೇ ಪ್ರಾದುರ್ಭೂತನಾಗಿದ್ದ.

ಅದು ಅಮೃತಕಲಶ ಎಂದು ಎಲ್ಲರಿಗೂ ಅರ್ಥವಾಯಿತು. ದೈತ್ಯರೆಲ್ಲರೂ ಓಡಿಬಂದರು. ಧನ್ವಂತರಿಯ ಹಸ್ತದಿಂದ ಆ ಅಮೃತಕಲಶವನ್ನು ಕಸೆದುಕೊಂಡರು. ಕೃತಾರ್ಥರಾದೆವೆಂದು ಭಾವಿಸಿದರು.

ಅಮೃತಕಲಶ ಧನ್ವಂತರಿಯಿಂದ ಕೈಜಾರಿ ಹೋಗಲಿಲ್ಲ. ತಾನೇ ಸ್ವಯಂ ಕಲಶವನ್ನು ಕೈಬಿಟ್ಟ. ದೈತ್ಯರು ಹೇಗೆ ಸತ್ಯಚ್ಯುತರಾಗುತ್ತಾರೆ. ಅವರು ಎಷ್ಟು ಮದೋನ್ಮತ್ತರಾಗಿದ್ದಾರೆ ಎಂಬುದನ್ನು ಈ ಪ್ರಸಂಗದಲ್ಲಿ ಮತ್ತಿಷ್ಟು ಸ್ಪಷ್ಟವಾಗಿ ಜಗತ್ತಿಗೆ ತಿಳಿಸಿಕೊಟ್ಟ.

ಸಮುದ್ರಮಥನದಿಂದ ಹುಟ್ಟಿದ ವಸ್ತುಗಳನ್ನು ಶ್ರೀಹರಿಯ ಅನುಮತಿಯಿಂದಲೇ ಎಲ್ಲರೂ ಸ್ವೀಕರಿಸಬೇಕು. ಶ್ರೀಹರಿಯ ಅನುಮತಿ ಇಲ್ಲದೇ ಬಲಾತ್ಕಾರದಿಂದ ಯಾರೂ ತೆಗೆದುಕೊಳ್ಳಬಾರದು ಎಂದು ದೇವಾಸುರರು ಸಮುದ್ರಮಥನದ ಪೂರ್ವದಲ್ಲಿಯೇ ನಿಯಮಬದ್ಧರಾಗಿದ್ದರು. ಪೂರ್ವದಲ್ಲಿಯೂ ಭಗವಂತನ ಅನುಮತಿಯಿಂದಲೇ ದೈತ್ಯರು ವಾರುಣಿಯನ್ನು ಸ್ವೀಕಾರ ಮಾಡಿದರು. ಅಮೃತದ ಪ್ರಾಪ್ತಿಯಾದಾಗ ದೈತ್ಯರು ದೇವರ ಕೈಯಿಂದಲೇ ಅಮೃತಕಲಶವನ್ನು ಕಸೆದುಕೊಂಡದ್ದು ಅವರ ಅನ್ಯಾಯವನ್ನು ಸೂಚಿಸುತ್ತದೆ.

ಅಮೃತಕಲಶವನ್ನು ದೈತ್ಯರು ಅಪಹರಿಸುವುದನ್ನು ನೋಡುತ್ತ ಕುಳಿತರು ದೇವತೆಗಳು. ವಿಷಣ್ಣಮನಸ್ಕರಾದರು. ತಮ್ಮ ಶ್ರಮವೆಲ್ಲ ವ್ಯರ್ಥವಾಯಿತಲ್ಲ ಎಂದುಕೊಂಡರು. ಧನ್ವಂತರಿಯನ್ನೇ ಶರಣು ಹೋದರು.

ಭಗವಂತ ತನ್ನ ಭೃತ್ಯರ ಇಷ್ಟಗಳನ್ನು ನೆರವೇರಿಸುವ ದೊರೆ. ಅವನಿಗೆ ಅಸಾಧ್ಯವಾದುದು ಯಾವುದೂ ಇಲ್ಲ. ದೇವತೆಗಳು ಅಸಹಾಯಕರಾಗಿರುವುದನ್ನು ನೋಡಿದ. ಹೆದರಬೇಡಿ. ದುಃಖಿಸಬೇಡಿ. ಅಮೃತಕಲಶವನ್ನು ದೈತ್ಯರು ಅಪಹಾರ ಮಾಡಿದ್ದಾರೆ. ಆದರೆ ಅಮೃತ ಅವರ ಪಾಲಿಗೆ ಇಲ್ಲ. ನಿಮಗೆ ಅಮೃತ ಕುಡಿಸುವ ಜವಾಬ್ದಾರಿ ನನ್ನದು. ದೈತ್ಯರು ಅಮೃತಕ್ಕಾಗಿ ಪರಸ್ಪರ ಹೇಗೆ ಜಗಳವಾಡುತ್ತಾರೆ ನೋಡಿ. ಎಂದು ಹೇಳುತ್ತಾ ದೇವತೆಗಳನ್ನು ಸಮಾಧಾನಪಡಿಸಿದ.

ದೇವರು ಹೇಳಿದಂತೆಯೇ ನಡೆಯಿತು. ಅಮೃತಕ್ಕಾಗಿ ದೈತ್ಯರಲ್ಲಿಯೇ ಕದನ ಪ್ರಾರಂಭವಾಯಿತು. ದುರ್ಬಲನನ್ನು ಬಡೆದು ಪ್ರಬಲನಾದ ದೈತ್ಯ ಅಮೃತಕಲಶವನ್ನು ಕಸೆದುಕೊಂಡು ಹೋಗುತ್ತಿದ್ದಾನೆ. ಈ ಅಮೃತ ನನಗೆ ಸೇರಬೇಕಾದದ್ದು ನಿನಗಲ್ಲ. ಎಂದು ಜಗಳ ಮಾಡುತ್ತಿದ್ದಾರೆ.

ಇವರ ಕದನವನ್ನು ನೋಡುತ್ತಿರುವ ಭಗವಂತ ಆಲೋಚಿಸಿದ. ಸರ್ವೋಪಾಯಗಳನ್ನು ಬಲ್ಲವ ಭಗವಂತ. ಎಲ್ಲ ಕಾರ್ಯಗಳನ್ನು ಸುಲಭವಾಗಿ ಸಾಧಿಸುವ ಚತುರ ಪರಮಾತ್ಮ. ಕ್ಷಣದಲ್ಲಿಯೇ ಅತ್ಯಂತ ಸುಂದರವಾದ ಸ್ತ್ರೀವೇಷವನ್ನು ಧರಿಸಿ ಬಂದ. ನಾರಾಯಣನ ಮೋಹಕವಾದ ಆ ರೂಪವನ್ನು ಕಂಡು ಎಲ್ಲರೂ ಮುಗ್ಧರಾದರು. ನಿಬ್ಬೆರಗಾಗಿ ನಿಂತರು. ಆ ನಾರಾಯಣಿಯು ತನ್ನ ಮೋಹಕವಾದ ನೋಟದಿಂದ ದೈತ್ಯರ ಮನಸ್ಸಿನಲ್ಲಿ ಕಾಮವನ್ನು ಕೆರಳಿಸಿದಳು.

ದೈತ್ಯರು ಪರಸ್ಪರ ತಮ್ಮಲ್ಲಿಯೇ ಸ್ನೇಹವನ್ನು ಕಳೆದುಕೊಂಡರು. ದ್ವೇಷಪೂರಿತರಾದರು. ಪರಸ್ಪರ ನಿಂದಿಸಿಕೊಂಡರು. ಎದುರಿಗೆ ಬರುತ್ತಿರುವ ಮೋಹಿನಿಯನ್ನು ಕಂಡು ಅವಳ ಜೊತೆ ಮಾತನಾಡಿದರು.

ನೀನು ಯಾರು? ಯಾರ ಮಗಳು? ಎಲ್ಲಿಂದ ಬಂದಿರುವೆ? ಏನು ಮಾಡಲು ಬಯಸಿರುವಿ? ಹೇಳು. ನಮ್ಮ ಮನಸ್ಸೆಲ್ಲ ನಿನ್ನಲ್ಲಿಯೇ ಅನುರಕ್ತವಾಗಿದೆ. ನಮ್ಮ ಪ್ರಶ್ನೆಗಳಿಗೆ ಉತ್ತರ ನೀಡು. ನಮ್ಮನ್ನು ಶಾಂತಪಡಿಸು.

ಅಮೃತಕ್ಕಾಗಿ ನಾವೆಲ್ಲರೂ ಕಲಹ ಮಾಡುತ್ತಿದ್ದೇವೆ. ನಮ್ಮ ಕಲಹವನ್ನು ಶಾಂತ ಮಾಡು. ನಮಗೆ ಸರಿಯಾಗಿ ಈ ಅಮೃತವನ್ನು ಹಂಚಿಕೊಡು ಎಂದು ಹೇಳಿದರು.

ನಾವೆಲ್ಲರೂ ಕಶ್ಯಪರ ಮಕ್ಕಳು. ಅಮೃತಕ್ಕಾಗಿ ನಾವೆಲ್ಲರೂ ಪ್ರಯತ್ನ ಪಟ್ಟಿದ್ದೇವೆ. ನಮ್ಮಲ್ಲಿ ಯಾವುದೇ ವಿಧವಾದ ಜಗಳಗಳು ಆಗದಂತೆ ಈ ವಿರೋಧವನ್ನು ಪರಿಹರಿಸು.

ದೈತ್ಯರೆಲ್ಲರೂ ಹೀಗೆ ಹೇಳಿದ ಮೇಲೆ ನಾರಾಯಣಿಯು ಗಟ್ಟಿಯಾಗಿ ನಕ್ಕಳು. ಈ ದೈತ್ಯರೆಲ್ಲರೂ ನನ್ನ ಪಾಶಕ್ಕೆ ಬಲಿಯಾದರು ಎಂದು ಭಾವಿಸಿದಳು. ಮೋಹಕವಾದ ಕುಡಿನೋಟದಿಂದ ದೈತ್ಯರನ್ನು ನೋಡುತ್ತ ಹೀಗೆ ನುಡಿದಳು.

ನಿಜ. ನೀವೆಲ್ಲರೂ ಕಶ್ಯಪರ ಪುತ್ರರು. ನಾನು ನಿಮಗೆ ಅಪರಿಚಿತಳು. ನನ್ನಲ್ಲಿ ನೀವು ವಿಶ್ವಾಸವನ್ನು ಯಾವ ಕಾರಣಕ್ಕಾಗಿ ಮಾಡುತ್ತಿರುವಿರಿ? ತಿಳಿದವರೆಂದಿಗೂ ಸ್ವೇಚ್ಛಾಚಾರಿಗಳಾದ ಕಾಮಿನಿಯರಲ್ಲಿ ವಿಶ್ವಾಸ ಮಾಡುವುದಿಲ್ಲ. ಸದಾ ಹೊಸತನ್ನೇ ಹುಡುಕುವ ಪ್ರವೃತ್ತಿಯುಳ್ಳ ಮೋಹಿನಿಯರಲ್ಲಿ ನೀವು ಅದು ಹೇಗೆ ವಿಶ್ವಾಸ ಮಾಡುತ್ತಿದ್ದೀರಿ? ಎಂದು ಭಗವಂತ ನುಡಿದ.

ಈ ನುಡಿಗಳನ್ನು ಕೇಳಿದ ದೈತ್ಯರು ಅವಳಲ್ಲಿ ಮತ್ತಿಷ್ಟು ವಿಶ್ವಾಸವನ್ನು ಹೆಚ್ಚಿಸಿಕೊಂಡರು. ತಮ್ಮ ಕೈಯಲ್ಲಿದ್ದ ಅಮೃತಭಾಜನವನ್ನು ನಾರಾಯಣಿಯ ಕೈಯಲ್ಲಿಟ್ಟರು. ಅವಳ ವಿಶ್ವಾಸವನ್ನು ಗಳಿಸಬೇಕೆಂದು ಎಲ್ಲರೂ ಜಗಳ ಬಿಟ್ಟು ಕೈಕಟ್ಟಿ ಕುಳಿತರು.

ಅಮೃತಭಾಜನ ಕೈಸೇರಿದ ಮೇಲೆ ಮತ್ತೆ ನಾರಾಯಣಿಯು ಹೇಳಿದಳು. ನಾನು ಯಾವ ವಿಷಯದಲ್ಲಾದರೂ ತಪ್ಪಿದರೆ ಆ ತಪ್ಪನ್ನು ನೀವು ಒಪ್ಪಿಕೊಳ್ಳಬೇಕು. ಅದಕ್ಕೆ ಮತ್ತೆ ಕಾದಾಡುತ್ತಾ ಕೂಡಬಾರದು. ಈ ಷರತ್ತಿಗೆ ಒಪ್ಪುತ್ತಿದ್ದರೆ ಅಮೃತವನ್ನು ಹಂಚುವ ಕಾರ್ಯಕ್ಕೆ ಕೈ ಹಾಕುತ್ತೇನೆ. ಇಲ್ಲವಾದರೆ ಇಲ್ಲ ಎಂದು ಹೇಳಿಬಿಟ್ಟಳು.

ನಾರಾಯಣಿಯ ಮಾತಿನ ಅಭಿಪ್ರಾಯವನ್ನು ತಿಳಿಯಲು ದೈತ್ಯರಿಗೆ ಆಗಲಿಲ್ಲ. ಹಾಗೆಯೇ ಆಗಲಿ ಎಂದು ಎಲ್ಲರೂ ಸಮ್ಮತಿಸಿದರು.

ನಾರಾಯಣಿಯು ಅಮೃತವನ್ನು ಹಂಚುತ್ತೇನೆ ಎಂದು ಹೇಳಿದ ಮೇಲೆ ಎಲ್ಲರೂ ಉಪವಾಸ ಮಾಡಿದರು. ಸ್ನಾನ ಮಾಡಿದರು. ಅಗ್ನಿಹೋತ್ರವನ್ನು ಮಾಡಿದರು. ಗೋ-ಬ್ರಾಹ್ಮಣರ ಪೂಜೆಯನ್ನು ನೆರವೇರಿಸಿದರು. ಪುಣ್ಯಾಹವಾಚನವನ್ನು ಮಾಡಿಸಿಕೊಂಡರು. ಮಡಿಯಾದ ವಸ್ತ್ರಗಳನ್ನು ಧರಿಸಿದರು. ಎಲ್ಲ ದೇವತೆಗಳು ಮತ್ತು ದೈತ್ಯರೂ ಪ್ರಾಗಗ್ರವಾದ ದರ್ಭಾಸನದಲ್ಲಿ ಪೂರ್ವಕ್ಕೆ ಮುಖ ಮಾಡಿ ಕುಳಿತುಕೊಂಡರು.

ದೇವತೆಗಳು, ದೈತ್ಯರು ಕುಳಿತಿರುವ ಆ ಮಂಟಪವನ್ನು ನಾರಾಯಣಿಯು ಪ್ರವೇಶಿಸಿದಳು. ನಾರಾಯಣಿಯ ಮುಖವನ್ನು ನೋಡಿದ ದೈತ್ಯರೆಲ್ಲರೂ ಮೋಹಿತರಾದರು. ಇವಳು ಏನು ಮಾಡಲು ಬಯಸಿದ್ದಾಳೆ ಎಂಬುದನ್ನೇ ತಿಳಿಯದಾದರು.

ಭಗವಂತ ವಿಚಾರಿಸಿದ. ಯದ್ಯಪಿ ದೈತ್ಯರೂ ಈ ಮಥನದಲ್ಲಿ ಸಹಾಯ ಮಾಡಿದ್ದಾರೆ. ಆದ್ದರಿಂದ ಅವರಿಗೆ ಅಮೃತವನ್ನು ಕೊಡುವುದು ಲೌಕಿಕವಾಗಿ ನ್ಯಾಯ ಎನ್ನಿಸಬಹುದು. ಆದರೆ ಅಮೃತವನ್ನು ಕುಡಿದ ದೈತ್ಯರ ಬಲ ಮತ್ತಿಷ್ಟು ವೃದ್ಧವಾಗುತ್ತದೆ. ಬೆಳೆದ ಬಲದಿಂದ

ಅವರು ಮತ್ತೆ ಸಜ್ಜನರನ್ನು, ಧರ್ಮವನ್ನು ಪೀಡಿಸುತ್ತಾರೆ. ಲೋಕಕಂಟಕರಾಗುತ್ತಾರೆ. ಆದ್ದರಿಂದ ಅವರಿಗೆ ಅಮೃತವನ್ನು ನೀಡುವುದು ಯೋಗ್ಯವಲ್ಲ. ಕ್ರೂರವಾದ ಸರ್ಪಗಳಿಗೆ ಹಾವು ಎರೆದಂತಾಗುತ್ತದೆ. ಹಾವಿಗೆ ಎರದೆ ಹಾಲು ವಿಷವಾಗುತ್ತದೆ. ಆ ವಿಷ ಮತ್ತೊಬ್ಬರಿಗೆ ಮಾರಕವಾಗುತ್ತದೆ. ಹಾಗೆಯೇ ದೈತ್ಯರಿಗೆ ನೀಡಿದ ಅಮೃತವು ಲೋಕಮಾರಕವಾಗುತ್ತದೆ. ಹೀಗಾಗಿ ಅವರಿಗೆ ಅಮೃತವನ್ನು ನೀಡದಿರುವುದೇ ಲೇಸೆಂದು ಭಗವಂತ ಆಲೋಚಿಸಿದ.

ಹೀಗೆ ವಿಚಾರಿಸಿ ಭಗವಂತ ದೈತ್ಯರಿಗೆ ಅಮೃತವನ್ನು ನೀಡಲೇ ಇಲ್ಲ. ಇದಕ್ಕೆ ವಿಪರೀತವಾಗಿ ದೇವತೆಗಳು ಅಮೃತಪಾನ ಮಾಡಿದರೆ ಅಜರಾಮರರಾಗುತ್ತಾರೆ. ಅಮೃತದಿಂದ ಬಲವನ್ನು ಪಡೆದ ದೇವತೆಗಳು ಜಗತ್ತಿಗೆ ಉಪಕಾರಕರಾಗುತ್ತಾರೆ. ಆದ್ದರಿಂದ ದೇವತೆಗಳಿಗೆ ಮಾತ್ರ ಅಮೃತವನ್ನು ಹಂಚಿದ. ಅಲ್ಲದೇ ಅಮೃತದ ಮೇಲೆ ನಿಜವಾದ ಅಧಿಕಾರ ಭಗವಂತನಿಗೆ ಮಾತ್ರ ಇದೆ. ಅಮೃತವನ್ನು ಮಥನ ಮಾಡಲು ಯದ್ಯಪಿ ದೇವತೆಗಳು, ದೈತ್ಯರು ನಿಂತಿದ್ದಾರೆ. ನಿಜ. ಆದರೆ ತನ್ನ ಸಹಾಯವೇ ಇಲ್ಲವೆಂದಾಗಿದ್ದಾರೆ ಈ ಅಮೃತದ ಪ್ರಾಪ್ತಿಯೇ ಆಗುತ್ತಿರಲಿಲ್ಲ. ಹೀಗಾಗಿ ಅಮೃತವನ್ನು ಯಾರಿಗೆ ಕೊಡುವುದು ಯಾರಿಗೆ ಬಿಡುವುದು ಎಂಬುದರ ಬಗ್ಗೆ ಸರಿಯಾಗಿ ನಿರ್ಧರಿಸಬೇಕಾದವನು ಆ ಭಗವಂತನೇ ಆಗಿದ್ದಾನೆ. ತನಗೆ ಇಚ್ಛೆ ಬಂದಂತೆ ಲೋಕನೀತಿ ಹಾಳಾಗದಂತೆಯೇ ಭಗವಂತ ಸುಧಾವಿಭಾಗವನ್ನು ಮಾಡಿದ್ದಾನೆ. ಆದ್ದರಿಂದ ಇದು ಯುಕ್ತವೇ ಆಗಿದೆ.

ಭಗವಂತ ದೇವತೆಗಳನ್ನು, ದೈತ್ಯರನ್ನು ಪ್ರತ್ಯೇಕ ಪ್ರತ್ಯೇಕವಾದ ಪಂಕ್ತಿಗಳನ್ನು ಮಾಡಲು ಹೇಳಿದ. ಆ ಉಭಯಪಂಕ್ತಿಗಳಲ್ಲಿ ದೇವತೆಗಳನ್ನು ದೈತ್ಯರನ್ನು ಪ್ರತ್ಯೇಕವಾಗಿಯೇ ಕುಳ್ಳರಿಸಿದ.

ಕೈಯಲ್ಲಿ ಕಲಶವನ್ನು ಹಿಡಿದ. ದೈತ್ಯರ ಹತ್ತಿರವೇ ಸಂಚಾರಮಾಡಿದ. ಹಾಸ್ಯಮಾತುಗಳಿಂದ ಅವರನ್ನು ವಂಚಿಸಿದ. ದೂರದಲ್ಲಿದ್ದ ದೇವತೆಗಳಿಗೆ ಜರಾ-ಮರಣಪರಿಹಾರಕವಾದ ಅಮೃತವನ್ನು ಬಡಿಸಿದ. ದೇವತೆಗಳು ಸುಖವಾಗಿ ಅಮೃತವನ್ನು ಸ್ವೀಕರಿಸಿದರು.

ದೈತ್ಯರಿಗೆ ಈ ವಿಚಾರವು ತಿಳಿಯಿತು. ಆದರೇ ತಾವೇ ಪೂರ್ವದಲ್ಲಿ ಒಪ್ಪಂದ ಮಾಡಿಕೊಂಡಿದ್ದೇವೆ. ಈಗ ಇವಳೊಡನೆ ವಿವಾದ ಮಾಡಿದರೆ ಲೋಕವು ತಮ್ಮನ್ನು ನಿಂದಿಸುತ್ತದೆ. ಹೀಗೆ ವಿಚಾರಿಸಿ ದೈತ್ಯರು ಸುಮ್ಮನೆ ಕುಳಿತರು.

ವಿಪ್ರಿಯವಾದ ಮಾತುಗಳನ್ನಾಡಿದರೆ ಇವಳು ನಮ್ಮಲ್ಲಿ ವಿಶ್ವಾಸವನ್ನು ಕಳೆದುಕೊಂಡಾಳು? ಎಂದು ವಿಚಾರಿಸಿ ಯಾವುದೇ ವಿಧವಾದ ಅಪ್ರಿಯವಾದ ಮಾತುಗಳನ್ನಾಡಲಿಲ್ಲ.

ರಾಹು ಎಂಬ ದೈತ್ಯ ಮಾತ್ರ ಇದನ್ನು ಆಮೂಲಾಗ್ರವಾಗಿ ಗಮನಿಸಿದ. ದೇವತೆಗಳ ವೇಷವನ್ನು ಹಾಕಿಕೊಂಡು ದೇವತೆಗಳ ಸಾಲಿನಲ್ಲಿ ಹೋಗಿ ಕುಳಿತ. ದೇವರು ರಾಹುವಿನ ಕೈಗೆ ಅಮೃತವನ್ನು ಹಾಕಿದ. ಸೂರ್ಯ-ಚಂದ್ರರು ಬಂದು ಭಗವಂತನಿಗೆ ವಿಜ್ಞಾಪಿಸಿದರು. ಇವನು ದೇವತೆಯಲ್ಲ. ದೇವತೆಯ ವೇಷದಲ್ಲಿರುವ ದೈತ್ಯನಿವನು ಎಂದು.

ಶ್ರೀಹರಿಯು ನಿಶಿತವಾದ ಚಕ್ರವನ್ನು ತೆಗೆದ. ರಾಹುವಿನ ತಲೆಯನ್ನು ಕತ್ತರಿಸಿದ. ಆಗಲೇ ಅಮೃತ ರಾಹುವಿನ ಕುತ್ತಿಗೆಯನ್ನು ಸೇರಿತ್ತು. ಹೀಗಾಗಿ ರುಂಡ-ಮುಂಡ ಎರಡಾದರೂ ಅಲ್ಲಿಯ ಪ್ರಾಣ ಮಾತ್ರ ಹೊಗಲಿಲ್ಲ. ಆ ಮುಂಡವು ಸುಧಾಸಿಕ್ತವಾಗಿ ಶುಭೋದಸಾಗರದಲ್ಲಿ ಬಿದ್ದಿತು. ಈಗಲೂ ಶುಭೋದಸಾಗರದಲ್ಲಿ ಆ ಮುಂಡವು ಇದೆ.

ರುಂಡದಲ್ಲಿ ದೇವತೆಗಳೆಲ್ಲ ಸನ್ನಿಹಿತರಾದರು. ಆದ್ದರಿಂದ ಅದು ಅಮರವಾಯಿತು. ನವಗ್ರಹಗಳಲ್ಲಿ ಅದು ಒಂದಾಯಿತು. ಆದರೆ ಆ ರಾಹುವು ಸೂರ್ಯ-ಚಂದ್ರರಲ್ಲಿ ವೈರವನ್ನು ಬೆಳೆಸಿಕೊಂಡ. ಹುಣ್ಣಿಮೆ ಮತ್ತು ಅಮಾವಾಸ್ಯಾಗಳಲ್ಲಿ ಆ ಸೂರ್ಯ-ಚಂದ್ರರ ಮಂಡಲಗಳನ್ನು ಆಚ್ಛಾದಿಸಿ ಸೂರ್ಯ-ಚಂದ್ರರನ್ನು ಇಂದಿಗೂ ಪೀಡಿಸುತ್ತಾನೆ.

ಭಗವಂತ ಜಗಜ್ಜನಕ. ದೇವತೆಗಳಿಗೆಲ್ಲ ಅಮೃತವನ್ನು ಕುಡಿಸಿದ. ಎಲ್ಲರೂ ಅಮೃತವನ್ನು ಕುಡಿದ ಮೇಲೆ ಮೋಹಿನೀ ರೂಪವನ್ನು ಪರಿತ್ಯಜಿಸಿ ವಿಷ್ಣುರೂಪವನ್ನು ಗ್ರಹಿಸಿದ.

ಯದ್ಯಪಿ ದೇವ-ದೈತ್ಯರು ಸಮಾನವಾಗಿ ಪ್ರಯತ್ನ ಮಾಡಿದ್ದರೂ ಭಗವಂತನ ಅನುಗ್ರವನ್ನು ಸಂಪಾದಿಸಿಕೊಂಡಿರುವುದರಿಂದ ದೇವತೆಗಳು ಅಮೃತವನ್ನು ಪಡೆದರು. ಅಜರಾಮರರಾದರು. ದೈತ್ಯರು ಭಗವಂತನ ಅನುಗ್ರಹಕ್ಕೆ ಪಾತ್ರರಾಗಲಿಲ್ಲ. ಆದ್ದರಿಂದ ಅಮೃತದ ಪ್ರಾಪ್ತಿ ದೈತ್ಯರಿಗೆ ಆಗಲಿಲ್ಲ. ಆದ್ದರಿಂದ ಫಲಾಪೇಕ್ಷೆ ಇದ್ದವರು ಭಗವಂತನನ್ನು ಆಶ್ರಯಿಸಲೇ ಬೇಕು.

**॥ ಇತಿ ಶ್ರೀಮದ್ಭಾಗವತೇ ಅಷ್ಟಮಸ್ಕಂಧೇ ಅಷ್ಟಮೋಽಧ್ಯಾಯಃ ॥**

★★★

## ಅಥ ನವಮೋಽಧ್ಯಾಯಃ

ದೇವತೆಗಳಿಗೆ ಮಾತ್ರ ಅಮೃತಪ್ರಾಪ್ತಿಯಾದದ್ದನ್ನು ದೈತ್ಯರು ನೋಡಿದರು. ಅದನ್ನು ಸಹಿಸಲು ದೈತ್ಯರಿಗೆ ಆಗಲಿಲ್ಲ. ಪ್ರಸ್ತುತ ಅಮೃತಪಾನ ಮಾಡಿ ದೇವತೆಗಳೆಲ್ಲ ಬಲಸಂಪನ್ನರಾಗಿದ್ದಾರೆ ಎಂಬುದನ್ನು ಗಮನಿಸಲೇ ಇಲ್ಲ. ಅಸಹನೆಯಿಂದ ಕ್ರುದ್ಧರಾದರು. ಆಯುಧಗಳನ್ನು ಕೈಗೆತ್ತಿಕೊಂಡರು. ದೇವತೆಗಳೊಡನೆ ಯುದ್ಧಕ್ಕಾಗಿ ಸನ್ನದ್ಧರಾದರು.

ದೇವತೆಗಳು ಭಗವಂತನ ವಿಶೇಷವಾದ ಅನುಗ್ರಹಕ್ಕೆ ಪಾತ್ರರಾಗಿದ್ದರು. ಭಗವಂತನನ್ನು ಮನದಲ್ಲಿಯೇ ಸ್ಮರಿಸಿದರು. ದೈತ್ಯರೊಂದಿಗೆ ಯುದ್ಧಕ್ಕೆ ನಿಂತರು. ಆ ಸಮುದ್ರದ ತೀರದಲ್ಲಿಯೇ ಘನಘೋರವಾದ ದೇವಾಸುರ- ನಾಮಕವಾದ ಯುದ್ಧವು ನಡೆಯಿತು.

ಶಂಖ-ತೂರ್ಯ-ಮೃದಂಗ-ಭೇರೀ-ಡಮರು ಮುಂತಾದ ವಾದ್ಯಗಳ ಘೋಷವು, ಆನೆ-ಕುದುರೆ ರಥ ಮತ್ತು ಕಾಲಾಳುಗಳ ಧ್ವನಿಯು ಮುಗಿಲು ಮುಟ್ಟಿತು. ಕಾಲಾಳುಗಳು, ರಥಿಕರು, ಮಹಾರಥಿಗಳು ಪರಸ್ಪರವಾಗಿ ಘೋರವಾದ ಯುದ್ಧವನ್ನು ಮಾಡಿದರು.

ಆ ಯುದ್ಧದಲ್ಲಿ ಬಲಿಚಕ್ರವರ್ತಿಯು ಮಯನಿರ್ಮಿತವಾದ ವೈಹಾಯಸ ನಾಮಕವಾದ ವಿಮಾನವನ್ನು ಏರಿದ. ಇಚ್ಛಾನುಸಾರ ಬೇಕಾದಲ್ಲಿ ಹೋಗುವ ಸಾಮರ್ಥ್ಯ ಹೊಂದಿತ್ತು ಆ ವಿಮಾನ. ಎಲ್ಲ ವಿಧವಾದ ಆಯುಧಗಳಿಂದ ಸಂಪನ್ನವಾಗಿತ್ತು. ಅನುಕೂಲವಾದ ಸಕಲಪದಾರ್ಥಗಳಿಂದ ಯುಕ್ತವಾಗಿತ್ತು.

ನಮುಚಿ, ಶಂಬರ, ಬಲಿಪುತ್ರನಾದ ಬಾಣ, ಬಲಿಯ ತಂದೆಯಾದ ವಿರೋಚನ, ವಿಪ್ರಚಿತ್ತಿ , ಅಯೋಮುಖ, ದ್ವಿಮೂರ್ಧಾ, ಕಾಲನಾಭ, ಪ್ರಹೇತಿ, ಹೇತಿ, ಇಲ್ವಲ, ಶಕುನಿ, ಭೂತಸಂತಾಪ, ವಜ್ರದಂಷ್ಟ್ರ, ಹಯಗ್ರೀವ, ಕಪಿಲ, ಮೇಘದುಂದುಭಿ, ತಾರಕ, ಚಕ್ರದೃಕ್, ಶುಂಭ, ನಿಶುಂಭ, ಜಂಭ, ಉತ್ಕಲ, ಅರಿಷ್ಟ, ಅರಿಷ್ಟನೇಮಿ, ಮಯ ಪೌಲೋಮರು, ಕಾಲೇಯರು, ನಿವಾತಕವಚರು ಮುಂತಾದ ಅಸುರರೆಲ್ಲರೂ ಬಲಿಯ ಸುತ್ತಲೂ ನಿಂತರು.

ಸ್ವರ್ಗಾಧಿಪತಿಯಾದ ಇಂದ್ರನು ಐರಾವತವನ್ನೇರಿ ಯುದ್ಧಕ್ಕೆ ಬಂದನು. ಪ್ರವಹವಾಯು, ಅಗ್ನಿ, ವರುಣ ಮುಂತಾದ ಅನೇಕದೇವತೆಗಳು ಇಂದ್ರನಿಗೆ ಸೇವೆಯನ್ನು ಮಾಡುತ್ತ ನಿಂತರು.

ಇಂದ್ರ-ಬಲಿ, ಸ್ಕಂದ-ತಾರಕ, ವರುಣ-ಹೇತಿ, ಮಿತ್ರನಾಮಕಸೂರ್ಯ-ಪ್ರಹೇತಿ, ಯಮ-ಕಾಲನಾಭ, ವಿಶ್ವಕರ್ಮಾ-ಮಯ, ತ್ವಷ್ಟಾ-ಶಂಬರ, ಸವಿತಾ-ವಿರೋಚನ, ಅಪರಾಜಿತ-ನಮುಚಿ, ಅಶ್ವಿನೀದೇವತೆಗಳು-ವೃಷಪರ್ವ, ಸೂರ್ಯ-ಬಲಿಪುತ್ರರು,

ಚಂದ್ರ-ರಾಹು, ಭೂತವಾಯು-ಪುಲೋಮಾ, ದುರ್ಗಾ-ಶುಂಭ,ನಿಶುಂಭರು, ಕಾಮ-ದುರ್ಮರ್ಷ, ಬ್ರಾಹ್ಮೀ ಮುಂತಾದ ಸಪ್ತಮಾತೃಗಳು-ಉತ್ಕಲ, ಬೃಹಸ್ಪತಿ-ಶುಕ್ರಾಚಾರ್ಯರು, ಶನೈಶ್ಚರ-ನರಕಾಸುರ, ಮರುತ್ತರು-ನಿವಾತಕವಚರು, ಅಷ್ಟವಸುಗಳು-ಕಾಲೇಯರು, ವಿಶ್ವೇದೇವತೆಗಳು-ಪೌಲೋಮರು, ಏಕಾದಶರುದ್ರರು- ಕ್ರೋಧವಶರು ಹೀಗೆ ದೇವ-ದೈತ್ಯರು ವಿಧವಿಧವಾದ ಆಯುಧಗಳನ್ನು ಧರಿಸಿ ಪರಸ್ಪರವಾಗಿ ಯುದ್ಧವನ್ನು ಮಾಡಿದರು.

ಯುದ್ಧಕುಶಲನಾದ ಬಲಿಯು ಇಂದ್ರನೊಂದಿಗೆ ಯುದ್ಧ ಮಾಡಿದ. ಹತ್ತು ಬಾಣಗಳಿಂದ ಇಂದ್ರನನ್ನು, ಮೂರು ಬಾಣಗಳಿಂದ ಐರಾವತವನ್ನು, ನಾಲ್ಕುಬಾಣಗಳಿಂದ ಐರಾವತದ ಕಾಲುಗಳನ್ನು, ಒಂದು ಬಾಣದಿಂದ ಮಾವುತನನ್ನು ಹೊಡೆದ.

ಇಂದ್ರ ಮಹಾಪರಾಕ್ರಮಿ. ಬಲಿಯು ಪ್ರಯೋಗಿಸಿದಷ್ಟೇ ಹದಿನೆಂಟು ಬಾಣಗಳನ್ನು ಪ್ರಯೋಗಿಸಿದ. ಮೇಲೇರಿ ಬರುತ್ತಿರುವ ಬಲಿಯ ಬಾಣಗಳನ್ನು ಮಧ್ಯದಲ್ಲಿಯೇ ಕತ್ತರಿಸಿದ.

ಇಂದ್ರನ ಈ ಪ್ರತಿಕ್ರಿಯೆಯನ್ನು ಸಹಿಸಲು ಬಲಿಗೆ ಆಗಲಿಲ್ಲ. ಶಕ್ತ್ಯಾಯುಧವನ್ನು ಸ್ವೀಕರಿಸಿದ. ಬಲಿಯ ಕೈಯಲ್ಲಿ ಇರುವಾಗಲೇ ಇಂದ್ರನು ಆ ಶಕ್ತ್ಯಾಯುಧವನ್ನೂ ಕತ್ತರಿಸಿಬಿಟ್ಟ.

ನಂತರ ಕ್ರಮವಾಗಿ ಶೂಲ, ಪ್ರಾಸ, ತೋಮರ ಋಷ್ಟಿ ಎಂಬ ಆಯುಧಗಳನ್ನು ಬಲಿಯು ಇಂದ್ರನ ಮೇಲೆ ಪ್ರಯೋಗಿಸಿದ. ಸಮರ್ಥನಾದ ಇಂದ್ರ ಆ ಎಲ್ಲ ಅಸ್ತ್ರಗಳನ್ನೂ ಸುಲಭವಾಗಿ ನಾಶಪಡಿಸಿದ.

ಬಲಿಯು ಸಹನೆಯನ್ನು ಕಳೆದುಕೊಂಡ. ಅಂತರ್ಹಿತನಾದ. ಯಾರಿಗೂ ಕಾಣದೇ ದೇವತೆಗಳ ಸೈನ್ಯದ ಮೇಲೆ ದೊಡ್ಡದಾದ ಪರ್ವತವನ್ನು ಎಸೆದ. ಮೇಲೆರಗಿದ ಆ ಪರ್ವತದಿಂದ ದೇವತೆಗಳೆಲ್ಲರೂ ಸಂತ್ರಸ್ತರಾದರು.

ದೊಡ್ಡದಾದ ಸರ್ಪಗಳು, ಚೇಳುಗಳು, ಸಿಂಹ-ಹುಲಿ-ಕಾಡುಹಂದಿ ಮುಂತಾದ ದುಷ್ಟಪ್ರಾಣಿಗಳು ದೇವತೆಗಳ ಸೈನ್ಯದ ಮೇಲೆ ಎರಗಿದವು. ದೇವಸೈನ್ಯವನ್ನು ಚೆಲ್ಲಾಪಿಲ್ಲಿ ಮಾಡಿದವು.

ದೈತ್ಯರು ಈ ಪ್ರಸಂಗವನ್ನು ತಮಗೆ ಅನುಕೂಲವಾಗುವಂತೆ ಮಾಡಿಕೊಂಡರು. ಆಯುಧಗಳಿಂದ ಸಮೇತರಾಗಿ ದೇವತೆಗಳ ಮೇಲೆ ಏರಿ ಬಂದರು.

ಆಕಾಶದಿಂದ ಕೆಂಡಗಳು ಸುರಿಯಹತ್ತಿದವು. ಕಬ್ಬಿಣದ ವಿಧವಿಧವಾದ ಆಯುಧಗಳು ಕೂಡಾ ಆಕಾಶದಿಂದ ದೇವತೆಗಳ ಸೈನ್ಯದ ಮೇಲೆ ಬಿದ್ದವು.

ಬಲಿಯಿಂದ ಸೃಷ್ಟವಾದ ಈ ಮಾಯೆಯನ್ನು ಎದುರಿಸಲು ದೇವತೆಗಳಿಗೆ ಸಾಧ್ಯವಾಗಲಿಲ್ಲ. ದೇವತೆಗಳ ಸೈನ್ಯವೆಲ್ಲವೂ ಸುಟ್ಟು ಬೂದಿಯಾಯಿತು.

ಹೀಗೆ ದೈತ್ಯನಾದ ಬಲಿಯು ವಿಧವಿಧವಾದ ಮಾಯೆಯನ್ನು ಸೃಷ್ಟಿಸುತ್ತಿರಲು ದೇವತೆಗಳೆಲ್ಲ ನಿರ್ವಿಣ್ಣರಾದರು. ನಿರುಪಾಯರಾಗಿ ಕುಳಿತರು. ದೇವತೆಗಳಲ್ಲರೂ ಭಗವಂತನ ಧ್ಯಾನ ಮಾಡಿದರು. ಭಗವಂತ ಪ್ರತ್ಯಕ್ಷವಾದ. ಪ್ರತ್ಯಕ್ಷವಾದ ಪರಮಾತ್ಮನ ರೂಪವನ್ನು ಕಂಡು ದೇವತೆಗಳು ಸಂತುಷ್ಟರಾದರು.

ಆ ಯುದ್ಧಭೂಮಿಯಲ್ಲಿ ಭಗವಂತ ಪ್ರಕಟವಾಗುತ್ತಲೇ ದೈತ್ಯರ ಮಾಯೆ ಎಲ್ಲವೂ ಧ್ವಸ್ತವಾಯಿತು. ಭಗವಂತನ ಸ್ಮರಣೆಯೇ ಸಕಲ ಆಪತ್ತುಗಳನ್ನು ಪರಿಹರಿಸುತ್ತದೆ. ಸ್ವಯಂ ಪರಮಾತ್ಮನೇ ಪ್ರತ್ಯಕ್ಷವಾದಾಗ ಆಪತ್ತುಗಳು ನಷ್ಟವಾಗುವುದು ಕೈಮುತ್ಯಸಿದ್ಧವಾಗಿದೆ.

ಇದನ್ನು ಕಂಡ ಕಾಲನೇಮಿಯು ತ್ರಿಶೂಲವನ್ನು ಚಕ್ರಧಾರಿಯ ಮೇಲೆ ಪ್ರಯೋಗಿಸಿದ. ಆ ತ್ರಿಶೂಲವನ್ನು ಭಗವಂತ ತನ್ನ ಕೈಯಲ್ಲಿ ಸ್ವೀಕರಿಸಿದ. ಕಾಲನೇಮಿಯು ಪ್ರಯೋಗಿಸಿದ ಆ ತ್ರಿಶೂಲವನ್ನೇ ಭಗವಂತ ಕಾಲನೇಮಿಯ ಮೇಲೆ ಪ್ರಯೋಗಿಸಿದ. ಕೂಡಲೇ ಕಾಲನೇಮಿಯು ಮೃತನಾದ.

ಈ ಕಾಲನೇಮಿ ಮುಂತಾದ ಅಸುರರನ್ನು ಭಗವಂತ ವೈವಸ್ವತಮನ್ವಂತರದ ಸಮುದ್ರಮಥನಕಾಲದಲ್ಲಿಯೇ ಸಂಹರಿಸಿದ್ದ. ಮೃತರಾದ ಆ ಎಲ್ಲ ಅಸುರರನ್ನೂ ಮೃತಸಂಜೀವಿನೀ ವಿದ್ಯೆಯಿಂದ ಶುಕ್ರಾಚಾರ್ಯರು ಬದುಕಿಸಿದ್ದರು. ಮತ್ತೆ ಪರಮಾತ್ಮನೇ ಆ ದೈತ್ಯರನ್ನು ಸಂಹರಿಸಿದ.

ಭಗವಂತ ಚಕ್ರದಿಂದ ಮಾಲೀ ಸುಮಾಲೀ ಎಂಬ ಅತಿಬಲಿಷ್ಠರಾದ ದೈತ್ಯರನ್ನು ಸಂಹರಿಸಿದ. ಆವಾಗ ಮಾಲ್ಯವಾನ್ ಎಂಬ ಅಸುರನು ತೀಕ್ಷ್ಣವಾದ ಗದೆಯನ್ನು ಗರುಡನ ಮೇಲೆ ಮತ್ತು ಶ್ರೀಹರಿಯ ಮೇಲೆ ಪ್ರಯೋಗಿಸಿದ. ಭಗವಂತ ತನ್ನ ಚಕ್ರವನ್ನು ಪ್ರಯೋಗಿಸಿ ಆ ಮಾಲ್ಯವಂತನ ತಲೆಯನ್ನು ಕಡಿದು ಹಾಕಿದ.

**॥ಇತಿ ಶ್ರೀಮದ್ಭಾಗವತೇ ಅಷ್ಟಮಸ್ಕಂಧೇ ನವಮೋಽಧ್ಯಾಯಃ ॥**

★★★

# ಅಥ ದಶಮೋऽಧ್ಯಾಯಃ

ಶ್ರೀಹರಿಯು ರಣರಂಗವನ್ನು ಪ್ರವೇಶ ಮಾಡಿ, ಕಾಲನೇಮಿ ಮುಂತಾದ ಅಸುರರನ್ನು ಸಂಹರಿಸಿದ. ನಂತರ ಇಂದ್ರ ಮೊದಲಾದ ದೇವತೆಗಳು ಭಗವಂತನಿಂದ ಅನುಕಂಪಿತರಾಗಿ ಬಲವನ್ನು ಪಡೆದರು. ಮತ್ತೆ ಯುದ್ಧ ಮಾಡಲು ಸನ್ನದ್ಧರಾದರು. ಮೊದಲಿನಂತೆಯೇ ದ್ವಂದ್ವಯುದ್ಧಗಳನ್ನು ಮಾಡಿದರು.

ಬಲಿ-ಇಂದ್ರರು ಯುದ್ಧವನ್ನು ಪ್ರಾರಂಭಿಸಿದರು. ಬಲಿಯನ್ನು ಸಂಹರಿಸಲು ವಜ್ರಾಯುಧವನ್ನು ಇಂದ್ರ ಸ್ವೀಕರಿಸಿದ. ಅದನ್ನು ಕಂಡು ಎಲ್ಲ ದೈತ್ಯರೂ ಹಾಹಾಕಾರ ಮಾಡಿದರು.

ಇಂದ್ರ ವಜ್ರಾಯುಧವನ್ನು ಬಲಿಯ ಮೇಲೆ ಪ್ರಯೋಗ ಮಾಡಿದ. ವಿಮಾನಸಮೇತನಾಗಿ ಬಲಿಯು ಭೂಮಿಯಲ್ಲಿ ಬಿದ್ದ. ಬಲಿಯ ಗೆಳೆಯನಾದ ಜಂಭಾಸುರ ಇಂದ್ರನನ್ನು ಎದುರಿಸಲು ಬಂದ.

ಸಿಂಹರಥನಾದ ಆ ಜಂಭಾಸುರನು ವೇಗವಾಗಿ ಗದೆಯನ್ನು ಇಂದ್ರನ ಮೇಲೆ ಪ್ರಯೋಗಿಸಿದ. ಗದೆಯ ಪ್ರಹಾರದಿಂದ ಆನೆಯು ವ್ಯಥೆಗೆ ಒಳಗಾಯಿತು. ಮೊಣಕಾಲುಗಳಿಂದ ನೆಲಕ್ಕೆ ಒರಗಿ ಮೂರ್ಛಿತವಾಯಿತು. ಸಂತ್ರಸ್ತವಾದ ಆನೆಯನ್ನು ಪರಿತ್ಯಜಿಸಿದ ಇಂದ್ರ. ಆ ಪ್ರಸಂಗದಲ್ಲಿ ಮಾತಲಿಯು ತಂದಿರುವ ರಥವನ್ನು ಏರಿದ.

ಮಾತಲಿಯ ಈ ಕಾರ್ಯವನ್ನು ಜಂಭಾಸುರ ಪ್ರಶಂಸಿಸಿದ. ಆ ಮಾತಲಿಯ ಮೇಲೆ ಶೂಲವನ್ನು ಪ್ರಯೋಗಿಸಿದ. ಬಲಿಷ್ಠನಾದ ಆ ಮಾತಲಿಯು ತನ್ನ ಶಾರೀರಿಕವಾದ ಬಲದಿಂದ ಆ ಶೂಲದ ಘಾತವನ್ನು ಸಹಿಸಿಕೊಂಡ. ಜಂಭಾಸುರನ ಈ ಕಾರ್ಯದಿಂದ ಇಂದ್ರ ಸಂಕ್ರುದ್ಧನಾದ. ವಜ್ರಾಯುಧವನ್ನು ಜಂಭಾಸುರನ ಮೇಲೆ ಪ್ರಯೋಗಿಸಿ ಅವನ ರುಂಡವನ್ನು ಕತ್ತರಿಸಿದ.

ಜಂಭಾಸುರನು ಮೃತನಾದ ವಾರ್ತೆಯನ್ನು ನಾರದರಿಂದ ಕೇಳಿದ ನಮುಚಿ, ಬಲ ಮತ್ತು ಪಾಕ ಎಂಬ ಅಸುರರು ಕ್ರುದ್ಧರಾದರು. ಬಿರುನುಡಿಗಳಿಂದ ಇಂದ್ರನನ್ನು ನಿಂದಿಸಿದರು. ಶರಧಾರೆಗಳಿಂದ ಇಂದ್ರನನ್ನು ಪೀಡಿಸಿದರು.

ಬಲನು ಏಕಕಾಲದಲ್ಲಿ ಸಾವಿರ ಬಾಣಗಳನ್ನು ಪ್ರಯೋಗಿಸಿ ಇಂದ್ರನ ಸಾವಿರ ಕುದುರೆಗಳನ್ನು ಪೀಡಿಸಿದ.

ಪಾಕಾಸುರನು ತನ್ನ ಬಿಲ್ಲಿನಲ್ಲಿ ಎರಡು ನೂರು ಬಾಣಗಳನ್ನು ಸಂಧಾನ ಮಾಡಿದ. ಅವುಗಳಲ್ಲಿಯ ನೂರು ಬಾಣಗಳು ಮಾತಲಿಯನ್ನು ಹಿಂಸಿಸಿದವು. ಮತ್ತೆ ನೂರು ಬಾಣಗಳು ರಥವನ್ನು ಸುತ್ತುಮುತ್ತಿದವು. ಪಾಕಾಸುರನ ಈ ಯುದ್ಧವೈಖರಿಯು ಎಲ್ಲರನ್ನೂ ಆಶ್ಚರ್ಯಗೊಳಿಸಿತು.

ನಮುಚಿಯು ಹದಿನೈದು ಬಾಣಗಳಿಂದ ಇಂದ್ರನನ್ನು ಹೊಡೆದು, ಸಿಂಹನಾದ ಮಾಡುತ್ತ ನಿಂತ. ಹೀಗೆ ಈ ಅಸುರರು ಪ್ರಯೋಗ ಮಾಡಿದ ಬಾಣಗಳು ಇಂದ್ರನನ್ನು ಮುತ್ತಿದವು. ಇಂದ್ರನನ್ನು ಕಾಣದಂತೆ ಮಾಡಿದವು.

ದೇವತೆಗಳಿಗೆ ಇಂದ್ರ ಕಾಣದಾದ. ನಾಯಕನ ಅದರ್ಶನದಿಂದ ದೇವತೆಗಳೆಲ್ಲ ವಿಹ್ವಲಗೊಂಡರು. ಅನಾಥರಾಗಿ ಜೋರಾಗಿ ಕೂಗಿಕೊಂಡರು. ಸರ್ವಸಮರ್ಥನಾದ ಇಂದ್ರ ದೇವತೆಗಳ ಕೂಗನ್ನು ಕೇಳಿಸಿಕೊಂಡ. ಅಸುರರು ಪ್ರಯೋಗಿಸಿದ ಶರಪಂಜರವನ್ನು ಸೀಳಿಹಾಕಿದ. ಎಲ್ಲರಿಗೆ ಕಾಣಿಸಿಕೊಂಡ. ಎಲ್ಲ ದೇವತೆಗಳಲ್ಲಿ ಮತ್ತೆ ಧೈರ್ಯವನ್ನು ತುಂಬಿದ.

ಕ್ಷಣದಲ್ಲಿಯೇ ದೈತ್ಯರ ವಶವಾದ ತಮ್ಮ ಸೈನ್ಯವನ್ನು ನೋಡಿದ. ಇಂದ್ರ. ತಮ್ಮ ಶತ್ರುಗಳನ್ನು ಸಂಹರಿಸಲು ವಜ್ರಾಯುಧವನ್ನು ಕೈಗೆತ್ತಿಕೊಂಡ. ಬಲ-ಪಾಕರ ತಲೆಗಳನ್ನು ತುಂಡರಿಸಿದ. ದೈತ್ಯರಲ್ಲಿ ಭಯವನ್ನು ಹುಟ್ಟಿಸಿದ.

ಬಲ-ಪಾಕರ ಮರಣದಿಂದ ನಮುಚಿಯು ಸಿಡಿದು ನಿಂತ. ದುಃಖ, ಅಸಹನೆ, ಸಿಟ್ಟಿನಿಂದ ಇಂದ್ರನ ಮೇಲೇರಿ ಬಂದ. ಇಂದ್ರನನ್ನು ಸಂಹರಿಸಲು ಪ್ರಯತ್ನ ಮಾಡಿದ. ಘಂಟೆಗಳಿಂದ ಅಲಂಕೃತವಾದ, ಬಂಗಾರದಿಂದ ಶೋಭಾಯಮಾನವಾದ ಕಬ್ಬಿಣದ ಶೂಲವನ್ನು ಹಿಡಿದು ಓಡಿ ಬಂದ. ಇಂದ್ರನ ಮೇಲೆ ಎರಗಿದ. ಇಂದ್ರನ ಮೇಲೆ ಎಸೆದ. ಈ ಎಸೆತದಿಂದ ಇಂದ್ರನು ಸತ್ತೇ ಹೋಗುವನೆಂದು ಭಾವಿಸಿದ.

ಆಕಾಶದಲ್ಲಿ ವೇಗವಾಗಿ ಬರುತ್ತಿದ್ದ ಆ ಶೂಲವನ್ನು ಇಂದ್ರದೇವರು ನೋಡಿದರು. ಬಾಣಗಳಿಂದ ಆ ಶೂಲವನ್ನು ಸಾವಿರ ಚೂರಾಗುವಂತೆ ಕತ್ತರಿಸಿದರು. ನಂತರ ವಜ್ರಾಯುಧವನ್ನು ಪ್ರಯೋಗಿಸಿದರು. ಆದರೆ ಆ ವಜ್ರಾಯುಧವು ನಮುಚಿಯ ಕುತ್ತಿಗೆಯ ಚರ್ಮವನ್ನೂ ಛೇದಿಸಲಿಲ್ಲ. ನೋಡುವ ಎಲ್ಲರಿಗೂ ಆಶ್ಚರ್ಯವೆನಿಸಿತು.

ಸ್ವಯಂ ಇಂದ್ರದೇವರೂ ಚಿಂತಾಕ್ರಾಂತರಾದರು. ವಜ್ರಾಯುಧದ ಈ ವಿಧವಾದ ವೈಫಲ್ಯವನ್ನು ಇಂದ್ರದೇವರು ಕಂಡಿರಲೇ ಇಲ್ಲ. ವೃತ್ರನನ್ನು ಸಂಹರಿಸಿದ ವಜ್ರಾಯುಧ ಅದು. ಪರ್ವತಗಳ ರೆಕ್ಕೆಗಳನ್ನು ಕತ್ತರಿಸಿದ ವಜ್ರಾಯುಧ. ದಧೀಚಿಋಷಿಗಳ ತಪಸ್ಸಿನ ಸಾರ ವಜ್ರಾಯುಧ. ಇಷ್ಟು ಸಮರ್ಥವಾದ ಈ ವಜ್ರಾಯುಧ ಇವತ್ತು ಕಟ್ಟಿಗೆಯಂತೆ ವ್ಯರ್ಥವಾಗಿದೆ. ಇವತ್ತು ಯಾಕೆ ಹೀಗಾಯಿತೆಂದು ಇಂದ್ರದೇವರು ಚಿಂತಾಕ್ರಾಂತರಾದರು.

ಹೀಗೆ ಚಿಂತಾಕ್ರಾಂತರಾದ ಇಂದ್ರದೇವರಿಗೆ ಅಶರೀರವಾಣಿಯು ಕೇಳಿಸಿತು. ದಾನವನಾದ ಈ ನಮುಚಿಯು ಒಣಗಿಣ, ಹಸಿಯಾದ ಯಾವುದೇ ಪದಾರ್ಥಗಳಿಂದ ಸಂಹೃತನಾಗಲಾರ. ಈ ವಿಧವಾದ ವರಬಲದಿಂದ ನಮುಚಿಯು ಸಂಪನ್ನನಾಗಿದ್ದಾನೆ. ಆದ್ದರಿಂದ ನಮುಚಿಯ ಸಂಹಾರಕ್ಕೆ ಬೇರೇ ರೀತಿಯಾದ ಉಪಾಯವನ್ನು ಚಿಂತಿಸಬೇಕು.

ಈ ಆಕಾಶವಾಣಿಯನ್ನು ಕೇಳಿಸಿಕೊಂಡ ಇಂದ್ರನು ಏಕಾಗ್ರಮನಸ್ಕನಾದ. ಉಪಾಯವನ್ನು ಚಿಂತಿಸಿದ. ಒಣಗಿದ್ದೂ ಅಲ್ಲದ ಹಸಿಯೂ ಆಗದ ಪದಾರ್ಥ ಯಾವುದೆಂದು ವಿಚಾರಿಸಿದ. ನೊರೆಯು ಅಂಥ ಪದಾರ್ಥವೆಂದು ತಿಳಿದುಕೊಂಡ. ಆ ನೊರೆಯಿಂದ ನಮುಚಿಯ ತಲೆಯನ್ನು ಕತ್ತರಿಸಿಹಾಕಿದ.

ಋಷಿಮುನಿಗಳು ಇಂದ್ರನ ಈ ಕಾರ್ಯದಿಂದ ಸಂತುಷ್ಟರಾದರು. ಇಂದ್ರನನ್ನು ಸ್ತುತಿಸಿದರು. ಇಂದ್ರನ ಮೇಲೆ ಹೂಮಳೆಯಾಯಿತು. ಗಂಧರ್ವರಾದ ವಿಶ್ವಾವಸು-ಪರಾವಸುಗಳು ಗಾನ ಮಾಡಿದರು. ಅಪ್ಸರಾಸ್ತ್ರೀಯರು ಸಂತೋಷದಿಂದ ನರ್ತನ ಮಾಡಿದರು. ದೇವದುಂದುಭಿಗಳು ಮೊಳಗಿದವು.

ನಂತರ ವಾಯು-ಅಗ್ನಿ-ವರುಣ ಮುಂತಾದ ದೇವತೆಗಳೂ ತಮ್ಮ ತಮ್ಮ ಶತ್ರುಗಳನ್ನು ಸಂಹರಿಸಿದರು. ದೈತ್ಯರೆಲ್ಲರೂ ನಷ್ಟರಾದರು. ಆ ಸಂದರ್ಭದಲ್ಲಿ ಬ್ರಹ್ಮದೇವರಿಂದ ಆಜ್ಞಪ್ತರಾಗಿ ನಾರದರು ಬಂದರು. ದೇವತೆಗಳನ್ನು ಕುರಿತು ಹೀಗೆ ಹೇಳಿದರು.

ಹೇ ದೇವತೆಗಳೇ! ನೀವು ಶ್ರೀಹರಿಯನ್ನು ಆಶ್ರಯಿಸಿ ಅಮೃತವನ್ನು ಪಡೆದಿರುವಿರಿ. ನಿಮ್ಮ ನಿಮ್ಮ ಸಂಪತ್ತಿನಿಂದ ಮತ್ತೆ ಭರಿತರಾಗಿರುವಿರಿ. ಆದ್ದರಿಂದ ಹೆಚ್ಚಿನ ದೈತ್ಯಸಂಕ್ಷಯವನ್ನು ಮಾಡುವುದು ಬೇಡ. ಯುದ್ಧವನ್ನು ಇಲ್ಲಿಗೇ ನಿಲ್ಲಿಸಿರಿ. ಇದು ಬ್ರಹ್ಮದೇವರ ಆಜ್ಞೆ ಎಂದು ಹೇಳಿದರು.

ಬ್ರಹ್ಮದೇವರ ಆಜ್ಞೆ ಎಂಬುದನ್ನು ಕೇಳುತ್ತಲೇ ದೇವತೆಗಳು ತಮಗೆ ಬರುತ್ತಿರುವ ಕೋಪವನ್ನು ತಡೆದುಕೊಂಡರು. ಯುದ್ಧವನ್ನು ಸಾಕು ಮಾಡಿದರು. ತಮ್ಮ ತಮ್ಮ ಲೋಕಗಳಿಗೆ ತೆರಳಿದರು.

ಆ ಯುದ್ಧದಲ್ಲಿ ಅಳಿದು ಉಳಿದ ದೈತ್ಯರೆಲ್ಲರೂ ತಮ್ಮ ರಾಜನಾದ, ಆಪತ್ತಿಗೀಡಾದ, ಬಲಿಯನ್ನು ತೆಗೆದುಕೊಂಡು ಶುಕ್ರಾಚಾರ್ಯರ ಬಳಿಗೆ ತೆರಳಿದರು.

ಆ ಶುಕ್ರಾಚಾರ್ಯರು ಮತ್ತೆ ತಮ್ಮಲ್ಲಿಯ ಮೃತಸಂಜೀವಿನೀ ವಿದ್ಯೆಯಿಂದ ಎಲ್ಲ ದೈತ್ಯರನ್ನು ಬದುಕಿಸಿದರು. ತಮ್ಮ ಶಿಷ್ಯನಾದ ಬಲಿಯನ್ನು ಶುಕ್ರಾಚಾರ್ಯರು ಸ್ಪರ್ಶ ಮಾಡಿದರು. ಶುಕ್ರಾಚಾರ್ಯರ ಸ್ಪರ್ಶಮಾತ್ರದಿಂದಲೇ ಬಲಿಯು ಎದ್ದು ಕುಳಿತ. ಸಬಲನಾದ. ಈ ಪ್ರಪಂಚವೆಲ್ಲವೂ ಭಗವಂತನಿಂದಲೇ ನಿಯಮಿತವಾಗಿದೆ ಎಂದು ತಿಳಿದ. ತಾನು ಸೋತರೂ ಆ ಸೋಲಿನಿಂದ ದುಃಖಿತನಾಗಲಿಲ್ಲ. ನಮ್ಮ ಪ್ರಾರಬ್ಧಕ್ಕೆ ಅನುಗುಣವಾಗಿ ಜಯಾಪಜಯಗಳಿಂದ ಮನುಷ್ಯ ಯುಕ್ತನಾಗುತ್ತಾನೆ. ಅವುಗಳಿಂದ ಮನುಷ್ಯ ಹಿಗ್ಗಬಾರದು. ಕುಗ್ಗಬಾರದು ಎಂದು ತಿಳಿದ. ದುಃಖವಿರಹಿತನಾದ.

**॥ ಇತಿ ಶ್ರೀಮದ್ಭಾಗವತೇ ಅಷ್ಟಮಸ್ಕಂಧೇ ದಶಮೋಽಧ್ಯಾಯಃ ॥**

★★★

## ಅಥ ಏಕಾದಶೋಽಧ್ಯಾಯಃ

ಭಗವಂತ ಮೋಹಿನೀರೂಪವನ್ನು ತಾಳಿ ದೈತ್ಯರನ್ನು ಮೋಹಿಸಿದ. ಎಲ್ಲ ದೇವತೆಗಳಿಗೆ ಅಮೃತವನ್ನು ಉಣಿಸಿದ. ಈ ವೃತ್ತಾಂತವನ್ನು ರುದ್ರದೇವರು ಕೇಳಿದರು. ಮೋಹಿನಿಯ ಸೌಂದರ್ಯದ ವಿಚಾರವನ್ನು ಕೇಳುತ್ತಲೇ ಆ ರೂಪವನ್ನು ನೋಡಲೇ ಬೇಕೆಂದು ಆಗ್ರಹಕ್ಕೆ ಒಳಗಾದರು. ಪಾರ್ವತೀಸಮೇತರಾಗಿ ಭೂತಗಣದ ಪರಿವಾರದೊಂದಿಗೆ ವೈಕುಂಠಕ್ಕೆ ಹೊರಟರು.

ವೈಕುಂಠಕ್ಕೆ ಬಂದಿರುವ ಗಿರಿಶನನ್ನು ಭಗವಂತ ನೋಡಿದ. ಯಥಾಯೋಗ್ಯ ಉಪಚಾರಗಳಿಂದ ಗೌರವಿಸಿದ. ಮುಗುಳುನಕ್ಕ. ಏನಾಗಬೇಕೆಂದು ಕೇಳಿದ.

ರುದ್ರದೇವರು ಭಗವಂತನಿಗೆ ಸಾಷ್ಟಾಂಗವೆರಗಿದರು. ಮೋಹಿನೀರೂಪವನ್ನು ನೋಡಬೇಕೆಂಬ ತಮ್ಮ ಮನದಾಸೆಯನ್ನು ಭಗವಂತನ ಮುಂದೆ ತೋಡಿಕೊಂಡರು. ಭಗವಂತನನ್ನು ಪ್ರಾರ್ಥಿಸಿದರು. ಮೋಹಿನೀರೂಪದ ದರ್ಶನಕ್ಕಾಗಿ ದೇವರನ್ನು ಸ್ತುತಿಸಿದರು.

ನಾವೆಲ್ಲರೂ ಆ ರೂಪವನ್ನು ನೋಡಲು ಕಾತರರಾಗಿದ್ದೇವೆ. ಅದಕ್ಕಾಗಿಯೇ ನಿನ್ನನ್ನು ಸ್ತುತಿಸಿದ್ದೇವೆ. ಪ್ರಸನ್ನನಾದ ನೀನು ಆ ರೂಪವನ್ನು ತೋರಿಸು ನಮ್ಮನ್ನು ಉದ್ಧರಿಸು. ರುದ್ರದೇವರ ಮಾತನ್ನು ಕೇಳಿದರು. ಪ್ರತಿಯಾಗಿ ಭಗವಂತ ನುಡಿದ.

ಅಮೃತಕಲಶವನ್ನು ಧರಿಸಿ ಧನ್ವಂತರಿಯಾಗಿ ನಾನು ಅವತರಿಸಿದೆ. ನನ್ನ ಕೈಯಲ್ಲಿಯ ಅಮೃತಕಲಶವನ್ನು ದೈತ್ಯರು ಅಪಹರಿಸಿದರು. ದೇವತೆಗಳೆಲ್ಲ ನಿಸ್ಸತ್ವರಾಗಿ ಕುಳಿತಾಗ ನಾನು ಮೋಹಿನೀರೂಪವನ್ನು ಧರಿಸಿದೆ. ದೈತ್ಯರನ್ನು ಮೋಹಗೊಳಿಸಿದೆ. ದೇವತೆಗಳಿಗೆ ಅಮೃತವನ್ನು ಉಣಬಡಿಸಿದೆ.

ನೀನು ಇಂದ್ರಾದಿದೇವತೆಗಳಿಗಿಂತಲೂ ಉತ್ತಮನಾಗಿರುವಿ. ನನ್ನ ಮೋಹಿನೀ ರೂಪವನ್ನು ನೋಡಲು ಉತ್ಸುಕನಾಗಿರುವಿ. ನಿನ್ನ ಸ್ತುತಿಯಿಂದ ಅನುಗ್ರಹೋನ್ಮುಖನಾಗಿ ಆ ರೂಪವನ್ನು ತೋರಿಸುತ್ತೇನೆ. ಆ ರೂಪವು ಅಕಾಮುಕರಿಗೂ ಕಾಮನೆಯನ್ನು ಹುಟ್ಟಿಸುತ್ತದೆ. ಭಗವಂತ ಹೀಗೆ ಹೇಳುತ್ತಲೇ ಅಂತರ್ಹಿತನಾದ. ರುದ್ರದೇವರು ತನ್ನ ಕಣ್ಣುಗಳಿಂದ ಸುತ್ತಲೂ ನೋಡಿದರು. ಎಲ್ಲಿಯೂ ದೇವರು ಕಾಣಲೇ ಇಲ್ಲ. ದೇವರ ಮಾಯೆಯನ್ನು ತಿಳಿಯದಾದರು.

ಸ್ವಲ್ಪ ಹೊತ್ತು ಕಳೆಯಿತು. ಸಮೀಪದಲ್ಲಿಯೇ ಸುಂದರವಾದ ವನ ಒಂದಿತ್ತು. ಆ ವನಕ್ಕಿಂತಲೂ ಸುಂದರವಾದ ಕನ್ಯೆಯೊಬ್ಬಳು ಅಲ್ಲಿ ಕಂಡಳು. ಚೆಂಡಾಟದಲ್ಲಿ ತೊಡಗಿದ ಆ ಕನ್ಯೆಯನ್ನು ರುದ್ರದೇವರು ನೋಡಿದರು. ಅವಳ ಸೌಂದರ್ಯದಿಂದ ರುದ್ರದೇವರು ಮೋಹಿತರಾದರು. ಕಾಮಪೀಡಿತರಾದರು. ಎಲ್ಲವನ್ನೂ, ಎಲ್ಲರನ್ನೂ ಮರೆತರು.

ದೂರ ಹೋಗುತ್ತಿರುವ ಚೆಂಡನ್ನು ಬೆನ್ನುಹತ್ತಿ ಆ ಕನ್ಯೆಯು ಹೊರಟಳು. ಆ ವೇಗಕ್ಕೆ ಅವಳು ಉಟ್ಟಿದ್ದ ವಸ್ತ್ರ ಗಾಳಿಗೆ ಹಾರಿಹೋಯಿತು. ಆ ಸ್ತ್ರೀ ಬೆತ್ತಲೆಯಾದಳು.

ರುದ್ರದೇವರು ತನ್ನನ್ನು ನೋಡುತ್ತಿದ್ದಾರೆಂದು ತಿಳಿದ ಆ ಮಹಿಳೆ ನಾಚಿದಳು. ಆ ಮಹಿಳೆಯನ್ನು ಹಿಡಿಯಬೇಕೆಂದು ರುದ್ರದೇವರು ಓಡಿಹೋದರು. ತಾನಿದ್ದಲ್ಲಿ ಬರುತ್ತಿದ್ದ ರುದ್ರದೇವರನ್ನು ನೋಡಿ ಆ ಹೆಣ್ಣು ಓಡಿಹೋದಳು. ರುದ್ರದೇವರಿಂದ ತಪ್ಪಿಸಿಕೊಳ್ಳುತ್ತಾ ವೃಕ್ಷಗಳ ಹಿಂದೆ ಅಡಗಿಕೊಂಡಳು. ಆದರೂ ರುದ್ರದೇವರು ಓಡೋಡಿ ಬರುತ್ತಾ ಅವಳ ಕೇಶಗಳನ್ನು ಹಿಡಿದು ಎಳೆದರು. ಗಟ್ಟಿಯಾಗಿ ತಬ್ಬಿಕೊಂಡರು.

ನಿತ್ಯಮುಕ್ತನಾದ ಪರಮಾತ್ಮ ರುದ್ರದೇವರ ಬಾಹುಬಂಧನದಿಂದ ಮುಕ್ತನಾದ. ಮತ್ತೆ ಓಡಿಹೋದಳು. ಅವಳನ್ನು ಅನುಸರಿಸಿ ಓಡುತ್ತಿರುವ ಕಾಮಪೀಡಿತರಾದ ರುದ್ರದೇವರ ವೀರ್ಯವು ಸ್ಖಲಿತವಾಯಿತು. ಭೂಮಿಯಲ್ಲಿ ಬಿದ್ದಿತು. ಆ ವೀರ್ಯವು ಎಲ್ಲೆಲ್ಲಿ ಬಿದ್ದಿತೋ ಅವೆಲ್ಲವೂ ರುದ್ರಕ್ಷೇತ್ರಗಳಾದವು. ಮತ್ತು ಬಂಗಾರದ ಗಣಿಗಳಾದವು. ಆ ಎಲ್ಲ ಕಡೆಗೂ ರುದ್ರದೇವರು ಸನ್ನಿಹಿತರಾದರು. ಋಷಿ-ಮುನಿಗಳೆಲ್ಲ ಆ ಕ್ಷೇತ್ರಗಳನ್ನು ಆಶ್ರಯಿಸಿ ಸಾಧನದಲ್ಲಿ ತೊಡಗಿಕೊಂಡರು.

ವೀರ್ಯಸ್ಖಲನವಾಗುತ್ತಲೇ ರುದ್ರದೇವರು ಎಚ್ಚರಗೊಂಡರು. ಭಗವಂತನ ಮಾಯೆಯಿಂದ ತಾವು ಮೈಥುನೇಚ್ಛೆಗೆ ಒಳಗಾಗಿದ್ದೇನೆಂದು ತಿಳಿದರು. ಮೈಥುನೇಚ್ಛೆಯಿಂದ ನಿವೃತ್ತರಾದರು.

ನಾರಾಯಣಿಯನ್ನು ಹಿಂಬಾಲಿಸುವುದನ್ನು ಬಿಟ್ಟು ಸುಮ್ಮನೆ ಕುಳಿತರು. ವೀರ್ಯಸ್ಖಲನವಾದ ಮೇಲೆ ಬುದ್ಧಿಭ್ರಂಶಕ್ಕೆ ಕಾರಣವಾದ ಪರದಾರಾನುಗಮನ ಮಾಡಬೇಕೆಂಬ ಕಲ್ಮಶದಿಂದ ಮುಕ್ತರಾದರು. ಅಪರಿಮಿತಮಹಿಮನಾದ ಪರಮಾತ್ಮನ ಮಹಿಮೆಯನ್ನು ತಿಳಿದರು.

ರುದ್ರದೇವರು ಹೀಗೆ ಕಲ್ಮಶವನ್ನು ಕಳೆದುಕೊಂಡ ನಂತರ ಪರಮಾತ್ಮ ತನ್ನ ರೂಪವನ್ನು ರುದ್ರದೇವರಿಗೆ ತೋರಿಸಿದ. ರುದ್ರದೇವರಿಗೆ ಹೇಳಿದ.

ಹೇ ರುದ್ರನೇ! ನನ್ನ ಈ ಮಾಯೆಗೆ ಎಲ್ಲರೂ ಸಿಲುಕುತ್ತಾರೆ. ಯಾರು ನನ್ನ ಅನುಗ್ರಹಕ್ಕೆ ಪಾತ್ರರಾದವರು ಮಾತ್ರ ಈ ಮಾಯೆಯನ್ನು ದಾಟುತ್ತಾರೆ. ಅನುಗ್ರಹಪಾತ್ರರಾಗದವರು ಮಾಯೆಯನ್ನು ಗೆಲ್ಲಲಾರರು. ಆ ಮಾಯೆಯಿಂದ ಬದ್ಧರಾಗಿ, ಮೋಹದಲ್ಲಿ ಸಿಲುಕುತ್ತಾರೆ. ಅನರ್ಥವನ್ನು ಹೊಂದುತ್ತಾರೆ.

ನೀನು ನನ್ನ ಭಕ್ತನಾಗಿರುವಿ. ನನ್ನ ಅನುಗ್ರಹಕ್ಕೆ ಪಾತ್ರನಾಗಿರುವಿ. ಆದ್ದರಿಂದ ಈ ಮಾಯೆಗೆ ಸಿಲುಕಿದರೂ ಸುಲಭವಾಗಿ ಇದನ್ನು ದಾಟಿರುವಿ.

ಶ್ರೀವತ್ಸಾಂಕಿತನಾದ ಪರಮಾತ್ಮ ಹೀಗೆ ಹೇಳಿ ರುದ್ರದೇವರನ್ನು ಸಮಾಧಾನ ಪಡಿಸಿದ. ಭಗವಂತನ ಮಹಿಮೆಯನ್ನು ಸಮಗ್ರವಾಗಿ ತಿಳಿಯಲಾರದೇ ಆಶ್ಚರ್ಯಚಕಿತರಾದರು ರುದ್ರದೇವರು. ಭಗವಂತನಿಗೆ ಪ್ರದಕ್ಷಿಣೆ-ನಮಸ್ಕಾರಗಳನ್ನು ಹಾಕಿದರು. ತಮ್ಮ ಗಣದೊಡನೆ, ಪಾರ್ವತಿಯೊಡನೆ ಮತ್ತೆ ತಮ್ಮ ವಾಸವಾದ ಕೈಲಾಸಕ್ಕೆ ತೆರಳಿದರು.

ರುದ್ರದೇವರು ಪಾರ್ವತಿಯನ್ನು ಮುಂದೆ ಕೂಡಿಸಿಕೊಂಡು ಮಾಯಾನಾರಾಯಣೀ ರೂಪವನ್ನು ಸ್ತೋತ್ರಮಾಡಿದರು. ಹೇ ಪಾರ್ವತೀ ಭಗವಂತನ ಮಾಯಾರೂಪವನ್ನು ನೀನು ಕಂಡಿಯಲ್ಲವೇ? ಅದೆಂಥ ರೂಪ. ಕಾಮನನ್ನು ಗೆದ್ದಿರುವ ನಾನೇ ಆ ರೂಪದಿಂದ ಮೋಹಿತನಾಗಿರುವಾಗ ಉಳಿದವರ ಪಾಡೇನು? ಅಹೋ! ಭಗವಂತನ ಶಕ್ತಿ ಅಚಿಂತ್ಯ. ನಾನು ನಿರಂತರ ಯಾರ ತಪಸ್ಸಿನಲ್ಲಿ ತೊಡಗಿ ಸುಖಿಸುತ್ತ ಇರುವೆನೋ ಆ ಪರಮಾತ್ಮನೇ ಮೋಹಿನೀರೂಪವನ್ನು ತೋರಿಸಿದ್ದಾನೆ. ಆ ಮಾಯಾಜಾಲದಲ್ಲಿ ಸಿಲುಕದಂತೆ ನನ್ನನ್ನು ಅನುಗ್ರಹಿಸಿದ್ದಾನೆ. ಅವನ ಕರುಣೆಗೆ ಪ್ರತಿಯಾಗಿ ಏನೂ ಮಾಡಲಾರೆವು.

ಚಾಕ್ಷುಷಮನ್ವಂತರದಲ್ಲಿ ಅವತರಿಸಿದ ಅಜಿತನಾಮಕನಾದ ಪರಮಾತ್ಮನ ಮಂದರೋದ್ಧರಣಾದಿ ವಿಕ್ರಮಗಳು ಹೀಗೆ ಇವೆ.

ಹೇ ಪರೀಕ್ಷಿತನೇ! ಅಜಿತನಾಮಕನಾದ ಪರಮಾತ್ಮನ ಮಹಿಮೆಯನ್ನು ನಿನಗೆ ಉಪದೇಶ ಮಾಡಿದ್ದೇನೆ. ಭಗವಂತನ ಗುಣಗಳ ಕೀರ್ತನೆ ಸಕಲವಿಧವಾದ ಸಾಂಸಾರಿಕದುಃಖಗಳನ್ನು ದೂರ ಓಡಿಸುತ್ತದೆ. ಸಾಂಸಾರಿಕಶ್ರಮವನ್ನು ಪರಿಹರಿಸುತ್ತದೆ.

ರುದ್ರದೇವರನ್ನು ಮೋಹಗೊಳಿಸಿದ ಈ ಮೋಹಿನಿಯ ಕಥೆಯ ಶ್ರವಣದಿಂದ ಸಾತ್ವಿಕರ ಸಾಧನೆಗಳೆಲ್ಲವೂ ಸಂಪನ್ನವಾಗುತ್ತವೆ. ಯಾವುದೇ ವಿಧವಾದ ವಿಘ್ನಗಳು ಅವನ ಸಾಧನಗೆ ಎದುರಾಗುವುದಿಲ್ಲ. ಅವರು ಮಾಡಿದ ಸಕಲ ವ್ರತ-ನಿಯಮ-ಉಪವಾಸ-ಶ್ರವಣ ಮುಂತಾದ ಎಲ್ಲ ಸಾಧನೆಗಳೂ ಸಫಲವಾಗುತ್ತವೆ.

ಭಗವಂತ ಯುವತಿವೇಷವನ್ನು ಧರಿಸಿ ದುಷ್ಟರನ್ನು ಮೋಹಗೊಳಿಸಿದ. ತನ್ನನ್ನು ಭಕ್ತಿಯಿಂದ ಅರ್ಚಿಸುವ, ಪ್ರಪನ್ನರಾದ ದೇವತೆಗಳಿಗೆ ಪ್ರಸನ್ನನಾದ. ಅವರಿಗೆ ಅಮೃತವನ್ನು ಉಣಿಸಿದ. ಆ ಭಗವಂತ ಶರಣರ ಕಾಮನೆಗಳನ್ನೆಲ್ಲ ಪೂರ್ಣಮಾಡಲು ಸಮರ್ಥನಾಗಿದ್ದಾನೆ. ಅಂಥ ಭಗವಂತನ ಅಡಿದಾವರಗಳಲ್ಲಿ ವಿನೀತನಾಗಿಯೇ ಜೀವನ ಸಾಗಿಸಬೇಕು.

**॥ ಇತಿ ಶ್ರೀಮದ್ಭಾಗವತೇ ಅಷ್ಟಮಸ್ಕಂಧೇ ಏಕಾದಶೋಽಧ್ಯಾಯಃ ॥**

★★★

# ಅಥ ದ್ವಾದಶೋऽಧ್ಯಾಯಃ

## ೭. ವೈವಸ್ವತ

ಪರೀಕ್ಷಿತರಾಜನೇ! ಈಗ ಏಳನೆಯ ವೈವಸ್ವತಮನ್ವಂತರವು ನಡೆಯುತ್ತಿದೆ. ಸ್ವಾಯಂಭುವ, ಸ್ವಾರೋಚಿಷ, ಉತ್ತಮ, ತಾಪಸ, ರೈವತ, ಚಾಕ್ಷುಷ ಎಂಬ ಆರು ಮನುಗಳು ರಾಜ್ಯವಾಳಿದ ಮೇಲೆ ಈ ವೈವಸ್ವತನು ಮನ್ವಂತರಾಧಿಪತಿಯಾಗುತ್ತಾನೆ. ಸೂರ್ಯದೇವನ ಪುತ್ರನು ಇವನು. ಶ್ರಾದ್ಧದೇವ ಎಂದು ಪ್ರಸಿದ್ಧನಾಗಿದ್ದಾನೆ.

ಇಕ್ಷ್ವಾಕು, ನಭ, ಧೃಷ್ಟ, ಶರ್ಯಾತಿ, ನರಿಷ್ಯಂತ, ನಾಭಾಗ, ದಿಷ್ಟ, ಕರೂಷ, ವೃಷಧ್ರ , ವಸುಮಾನ್ ಎಂಬ ಹೆಸರಿನ ಹತ್ತು ಜನ ವೈವಸ್ವತಮನುವಿನ ಪುತ್ರರು.

ಈ ವೈವಸ್ವತಮನ್ವಂತರದಲ್ಲಿ ಆದಿತ್ಯರು, ವಸುಗಳು, ರುದ್ರರು, ವಿಶ್ವೇದೇವತೆಗಳು ಮರುದ್ಗಣಗಳು, ನಾಸತ್ಯ-ದಸ್ರರೆಂಬ ಅಶ್ವಿನೀದೇವತೆಗಳು ದೇವತೆಗಳಾಗಿದ್ದಾರೆ. ಇವರಿಗೆಲ್ಲ ಪುರಂದರನು ಇಂದ್ರನಾಗಿದ್ದಾನೆ. ಹಿಂದಿನ ಮನ್ವಂತರದಲ್ಲಿಯ ಮಂದ್ರದ್ಯುಮ್ನನೆಂಬ ಇಂದ್ರನೇ ಈಗ ಪುರಂದರನಾಮಕನಾಗಿ ಇಂದ್ರನಾಗಿದ್ದಾನೆ.

ಕಶ್ಯಪ, ಅತ್ರಿ , ವಸಿಷ್ಠ, ವಿಶ್ವಾಮಿತ್ರ , ಗೌತಮ, ಜಮದಗ್ನಿ, ಭರದ್ವಾಜ ಇವರು ಏಳನೆಯ ಮನ್ವಂತರದಲ್ಲಿ ಸಪ್ತರ್ಷಿಗಳಾಗಿದ್ದಾರೆ. ಈ ವೈವಸ್ವತಮನ್ವಂತರದಲ್ಲಿಯೂ ಹಿಂದಿನ ಮನ್ವಂತರದಂತೆ ಕಶ್ಯಪರಿಂದ ಅದಿತಿದೇವಿಯ ಮೂಲಕ ಶ್ರೀಮನ್ನಾರಾಯಣನು ವಾಮನನಾಗಿ ಅವತರಿಸಿದನು.

ಅದಿತಿಯ ಮಕ್ಕಳಾದ ವಿವಸ್ವಾನ್, ಅರ್ಯಮಾ, ಪೂಷಾ, ತ್ವಷ್ಟಾ, ಸವಿತಾ, ಭಗ, ಧಾತಾ, ಪರ್ಜನ್ಯ, ವರುಣ, ಮಿತ್ರ, ಶಕ್ರ, ಉರುಕ್ರಮ ನಾಮಕರಾದ ದ್ವಾದಶಾದಿತ್ಯರು ಜನಿಸಿದ ನಂತರ ಇವರಿಗೆಲ್ಲ ತಮ್ಮನಾಗಿ ಭಗವಂತ ವಾಮನನಾಮಕನಾಗಿ ಅವತರಿಸಿದ.

ಈ ಏಳು ಮನ್ವಂತರಗಳಲ್ಲದೇ ಇನ್ನು ಮುಂದೆ ಸಾವರ್ಣಿ, ದಕ್ಷಸಾವರ್ಣಿ, ಬ್ರಹ್ಮಸಾವರ್ಣಿ, ಧರ್ಮಸಾವರ್ಣಿ, ರುದ್ರಸಾವರ್ಣಿ, ದೇವಸಾವರ್ಣಿ, ಇಂದ್ರಸಾವರ್ಣಿ ಎಂಬ ಏಳು ಮನ್ವಂತರಗಳು ಬರುತ್ತವೆ. ಆ ಎಲ್ಲ ಮನ್ವಂತರಗಳು ಕೂಡಾ ಭಗವಂತನ ಮಹಿಮೆಯಿಂದ ಯುಕ್ತವಾಗಿವೆ. ಆದ್ದರಿಂದ ಆ ಮನ್ವಂತರಗಳ ಬಗ್ಗೆ ಶ್ರವಣ ಮಾಡುವುದು ಅತ್ಯಂತ ಆವಶ್ಯಕ. ಆದ್ದರಿಂದ ಆ ಮನ್ವಂತರಗಳ ಬಗ್ಗೆ ಹೇಳುತ್ತೇನೆ. ಸಾವಧಾನಮನಸ್ಕನಾಗಿ ಕೇಳೆಂದು ಶ್ರೀಶುಕಾಚಾರ್ಯರು ಪರೀಕ್ಷಿತಮಹಾರಾಜನಿಗೆ ಆಜ್ಞೆಮಾಡಿದರು.

## ೮ ಸಾವರ್ಣಿ

ಆರನೆಯ ಸ್ಕಂಧದಲ್ಲಿ ಸೂರ್ಯನ ಪತ್ನಿಯ ಬಗ್ಗೆ ಈಗಾಗಲೇ ತಿಳಿಸಲಾಗಿದೆ. ವಿಶ್ವಕರ್ಮನ ಮಗಳು ಸಂಜ್ಞಾದೇವಿಯು ಸೂರ್ಯನ ಪತ್ನಿ. ಸಂಜ್ಞೆಯು ಸೂರ್ಯನ ತಾಪವನ್ನು ಸಹಿಸಲಾಗದೇ ತನ್ನ ನೆರಳಿನಿಂದ ಒಂದು ಹೆಣ್ಣನ್ನು ಸೃಷ್ಟಿಸಿದಳು. ತನ್ನಂತೆಯೇ ಅವಳ ರೂಪ. ಅವಳು ಛಾಯಾ ಎಂದೇ ಪ್ರಸಿದ್ಧಳಾದಳು. ಹೀಗೆ ಸಂಜ್ಞಾ ಮತ್ತು ಛಾಯಾದೇವಿಯರು ಇಬ್ಬರು ಸೂರ್ಯನ ಪತ್ನಿಯರಾದರು.

ಆ ಸಂಜ್ಞೆಯು ಸೂರ್ಯನ ತಾಪವನ್ನು ಸಹಿಸಲಾರದೇ, ತವರು ಮನೆಗೆ ಹೋಗಲಾರದೇ ವನವನ್ನು ಸೇರಿದಳು. ಈ ತನ್ನ ರೂಪಕ್ಕೆ ಯಾರೂ ಮೋಹಿತರಾಗಬಾರದು, ತನ್ನ ಪತಿಗೆ ಅಪಚಾರ ಮಾಡಬಾರದೆಂದು ಕುದುರೆಯ ವೇಷವನ್ನು ಧರಿಸಿ ತಪಸ್ಸಿನಲ್ಲಿ ತಲ್ಲೀನಳಾದಳು. ಅವಳು ವಡವಾ ಎಂದೇ ಪ್ರಸಿದ್ಧಳಾಗಿದ್ದಾಳೆ.

ಈ ಮೂರು ಜನರಲ್ಲಿ ಸಂಜ್ಞಾದೇವಿಗೆ ಯಮ, ಯಮುನಾ ಮತ್ತು ಶ್ರಾದ್ಧದೇವ ಎಂಬ ಮಕ್ಕಳಾದರು. ಸೂರ್ಯನಿಂದ ಛಾಯಾದೇವಿಯಲ್ಲಿ, ಸಾವರ್ಣಿ, ಸಂವರಣ ಎಂಬ ರಾಜರ್ಷಿಯ ಪತ್ನಿಯಾದ ತಪತೀ ಎಂಬ ಕನ್ಯೆಯು ಮತ್ತು ಶನೈಶ್ಚರನು ಮಕ್ಕಳಾಗಿ ಜನಿಸಿದರು. ಕುದುರೆಯ ರೂಪದ ಸಂಜ್ಞಾದೇವಿಯಲ್ಲಿ ಅಂದರೆ ವಡವಾಳಲ್ಲಿ ಅಶ್ವಿನೀದೇವತೆಗಳು ಜನಿಸಿದರು.

ಈ ವೈವಸ್ವತಮನ್ವಂತರವು ಕಳೆದ ಮೇಲೆ ಎಂಟನೆಯ ಮನ್ವಂತರವೇ ಸಾವರ್ಣಿಮನ್ವಂತರ. ಈ ಸೂರ್ಯ-ಛಾಯಾಪುತ್ರನಾದ ಈ ಸಾವರ್ಣಿಯು ಎಂಟನೆಯ ಮನ್ವಂತರಕ್ಕೆ ಅಧಿಪತಿಯಾಗುತ್ತಾನೆ. ನಿರ್ಮೋಹ, ವಿರಜಸ್ಕ ಮುಂತಾದವರು ಸಾವರ್ಣಿಯ ಪುತ್ರರು.

ಈ ಸಾವರ್ಣಿಮನ್ವಂತರದಲ್ಲಿ ಸುತಪಸರು, ವಿರಜರು, ಅಮಿತಪ್ರಜರು ಎಂಬುವವರು ದೇವತೆಗಳಾಗುತ್ತಾರೆ. ಆ ದೇವತೆಗಳಿಗೆ ಪ್ರಹ್ಲಾದಪುತ್ರ ವಿರೋಚನನ ಮಗನಾದ ಬಲಿಯು ಇಂದ್ರನಾಗುತ್ತಾನೆ.

ವೈವಸ್ವತಮನ್ವಂತರದಲ್ಲಿ ನಡೆದ ಅಮೃತಮಥನದಲ್ಲಿ ಬಲಿಚಕ್ರವರ್ತಿಯು ಇಂದ್ರನಿಂದ ಹತನಾದ. ಶುಕ್ರಾಚಾರ್ಯರು ತಮಗೆ ತಿಳಿದ ಮೃತಸಂಜೀವಿನೀವಿದ್ಯೆಯಿಂದ ಆ ಬಲಿಯನ್ನು ಬದುಕಿಸಿದರು. ತಮಗೆ ಜೀವನವನ್ನು ನೀಡಿದ ಗುರುಗಳಿಗೆ ಸರ್ವಸ್ವದಾನ ಮಾಡಿದ. ಬಲಿಯ ಆ ದಾನದಿಂದ ಗುರುಗಳಾದ ಶುಕ್ರಾಚಾರ್ಯರು ಸಂಪ್ರೀತರಾದರು. ಗುರುಗಳ ಸಂಪ್ರೀತಿಯ ಫಲವಾಗಿ ಬಲಿಯು ಇಂದ್ರನನ್ನು ಸೋಲಿಸಿದ. ಸ್ವರ್ಗಾಧಿಪತಿಯಾದ.

ಆ ಪ್ರಸಂಗದಲ್ಲಿ ಯಜ್ಞಮಾಡುವಾಗ ಪರಮಾತ್ಮ ವಾಮನರೂಪಿಯಾಗಿ ಬಂದ. ಮೂರುಪಾದ ಭೂಮಿಯನ್ನು ಬೇಡಿದ. ಆ ಪರಮಾತ್ಮನಿಗೆ ಭೂದಾನ ಮಾಡಿದ. ಆ

ಪುಣ್ಯದಿಂದ ಎಂಟನೆಯ ಸಾವರ್ಣಿ ಮನ್ವಂತರದಲ್ಲಿ ಬಲಿಯು ಇಂದ್ರಪದವಿಯನ್ನು ಪಡೆದ. ಇಂದ್ರಪದವಿಯನ್ನು ಅನುಭವಿಸಿ ಮುಕ್ತನಾಗುತ್ತಾನೆ.

ಮೊದಲು ವಾಮನರೂಪಿಯಾದ ಪರಮಾತ್ಮ ಬಲಿಯನ್ನು ವರುಣ- ಪಾಶದಿಂದ ಬಂಧನ ಮಾಡಿದ. ನಂತರ ಬಲಿಯು ಮಾಡಿದ ಆತ್ಮಾರ್ಪಣದಿಂದ ಸಂತುಷ್ಟನಾದ. ಸ್ವರ್ಗಕ್ಕಿಂತಲೂ ಅಧಿಕಸಮೃದ್ಧವಾದ ಸುತಲಲೋಕದ ಸಾಮ್ರಾಜ್ಯವನ್ನು ಬಲಿಗೆ ನೀಡಿದ. ಹೀಗಾಗಿ ವೈವಸ್ವತಮನ್ವಂತರದಲ್ಲಿ ಸುತಲದ ಇಂದ್ರನಾಗಿ ಆ ಬಲಿಯು ಪರಿಶೋಭಿಸಿದ.

ಎಂಟನೆಯ ಸಾವರ್ಣಿಮನ್ವಂತರದಲ್ಲಿ ಬಲಿಯು ಸ್ವರ್ಗಾಧಿಪತಿ ಇಂದ್ರನಾದ. ಈ ಸಂದರ್ಭದಲ್ಲಿ ೧. ಗಾಲವ, ೨. ದೀಪ್ತಿಮಾನ್ ೩. ಪರಶುರಾಮ, ೪. ಅಶ್ವತ್ಥಾಮಾಚಾರ್ಯರು, ೫. ಕೃಪಾಚಾರ್ಯರು, ೬. ಋಷ್ಯಶೃಂಗ, ಮತ್ತು ೭. ವೇದವ್ಯಾಸರು ಸಪ್ತರ್ಷಿಗಳಾಗುತ್ತಾರೆ.

ಈ ಸಾವರ್ಣಿಮನ್ವಂತರದಲ್ಲಿ ದೇವಗುಹ್ಯ ಎಂಬ ಋಷಿಯಿಂದ ಸರಸ್ವತಿಯಲ್ಲಿ ಸರ್ವೋತ್ತಮನಾದ ವಿಷ್ಣುವು ಸಾರ್ವಭೌಮನಾಮಕನಾಗಿ ಅವತರಿಸುತ್ತಾನೆ. ದೇವತಾಕಾರ್ಯವನ್ನು ಸಂಪಾದಿಸುವುದಕ್ಕಾಗಿ ಇಂದ್ರನಿಂದ ಸ್ವರ್ಗಾಧಿಪತ್ಯವನ್ನು ತೆಗೆದುಕೊಂಡು ಬಲಿಯನ್ನು ಇಂದ್ರನನ್ನಾಗಿಸುತ್ತಾನೆ.

**೯ ದಕ್ಷಸಾವರ್ಣಿ**

ವರುಣನಿಂದ ದಕ್ಷಸಾವರ್ಣಿಯು ಜನಿಸಿದ. ಈ ದಕ್ಷಸಾವರ್ಣಿಯು ಒಂಭತ್ತನೆಯ ಮನ್ವಂತರಕ್ಕೆ ಅಧಿಪತಿಯಾಗುತ್ತಾನೆ. ಭೂತಕೇತು, ದೀಪ್ತಿಕೇತು ಮುಂತಾದವರು ದಕ್ಷಸಾವರ್ಣಿಯ ಮಕ್ಕಳು.

ದಕ್ಷಸಾವರ್ಣಿಮನ್ವಂತರದಲ್ಲಿ ಪರ-ಮರೀಚಿಗರ್ಭ ಮೊದಲಾದವರು ದೇವತೆಗಳಾಗುತ್ತಾರೆ. ಅದ್ಭುತನೆಂಬುವವನು ಇಂದ್ರನಾಗುತ್ತಾನೆ. ದ್ಯುತಿಮಾನ್ ಮೊದಲಾದವರು ಸಪ್ತರ್ಷಿಗಳಾಗುತ್ತಾರೆ.

ಆಯುಷ್ಮಂತನೆಂಬ ಪುರುಷನಿಂದ ಅಂಬುಧಾರಾದೇವಿಯಲ್ಲಿ ಋಷಭನಾಮಕನಾಗಿ ಪರಮಾತ್ಮ ಅವತರಿಸುತ್ತಾನೆ. ಈ ಋಷಭನಿಂದ ಸಂರಕ್ಷಿತನಾದ ಇಂದ್ರನು ಮೂಲೋಕಗಳನ್ನು ಸಂರಕ್ಷಿಸುತ್ತಾನೆ.

**೧೦. ಬ್ರಹ್ಮಸಾವರ್ಣಿ**

ಉಪಶ್ಲೋಕ ಎಂಬುವವರ ಮಕ್ಕಳು ಬ್ರಹ್ಮಸಾವರ್ಣಿಗಳು. ಇವರು ಹತ್ತನೆಯ ಮನ್ವಂತರಕ್ಕೆ ಅಧಿಪತಿಗಳಾಗಿದ್ದಾರೆ. ಭೂರಿಷೇಣ ಮುಂತಾದವರು ಈ ಬ್ರಹ್ಮಸಾವರ್ಣಿಯ ಮಕ್ಕಳಾಗಿದ್ದಾರೆ. ಹವಿಷ್ಮಾನ್, ಸುಕೃತ, ಸತ್ಯ, ಜಯ, ಮೂರ್ತಿ ಮುಂತಾದವರು

ಸಪ್ತರ್ಷಿಗಳಾಗುತ್ತಾರೆ. ಸುವಾಸನ-ವಿರುದ್ಧ ಮುಂತಾದವರು ದೇವತೆಗಳಾಗುತ್ತಾರೆ. ಶಂಭು ಎಂಬುವವನು ಇಂದ್ರನಾಗುತ್ತಾನೆ.

ಬ್ರಹ್ಮಸಾವರ್ಣಿಮನ್ವಂತರದಲ್ಲಿ ವಿಷೂಚಿಯಲ್ಲಿ ಭಗವಂತ ವಿಶ್ವಕ್ಸೇನನಾಮಕನಾಗಿ ಅವತರಿಸಿದ. (ವಿಶ್ವಕ್ಸೇನನಿಂದ ವಿಷೂಚಿಯಲ್ಲಿ ಶಾಂತನಾಮಕನಾಗಿ ಭಗವಂತ ಅವತರಿಸಿದ ಎಂದು ಲಿಂಗೇರೀಆಚಾರ್ಯರು ವಿವರಿಸಿದ್ದಾರೆ.) ಈ ಪರಮಾತ್ಮ ಶಂಭು ಎಂಬ ಇಂದ್ರನ ಸಖ್ಯ ಮಾಡಿದ. ಇಂದ್ರನನ್ನು ಸಂರಕ್ಷಿಸಿದ.

## ೧೧ ಧರ್ಮಸಾವರ್ಣಿ

ಧರ್ಮಸಾವರ್ಣಿಯು ಹನ್ನೊಂದನೆಯ ಮನ್ವಂತರಕ್ಕೆ ಅಧಿಪತಿಯಾಗಿದ್ದಾನೆ. ಶ್ರೀಹರಿಯ ಧ್ಯಾನದಿಂದ ಮನಸ್ಸನ್ನು ಪ್ರಶಾಂತ ಮಾಡಿಕೊಂಡ ಮಹಾನುಭಾವನು ಇವನು. ಸತ್ಯಧರ್ಮ ಮುಂತಾದ ಹತ್ತುಮಕ್ಕಳು ಈ ಧರ್ಮಸಾವರ್ಣಿಗೆ ಜನಿಸಿದರು.

ವಿಹಂಗಮ, ಕಾಮಗಮ, ನಿರ್ವಾಣರುಚಿಗಳು ಈ ಮನ್ವಂತರದ ದೇವತೆಗಳು. ಧೃತಿ ಎಂಬುವವನು ಇಂದ್ರ . ಅರುಣ ಮುಂತಾದವರು ಸಪ್ತರ್ಷಿಗಳು.

ಆರ್ಯಕ ಎಂಬುವವನಿಗೆ ವೈಧೃತಾ ಎಂಬುವ ಪತ್ನಿಯಲ್ಲಿ ಶ್ರೀಹರಿಯು ಧರ್ಮಸೇತುನಾಮಕನಾಗಿ ಅವತರಿಸುತ್ತಾನೆ. ಈ ಮೂರ್ಲೋಕದ ನೇತಾರನಾಗುತ್ತಾನೆ.

## ೧೨ ರುದ್ರಸಾವರ್ಣಿ

ರುದ್ರಸಾವರ್ಣಿಯು ಹನ್ನೆರಡನೆಯ ಮನ್ವಂತರಕ್ಕೆ ಅಧಿಪತಿ- ಯಾಗುತ್ತಾನೆ. ದೇವವಂತ, ಉಪದೇವ, ದೇವಶ್ರೇಷ್ಠ ಮೊದಲಾದವರು ರುದ್ರಸಾವರ್ಣಿಯ ಮಕ್ಕಳು.

ಋತಧಾಮಾ ಎಂಬುವವನು ಈ ಮನ್ವಂತರದಲ್ಲಿ ಇಂದ್ರನಾಗುತ್ತಾನೆ. ಹರಿತ ಮುಂತಾದವರು ದೇವತೆಗಳಾಗುತ್ತಾರೆ. ತಪೋಮೂರ್ತಿ, ತಪ, ಆಗ್ನೀಧ್ರಕ ಮುಂತಾದವರು ಸಪ್ತರ್ಷಿಗಳಾಗುತ್ತಾರೆ.

ಸತ್ಯಮಹಸ್ ಎಂಬುವವನ ಪತ್ನಿಯಾದ ಸೂನೃತಾದೇವಿಯಲ್ಲಿ ಸ್ವಧಾಮನಾಮಕನಾಗಿ ಪರಮಾತ್ಮ ಅವತರಿಸುತ್ತಾನೆ. ಆ ಮನ್ವಂತರದ ಸಂರಕ್ಷಕನಾಗುತ್ತಾನೆ.

## ೧೩ ದೇವಸಾವರ್ಣಿ

ದೇವಸಾವರ್ಣಿಯು ಹದಿಮೂರನೆಯ ಮನ್ವಂತರದ ಅಧಿಪತಿಯಾಗುತ್ತಾನೆ. ಚಿತ್ರಸೇನ, ವಿಚಿತ್ರ ಮುಂತಾದವರು ದೇವಸಾವರ್ಣಿಯ ಮಕ್ಕಳು.

ಸುಕರ್ಮ, ಸುತ್ರಾಮ ಮುಂತಾದವರು ದೇವತೆಗಳಾಗುತ್ತಾರೆ. ದಿವಸ್ಪತಿ ಎಂಬುವವನು ಇಂದ್ರನಾಗುತ್ತಾನೆ. ನಿರ್ಮೋಕ, ತತ್ತ್ವದರ್ಶ ಮುಂತಾದವರು ಸಪ್ತರ್ಷಿಗಳಾಗುತ್ತಾರೆ.

ದೇವಹೋತ್ರನಿಗೆ ಬೃಹತೀದೇವಿಯಲ್ಲಿ ಯೋಗೇಶ್ವರನಾಮಕನಾಗಿ ಭಗವಂತನು ಅವತರಿಸುತ್ತಾನೆ. ಇಂದ್ರನಿಗೆ ಸಂರಕ್ಷಕನಾಗಿ ಉಪಕಾರಕನಾಗುತ್ತಾನೆ.

**೧೪ ಇಂದ್ರಸಾವರ್ಣಿ**

ಇಂದ್ರಸಾವರ್ಣಿಯು ಹದಿನಾಲ್ಕನೆಯ ಮನ್ವಂತರದ ಅಧಿಪತಿಯಾಗುತ್ತಾನೆ. ಜಂತು, ಭೀರವ, ವರ್ಯ ಮುಂತಾದವರು ಇಂದ್ರಸಾವರ್ಣಿಯ ಮಕ್ಕಳು.

ವಿಚಿತ್ರ-ಚಾಕ್ಷುಷನಾಮಕರಾದವರು ಈ ಮನ್ವಂತರದಲ್ಲಿ ದೇವತೆಗಳಾಗುತ್ತಾರೆ. ಶುಚಿನಾಮಕನು ಇಂದ್ರನಾಗುತ್ತಾನೆ. ಅಗ್ನಿ, ಬಾಹು, ಶುಚಿ, ಶುದ್ಧ, ಮಾಗಧ ಮುಂತಾದವರು ಸಪ್ತರ್ಷಿಗಳಾಗುತ್ತಾರೆ.

ಸತ್ರಾಯಣ ಎಂಬುವವನಿಗೆ ವಿತಾನಾದೇವಿಯಲ್ಲಿ ಬೃಹದ್ಭಾನುನಾಮಕನಾಗಿ ಪರಮಾತ್ಮ ಅವತರಿಸುತ್ತಾನೆ.

ಹೀಗೆ ಕಳೆದ ಆರು ಮನ್ವಂತರಗಳು, ನಡೆಯುತ್ತಿರುವ ಒಂದು ಮನ್ವಂತರ ಮುಂದೆ ಬರುವ ಏಳು ಮನ್ವಂತರಗಳ ವಿಚಾರಗಳನ್ನು ಶುಕಾಚಾರ್ಯರು ಪರೀಕ್ಷಿತಮಹಾರಾಜನಿಗೆ ತಿಳಿಸಿದರು. ಅವುಗಳಲ್ಲಿ ಹಲವು ಮನ್ವಂತರಗಳ ಬಗ್ಗೆ ವಿಸ್ತಾರವಾಗಿ, ಹಲವು ಮನ್ವಂತರಗಳ ಬಗ್ಗೆ ಸಂಕ್ಷೇಪವಾಗಿ ತಿಳಿಸಿದರು. ಈ ಮನ್ವಂತರಗಳ ಶ್ರವಣದಿಂದ ಮನುಷ್ಯನು ಪಾಪನಿರ್ಮುಕ್ತನಾಗುತ್ತಾನೆ.

**॥ ಇತಿ ಶ್ರೀಮದ್ಭಾಗವತೇ ಅಷ್ಟಮಸ್ಕಂಧೇ ದ್ವಾದಶೋಽಧ್ಯಾಯಃ ॥**

★★★

## ಅಥ ತ್ರಯೋದಶೋಽಧ್ಯಾಯಃ

ಪರೀಕ್ಷಿತ ಮಹಾರಾಜ ಮನ್ವಂತರಗಳ ವಿಷಯವನ್ನು ಶ್ರದ್ಧೆಯಿಂದ ಆಲಿಸಿದ. ಆಯಾ ಮನ್ವಂತರಗಳಲ್ಲಿ ಅವತರಿಸಿದ ಪರಮಾತ್ಮ ಯಾವ ಕಾರ್ಯಗಳನ್ನು ಮಾಡಿದ? ಆ ಮನುವಿನ ಮಕ್ಕಳು ಯಾವ ಕಾರ್ಯಗಳಲ್ಲಿ ನಿಯುಕ್ತರಾಗಿ ಯಾವ ಯಾವ ಕಾರ್ಯಗಳನ್ನು ಮಾಡಿದರು? ಈ ಎಲ್ಲ ವಿಷಯವನ್ನು ತಿಳಿಯಲು ತವಕಿಸಿದ. ಅದನ್ನು ತಿಳಿಸಬೇಕೆಂದು ಶುಕಾಚಾರ್ಯರಿಗೆ ಕೇಳಿದ.

ಪರೀಕ್ಷಿತರ ಪ್ರಶ್ನೆಗೆ ಶುಕಾಚಾರ್ಯರು ಉತ್ತರಿಸಿದರು. ಆಯಾ ಮನ್ವಂತರದಲ್ಲಿ ಅವತರಿಸಿದ ಪರಮಾತ್ಮನ ಆಜ್ಞೆಗೆ ಎಲ್ಲ ಮನುಗಳು ಬದ್ಧರಾಗುತ್ತಾರೆ. ಆ ಮನುಪುತ್ರರು, ಸಪ್ತರ್ಷಿಗಳು ಆಯಾ ಮನ್ವಂತರದಲ್ಲಿ ಆಗುವ ಇಂದ್ರರು, ಎಲ್ಲ ದೇವತೆಗಳು ಈ ಎಲ್ಲರೂ ಭಗವಂತನಿಂದಲೇ ನಿಯುಕ್ತರಾಗುತ್ತಾರೆ. ಭಗವಂತನ ನಿಯತಿಗೆ ಬದ್ಧವಾದ

ಕಾರ್ಯಗಳಲ್ಲಿಯೇ ತತ್ಪರರಾಗುತ್ತಾರೆ. ಈ ಭಗವಂತನಿಂದಲೇ ಇವರೆಲ್ಲರ ಜೀವನೋಪಾಯವು ಸಿದ್ಧಿಸುತ್ತದೆ.

**ಸಪ್ತರ್ಷಿಗಳ ಕಾರ್ಯ**

ಸನಾತನವಾದ, ಮುಕ್ತಿಸಾಧನವಾದ ಧರ್ಮಗಳು ಶ್ರುತಿಯಿಂದಲೇ ಸಿದ್ಧವಾಗುತ್ತವೆ. ದೈನಂದಿನಪ್ರಲಯದಲ್ಲಿ ಪ್ರವರ್ತಕರಿಲ್ಲದೇ ಶ್ರುತಿಗಳೆಲ್ಲವೂ ಮರೆಯಾಗುತ್ತವೆ. ಇಂಥ ಪ್ರಸಂಗದಲ್ಲಿ ಈ ಸಪ್ತರ್ಷಿಗಳು ಶ್ರೀಹರಿಯನ್ನು ಕುರಿತು ತಪಸ್ಸು ಮಾಡುತ್ತಾರೆ. ಪರಮಾತ್ಮನಿಂದ ಆಜ್ಞಪ್ತರಾಗುತ್ತಾರೆ. ಆ ತಪಸ್ಸಿನ ಮತ್ತು ಪರಮಾತ್ಮನ ಆಜ್ಞೆಯ ಪ್ರಭಾವದಿಂದ ಮರೆಯಾದ ಶ್ರುತಿಗಳನ್ನು ಮತ್ತೆ ಬೆಳಕಿಗೆ ತರುತ್ತಾರೆ. ದಿನಕಲ್ಪದ ಪ್ರಾರಂಭದಲ್ಲಿ ಪೂರ್ವದಲ್ಲಿಯೇ ಇದ್ದಹಾಗೆ ಶ್ರುತಿಗಳನ್ನು ತಮ್ಮ ಶಿಷ್ಯರಿಗೆ ಉಪದೇಶಿಸುತ್ತಾರೆ.

ಆ ವೇದಗಳಲ್ಲಿ ನಿರೂಪಿತವಾದ ಧರ್ಮಾಧರ್ಮಗಳನ್ನು ಆಯಾ ಮನ್ವಂತರದಲ್ಲಿ ಅವತರಿಸಿದ ಭಗವಂತ ಆಯಾ ಮನುಗಳಿಗೆ ಉಪದೇಶಿಸುತ್ತಾನೆ.

ಆ ಉಪದೇಶವನ್ನು ಪಡೆದ ಮನುಗಳು ಸತ್ಯ-ತಪಸ್ಸು-ದಯಾ-ಶೌಚ ಎಂಬ ನಾಲ್ಕುಪಾದದಿಂದ ಸಂಪನ್ನವಾದ ಧರ್ಮದಲ್ಲಿ ಆಸಕ್ತರಾಗುತ್ತಾರೆ. ಎಲ್ಲ ಪ್ರಜರನ್ನೂ ಆಯಾ ಧರ್ಮಗಳಲ್ಲಿ ಪ್ರವೃತ್ತರಾಗುವಂತೆ ಶಾಸಿಸುತ್ತಾರೆ. ಹೀಗೆ ಭಗವಂತ ಆಯಾ ಮನುಗಳಿಂದ ಧರ್ಮಕಾರ್ಯಗಳನ್ನು ಮಾಡಿಸುತ್ತಾನೆ.

ಆಯಾ ಮನ್ವಂತರದಲ್ಲಿ ಅವತರಿಸಿದ ಪರಮಾತ್ಮನು ಪ್ರಜೆಗಳ ರಕ್ಷಣೆಯ ಕಾರ್ಯದಲ್ಲಿ ಮನುಪುತ್ರರನ್ನು ನಿಯೋಜಿಸುತ್ತಾನೆ. ಅವರ ಪುತ್ರ-ಪೌತ್ರಪರಂಪರೆಯಾಗಿ ಕ್ರಮವಾಗಿ ಆಯಾ ರಾಜ್ಯವನ್ನು ಶಾಸಿಸುತ್ತಾ ಶ್ರೀಹರಿಯನ್ನು ಸೇವಿಸುತ್ತಾರೆ.

ಆಯಾ ಮನ್ವಂತರದಲ್ಲಿ ಅವತರಿಸಿದ ದೇವತೆಗಳು ಯಜ್ಞದಲ್ಲಿ ನೀಡುವ ಭಾಗಗಳನ್ನು ಸ್ವೀಕರಿಸುತ್ತಾರೆ. ಶ್ರೀಹರಿಯು ಈ ಕಾರ್ಯವನ್ನು ಆ ದೇವತೆಗಳಿಂದ ಮಾಡಿಸುತ್ತಾನೆ.

ಆಯಾ ಮನ್ವಂತರಗಳಲ್ಲಿ ಉಕ್ತರಾದ ಇಂದ್ರರು ಭಗವಂತ ನೀಡಿದ ಪದವಿಯನ್ನು ಅಲಂಕರಿಸುತ್ತಾರೆ. ಆ ಪದವಿ ಸಂಪದ್ಭರಿತವಾಗಿರುತ್ತದೆ. ಆ ಸಂಪತ್ತನ್ನು ಅನುಭವಿಸುತ್ತಾ ಶ್ರೀಹರಿಯನ್ನು ಸೇವಿಸುತ್ತಾರೆ. ಭೂಲೋಕ, ಭುವರ್ಲೋಕ, ಸ್ವರ್ಗಲೋಕಗಳನ್ನು ಶಾಸಿಸುತ್ತಾರೆ. ಸಂರಕ್ಷಿಸುತ್ತಾರೆ. ರೈತರ-ಪ್ರಜೆಗಳ ಅಪೇಕ್ಷೆಯಂತೆ ಮೇಘಗಳ ದ್ವಾರಾ ಮಳೆಯನ್ನು ನೀಡಿ ಲೋಕವನ್ನು ಕಾಪಾಡುತ್ತಾರೆ.

ಭಗವಂತ ಬೇರೇ ಬೇರೇ ರೂಪಗಳಿಂದಲೂ ಭೂಮಿಯಲ್ಲಿ ಅವತರಿಸಿ ಸಜ್ಜನರಿಗೆ ಶಿಕ್ಷಣೆಯನ್ನು ನೀಡುತ್ತಾನೆ. ಕಪಿಲಾದಿಸಾಕ್ಷಾದ್ರೂಪಗಳಿಂದ, ಸನಕಾದ್ಯಂತರ್ಯಾಮಿ

ರೂಪಗಳಿಂದ ಜ್ಞಾನಸಾಧನಗಳನ್ನು ಉಪದೇಶಿಸುತ್ತಾನೆ. ಪರಶುರಾಮ, ವೇದವ್ಯಾಸ ಮುಂತಾದ ರೂಪಗಳನ್ನು ಧರಿಸಿ ಕರ್ಮಮಾರ್ಗದ ಉಪಾಯಗಳನ್ನು ಉಪದೇಶಿಸುತ್ತಾನೆ. ದತ್ತಾತ್ರೇಯಾದಿ ರೂಪಗಳನ್ನು ಧರಿಸಿ ಅಣಿಮಾದಿ ಸಾಧನೆಗಳನ್ನು ಪ್ರಾಣಾಯಾಮಾದಿ ಯೋಗಪ್ರತಿಪಾದಕವಾದ ಶಾಸ್ತ್ರವನ್ನು ಉಪದೇಶಿಸುತ್ತಾನೆ.

ದಕ್ಷ-ಮರೀಚಿ ಮುಂತಾದ ಪ್ರಜೇಶ್ವರರಲ್ಲಿ ಅಂತರ್ಯಾಮಿಯಾಗಿದ್ದು ಪ್ರಜಾಸೃಷ್ಟಿಯನ್ನು ಮಾಡುತ್ತಾನೆ. ಇಂದ್ರನಲ್ಲಿ ಮತ್ತು ಪೃಥು ಮುಂತಾದ ರಾಜರಲ್ಲಿ ಅಂತರ್ಯಾಮಿಯಾಗಿ ಲೋಕಕಂಟಕರಾದ ಅಸುರರನ್ನು ಸಂಹರಿಸುತ್ತಾನೆ. ಕಲ್ಕಿಮುಂತಾದ ರೂಪಗಳಿಂದ ಸರ್ವಸಂಹಾರಕನಾಗುತ್ತಾನೆ.

ಸಾತ್ತ್ವಿಕರಾದ ಬ್ರಹ್ಮಾದಿಗಳಿಂದ ಸ್ತುತನಾಗಿ ಅವರಿಗೆ ಗೋಚರನಾಗುತ್ತಾನೆ. ಪ್ರಾಕೃತವಾದ ನಾಮ-ರೂಪಗಳು ಭಗವಂತನಿಗೆ ಇಲ್ಲವೇ ಇಲ್ಲ. ತನ್ನ ಸಾಮರ್ಥ್ಯದಿಂದ ಮೋಹಿನೀ ಮುಂತಾದ ರೂಪಗಳನ್ನು ತಾಳುತ್ತಾನೆ. ದೈತ್ಯರನ್ನು ಮೋಹಿಸುತ್ತಾನೆ. ವಿವೇಕಶೂನ್ಯರಾಗುವಂತೆ ಮಾಡುತ್ತಾನೆ. ತತ್ತ್ವಜ್ಞಾನಶೂನ್ಯರಾಗುವಂತೆ ಮಾಡುತ್ತಾನೆ. ಅವರ ಯೋಗ್ಯತೆಯೇ ಅಷ್ಟು. ಹೀಗಾಗಿ ಅಂಥವರಿಗೆ ತನ್ನ ದರ್ಶನವನ್ನು ನೀಡುವುದೇ ಇಲ್ಲ. ಇದುವೇ ಮನ್ವಂತರದಲ್ಲಿಯ ಭಗವಂತನ ಮತ್ತು ಮನುಪುತ್ರ ಮುಂತಾದವರ ಕಾರ್ಯಗಳು.

**॥ ಇತಿ ಶ್ರೀಮದ್ಭಾಗವತೇ ಅಷ್ಟಮಸ್ಕಂಧೇ ತ್ರಯೋದಶೋಽಧ್ಯಾಯಃ ॥**

★★★

## ಅಥ ಚತುರ್ದಶೋಽಧ್ಯಾಯಃ

ವಾಮನಚರಿತೆಯನ್ನು ಸಂಕ್ಷೇಪವಾಗಿ ಆಲಿಸಿದ ಪರೀಕ್ಷಿತ ಶುಕಾಚಾರ್ಯರಿಗೆ ಪ್ರಶ್ನಿಸಿದ. ಭಗವಂತ ಸರ್ವಸಮರ್ಥ. ಸಮಗ್ರೈಶ್ವರ್ಯಸಂಪನ್ನ. ಸರ್ವಲೋಕನಿಯಾಮಕ. ಆದರೂ ದರಿದ್ರನಂತೆ ಏನೂ ಇಲ್ಲದವನಂತೆ ತೋರಿಸಿಕೊಂಡ. ಮೂರು ಹೆಜ್ಜೆಯಷ್ಟು ಭೂಮಿಯನ್ನು ಬಲಿಚಕ್ರವರ್ತಿಗೆ ಬೇಡಿದ. ತನಗೆ ಇಷ್ಟವಾದ ಭೂಮಿಯನ್ನು ಪಡೆದರೂ ಬಲಿಯನ್ನು ಬಂಧನ ಮಾಡಿದ. ಭಗವಂತ ಯಾಕೆ ಹೀಗೆ ಮಾಡಿದ?

ಸರ್ವದಾ ಸರ್ವಗುಣಪರಿಪೂರ್ಣನಾದ, ಸರ್ವಜೀವನಿಯಾಮಕನಾದ ಪರಮಾತ್ಮ ಯಾಕೆ ಯಾಚಿಸಿದ? ಪ್ರತಿಜ್ಞೆ ಮಾಡಿದ ಮೂರು ಹೆಜ್ಜೆಯನ್ನು ನೀಡಿದ ಮೇಲೂ ನಿರಪರಾಧಿಯಾದ ಬಲಿಯನ್ನು ಯಾಕೆ ಬಂಧಿಸಿದ? ಈ ವಿಷಯವನ್ನು ಸಕಾರಣವಾಗಿ ತಿಳಿಯಬೇಕೆಂದು ನಾನು ಬಯಸಿದ್ದೇನೆ. ಈ ವಿಷಯವನ್ನು ತಿಳಿಯಲು ನಾವೆಲ್ಲರೂ ಉತ್ಸುಕರಾಗಿದ್ದೇವೆ.

ಹೀಗೆ ಪರೀಕ್ಷಿತನಿಂದ ಪೃಷ್ಟರಾದ ಶುಕಾಚಾರ್ಯರು ವಾಮನನ ಚರಿತೆಯನ್ನು ಹೇಳಲು ಉದ್ಯುಕ್ತರಾದರು.

ಅಮೃತಪ್ರಾಪ್ತಿಯಾದ ನಂತರ ನಡೆದ ಯುದ್ಧದಲ್ಲಿ ಇಂದ್ರನು ಬಲಿಯನ್ನು ಸಂಹರಿಸಿದ. ಶುಕ್ರಾಚಾರ್ಯರು ಮತ್ತೆ ಬಲಿಯನ್ನು ಬದುಕಿಸಿದರು. ಗುರುಗಳಾದ ಶುಕ್ರಾಚಾರ್ಯರಿಗೆ ಸರ್ವಸ್ವವನ್ನೂ ಸಮರ್ಪಿಸಿದರು.

ಬಲಿಯ ಈ ದಾನದಿಂದ ಶುಕ್ರಾಚಾರ್ಯರು ಸಂತುಷ್ಟರಾದರು. ಸ್ವಯಂ ಮಹಾಸಮರ್ಥರು ಶುಕ್ರಾಚಾರ್ಯರು. ಮಂತ್ರಸಾಮರ್ಥ್ಯದಿಂದ ಸಂಪನ್ನರು. ಬಲಿಯು ಮೂರ್ಲೋಕಗಳನ್ನು ಗೆಲ್ಲಲು ಬಯಸಿದ್ದಾನೆಂಬುದನ್ನು ಅರಿತರು. ಬಲಿಯಿಂದ ವಿಶ್ವಜಿದ್ಯಾಗವನ್ನು ಮಾಡಿಸಿದರು. ವಿಶ್ವಜಿದ್ಯಾಗ ನಿರಾತಂಕವಾಗಿ ಸಂಪನ್ನವಾಯಿತು. ಶುಕ್ರಾಚಾರ್ಯರು ನೀಡಿದ ಹವಿಸ್ಸಿನಿಂದ ಅಗ್ನಿಯು ಸಂತೃಪ್ತನಾದ. ಯಜ್ಞಕುಂಡದಿಂದಲೇ ರಥ, ಅಶ್ವ, ಧ್ವಜ, ಬಿಲ್ಲು, ಅಕ್ಷಯವಾದ ಬಾಣಗಳಿಂದ ಪೂರ್ಣವಾದ ಬತ್ತಳಿಕೆ, ದಿವ್ಯವಾದ ಕವಚ ಮುಂತಾದುವೆಲ್ಲವೂ ವ್ಯಕ್ತವಾದವು. ಸ್ವಯಂ ಪ್ರಹ್ಲಾದರಾಜರು ಬಂದು ಜಯಮಾಲೆಯನ್ನು ಹಾಕಿದರು. ಶುಕ್ರಾಚಾರ್ಯರು ಶಂಖವನ್ನು ನೀಡಿದರು.

ಹೀಗೆ ಬಲಿಯು ಯಜ್ಞದ ಮೂಲಕ, ಶುಕ್ರಾಚಾರ್ಯರು ಮುಂತಾದವರಿಂದ ಯುದ್ಧದ ಸಾಮಗ್ರಿಗಳನ್ನು ಸಂಪಾದಿಸಿಕೊಂಡ. ಆ ಬ್ರಾಹ್ಮಣರೆಲ್ಲರೂ ಯುದ್ಧಕ್ಕಾಗಿ ಸ್ವಸ್ತಿವಾಚನ ಮಾಡಿದರು. ಮಂಗಳ ಹಾಡಿದ ಶುಕ್ರಾಚಾರ್ಯರೇ ಮುಂತಾದ ಬ್ರಾಹ್ಮಣರಿಗೆ ಪ್ರದಕ್ಷಿಣೆ ಮಾಡಿದ. ವಿನೀತರಾಗಿ ಅವರಿಗೆ ನಮಸ್ಕರಿಸಿದ. ತ್ರಿಲೋಕವಿಜಯಕ್ಕೆ ಹೋಗಿಬರುತ್ತೇನೆಂದು ಪಿತಾಮಹನಾದ ಪ್ರಹ್ಲಾದರಾಜರಿಗೆ ಹೇಳಿ ಅವರಿಗೂ ನಮಸ್ಕರಿಸಿದ.

ಮಹಾರಥಿಕನಾದ ಬಲಿಯು ಶುಕ್ರಾಚಾರ್ಯರು ನೀಡಿದ ಶಂಖವನ್ನು ಮೊಳಗಿಸಿದ. ಯಜ್ಞದ ಮೂಲಕ ಬಂದಿರುವ ದಿವ್ಯವಾದ ರಥವನ್ನು ಏರಿ ಕುಳಿತ. ಯುದ್ಧಕ್ಕೆ ಸನ್ನದ್ಧನಾದ. ಬಲಿಯ ಹಿಂದೆ ಹಿಂಡು ಹಿಂಡು ಸೈನ್ಯ ಹೊರಟಿತು. ಸರ್ವಸಮೃದ್ಧವಾದ ಇಂದ್ರನ ಲೋಕಕ್ಕೆ ಲಗ್ಗೆ ಹಾಕಿದರು.

ಆ ಅಮರಾವತಿಯನ್ನು ವಶಪಡಿಸಿಕೊಳ್ಳಲು ಸಮರ್ಥರಾದವರಿಗೂ ಸಾಧ್ಯವಿಲ್ಲ. ಗುಢದ್ವೇಷಿಗಳು, ದುರ್ಜನರು, ಪ್ರಾಣಿಹಿಂಸಕರು, ಸೊಕ್ಕಿದವರು, ಕಾಮುಕರು, ಕಡುಲೋಭಿಗಳು, ಪಾಪಿಗಳು ಆ ಸ್ವರ್ಗಕ್ಕೆ ಹೋಗಲು ಸಾಧ್ಯವೇ ಇಲ್ಲ. ಪ್ರಕೃತ ಗುರುಗಳಾದ ಶುಕ್ರಾಚಾರ್ಯರ ಆಶೀರ್ವಾದದ ಸಾಮರ್ಥ್ಯದಿಂದ ಅಂಥ ಸ್ವರ್ಗಲೋಕದ ಮೇಲೆ ದೈತ್ಯರು ದಾಳಿಮಾಡಿದರು.

ದೇವತೆಗಳ ಆವಾಸಸ್ಥಾನವಾದ ಆ ಸ್ವರ್ಗವನ್ನು ದೈತ್ಯರೆಲ್ಲರೂ ಸುತ್ತು ಮುತ್ತಿದರು. ಬಲಿಯು ಯುದ್ಧಸೂಚಕವಾದ ಶಂಖವನ್ನು ಮೊಳಗಿಸಿದ. ಆ ಧ್ವನಿಯನ್ನು ಕೇಳಿದ ಶಚಿ ಮುಂತಾದ ದೇವತಾಸ್ತ್ರೀಯರೆಲ್ಲರೂ ಹೆದರಿದರು.

ಇಂದ್ರನು ಬಲಿಯ ಈ ವ್ಯಾಪಾರವನ್ನು ಕಂಡ. ಹಿಂದಿಗಿಂತಲೂ ಅಧಿಕ- ವಾದ ಶಕ್ತಿಯನ್ನು ಬಲಿಯು ಸಂಪಾದಿಸಿದ್ದಾನೆಂದು ಇಂದ್ರನಿಗೆ ಅರ್ಥವಾಯಿತು. ದೇವತೆಗಳಿಂದ ಯುಕ್ತನಾಗಿ ಗುರುಗಳಾದ ಬೃಹಸ್ಪತ್ಯಾಚಾರ್ಯರ ಹತ್ತಿರ ಹೋಗಿ ಕೇಳಿದ.

ಪೂಜ್ಯರಾದ ಬೃಹಸ್ಪತಿಗಳೇ! ಈಗ ಈ ಬಲಿಯು ಬಲಿಷ್ಠನೆಂದು ನನಗನಿಸುತ್ತಿದೆ. ಈಗ ಯುದ್ಧ ಮಾಡಿ ಬಲಿಯನ್ನು ಗೆಲ್ಲಲು ಸಾಧ್ಯವಿಲ್ಲವೆಂದು ನನಗೆ ತೋರುತ್ತಿದೆ. ಇಂಥ ಶಕ್ತಿ ಬಲಿಗೆ ಎಲ್ಲಿಂದ ಪ್ರಾಪ್ತವಾಗಿದೆ? ಯಾವ ತಪಸ್ಸಿನ ಸಾಮರ್ಥ್ಯದಿಂದ ಬಲಿಯು ಸಮರ್ಥನಾಗಿದ್ದಾನೆ? ಅದನ್ನು ತಿಳಿಸಿರಿ.

ಇಂದ್ರನ ಮಾತುಗಳನ್ನು ಕೇಳಿ ಬೃಹಸ್ಪತಿಗಳು ನುಡಿದರು. ಹೇ ಇಂದ್ರನೇ! ಬಲಿಯು ತನ್ನ ಗುರುಗಳಾದ ಶುಕ್ರಾಚಾರ್ಯರ ಅನುಗ್ರಹವನ್ನು ಸಂಪಾದಿಸಿಕೊಂಡಿದ್ದಾನೆ. ಆ ಗುರುಗಳಿಂದಲೇ ಇಷ್ಟು ಬಲಿಷ್ಠನಾಗಿದ್ದಾನೆ.

ಯಮನ ಎದುರು ನಿಲ್ಲಲು ಸಾಮಾನ್ಯರಿಗೆ ಸಾಧ್ಯವೇ ಇಲ್ಲ. ಹಾಗೆ ಯಾರೂ ಸಮರ್ಥನಾದ ಈ ಬಲಿಯ ಮುಂದೆ ನಿಲ್ಲಲು ಸಮರ್ಥರಲ್ಲ. ದೇವತೆಗಳಾದ ನಿಮ್ಮೆಲ್ಲರಿಗಿಂತಲೂ ಬಲಿಯು ಈಗ ಸಮರ್ಥನಾಗಿದ್ದಾನೆ. ಈಗ ಅವನಿಗೆ ಉನ್ನತಿಯ ಕಾಲ. ಮತ್ತೆ ನಿಮಗೆ ಉನ್ನತಿಯ ಕಾಲವು ಬರುವ ತನಕ ಈ ಲೋಕವನ್ನು ಬಿಟ್ಟು ಅದೃಶ್ಯರಾಗಿರಿ.

ಶುಕ್ರಾಚಾರ್ಯರ ಎಲ್ಲ ಬ್ರಾಹ್ಮಣರ ಬಲದಿಂದ ಈಗ ಬಲಿಯು ಮಹಾಸಮರ್ಥ-ನಾಗಿದ್ದಾನೆ. ಅವನ ಜೊತೆ ಯುದ್ಧ ಮಾಡುವುದು ಈಗ ಬೇಡ. ಯಾವ ಬ್ರಾಹ್ಮಣರ ಅನುಗ್ರಹದಿಂದ ಇಷ್ಟು ಸಮರ್ಥನಾಗಿದ್ದಾನೋ, ಆ ಬ್ರಾಹ್ಮಣರ ನಿಗ್ರಹದಿಂದಲೇ ಮತ್ತೆ ಈ ಬಲಿಯು ವಿನಷ್ಟನಾಗುತ್ತಾನೆ. ಅಲ್ಲಿಯ ತನಕ ನೀವಾರೂ ಈ ಸ್ವರ್ಗದಲ್ಲಿ ಇರುವುದು ಬೇಡ. ಎಂದು ಬೃಹಸ್ಪತಿಗಳು ದೇವತೆಗಳಿಗೆ ಉಪದೇಶಿಸಿದರು.

ಭವಿಷ್ಯವನ್ನು ತಿಳಿದ, ಗುರುಗಳಾದ ಬೃಹಸ್ಪತಿಗಳು ಹೀಗೆ ಹೇಳಿದ್ದನ್ನು ದೇವತೆಗಳೆಲ್ಲರೂ ಕೇಳಿಸಿಕೊಂಡರು. ಈ ಸಂದರ್ಭದಲ್ಲಿ ಮಾಡಬೇಕಾದ ಕಾರ್ಯಗಳನ್ನು ತಮ್ಮಲ್ಲಿಯೇ ವಿಚಾರಿಸಿದರು. ಐಚ್ಛಿಕವಾದ ರೂಪವನ್ನು ಧರಿಸಿ ಸ್ವರ್ಗವನ್ನು ಪರಿತ್ಯಜಿಸಿದರು. ಬೇರೇ ಪ್ರದೇಶಕ್ಕೆ ಪ್ರಯಾಣಮಾಡಿದರು.

ಹೀಗೆ ದೇವತೆಗಳೆಲ್ಲರೂ ಸ್ವರ್ಗವನ್ನು ಪರಿತ್ಯಜಿಸಿದರು. ಬಲಿಚಕ್ರವರ್ತಿಯು ದೇವತೆಗಳ ರಾಜಧಾನಿಯಾದ ಅಮರಾವತಿಯನ್ನು ವಶಪಡಿಸಿಕೊಂಡ. ಮೂರ್ಲೋಕಕ್ಕೆ ಅನಭಿಷಿಕ್ತಚಕ್ರವರ್ತಿಯಾದ.

ಶುಕ್ರಾಚಾರ್ಯರು ಶಿಷ್ಯವತ್ಸಲರು. ಬಲಿಯು ವಿಶ್ವವನ್ನೇ ಗೆದ್ದಿದ್ದ. ಇಂದ್ರನಾಗಿದ್ದ. ಆ ಇಂದ್ರಪದವಿಯನ್ನು ಸ್ಥಿರವಾಗಿಸಬೇಕೆಂದು ನೂರು ಅಶ್ವಮೇಧಯಾಗಗಳನ್ನು ಬಲಿಯಿಂದ ಮಾಡಿಸಿದರು. ಆ ಯಾಗದ ಮೂಲಕ ವಿಷ್ಣುವಿನ ಆರಾಧನೆಯನ್ನು ಮಾಡಿಸಿದರು.

ನಕ್ಷತ್ರಾಧಿಪತಿಯಾದ ಚಂದ್ರನಂತೆ ಬಲಿಯು ಕಂಗೊಳಿಸಿದ. ಬ್ರಾಹ್ಮಣರ ಅನುಗ್ರಹಬಲದಿಂದ ಸಂಪಾದಿತವಾದ ತ್ರೈಲೋಕ್ಯಾಧಿಪತ್ಯವನ್ನು ಸುಖವಾಗಿ ಅನುಭವಿಸಿದ. ಆದರೆ ಈ ತ್ರೈಲೋಕ್ಯಾಧಿಪತ್ಯ ಹರಿಕರುಣೆಯಿಂದ ಸಂಪಾದಿತವಾದುದಲ್ಲ. ಆದ್ದರಿಂದ ಇದು ಅಸ್ಥಿರ ಎಂಬ ಭಾವನೆ ಬಲಿಗೆ ಬರಲೇ ಇಲ್ಲ.

**॥ ಇತಿ ಶ್ರೀಮದ್ಭಾಗವತೇ ಅಷ್ಟಮಸ್ಕಂಧೇ ಚತುರ್ದಶೋಽಧ್ಯಾಯಃ ॥**

★★★

## ಅಥ ಪಂಚದಶೋಽಧ್ಯಾಯಃ

ದೇವಮಾತೆಯಾದ ಅದಿತಿಯು ಕಂಗೆಟ್ಟುಹೋದಳು. ಪುತ್ರರು ಸ್ವರ್ಗಭ್ರಷ್ಟರಾದುದನ್ನು ಅದಿತಿಗೆ ನುಂಗಿಕೊಳ್ಳಲು ಆಗಲಿಲ್ಲ. ತನ್ನ ಮಕ್ಕಳನ್ನು ಹೇಗೆ ಸಂರಕ್ಷಿಸಿಕೊಳ್ಳಬೇಕೆಂದು ತಿಳಿಯದಾದಳು. ರಕ್ಷಕರಿಲ್ಲದೇ ಸಂತಪ್ತಳಾದಳು.

ಅದೊಂದು ದಿನ. ಚಿರಕಾಲ ಧ್ಯಾನಮಗ್ನರಾದ ಕಶ್ಯಪರು ಧ್ಯಾನವಿರತರಾದರು. ಅದಿತಿಯ ಆಶ್ರಮಕ್ಕೆ ಬಂದರು. ಆಶ್ರಮವು ಶೂನ್ಯವಾದಂತೆ ಕಳಾಹೀನವಾಗಿತ್ತು. ಏನಾಗಿದೆ? ಯಾಕೆ ಹೀಗೆ? ಎಂದು ತಿಳಿಯದಾದರು. ಆಶ್ರಮವನ್ನು ಪ್ರವೇಶಿಸಿದರು. ಎಲ್ಲಿಯೂ ಉತ್ಸವಿಲ್ಲ. ಉತ್ಸಾಹವೇ ಇಲ್ಲ. ಈಗ ನೋಡಿದಂತೆ ಈ ಆಶ್ರಮವನ್ನು ಎಂದಿಗೂ ಕಂಡಿರಲಿಲ್ಲ. ಕಶ್ಯಪರಿಗೆ ಆಶ್ಚರ್ಯವಾಯಿತು. ಆಶ್ರಮವನ್ನು ಪ್ರವೇಶಿಸಿದರು. ಆಶ್ರಮಕ್ಕೆ ಬಂದಿರುವ ಪತಿಯನ್ನು ವಿಧ್ಯುಕ್ತವಾಗಿಯೇ ಅದಿತಿಯು ಪೂಜಿಸಿದಳು. ಕಶ್ಯಪರು ವಾತ್ಸಲ್ಯದಿಂದ ಆ ಪೂಜೆಯನ್ನು ಸ್ವೀಕರಿಸಿದರು. ಪ್ರೀತಿಯ ಮಡದಿಯನ್ನು ಮಾತನಾಡಿಸಿದರು.

ಸದಾ ಮಂಗಳ ಕಾರ್ಯಗಳಲ್ಲಿ ತೊಡಗಿರುವ ಪ್ರಿಯೇ! ಯಾಕೆ ಹೀಗಿರುವೆ? ಆಶ್ರಮದಲ್ಲಿ ಎಲ್ಲಿಯೂ ಉತ್ಸಾಹ-ಉತ್ಸವಗಳಿಲ್ಲ. ಆಶ್ರವೆಲ್ಲವೂ ಶೋಭಾಹೀನವಾಗಿದೆ. ಏನಾಗಿದೆ? ಯಾವ ಅನರ್ಥ ಘಟಿಸಿಹೋಗಿದೆ?

ಗೃಹಸ್ಥರು ಅತಿಥಿ-ಅಗ್ನಿಗಳ ಪೂಜೆಯಿಂದಲೇ ಸುಖಿಸುತ್ತಾರೆ. ಅತಿಥಿ-ಅಗ್ನಿಗಳ ಅವಮಾನದಿಂದ ದುಃಖದ ಸಾಗರದಲ್ಲಿ ಮುಳುಗುತ್ತಾರೆ. ಇದು ಶ್ರುತಿ-ಸ್ಮೃತಿಗಳ ತೀರ್ಮಾನ. ಅನ್ಯಕರ್ಮಗಳಲ್ಲಿಯ ಆಸಕ್ತಿಯಿಂದ ಅತಿಥಿಗಳು ಆದರದಿಂದ ಅರ್ಚಿತರಾಗಿಲ್ಲವೇ? ನನ್ನ ವಿರಹದ ವೇದನೆಯಿಂದ ಅಗ್ನಿಗಳು ವಿಧ್ಯುಕ್ತವಾಗಿ ಪೂಜಿತರಾಗಿಲ್ಲವೇ? ಪ್ರಿಯರಾದವರಿಗೆ ಅಕಾಲಮರಣ ಒದಗಿಬಂದಿದೆಯೇ? ಏನಾಗಿದೆ. ತಿಳಿಸು.

ಅಪ್ರಿಯವಾದ ಘಟನೆ ನಡೆದಿದೆ ಎಂದು ಅಸ್ವಸ್ಥವಾದ ನಿನ್ನ ಮನಸ್ಸು ಹೇಳುತ್ತಿದೆ. ನಿನ್ನ ಮಕ್ಕಳಾದ ಇಂದ್ರಾದಿಗಳೆಲ್ಲರೂ ಕ್ಷೇಮವಾಗಿ ಇದ್ದಾರೆ ತಾನೆ? ಕೊರಗುತ್ತ ಕೂಡ ಬೇಡ. ಏನಾಗಿದೆ ಹೇಳು.

ಕಶ್ಯಪರ ಮಾತಿನಿಂದ ಅದಿತಿಗೆ ಸ್ವಲ್ಪ ಸಮಾಧಾನವಾಯಿತು. ಆಶ್ರಮದಲ್ಲಿ ಎಲ್ಲ ಧಾರ್ಮಿಕಕಾರ್ಯಗಳೂ ಸಾಂಗವಾಗಿ ನಡೆದಿವೆ. ಅತಿಥಿ-ಅಗ್ನಿಗಳ ಪೂಜೆ ನಿರಾತಂಕವಾಗಿ ನಡೆದಿದೆ. ಯಾವುದೇ ಲೋಪ-ದೋಷಗಳು ಇಲ್ಲ. ನಿಮ್ಮ ಈ ಆಶ್ರಮವು ತ್ರಿವರ್ಗದ ಸಾಧನೆಯ ಕ್ಷೇತ್ರವಾಗಿದೆ. ಅಗ್ನಿಗಳು, ಅತಿಥಿಗಳು, ಅಭ್ಯಾಗತರು, ಸೇವಕರು, ಭಿಕ್ಷುಗಳು, ಫಲಾಪೇಕ್ಷಿಗಳೆಲ್ಲರೂ ಸಂತುಷ್ಟರಾಗಿಯೇ ಇದ್ದಾರೆ. ಈ ಆಶ್ರಮವನ್ನು ಪ್ರವೇಶಿಸಿದ ಯಾರೂ ಅಸಂತುಷ್ಟರಾಗಿಲ್ಲ. ಸದಾ ನಿಮ್ಮ ಸ್ಮರಣೆಯ ಬಲದಿಂದ ಅಂಥ ಅನರ್ಥವೇನೂ ನಡೆದಿಲ್ಲ. ಯಾವುದಕ್ಕೂ ಕೊರತೆಯಾಗಿಲ್ಲ.

ನನಗೆ ಸಂತಾನಭಾಗ್ಯವನ್ನು ಕರುಣಿಸಿದ ಪ್ರಜಾಧ್ಯಕ್ಷರು ನೀವು. ನನ್ನ ಮನದ ತೊಳಲಾಟವನ್ನು ನಿಮಗೆ ಹೇಳುತ್ತೇನೆ.

ಈಗ ದೈತ್ಯರ ಉನ್ನತಿಯ ಕಾಲ. ನಿಮ್ಮ ಪುತ್ರರಾದ ದೇವತೆಗಳಿಗೆ ಅವನತಿಯ ಕಾಲ. ಭಗವಂತನ ನಿಯತಿಗೆ ಎಲ್ಲರೂ ಬದ್ಧರಾಗಬೇಕಾಗುತ್ತದೆ. ಆದರೂ ಬಂದ ಕಷ್ಟಗಳನ್ನು ಕಳೆದುಕೊಳ್ಳಬೇಕೆಂದು ಪ್ರತಿಯೊಬ್ಬರೂ ಆಶಿಸುತ್ತಾರೆ.

ನಿಮ್ಮ ಪತ್ನಿಯಾದ ನನಗೆ ಯಾವುದೇ ವಿಧವಾದ ಕುಂದು-ಕೊರತೆಗಳಿಲ್ಲ. ನಿಮ್ಮನ್ನು ಪತಿಯನ್ನಾಗಿ ಪಡೆದದ್ದೇ ನನ್ನ ಜನ್ಮದ ಸಾಫಲ್ಯ . ಸವತಿಯಾದ ದಿತಿಯ ಮಕ್ಕಳಾದ ದೈತ್ಯರಿಂದ ನನ್ನ ಮಕ್ಕಳು ಸ್ವರ್ಗಭ್ರಷ್ಟರಾಗಿದ್ದಾರೆ. ಅವರು ಮತ್ತೆ ಸ್ವರ್ಗನಿವಾಸಿಗಳಾಗಬೇಕು. ಇಂದ್ರ ಮತ್ತೆ ಆ ಸಿಂಹಾಸನವನ್ನು ಅಧಿಷ್ಠಿಸಬೇಕು. ಅದನ್ನು ನೋಡಲು ನಾನು ಬಯಸಿದ್ದೇನೆ. ಕಷ್ಟದಲ್ಲಿದ್ದ ಮಕ್ಕಳನ್ನು ನೋಡಲು ಯಾವ ತಾಯಿ ಸಮರ್ಥಳಾಗುತ್ತಾಳೆ. ಮಕ್ಕಳ ಕಷ್ಟದಲ್ಲಿ ಯಾವ ಮಾತೆಯ ಕಂಬನಿ ಹರಿಯುವುದಿಲ್ಲ? ಮಕ್ಕಳಿಗೆ ಬಂದ ಈ ಆಪತ್ತನನ್ನು ದೇವರು ಪರಿಹರಿಸುತ್ತಾನೆ. ಆದರೆ ಅದಕ್ಕೆ ಉಪಾಯವನ್ನು ನಾವು ಅನುಷ್ಠಾನ ಮಾಡಬೇಕಲ್ಲವೇ? ಆದ್ದರಿಂದ ಮಕ್ಕಳಿಗೆ ಮತ್ತೆ ಸ್ವರ್ಗವನ್ನು ದೊರಕಿಸಿ ಕೊಡುವಂಥ ಉಪಾಯವನ್ನು ತಾವು ನಿರ್ದೇಸಿಸಬೇಕು.

ಅದಿತಿಯ ಪ್ರಾರ್ಥನೆಯನ್ನು ಕಶ್ಯಪರು ಆಲಿಸಿದರು. ಬಂಧಕವಾದ ವಿಷ್ಣುವಿನ ಮಾಯೆಯನ್ನು ನೆನೆದರು. ಭಗವಂತನ ಮಾಯೆಯಿಂದ ಎಲ್ಲ ಪ್ರಪಂಚವೂ ಮಕ್ಕಳು ಮುಂತಾದ ವಿಷಯಗಳಲ್ಲಿ ಆಸಕ್ತವಾಗುವುದನ್ನು ಸ್ಪಷ್ಟವಾಗಿ ಕಂಡರು. ಸ್ನೇಹಪಾಶದ ಸಾಮರ್ಥ್ಯವನ್ನು ಪ್ರತ್ಯಕ್ಷವಾಗಿ ತನ್ನ ಮಡದಿಯಲ್ಲಿಯೇ ಕಂಡರು. ದೊಡ್ಡವರೂ, ತಿಳಿದವರೂ ಆ ಸ್ನೇಹಪಾಶದಿಂದ ಹೇಗೆ ಬದ್ಧರಾಗುತ್ತಾರೆ ಎಂಬುದನ್ನು ಪ್ರತ್ಯಕ್ಷವಾಗಿ ನೋಡಿದರು. ಮುಗುಳುನಕ್ಕರು.

ಈ ದೇಹ ಪಂಚಭೂತಗಳಿಂದ ನಿರ್ಮಿತವಾಗಿದೆ. ಇದು ಜಡ. ಪ್ರಾಕೃತವಾದ ಈ ದೇಹ ಎಲ್ಲಿಯದು? ಎಲ್ಲಿಯ ಅಪ್ರಾಕೃತನಾದ ಆತ್ಮ. ಈ ದೇಹ-ಆತ್ಮಗಳಿಗೆ ಯಾವ ಸಂಬಂಧವೂ ಇಲ್ಲ. ಆದ್ದರಿಂದ ಯಾರು ಯಾರಿಗೆ ಪತಿ. ಯಾರು ಯಾರಿಗೆ ಪತ್ನಿ. ಯಾರು ಯಾರ ಮಕ್ಕಳು. ಯಾರು ಯಾರಿಗೆ ತಂದೆ-ತಾಯಿ. ಇವರೆಲ್ಲರೂ ದೇಹಾನುಬಂಧಿಗಳೇ ಹೊರತು ಜೀವಾನುಬಂಧಿಗಳಲ್ಲ. ಆದರೂ ಮೋಹಕ್ಕೆ ಒಳಗಾದ ಜೀವ ನನ್ನವರು ಎಂದು ಭ್ರಮಿಸುತ್ತಾನೆ. ನಾನು ಕಪ್ಪು. ನಾನು ಕೆಂಪು. ನಾನು ಪತ್ನಿ. ನಾನು ಪತಿ ಎಂದು ಭ್ರಮಿಸುತ್ತಾನೆ. ಬಲುಸಂಭ್ರಮಿಸುತ್ತಾನೆ. ಶ್ರೀಹರಿಯ ಬಂಧಕಶಕ್ತಿಯಿಂದಲೇ ಜೀವನು ಅಜ್ಞಾನಿಯಾಗಿದ್ದಾನೆ.

ಪ್ರಕೃತ ಈ ಅದಿತಿಯೂ ಶ್ರೀಹರಿಯ ಇಚ್ಛೆಯಿಂದಲೇ ಸ್ನೇಹಬದ್ಧಳಾಗಿದ್ದಾಳೆ. ಭಗವಂತನ ಸೇವೆಯಿಂದಲೇ ಈ ಸ್ನೇಹಬಂಧನ ತೊಲಗುತ್ತದೆ. ಬಂಧಮುಕ್ತಿಯು ದೊರೆಯುತ್ತದೆ. ಆದ್ದರಿಂದ ಶ್ರೀಹರಿಯ ಸೇವೆಯನ್ನು ಮಾಡಲು ತನ್ನ ಮಡದಿಗೆ ಆದೇಶಿಸಿದರು.

ಹೇ ಅದಿತಿಯೇ! ಸರ್ವಾರ್ಥಗಳನ್ನೂ ಸಂಪಾದಿಸಿಕೊಡಲು ಸಮರ್ಥ ಪರಮಾತ್ಮ. ಅಭೀಷ್ಟಪ್ರತಿಬಂಧಕಗಳನ್ನೆಲ್ಲ ಆ ಪರಮಾತ್ಮನೇ ನಾಶಪಡಿಸುತ್ತಾನೆ. ಎಲ್ಲರ ಹೃದಯಗುಹೆಯಲ್ಲಿ ಆ ಪರಮಾತ್ಮ ವಾಸವಾಗಿದ್ದಾನೆ. ಬಿಂಬನಾದ ಆ ಪರಮಾತ್ಮನನ್ನು ಒಲಿಸುವ ಕರ್ಮಗಳನ್ನು ಮಾಡು. ಭಕ್ತಿಯಿಂದ ಭಗವಂತನನ್ನು ಪೂಜಿಸು. ಭಗವಂತ ದೀನರನ್ನು ಕರುಣಿಸುತ್ತಾನೆ. ನಿನ್ನ ಎಲ್ಲ ವಿಧವಾದ ಕಾಮನೆಗಳನ್ನು ಪೂರ್ಣಮಾಡುತ್ತಾನೆ. ಭಗವದ್ಭಕ್ತಿಯೇ ಸರ್ವಾರ್ಥಸಾಧಕವಾಗಿದೆ. ಅದು ಎಂದೂ ವ್ಯರ್ಥವಾಗಿಲ್ಲ. ಎಂದಿಗೂ ವ್ಯರ್ಥವಾಗುವುದಿಲ್ಲ. ಇತರ ದೇವತೆಗಳ ಆರಾಧನೆಯು ವ್ಯರ್ಥ. ಹೀಗಾಗಿ ದೇವರನ್ನು ಸೇವಿಸು. ಎಂದು ಉಪದೇಶಿಸಿದರು.

ದೇವರ ಆರಾಧನೆ ಸರ್ವಾರ್ಥಸಾಧಕ ಎಂದು ತಾವು ಹೇಳಿದಿರಿ. ಸಂತೋಷ. ನಾನು ಮಹಿಳೆ. ನಾನು ಅಬಲೆ. ಯಾವ ವಿಧಾನದಿಂದ ನಾನು ದೇವರನ್ನ ಸೇವಿಸಲಿ? ಹೇಗೆ ದೇವರನ್ನು ಅರ್ಚಿಸಲಿ? ಹೇಗೆ ದೊರೆಯನ್ನು ಮೆಚ್ಚಿಸಲಿ? ವಿಧಿ-ವಿಧಾನಗಳನ್ನು ನನಗೆ ಉಪದೇಶಿಸಿರಿ. ಎಂದು ಅದಿತಿಯು ಕೇಳಿದಳು.

ನಾನು, ನನ್ನ ಮಕ್ಕಳು ಸಂಕಷ್ಟದಲ್ಲಿ ಸಿಲುಕಿದ್ದೇವೆ. ಈ ಸಂಕಷ್ಟವು ಶೀಘ್ರವಾಗಿ ದೂರವಾಗಬೇಕು. ಶ್ರೀಹರಿಯನ್ನು ಶೀಘ್ರವಾಗಿ ಸಂತೋಷಪಡಿಸುವಂಥ ಸೇವೆಯನ್ನು ನನಗೆ ಉಪದೇಶಿಸಿರಿ. ಎಂದು ಕೇಳಿದಳು.

ಕಶ್ಯಪರು ಪ್ರೀತರಾಗಿ ನುಡಿದರು. ಪ್ರಜೋತ್ಪತ್ತಿಯನ್ನು ಮಾಡುವ ಪ್ರಸಂಗದಲ್ಲಿ ಬ್ರಹ್ಮದೇವರು ನನಗೆ ಉಪದೇಶಿಸಿದ ವ್ರತವನ್ನು ನಿನಗೂ ಉಪದೇಶಿಸುತ್ತೇನೆ. ಆ ವ್ರತದಿಂದ ಭಗವಂತ ಶ್ರೀಘ್ರವಾಗಿಯೇ ಪ್ರಸನ್ನನಾಗುತ್ತಾನೆ. ಸರ್ವಾರ್ಥಗಳನ್ನು ತಂದುಕೊಡುವಂಥ ವ್ರತ ಅದು. ಅದು ಪಯೋವ್ರತ. ದೇವರಿಗೆ ನಿವೇದಿತವಾದ, ಯಜ್ಞಶಿಷ್ಟವಾದ ಹಾಲನ್ನು ಮಾತ್ರ ಕುಡಿದು ಮಾಡಬೇಕಾದ ವ್ರತ.

ಫಾಲ್ಗುಣಮಾಸದ ಶುಕ್ಲಪಕ್ಷದಲ್ಲಿ ಹನ್ನೆರಡು ದಿನಗಳ ವರೆಗೆ ಪ್ರತಿಪತ್ ತಿಥಿಯಿಂದ ದ್ವಾದಶಿಯ ವರೆಗೆ ಈ ಪಯೋವ್ರತವನ್ನು ಆಚರಿಸಬೇಕು. ಭಕ್ತಿಯಿಂದ ಈ ವ್ರತವನ್ನು ಮಾಡಬೇಕು. ಪ್ರತಿನಿತ್ಯವೂ ಪರಮಾತ್ಮನನ್ನು ವಿಶೇಷವಾದ ರೀತಿಯಲ್ಲಿ ಪೂಜಿಸಬೇಕು.

ಈ ವ್ರತ ಸ್ತ್ರೀ-ಪುರುಷಸಾಧಾರಣವಾಗಿದೆ. ಸ್ತ್ರೀಯರು, ಪುರುಷರು ಯಾರಾದರೂ ಈ ವ್ರತವನ್ನು ಮಾಡಬಹುದು.

ಚತುರ್ದಶೀಯುಕ್ತವಾದ ಮಾಘಅಮಾವಾಸ್ಯಾ ದಿವಸವು ಲಭ್ಯವಾಗಿದ್ದರೇ ಅವತ್ತಿನ ದಿನದಲ್ಲಿಯೇ ಪರಿಶುದ್ಧವಾದ ಜಲಾಶಯದಲ್ಲಿ ಸ್ನಾನಮಾಡಬೇಕು. ಪರಿಶುದ್ಧವಾದ ಮೃತ್ತಿಕೆಯಿಂದ ದೇಹವನ್ನು ಲೇಪಿಸಿಕೊಳ್ಳಬೇಕು. ಹೀಗೆ ಮೃತ್ತಿಕಾಸ್ನಾನ ಮಾಡಬೇಕು. ದೇಹದ ಶುದ್ಧಿಯನ್ನು ಸಂಪಾದಿಸಿಕೊಳ್ಳಬೇಕು.

**ತ್ವಂ ದೇವ್ಯಾದಿವರಾಹೇಣ ರಸಾಯಾಃ ಸ್ಥಾನಮಿಚ್ಛತಾ ।**
**ಉದ್ಧೃತಾಸಿ ನಮಸ್ತುಭ್ಯಂ ಪಾಪ್ಮಾನಂ ಮೇ ಪ್ರಣಾಶಯ ॥**

ಸ್ನಾನ ಮಾಡಿದ ಮೇಲೆ ಮೇಲಿನ ಈ ಮಂತ್ರವನ್ನು ಪಠಿಸಬೇಕು.

ಸಂಧ್ಯಾವಂದನ-ಔಪಾಸನ ಮುಂತಾದ ಎಲ್ಲ ನಿತ್ಯಾಹ್ನಿಕಗಳನ್ನು ಪೂರ್ತಿಮಾಡಿಕೊಳ್ಳಬೇಕು. ವರ್ಣಾಶ್ರಮವಿಹಿತವಾದ ಧರ್ಮಗಳನ್ನೆಲ್ಲ ಪಾಲಿಸಬೇಕು. ಪಯೋವ್ರತದ ನೆಪದಲ್ಲಿ ನಿತ್ಯವಿಹಿತವಾದ ಕರ್ಮಗಳನ್ನು ಲೋಪಗೊಳಿಸಬಾರದು. ನಂತರ ಏಕಾಗ್ರಮನಸ್ಕನಾಗಿ ಭಗವಂತನನ್ನು ಅರ್ಚಿಸಬೇಕು.

೧. ಶಾಲಗ್ರಾಮದಲ್ಲಿ-ಬಂಗಾರ-ಬೆಳ್ಳಿ ಮುಂತಾದ ಲೋಹಗಳಿಂದ ನಿರ್ಮಿತವಾದ ಪ್ರತಿಮೆಗಳಲ್ಲಿ, ೨. ಸ್ವಚ್ಛವಾದ, ಪರಿಶುದ್ಧವಾದ ಸ್ಥಳದಲ್ಲಿ-ಹೋಮ ಮಾಡುವ ಸ್ಥಂಡಿಲದಲ್ಲಿ, ೩. ಸೂರ್ಯನಲ್ಲಿ, ೪. ನೀರಿನಲ್ಲಿ, ೫. ಅಗ್ನಿಯಲ್ಲಿ ೬. ಗುರುಗಳಲ್ಲಿ ಈ ಅಧಿಷ್ಠಾನಗಳಲ್ಲಿ ಭಗವಂತನ ಆರಾಧನೆಯನ್ನು ಮಾಡಬೇಕು. ಸ್ತ್ರೀಯರು

ಪತ್ಯಂತರ್ಯಾಮಿಯಾದ ಪರಮಾತ್ಮನನ್ನು ವಿಶೇಷವಾಗಿ ಪೂಜಿಸಬೇಕು. ಶಾಲಗ್ರಾಮಾದಿಗಳಲ್ಲಿ ದೇವರನ್ನು ಪೂಜಿಸಬಾರದು.

ಈ ಕೆಳಗಿನ ಶ್ಲೋಕಗಳನ್ನು ಪಠಿಸುತ್ತಾ ಧ್ಯಾನ-ಆವಾಹನ ಮುಂತಾದ ಉಪಚಾರಗಳನ್ನು ಸಮರ್ಪಿಸಬೇಕು.

**ನಮಸ್ತುಭ್ಯಂ ಭಗವತೇ ಪುರುಷಾಯ ಮಹೀಯಸೇ ।**
**ಸರ್ವಭೂತನಿವಾಸಾಯ ವಾಸುದೇವಾಯ ಸಾಕ್ಷಿಣೇ ॥೨೯॥**

**ನಮೋಽವ್ಯಕ್ತಾಯ ಸೂಕ್ಷ್ಮಾಯ ಪ್ರಧಾನಪುರುಷಾಯ ಚ ।**
**ಚತುರ್ವಿಂಶದ್ಗುಣಜ್ಞಾಯ ಗುಣಸಂಖ್ಯಾನಹೇತವೇ ॥೩೦॥**

**ನಮೋ ದ್ವಿಶೀರ್ಷ್ಣೇ ತ್ರಿಪದೇ ಚತುಃಶೃಂಗಾಯ ತಂತವೇ ।**
**ಸಪ್ತಹಸ್ತಾಯ ಯಜ್ಞಾಯ ತ್ರಯೀವಿದ್ಯಾತ್ಮನೇ ನಮಃ ॥೩೧॥**

**ನಮಃ ಶಿವಾಯ ರುದ್ರಾಯ ನಮಃ ಶಕ್ತಿಧರಾಯ ಚ ।**
**ಸರ್ವವಿದ್ಯಾಧಿಪತಯೇ ಭೂತಾನಾಂ ಪತಯೇ ನಮಃ ॥೩೨॥**

**ನಮೋ ಹಿರಣ್ಯಗರ್ಭಾಯ ಪ್ರಾಣಾಯ ಜಗದಾತ್ಮನೇ ।**
**ಯೋಗೈಶ್ವರ್ಯಶರೀರಾಯ ನಮಸ್ತೇ ಯೋಗಹೇತವೇ ॥೩೩॥**

**ನಮಸ್ತ ಆದಿದೇವಾಯ ದೇವದೇವಾಯ ತೇ ನಮಃ ।**
**ನಾರಾಯಣಾಯ ಋಷಯೇ ನರಾಯ ಹರಯೇ ನಮಃ ॥೩೪॥**

**ನಮೋ ಮರಕತಶ್ಯಾಮವಪುಷೇಽಧಿಗತಶ್ರಿಯೇ ।**
**ಕೇಶವಾಯ ನಮಸ್ತುಭ್ಯಂ ನಮಸ್ತೇ ಪೀತವಾಸಸೇ ॥೩೫॥**

**ತ್ವಂ ಸರ್ವವರದಃ ಪುಂಸಾಂ ವರೇಣ್ಯ ವರದರ್ಷಭ ।**
**ಅತಸ್ತೇ ತಪಸಾ ಧೀರಾಃ ಪಾದರೇಣುಮುಪಾಸತೇ ॥೩೬॥**

**ಅನ್ವವರ್ತಂತ ಯಂ ದೇವಾಃ ಶ್ರೀವಿನಿರ್ಜಿತಪದ್ಮಯೋಃ ।**
**ಸ್ಪೃಹಯಂತ ಇವಾಮೋದಂ ಭಗವಾನ್ ಮೇ ಪ್ರಸೀದತಾಮ್ ॥೩೭॥**

ಈ ಒಂಭತ್ತು ಶ್ಲೋಕಗಳನ್ನು ಅರ್ಥಾನುಸಂಧಾನಪೂರ್ವಕವಾಗಿ ಭಕ್ತಿಯಿಂದ ಪಠಿಸುತ್ತಾ ಧ್ಯಾನಾವಾಹನಾದಿ ಉಪಚಾರಗಳನ್ನು ಸಮರ್ಪಿಸಬೇಕು. ಶ್ರದ್ಧೆಯಿಂದ ಮಾಡಿದ ಕರ್ಮವೇ ಫಲಪ್ರದವಾಗುತ್ತದೆ.

ಶಾಲಗ್ರಾಮದಲ್ಲಿ, ಸುವರ್ಣಾದಿ ಪ್ರತಿಮೆಗಳಲ್ಲಿ ಆವಾಹಿತನಾದ ಪರಮಾತ್ಮನಿಗೆ ಕ್ಷೀರಾಭಿಷೇಕ ಮಾಡಬೇಕು. ಗಂಧ-ಹೂ-ತುಲಸಿಗಳಿಂದ ಭಗವಂತನನ್ನು ವಿಶೇಷವಾಗಿ ಅರ್ಚಿಸಬೇಕು. ಧೂಪ-ದೀಪಗಳಿಂದ ಅರ್ಚಿಸಿ ತುಪ್ಪ ಬೆಲ್ಲ ಸಣ್ಣಕ್ಕಿ ಈ ಪದಾರ್ಥಗಳಿಂದ ಸ್ವಾದಿಷ್ಠವಾದ ರೀತಿಯಲ್ಲಿ ಪಾಯಸವನ್ನು ಮಾಡಬೇಕು. **ಓಂ ನಮೋ ಭಗವತೇ ವಾಸುದೇವಾಯ** ಎಂಬ ದ್ವಾದಶಾಕ್ಷರಮಂತ್ರವನ್ನು ಜಪಿಸುತ್ತಾ ಆ ಪಾಯಸವನ್ನು ದೇವರಿಗೆ ನಿವೇದಿಸಬೇಕು. ವಾಸುದೇವದ್ವಾದಶಾಕ್ಷರಮಂತ್ರದಿಂದಲೇ ಪಾಯಸದ ಹೋಮವನ್ನು ಮಾಡಬೇಕು. ನೈವೇದ್ಯವಾದ ಮೇಲೆ ಆಚಮನವನ್ನು ದೇವರಿಗೆ ನೀಡಬೇಕು. ಪುಷ್ಪಾದಿಗಳಿಂದ ವಿಶೇಷವಾಗಿ ಅರ್ಚಿಸಬೇಕು. ಆರ್ತಿಕ್ಯಗಳಿಂದ ದೇವರನ್ನು ನೀರಾಜಿಸಬೇಕು. ತಾಂಬೂಲ-ದಕ್ಷಿಣೆಯನ್ನು ಸಮರ್ಪಿಸಬೇಕು. ದ್ವಾದಶಾಕ್ಷರಮಂತ್ರವನ್ನು ನೂರ ಎಂಟು ಬಾರಿ ಜಪಿಸಬೇಕು. **ಜಿತಂ ತೇ** ಸ್ತೋತ್ರದಿಂದ, **ನಾರಾಯಣೋ ನರಃ ಶೌರಿಃ** ಎಂಬ ಸ್ತೋತ್ರದಿಂದ ಭಗವಂತನನ್ನು ಸ್ತುತಿಸಬೇಕು. ಪ್ರದಕ್ಷಿಣ-ದಂಡಪ್ರಣಾಮ- ಗಳನ್ನು ಸಮರ್ಪಿಸಬೇಕು. ಶ್ರೀಹರಿಯ ನಿರ್ಮಾಲ್ಯವನ್ನು ತಲೆಯಲ್ಲಿ ಧರಿಸಿ ಆವಾಹಿತವಾದ ಬಿಂಬಮೂರ್ತಿಯನ್ನು ಮತ್ತೆ ಹೃದಯದಲ್ಲಿ ನೆಲೆಗೊಳಿಸಬೇಕು.

ಇಬ್ಬರಿಗೆ ಕಡಿಮೆಯಾಗದಂತೆ ಸದಾಚಾರಿಗಳಾದ, ವೈಷ್ಣವರಾದ ಬ್ರಾಹ್ಮಣರಿಗೆ, ಸಾಧ್ಯವಾದರೆ ಹನ್ನೆರಡು ಜನ ಬ್ರಾಹ್ಮಣರಿಗೆ ಯಥಾಶಕ್ತಿ ಭೋಜನ ಮಾಡಿಸಬೇಕು. ವಿಶೇಷವಾಗಿ ಶ್ರೀಹರಿನಿವೇದಿತವಾದ ಪಾಯಸದ ಭೋಜನ ಮಾಡಿಸಬೇಕು. ನಂತರ ತಾಂಬೂಲ-ದಕ್ಷಿಣಾದಿಗಳಿಂದ ಬ್ರಾಹ್ಮಣರನ್ನು ಸತ್ಕರಿಸಬೇಕು. ಅವರಿಂದ ಅನುಜ್ಞೆಯನ್ನು ಪಡೆದು ಹುತಶೇಷ, ಬ್ರಾಹ್ಮಣಭುಕ್ತಶೇಷವನ್ನು ಸಂತೋಷದಿಂದ ತನ್ನ ಪರಿವಾರದೊಂದಿಗೆ ಭುಂಜಿಸಬೇಕು.

ವ್ರತಾರಂಭದ ಹಿಂದಿನ ದಿವಸದ ಅಮಾವಾಸ್ಯಾದಿಂದ ಬ್ರಹ್ಮಚರ್ಯವನ್ನು ಪಾಲಿಸಬೇಕು. ಗುಹ್ಯೇಂದ್ರಿಯವನ್ನು ನಿಯಮಿಸಬೇಕು.

ಪ್ರತಿಪತ್ ದಿವಸದಿಂದ ಯಥೋಕ್ತವಾದ ರೀತಿಯಲ್ಲಿ ಶುದ್ಧವಾಗಿ ಸ್ನಾನ ಮಾಡಿ ಏಕಾಗ್ರಚಿತ್ತನಾಗಿ ವ್ರತಮುಗಿಯುವ ತನಕ ದೇವರಿಗೆ ಕ್ಷೀರಾಭಿಷೇಕವನ್ನು ಮಾಡಬೇಕು. ಪ್ರತಿನಿತ್ಯವೂ ಭಗವಂತನ ವಿಶೇಷಾರಾಧನೆಯನ್ನು ಮಾಡಬೇಕು. ಪ್ರತಿನಿತ್ಯವೂ ಹಾಲಿನ ಪಾಯಸವನ್ನು ದೇವರಿಗೆ ನಿವೇದಿಸಿ ದ್ವಾದಶಾಕ್ಷರಮಂತ್ರದಿಂದ ಹೋಮಿಸಬೇಕು. ಪ್ರತಿನಿತ್ಯವೂ ಬ್ರಾಹ್ಮಣಭೋಜನವನ್ನು ಹಿಂದೆ ಹೇಳಿದಂತೆಯೇ ಮಾಡಿಸಬೇಕು. ಸ್ವಯಂ ತಾನು ಅವಶಿಷ್ಟವಾದ ಹಾಲನ್ನು ಮಾತ್ರ ಸ್ವೀಕರಿಸಬೇಕು. ಹಾಲು ಹೊರತು ಬೇರೇ ಯಾವ ಪದಾರ್ಥಗಳನ್ನೂ ಸ್ವೀಕರಿಸಬಾರದು. ಶರೀರಶೋಷಣ ಆಗುವಂತೆ ಈ ಪಯೋವ್ರತವನ್ನು ಮಾಡಬೇಕು. ಹೀಗೆ ಶ್ರೀಹರಿಯಲ್ಲಿ ಭಕ್ತಿಯಿಂದ ಈ ಪಯೋವ್ರತವನ್ನು ಆಚರಿಸಬೇಕು.

ಹೀಗೆ ಹನ್ನೆರಡು ದಿವಸಗಳ ತನಕ ಅರ್ಥಾತ್ ಪ್ರತಿಪತ್ ತಿಥಿಯಿಂದ ದ್ವಾದಶಿಯವರೆಗೆ ಪಯೋವ್ರತವನ್ನು ಆಚರಿಸಬೇಕು.

ಈ ಹನ್ನೆರಡು ದಿವಸ ಅನೇಕ ನಿಯಮಗಳನ್ನು ಪಾಲಿಸಬೇಕು. ಯಾವ ಪ್ರಾಣಿಗಳನ್ನೂ ಹಿಂಸಿಸಬಾರದು. ಶ್ರೀಹರಿಯಲ್ಲಿ ವಿಶೇಷವಾದ ಭಕ್ತಿಯನ್ನು ಮಾಡಬೇಕು. ಬ್ರಹ್ಮಚಾರಿಯಾಗಿ ಚಾಪೆಯಲ್ಲಿ ಮಲಗಬೇಕು. ನಿತ್ಯವೂ ಮೂರು ಹೊತ್ತು ಸ್ನಾನ ಮಾಡಬೇಕು. ಅಸಜ್ಜನರ ಜೊತೆ ಮಾತನಾಡಿಸಬಾರದು. ಸಣ್ಣ-ದೊಡ್ಡ ಎಲ್ಲವಿಧವಾದ ಭೋಗಗಳನ್ನು ಪರಿತ್ಯಜಿಸಬೇಕು.

ಫಾಲ್ಗುಣ ಶುಕ್ಲ ತ್ರಯೋದಶಿಯ ದಿವಸ ವಿಶೇಷವಾದ ರೀತಿಯಲ್ಲಿ ದೇವರಿಗೆ ಕ್ಷೀರಾಭಿಷೇಕವನ್ನು ಮಾಡಬೇಕು. ಬ್ರಾಹ್ಮಣರಿಂದ ಮಾಡಿಸಬೇಕು. ದ್ರವ್ಯಲೋಭ ಮಾಡದೇ ಯಥಾಶಕ್ತಿ ವೈಭವೋಪೇತವಾಗಿ ದಾನ-ಧರ್ಮಗಳನ್ನು ಮಾಡಿ ಈ ವ್ರತವನ್ನು ಮುಕ್ತಾಯಗೊಳಿಸಬೇಕು.

ಜ್ಞಾನಸಂಪನ್ನರಾದ ಆಚಾರ್ಯರಿಗೆ ವಸ್ತ್ರ-ಆಭರಣ-ಧೇನು ಮುಂತಾದ ವಸ್ತುಗಳನ್ನು ದಾನ ಮಾಡಬೇಕು. ಅವರ ಮನಸ್ಸನ್ನು ಸಂತೋಷಪಡಿಸಬೇಕು. ಹೋಮಕ್ಕೆ ಬಂದಿರುವ ಎಲ್ಲ ಋತ್ವಿಜರನ್ನೂ ಸಂತೋಷಪಡಿಸಬೇಕು. ಇದನ್ನು ಅಂತರ್ಯಾಮಿಯಾದ ಶ್ರೀಹರಿಯ ಪೂಜೆ ಎಂದು ಭಾವಿಸಬೇಕು. ಷಡ್ರಸೋಪೇತವಾದ, ಪರಿಶುದ್ಧವಾದ ಆಹಾರದಿಂದ ಬ್ರಾಹ್ಮಣರನ್ನು ಸಂತೋಷಪಡಿಸಬೇಕು.

ಆ ಪಯೋವ್ರತಕ್ಕಾಗಿ ಬಂದಿರುವ ಅಭ್ಯಾಗತರನ್ನು, ಋತ್ವಿಜರಲ್ಲದ ಬ್ರಾಹ್ಮಣರನ್ನು ಯಥಾಶಕ್ತಿ ಅನ್ನದಾನಾದಿಗಳಿಂದ ಸತ್ಕರಿಸಬೇಕು. ಗುರುಗಳಿಗೆ, ಋತ್ವಿಜರಿಗೆ ಯಥಾಯೋಗ್ಯವಾಗಿ ದಕ್ಷಿಣಾದಿಗಳನ್ನು ನೀಡಿ ಸತ್ಕರಿಸಬೇಕು.

ಅಲ್ಲಿ ಉಪಸ್ಥಿತರಾದ ಚಂಡಾಲಾಂತ ಎಲ್ಲ ವೈಷ್ಣವರಿಗೂ ಅನ್ನ-ವಸ್ತ್ರಾದಿಗಳನ್ನು ನೀಡಿ ಸಂತೋಷಪಡಿಸಬೇಕು. ಹೀಗೆ ಅನ್ನದಾನದಿಂದ ಎಲ್ಲರನ್ನೂ ಸಂತೋಷಪಡಿಸುವುದು ವಿಷ್ಣುಪ್ರೀತಿಕರ ಎಂಬುದಾಗಿ ಚಿಂತಿಸಬೇಕು.

ದೀನಾಂಧಕೃಪಣರೆಲ್ಲರ ಭೋಜನವಾದ ಮೇಲೆ ಬಂಧುಸಮೇತನಾಗಿ ತಾನು ಭೋಜನ ಮಾಡಬೇಕು. ಪ್ರತಿನಿತ್ಯವೂ ಹನ್ನೆರಡು ದಿವಸಗಳ ತನಕ ನೃತ್ಯ-ಗೀತ-ವಾದ್ಯ-ಸಂಗೀತಗಳಿಂದ ವಿಧವಿಧವಾದ ಸ್ತೋತ್ರಗಳ ಪಾರಾಯಣದಿಂದ, ಸತ್ಕಥಾಶ್ರವಣಗಳಿಂದ ಕಾಲವನ್ನು ಕಳೆಯಬೇಕು. ಇಂಥ ಈ ಪಯೋವ್ರತವು ಪುರುಷಾರಾಧನರೂಪವಾಗಿದೆ.

ಪಿತಾಮಹರಾದ ಬ್ರಹ್ಮದೇವರು ಈ ವ್ರತವನ್ನು ನನಗೆ ಉಪದೇಶಿಸಿದ್ದಾರೆ. ಆ ವ್ರತವನ್ನು ನಿನಗೆ ಉಪದೇಶ ಮಾಡಿದ್ದೇನೆ. ನೀನು ಮಹಾಭಾಗ್ಯವಂತಳು. ನೀನು ಕೂಡಾ ಶುದ್ಧವಾದ ಭಾವನೆಯಿಂದ ಈ ವ್ರತವನ್ನು ಅನುಷ್ಠಾನ ಮಾಡು. ಭಗವಂತನ ಸೇವೆಯನ್ನು

ಮಾಡಲು ರಮಾಬ್ರಹ್ಮಾದಿಗಳು ಸಾಲುಗಟ್ಟಿ ನಿಂತಿದ್ದಾರೆ. ನಮ್ಮ ಆರಾಧನೆಯಿಂದ ದೇವರಿಗೆ ಆಗಬೇಕಾದದ್ದು ಏನೂ ಇಲ್ಲ. ಹೀಗೆ ಚಿಂತಿಸುತ್ತಾ ಅಹಂಕಾರ-ಮಮಕಾಗಳನ್ನು ಕಳೆದುಕೊಂಡು ಈ ವ್ರತವನ್ನು ಅನುಷ್ಠಾನ ಮಾಡು. ಪರಮಾತ್ಮನನ್ನು ಆರಾಧಿಸು.

ಎಲ್ಲ ಯಜ್ಞಗಳ ಫಲ ಈ ಪಯೋವ್ರತದಿಂದ ಲಭ್ಯವಾಗುತ್ತದೆ. ಆದ್ದರಿಂದ ಈ ಪಯೋವ್ರತವು ಸರ್ವಯಜ್ಞನಾಮಕವಾಗಿದೆ. ಹೀಗೆಂದು ಶಾಸ್ತ್ರಗಳಲ್ಲಿ ಪ್ರಸಿದ್ಧವಾಗಿದೆ. ಎಲ್ಲ ತಪಸ್ಸುಗಳ ಸಾರ ಈ ಪಯೋವ್ರತ. ಸರ್ವವ್ರತಗಳ ಫಲ ಈ ಪಯೋವ್ರತಕ್ಕೆ. ಶ್ರೀಹರಿಗೆ ತೃಪ್ತಿಕರವಾದ ವ್ರತ ಈ ಪಯೋವ್ರತ. ಶ್ರೀಹರಿ ಸಂಪ್ರೀತಿಕರವಾದುದೇ ನಿಜವಾದ ವ್ರತವಾಗಿದೆ. ಈ ವ್ರತದಿಂದ ಸಂತುಷ್ಟನಾದ ಪರಮಾತ್ಮ ನಿನ್ನ ಅಪೇಕ್ಷೆಗಳನ್ನು ಪೂರ್ಣಗೊಳಿಸುತ್ತಾನೆ.

**॥ ಇತಿ ಶ್ರೀಮದ್ಭಾಗವತೇ ಅಷ್ಟಮಸ್ಕಂದೇ ಪಂಚದಶೋಽಧ್ಯಾಯಃ ॥**

★★★

## ಅಥ ಷೋಡಶೋಽಧ್ಯಾಯಃ

ಕಶ್ಯಪರು ಹೀಗೆ ತನ್ನ ಧರ್ಮಪತ್ನಿಯಾದ ಅದಿತಿದೇವಿಗೆ ಪಯೋವ್ರತವನ್ನು ಉಪದೇಶಿಸಿದರು. ಅದಿತಿದೇವಿಯು ಅತ್ಯಂತ ನಿಷ್ಠಳಾಗಿ, ಪರಿಶುದ್ಧಳಾಗಿ ಹನ್ನೆರಡು ದಿವಸಗಳ ಈ ವ್ರತವನ್ನು ಸಾಂಗವಾಗಿ, ಅತ್ಯಂತ ವೈಭವದಿಂದ ಅನುಷ್ಠಾನ ಮಾಡಿದಳು.

ಇಂದ್ರಿಯಗಳನ್ನೆಲ್ಲ ನಿಗ್ರಹಿಸಿದಳು. ಭಗವಂತನಲ್ಲಿಯೇ ಮನಸ್ಸನ್ನು ತಲ್ಲೀನಗೊಳಿಸಿದಳು. ಸರ್ವೋತ್ತಮನ ಚಿಂತನೆಯಲ್ಲಿ ಮಗ್ನಳಾದಳು. ಇಂದ್ರಿಯಾಗೋಚರನಾದ ಪರಮಾತ್ಮನನ್ನು ಸಂತೋಷಪಡಿಸುತ್ತ ಈ ವ್ರತವನ್ನು ಪಾಲಿಸಿದಳು.

ಅದಿತಿದೇವಿಯ ಶ್ರದ್ಧೆಯನ್ನು ಕಂಡು ಭಗವಂತ ಅವಳಿಗೆ ಕಾಣಿಸಿಕೊಂಡ. ದೇವರನ್ನು ಕಂಡ ಕ್ಷಣದಲ್ಲಿಯೇ ಕೈಜೋಡಿಸುತ್ತ ಎದ್ದುನಿಂತಳು. ಸ್ತೋತ್ರ ಮಾಡಬೇಕೆಂದುಕೊಂಡಳು. ಆದರೆ ಶ್ರೀಹರಿದರ್ಶನದ ಅತ್ಯುತ್ಸಾಹದಲ್ಲಿ, ಮೀರಿದ ಸಂತೋಷದಲ್ಲಿ ಅವಳ ಶರೀರ ನಡುಗಿತು. ರೋಮಾಂಚಿತಗಾತ್ರಳಾದಳು. ಕಣ್ಣುಗಳಲ್ಲಿ ಆನಂದಬಾಷ್ಪಗಳು ತುಂಬಿದವು. ಕಂಠ ಬಿಗಿಯಿತು. ಸ್ತೋತ್ರ ಮಾಡಲು ಮಾತುಗಳೇ ಹೊರ ಬರಲಿಲ್ಲ. ಸುಮ್ಮನೆ ನಿಂತು ಬಿಟ್ಟಳು.

ಸರ್ವಯಜ್ಞಪಾಲಕನಾದ, ಸಕಲಜಗದ್ರಕ್ಷಕನಾದ ಪರಮಾತ್ಮನನ್ನು ನೋಡಿದಳು. ನೋಡಿ ದಣಿದಳು. ಆದರೆ ತಣಿಯಲೇ ಇಲ್ಲ. ನೋಡುತ್ತಲೇ ನಿಂತಳು. ಗದ್ಗದವಾದ ಮಾತುಗಳಿಂದಲೇ ದೇವರನ್ನು ಸ್ತುತಿಸಲು ಪ್ರಾರಂಭಿಸಿದಳು.

ಹೇ ಭಗವನ್! ನೀನು ಅಶ್ವಮೇಧ ಮುಂತಾದ ಸಕಲಯಜ್ಞಗಳಿಗೆ ನಿಯಾಮಕನಾಗಿರುವಿ. ಎಲ್ಲ ಯಜ್ಞಗಳ ಮುಖ್ಯ ಉದ್ದೇಶ ನೀನಾಗಿರುವಿ. ದೇಶ-ಕಾಲ-ಗುಣಗಳಿಂದ ನಿನಗೆ ಚ್ಯುತಿಯೇ ಇಲ್ಲ. ಭಾಗೀರಥೀ ಮುಂತಾದ ಜಗತ್ಪಾವನಕರವಾದ ತೀರ್ಥಗಳೆಲ್ಲ ನಿನ್ನ ಪಾದಗಳಿಂದಲೇ ಉದ್ಭೂತವಾಗಿವೆ. ನಿನ್ನ ಕೀರ್ತಿ ಅತ್ಯಂತ ಪವಿತ್ರಕರ. ನಿನ್ನ ಮಹಿಮೆ ಕಿವಿಗಳಿಗೆ ಹಬ್ಬ. ಕಷ್ಟಕ್ಕೀಡಾದ ಲೋಕವನ್ನು ಪರಿಪಾಲಿಸುವುದು ನಿನ್ನ ವ್ರತ. ಅದು ನಿನಗೆ ಪ್ರಿಯವಾದ ಕಾರ್ಯ. ಎಲ್ಲರಿಗೂ ಉಪಜೀವ್ಯ ನೀನು. ಅಜ್ಞಾನಾದಿಗಳಿಂದ ಪರಿತಪಿಸುವ ಜನರನ್ನು ಬೆಳಕಿನೆಡೆ ಕರೆದೊಯ್ಯುವ ದೊರೆ ನೀನು. ಸರ್ವನಿಯಾಮಕ ನೀನು. ನಮಗೆ ಸುಖವನ್ನು ನೀಡು. ನಮ್ಮನ್ನ ಉದ್ಧರಿಸು.

ಅದಿತಿಯ ಸ್ತುತಿಯಿಂದ ಭಗವಂತ ಸಂತುಷ್ಟನಾದ. ಪ್ರೀತಿಯಿಂದ, ವಾತ್ಸಲ್ಯದಿಂದ ಅವಳೊಂದಿಗೆ ಮಾತನಾಡಿದ. ಹೇ ಅದಿತಿಯೇ! ನಿನ್ನ ಅಪೇಕ್ಷೆ ಏನೆಂದು ನನಗೆ ತಿಳಿದಿದೆ. ನಿನ್ನ ಮಕ್ಕಳು ಸ್ವರ್ಗಭ್ರಷ್ಟರಾಗಿದ್ದಾರೆ. ಅವರು ಮತ್ತೆ ಯುದ್ಧದಲ್ಲಿ ದುರಹಂಕಾರಿಗಳಾದ ದೈತ್ಯರನ್ನು ಗೆದ್ದು ಸ್ವರ್ಗಸಂಪತ್ತನ್ನು ಪಡೆಯಬೇಕು. ಅಂಥ ಮಕ್ಕಳೊಂದಿಗೆ ನನ್ನ ಉಪಾಸನೆಯನ್ನು ಮಾಡುವುದು ನಿನ್ನ ಬಯಕೆ. ಮೊದಲಿನಂತೆ ಮತ್ತೆ ಇಂದ್ರಾದಿಗಳೆಲ್ಲರೂ ತಮ್ಮ ತಮ್ಮ ಸ್ಥಳಗಳಲ್ಲಿ ಸುಖಿಸುತ್ತಾ ಇರಬೇಕೆಂಬುದೇ ನಿನ್ನ ಅಪೇಕ್ಷೆಯಾಗಿದೆ.

ಆದರೆ ಈ ಪ್ರಸಂಗದಲ್ಲಿ ನಿನ್ನ ಮಕ್ಕಳಾದ ಇಂದ್ರಾದಿಗಳು ಬಲಿ ಮುಂತಾದ ದೈತ್ಯರನ್ನು ಗೆಲ್ಲಲು ಸಮರ್ಥರಲ್ಲ. ಕಾಲ ಕೂಡಿ ಬಂದಾಗ ನಾನೇ ಉಪಾಯವನ್ನು ಮಾಡುತ್ತೇನೆ. ಇಂದ್ರಾದಿಗಳು ಮತ್ತೆ ಸ್ವರ್ಗನಿವಾಸಿಗಳಾಗುವಂತೆ ಮಾಡುತ್ತೇನೆ. ನೀನು ಮಾಡಿದ ಪೂಜೆ ವ್ಯರ್ಥವಾಗುವುದಿಲ್ಲ. ಸಿದ್ಧಿಯು ಶೀಘ್ರವಾಗಿ ದೊರೆಯುವುದಿಲ್ಲ. ಶ್ರದ್ಧಾಪೂರ್ವಕವಾದ ಈ ಪಯೋವ್ರತದಿಂದ ನಾನು ಸಂತುಷ್ಟನಾಗಿದ್ದೇನೆ. ಈ ವ್ರತ, ನನ್ನ ಸಂತೋಷ ಎಂದಿಗೂ ಹುಸಿಯಾಗುವುದಿಲ್ಲ. ನಾನೇ ನಿನ್ನ ಮಗನಾಗಿ ಜನಿಸುತ್ತೇನೆ. ನನ್ನ ಸಹೋದರರಿಗೆ ಮತ್ತೆ ಸ್ವರ್ಗ ಸಿಗುವಂತೆ ಮಾಡುತ್ತೇನೆ. ಆ ಇಂದ್ರನನ್ನು ಸಂರಕ್ಷಿಸುತ್ತಾ ಇರುತ್ತೇನೆ.

ಮಗನಾಗುವ ಬಯಕೆಯಿಂದ ಪತಿಯನ್ನು ಸೇವಿಸು. ನೀನು ನೋಡುತ್ತಿರುವ ಈ ರೂಪವನ್ನೇ ಚಿಂತಿಸು. ನಾನು ಹೇಳಿದ ಈ ವಿಷಯವು ದೇವಗುಹ್ಯವಾಗಿದೆ. ಇದನ್ನು ಯಾರಿಗೂ ಹೇಳಬೇಡ. ಶತ್ರುಗಳಿಗಂತೂ ಹೇಳಲೇಬೇಡ. ನಿನ್ನ ಎಲ್ಲ ಅಪೇಕ್ಷೆಗಳೂ ಅತಿಶೀಘ್ರವಾಗಿಯೇ ಸಿದ್ಧಿಸುತ್ತವೆ.

ಇಷ್ಟು ಹೇಳಿದ ಭಗವಂತ ಅಲ್ಲಿಯೇ ಅಂತರ್ಹಿತನಾದ. ಭಗವಂತನನ್ನೇ ಮಗನನ್ನಾಗಿ ಪಡೆಯುವ ಸೌಭಾಗ್ಯ ಅತ್ಯಂತ ದುರ್ಲಭ. ಜಗದ್ಧಾರಕನನ್ನೇ ಹೊಟ್ಟೆಯಲ್ಲಿ ಧರಿಸುವ ಮಹಾಭಾಗ್ಯ ಯಾರಿಗೆ ದೊರೆಯಲು ಸಾಧ್ಯ? ಈ ವರವನ್ನು ಪಡೆದ ನಾನೇ ಧನ್ಯಳು. ಇಂದು ನಾನು ಕೃತಕೃತ್ಯಳು. ಎಂದು ಅದಿತಿಯು ಭಾವಿಸಿದಳು. ಮಕ್ಕಳಿಗೆ ಸ್ವರ್ಗವು ಮರಳಿ

ದೊರೆಯಬೇಕೆಂಬುದು ಅದಿತಿಯ ಬಯಕೆಯಾಗಿತ್ತು . ಭಗವಂತನೇ ಬಂದು ಮಗನಾಗುತ್ತೇನೆಂದು ವರ ನೀಡಿರುವುದನ್ನು ನೆನೆಯುತ್ತ ಅದಿತಿಯು ಭಾವುಕಳಾದಳು. ಭಗವಂತನ ಆಜ್ಞೆಯಂತೆ ಪತಿಯನ್ನು ಸೇವಿಸಿದಳು.

ಶ್ರೀಹರಿಯ ಧ್ಯಾನದ ಸಾಮರ್ಥ್ಯದಿಂದ ಭವಿಷ್ಯವೆಲ್ಲ ಕಶ್ಯಪರಿಗೆ ಕಾಣಿಸಿತು. ತನ್ನಲ್ಲಿ ವಿಶೇಷರೂಪದಿಂದ ಭಗವಂತ ಪ್ರವಿಷ್ಟನಾದುದನ್ನು ಅನುಭವಿಸಿದರು. ತನ್ಮಯರಾದರು.

ಊರ್ಧ್ವರೇತಸ್ಕರಾದದ್ದರಿಂದ ಬಹುದಿನ ಸಂಭೃತವಾದ, ತಪಸ್ಸು ಮುಂತಾದ ಕರ್ಮಗಳಲ್ಲಿ ಸಂಚಿತವಾದ ಅತ್ಯಂತ ಪವಿತ್ರವಾದ ವೀರ್ಯವನ್ನು ಅದಿತಿಯಲ್ಲಿ ಆಧಾನಮಾಡಿದರು.

ಕಶ್ಯಪರ ವೀರ್ಯದ ಮೂಲಕ ಅದಿತಿಯ ಗರ್ಭವನ್ನು ಭಗವಂತ ಪ್ರವೇಶ ಮಾಡಿರುವುದನ್ನು ಬ್ರಹ್ಮದೇವರು ತಿಳಿದರು. ಸಂತುಷ್ಟಚಿತ್ತರಾದರು. ಇತರಾಜ್ಞೇಯವಾದ ನಾಮಗಳಿಂದ ಗರ್ಭಸ್ಥನಾದ ಭಗವಂತನನ್ನು ಸ್ತುತಿಸಿದರು.

ಭಗವಂತ ಉರುಗಾಯನಾಗಿದ್ದಾನೆ. ವೇದಾದಿಶಾಸ್ತ್ರಗಳಿಂದ ಪ್ರತಿಪಾದ್ಯನಾಗಿದ್ದಾನೆ. ರಮಾ-ಬ್ರಹ್ಮಾದಿಗಳಿಂದ ಗೀಯಮಾನನಾಗಿದ್ದಾನೆ. ಭಗವಂತನ ಪಾದವಿಕ್ಷೇಪ ಅತ್ಯಂತ ವಿಚಿತ್ರವಾಗಿದೆ. ಇತರಾಸಾಧ್ಯವಾಗಿದೆ. ಪರಮಾತ್ಮ ಗುಣಪೂರ್ಣನಾಗಿದ್ದಾನೆ. ಆತ ನನ್ನ ಶತ್ರುಗಳನ್ನು ಸದೆಬಡೆಯಲಿ. ಆ ಭಗವಂತ ಯಾವಾಗಲೂ ಜಯಶೀಲನಾಗಿದ್ದಾನೆ. ಸತ್ತ್ವಾದಿಗುಣಗಳಿಗೆ ಪ್ರವರ್ತಕನಾಗಿದ್ದಾನೆ. ಅಂಥ ಪರಮಾತ್ಮನಿಗೆ ನಮಸ್ಕಾರ ಎಂದು ನುಡಿದರು.

ಗಂಭೀರವಾದ ಸಮುದ್ರದಲ್ಲಿ ಮುಳುಗುತ್ತಿರುವವರನ್ನು ದೋಣಿಯು ಎತ್ತಿ ಹಿಡಿಯುವಂತೆ ಸ್ವರ್ಗಭ್ರಷ್ಟರಾದ ದೇವತೆಗಳನ್ನು ಉದ್ದರಿಸುವ ನಾಥ ನೀನು. ಅವರಿಗೆಲ್ಲ ನೀನೇ ಆಶ್ರಯನಾಗಿರುವಿ.

**॥ ಇತಿ ಶ್ರೀಮದ್ಭಾಗವತೇ ಅಷ್ಟಮಸ್ಕಂಧೇ ಷೋಡಶೋऽಧ್ಯಾಯಃ ॥**

★★★

## ಅಥ ಸಪ್ತದಶೋऽಧ್ಯಾಯಃ

ಅದಿತಿಯಿಂದ ಸ್ತುತನಾದ ಪರಮಾತ್ಮ ಆ ಮಾತೆಯಲ್ಲಿ ಅಭಿವ್ಯಕ್ತನಾದ. ಚತುರ್ಭುಜಗಳಿಂದ ಶಂಖ-ಗದಾ-ಪದ್ಮ-ಚಕ್ರಗಳನ್ನು ಧರಿಸಿ, ತಾನು ಧರಿಸಿದ ಆಭರಣಗಳಿಂದ ಅಲ್ಲಿಯ ತಿಮಿರವನ್ನು ತರಿಯುತ್ತ ಭಗವಂತ ಅವತರಿಸಿದ.

ಶ್ರೀಹರಿಯು ಅವತರಿಸಿದ ಕಾಲದಲ್ಲಿ ಎಲ್ಲ ದಿಕ್ಕುಗಳು ಪ್ರಸನ್ನವಾದವು. ಸರೋವರಗಳೆಲ್ಲವೂ ನಿರ್ಮಲವಾದವು. ಸಜ್ಜನರೆಲ್ಲರಿಗೂ ಅವ್ಯಕ್ತವಾದ ಆನಂದವಾಯಿತು. ವನೋಪವನಗಳು ಎಲ್ಲ ಋತುಗಳಲ್ಲಿಯ ಫಲ-ಪುಷ್ಪಗಳಿಂದ ಭರಿತವಾದವು. ಭೂಮಿ ಮುಂತಾದ ಎಲ್ಲ ಲೋಕಗಳೂ ಪ್ರಶಾಂತವಾದವು. ಬ್ರಾಹ್ಮಣರು, ಆಕಳುಗಳು, ಪಕ್ಷಿಗಳು, ಪರ್ವತಗಳು ವೃಕ್ಷಗಳು ಎಲ್ಲದಕ್ಕೂ ಆನಂದವಾಯಿತು. ಲೋಕಾಭಿಮಾನಿದೇವತೆಗಳೆಲ್ಲರೂ ಸಂತುಷ್ಟರಾದರು.

ಭಾದ್ರಪದ ಮಾಸದ ಶ್ರವಣನಕ್ಷತ್ರಯುಕ್ತವಾದ ವಿಜಯಾನಾಮಕವಾದ ದ್ವಾದಶೀತಿಥಿಯಲ್ಲಿ, ಅಭಿಜಿನ್ಮುಹೂರ್ತದಲ್ಲಿ ಭಗವಂತ ಅವತರಿಸಿದ. ಆ ಸಂದರ್ಭದಲ್ಲಿ ಅಶ್ವಿನೀ ಮೊದಲಾದ ೨೭ ನಕ್ಷತ್ರಗಳು, ಉಳಿದ ತಾರಾಗಳು ಶ್ರೀಹರಿಯ ಅವತಾರ ಉದಾರವಾಗುವಂತೆ ಮಾಡಿದವು.

ಆ ಪ್ರಸಂಗದಲ್ಲಿ ಶಂಖ-ದುಂದುಭಿ, ನಗಾರಿಗಳು, ಮೃದಂಗ, ಪಟಹಗಳ ಸದ್ದು ಎಲ್ಲ ಕಡೆ ಕೇಳಿಸಿತು. ಅನೇಕವಿಧವಾದ ವಾದ್ಯಗಳ ಧ್ವನಿ ಆಕಾಶದಿಂದ ಕೇಳಿಬಂದಿತು.

ಭಗವಂತನ ಅವತಾರದಿಂದ ಸಂತುಷ್ಟರಾದ ನಾರದಾದಿ ಮುನಿಗಳು, ಬ್ರಹ್ಮಾದಿದೇವತೆಗಳು, ಸ್ವಾಯಂಭುವಾದಿ ಮನುಗಳು, ಅಗ್ನಿಷ್ವಾತ್ತಾದಿ ಪಿತೃಗಳು, ಆಹವನೀಯಾದ್ಯಗ್ನಿಗಳು ಅವತರಿಸಿದ ಭಗವಂತನ ಮೇಲೆ ಕುಸುಮವೃಷ್ಟಿಯನ್ನು ಗೈದರು. ಕಿಂಪುರುಷ, ಕಿನ್ನರ, ಸಿದ್ಧ, ವಿದ್ಯಾಧರ, ಚಾರಣ, ಯಕ್ಷ, ರಾಕ್ಷಸ, ಗರುಡ, ನಾಗಗಣಗಳು ಭಗವಂತನ ಸ್ತೋತ್ರಮಾಡಿದವು.

ದೇವತೆಗಳ ಅನುಚರರಾದ ಗಂಧರ್ವರು ಅಪ್ಸರಾಸ್ತ್ರೀಯರು ಹಾಡುತ್ತಾ, ಕುಣಿಯುತ್ತಾ ಅದಿತಿಯ ಆಶ್ರಮದ ಮೇಲೆ ಪುಷ್ಪವೃಷ್ಟಿಯನ್ನು ಮಾಡಿದರು.

ಅದಿತಿದೇವಿಯು ತನ್ನ ಗರ್ಭದಿಂದ ಅವತರಿಸಿದ ಪರಮಾತ್ಮನನ್ನು ಕಂಡಳು. ಮಂದಹಾಸ ಮಾಡುತ್ತ ಆಶ್ಚರ್ಯಚಕಿತಳಾಗಿ ಪರಮೋತ್ಸಾಹದಿಂದ ಕಂಗೊಳಿಸಿದಳು. ಬಲಿಯನ್ನು ನಿಗ್ರಹಿಸಬೇಕೆಂಬ ತನ್ನ ಇಚ್ಛೆಯಿಂದಲೇ ವಾಮನರೂಪವನ್ನು ಸ್ವೀಕರಿಸಿದ ಶ್ರೀಹರಿಯನ್ನು ಕಂಡು ಎಲ್ಲರೂ ಮೂಕವಿಸ್ಮಿತರಾದರು. ಭಗವಂತನನ್ನು ಸ್ತುತಿಸಿದರು.

ವಟುವಾದ ವಾಮನನನ್ನು ಕಂಡು ವಸಿಷ್ಠ-ಭೃಗು ಮುಂತಾದ ಋಷಿಗಳೆಲ್ಲ ಸಂತುಷ್ಟರಾದರು. ಪ್ರಜಾಪತಿಯಾದ ಕಶ್ಯಪರನ್ನು ಮುಂದೆ ಮಾಡಿ ಜಾತಕರ್ಮಾದಿ ಸಂಸ್ಕಾರಗಳನ್ನು ಮಾಡಿಸಿದರು.

ವಾಮನ ಉಪನಯನದಿಂದ ಸಂಸ್ಕೃತನಾಗುತ್ತಿರುವ ಸಂದರ್ಭ ಅದು. ಸೂರ್ಯನು ಸ್ವಯಂ ಬಂದು ಗಾಯತ್ರಿಯನ್ನು ಭಗವಂತನಿಗೆ ವಿಜ್ಞಾಪಿಸಿಕೊಂಡನು. ಬೃಹಸ್ಪತ್ಯಾ-ಚಾರ್ಯರು ಯಜ್ಞೋಪವೀತವನ್ನು ನೀಡಿದರು. ತಂದೆಯಾದ ಕಶ್ಯಪರು ಮೌಂಜಿಯನ್ನು ನೀಡಿದರು.

ಜಗದೊಡೆಯನಾದ ಆ ದೊರೆಗೆ ಭೂದೇವಿಯು ಕೃಷ್ಣಾಜಿನವನ್ನು ನಿಡಿದಳು. ಚಂದ್ರನು ಪಾಲಾಶದಂಡವನ್ನು ನೀಡಿದನು. ತಾಯಿಯಾದ ಅದಿತಿಯು ಕೌಪೀನವನ್ನು ನೀಡಿದಳು. ದ್ಯುಲೋಕಾಭಿಮಾನಿಯು ಛತ್ರವನ್ನು ನೀಡಿದಳು.

ಬ್ರಹ್ಮದೇವರು ಕಮಂಡಲುವನ್ನು ಕೊಟ್ಟರು. ಸಪ್ತರ್ಷಿಗಳು ದರ್ಭಗಳನ್ನು, ಸರಸ್ವತಿಯು ಜಪಮಾಲೆಯನ್ನು ನೀಡಿದರು. ಕುಬೇರ ಭಿಕ್ಷಾಪಾತ್ರೆಯನ್ನು ನೀಡಿದರೆ, ಸತೀಮಣಿಯಾದ ಉಮಾದೇವಿಯು ಭಿಕ್ಷೆಯನ್ನು ಹಾಕಿದಳು.

ಹೀಗೆ ಬ್ರಹ್ಮಾದಿಗಳಿಂದ ಸತ್ಕೃತನಾಗುತ್ತಾ ಆ ಉಪನಯನ- ಮಹೋತ್ಸವದ ಸಭೆಯಲ್ಲಿ ವಾಮನ ಉತ್ಕೃಷ್ಟನಾಗಿ ಮೆರೆದ. ಆ ಸಭೆಯು ಅತ್ಯಂತ ಅಪೂರ್ವವಾಗಿ ಕಂಗೊಳಿಸಿತು. ಉಪನೀತನಾದ ವಾಮನನು ವಿಹಿತವಾದ ರೀತಿಯಲ್ಲಿ ಸ್ಥಾಪಿಸಿದ, ಸಮಿದ್ಧವಾದ ಅಗ್ನಿಯಲ್ಲಿ ಅಗ್ನಿಕಾರ್ಯವನ್ನು ಮಾಡಿದ. ದೇವತೆಗಳೆಲ್ಲ ಭಕ್ತಿಯಿಂದ ನೀಡಿದ ಛತ್ರಾದಿಗಳನ್ನು ಧರಿಸಿದ ಭಗವಂತ ಎಲ್ಲರಿಗಿಂತಲೂ ಉತ್ಕೃಷ್ಟನಾಗಿ ಕಂಗೊಳಿಸಿದ.

ಅದೇ ಕಾಲದಲ್ಲಿ ಶುಕ್ರಾಚಾರ್ಯರು ಬಲಿಯಿಂದ ಅಶ್ವಮೇಧಯಾಗವನ್ನು ಮಾಡಿಸುತ್ತಿದ್ದರು. ಆ ಪ್ರದೇಶ ನರ್ಮದಾನದಿಯ ತೀರ. ಭೃಗುವತ್ಸಕ್ಷೇತ್ರ . ಪರಮ ಪವಿತ್ರವಾದ ಪರಿಸರ. ಸ್ವರ್ಗವೇ ಧರೆಗೆ ಇಳಿದಂತೆ ಆ ಪ್ರದೇಶವೆಲ್ಲವೂ ಸರ್ವಸಂಪತ್ಸಮೃದ್ಧವಾಗಿದೆ. ಆ ಕ್ಷೇತ್ರಕ್ಕೆ ವಾಮನ ಪ್ರಯಾಣ ಮಾಡಿದ.

ಕ್ರತುಶ್ರೇಷ್ಠವಾದ ಅಶ್ವಮೇಧವು ಪರಮಸಂಭ್ರಮದಿಂದ ಅಲ್ಲಿ ಸಂಪನ್ನವಾಗುತ್ತಿದೆ. ಎಲ್ಲೆಡೆ ದೈವೀಭಾವನೆ ತುಂಬಿ ತುಳುಕುತ್ತಿದೆ. ಆಡಂಬರ ನೆಲಕಚ್ಚಿ ಸೋತುಹೋಗಿದೆ. ಶ್ರದ್ಧಾ-ಭಕ್ತಿಗಳು ಅಂಬರ ಮುಟ್ಟಿ ನಲಿಯುತ್ತಿವೆ. ವಾಮನನ ಪ್ರವೇಶದಿಂದ ಆ ಪ್ರದೇಶವೆಲ್ಲ ಮತ್ತಿಷ್ಟು ಪುಣ್ಯಮಯವಾಯಿತು. ಶುಕ್ರಾಚಾರ್ಯರು ಮುಂತಾದವರೆಲ್ಲ ಅಶ್ವಮೇಧವನ್ನು ಮಾಡಿಸುತ್ತಿದ್ದರು.

ವಾಮನ ಆ ಪ್ರದೇಶವನ್ನು ಪ್ರವೇಶ ಮಾಡಿದ ಕ್ಷಣ... ಶುಕ್ರಾಚಾರ್ಯ ಮುಂತಾದವರೆಲ್ಲರ ಕಣ್ಣುಗಳು ಕೋರೈಸಿದವು. ಉದಯಿಸಿದ ಸೂರ್ಯನೇ ಹತ್ತಿರ ಬಂದಂತೆ ಭಾಸವಾಯಿತು. ಕ್ಷಣದಲ್ಲಿ ಎಲ್ಲರ ಕಣ್ಣು ಕುರುಡಾಯಿತು.

ಯಜ್ಞಕ್ಕಾಗಿ ಕುಳಿತವರೆಲ್ಲ ಕ್ಷಣದಲ್ಲಿಯೇ ಎದ್ದು ನಿಂತರು. ಯಾಗವನ್ನು ನೋಡಲು ಸೂರ್ಯನೇ ಬಂದಿರುವನೆಂದು ಹಲವರು ಉಸುರಿದರು. ಅಗ್ನಿಯೇ ಬಂದನೆಂದು ಕೆಲವರು ಭಾವಿಸಿದರು. ಸನತ್ಕುಮಾರರು ಎಂದು ಮಿಕ್ಕವರು ಅಂದರು.

ಹೀಗೆ ಬಲಿ, ಶುಕ್ರಾಚಾರ್ಯರು ಮುಂತಾದವರೆಲ್ಲ ಅನೇಕ ವಿಧವಾಗಿ ಬಂದ ವ್ಯಕ್ತಿಯ ಬಗ್ಗೆ ತರ್ಕಿಸಿದರು. ಅಷ್ಟರಲ್ಲಿಯೇ ವಾಮನರೂಪಿಯಾದ ಪರಮಾತ್ಮ ಛತ್ರ-ದಂಡಗಳನ್ನು, ಜಲಸಮೇತ ಕಮಂಡಲುವನ್ನು ಧರಿಸಿ ಆ ಯಜ್ಞಶಾಲೆಯನ್ನು ಪ್ರವೇಶಿಸಿದ. ಬಂದ ಬಾಲಬ್ರಹ್ಮಚಾರಿಯನ್ನು ಎಲ್ಲರೂ ಕಂಡರು. ಎದ್ದು ನಿಂತರು. ವಾಮನನಿಗೆ ಎದುರಾಗಿ ಹೋಗಿ ಪೂಜಿಸಿದರು.

ರಮಣೀಯವಾದ ತೇಜಸ್ಸಿನಿಂದ ಕಂಗೊಳಿಸುತ್ತ ಬರುತ್ತಿರುವ ಆ ಬ್ರಾಹ್ಮಣವಟುವಿಗೆ ಯಜಮಾನನಾದ ಬಲಿಯು ಆಸನ ತಂದು ಹಾಕಿದ. ಸ್ವಾಗತವನ್ನು ಹೇಳಿದ. ತಮ್ಮ ಆಗಮನದಿಂದ ನಮಗೆ ಸಂತೋಷವಾಗಿದೆ ಇತ್ಯಾದಿಯಾದ ಪ್ರಶಂಸಾವಚನಗಳಿಂದ ಉಪಚರಿಸಿದ. ಬಂದ ಶ್ರೀಹರಿಯ ಪಾದಗಳನ್ನು ಪ್ರಕ್ಷಾಲನ ಮಾಡಿದ. ಅರ್ಘ್ಯಾದಿಗಳಿಂದ ಪೂಜಿಸಿದ. ಬ್ರಹ್ಮ-ರುದ್ರಾದಿಗಳು ಶಿರಸಾ ಧರಿಸಿದ ಆ ಪಾದಜಲವನ್ನು ಸಂತೋಷದಿಂದ ತಾನು ಧರಿಸಿದ. ಎಲ್ಲ ಪಾಪಗಳ ಪ್ರಕ್ಷಾಲನವಾಯಿತೆಂದು ಭಾವಿಸಿದ.

ಓ ಬ್ರಾಹ್ಮಣವಟುವೇ! ತಮಗೆ ಸ್ವಾಗತ. ಕುಶಲ ತಾನೇ? ಬ್ರಹ್ಮಜ್ಞಾನಿಗಳೆಲ್ಲರ ತಪಸ್ಸಿನ ಸಾಕಾರ ರೂಪದಂತೆ ತಾವು ಕಂಗೊಳಿಸುತ್ತಿರುವಿರಿ. ತಾವು ಬಂದಿರುವುದು ನಮಗೆ ಸಂತಸ ತಂದಿದೆ. ತಮ್ಮ ಆಗಮನದಿಂದ ನಮ್ಮ ಕುಲವು ಪುನೀತವಾಗಿದೆ. ನಮ್ಮ ಪಿತೃಗಳು ಇವತ್ತು ಸಂತೃಪ್ತರಾಗಿದ್ದಾರೆ. ನಾನು ಮಾಡುತ್ತಿರುವ ಈ ಅಶ್ವಮೇಧವು ತಮ್ಮ ಆಗಮನದಿಂದ ಸುಸಂಪನ್ನವಾಗಿದೆ.

ತಮ್ಮ ಪಾದೋದಕದಿಂದ ನಮ್ಮ ಪಾಪವೆಲ್ಲ ತೊಳೆದುಹೋಗಿದೆ. ನಾನು ಮಾಡಿದ ಈ ಹೋಮ ಇಂದು ಮುಕ್ತಿಗೆ ಸಾಧನವಾಗಿದೆ. ಶ್ರೀಹರಿಪ್ರೀತಿಗೆ ಸಾಧನವಾಗಿದೆ. ಈ ನನ್ನ ಯಜ್ಞಶಾಲೆಯು ತಮ್ಮ ಪವಿತ್ರವಾದ ಪಾದದ ಸ್ಪರ್ಶದಿಂದ ಅತ್ಯಂತ ಪವಿತ್ರವಾಗಿದೆ.

ತಾವು ಬಂದ ಕಾರಣವೇನು? ತಮ್ಮನ್ನು ನಾವು ಹೇಗೆ ಸೇವಿಸೋಣ? ತಾವು ಅತ್ಯಂತ ಪೂಜ್ಯರಾಗಿರುವಿರಿ. ತಮಗೆ ಬೇಕಾದುದೇನೆಂದು ಹೇಳಿ. ಬೇಡಲು ಬಂದವರೆಂದು ತಮ್ಮನ್ನು ನೋಡಿ ನನಗೆ ಅನಿಸುತ್ತಿದೆ. ಭೂಮಿಯೋ, ಆಕಳೋ, ಬಂಗಾರವೋ,

ಧನ-ಧಾನ್ಯ-ಪಾತ್ರೆಗಳಿಂದ ಸಂಪನ್ನವಾದ ಗೃಹವೋ, ಶುದ್ಧವಾದ ರುಚಿಕರವಾದ ಅನ್ನವೋ, ಕನ್ಯೆಯೋ ತಮಗೆ ಏನು ಬೇಕಾದರೂ ನಿಸ್ಸಂಕೋಚವಾಗಿ ಕೇಳಿರಿ.

ತಾವು ಬೇಡಿದ ಎಲ್ಲವನ್ನೂ ಕೈಮುಗಿದು ತಮಗೆ ಒದಗಿಸುತ್ತೇವೆ. ತಮ್ಮ ಅಪೇಕ್ಷೆಯನ್ನು ಪೂರೈಸಿ ನಾವು ಪುನೀತರಾಗುತ್ತೇವೆ. ಅನುಗ್ರಹಿಸಬೇಕು. ಇತ್ಯಾದಿಯಾಗಿ ಬಲಿಯು ಕಾಲೋಪಯುಕ್ತವಾದ ವಚನಗಳಿಂದ ಅತಿಥಿಯನ್ನು ಸಂತೋಷಪಡಿಸಿದ.

**।। ಇತಿ ಶ್ರೀಮದ್ಭಾಗವತೇ ಅಷ್ಟಮಸ್ಕಂದೇ ಸಪ್ತದಶೋऽಧ್ಯಾಯಃ ।।**

★★★

## ಅಥ ಅಷ್ಟಾದಶೋऽಧ್ಯಾಯಃ

ಬಲಿಯ ಮಾತುಗಳನ್ನು ಕೇಳಿ ವಾಮನ ಸಂತುಷ್ಟನಾದ. ಮಹಾವಂಶದಲ್ಲಿ ಜನಿಸಿದ ನಿನಗೆ ಈ ವಿಧವಾದ ವಾಚೋಪಚಾರ ಯುಕ್ತವೇ ಆಗಿದೆ ಎಂದು ಬಲಿಯನ್ನು ಪ್ರಶಂಸಿಸುತ್ತಾ, ಬಲಿಗೆ ಹೀಗೆ ಹೇಳಿದ.

ದಾನ ಮಾಡುವವನ ಸ್ತುತಿ ಮಾಡಬೇಕು. ಪ್ರಸಂಗಾನುಗುಣವಾಗಿ ಮಾತನಾಡಬೇಕು. ಈ ಶಿಕ್ಷಣೆಯನ್ನು ನೀಡಲು ಭಗವಂತ ಮಾತನಾಡಿದ.

ಜನಪಾಲಕನಾದ ಬಲಿಯೇ! ಏನನ್ನಾದರೂ ಸ್ವೀಕರಿಸು ಎಂದು ನೀನಾಡಿದ ಮಾತು ಕುಲೋಚಿತವಾಗಿದೆ. ಬಂದ ಅತಿಥಿಗಳಿಗೆ ಮನಃಪ್ರೀತಿಕರವಾಗುವಂತೆ ಆಡಿದ ಮಾತುಗಳು ಎಲ್ಲರಿಗೂ ಮಾದರಿಯಾಗಿವೆ. ಕುಲಗುರುಗಳಾದ ಶುಕ್ರಾಚಾರ್ಯರು, ಕುಲವೃದ್ಧರಾದ ಪಿತಾಮಹರ ಮಾರ್ಗದರ್ಶನ ಪಡೆಯುತ್ತಿರುವ ನೀನು ಸುಶಿಕ್ಷಿತನಾಗಿರುವಿ. ಶುಕ್ರಾಚಾರ್ಯರ ಶಿಷ್ಯನೂ, ಪ್ರಹ್ಲಾದರಾಜರ ಪೌತ್ರನೂ ಆದ ನಿನಗೆ ಮುಕ್ತಿಯು ನಿಶ್ಚಿತ.

ನಿನ್ನ ಕುಲದಲ್ಲಿ ಜನಿಸಿದವರು ಯಾರೂ ನಿಸ್ಸತ್ವರಲ್ಲ. ಲೋಭಿಗಳಿಗೆ ನಿನ್ನ ಕುಲದಲ್ಲಿ ಆಸ್ಪದವೇ ಇಲ್ಲ. ಬ್ರಾಹ್ಮಣನಿಗೆ ಕೊಡುತ್ತೇನೆಂದು ಪ್ರತಿಜ್ಞೆ ಮಾಡಿ ನಿರಾಕರಿಸಿದವರು ನಿನ್ನ ಕುಲದಲ್ಲಿ ಇಲ್ಲವೇ ಇಲ್ಲ. ದಾನಿಯಾಗದವನು ನಿನ್ನ ಕುಲದಲ್ಲಿ ಹುಟ್ಟಿಯೇ ಇಲ್ಲ. ದಾನಪರಾಙ್ಮುಖರಾದವರು, ಯುದ್ಧಪರಾಙ್ಮುಖರಾದವರು ನಿನ್ನ ಕುಲದಲ್ಲಿ ಇಲ್ಲವೇ ಇಲ್ಲ.

ಆಗಸದಲ್ಲಿ ಚಂದ್ರಮನಂತೆ ನಿಮ್ಮ ಕುಲದಲ್ಲಿ ಪ್ರಹ್ಲಾದರು ಕಂಗೊಳಿಸುತ್ತಿದ್ದಾರೆ. ದಾನವೀರ-ಯುದ್ಧವೀರ ಎಂಬ ಕೀರ್ತಿಯಿಂದ ಪ್ರಸಿದ್ಧರಾಗಿದ್ದಾರೆ.

ನಿನ್ನ ಕುಲದಲ್ಲಿ ಜನಿಸಿದ ಹಿರಣ್ಯಾಕ್ಷನು ಗದಾಧಾರಿಯಾಗಿ ದಿಗ್ವಿಜಯಕ್ಕಾಗಿ ಈ ಭೂಮಿಯನ್ನೆಲ್ಲ ಪರ್ಯಟಿಸಿದ. ತನ್ನೊಂದಿಗೆ ಯುದ್ಧ ಮಾಡುವ ಸಮರ್ಥನನ್ನು ಕಾಣಲೇ ಇಲ್ಲ. ಯುದ್ಧವಿಲ್ಲದಲೇ ಲೋಕವಿಜಯಿಯಾದ ಹಿರಣ್ಯಾಕ್ಷ. ಆ ಹಿರಣ್ಯಾಕ್ಷನನ್ನು

ಸಂಹರಿಸಲು ಭಗವಂತನೇ ವರಾಹನಾಗಿ ಅವತಾರ ತಾಳಬೇಕಾಯಿತು. ಅಂಥ ಪರಮವೀರ ಹಿರಣ್ಯಾಕ್ಷ.

ತಮ್ಮನ ಸಂಹಾರವನ್ನು ವಿಷ್ಣುವು ಮಾಡಿದ್ದಾನೆಂದು ಕೇಳಿದ ಹಿರಣ್ಯಕಶಿಪು. ದೇವರ ಮೇಲೆ ಕ್ರುದ್ಧನಾದ. ವಿಷ್ಣುವನ್ನು ಸಂಹರಿಸಲೆಂದು ವೈಕುಂಠಲೋಕಕ್ಕೆ ಹೋದ. ತನ್ನ ಲೋಕಕ್ಕೆ ಬರುತ್ತಿರುವ ಹಿರಣ್ಯಕಶಿಪುವನ್ನು ಕಂಡು ಭಗವಂತ ಆಲೋಚಿಸಿದ.

ಈ ಹಿರಣ್ಯಕಶಿಪು ಮೃತ್ಯುವಿನಂತೆ ಬರುತ್ತಿದ್ದಾನೆ. ನಾನು ಹೋದಲ್ಲೆಲ್ಲ ಇವನು ಬರುತ್ತಾನೆ. ಸರ್ವತ್ರ ಸಂಚಾರಮಾಡಲು ಈತ ಸಮರ್ಥನಾಗಿದ್ದಾನೆ. ಇವನು ಹೊರಗಿನ ಪದಾರ್ಥಗಳು ಎಲ್ಲಿದ್ದರೂ ನೋಡಬಲ್ಲ. ತಿಳಿಯಬಲ್ಲ. ಆದರೆ ಒಳಗಿನದನ್ನು ತಿಳಿಯಲಾರ. ಆದ್ದರಿಂದ ಇವನ ಹೃದಯವನ್ನೇ ಪ್ರವೇಶಿಸುತ್ತೇನೆ. ಎಂದು ತಿಳಿದ. ಹಿರಣ್ಯಕಶಿಪುವಿನ ಶ್ವಾಸದ ಮೂಲಕ ಅವನನ್ನು ಪ್ರವೇಶಿಸಿದ.

ಹಿರಣ್ಯಕಶಿಪು ವೈಕುಠಕ್ಕೆ ಹೋದರೂ ಹೆದರಲಿಲ್ಲ. ಬೆದರಲಿಲ್ಲ. ಧೈರ್ಯದಿಂದಲೇ ಎಲ್ಲ ಕಡೆ ಹುಡುಕಿದ. ಎಲ್ಲಿಯೂ ವಿಷ್ಣುವು ಕಾಣಲೇ ಇಲ್ಲ. ವೈಕುಂಠವೆಲ್ಲ ಶೂನ್ಯವಾಗಿಯೇ ಹಿರಣ್ಯಕಶಿಪುವಿಗೆ ಕಾಣಿಸಿತು. ವೈಕುಂಠದಲ್ಲಿ ಶ್ರೀಹರಿಯನ್ನು ಕಾಣದೇ ವ್ಯಗ್ರನಾದ. ಭೂಮಿ, ಆಕಾಶ, ಅಂತರಿಕ್ಷ, ಸಮುದ್ರ, ರಸಾತಲ, ಪಾತಾಲಾದಿ ಲೋಕಗಳಲ್ಲೆಲ್ಲ ಹುಡುಕಿದ. ಎಲ್ಲಿಯೂ ಭಗವಂತ ಕಾಣಿಸಲಿಲ್ಲ.

ಕೊನೆಗೆ ತನ್ನಲ್ಲಿಯೇ ಮಾತನಾಡಿಕೊಂಡ. ನನ್ನ ಸಹೋದರನನ್ನು ಸಂಹರಿಸಿದ ವಿಷ್ಣುವಿಗಾಗಿ ಈ ಜಗತ್ತನ್ನೆಲ್ಲ ನಾನು ಹುಡುಕಿದೆ. ಭಗವಂತ ಯಾವ ಲೋಕದಲ್ಲಿಯೂ ದೊರೆಯಲಿಲ್ಲ. ಇನ್ನೆಂದಿಗೂ ತಿರುಗಿ ಬಾರದ ಲೋಕಗಳಿಗೆ ಅವನು ಹೋಗಿದ್ದಾನೆ.

ಯದ್ಯಪಿ ಭಗವಂತ ಸರ್ವಜ್ಞನಾಗಿದ್ದಾನೆ. ಆತ ಸ್ವತಂತ್ರ. ಅವನಲ್ಲಿ ವೈಷಮ್ಯ-ನೈರ್ಘೃಣ್ಯಗಳಿಲ್ಲ. ಅವರವರ ಕರ್ಮಕ್ಕೆ, ಯೋಗ್ಯತೆಗೆ ಅನುಸಾರವಾಗಿ ಫಲವನ್ನು ಕೊಡುತ್ತಾನೆ. ಇದನ್ನು ತಿಳಿಯದ ವ್ಯಕ್ತಿ ದೇವರನ್ನು ದ್ವೇಷಿಸುತ್ತಾನೆ. ಇದನ್ನು ತಿಳಿದವನು ಭಗವಂತನನ್ನು ಆರಾಧಿಸುತ್ತಾನೆ. ಪ್ರಕೃತ ಹಿರಣ್ಯಕಶಿಪು ಭಗವಂತನನ್ನು ಹೀಗೆ ತಿಳಿಯಲಿಲ್ಲ. ಆದ್ದರಿಂದ ದ್ವೇಷಿಸಿದ.

ಏನಾದರೂ ಏನು ಮಾಡಿದರೂ ಹಿರಣ್ಯಾಕ್ಷನಾಗಲೀ, ಹಿರಣ್ಯಕಶಿಪುವಾಗಲೀ ಯುದ್ಧವೀರರೆಂಬುದಂತೂ ನಿರ್ವಿವಾದ. ಹೀಗೆ ಈ ಬಲಿಯ ಕುಲದಲ್ಲಿ ಜನಿಸಿದವರೆಲ್ಲರೂ ಯುದ್ಧವೀರರು ಎಂದು ಹೊಗಳಿದ ಭಗವಂತ. ಈಗ ದಾನಶೌಂಡತೆಗೆ ಉದಾಹರಣೆಯಾಗಿ ಬಲಿಯ ತಂದೆಯಾದ ವಿರೋಚನನನ್ನು ಹೊಗಳುತ್ತಿದ್ದಾನೆ.

ವಿರೋಚನನಿಗೆ ಬ್ರಾಹ್ಮಣರಲ್ಲಿ ಪೂಜ್ಯತೆಭಾವನೆ ಇತ್ತು. ಎಷ್ಟಾದರೂ ಪ್ರಹ್ಲಾದನ ಮಗನಲ್ಲವೇ. ದುಷ್ಟನಾದರೂ ಆ ಶಿಷ್ಟತನದ ಪ್ರಭಾವದಿಂದ ವಿರೋಚನ ಬ್ರಾಹ್ಮಣರಲ್ಲಿ

ಪ್ರೀತಿಯುಳ್ಳವನಾಗಿದ್ದ. ದೇವತೆಗಳೆಲ್ಲರೂ ಬ್ರಾಹ್ಮಣರ ವೇಷವನ್ನು ಧರಿಸಿ ವಿರೋಚನನ ಹತ್ತಿರ ಬಂದರು. ಬಂದವರು ಸಾಮಾನ್ಯಬ್ರಾಹ್ಮಣರಲ್ಲ. ಬ್ರಾಹ್ಮಣರ ವೇಷದಲ್ಲಿರುವ ದೇವತೆಗಳು ಎಂದು ವಿರೋಚನನಿಗೆ ತಿಳಿಯಿತು. ಆದರೂ ಅವರನ್ನು ಗೌರವಿಸಿದ. ಆ ದೇವತೆಗಳು ಬೇಡಿದ ತನ್ನ ಆಯುಷ್ಯವನ್ನೇ ವಿರೋಚನ ದಾನ ಮಾಡಿದ.

ಸ್ವಯಂ ದಾನಶೀಲನು ಕೂಡಾ ತನ್ನ ಆಯುಷ್ಯದ ಅಭಿವೃದ್ಧಿಗಾಗಿಯೇ ವಿಹಿತವಾದ ಯಜ್ಞ-ಯಾಗಗಳನ್ನು ಆಚರಿಸುತ್ತಾನೆ. ವಿಹಿತವಾದ ದಾನಗಳನ್ನು ಮಾಡುತ್ತಾನೆ. ನಿಮ್ಮ ತಂದೆಯಾದ ವಿರೋಚನ ಅಂಥ ಆಯುಷ್ಯವನ್ನೇ ದಾನ ಮಾಡಿದ. ಹೀಗಾಗಿ ನಿಮ್ಮ ಕುಲದಲ್ಲಿ ಜನಿಸಿದ ಯಾರೂ ದಾನವಿಮುಖರಲ್ಲ. ಅಂಥ ಕುಲದಲ್ಲಿ ಜನಿಸಿದ ನೀನು ಯೋಗ್ಯವಾಗಿಯೇ ಮಾತನಾಡಿದ್ದಿ. ನಿಮ್ಮ ಪೂರ್ವಜರು ಅನುಷ್ಠಾನ ಮಾಡಿದ ಧರ್ಮಗಳನ್ನೆಲ್ಲ ಅತ್ಯಂತ ಶ್ರದ್ಧೆಯಿಂದ ಮಾಡುತ್ತಿರುವಿ.

ಅಂಥ ನಿನಗೆ ನಾನು ಇವತ್ತು ಬೇಡುತ್ತಿದ್ದೇನೆ. ನನ್ನ ಹೆಜ್ಜೆಗೆ ಅನುಗುಣವಾಗಿ ಮೂರು ಹೆಜ್ಜೆ ಭೂಮಿಯನ್ನು ನನಗೆ ದಾನಮಾಡು. ಅಷ್ಟು ಸಾಕು ನನಗೆ. ಬೇರೇನೂ ಬೇಕಾಗಿಲ್ಲ.

ಹೇ ಬಲಿಯೇ! ನೀನು ಚಕ್ರವರ್ತಿಯಾಗಿರುವಿ. ಸ್ವಯಂ ದಾನಶೂರನೂ ಆಗಿರುವಿ. ಸಮಗ್ರ ಭೂಮಂಡಲ ನಿನ್ನ ಅಧೀನ. ಆದರೆ ಮೂರು ಹೆಜ್ಜೆ ಭೂಮಿಯ ಹೊರತು ನನಗೇನೂ ಬೇಡ. ಯಾಚಕನು ಸ್ವಯಂ ಜ್ಞಾನಿಯಾಗಿರಬೇಕು. ತನಗೆ ಬೇಕಾದಷ್ಟನ್ನು ಮಾತ್ರ ಬೇಡಬೇಕು. ಇಂಥ ಪರಿಗ್ರಹದಿಂದ ಯಾವುದೇ ಪಾಪ ಸ್ವೀಕರಿಸುವವನಿಗೆ ಬರುವುದಿಲ್ಲ. ಇದು ಶ್ರುತಿಸಿದ್ಧವಾಗಿದೆ.

ವಾಮನನ ಮಾತನ್ನು ಕೇಳಿ ಬಲಿ ಆಶ್ಚರ್ಯಚಕಿತನಾದ. ಅವನು ಕೇಳಿದ ಆ ದಾನದಿಂದ ಬಲಿಗೆ ಅಸಮಾಧಾನವಾಯಿತು. ಅಷ್ಟನ್ನೇ ಕೊಡಲು ಬಲಿಯ ಮನಸ್ಸು ಒಪ್ಪಲಿಲ್ಲ. ತನ್ನ ಶ್ರೀಮಂತಿಕೆಗೆ ತಕ್ಕುದಾದ ದಾನ ಇದಲ್ಲ ಎಂದುಕೊಂಡ. ಅಷ್ಟನ್ನೇ ಕೊಡಲು ಹಿಂಜರಿದ. ಇನ್ನೂ ಹೆಚ್ಚು ಹೆಚ್ಚಾಗಿ ದಾನ ಮಾಡಬೇಕೆಂದುಕೊಂಡ. ತನ್ನ ಅಹಂಕಾರ ಶಾಂತವಾಗಬೇಕು. ಅಷ್ಟು ದಾನ ಮಾಡಬೇಕೆಂದುಕೊಂಡ. ಪಟ್ಟುಹಿಡಿದ. ವಟುವಿನೊಂದಿಗೆ ಮಾತನಾಡಿದ.

ಬ್ರಾಹ್ಮಣಪುತ್ರನೇ! ನೀನು ಕೇಳಿದ ದಾನ ಸಾಧುಸಮ್ಮತವಲ್ಲ. ನೀನಿನ್ನೂ ಬಾಲಕನಾಗಿರುವಿ. ನಿನ್ನ ಬುದ್ಧಿಯೂ ಬಾಲಿಶವಾಗಿದೆ. ಲಾಭ-ನಷ್ಟಗಳನ್ನು ತಿಳಿಯದ ಬಾಲಿಶತನ ನಿನ್ನಲ್ಲಿ ಇದೆ. ಸ್ವಾರ್ಥವನ್ನು ಅರಿಯುವಷ್ಟು ಬುದ್ಧಿ ಇನ್ನೂ ನಿನಗೆ ಬೆಳೆದಿಲ್ಲ. ನಾನು ತ್ರಿಲೋಕೇಶ್ವರ. ದ್ವೀಪಗಳನ್ನೇ ದಾನಮಾಡುವ ಸಮರ್ಥ. ಅಲ್ಲದೇ ಕುಲಪ್ರಶಂಸಕರವಾದ ವಚನಗಳಿಂದ ನನ್ನನ್ನು ಸಂತೋಷಪಡಿಸಿರುವಿ. ಮೂರು ಹೆಜ್ಜೆ ಭೂಮಿಯನ್ನು ಬೇಡುತ್ತಿರುವಿ. ಇದರಿಂದ ನೀನು ಅಜ್ಞನೆಂದು ನನಗೆ ತೋರುತ್ತಿದೆ.

ನಾನು ಚಕ್ರವರ್ತಿ. ದಾನಶೂರ. ತನ್ನ ಜೀವನಕ್ಕಾಗಿ ನನ್ನನ್ನು ಬೇಡಿ ಮತ್ತೊಬ್ಬರನ್ನು ಯಾಚಿಸಬಾರದು. ಆದ್ದರಿಂದ ಹೇ ವಟೋ! ನಿನ್ನ ಸಮಗ್ರಜೀವನಕ್ಕೆ ಬೇಕಾದಷ್ಟು ಯಾಚಿಸು. ಅದಕ್ಕಿಂತಲೂ ಹೆಚ್ಚಾಗಿಯೇ ನಾನು ನೀಡುತ್ತೇನೆ. ಮೂರ್ಖತನ ಬಿಡು.

ಬಲಿಯು ಇಷ್ಟು ಹೇಳಿದರೂ ವಾಮನನ ಮನಸ್ಸು ಪ್ರಲುಬ್ಧವಾಗಲಿಲ್ಲ. ಸಮಗ್ರ ಜಗತ್ತಿಗೆ ಒಡೆಯನಾದ ಭಗವಂತನೇ ವಾಮನನಾಗಿ ಬಂದಿದ್ದಾನೆ. ಮೂರು ಪಾದವೇನು. ಸಮಗ್ರ ಪ್ರಪವಂಚವೇ ಆತನ ಅಧೀನ. ಆದರೂ ಯಾಚಕರು ಹೇಗಿರಬೇಕೆಂಬುದನ್ನು ವಾಮನನು ತಿಳಿಸುತ್ತಾ ಬಲಿಯೊಂದಿಗೆ ಮಾತನಾಡಿದ.

ಹೇ ರಾಜನ್! ಜೀವನೋಪಾಯಕ್ಕೆ ಸಾಕಾಗುವಷ್ಟು ಭೂಮಿಯನ್ನು ಬೇಡು ಎಂದು ನೀನು ಹೇಳಿದಿ. ಅಲಂಬುದ್ಧಿ ಇಲ್ಲದವನಿಗೆ ವೃತ್ತಿಕರಿಯಾದ ಭೂಮಿಯಿಂದಲೂ ತೃಪ್ತಿಯಾಗುವುದಿಲ್ಲ. ಅಸಂತೃಪ್ತನ ಬಯಕೆ ಎಂದಿಗೂ ಪೂರ್ಣವಾಗುವುದೇ ಇಲ್ಲ. ತ್ರಿಲೋಕದಲ್ಲಿ ಇರುವ ಅತ್ಯಂತ ಪ್ರಿಯಕರವಾದ ವಿಷಯಗಳೆಲ್ಲ ತನ್ನ ವಶವಾದರೂ ಮನುಷ್ಯನ ಆಸೆ ತುಂಬುವುದಿಲ್ಲ. ತೃಪ್ತಿ ಇಲ್ಲದವನಿಗೆ ಎಷ್ಟು ಕೊಟ್ಟರೂ ಸಾಕೆನಿಸುವುದಿಲ್ಲ.

ಮೂರು ಹೆಜ್ಜೆಗಳಿಂದ ತೃಪ್ತನಾಗದವನಿಗೆ ಏಳು ದ್ವೀಪಗಳನ್ನು ನೀಡಿದರೂ ತೃಪ್ತಿಯಾಗುವುದಿಲ್ಲ. ಅಖಂಡವಾದ ಭೂಮಂಡಲವನ್ನು ನೀಡಿದರೂ ಅವನ ಆಸೆ ಶಾಂತವಾಗುವುದಿಲ್ಲ.

ಸಪ್ತದ್ವೀಪಾಧಿಪತಿಗಳಾದ ಪೃಥು-ಗದ ಮುಂತಾದ ರಾಜರು ವಿಷಯಭೋಗಗಳಿಂದ ಆಸೆಯನ್ನು ಶಾಂತಗೊಳಿಸಲು ಸಮರ್ಥರಾಗಲಿಲ್ಲ. ಹೀಗೆಂದು ಇತಿಹಾಸಗಳು ಹೇಳುತ್ತವೆ. ಆದ್ದರಿಂದ ಆಸೆಗೆ ಕೊನೆ ಎಂಬುದು ಇಲ್ಲ. ಆಸೆಯಿದ್ದವನು ಸುಖವಾಗಿ ಇರಲಾರ.

ಅಲಂಬುದ್ಧಿಯೇ ಸುಖಕ್ಕೆ ಸಾಧನವಾಗಿದೆ. ಶ್ರೀಹರಿಯ ಇಚ್ಛೆಯಿಂದ ಒದಗಿಬಂದಿರುವ ವಿಷಯಗಳು ಸಾಕು. ಹೆಚ್ಚಿನದ್ದು ಬೇಡ ಎಂದು ಸಂತೃಪ್ತನಾಗಬೇಕು. ಹೀಗೆ ಸಂತುಷ್ಟನಾದ ಮನುಷ್ಯ ಸುಖವಾಗಿ ಬಾಳುತ್ತಾನೆ. ತನ್ನ ವಶವಾದ ತ್ರಿಲೋಕದಿಂದಲೂ ಸಂತುಷ್ಟನಾಗದವನು ಸುಖವಾಗಿ ಇರಲು ಸಾಧ್ಯವಿಲ್ಲ.

ವಿಹಿತವಾದ ವೃತ್ತಿಯಿಂದ ಲಬ್ಧವಾದ ವಿಷಯಗಳಿಂದ ಸಂತುಷ್ಟನಾಗಬೇಕು. ಅದುವೇ ಸುಖಕಾರಕ ಎಂಬುದನ್ನು ಈಶಾವಾಸ್ಯೋಪನಿಷತ್ತು ಪ್ರತಿಪಾದಿಸುತ್ತದೆ. ವಿಷಯಗಳಲ್ಲಿ ಅಲಂಬುದ್ಧಿ ಇಲ್ಲದವನು ಮತ್ತೆ ಮತ್ತೆ ಇದೇ ಸಂಸಾರದಲ್ಲಿ ಬದ್ಧನಾಗುತ್ತಾನೆ. ಅವನ ಸಾಧನೆ ಮುಂದುವರಿಯುವುದಿಲ್ಲ. ಮುಕ್ತಿಗೆ ಅವನು ಯೋಗ್ಯನಾಗುವುದಿಲ್ಲ. ಹೀಗಾಗಿ ಮುಮುಕ್ಷುವಾದವನು ಅಲಂಬುದ್ಧಿಯಿಂದ ಸಂಪನ್ನನಾಗಬೇಕು. ಯದೃಚ್ಛಾಲಾಭದಿಂದ ಸಂತುಷ್ಟನಾದ ಬ್ರಾಹ್ಮಣನ ತೇಜಸ್ಸು ಅಭಿವೃದ್ಧವಾಗುತ್ತದೆ. ನೀರಿನಿಂದ ಅಗ್ನಿಯು ಶಾಂತವಾಗುತ್ತದೆ. ಹಾಗೆಯೇ

ಅಸಂತೋಷದಿಂದ ಬ್ರಾಹ್ಮಣನ ತೇಜಸ್ಸು ನಷ್ಟವಾಗುತ್ತದೆ. ಹೀಗಾಗಿ ಸಂತುಷ್ಟಿಯಿಂದಲೇ ಜೀವನವನ್ನು ಸಾಗಿಸಬೇಕು. ಸಂತುಷ್ಟಿಯಿಂದಲೇ ತೇಜಸ್ಸನ್ನು ಬೆಳಗಿಸಿಕೊಳ್ಳಬೇಕು.

ಕೇಳಿದ್ದನ್ನೆಲ್ಲ ಕೊಡಲು ನೀನು ಸಮರ್ಥನಾಗಿರುವಿ. ಆದರೂ ಮೂರು ಹೆಜ್ಜೆ ಭೂಮಿ ನನಗೆ ಸಾಕು. ಹೆಚ್ಚಿನದ್ದನ್ನು ಅಪೇಕ್ಷಿಸುವುದಿಲ್ಲ. ಅಪೇಕ್ಷಿಸುವುದು ಸರಿಯೂ ಅಲ್ಲ.

ಭೂಮಿಗೆ ಅಧಿಪತಿಯಾದ ನೀನು ಸ್ವರ್ಗದ ಮೇಲೆ ಕಣ್ಣಿಟ್ಟದ್ದು ಯೋಗ್ಯವಲ್ಲ ಎಂದು ಈ ಮೂಲಕ ಬಲಿಗೆ ವಾಮನ ತಿಳಿಸುತ್ತಿದ್ದಾನೆ. ಹಾಗೆ ಸ್ವರ್ಗವನ್ನು ಅಪೇಕ್ಷಿಸುವುದರಿಂದ ನೀನು ಬದ್ಧನಾಗುವಿ ಎಂದು ಎಚ್ಚರಿಸುತ್ತಿದ್ದಾನೆ.

ವಾಮನ ಹೇಳಿದ ಮಾತುಗಳು ಅರ್ಥವಾದವು. ಸರಿಯಾಗಿ ಅರ್ಥವಾಗಲಿಲ್ಲ. ಎಲ್ಲವೂ ಅರ್ಥವಾದಂತೆ ನಸುನಕ್ಕ. ಆಯಿತು. ನೀನಂದಂತೆಯೇ ಆಗಲಿ ಎಂದ. ನೀನು ಕೇಳಿದಷ್ಟೇ ಭೂಮಿಯನ್ನು ನೀಡುತ್ತೇನೆ. ಅದನ್ನು ಸ್ವೀಕರಿಸು ಎಂದು ಹೇಳಿದ. ಭೂಮಿಯನ್ನು ದಾನ ಮಾಡಲು ಉದ್ಯುಕ್ತನಾದ. ಸಂಕಲ್ಪ ಮಾಡಲು ನೀರಿನ ಪಾತ್ರೆಯನ್ನು ತೆಗೆದುಕೊಂಡ.

ಬಲಿಯ ಉದ್ಯೋಗವನ್ನು ಶುಕ್ರಾಚಾರ್ಯರು ಕಂಡರು. ಬಲಿಯ ಆಧೀನವಾದ ಸ್ವರ್ಗಸಾಮ್ರಾಜ್ಯವನ್ನು ಬಲಿಯಿಂದ ಮತ್ತೆ ಇಂದ್ರನಿಗೆ ಕೊಡುವುದಕ್ಕಾಗಿಯೇ ಈ ವಾಮನನು ಬಂದಿದ್ದಾನೆ ಎಂದೂ ತಿಳಿದರು. ಬಲಿಯನ್ನು ಕುರಿತು ಹೇಳಿದರು.

ಹೇ ಬಲಿಯೇ! ಮೂರು ಹೆಜ್ಜೆಯ ಭೂಮಿಯನ್ನು ಬೇಡುತ್ತಿರುವ ಈ ವ್ಯಕ್ತಿಯು ವಟುವಲ್ಲ. ಮಾಯಾವಟು. ಸಾಕ್ಷಾತ್ ಭಗವಂತನೇ ಆಗಿದ್ದಾನೆ. ಇವನು ಸಮಗ್ರೈಶ್ವರ್ಯವಂತನಾಗಿದ್ದಾನೆ. ಈಗ ಕಶ್ಯಪರಿಂದ ಅದಿತಿಯಲ್ಲಿ ಅವತರಿಸಿದ ವಾಮನನಾಗಿದ್ದಾನೆ. ದೇವತೆಗಳ ಕಾರ್ಯವನ್ನು ಸಾಧಿಸುವುದೇ ಈ ಅವತಾರದ ಉದ್ದೇಶವಾಗಿದೆ. ಈ ವಟುವಿಗೆ ದಾನ ಮಾಡುವುದರಿಂದ ನೀನು ಐಶ್ವರ್ಯಭ್ರಷ್ಟನಾಗುವಿ. ಬದ್ಧನಾಗುವಿ. ನಿನಗೆ ಅನರ್ಥವಾಗುತ್ತದೆ. ಹೀಗಾಗಿ ಈ ವಟುವಿಗೆ ಭೂಮಿಯನ್ನು ದಾನ ಮಾಡುವುದು ಸರಿಯಲ್ಲ. ಈ ಕಾರ್ಯದಿಂದ ದೈತ್ಯರಿಗೆ ಮಹಾ ಅನರ್ಥವಾಗುವುದಂತೂ ನಿಶ್ಚಿತ. ಈ ವಾಮನ ನಿನ್ನನ್ನು ವಂಚಿಸಲೆಂದೇ ಬಂದಿದ್ದಾನೆ. ನಿನ್ನ ಅಧೀನವಾದ ಸ್ವರ್ಗವನ್ನು ಇಂದ್ರನಿಗೆ ನೀಡುವ ಉದ್ದೇಶದಿಂದ ಬಂದಿದ್ದಾನೆ.

ಮುಂದಾಲೋಚನೆಯೇ ಇಲ್ಲದ ಮೂರ್ಖ ನೀನು. ಈ ವಾಮನ ಮೂರು ಹೆಜ್ಜೆಗಳಿಂದಲೇ ಮೂರು ಲೋಕಗಳನ್ನು ಆಕ್ರಮಿಸುತ್ತಾನೆ. ಇವನಿಗೆ ಎಲ್ಲವನ್ನು ದಾನ ಮಾಡಿ ನೀನು ಇರುವುದಾದರೂ ಎಲ್ಲಿ? ಇದರ ಆಲೋಚನೆ ನಿನಗೆ ಇಲ್ಲವೇ?

ಎಲ್ಲವನ್ನೂ ದಾನ ಮಾಡಲು ಸಮರ್ಥನೆಂದು ನಿನ್ನನ್ನು ನೀನು ತಿಳಿದಿರುವಿ. ಈ ವಾಮನ ಒಂದು ಪಾದದಿಂದ ಭೂಲೋಕವನ್ನೂ ಕೆಳಗಿನ ಲೋಕಗಳನ್ನೂ ಅಳಿದು

ಬಿಡುತ್ತಾನೆ. ಎರಡನೆಯ ಪಾದದಿಂದ ಸ್ವರ್ಗಲೋಕವನ್ನೂ ಅದರ ಮೇಲಿನ ಲೋಕಗಳನ್ನೂ ಅತಿಕ್ರಮಿಸುತ್ತಾನೆ. ಮೂರನೆಯ ಹೆಜ್ಜೆಯನ್ನಿಡಲು ಅವಕಾಶವೇ ಇಲ್ಲವಾಗುತ್ತದೆ. ಹೀಗಾಗಿ ನಿನ್ನ ಪ್ರತಿಜ್ಞೆಯೂ ಪೂರ್ಣವಾಗುವುದಿಲ್ಲ. ಹೀಗೆ ಪ್ರತಿಜ್ಞೆಯನ್ನು ಪೂರ್ಣಮಾಡದಿದ್ದರೇ ನರಕಾದ್ಯನರ್ಥಗಳಾಗುತ್ತವೆ.

ಯಾವ ದಾನದಿಂದ ಜೀವನೋಪಾಯಕ್ಕೆ ಕುತ್ತು ಬರುವುದೋ ಅದನ್ನು ದಾನವೆಂದು ಜ್ಞಾನಿಗಳೂ ಪರಿಗಣಿಸುವುದಿಲ್ಲ. ಜೀವನೋಪಾಯವಿದ್ದವನೇ ನಿತ್ಯವೂ ದಾನಮಾಡಲು ಸಮರ್ಥನಾಗುತ್ತಾನೆ. ಯಜ್ಞ-ಯಾಗಾದಿಗಳನ್ನು ಮಾಡಲು ಅರ್ಹನಾಗುತ್ತಾನೆ. ಜೀವನೋಪಾಯವನ್ನೇ ಕಳೆದುಕೊಂಡಿರುವವನು ಯಾವ ಧರ್ಮಗಳನ್ನು ಮಾಡಿಯಾನು?

ತನ್ನ ಅಧೀನವಾದ ಸಂಪತ್ತನ್ನು ಪಂಚವಿಧವಾಗಿ ವಿಭಾಗಿಸಿಕೊಳ್ಳಬೇಕು. ಯೋಗ್ಯವಾದ ಕರ್ಮಗಳಲ್ಲಿ ತೊಡಗಿಕೊಳ್ಳಬೇಕು. ಅಂಥವನು ಮಾತ್ರ ಸುಖಿಯಾಗಿ ಇರುತ್ತಾನೆ.

೧. ಸತ್ಪಾತ್ರರಿಗೆ ದಾನ ಮಾಡಬೇಕು. ಅದರಿಂದ ಪುಣ್ಯವನ್ನು ಸಂಪಾದಿಸಬೇಕು. ಆದ್ದರಿಂದ ಸತ್ಪಾತ್ರದಾನಕ್ಕಾಗಿ ಹಣವನ್ನು ಪ್ರತ್ಯೇಕವಾಗಿ ಇಟ್ಟುಕೊಳ್ಳಬೇಕು. ೨. ಮಠ-ಮಂದಿರಗಳಿಗೆ, ನಟ-ನರ್ತಕಿಯರಿಗೆ ದಾನ ಮಾಡಬೇಕು. ಇದರಿಂದ ಕೀರ್ತಿಯನ್ನು ಸಂಪಾದಿಸಬೇಕು. ಇದಕ್ಕಾಗಿಯೂ ಹಣ ಬೇಕು. ೩. ತನ್ನ ಭೋಗಕ್ಕಾಗಿಯೂ ಪ್ರತ್ಯೇಕವಾಗಿ ದ್ರವ್ಯವನ್ನು ಇಟ್ಟುಕೊಳ್ಳಬೇಕು. ೪. ಹೆಂಡತಿ, ಮಕ್ಕಳು, ಬಂಧು-ಬಾಂಧವರಿಗೆ ನೀಡಲು ಕೂಡಾ ಪ್ರತ್ಯೇಕವಾಗಿ ಧನವನ್ನು ವಿಭಾಗಿಸಬೇಕು. ೫. ಕೊನೆಯದಾಗಿ ವ್ಯವಹಾರದ ಮೂಲಕ ಹಣವನ್ನು ಬೆಳೆಸಲು ಕೂಡಾ ಸಂಪತ್ತನ್ನು ಪ್ರತ್ಯೇಕಿಸಬೇಕು. ಹೀಗೆ ಸಂಪತ್ತನ್ನು ಐದುವಿಧವಾಗಿ ವಿಭಾಗ ಮಾಡಿದವನು ಮಾತ್ರ ಸುಖವಾಗಿ ಇರುತ್ತಾನೆ. ಈ ಲೋಕದಲ್ಲಿಯೂ, ಪರಲೋಕದಲ್ಲಿಯೂ ಸುಖಿಸುತ್ತಾನೆ.

ನಾನು ಹೇಳಿದ ಈ ವಿಷಯದಲ್ಲಿ ಋಗ್ವೇದವು ಆಧಾರವಾಗಿದೆ. ತನಗೆ, ತನ್ನ ಉಪಜೀವನಕ್ಕೆ ಬೇಕಾದಷ್ಟು ಉಳಿಸಿಕೊಂಡೇ ದಾನ ಮಾಡಬೇಕೆಂದು ಈ ಶ್ರುತಿಯು ಹೇಳುತ್ತದೆ.

ನಿಜ. ದಾನ ಮಾಡುತ್ತೇನೆಂದು ನೀನು ಪ್ರತಿಜ್ಞೆ ಮಾಡಿರುವಿ. ಅದು ಸುಳ್ಳಾಗುವುದಲ್ಲ ಎಂದು ಸಂದೇಹಿಸಬೇಡ. ಕಾಮುಕಸ್ತ್ರೀಯರ ವಿಷಯದಲ್ಲಿ, ವಿವಾಹಪ್ರಸಂಗದಲ್ಲಿ, ಜೀವನಕ್ಕಾಗಿ, ಪ್ರಾಣಾಪಾಯ ಒದಗಿದಾಗ, ಗೋಬ್ರಾಹ್ಮಣರ ಹಿತಕ್ಕಾಗಿ, ಪ್ರಾಣಿಗಳ ಹಿಂಸೆಯಾಗುತ್ತಿರುವಾಗ ಹೇಳಿದ ಸುಳ್ಳಿನಿಂದ ಅನರ್ಥವಾಗುವುದಿಲ್ಲ. ಅದು ನಿಂದಿತವಲ್ಲ. ವಿಹಿತವೇ ಆಗಿದೆ.

॥ ಇತಿ ಶ್ರೀಮದ್ಭಾಗವತೇ ಅಷ್ಟಮಸ್ಕಂಧೇ ಅಷ್ಟಾದಶೋಽಧ್ಯಾಯಃ ॥

## ಅಥ ಏಕೋನವಿಂಶೋऽಧ್ಯಾಯಃ

ಸುಳ್ಳು ಹೇಳಿ ಜೀವನೋಪಾಯವನ್ನು ಮಾಡಿಕೊಳ್ಳಬೇಕೆಂದು ಶುಕ್ರಾಚಾರ್ಯರು ಹೇಳಿದರು. ಅದನ್ನು ಕೇಳಿಸಿಕೊಂಡ ಬಲಿ ಕ್ಷಣ ಹೊತ್ತು ಸುಮ್ಮನಿದ್ದ. ಅವನ ಮನಸ್ಸು ಸುಮ್ಮನಿರಲಿಲ್ಲ. ಶಾಸ್ತ್ರೀಯವಾಗಿ, ಪ್ರಸಂಗಾನುಗುಣವಾಗಿ ಆಲೋಚಿಸಿತು. ನಂತರ ಸಾವಧಾನಮನಸ್ಕನಾಗಿ ಮಾತನಾಡಿದ.

ಆಚಾರ್ಯರೇ! ದಾನದಿಂದ ದಾನಿಯ ಜೀವನಕ್ಕೆ ಕುಂದುಬರಬಾರದು. ದಾನ ಮಾಡಿದ ವ್ಯಕ್ತಿಯ ಉಪಜೀವನಕ್ಕೆ ಬಾಧಕವಾಗಬಾರದು ಎಂದು ತಾವು ಹೇಳಿದಿರಿ. ಅಂಥ ದಾನವೇ ಗೃಹಸ್ಥನಿಗೆ ಯೋಗ್ಯವೆಂದು ತಿಳಿಸಿದಿರಿ. ಅದು ನಿಜವೇ. ಆ ವಿಷಯವನ್ನು ನಾನು ನಿರಾಕರಿಸಲಾರೆ.

ಗುರುಗಳೇ! ನಾನು ಒಬ್ಬನಲ್ಲ. ನನ್ನ ಹಿಂದೆ ವಂಶವಿದೆ. ಆ ವಂಶಕ್ಕೊಂದು ಚರಿತೆ ಇದೆ. ಘನತೆ ಇದೆ. ಆ ಚರಿತೆ ಮತ್ತು ಘನತೆಗಳಿಗೆ ಅನುಗುಣವಾಗಿ ನನ್ನ ನಡವಳಿಕೆ ಇರಬೇಕು.

ಈಗಾಗಲೇ ದಾನ ಮಾಡುತ್ತೇನೆಂದು ಹೇಳಿಬಿಟ್ಟಿದ್ದೇನೆ ಅದೂ ಬ್ರಾಹ್ಮಣನಿಗೆ. ಹೀಗೆ ಹೇಳಿ ಈಗ ಕೊಡುವುದಿಲ್ಲ ಎಂದು ಯಾವ ಮುಖದಿಂದ ಹೇಳಲಿ. ಹೀಗೆ ಹೇಳಿ ನನ್ನ ವಂಶದ ಚರಿತೆ ಮತ್ತು ಘನತೆಗಳನ್ನು ಕೊಂದು ಹಾಕಲೇ? ಅಪಕೀರ್ತಿಗೆ ಈಡಾಗಲೇ? ಪ್ರಹ್ಲಾದರಾಜರ ಮೊಮ್ಮಗನಾಗಿ ಅವರ ಪರಿಶುದ್ಧವಾದ ಚರಿತೆಗೆ ಕಲಂಕ ತರಲೇ?

ಸತ್ಯವೇ ಧರ್ಮ. ಸುಳ್ಳು ಅಧರ್ಮ. ಸತ್ಯಕ್ಕಿಂತಲೂ ಮಿಗಿಲಾದ ಧರ್ಮವಿಲ್ಲ. ಸುಳ್ಳಿಗಿಂತಲೂ ಮಿಗಿಲಾದ ಅಧರ್ಮವಿಲ್ಲ. ಹೀಗೆ ನಾನು ನಂಬಿದ್ದೇನೆ. ಹಾಗೆಯೇ ನಡೆದಿದ್ದೇನೆ. ಅಸತ್ಯ ಮಾತನಾಡಿದವನು ಭೂಮಿಗೆ ಭಾರವಾಗುತ್ತಾನೆ. ಭೂಮಿಗೆ ಭಾರವಾಗಿ ಬದುಕುವುದಾದರೂ ಎಂತು?

ನೀವು ಹೇಳಿದಂತೆ ನಡೆದುಕೊಳ್ಳಲು ನನಗೆ ಅಂಜಿಕೆಯಾಗುತ್ತಿದೆ. ಯಾಕೋ ಗೊತ್ತಿಲ್ಲ. ಇಂದ್ರನೊಂದಿಗೆ ಯುದ್ಧಮಾಡಿದಾಗಲೂ ಹೆದರಿದವನಲ್ಲ. ನರಕದಿಂದಲೂ ನನಗೆ ಹೆದರಿಕೆ ಇಲ್ಲ. ಸ್ವರ್ಗಭ್ರಂಶದಿಂದಲೂ ನಾನು ಭಯಪಡುವುದಿಲ್ಲ. ಎಲ್ಲೆ ಮೀರಿ ಬರುವ ದುಃಖಪ್ರವಾಹಕ್ಕೂ ಹೆದರುವುದಿಲ್ಲ. ಆದರೆ ಬ್ರಾಹ್ಮಣರಿಗೆ ಕೊಡುತ್ತೇನೆಂದು ಹೇಳಿ ವಂಚನೆ ಮಾಡಲು ನನಗೆ ಅಂಜಿಕೆಯಾಗುತ್ತಿದೆ. ಭಯವಾಗುತ್ತಿದೆ.

ಮರ್ತ್ಯನಿಗೆ ಮರಣ ತಪ್ಪಿದ್ದಲ್ಲ. ಸಂಪಾದಿಸಿದ್ದನ್ನೆಲ್ಲ ಬಿಟ್ಟುಹೋಗುವುದೂ ತಪ್ಪಿದ್ದಲ್ಲ. ನಮ್ಮಿಂದ ದೂರವಾಗುವ ಸಂಪತ್ತಿನಿಂದ ಒಬ್ಬ ಬ್ರಾಹ್ಮಣ ಸುಖಪಡುತ್ತಾನೆಂದಾದರೆ ಅದಕ್ಕಿಂತಲೂ ಹೆಚ್ಚಿನ ಲಾಭವೇನಿದೆ? ಅಂಥ ಹಣವನ್ನು ಸಂಪತ್ತನ್ನು ಪರಿತ್ಯಜಿಸದೇ ಇರಲು ಕಾರಣವಾದರೂ ಏನಿದೆ? ನನಗೆ ಅರ್ಥವಾಗುತ್ತಿಲ್ಲ.

ವ್ಯರ್ಥವಾಗಿ ಈ ಸಂಪತ್ತನ್ನೆಲ್ಲ ಬಿಡುವುದಕ್ಕಿಂತಲೂ ಬ್ರಾಹ್ಮಣರಿಗೆ, ಸಜ್ಜನರಿಗೆ ದಾನಮಾಡುವ ಮೂಲಕ ಸಾರ್ಥಕವಾಗಿ ಬಿಡುವುದು ಉತ್ತಮವಲ್ಲವೇ? ನಿಸ್ಸಂಶಯವಾಗಿಯೂ ಇದುವೇ ಉತ್ತಮ.

ನಾನು ಸಾಕಷ್ಟು ಶಾಸ್ತ್ರಗಳನ್ನು ನಿಮ್ಮಿಂದಲೇ ಶ್ರವಣ ಮಾಡಿದ್ದೇನೆ. ಜೀವನದ ಸಂರಕ್ಷಣೆಗಾಗಿ ವಂಚಿಸಬೇಕೆಂಬುದು ವಿವೇಕಿಗಳಿಗೆ, ಬಹುಶ್ರುತರಿಗೆ ಒಪ್ಪುವುದಿಲ್ಲ. ಅವರಿಗೆ ರುಚಿಸುವುದಿಲ್ಲ.

ಆಥರ್ವಣವೇದಾಧ್ಯಾಯಿಗಳಾದ ದಧೀಚಿಗಳು ದೇವತೆಗಳಿಗಾಗಿ ತಮ್ಮ ದೇಹವನ್ನೇ ದಾನ ಮಾಡಿದರು. ಶಿಬಿಚಕ್ರವರ್ತಿಯು ಪಾರಿವಾಳದ ಹಿತಕ್ಕಾಗಿ ತನ್ನ ತನುವನ್ನೇ ತ್ಯಾಗ ಮಾಡಿದ. ಇಂಥ ಅನೇಕ ಸಜ್ಜನರು ತಮ್ಮ ಪ್ರಾಣಗಳಿಂದ ಸಾಧುಜನರಿಗೆ ಹಿತವಾಗುವಂತೆ ಮಾಡಿದ್ದಾರೆ. ಅಂಥವರ ಆದರ್ಶಗಳನ್ನು ಕೇಳುತ್ತಲೇ ಬೆಳೆದ ನಾನು ಹೇಗೆ ವಂಚಿಸಲಿ? ವಂಚಿಸಿ ಹೇಗೆ ಬಾಳಲಿ?

ಅವರಂತೆ ನಾನೇನೂ ಪ್ರಾಣವನ್ನು ಕೊಡುತ್ತೇನೆಂದು ಹೇಳಿಲ್ಲ. ಪ್ರಾಣಗಳನ್ನು ಕೊಡಲು ಕೂಡಾ ಅವರು ಸಂದೇಹಿಸಲಿಲ್ಲ. ಸಂಪತ್ತನ್ನು ಕೊಡಲು ನಾನೇಕೆ ಸಂದೇಹ ಮಾಡಲಿ? ನನಗೆ ಈ ವಿಷಯದಲ್ಲಿ ಸಂದೇಹವೇ ಇಲ್ಲ.

ದುಸ್ತ್ಯಜವಾದ ಪ್ರಾಣಗಳ ತ್ಯಾಗವನ್ನೇ ಮಾಡಿದ ಉದಾಹರಣೆ ಇರುವಾಗ, ತ್ಯಾಜ್ಯವಾದ ಭೂಮಿಯನ್ನು ಕೊಡುವಲ್ಲಿ ನಾನು ಸಂದೇಹಿಸಬೇಕಿಲ್ಲ.

ಶುಕ್ರಾಚಾರ್ಯರೇ! ಈ ಲೋಕಗಳೆಲ್ಲವೂ ಕಾಲಕ್ಕೆ ವಶವಾಗಿ ನಷ್ಟವಾಗುತ್ತವೆ. ಆದರೆ ದಾನದಿಂದ, ನಷ್ಟವಾಗದ ಶಾಶ್ವತವಾದ ಕೀರ್ತಿಯು ದೊರೆಯುತ್ತದೆ. ದಾನಶೀಲರಿಗೆ ಲಭ್ಯವಾಗುವ ಲೋಕಗಳು ದಾನ ಮಾಡದವರಿಗೆ ಸಿಗುವುದಿಲ್ಲ. ಆದ್ದರಿಂದ ನಾನೇಕೆ ದಾನ ಮಾಡಬಾರದು?

ಯುದ್ಧಪರಾಙ್ಮುಖರಾಗದೇ ದೈತ್ಯರು ಈ ಭೂಮಿಯನ್ನು ಭೋಗಮಾಡಿದ್ದಾರೆ. ಭಗವಂತನಿಂದ ಪ್ರೇರಿತವಾದ ಕಾಲವು ಆ ಎಲ್ಲ ದೈತ್ಯರನ್ನೂ ನುಂಗಿಹಾಕಿದೆ. ಆದರೆ ಅವರ ಕೀರ್ತಿಯನ್ನು ಮಾತ್ರ ನುಂಗಲು ಕಾಲಕ್ಕೆ ಆಗಿಲ್ಲ. ಅವರ ಆ ಕೀರ್ತಿಯು ಈಗಲೂ ಬೆಳಗುತ್ತಲೇ ಇದೆ. ಹೀಗಾಗಿ ದಾನ ಮಾಡುವ ಮೂಲಕ ಕೀರ್ತಿಯನ್ನೇ ನಾನು ಸಂಪಾದಿಸುತ್ತೇನೆ.

ಯುದ್ಧದಲ್ಲಿ ಬೆನ್ನು ತೋರಿಸದೇ ಮಡಿದ ಶೂರರು ಬೇಕಾದಷ್ಟು ಜನರಿದ್ದಾರೆ. ಆದರೆ ಸತ್ಪಾತ್ರರು ಬಂದಾಗ ಶ್ರದ್ಧೆಯಿಂದ ದಾನ ಮಾಡಿದವರು, ದ್ರವ್ಯವನ್ನು ತ್ಯಾಗಮಾಡಿದವರು ಮಾತ್ರ ಅಪರೂಪಕ್ಕೆ ನೋಡಲು ಸಿಗುತ್ತಾರೆ. ಆದ್ದರಿಂದ ಯುದ್ಧದಲ್ಲಿ ದೇಹತ್ಯಾಗ ಮಾಡುವುದಕ್ಕಿಂತಲೂ ದಾನಮಾಡುವುದೇ ಶ್ರೇಯಸ್ಕರವಾಗಿದೆ.

ದ್ರವ್ಯಾಪೇಕ್ಷೆಯಿಂದ ಬಂದ ಸತ್ಪಾತ್ರನಿಗೆ ದಾನ ಮಾಡುವುದರಿಂದ ಕ್ಲೇಶವಾಗುತ್ತದೆ ಎಂದು ನರಕವಾಗುತ್ತದೆಂದು ತಾವು ಹೇಳಿದಿರಿ. ಕರುಣೆಯಾದವನು ಅಂಥ ಕ್ಲೇಶಗಳಿಗೆ ಸಿದ್ಧನಾಗುತ್ತಾನೆ. ನರಕವನ್ನು ಅನುಭವಿಸಲು ಕರುಣೆಯು ಹಿಂಜರಿಯುವುದಿಲ್ಲ. ತನ್ನಿಂದ ಮತ್ತೊಬ್ಬರಿಗೆ ಸುಖವಾಗಬೇಕೆಂದು ಅವನು ಬಯಸಿರುತ್ತಾನೆ. ಅಂಥ ಕರುಣೆಯು ಈ ಲೋಕದಲ್ಲಿಯೂ ನೆಮ್ಮದಿಯಿಂದ ಇರುತ್ತಾನೆ. ಪರಲೋಕದಲ್ಲಿಯೂ ಸುಖಿಸುತ್ತಾನೆ. ಬ್ರಹ್ಮಜ್ಞಾನಿಗಳಾಗಿ ಇಂಥ ಕರ್ಮವನ್ನು ಮಾಡಿದರಂತೂ ಆಗುವ ಆನಂದದ ಮಿತಿಯನ್ನು ಹೇಳಲು ಸಾಧ್ಯವಿಲ್ಲ. ಆದ್ದರಿಂದ ಈ ವಟುವಿಗೆ ಇಷ್ಟವಾದ ಮೂರು ಹೆಜ್ಜೆಯ ಭೂಮಿಯನ್ನು ನಾನು ದಾನ ಮಾಡುತ್ತೇನೆ. ಕೀರ್ತಿಕಾಮುಕನಾದ ದಾನಶೀಲನು ಅಪಕೀರ್ತಿಯನ್ನು ಬಯಸುವುದಿಲ್ಲ. ಅವನು ಬಡತನಕ್ಕೆ ಹೆದರುವುದಿಲ್ಲ. ಅಂಥ ದಾನಶೀಲನಿಗೆ ಖಂಡಿತವಾಗಿಯೂ ದುರ್ಗತಿಯಾಗುವುದಿಲ್ಲ.

ಮುನಿಗಳೇ! ವೇದವಿಹಿತವಾದ ಕರ್ಮಗಳನ್ನು ಮಾಡುವುದರಲ್ಲಿ ಮಾಡಿಸುವಲ್ಲಿ ತಾವು ಕುಶಲರು. ನೀವು ಮಾಡುವ, ಮಾಡಿಸುವ ಕರ್ಮಗಳಲ್ಲಿ ಸ್ಪಷ್ಟವಾಗಿ ಭಕ್ತಿಯು ಕಾಣಿಸುತ್ತದೆ. ಆ ಕರ್ಮಗಳಲ್ಲಿ ಭಗವಂತನೇ ನಮಗೆ ಕಾಣಿಸುತ್ತಾನೆ. ನಾವು ಮಾಡುವ, ನೀವು ಮಾಡಿಸುವ ಅಶ್ವಮೇಧಾದಿಕರ್ಮಗಳಿಗೆ ನಿಯಾಮಕನಾದ, ಯಜ್ಞಭೋಕ್ತವಾದ ವಿಷ್ಣುವೇ ಇವನಾಗಿದ್ದಾನೆ ಎಂದು ತಾವು ಹೇಳಿದಿರಿ. ಅಂಥ ವಿಷ್ಣುವಿಗೆ ಅಲ್ಲದೇ ಇನ್ನಾರಿಗೆ ನಾನು ದಾನ ಮಾಡಲಿ? ಇದು ನನ್ನ ಸೌಭಾಗ್ಯವೆಂದೇ ನಾನು ತಿಳಿಯುತ್ತೇನೆ. ಅವನು ನಿಗ್ರಹವನ್ನೇ ಮಾಡಲಿ ಅನುಗ್ರಹವನ್ನೇ ಮಾಡಲಿ ನಾನು ಮಾತ್ರ ದಾನ ಮಾಡುತ್ತೇನೆ.

ಬಲಿಯು ತನ್ನ ಮಾತನ್ನು ಉಲ್ಲಂಘಿಸುತ್ತಿದ್ದಾನೆ ಎಂದು ಶುಕ್ರಾಚಾರ್ಯರು ಭಾವಿಸಿದರು. ಈ ವಿಷಯದಲ್ಲಿ ತಮ್ಮನ್ನು ಉದಾಸೀನ ಮಾಡುತ್ತಿದ್ದಾನೆ ಎಂದು ತಿಳಿದರು. ದೈವಪ್ರೇರಿತರಾದರು. ಬಲಿಗೆ ಶಾಪವನ್ನಿತ್ತರು.

ಹೇ ಬಲಿಯೇ! ನೀನು ಅಜ್ಞನಾಗಿರುವಿ. ನಾನೇ ಪಂಡಿತ ಎಂದು ಭಾವಿಸುತ್ತಿರುವಿ. ಮೂರ್ಖನಾಗಿರುವಿ. ನನ್ನನ್ನು ಉಲ್ಲಂಘಿಸುತ್ತಿರುವಿ. ಸಂಪತ್ತಿನಿಂದಲೇ ಈ ವಿಧವಾದ ಮದವು ಬರುತ್ತದೆ. ಆದ್ದರಿಂದ ನೀನು ಕೂಡಲೇ ಸಂಪತ್ತಿನಿಂದ ಭ್ರಷ್ಟನಾಗುವಿ.

ಗುರುಗಳ ಶಾಪಕ್ಕೆ ಅನುಗುಣವಾಗಿ ಸಂಪತ್ತಿನಿಂದ ಚ್ಯುತನಾಗಲು ಬಲಿಯು ಬಯಸಿದ. ಆದರೆ ಸತ್ಯಚ್ಯುತನಾಗಲು ಬಲಿಯು ಸಿದ್ಧನಾಗಲಿಲ್ಲ. ವಾಮನನ ಪೂಜೆಯನ್ನು ನೆರವೇರಿಸಿದ. ವಿಂಧ್ಯಾವಲಿಯು ಹಾಕಿದ ನೀರಿನ ಧಾರೆಯೊಂದಿಗೆ ಮೂರು ಪಾದದ ಭೂಮಿಯನ್ನು ದಾನ ಮಾಡಿಯೇ ಬಿಟ್ಟ.

ಯಜ್ಞದೀಕ್ಷಿತನಾದ ಬಲಿಯು ಸ್ವಯಂ ತಾನೇ ವಾಮನನ ಪಾದಗಳನ್ನು ಪ್ರಕ್ಷಾಲನ ಮಾಡಿದ. ಜಗತ್ತನ್ನೇ ಪವಿತ್ರಗೊಳಿಸುವ ಆ ಪವಿತ್ರವಾದ ಪಾದೋದಕವನ್ನು ತಾನು ಪ್ರೋಕ್ಷಿಸಿಕೊಂಡ. ಭಕ್ತಿಯಿಂದ ಶಿರದಲ್ಲಿ ಧರಿಸಿದ.

ವಾಮನನ ಪಾದಪೂಜೆಯನ್ನು ಕಾಣಲು ದೇವತೆಗಳೆಲ್ಲ ಆಕಾಶದಲ್ಲಿ ಸೇರಿದರು. ಅವರೆಲ್ಲರೂ ಬಲಿಯ ದಾನವನ್ನು ಮೆಚ್ಚಿದರು. ಬಲಿಯ ಮೇಲೆ ಪುಷ್ಪವೃಷ್ಟಿಯನ್ನೂ ಮಾಡಿದರು.

ಬಲಿಯು ಭೂದಾನವನ್ನು ಮಾಡಿದ್ದೇ ತಡ. ವಾಮನನ ರೂಪವು ಬೆಳೆಯಲು ತೊಡಗಿತು. ಎಲ್ಲರಿಗೂ ಆಶ್ಚರ್ಯವಾಯಿತು.

ಅಲ್ಲಿ ಸೇರಿದ ಋತ್ವಿಜರು, ಶುಕ್ರಾಚಾರ್ಯರು, ಸಭಿಕರು, ಬಲಿಯು ಭಗವಂತನಾದ ವಾಮನನ ದೇಹದಲ್ಲಿ ಸಮಗ್ರವಾದ ವಿಶ್ವವನ್ನೇ ದರ್ಶಿಸಿಕೊಂಡರು. ಆನಂದರಿಂದ ತುಂದಿಲರಾದರು.

ಭಗವಂತನ ಒಂದೊಂದು ಅವಯವವನ್ನು ಆಯಾ ಲೋಕಗಳು, ಲೋಕಾಧಿ ಪತಿಗಳು ಆಶ್ರಯಿಸಿಕೊಂಡಿರುವುದನ್ನು ಬಲಿಯು ಸ್ಪಷ್ಟವಾಗಿ ಕಂಡ.

ಬಲಿಯೊಂದಿಗೆ ಉಳಿದ ದೈತ್ಯರೂ ಈ ವಿಚಿತ್ರವನ್ನು ಕಂಡು ಅದನ್ನು ಜೀರ್ಣಿಸಿಕೊಳ್ಳದೇ ಮೂರ್ಛಿತರಾದರು. ಬಲಿಯು ಮಾತ್ರ ಈ ವಿಚಿತ್ರವನ್ನು ಕಂಡು ಮೂಕವಿಸ್ಮಿತನಾದ. ಸುನಂದ-ನಂದ ಮುಂತಾದ ದ್ವಾರಪಾಲಕರು ಭಗವಂತನ ಸೇವೆಯನ್ನು ಮಾಡುತ್ತಿದ್ದರು. ಭಗವಂತ ದಿವ್ಯವಾದ ಆಭರಣಗಳಿಂದ ಅಲಂಕೃತನಾಗಿದ್ದ. ಹೀಗೆ ವಾಮನರೂಪಿಯಾದ ಪರಮಾತ್ಮನು ಕಂಗೊಳಿಸಿದ.

ವಾಮನನು ತನ್ನ ಎರಡು ಹೆಜ್ಜೆಗಳಿಂದ ಸಮಗ್ರವಾದ ಲೋಕಗಳನ್ನು ವ್ಯಾಪಿಸಿದ. ಮೂರನೆಯ ಹೆಜ್ಜೆಯನ್ನಿಡುವುದಕ್ಕೆ ಸ್ಥಳವೇ ಇಲ್ಲವಾಯಿತು.

ಬಲಿಯ ಅಧೀನವಾದ ಲೋಕಗಳು ಅಲ್ಲಿಗೆ ಮುಕ್ತಾಯವಾದವು. ಆದ್ದರಿಂದ ಸ್ವಲ್ಪವೂ ಸ್ಥಳ ಇರಲಿಲ್ಲ.

**॥ ಇತಿ ಶ್ರೀಮದ್ಭಾಗವತೇ ಅಷ್ಟಮಸ್ಕಂಧೇ ಏಕೋನವಿಂಶೋಽಧ್ಯಾಯಃ ॥**

★★★

## ಅಥ ವಿಂಶೋಽಧ್ಯಾಯಃ

ಭಗವಂತನ ಪಾದ ಸತ್ಯಲೋಕಕ್ಕೆ ಬಂದಿತು. ತನ್ನ ಲೋಕಕ್ಕೆ ಬಂದಿರುವ ನಿಜವಾಗಿ ಅತಿಥಿಯಾದ ಭಗವಂತನ ಪೂಜೆಯನ್ನು ಗೃಹಸ್ಥಾಶ್ರಮಧರ್ಮಕ್ಕೆ ಅನುಗುಣವಾಗಿ ಬ್ರಹ್ಮದೇವರು ಮಾಡಿದರು.

ಭಗವಂತನ ಪಾದದಲ್ಲಿಯ ಉಗುರುಗಳು ಕೋಟಿಚಂದ್ರರ ಕಾಂತಿಗೂ ಮಿಗಿಲಾಗಿವೆ. ಆ ಉಗುರುಗಳು ಸತ್ಯಲೋಕದ ಕಾಂತಿಯನ್ನೇ ಧಿಕ್ಕರಿಸುತ್ತಿವೆ. ಆ ನಖರಗಳನ್ನು ನೋಡಿ ಬ್ರಹ್ಮದೇವರು ಸಂತುಷ್ಟರಾದರು. ಅಂಥ ನಖಗಳನ್ನು ಹೊತ್ತಿರುವ ಪಾದಗಳನ್ನು ಪೂಜಿಸಬೇಕೆಂದು ಉತ್ಸುಕರಾದರು. ಬ್ರಹ್ಮದೇವರು ತ್ರಿವಿಕ್ರಮನ ಪಾದಪೂಜೆಗೆ ಉದ್ಯುಕ್ತರಾದಾಗ ಅದನ್ನು ಕಾಣಲು ಪರಿವಾರವೆಲ್ಲವೂ ಅಲ್ಲಿ ಸೇರಿತು. ನಿತ್ಯವೂ ಭಗವಂತನನ್ನೇ ಉಪಾಸನೆ ಮಾಡುವ ಮರೀಚಿ ಮುಂತಾದ ಋಷಿಗಳು, ಸನಂದನ ಮುಂತಾದ ಯೋಗಿಗಳು ಆ ಪಾದದ ಸಮೀಪಕ್ಕೆ ಬಂದರು.

ವೇದರಾಶಿಗಳಿಗೆ ಅಭಿಮಾನಿಗಳಾದ ದೇವತೆಗಳು, ಧನುರ್ವೇದ ಆಯುರ್ವೇದ ಗಾಂಧರ್ವವೇದ ಅರ್ಥಶಾಸ್ತ್ರ, ಉಪವೇದಗಳಿಗೆ ಅಭಿಮಾನಿಗಳಾದ ದೇವತೆಗಳು, ಯಮ-ನಿಯಮಾಭಿಮಾನಿಗಳು, ಬ್ರಹ್ಮತರ್ಕ, ಮಹಾಭಾರತ, ಪಂಚರಾತ್ರ, ಮೂಲ-ರಾಮಾಯಣಗಳಿಗೆ ಅಭಿಮಾನಿಗಳಾದ ದೇವತೆಗಳು, ಶಿಕ್ಷಾ-ಕಲ್ಪ-ವ್ಯಾಕರಣ-ಛಂದಸ್ಸು-ಜ್ಯೋತಿಷ್ಯ-ನಿರುಕ್ತಗಳೆಂಬ ಆರು ಅಂಗಗಳ ಅಭಿಮಾನಿಗಳು, ಅಷ್ಟಾದಶ ಪುರಾಣಾಭಿ-ಮಾನಿಗಳು, ಸಂಹಿತಾಭಿಮಾನಿಗಳು, ಯೋಗ-ಸಮಾಧಿಗಳಿಂದ ಪರಿಶುದ್ಧರಾದ ಅಧಿಕಾರಿಗಳೆಲ್ಲರೂ ಆ ಸ್ಥಳಕ್ಕೆ ಧಾವಿಸಿ ಬಂದರು. ಇವರೆಲ್ಲರೂ ಭಗವಂತನ ನಿರಂತರ ಚಿಂತನದ ಪ್ರಭಾವದಿಂದ ಜ್ಞಾನಪ್ರಾಪ್ಯವಾದ ಆ ಪರಮಾತ್ಮನ ಪಾದಗಳನ್ನು ಕಂಡು ಪುಲಕಿತರಾದರು. ಧನ್ಯತೆಯನ್ನು ಅನುಭವಿಸಿದರು. ಆ ಪಾದವನ್ನು ಸ್ತುತಿಸಿದರು.

ತ್ರಿವಿಕ್ರಮನ ಎಡಗಾಲಿನ ಅಂಗುಷ್ಠದ ಸ್ಪರ್ಶದಿಂದ ಬ್ರಹ್ಮಾಂಡದ ಕಟಾಹ ಒಡೆಯಿತು. ಬ್ರಹ್ಮಾಂಡದ ಹೊರಗಿನ ನೀರು ಒಳಗೆ ಬಂದಿತು. ಆ ಪರಿಶುದ್ಧವಾದ ಜಲವನ್ನು ಬ್ರಹ್ಮದೇವರು ತಮ್ಮ ಕಮಂಡಲುವಿನಲ್ಲಿ ತುಂಬಿಕೊಂಡರು. ಆ ಪರಿಶುದ್ಧವಾದ ಜಲದಿಂದಲೇ ತ್ರಿವಿಕ್ರಮನ ಪಾದ ಪೂಜೆ ಮಾಡಿದರು.

ಬ್ರಹ್ಮದೇವರು ಈ ಪರಮಾತ್ಮನ ನಾಭಿಕಮಲದಲ್ಲಿ ಜನಿಸಿದ್ದಾರೆ. ಈ ಪರಮಾತ್ಮನ ಅನುಗ್ರಹದಿಂದಲೇ ಪರಿಶುದ್ಧವಾದ ಕೀರ್ತಿಯನ್ನು ಸಂಪಾದಿಸಿಕೊಂಡಿದ್ದಾರೆ. ಅಂಥ ವಿಷ್ಣುವನ್ನು ಭಕ್ತಿಯಿಂದ ಸಾಂಗೋಪಾಂಗವಾಗಿ ಪೂಜಿಸಿದರು. ತನ್ಮಯರಾಗಿ ಸ್ತುತಿಸಿದರು. ಪರಮಾತ್ಮನ ಪಾದವನ್ನು ಸೋಕಿದ ಪವಿತ್ರವಾದ ಆ ಬ್ರಹ್ಮದೇವರ ಕಮಂಡಲುಜಲವೇ ಸ್ವರ್ಗಂಗೆಯಾಯಿತು. ಹಾಗೆಯೇ ಕೆಳಗಿನ ಲೋಕಗಳಲ್ಲಿ ಹರಿದ ಆ ಜಲವು ಭಗವಂತನ

ಕೀರ್ತಿರೂಪವಾಗಿ ತ್ರಿಲೋಕವನ್ನೂ ಪವಿತ್ರಗೊಳಿಸುವ ಗಂಗಾನದಿಯಾಯಿತು.

ಭಗವಂತನ ಪಾದ ತೊಳೆದ ನಂತರ ಸಮುಚಿತವಾದ ಪೂಜಾಸಾಧನಗಳಿಂದ ಪರಮಾತ್ಮನನ್ನು ಬ್ರಹ್ಮದೇವರು ಪೂಜಿಸಿದರು. ನೀರು, ಮಾಲೆ, ಶ್ರೇಷ್ಠವಾದ ಗಂಧ ಮುಂತಾದ ಅನುಲೇಪನಗಳು, ಸುಗಂಧಭೂಯಿಷ್ಠವಾದ ಧೂಪ, ಸಾಲು ಸಾಲು ದೀಪಮಾಲಿಕೆಗಳು, ಹಣ್ಣುಗಳು, ಲಾಜಾ ಅಕ್ಷತೆಗಳೇ ಮುಂತಾದ ಸಾಧನಗಳನ್ನು ಭಗವಂತನಿಗೆ ಅರ್ಪಿಸುತ್ತಾ ಪೂಜಿಸಿದರು. ಮತ್ತು ತ್ರಿವಿಕ್ರಮನ ಪರಾಕ್ರಮವನ್ನು ಶಂಸಿಸುವ ಸ್ತೋತ್ರಗಳಿಂದ, ಸೂಕ್ತಗಳಿಂದ ಜಯಕಾರಗಳಿಂದ ನೃತ್ಯ-ಗೀತ-ವಾದ್ಯಗಳಿಂದ ಭಗವಂತನನ್ನು ಪೂಜಿಸಿದರು.

ಅದೇ ಸಂದರ್ಭದಲ್ಲಿ ಬ್ರಹ್ಮದೇವರ ಮಕ್ಕಳಾದ ಜಾಂಬವಂತನು ನಗಾರಿಯನ್ನು ಬಾರಿಸುತ್ತಾ ಭಗವಂತನ ಜಯದ ವಾರ್ತೆಯನ್ನು ಎಲ್ಲ ದಿಕ್ಕುಗಳಲ್ಲಿ ಘೋಷಣ ಮಾಡಿದನು.

ಮೂರು ಪಾದದ ನೆಪದಿಂದ ಸಮಸ್ತ ಐಶ್ವರ್ಯವನ್ನೇ ಅಪಹರಿಸಿದ ಪರಮಾತ್ಮನ ವ್ಯಾಪಾರ ದೈತ್ಯರಿಗೆ ಸಹನೆಯಾಗಲಿಲ್ಲ. ಪರಸ್ಪರ ಮಾತನಾಡಿದರು.

ಯಾಚಕನಾಗಿ ಬಂದಿರುವ ಇವನು ಬ್ರಾಹ್ಮಣ ಪುತ್ರನಲ್ಲ. ಇವನು ವಂಚಕನಾಗಿದ್ದಾನೆ. ದೇವತೆಗಳ ಕಾರ್ಯವನ್ನು ಸಾಧಿಸಲು ಬಂದಿರುವ ಛಲಗಾರ ಇವನಾಗಿದ್ದಾನೆ. ಸ್ವರ್ಗವನ್ನು ಮತ್ತೆ ಆ ದೇವತೆಗಳಿಗೆ ನೀಡುವುದೇ ಈ ಮಾಯಾವಿಯ ಉದ್ದೇಶವಾಗಿದೆ.

ನಮ್ಮ ರಾಜನಾದ ಬಲಿಯ ಸರ್ವಸ್ವವನ್ನೂ ಇವನು ಅಪಹರಿಸಿದ್ದಾನೆ. ಯಾವಾಗಲೂ ಸತ್ಯದಲ್ಲಿಯೇ ಬಲಿಯು ನಿಷ್ಠನಾಗಿದ್ದಾನೆ. ಅದರಲ್ಲಿಯೂ ಪ್ರಕೃತ ನಮ್ಮ ಯಜಮಾನನಾದ ಬಲಿಯು ಯಜ್ಞದೀಕ್ಷಿತನಾಗಿದ್ದಾನೆ. ಬ್ರಾಹ್ಮಣರಲ್ಲಿ ವಿಶೇಷವಾದ ಗೌರವ ಈ ಬಲಿಗೆ ಇದೆ. ಇಂಥ ಬಲಿಯು ಸುಳ್ಳು ಮಾತನಾಡಲು ಸಾಧ್ಯವೇ ಇಲ್ಲ.

ನಮ್ಮ ಯಜಮಾನನಾದ ಬಲಿಯು ಯಜ್ಞದೀಕ್ಷಿತನಾಗಿದ್ದಾನೆ. ಆದ್ದರಿಂದ ಸ್ವಯಂ ಬಲಿಯು ಯಾವ ನಿಗ್ರಹವನ್ನೂ ಮಾಡುವಂತಿಲ್ಲ. ಆದ್ದರಿಂದ ಈ ತ್ರಿವಿಕ್ರಮನ ಸಂಹಾರವನ್ನು ನಾವೇ ಮಾಡಬೇಕು. ಇದು ಬಲಿಯ ಸೇವಕರಾದ ನಮ್ಮೆಲ್ಲರ ಕರ್ತವ್ಯವಾಗಿದೆ. ಹೀಗೆ ವಿಚಾರಿಸಿ ಆ ದೈತ್ಯರೆಲ್ಲರೂ ತಮ್ಮ ತಮ್ಮ ಕೈಯಲ್ಲಿ ಆಯುಧಗಳನ್ನು ಸ್ವೀಕರಿಸಿದರು.

ಯುದ್ಧ ಮಾಡುವ ಇಚ್ಛೆ ಬಲಿಗೆ ಇರಲಿಲ್ಲ. ಬಲಿಯ ಅನುಮತಿಯನ್ನು ಆ ದೈತ್ಯರು ಪಡೆಯಲೇ ಇಲ್ಲ. ತಾವಾಗಿಯೇ ನಿರ್ಧಾರ ಮಾಡಿಕೊಂಡು ವಾಮನನನ್ನು ಸಂಹರಿಸಲು ಉದ್ಯುಕ್ತರಾದರು. ತ್ರಿವಿಕ್ರಮನನ್ನು ಸಂಹರಿಸಲು ಬರುತ್ತಿರುವ ದೈತ್ಯರ ಹಿಂಡನ್ನು ಕಂಡು ದೇವತೆಗಳು ಆಯುಧಗಳನ್ನು ಧರಿಸಿ ಅವರನ್ನೆಲ್ಲ ತಡೆದರು.

ನಂದ, ಸುನಂದ, ಜಯ, ವಿಜಯ, ಪ್ರಬಲ, ಬಲ, ಕುಮುದ, ಕುಮುದಾಕ್ಷ, ವಿಷ್ವಕ್ಸೇನ, ಗರುಡ ಜಯಂತ, ಶ್ರುತದೇವ, ಪುಷ್ಪದಂತ, ಸಾತ್ವತ ಈ ಅನುಚರರೆಲ್ಲರೂ ಹತ್ತುಸಾವಿರ ಆನೆಯ ಬಲದಿಂದ ಸಂಪನ್ನರಾಗಿದ್ದಾರೆ. ಇವರೆಲ್ಲರೂ ತಮ್ಮನ್ನು ಎದುರಿಸಲು ಬಂದಿರುವ ಅಸುರಸೇನೆಯನ್ನು ಸಂಹರಿಸಿದರು.

ಷಡ್ಗುಣಪರಿಪೂರ್ಣನಾದ ಪರಮಾತ್ಮನ ಅನುಚರರು ತನ್ನ ಸೇವಕರನ್ನು ಸಂಹರಿಸುತ್ತಿದ್ದಾರೆ. ನೋಡನೋಡುತ್ತಿದ್ದಂತೆಯೇ ದೈತ್ಯಸೈನ್ಯವೆಲ್ಲ ನಷ್ಟವಾಗುತ್ತಿದೆ. ದೈತ್ಯಚಕ್ರವರ್ತಿಯಾದ ಬಲಿಗೆ ಏನು ಮಾಡಬೇಕೆಂದು ತಿಳಿಯದಾಯಿತು. ತನ್ನವರನ್ನು ಹೇಗೆ ಕಾಪಾಡಿಕೊಳ್ಳಬೇಕೆಂದು ಚಿಂತಾಕ್ರಾಂತನಾದ.

ನೀನು ನಿನ್ನ ಸಂಪತ್ತನ್ನೆಲ್ಲ ಕಳೆದುಕೊಳ್ಳುತ್ತಿ ಎಂದು ಶುಕ್ರಾಚಾರ್ಯರು ತನಗೆ ಶಾಪವಿತ್ತಿದ್ದರು. ಆ ಶಾಪವು ಬಲಿಯ ಸ್ಮರಣೆಗೆ ಬಂದಿತು. ಯುದ್ಧವನ್ನು ನಿಲ್ಲಿಸುವುದೇ ತನ್ನ ಭೃತ್ಯರನ್ನು ಕಾಪಾಡಿಕೊಳ್ಳಲು ಪ್ರಶಸ್ತವಾದ ಉಪಾಯ. ಇದರ ಹೊರತಾಗಿ ಮತ್ತೊಂದು ಉಪಾಯ ಇಲ್ಲವೆಂದು ನಿರ್ಧಾರಪೂರ್ವಕವಾಗಿ ತಿಳಿದ. ದೈತ್ಯಸೈನ್ಯ ನಷ್ಟವಾಗುತ್ತಿದ್ದರೂ ಕೋಪಾಟೋಪದಿಂದ ಯುದ್ಧಕ್ಕೆ ಸನ್ನದ್ಧರಾಗುತ್ತಿರುವ ತನ್ನ ಭೃತ್ಯರನ್ನು ನಿವಾರಿಸಿದ. ಯುದ್ಧ ಮಾಡಬೇಡಿರೆಂದು ಆಜ್ಞಾಪಿಸಿದ.

ದೈತ್ಯನಾಯಕರೇ! ನನ್ನ ಮಾತನ್ನು ಕೇಳಿರಿ. ಈಗ ಯುದ್ಧ ಮಾಡುವುದು ಬೇಡ. ಎಲ್ಲರೂ ಯುದ್ಧನಿವೃತ್ತಾಗಿರಿ. ಈಗ ಕಾಲರೂಪಿಯಾದ ಪರಮಾತ್ಮ ದೇವತೆಗಳ ಪಕ್ಷದಲ್ಲಿ ಇದ್ದಾನೆ. ಆ ಕಾಲರೂಪಿಯಾದ ಪರಮಾತ್ಮ ನಮಗೆ ಪ್ರತಿಕೂಲನಾಗಿದ್ದಾನೆ. ಈಗ ನಾವೇನು ಮಾಡಿದರೂ ಗೆಲ್ಲಲು ಸಾಧ್ಯವಿಲ್ಲ. ನಮ್ಮ ಸಾಮರ್ಥ್ಯವೆಲ್ಲ ವ್ಯರ್ಥವಾಗುತ್ತದೆ. ಪ್ರವಾಹಕ್ಕೆ ಎದುರಾಗಿ ಈಜಬಹುದು. ಬಿರುಗಾಳಿಗೆ ಎದುರಾಗಿ ಓಡಬಹುದು. ಆದರೆ ಕಾಲಕ್ಕೆ ಎದುರಾಗಿ ನಡೆಯುವುದು ಯಾರಿಗೂ ಸಾಧ್ಯವಿಲ್ಲ. ಭಗವಂತನ ಇಚ್ಛೆಗೆ ವಿರುದ್ಧವಾಗಿ ನಡೆಯುವ ಸಾಮರ್ಥ್ಯ ಯಾರಿಗೂ ಇಲ್ಲ. ಈಗ ನಾವು ಗೆಲ್ಲುವುದು ಬಿಸಿಲುಗುದುರೆಯಂತೆಯೇ. ಆದ್ದರಿಂದ ಯುದ್ಧ ಮಾಡುವುದು ಬೇಡ. ಯುದ್ಧವನ್ನು ನಿಲ್ಲಿಸಿರಿ ಎಂದು ಹೇಳಿದ.

ಈ ಹಿಂದೆ ಕಾಲನಾಮಕನಾದ ಪರಮಾತ್ಮ ನಮಗೆ ಅನುಕೂಲನಾಗಿಯೇ ಇದ್ದ. ಹೀಗಾಗಿ ಸ್ವರ್ಗವನ್ನು ಗೆದ್ದೆವು. ಅದೇ ಪರಮಾತ್ಮ ಈಗ ಪ್ರತಿಕೂಲನಾಗಿದ್ದಾನೆ. ಆದ್ದರಿಂದ ನಮ್ಮ ಸೋಲು ಖಚಿತ. ವ್ಯರ್ಥವಾದ ಕಾರ್ಯವನ್ನು ಬುದ್ಧಿವಂತರು ಕೈಗೊಳ್ಳಬಾರದು.

ಚತುರಂಗಸೈನ್ಯದ ಬಲದಿಂದ, ಮಂತ್ರಿಗಳ ಮಂತ್ರಣಗಳಿಂದ, ಬುದ್ಧಿಯಿಂದ ದುರ್ಗ-ಕೋಟೆ-ಮಂತ್ರಸಿದ್ಧಿ-ಔಷಧ ಮುಂತಾದ ಸಾಧನಗಳಿಂದ, ಸಾಮ-ದಾನ-ಭೇದ -ದಂಡರೂಪವಾದ ಉಪಾಯಗಳಿಂದ ಯಾವುದರಿಂದಲೂ ಕಾಲವನ್ನು ಗೆಲ್ಲಲು

ಸಾಧ್ಯವಿಲ್ಲ. ಭಗವಂತನ ಇಚ್ಛೆಯನ್ನು ಅತಿಕ್ರಮಿಸಲು ಯಾರೂ ಸಮರ್ಥರಲ್ಲ. ಅನುಭವಸಿದ್ಧವಾದ ವಿಷಯವಿದು.

ಅದೃಷ್ಟಪ್ರೇರಕನಾದ ಪರಮಾತ್ಮನು ದೇವತೆಗಳಿಗೆ ಪ್ರತಿಕೂಲನಾಗಿದ್ದಾಗ ಸಾಕಷ್ಟು ಬಾರಿ ಆ ದೇವತೆಗಳನ್ನು ನಾವು ಸೋಲಿಸಿದ್ದೇವೆ. ಈಗ ಆ ಪರಮಾತ್ಮ ನಮಗೆ ಪ್ರತಿಕೂಲನಾಗಿದ್ದಾನೆ. ಆದ್ದರಿಂದ ನಾವು ಸೋಲುತ್ತಿದ್ದೇವೆ. ದೇವತೆಗಳು ಗೆದ್ದು ಸಿಂಹನಾದ ಮಾಡುತ್ತಿದ್ದಾರೆ.

ಆದ್ದರಿಂದ ದೈವದ ಆನುಕೂಲ್ಯ ನಮಗೆ ಸಿದ್ಧಿಸುವ ತನಕ ಸುಮ್ಮನೇ ಇರುವುದೇ ಸಮುಚಿತ. ಆ ಕಾಲಕ್ಕಾಗಿ ಕಾಯೋಣ. ಅದೊಂದೇ ನಮ್ಮ ಮುಂದಿನ ಉಪಾಯ.

ತಮ್ಮ ಯಜಮಾನನ ಮಾತನ್ನು ಕೇಳಿದ ದೈತ್ಯರೆಲ್ಲರೂ ಸುಮ್ಮನಾದರು. ಯುದ್ಧವನ್ನು ಅಲ್ಲಿಗೇ ನಿಲ್ಲಿಸಿದರು. ರಸಾತಲವನ್ನು ಪ್ರವೇಶಿಸಿದರು.

ಭಗವದ್ಭಕ್ತನಾದ, ನಿತ್ಯವೂ ಭಗವಂತನಿಗೆ ವಾಹನವಾಗಿ ಸೇವಿಸುವ ಗರುಡ ಭಗವಂತ ಆಜ್ಞೆಯನ್ನು ಅರಿತ. ಸೋಮಲತೆಯನ್ನು ಹಿಂಡಿ ಸೋಮಪಾನ ಮಾಡುವ ದಿನದಲ್ಲಿ ವಾರುಣಪಾಶದಿಂದ ಬಲಿಯನ್ನು ಬಂಧಿಸಿದ.

ಹೀಗೆ ಗರುಡನು ವರುಣಪಾಶದಿಂದ ಬಲಿಯನ್ನು ಬಂಧಿಸಲು ಜಗತ್ತೆಲ್ಲ ಪ್ರಕ್ಷುಬ್ಧವಾಯಿತು. ಎಲ್ಲೆಡೆ ಹಾಹಾಕಾರವು ಮುಗಿಲು ಮುಟ್ಟಿತು. ವರುಣಪಾಶದಿಂದ ಬದ್ಧನಾದರೂ ಪ್ರಶಾಂತನಾಗಿಯೇ ಬಲಿಯು ಇದ್ದ. ಮನದಲ್ಲಿಯೇ ಸರ್ವೋತ್ತಮನಾದ ಶ್ರೀಹರಿಯನ್ನು ಚಿಂತಿಸಿದ. ಅಂಥ ಬಲಿಯನ್ನು ಕುರಿತು ವಾಮನ ಮಾತನಾಡಿದ.

ಬಲಿಚಕ್ರವರ್ತಿಯೇ! ನಿನ್ನ ಸಾಮ್ರಾಜ್ಯ ತುಂಬ ವಿಸ್ತಾರವಾಗಿದೆ. ಸೂರ್ಯ-ಚಂದ್ರರ ಪ್ರಕಾಶ ಎಲ್ಲಿಯ ವರೆಗೆ ಬೀಳುತ್ತದೋ ಅಷ್ಟೆಲ್ಲ ನಿನ್ನ ಸಾಮ್ರಾಜ್ಯವೇ ಆಗಿದೆ. ನಿನ್ನ ಒಡೆತನಕ್ಕೆ ಸೇರಿದೆ. ನಿಜ. ಆದರೆ ಪ್ರಕೃತ ನನ್ನ ಮೂರನೆಯ ಪಾದಕ್ಕೆ ಸ್ಥಳವೇ ಇಲ್ಲವಾಗಿದೆ. ಈಗ ಮೂರನೆಯ ಪಾದವನ್ನು ಎಲ್ಲಿ ಇಡಲಿ.

ಕೆಳಗಿನ ಲೋಕಗಳಿಂದ ಸಹಿತವಾದ ಭೂಲೋಕ ಒಂದು ಪದದಿಂದ ಆಕ್ರಾಂತವಾಗಿದೆ. ಎರಡನೆಯ ಪಾದದಿಂದ ಸ್ವರ್ಗವೆಲ್ಲವೂ ಆಕ್ರಾಂತವಾಗಿದೆ. ನನ್ನ ಈ ದೇಹದಿಂದ ಮಧ್ಯದಲ್ಲಿಯ ಲೋಕಗಳೆಲ್ಲವೂ ಆಕ್ರಮಿಸಲ್ಪಟ್ಟಿವೆ. ಆದ್ದರಿಂದ ಮೂರನೆಯ ಹೆಜ್ಜೆಗೆ ಅವಕಾಶವೇ ಇಲ್ಲವಾಗಿದೆ.

ಕೊಡುತ್ತೇನೆಂದು ಪ್ರತಿಜ್ಞೆ ಮಾಡಿ ಆ ವಸ್ತುವನ್ನು ನೀಡದಿದ್ದರೇ ದುರ್ಗತಿಯಾಗುತ್ತದೆಂದು ಪ್ರಾಜ್ಞರು ಹೇಳುತ್ತಾರೆ. ಪ್ರತಿಜ್ಞಾತವಾದ ಪದಾರ್ಥವನ್ನು ಬ್ರಾಹ್ಮಣರಿಗೆ ನೀಡದಿದ್ದರೆ ಅವನ ಐಹಿಕಭೋಗವಿಷಯಕವಾದ ಮನೋರಥಗಳೆಲ್ಲವೂ

ವ್ಯರ್ಥವಾಗುತ್ತವೆ. ಸ್ವರ್ಗವಂತೂ ಲಭ್ಯವಾಗುವುದೇ ಇಲ್ಲ. ನರಕವನ್ನು ಅನುಭವಿಸಿದ ಮೇಲೂ ಅವನು ನೀಚವಾದ ಯೋನಿಯಲ್ಲಿ ಜನಿಸುತ್ತಾನೆ.

ಯದ್ಯಪಿ ನೀನು ನೀಡುತ್ತೇನೆಂದು ಪ್ರತಿಜ್ಞೆ ಮಾಡಿದ್ದರಲ್ಲಿ ಎರಡು ಪಾದ ಭೂಮಿಯನ್ನು ನೀಡಿರುವಿ. ಆದರೆ ಮೂರನೆಯ ಪಾದವನ್ನು ನೀಡದೇ ಇದ್ದುದರಿಂದ ಸಮಗ್ರ ದಾನವಾಗಲಿಲ್ಲ. ನಿನ್ನ ಪ್ರತಿಜ್ಞೆಯು ಪೂರ್ಣವಾಗಿಲಿಲ್ಲ. ಎರಡು ಪಾದ ದಾನ ಮಾಡಿದ್ದರಿಂದ ನಿನಗೆ ಸ್ವರ್ಗವಾಗಬಹುದು. ಆದರೆ ಅಲ್ಪಕಾಲದಲ್ಲಿಯೇ ಸ್ವರ್ಗಚ್ಯುತನಾಗಿ ಪಶು ಮುಂತಾದ ಯೋನಿಗಳಲ್ಲಿ ಜನಿಸುವ ದುರ್ಗತಿಯನ್ನಂತೂ ತಪ್ಪಿಸಿಕೊಳ್ಳಲು ಸಾಧ್ಯವಿಲ್ಲ.

ಇಷ್ಟೆಲ್ಲ ನಿಷ್ಠುರವಾದ ನುಡಿಗಳನ್ನು ಭಗವಂತ ಆಡುತ್ತಿದ್ದರೂ ಬಲಿಯ ಮನಸ್ಸು ವಿಕಾರಕ್ಕೆ ಒಳಗಾಗಲಿಲ್ಲ. ಭಕ್ತಿಯಿಂದ ಬಾಗಿಯೇ ಮಾತನಾಡಿದ.

ಹೇ ಭಗವನ್! ನಿನಗೆ ವಂಚನೆ ಮಾಡಿ ನಾನೆಲ್ಲಿಗೆ ಹೋಗಲಿ. ನಾನು ಮಾಡಿದ ಪ್ರತಿಜ್ಞೆಯನ್ನು ಈಗಲೂ ಪೂರ್ಣಮಾಡಿಕೊಳ್ಳುತ್ತೇನೆ. ನಿನ್ನ ಮೂರನೆಯ ಪಾದವನ್ನು ನನ್ನ ತಲೆಯ ಮೇಲೆ ಇಡು. ಆ ಮೂರನೆಯ ಹೆಜ್ಜೆಯ ಭೂಮಿಯನ್ನೂ ಸ್ವೀಕರಿಸು. ನನ್ನ ಪ್ರತಿಜ್ಞೆಯು ಪೂರ್ಣವಾಗುತ್ತದೆ. ನನಗೆ ನರಕವೂ ತಪ್ಪುತ್ತದೆ.

ನನಗೆ ನರಕದ ಭಯ ಇಲ್ಲ. ನಾನು ಸ್ವರ್ಗದಿಂದ ಚ್ಯುತನಾಗುತ್ತೇನೆಂದು ಅಂಜುವುದಿಲ್ಲ. ವರುಣಪಾಶದ ಬಂಧನದಿಂದ ಬೆದರುವುದಿಲ್ಲ. ಸಂಸಾರಯಾತ್ರೆಗೆ ಉಪಯುಕ್ತವಾದಷ್ಟು ಹಣವೂ ಇಲ್ಲದಿದ್ದುದರಿಂದ ಚಿಂತಾಕ್ರಾಂತನಾಗುವುದಿಲ್ಲ. ದಾಟಲು ಅಸಾಧ್ಯವಾದ ಕಷ್ಟಗಳೆಂದರೆ ನನಗೆ ಗಾಬರಿ ಇಲ್ಲ. ಆದರೆ ಸಣ್ಣದಾದ ಅಸತ್ಯದಿಂದಲೂ ನಾನು ಹೆದರುತ್ತೇನೆ. ಇವನು ಅಸಾಧು ಎಂಬ ಜನರ ಮಾತಿನಿಂದ ನಾನು ಉದ್ವಿಗ್ನನಾಗುತ್ತೇನೆ. ಹೀಗಾಗಿ ಏನು ಬಿಟ್ಟರೂ ಸತ್ಯವನ್ನು ಮಾತ್ರ ನಾನು ಪರಿತ್ಯಜಿಸುವುದಿಲ್ಲ. ನನ್ನ ತಲೆಯ ಮೇಲೆ ನಿನ್ನ ಪಾದವನ್ನಿಡು. ಅದರಿಂದ ನನಗೂ ಲಾಭವೇ. ನಿನ್ನ ಪಾದ ಸೋಕಿದ ನನ್ನ ತನುವೆಲ್ಲ ಪವಿತ್ರವಾಗುತ್ತದೆ. ನನ್ನ ದೋಷಗಳೆಲ್ಲ ದೂರವಾಗುತ್ತವೆ. ನನ್ನ ಶೋಕವೆಲ್ಲ ವಿಧ್ವಸ್ತವಾಗುತ್ತದೆ.

ಸರ್ವೋತ್ತಮನಾದ ನೀನು ನೀಡಿದ ಶಿಕ್ಷೆಯೂ ನನಗೆ ವರವೇ ಆಗುತ್ತದೆ. ನಿನ್ನಿಂದ ಶಿಕ್ಷೆಯನ್ನು ಸ್ವೀಕರಿಸಿದ್ದೇನೆಂಬುದು ನನ್ನ ಕೀರ್ತಿಗೆ ಕಿರೀಟವಾಗುತ್ತದೆ. ನೀನು ನೀಡುವಂತೆ ಶಿಕ್ಷೆಯನ್ನು ತಂದೆ-ತಾಯಿಗಳೂ, ಬಂಧು-ಬಳಗವೂ ನೀಡಲು ಸಾಧ್ಯವಿಲ್ಲ. ಅಂಥ ಶಿಕ್ಷೆಯನ್ನು ನೀಡು. ನನ್ನನ್ನು ಉದ್ಧರಿಸು.

ನಾನು ಅಸುರಯೋನಿಯಲ್ಲಿ ಜನಿಸಿದ್ದೇನೆ. ಅಸುರರಂತೆ ನಡೆದುಕೊಂಡಿದ್ದೇನೆ. ಮದಾಂಧನಾಗಿ ಪ್ರವರ್ತಿಸಿದ್ದೇನೆ. ನಮ್ಮಂಥವರಿಗೆ ನೀನೇ ಪರಮಗುರುವಾಗಿರುವಿ.

ನೀನೇ ಶಿಕ್ಷಕನಾಗಿರುವಿ. ಮದದಿಂದ ಬಂದ ಅಂಧತನವನ್ನು ಪರಿಹರಿಸುವ ನೇತ್ರವನ್ನು ನೀಡುವವನು ನೀನೇ ಅಗಿರುವಿ.

ನೀನು ನೀಡಿರುವ ಈ ಶಿಕ್ಷೆಯಿಂದ ನನಗೆ ಜ್ಞಾನೋದಯವಾಗಿದೆ. ಹಿತ ಯಾವುದು ಅಹಿತ ಯಾವುದು ಎಂಬ ಜ್ಞಾನವಾಗಿದೆ. ಕರ್ತವ್ಯ ಯಾವುದು ಅಕರ್ತವ್ಯ ಯಾವುದು ಎಂದು ತಿಳಿದುಬಂದಿದೆ. ಆದ್ದರಿಂದ ನೀನೇ ಹಿತೋಪದೇಶಕನಾದ ಗುರುವೆಂದು ನಾನು ನಂಬಿದ್ದೇನೆ.

ಹಿರಣ್ಯಕಶಿಪು ಮುಂತಾದವರು ಮುಕ್ತಿಯೋಗ್ಯರಾಗಿದ್ದಾರೆ. ಆದರೂ ಅಂಥ ಅನೇಕರು ಅಸುರಯೋನಿಯಲ್ಲಿ ಜನಿಸಿದ್ದಾರೆ. ಅವರೆಲ್ಲರೂ ನಿನ್ನಲ್ಲಿ ದ್ವೇಷಯುಕ್ತವಾದ ಭಕ್ತಿಯನ್ನೇ ಮಾಡಿದರು. ಹೀಗಾಗಿ ಸನಕ ಮುಂತಾದ ಏಕಾಂತಯೋಗಿಗಳು ಕೇವಲಭಕ್ತಿಯಿಂದ ಪಡೆಯಬಹುದಾದಂಥ ಮುಕ್ತಿಯನ್ನು ಪಡೆದಿದ್ದಾರೆ.

ಹೀಗೆ ಸಿದ್ಧಿಪಡೆದ ಅನೇಕರು ಜೀವದ್ವಯ ಸಮಾವೇಶ ಉಳ್ಳವರು. ಅಯೋಗ್ಯನಾದ ಜೀವನ ಸಹವಾಸದಿಂದ ದ್ವೇಷಯುಕ್ತವಾದ ಭಕ್ತಿಯನ್ನು ಮಾಡುತ್ತಾರೆ. ಅಂಥವರು ಅಸ್ವಾಭಾವಿಕವಾಗಿ ಮಾಡಿದ ದ್ವೇಷವನ್ನು ಭಗವಂತ ಲೆಕ್ಕಿಸುವುದಿಲ್ಲ. ಸ್ವಾಭಾವಿಕವಾದ ಭಕ್ತಿಯನ್ನು ಪರಿಗಣಿಸಿ ಅನುಗ್ರಹಿಸುತ್ತಾನೆ. ಶುದ್ಧಭಕ್ತಿಯನ್ನು ಮಾಡಿದ ಭಕ್ತರನ್ನು ಅನುಗ್ರಹಿಸುತ್ತಾನೆ ಎಂಬುದು ಕೈಮುತ್ಯಸಿದ್ಧ.

ಭಕ್ತರ ತಪ್ಪುಗಳನ್ನು ಎಣಿಸದೇ ಅನುಗ್ರಹಿಸುವಂಥ ಕರುಣಾಳು ಭಗವಂತ. ಅವನ ಈ ಕರುಣದ ಕಥೆ ಅತಿ ವಿಚಿತ್ರ. ಲೋಕವಿಲಕ್ಷಣ. ಈ ನಿನ್ನ ಕರುಣೆಯ ಕಥೆಗಳನ್ನು ನಾನು ತಿಳಿದಿದ್ದೇನೆ. ಹೀಗಾಗಿ ನೀನು ಹಾಕಿದ ಈ ಶಿಕ್ಷೆಯನ್ನು ಸುಖವಾಗಿ ನಾನು ಅನುಭವಿಸುತ್ತೇನೆ. ಈ ಶಿಕ್ಷೆಯಿಂದ ನನಗೆ ದುಃಖವಾಗುತ್ತಿಲ್ಲ. ನಿರಂತರ ಕರುಣೆಯ ಕೊಡೆಯನ್ನೇ ಹರಿಸುವ ವ್ಯಕ್ತಿ ನೀನು. ನೀನು ನೀಡುವ ಶಿಕ್ಷೆ ಪರಮಾಣುವಿನಷ್ಟು ಮಾತ್ರ. ಈ ವಾರುಣಪಾಶದ ಬಂಧನದಿಂದ ನನಗೆ ವ್ಯಥೆಯಾಗುತ್ತಿಲ್ಲ.

ಬಲಿಯು ಕರ್ಮಜದೇವತೆ. ಹೀಗಾಗಿ ಶ್ರೀಹರಿಯನ್ನು ಸ್ತುತಿಸಿದರೂ ಹಲವು ಬಾರಿ ಅಸುರಾವೇಶಕ್ಕೆ ಒಳಗಾಗುತ್ತಾನೆ. ಭಗವಂತನನ್ನು ಆಕ್ಷೇಪಿಸುತ್ತಾನೆ. ಪ್ರಹ್ಲಾದ ಮಾತ್ರ ಸರ್ವದಾ ಭಕ್ತಿಯುಳ್ಳವನು.

ನೀನು ದಂಡರೂಪವಾದ ಅನುಗ್ರಹವನ್ನು ನನ್ನ ಮೇಲೆ ಮಾಡಿರುವಿ. ಆ ಅನುಗ್ರಹ ನಿನ್ನ ಭಕ್ತನ ಮೊಮ್ಮಗನೆಂದು ಮಾಡಿದ್ದೇ ಹೊರತು ನಾನು ಅನುಗ್ರಹ ಪಾತ್ರನೆಂದಲ್ಲ.

ಪ್ರಹ್ಲಾದರಾಜರನ್ನು ಸಂಹರಿಸಲು ಹಿರಣ್ಯಕಶಿಪು ಅನೇಕವಿಧವಾಗಿ ಪ್ರಯತ್ನಿಸಿದ. ಆದರೆ ಆ ಪ್ರಯತ್ನಗಳನ್ನೆಲ್ಲ ನೀನು ಹುಸಿಮಾಡಿದೆ. ನಿನ್ನ ಭಕ್ತನಾದ ನಮ್ಮ ಅಜ್ಜನನ್ನು

ಸಂರಕ್ಷಿಸಿದೆ. ಆ ಪ್ರಹ್ಲಾದರಾಜರು ನಿನ್ನಲ್ಲಿ ಅತಿಶಯವಾದ ಭಕ್ತಿಯನ್ನು ಮಾಡಿದರು. ಆ ಭಕ್ತಿಯಿಂದಲೇ ಎಲ್ಲ ಬಗೆಯ ಕಷ್ಟಗಳನ್ನು ಪರಿಹರಿಸಿಕೊಂಡರು. ಹಾಗೆ ನಾನು ನಿನ್ನಲ್ಲಿ ಭಕ್ತಿ ಮಾಡುತ್ತೇನೆ. ನಿನ್ನನ್ನು ಯಾವ ಕಾರಣಕ್ಕೂ ಮರೆಯುವುದಿಲ್ಲ. ನಿನ್ನನ್ನು ಬಿಡುವುದಿಲ್ಲ. ನಿನ್ನನ್ನು ಸರ್ವೋತ್ತಮನೆಂದು ಚಿಂತಿಸುತ್ತೇನೆ. ಎಲ್ಲ ಕಷ್ಟಗಳನ್ನೂ ಸುಖವಾಗಿ ಅನುಭವಿಸುತ್ತೇನೆ.

ನನ್ನ ಪಿತಾಮಹರಾದ ಪ್ರಹ್ಲಾದರಾಜರು ದುರ್ಜನಸಹವಾಸದಿಂದ ಹೆದರಿದರು. ಆಯುಷ್ಯ ಮುಗಿದ ಮೇಲೆ ಜೀವನನ್ನು ಬಿಟ್ಟು ಪಂಚಭೂತಗಳಲ್ಲಿ ಸೇರಿಹೋಗುವ ಈ ದೇಹದಿಂದ ಪ್ರಯೋಜನವಿಲ್ಲವೆಂದು ಬಗೆದರು. ಪಿತ್ರಾರ್ಜಿತ ಧನವನ್ನು ಹಂಚಿಕೊಳ್ಳುವ ಸಂಬಂಧಿಗಳೆಂಬ ಕಳ್ಳರಿಂದ ಯಾವುದೇ ಪ್ರಯೋಜನವಿಲ್ಲವೆಂದು ತಿಳಿದರು. ಸಂಸಾರಕ್ಕೆ ಕಾರಣಳಾದ ಹೆಂಡತಿಯಿಂದ ಮರ್ತ್ಯನಿಗೆ ಯಾವುದೇ ಲಾಭವಿಲ್ಲವೆಂದು ಭಾವಿಸಿದರು. ಮನೆಮುಂತಾದ ಯಾವುದರಿಂದಲೂ ಪ್ರಯೋಜನವಿಲ್ಲವೆಂದು ಅರಿತರು.

ಹೀಗೆ ಶರೀರಾದಿಗಳಲ್ಲಿ ಆಸಕ್ತನಾದನಿಗೆ ಆಯುಷ್ಯದ ನಾಶವಾಗುವುದರ ಹೊರತಾಗಿ ಯಾವುದೇ ಪ್ರಯೋಜನವಿಲ್ಲವೆಂದು ತೀರ್ಮಾನ ಮಾಡಿದರು. ನಿನ್ನ ಪಾದಗಳನ್ನು ಆಶ್ರಯಿಸುವುದು ಮಹಾಪ್ರಯೋಜನವೆಂದು ತಿಳಿದರು. ನಿನ್ನ ಪಾದಕಮಲಗಳಲ್ಲಿಯೇ ಅನುರಕ್ತರಾದರು. ಅವರು ನಿಜವಾಗಿ ಉತ್ತಮರಾಗಿದ್ದಾರೆ.

ನಾನೂ ಅಸುರಯೋನಿಯಲ್ಲಿಯೇ ಜನಿಸಿದ್ದೇನೆ. ಪೂರ್ವಜನ್ಮಗಳ ಪುಣ್ಯದ ಫಲವಾಗಿ ನಿನ್ನ ದರ್ಶನವಾಗಿದೆ. ಅರ್ಥವೇ ಅನರ್ಥಕ್ಕೆ ಕಾರಣವಾಗಿದೆ. ಅರ್ಥವೇ ಬುದ್ಧಿಯನ್ನು ಕಳೆದು ಹಾಕುತ್ತದೆ. ಬಂಧನದಲ್ಲಿ ಸಿಲುಕಿಸುತ್ತದೆ. ಹಣವಂತನು ಸಮೀಪ ಬಂದಿರುವ ಮೃತ್ಯುವನ್ನೂ ಗಮನಿಸಲಾರ. ಆದ್ದರಿಂದ ಜ್ಞಾನೇಚ್ಛುವಾದವನು ಅನರ್ಥಸಾಧನವಾದ ಅರ್ಥವನ್ನು ಸಂಪತ್ತನ್ನು ಪರಿತ್ಯಜಿಸಬೇಕು. ಅಂಥ ಸಂಪತ್ತು ನಾಶವಾಗುವಂತೆ ನೀನೇ ಮಾಡಿರುವಿ. ನನಗೆ ಉಪಕಾರ ಮಾಡಿರುವಿ.

ಬಲಿಯು ಇಷ್ಟೆಲ್ಲ ಮಾತನಾಡಿದ. ಪರಮಾತ್ಮನನ್ನು ಸ್ತುತಿಸಿದ. ಪ್ರಹ್ಲಾದರಾಜರು ಸರಿಯಾಗಿ ಅದೇ ಸಂದರ್ಭದಲ್ಲಿ ಆ ಯಜ್ಞಶಾಲೆಗೆ ಬಂದರು.

ವೃದ್ಧರಾದರೂ ಪ್ರಹ್ಲಾದರಾಜರು ಶೋಭಾಯಮಾನರಾಗಿದ್ದರು. ಲಕ್ಷಣಗಳಿಂದ ಸಂಪನ್ನರಾಗಿದ್ದರು. ಅವರನ್ನು ನೋಡಿದ ಕೂಡಲೇ ಬಲಿಯ ದುಃಖವೆಲ್ಲ ದೂರವಾಯಿತು. ಪ್ರಹ್ಲಾದರಾಜರು ಬಂದಾಗಲೆಲ್ಲ ಅವರನ್ನು ವಿಶೇಷವಾಗಿ ಬಲಿಯು ಸತ್ಕರಿಸುತ್ತಿದ್ದ. ಆನಂದದಿಂದ ಪ್ರತ್ಯುತ್ಥಾನ-ಅಭಿವಾದನಗಳಿಂದ ಗೌರವಿಸುತ್ತಿದ್ದ.

ವಾರುಣಪಾಶದಿಂದ ಬದ್ಧನಾದುದರಿಂದ ಬಲಿಗೆ ಏಳಲಾಗಲಿಲ್ಲ. ಎದುರಾಗಿ ಹೋಗಲಾಗಲಿಲ್ಲ. ಸರಿಯಾಗಿ ಪೂಜಿಸಲಾಗಲಿಲ್ಲ. ಅರ್ಘ್ಯ-ಪಾದ್ಯಾದಿಗಳಿಂದ

ಸತ್ಕರಿಸಲಾಗಲಿಲ್ಲ. ಇದನ್ನೆಲ್ಲ ಸ್ಮರಿಸಿಕೊಂಡು ಬಲಿಯು ಅಶ್ರುವಿಲೋಚನನಾದ. ಅಲ್ಲಿಯೇ ತಲೆಯನ್ನು ಬಾಗಿಸಿದ. ನಮಸ್ಕರಿಸಿದ.

ಬಲಿಯ ಈ ವರ್ತನೆಯಿಂದ ಪ್ರಹ್ಲಾದರಾಜರು ಸಂತುಷ್ಟರಾದರು. ಇಷ್ಟು ವಿಪತ್ತಿಗೆ ಒಳಗಾದರೂ ಅವನಲ್ಲಿ ಕಿಂಚಿತ್ತೂ ವಿಕಾರವಾಗಿರಲಿಲ್ಲ. ಅಲ್ಲಿಯೇ ಸುನಂದ-ನಂದಾದಿಗಳಿಂದ ಉಪಾಸೀನನಾಗಿ ಪರಮಾತ್ಮ ಕುಳಿತಿದ್ದ. ಅವನ ಸನಿಹ ಸೇರಿದ. ವಾಮನರೂಪಿಯಾದ ಪರಮಾತ್ಮನನ್ನು ಸ್ತುತಿಸಿದ.

ಹೇ ಹರಿಯೇ! ನನ್ನ ಮೊಮ್ಮಗನಿಗೆ ಇಂದ್ರಪದವಿಯನ್ನು ನೀನೇ ನೀಡಿರುವಿ. ನೀನೇ ಅಪಹರಿಸಿರುವಿ. ನೀನು ಹಾಗೆ ಮಾಡಿದ್ದು ಸಮುಚಿತವೇ ಆಗಿದೆ. ನಿನ್ನ ವ್ಯಾಪಾರಗಳಲ್ಲಿ ತಪ್ಪು ಹುಡುಕುವವನು ಪಾಪಿಯಾಗುತ್ತಾನೆ. ಅವನು ಶಿಕ್ಷಾರ್ಹನಾಗುತ್ತಾನೆ. ಭಕ್ತರ ವಿಷಯದಲ್ಲಿ ನೀನು ಮಾಡಿದ ನಿಗ್ರಹವೂ ಅನುಗ್ರಹವೇ ಆಗುತ್ತದೆ.

ಪ್ರಹ್ಲಾದನು ಹೀಗೆ ಪರಮಾತ್ಮನನ್ನು ಸ್ತುತಿಸಿದ ನಂತರ ಬಲಿಯ ಹೆಂಡತಿಯಾದ ವಿಂಧ್ಯಾವಲಿಯು ಭಗವಂತನ ಹತ್ತಿರ ಬಂದಳು. ವಾರುಣಪಾಶದಿಂದ ಬದ್ಧನಾದ ಬಲಿಯನ್ನು ಕಂಡು ಭೀತಳಾದಳು. ಭಕ್ತಿಯಿಂದ ಕೈಗಳನ್ನು ಜೋಡಿಸಿದಳು. ವಾಮನನನ್ನು ಕಂಡು ಮಾತನಾಡಿದಳು.

ಹೇ ಭಗವನ್! ತ್ರಿಲೋಕವೆಲ್ಲವೂ ನಿನ್ನ ಸೃಷ್ಟಿ. ಇದೆಲ್ಲದಕ್ಕೂ ನೀನೇ ನಿಯಾಮಕ. ಅಸುರಾವೇಶದಿಂದ ಯುಕ್ತರಾದ ಹಲವರು ಸಜ್ಜನರು ಕೂಡಾ ತಾವೇ ಸ್ವತಂತ್ರರೆಂದು ಭಾವಿಸುತ್ತಾರೆ. ನಾಚಿಕೆ ಇಲ್ಲದೇ ತಮ್ಮನ್ನು ತಾವೇ ನಿಯಾಮಕರೆಂದು ಭ್ರಮಿಸುತ್ತಾರೆ. ಆದರೆ ಅವರ ಆ ಭ್ರಮೆಯನ್ನು ನೀನೇ ಕಳೆದು ಹಾಕುತ್ತಿ. ಅವರು ಹಾಗೆ ಭ್ರಮಿಸಿದ ಮಾತ್ರಕ್ಕೆ ನಿನಗೆ ಯಾವುದೇ ವಿಧವಾದ ಅನರ್ಥವಿಲ್ಲ. ಅವರು ತಮ್ಮನ್ನು ತಾವು ಅಧಿಪತಿಗಳೆಂದು ಹೇಳಿದ ಮಾತ್ರಕ್ಕೆ ನಿನ್ನ ಆಧಿಪತ್ಯಕ್ಕೆ ಯಾವುದೇ ವಿಧವಾದ ಚ್ಯುತಿ ಇಲ್ಲ.

ಜಗತ್ತಿಗೆ ನಾನೇ ಸ್ವಾಮಿ ಎಂದು ನನ್ನ ಪತಿಯು ತಿಳಿದಿದ್ದರು. ಅದು ಅವರು ಮಾಡಿದ ಅಪರಾಧ. ಆದರೆ ನೀನು ದಯಾಸಾಗರ. ನನ್ನ ಪತಿಯ ಅಪರಾಧವನ್ನು ಕ್ಷಮಿಸಲು ನೀನೇ ಅರ್ಹ.

ಹೀಗೆ ಪ್ರಹ್ಲಾದರಾಜರು ಮತ್ತು ವಿಂಧ್ಯಾವಲಿಯು ಸ್ತುತಿಸಿ ಕೈಜೋಡಿಸಿ ನಿಂತರು. ಆ ಸಂದರ್ಭದಲ್ಲಿ ಬ್ರಹ್ಮದೇವರು ಅಲ್ಲಿಯೇ ಇದ್ದರು. ಭಗವಂತನಿಗೆ ಪ್ರಾರ್ಥಿಸಿದರು.

ಹೇ ಭಗವನ್! ನೀನ ಆಕಾಶಾದಿ ಪಂಚಭೂತಗಳಿಗೆ ಉತ್ಪಾದಕನಾಗಿರುವಿ. ಸಮಸ್ತಪ್ರಾಣಿಗಳಿಗೆ ನಿಯಾಮಕನಾಗಿರುವಿ. ಬ್ರಹ್ಮಾದಿಸಮಸ್ತದೇವತೆಗಳಿಂದ ವಂದ್ಯನಾಗಿರುವಿ. ಈ ಬಲಿಯು ತನ್ನದೆಲ್ಲವನ್ನೂ ಕಳೆದುಕೊಂಡಿದ್ದಾನೆ. ಇವನದ್ದು ಈಗ

ಯಾವುದೂ ಇಲ್ಲ. ವಾರುಣಪಾಶದಿಂದ ಇವನನ್ನು ಬಿಡುಗಡೆಗೊಳಿಸು. ಇವನು ನಿನ್ನ ಭಕ್ತ. ನಿನ್ನ ಭಕ್ತರನ್ನು ನಿಗ್ರಹಿಸುವುದು ನಿನಗೆ ಉಚಿತವಲ್ಲ.

ಈ ಬಲಿಯು ಸಮಗ್ರವಾದ ಭೂಮಿಯನ್ನು ನಿನಗೆ ದಾನ ಮಾಡಿದ್ದಾನೆ. ತನ್ನ ಕರ್ಮದಿಂದ ಸಂಪಾದಿಸಿದ ಎಲ್ಲ ಲೋಕಗಳನ್ನೂ ನಿನಗೆ ದಾನ ಮಾಡಿದ್ದಾನೆ. ದೇಹ ಮುಂತಾದ ಎಲ್ಲವನ್ನೂ ನಿನಗೊಪ್ಪಿಸಿದ್ದಾನೆ.

ಕಪಟವಿಲ್ಲದ ಬುದ್ಧಿಯಿಂದ ನಿನಗೆ ಪಾದ್ಯ ನೀಡಿದರೂ ಸಾಕು. ಅರ್ಘ್ಯ ನೀಡಿದರೂ ಸಾಕು. ದೂರ್ವಾಂಕುರಗಳಿಂದ ನಿನ್ನನ್ನು ಅರ್ಚಿಸಿದರೂ ಸಾಕು. ಅವನು ಉತ್ತಮವಾದ ಗತಿಯನ್ನು ಪಡೆಯುತ್ತಾನೆ. ಆದರೆ ಈ ಬಲಿಯು ಸಮಗ್ರ ಐಶ್ವರ್ಯವನ್ನು ನಿನಗೆ ಸಮರ್ಪಿಸಿದ್ದಾನೆ. ಆದ್ದರಿಂದ ಇವನನ್ನು ನಿಗ್ರಹಿಸುವುದು ಯೋಗ್ಯವಲ್ಲ. ಇವನನ್ನು ಅನುಗ್ರಹಿಸು.

ಚತುರ್ಮುಖನ ಮಾತುಗಳನ್ನು ಆಲಿಸಿದ ಭಗವಂತ. ನಾನು ಯಾರನ್ನು ಅನುಗ್ರಹಿಸಲು ಬಯಸುತ್ತೇನೆಯೋ ಅವನ ಸಂಪತ್ತನ್ನು ಅಪಹರಿಸುತ್ತೇನೆ. ಸಂಪತ್ತು ಮನುಷ್ಯನಲ್ಲಿ ಮದವನ್ನು ತುಂಬುತ್ತದೆ. ಮತ್ತನಾದವನು ಮದ್ಭಕ್ತನಾಗಲಾರ. ಶ್ರೀಮಂತನು ಭಕ್ತರನ್ನು ನಿಂದಿಸುತ್ತಾನೆ. ನನ್ನ ಅವಮಾನ ಮಾಡುತ್ತಾನೆ. ಆದ್ದರಿಂದ ಮದಕ್ಕೆ ಕಾರಣವಾದ ಹಣವನ್ನು ಅಪಹರಿಸುತ್ತೇನೆ. ನನ್ನಲ್ಲಿ ಅವರಿಗೆ ಭಕ್ತಿಯನ್ನು ನೀಡುತ್ತೇನೆ.

ಮನುಷ್ಯಜನ್ಮ ದುರ್ಲಭವಾಗಿದೆ. ಅದು ಬಂದಾಗ ಮದ ಬಂದರೆ ಮನುಷ್ಯ ನಷ್ಟನಾಗುತ್ತಾನೆ. ಆದ್ದರಿಂದ ಬಲಿಯ ಮೇಲೆ ದಯೆ ಮಾಡಲೆಂದೇ ಮದಕ್ಕೆ ಕಾರಣವಾದ ಅವನ ಸಂಪತ್ತನ್ನು ಅಪಹರಿಸಿದ್ದೇನೆ.

ಜೀವ ಅಸ್ವತಂತ್ರ . ಅನಾದ್ಯನಂತಕಾಲದಲ್ಲಿಯೂ ಭಗವಂತನಿಂದ ಅತ್ಯಂತ ಭಿನ್ನ. ತಾನು ಮಾಡಿದ ಪೂರ್ವಕರ್ಮಗಳಿಂದ ಬದ್ಧನಾಗುತ್ತಾನೆ. ಆ ಕರ್ಮಗಳಿಗೆ ಉಚಿತವಾದ ನಾನಾಯೋನಿಗಳಲ್ಲಿ ಸಂಚರಿಸುತ್ತಾನೆ. ಕದಾಚಿತ್ ಆ ಜೀವನು ಮನುಷ್ಯನಾಗಿ ಜನಿಸುತ್ತಾನೆ. ಆ ಜನನವೂ ನನ್ನ ಇಚ್ಛೆಯಿಂದಲೇ ಸಂಭವಿಸುತ್ತದೆ.

ಈ ಮನುಷ್ಯಯೋನಿ ಅತ್ಯಂತ ಅಪರೂಪಕ್ಕೆ ಬರುತ್ತದೆ. ಹೀಗೆ ಮನುಷ್ಯನಾದಾಗ ಮನುಷ್ಯ ಸೊಕ್ಕಿಗೆ ತುತ್ತಾಗುತ್ತಾನೆ. ಸತ್ಕುಲಪ್ರಸೂತಿ, ವರ್ಣಾಶ್ರಮೋಚಿತಕರ್ಮಾಚರಣ, ಯೌವನ-ರೂಪ-ಸೌಂದರ್ಯ-ವಿದ್ಯಾ-ಐಶ್ವರ್ಯ-ಅಧಿಕಾರ-ಸತ್ಸಂತತಿ ಮುಂತಾದ ಸಂಪತ್ತುಗಳಿಂದ ಮತ್ತನಾಗುತ್ತಾನೆ. ಮದಾಂಧನಾಗುತ್ತಾನೆ. ನನ್ನನ್ನು ನನ್ನ ಭಕ್ತರನ್ನು ಅಗೌರವಿಸುತ್ತಾನೆ. ಇಷ್ಟೆಲ್ಲ ಸಂಪತ್ತಿನಿಂದ ಯುಕ್ತರಾಗಿದ್ದರೂ ನನ್ನ ಪ್ರಸಾದವನ್ನು ಪಡೆದವರು ಮಾತ್ರ ಎಂದಿಗೂ ಮದೋನ್ಮತ್ತರಾಗುವುದಿಲ್ಲ.

ಈ ಬಲಿಯು ನನ್ನ ಭಕ್ತನೇ ಆಗಿದ್ದಾನೆ. ಇಷ್ಟೆಲ್ಲ ಕಷ್ಟಕ್ಕೆ ಒಳಗಾದರೂ ಬಲಿಯು ನನ್ನನ್ನು ಸ್ತುತಿಸುತ್ತಿದ್ದಾನೆ. ನನ್ನಲ್ಲಿ ಗೌರವಯುಕ್ತನೇ ಆಗಿದ್ದಾನೆ. ಹೀಗಾಗಿ ನನ್ನ ಅನುಗ್ರಹಕ್ಕೆ ಪಾತ್ರನಾಗಿದ್ದಾನೆ.

ದೇವತೆಗಳೆಲ್ಲರೂ ಬಲಿಯನ್ನು ಹೀಯಾಳಿಸಿದರು. ಗರುಡನು ವಾರುಣಪಾಶದಿಂದ ಬಂಧನ ಮಾಡಿದ. ಕ್ಷಣದಲ್ಲಿಯೇ ಸ್ವರ್ಗಭ್ರಷ್ಟನಾದ. ಯಾತನೆಯನ್ನು ಅನುಭವಿಸಿದ. ಗುರುಗಳಿಂದ ಶಪ್ತನಾದ. ಆದರೂ ಧರ್ಮವನ್ನು ಬಿಡಲಿಲ್ಲ. ಸನ್ಮಾರ್ಗವನ್ನು ಕಡೆಗಾಣಿಸಲಿಲ್ಲ. ಸತ್ಯವ್ರತನಾದ ಈ ಬಲಿಯು ತನ್ನ ಪ್ರತಿಜ್ಞೆಯನ್ನು ಪೂರ್ಣಗೊಳಿಸಿದ. ಹೀಗಾಗಿ ಈ ಬಲಿಯು ಉತ್ತಮಭಕ್ತನಾಗಿದ್ದಾನೆ.

ತಾನು ಹೇಳಿದಂತೆಯೇ ನಡೆದುಕೊಂಡ ಈ ಬಲಿಯು ಈಗ ಇಂದ್ರಪದವಿಗೆ ಅನರ್ಹನಾಗಿದ್ದಾನೆ. ಆದರೆ ಮುಂದಿನ ಸಾವರ್ಣಿಮನ್ವಂತರದಲ್ಲಿ ಈ ಬಲಿಗೆ ಇಂದ್ರಪದವಿಯನ್ನು ನಾನು ನೀಡುತ್ತೇನೆ.

ಅಲ್ಲಿಯ ವರೆಗೆ ವಿಶ್ವಕರ್ಮನಿರ್ಮಿತವಾದ ಸುತಲಲೋಕದ ಚಕ್ರವರ್ತಿಯಾಗಿರಲಿ. ಈ ಸುತಲ ಸಾಮಾನ್ಯವಾದ ಲೋಕವಲ್ಲ. ಇಂದ್ರಾದಿಗಳಿಂದಲೂ ಅಪೇಕ್ಷಿತವಾದ ಲೋಕ. ಅಲ್ಲಿ ವಾಸ ಮಾಡುವವರಿಗೆ ಜರಾ-ಮರಣಗಳ, ಆಧಿವ್ಯಾಧಿಗಳ ಜಂಜಾಟವಿರುವುದಿಲ್ಲ. ಈ ಬಲಿಯು ತನ್ನ ಬಂಧು-ಬಳಗ ಪರಿವಾರದಿಂದ ಸಮೇತನಾಗಿ ಸುತಲಕ್ಕೆ ಅಧಿಪತಿಯಾಗಿ ಇರಲಿ. ಹೇ ಬಲೀ! ಆ ಸುತಲಕ್ಕೆ ನೀನು ಹೋಗು. ಬಂಧುಗಳಿಂದ ಸುಖವಾಗಿ ವಾಸ ಮಾಡು.

ನಿನ್ನನ್ನು ಸಂರಕ್ಷಿಸುತ್ತಾ ನನ್ನ ಚಕ್ರವು ಅಲ್ಲಿಯೇ ಇರುತ್ತದೆ. ಅಲ್ಲದೇ ನಾನು ಸ್ವಯಂ ಗದಾಧಾರಿಯಾಗಿ ನಿನ್ನ ಲೋಕವನ್ನು ಸಂರಕ್ಷಿಸುತ್ತಾ ಇರುತ್ತೇನೆ. ಆ ನನ್ನ ರೂಪವನ್ನು ಪ್ರತ್ಯಕ್ಷವಾಗಿ ಕಾಣುತ್ತಾ ಸಂತುಷ್ಟಾಂತರಂಗನಾಗಿ ಇಲ್ಲಿ ಇರುತ್ತಿ . ದುಷ್ಟರಾದ ದಾನವರ ಮತ್ತು ದೈತ್ಯರ ಸಂಗದಿಂದ ಬರಬಹುದಾದ ಆಸುರಸ್ವಭಾವವು ನನ್ನ ದರ್ಶನದಿಂದಲೇ ನಷ್ಟವಾಗಿ ಹೋಗುತ್ತದೆ.

**॥ ಇತಿ ಶ್ರೀಮದ್ಭಾಗವತೇ ಅಷ್ಟಮಸ್ಕಂಧೇ ವಿಂಶಃ ಅಧ್ಯಾಯಃ ॥**

★★★

ಯಾವುದೂ ಇಲ್ಲ. ವಾರುಣಪಾಶದಿಂದ ಇವನನ್ನು ಬಿಡುಗಡೆಗೊಳಿಸು. ಇವನು ನಿನ್ನ ಭಕ್ತ. ನಿನ್ನ ಭಕ್ತರನ್ನು ನಿಗ್ರಹಿಸುವುದು ನಿನಗೆ ಉಚಿತವಲ್ಲ.

ಈ ಬಲಿಯು ಸಮಗ್ರವಾದ ಭೂಮಿಯನ್ನು ನಿನಗೆ ದಾನ ಮಾಡಿದ್ದಾನೆ. ತನ್ನ ಕರ್ಮದಿಂದ ಸಂಪಾದಿಸಿದ ಎಲ್ಲ ಲೋಕಗಳನ್ನೂ ನಿನಗೆ ದಾನ ಮಾಡಿದ್ದಾನೆ. ದೇಹ ಮುಂತಾದ ಎಲ್ಲವನ್ನೂ ನಿನಗೊಪ್ಪಿಸಿದ್ದಾನೆ.

ಕಪಟವಿಲ್ಲದ ಬುದ್ಧಿಯಿಂದ ನಿನಗೆ ಪಾದ್ಯ ನೀಡಿದರೂ ಸಾಕು. ಅರ್ಘ್ಯ ನೀಡಿದರೂ ಸಾಕು. ದೂರ್ವಾಂಕುರಗಳಿಂದ ನಿನ್ನನ್ನು ಅರ್ಚಿಸಿದರೂ ಸಾಕು. ಅವನು ಉತ್ತಮವಾದ ಗತಿಯನ್ನು ಪಡೆಯುತ್ತಾನೆ. ಆದರೆ ಈ ಬಲಿಯು ಸಮಗ್ರ ಐಶ್ವರ್ಯವನ್ನು ನಿನಗೆ ಸಮರ್ಪಿಸಿದ್ದಾನೆ. ಆದ್ದರಿಂದ ಇವನನ್ನು ನಿಗ್ರಹಿಸುವುದು ಯೋಗ್ಯವಲ್ಲ. ಇವನನ್ನು ಅನುಗ್ರಹಿಸು.

ಚತುರ್ಮುಖನ ಮಾತುಗಳನ್ನು ಆಲಿಸಿದ ಭಗವಂತ. ನಾನು ಯಾರನ್ನು ಅನುಗ್ರಹಿಸಲು ಬಯಸುತ್ತೇನೆಯೋ ಅವನ ಸಂಪತ್ತನ್ನು ಅಪಹರಿಸುತ್ತೇನೆ. ಸಂಪತ್ತು ಮನುಷ್ಯನಲ್ಲಿ ಮದವನ್ನು ತುಂಬುತ್ತದೆ. ಮತ್ತನಾದವನು ಮದ್ಭಕ್ತನಾಗಲಾರ. ಶ್ರೀಮಂತನು ಭಕ್ತರನ್ನು ನಿಂದಿಸುತ್ತಾನೆ. ನನ್ನ ಅವಮಾನ ಮಾಡುತ್ತಾನೆ. ಆದ್ದರಿಂದ ಮದಕ್ಕೆ ಕಾರಣವಾದ ಹಣವನ್ನು ಅಪಹರಿಸುತ್ತೇನೆ. ನನ್ನಲ್ಲಿ ಅವರಿಗೆ ಭಕ್ತಿಯನ್ನು ನೀಡುತ್ತೇನೆ.

ಮನುಷ್ಯಜನ್ಮ ದುರ್ಲಭವಾಗಿದೆ. ಅದು ಬಂದಾಗ ಮದ ಬಂದರೆ ಮನುಷ್ಯ ನಷ್ಟನಾಗುತ್ತಾನೆ. ಆದ್ದರಿಂದ ಬಲಿಯ ಮೇಲೆ ದಯೆ ಮಾಡಲೆಂದೇ ಮದಕ್ಕೆ ಕಾರಣವಾದ ಅವನ ಸಂಪತ್ತನ್ನು ಅಪಹರಿಸಿದ್ದೇನೆ.

ಜೀವ ಅಸ್ವತಂತ್ರ . ಅನಾದ್ಯನಂತಕಾಲದಲ್ಲಿಯೂ ಭಗವಂತನಿಂದ ಅತ್ಯಂತ ಭಿನ್ನ. ತಾನು ಮಾಡಿದ ಪೂರ್ವಕರ್ಮಗಳಿಂದ ಬದ್ಧನಾಗುತ್ತಾನೆ. ಆ ಕರ್ಮಗಳಿಗೆ ಉಚಿತವಾದ ನಾನಾಯೋನಿಗಳಲ್ಲಿ ಸಂಚರಿಸುತ್ತಾನೆ. ಕದಾಚಿತ್ ಆ ಜೀವನು ಮನುಷ್ಯನಾಗಿ ಜನಿಸುತ್ತಾನೆ. ಆ ಜನನವೂ ನನ್ನ ಇಚ್ಛೆಯಿಂದಲೇ ಸಂಭವಿಸುತ್ತದೆ.

ಈ ಮನುಷ್ಯಯೋನಿ ಅತ್ಯಂತ ಅಪರೂಪಕ್ಕೆ ಬರುತ್ತದೆ. ಹೀಗೆ ಮನುಷ್ಯನಾದಾಗ ಮನುಷ್ಯ ಸೊಕ್ಕಿಗೆ ತುತ್ತಾಗುತ್ತಾನೆ. ಸತ್ಕುಲಪ್ರಸೂತಿ, ವರ್ಣಾಶ್ರಮೋಚಿತಕರ್ಮಾಚರಣ, ಯೌವನ-ರೂಪ-ಸೌಂದರ್ಯ-ವಿದ್ಯಾ-ಐಶ್ವರ್ಯ-ಅಧಿಕಾರ-ಸತ್ಸಂತತಿ ಮುಂತಾದ ಸಂಪತ್ತುಗಳಿಂದ ಮತ್ತನಾಗುತ್ತಾನೆ. ಮದಾಂಧನಾಗುತ್ತಾನೆ. ನನ್ನನ್ನು ನನ್ನ ಭಕ್ತರನ್ನು ಅಗೌರವಿಸುತ್ತಾನೆ. ಇಷ್ಟೆಲ್ಲ ಸಂಪತ್ತಿನಿಂದ ಯುಕ್ತರಾಗಿದ್ದರೂ ನನ್ನ ಪ್ರಸಾದವನ್ನು ಪಡೆದವರು ಮಾತ್ರ ಎಂದಿಗೂ ಮದೋನ್ಮತ್ತರಾಗುವುದಿಲ್ಲ.

ಈ ಬಲಿಯು ನನ್ನ ಭಕ್ತನೇ ಆಗಿದ್ದಾನೆ. ಇಷ್ಟೆಲ್ಲ ಕಷ್ಟಕ್ಕೆ ಒಳಗಾದರೂ ಬಲಿಯು ನನ್ನನ್ನು ಸ್ತುತಿಸುತ್ತಿದ್ದಾನೆ. ನನ್ನಲ್ಲಿ ಗೌರವಯುಕ್ತನೇ ಆಗಿದ್ದಾನೆ. ಹೀಗಾಗಿ ನನ್ನ ಅನುಗ್ರಹಕ್ಕೆ ಪಾತ್ರನಾಗಿದ್ದಾನೆ.

ದೇವತೆಗಳೆಲ್ಲರೂ ಬಲಿಯನ್ನು ಹೀಯಾಳಿಸಿದರು. ಗರುಡನು ವಾರುಣಪಾಶದಿಂದ ಬಂಧನ ಮಾಡಿದ. ಕ್ಷಣದಲ್ಲಿಯೇ ಸ್ವರ್ಗಭ್ರಷ್ಟನಾದ. ಯಾತನೆಯನ್ನು ಅನುಭವಿಸಿದ. ಗುರುಗಳಿಂದ ಶಪ್ತನಾದ. ಆದರೂ ಧರ್ಮವನ್ನು ಬಿಡಲಿಲ್ಲ. ಸನ್ಮಾರ್ಗವನ್ನು ಕಡೆಗಾಣಿಸಲಿಲ್ಲ. ಸತ್ಯವ್ರತನಾದ ಈ ಬಲಿಯು ತನ್ನ ಪ್ರತಿಜ್ಞೆಯನ್ನು ಪೂರ್ಣಗೊಳಿಸಿದ. ಹೀಗಾಗಿ ಈ ಬಲಿಯು ಉತ್ತಮಭಕ್ತನಾಗಿದ್ದಾನೆ.

ತಾನು ಹೇಳಿದಂತೆಯೇ ನಡೆದುಕೊಂಡ ಈ ಬಲಿಯು ಈಗ ಇಂದ್ರಪದವಿಗೆ ಅನರ್ಹನಾಗಿದ್ದಾನೆ. ಆದರೆ ಮುಂದಿನ ಸಾವರ್ಣಿಮನ್ವಂತರದಲ್ಲಿ ಈ ಬಲಿಗೆ ಇಂದ್ರಪದವಿಯನ್ನು ನಾನು ನೀಡುತ್ತೇನೆ.

ಅಲ್ಲಿಯ ವರೆಗೆ ವಿಶ್ವಕರ್ಮನಿರ್ಮಿತವಾದ ಸುತಲಲೋಕದ ಚಕ್ರವರ್ತಿಯಾಗಿರಲಿ. ಈ ಸುತಲ ಸಾಮಾನ್ಯವಾದ ಲೋಕವಲ್ಲ. ಇಂದ್ರಾದಿಗಳಿಂದಲೂ ಅಪೇಕ್ಷಿತವಾದ ಲೋಕ. ಅಲ್ಲಿ ವಾಸ ಮಾಡುವವರಿಗೆ ಜರಾ-ಮರಣಗಳ, ಆಧಿವ್ಯಾಧಿಗಳ ಜಂಜಾಟವಿರುವುದಿಲ್ಲ. ಈ ಬಲಿಯು ತನ್ನ ಬಂಧು-ಬಳಗ ಪರಿವಾರದಿಂದ ಸಮೇತನಾಗಿ ಸುತಲಕ್ಕೆ ಅಧಿಪತಿಯಾಗಿ ಇರಲಿ. ಹೇ ಬಲೀ! ಆ ಸುತಲಕ್ಕೆ ನೀನು ಹೋಗು. ಬಂಧುಗಳಿಂದ ಸುಖವಾಗಿ ವಾಸ ಮಾಡು.

ನಿನ್ನನ್ನು ಸಂರಕ್ಷಿಸುತ್ತಾ ನನ್ನ ಚಕ್ರವು ಅಲ್ಲಿಯೇ ಇರುತ್ತದೆ. ಅಲ್ಲದೇ ನಾನು ಸ್ವಯಂ ಗದಾಧಾರಿಯಾಗಿ ನಿನ್ನ ಲೋಕವನ್ನು ಸಂರಕ್ಷಿಸುತ್ತಾ ಇರುತ್ತೇನೆ. ಆ ನನ್ನ ರೂಪವನ್ನು ಪ್ರತ್ಯಕ್ಷವಾಗಿ ಕಾಣುತ್ತಾ ಸಂತುಷ್ಟಾಂತರಂಗನಾಗಿ ಇಲ್ಲಿ ಇರುತ್ತಿ . ದುಷ್ಟರಾದ ದಾನವರ ಮತ್ತು ದೈತ್ಯರ ಸಂಗದಿಂದ ಬರಬಹುದಾದ ಆಸುರಸ್ವಭಾವವು ನನ್ನ ದರ್ಶನದಿಂದಲೇ ನಷ್ಟವಾಗಿ ಹೋಗುತ್ತದೆ.

**॥ ಇತಿ ಶ್ರೀಮದ್ಭಾಗವತೇ ಅಷ್ಟಮಸ್ಕಂಧೇ ವಿಂಶಃ ಅಧ್ಯಾಯಃ ॥**

★★★

# ಅಥ ಏಕವಿಂಶೋऽಧ್ಯಾಯಃ

ಬಲಿಯು ಅಸುರನಾಗಿ ಜನಿಸಿದ್ದರೂ ಭಗವಂತನ ಭಕ್ತನಾಗಿದ್ದ. ಬಂದ ಕಷ್ಟಗಳನ್ನೆಲ್ಲ ಸಹಿಸಿಕೊಳ್ಳುವ ಸಾಮರ್ಥನಾಗಿದ್ದ. ಸಜ್ಜನರೆಲ್ಲರಿಗೆ ಪ್ರಿಯನಾಗಿದ್ದ. ಅಂಥ ಬಲಿಯು ಕೈಕಟ್ಟಿ ನಿಂತಿದ್ದಾನೆ. ಭಗವಂತನ ಅನುಗ್ರಹವಚನವನ್ನು ಆಲಿಸಿ ಭಕ್ತ್ಯುದ್ರಿಕ್ತನಾಗಿದ್ದಾನೆ. ಆತನ ಕಂಗಳು ಬಾಷ್ಪಗಳಿಂದ ಭರಿತವಾಗಿದೆ. ಹೀಗಾಗಿ ಬಲಿಯ ನೋಟ ಅಸ್ಪಷ್ಟವಾಗಿದೆ. ಕಂಠವು ಗದ್ಗದಿತವಾಗಿದೆ. ಸ್ಪಷ್ಟವಾಗಿ ಮಾತನಾಡಲು ಸಮರ್ಥನಾಗುತ್ತಿಲ್ಲ. ಅನುಗ್ರಹ ಪೂರ್ವಕವಾಗಿ ಮಾತನಾಡಿದ ವಾಮನನನ್ನು ಕಂಡ. ಆ ವಾಮನ ಸಾಮಾನ್ಯ ಮಾನವ ಎಂಬ ಭ್ರಾಂತಿಯನ್ನು ಬಿಟ್ಟ. ಅಲೌಕಿಕನಾದ, ಪುರಾತನನಾದ ವಿಷ್ಣು ಎಂದು ಭಾವಿಸಿದ. ವಾಮನನನ್ನು ಕುರಿತು ಇನಿತು ವಿಜ್ಞಾಪಿಸಿಕೊಂಡ.

ಹೇ ಭಗವನ್! ನೀನು ಈ ಆಗಸದಲ್ಲಿ ಮಾತ್ರ ತ್ರಿವಿಕ್ರಮನಾಗಿ ಬೆಳೆದು ನಿಂತಿಲ್ಲ. ನನ್ನ ಮಾನಸಾಕಾಶದಲ್ಲಿಯೂ ಹೀಗೆಯೇ ತ್ರಿವಿಕ್ರಮನಾಗಿ ವ್ಯಾಪ್ತನಾಗಿ ನಿಂತಿರುವಿ. ನೀನು ನನ್ನಂಥವನ ಮೇಲೆ ಮಾಡಿದ ಅನುಗ್ರಹವನ್ನು ನೆನೆಯುತ್ತಿದ್ದರೆ ನನಗೆ ಆಶ್ಚರ್ಯವಾಗುತ್ತಿದೆ. ನಿನಗೆ ಶರಣಾದ ಎಲ್ಲ ಭಕ್ತರ ಅಭೀಷ್ಟಗಳನ್ನು ಪೂರೈಸುವಲ್ಲಿ ಈ ಅನುಗ್ರಹವು ಸಮರ್ಥವಾಗಿದೆ. ಈ ಅನುಗ್ರಹ ಎಲ್ಲರಿಗೂ ದೊರೆಯುವುದಿಲ್ಲ. ಅಸುರಯೋನಿಯಲ್ಲಿ ಜನಿಸಿದ, ಅಸುರನಂತೆಯೇ ವರ್ತಿಸಿದ ನನ್ನಲ್ಲಿ ತೋರಿದ ಈ ಅನುಗ್ರಹವನ್ನು ನೆನೆಯುತ್ತ ಅತ್ಯಾಶ್ಚರ್ಯವಾಗುತ್ತಿದೆ.

ಬ್ರಹ್ಮದೇವರ ಪ್ರಾರ್ಥನೆಯಂತೆ ಭಗವಂತ ಬಲಿಯನ್ನು ಬಿಡುಗಡೆಗೊಳಿಸಿದ. ಅದನ್ನು ಕಂಡು ಬಲಿಯು ಸಂತುಷ್ಟನಾದ. ಭಗವಂತನನ್ನು ನಮಸ್ಕರಿಸಿದ. ನಂತರ ಬ್ರಹ್ಮದೇವರನ್ನು ನಮಸ್ಕರಿಸಿದ. ಅಸುರರಾದ ತನ್ನ ಅನುಯಾಯಿಗಳೊಂದಿಗೆ ಸುತಲವನ್ನು ಪ್ರವೇಶಿಸಿಸಲು ಸಿದ್ಧನಾದ.

ಭಗವಂತ ಹೀಗೆ ಬಲಿಯನ್ನು ನಿಗ್ರಹಿಸಿದ. ಭಗವಂತ ಭಕ್ತರಲ್ಲಿ ಮಾಡಿದ ನಿಗ್ರಹವೂ ಅನುಗ್ರಹ ಹೇಗಾಗುತ್ತದೆ ಎಂಬುದಕ್ಕೆ ಬಲಿಯು ದೃಷ್ಟಾಂತನಾದ. ಇಂದ್ರನಿಗೆ ಮತ್ತೆ ತ್ರಿಲೋಕಾಧಿಪತ್ಯವನ್ನು ನೀಡಿದ. ತನ್ನ ತಾಯಿಯಾದ ಅದಿತಿಯ ಅಪೇಕ್ಷೆಯನ್ನು ಪೂರೈಸಿದ. ಹೀಗೆ ಸಮಸ್ತ ಜಗತ್ತನ್ನೇ ಭಗವಂತ ಶಾಸನ ಮಾಡಿದ. ಸಕಲ ಲೋಕಗಳನ್ನು ಸಂರಕ್ಷಿಸಿದ.

ಅಜ್ಜನಾದ ಪ್ರಹ್ಲಾದನಿಗೆ ತುಂಬ ಆನಂದವಾಗಿತ್ತು. ಯದ್ಯಪಿ ಭಗವಂತ ಬಲಿಯನ್ನು ನಿಗ್ರಹಿಸಿದ್ದ. ಆದರೂ ಪರಮಾತ್ಮನ ಪ್ರಸಾದದಿಂದ ಪಾಶನಿರ್ಮುಕ್ತನಾಗಿದ್ದ. ಆದರೂ ಬಲಿಯಲ್ಲಿ ಅತುಲಿತವಾದ ಪ್ರಸಾದವನ್ನು ಮಾಡಿದ. ಭಗವಂತನ ನಿಗ್ರಹಕ್ಕೆ ಪಾತ್ರನಾಗಿದ್ದರೆ ತಮ್ಮ ಕುಲವೆಲ್ಲ ಕೆಡುತ್ತಿತ್ತು. ಆದರೆ ಪರಮಾತ್ಮನ ಪ್ರಸಾದವನ್ನು ಪಡೆದ ಈ ಬಲಿಯು

ನಮ್ಮ ಕುಲವನ್ನು ಉದ್ಧರಿಸಿದ ಎಂಬುದನ್ನು ಗಮನಿಸಿದ ಪ್ರಹ್ಲಾದರಾಜರಿಗೆ ಆನಂದವಾಯಿತು. ತಮ್ಮವರಿಂದ ಕುಲದ ವೃದ್ಧಿಯಾಗುತ್ತಿದೆ ಎಂದು ತಿಳಿದ ಯಾವ ಬಂಧುಗಳಿಗೆ ಸಂತೋಷವಾಗದು? ಆ ಆನಂದವನ್ನು ತನ್ನಲ್ಲಿ ಬಚ್ಚಿಟ್ಟುಕೊಳ್ಳಲು ಪ್ರಹ್ಲಾದರಾಜರಿಗೆ ಸಾಧ್ಯವಾಗಲಿಲ್ಲ. ಭಕ್ತಿನಮ್ರನಾದ. ಬಾಗಿಯೇ ಭಗವಂತನಿಗೆ ಬೇಡಿದ. ಮಾತನಾಡಿದ.

ಬ್ರಹ್ಮಾದಿದೇವತೆಗಳು ಭಗವಂತನ ಪಾದಕಮಲಗಳನ್ನು ಸೇರಿ ಸುಖಿಸುತ್ತಾರೆ. ಆ ಪಾದಗಳನ್ನು ಭಕ್ತಿಯಿಂದ ಭಜಿಸುತ್ತಾರೆ. ಅಂಥ ಪರಮಾತ್ಮ ಅಸುರಯೋನಿಯಲ್ಲಿ ಜನಿಸಿದ ಈ ಜನರನ್ನು ಸಂರಕ್ಷಿಸಲು ಬಾಗಿಲು ಕಾಯಲು ಬಯಸಿದ್ದಾನೆ. ಇದು ಬಲಿಯು ಮಾಡಿದ ದಾನಕ್ಕೆ ತಕ್ಕುದಾದ ಅನುಗ್ರಹವೇ ಆಗಿದೆ. ಬಲಿಯ ಸ್ವಭಾವಕ್ಕೆ ತಕ್ಕುದಾದ ಅನುಗ್ರಹವಾಗಿದೆ. ಇಂಥ ಅನುಗ್ರಹವನ್ನು ಸಾಮಾನ್ಯರು ಪಡೆಯಲು ಸಾಧ್ಯವೇ ಇಲ್ಲ.

ಮೊರೆಹೊಕ್ಕವರನ್ನು ಕಾಯುತ್ತೇನೆ ಎಂಬುದು ನಿನ್ನ ಪ್ರತಿಜ್ಞೆ. ಬ್ರಹ್ಮಾದಿದೇವತೆಗಳು ನಿನ್ನ ಪಾದಕಮಲಗಳನ್ನು ಭಜಿಸಿಯೇ ಸತ್ಯಲೋಕಾಧಿಪತ್ಯ ಮುಂತಾದ ತಮ್ಮ ತಮ್ಮ ಪದವಿಗಳನ್ನು ನಿರಾತಂಕವಾಗಿ ಪಡೆದಿದ್ದಾರೆ. ಆಯಾ ಪದವಿಗಳಲ್ಲಿ ಸುಖವಾಗಿ ಇದ್ದಾರೆ.

ಹೀಗಾಗಿ ನೀನು ಸರ್ವೋತ್ತಮನಾಗಿರುವಿ. ದುಷ್ಟವಾದ ಅಸುರಯೋನಿಯಲ್ಲಿ ಜನಿಸಿದ ನಮ್ಮಂಥವರು ನಿನ್ನ ಕೃಪಾದೃಷ್ಟಿಗೆ ಪಾತ್ರರಾದುದೇ ಆಶ್ಚರ್ಯಕರವಾಗಿದೆ. ನಿನ್ನ ಕಾರುಣ್ಯವನ್ನು ಪಡೆಯಲು ನಾವು ಮಾಡಿದ ಉಪಾಯವೇನೆಂಬುದೇ ನಮಗೆ ತಿಳಿಯದಾಗಿದೆ. ನಮ್ಮಲ್ಲಿ ಲೇಶ ಗುಣವೂ ಇಲ್ಲ. ನಮ್ಮ ಪ್ರಯತ್ನಗಳಿಂದ ಭಗವಂತನ ಅನುಗ್ರಹವನ್ನು ಪಡೆಯಲು ಸಾಧ್ಯವೇ ಇಲ್ಲ. ಇದು ಕೇವಲ ನಿನ್ನ ಕರುಣೆಯೇ ಆಗಿದೆ.

ಶ್ರುತಿಯೇ ಹೇಳಿದೆಯಲ್ಲ. ಯಾರನ್ನು ನೀನು ಭಕ್ತನೆಂದು ಸ್ವೀಕರಿಸುವೆಯೋ ಅಂಥವನಿಗೆ ಮಾತ್ರ ನಿನ್ನ ಕರುಣೆಯು ಲಭ್ಯವಾಗುತ್ತದೆ.

(ಭಗವಂತ ಛಲದಿಂದ ಬಲಿಯನ್ನು ನಿಗ್ರಹಿಸಿದ್ದಾನೆ ಎಂದು ನೋಡುಗರಿಗೆ ತೋರುತ್ತದೆ. ಛಲದಿಂದ ನಿಗ್ರಹಿಸಿದ ವಾಮನನನ್ನು ಯಾಕೆ ಇವರು ಸ್ತುತಿಸುತ್ತಿದ್ದಾರೆ. ಎಂದೆನಿಸುತ್ತದೆ. ಆದರೆ ಸ್ತುತಿಸುತ್ತಿರುವ ಬಲಿ-ಪ್ರಹ್ಲಾದರಿಗೆ ಗೊತ್ತು. ಛಲ ಮಾಡಿದವರು ಯಾರೆಂದು. ಖಳತನ ತೋರಿದವರು ಯಾರೆಂದು ಅವರಿಗೆ ಚೆನ್ನಾಗಿ ಗೊತ್ತು. ಭಗವಂತನ ಯಾವ ಅವತಾರಗಳೂ ಛಲಯುಕ್ತವಲ್ಲ. ಸ್ವಯಂ ಖಲರಾದವರಿಗೆ ಭಗವಂತನ ವ್ಯಾಪಾರಗಳು ಛಲವೆಂದು ತೋರುತ್ತವೆ. ಎಂಬುದು ಅವರಿಗೆ ಗೊತ್ತು. ನಮ್ಮಲ್ಲಿಯ ದುರಿತದಿಂದಲೇ ಭಗವಂತ ಹೀಗೆ ನಡೆದುಕೊಳ್ಳುತ್ತಾನೆ. ನಮ್ಮ ದುರಿತಗಳನ್ನು ದೂರಮಾಡುತ್ತಾನೆ. ನಮ್ಮನ್ನು ಉದ್ಧರಿಸುತ್ತಾನೆ ಎಂಬುದೂ ಗೊತ್ತು. ಆದ್ದರಿಂದಲೇ ಅವರು ವಾಮನನನ್ನು ಸ್ತುತಿಸಿದರು.)

ಭಗವಂತನನ್ನು ಪರಿಪೂರ್ಣವಾಗಿ ತಿಳಿಯಲು ಯಾರಿಂದಲೂ ಆಗುವುದಿಲ್ಲ. ಹೀಗಾಗಿ ಭಗವಂತ ಅಮಿತನಾಗಿದ್ದಾನೆ. ತನ್ನ ಸಾಮರ್ಥ್ಯದಿಂದ ಈ ಸಮಸ್ತ ಪ್ರಪಂಚವನ್ನು ಚಿತ್ರವಿಚಿತ್ರವಾಗಿ ಸೃಜಿಸುತ್ತಾನೆ. ಅವರವರ ಕರ್ಮಾನುಸಾರ ಸರ್ವರನ್ನೂ ಯೋಗ್ಯವಾದ ಕರ್ಮದಲ್ಲಿ ಪ್ರೇರಿಸುವ ವಿಶಾರದನಾಗಿದ್ದಾನೆ ಪರಮಾತ್ಮ. ಆಯಾ ಕಾರ್ಯಗಳನ್ನು ಮಾಡಿಸಲು ಸರ್ವರ ಅಂತರ್ಯಾಮಿಯಾಗಿದ್ದಾನೆ. ಅವರವರ ಯೋಗ್ಯತಾನುಸಾರ ಅವರವರನ್ನು ಅನುಗ್ರಹಿಸುತ್ತಾನೆ. ಪರಮಾತ್ಮನ ಈ ವ್ಯಾಪಾರ ಅತ್ಯಂತ ಆಶ್ಚರ್ಯಕರವಾಗಿದೆ.

ಹೀಗೆ ಪ್ರಹ್ಲಾದ ಪರಮಾತ್ಮನನ್ನು ಸ್ತುತಿಸಿದ. ಆ ಸ್ತುತಿಯನ್ನು ಆಲಿಸಿದ ಪರಮಾತ್ಮ ಸಂತುಷ್ಟನಾದ. ವಾತ್ಸಲ್ಯದಿಂದ ಮಾರ್ನುಡಿದ.

ಮಗೂ ಪ್ರಹ್ಲಾದ! ನಿನಗೆ ಮಂಗಳವಾಗಲಿ. ಸುತಲಲೋಕಕ್ಕೆ ನೀನು ಕೂಡಾ ಹೋಗು. ಅಲ್ಲಿ ನಿನ್ನ ಮೊಮ್ಮಗನಾದ, ನನ್ನ ಭಕ್ತನಾದ ಈ ಬಲಿಯೊಂದಿಗೆ ಸುಖವಾಗಿ ವಾಸಮಾಡು. ನಿನ್ನ ಬಂಧುಗಳನ್ನು ಸಂತೋಷಪಡಿಸು.

ನಿಮ್ಮನ್ನು ಸಂತೋಷಪಡಿಸಲು ನಾನು ಗದಾಪಾಣಿಯಾಗಿ ಅಲ್ಲಿ ಸನ್ನಿಹಿತನಾಗಿರುತ್ತೇನೆ. ನಿಮಗೆಲ್ಲರಿಗೂ ಪ್ರತ್ಯಕ್ಷವಾಗಿಯೇ ಇರುತ್ತೇನೆ. ನನ್ನ ದರ್ಶನದಿಂದ ಅತಿಶಯವಾದ ಆನಂದವು ನಿನಗೆ ಉಂಟಾಗುತ್ತದೆ. ಆ ದರ್ಶನದ ಪ್ರಭಾವದಿಂದ ದುಷ್ಕರ್ಮಗಳಿಂದ ದೂರನಾಗುವಿ. ಬಂಧನದಿಂದ ಮುಕ್ತನಾಗುವಿ. ದುಃಖಗಳನ್ನೆಲ್ಲ ನೀಗಿ ಸುಖವನ್ನು ಅನುಭವಿಸುವಿ.

ಪ್ರಹ್ಲಾದನು ಭಗವಂತನ ಆಜ್ಞೆಗೆ ಬದ್ಧನಾದ. ಶಿರಸಾ ಆ ಆಜ್ಞೆಯನ್ನು ಧರಿಸಿದ. ವಾಮನರೂಪಿಯಾದ ಪರಮಾತ್ಮನಿಗೆ ಪ್ರದಕ್ಷಿಣೆ ಹಾಕಿದ. ನಮಸ್ಕಾರ ಮಾಡಿದ. ಬಲಿಯೊಡನೆ ಸುತಲವನ್ನು ಪ್ರವೇಶ ಮಾಡಿದ.

ಬಲಿಯೊಂದಿಗೆ ಸುತಲಬಿಲವನ್ನು ಪ್ರಹ್ಲಾದನು ಪ್ರವೇಶಮಾಡಿದ ನಂತರ ಭಗವಂತ ಶುಕ್ರಾಚಾರ್ಯರತ್ತ ಮುಖ ಮಾಡಿದ. ಅವರೊಂದಿಗೆ ಮಾತನಾಡಿದ.

ಶುಕ್ರಾಚಾರ್ಯರೇ! ನೀವು ಬ್ರಹ್ಮಜ್ಞಾನಿಗಳು. ನಿಮ್ಮ ಶಿಷ್ಯ ಮಾಡುತ್ತಿರುವ ಈ ಯಜ್ಞವು ಲೋಪವಾಗದಂತೆ ನೋಡಿಕೊಳ್ಳಿ. ಪ್ರಾಯಶ್ಚಿತ್ತಹೋಮದಿಂದ ಈ ಕರ್ಮವನ್ನು ಪೂರ್ಣಗೊಳಿಸಿರಿ. ಬ್ರಾಹ್ಮಣರ ದರ್ಶನದಿಂದ ಕರ್ಮಗಳಲ್ಲಿಯ ಲೋಪವೆಲ್ಲ ನಷ್ಟವಾಗುತ್ತದೆ. ಕರ್ಮವು ಸಾಂಗವಾಗುತ್ತದೆ. ಸಮಗ್ರವಾಗುತ್ತದೆ. ಸಮಗ್ರವಾದ ಫಲವನ್ನು ನೀಡಲು ಸಮರ್ಥವಾಗುತ್ತದೆ.

ಬ್ರಾಹ್ಮಣರ ದರ್ಶನದಿಂದಲೇ ಕರ್ಮವು ಪೂರ್ಣವಾಗುತ್ತದೆಂದ ಮೇಲೆ ಆ ಬ್ರಾಹ್ಮಣರು ಪ್ರಾಯಶ್ಚಿತ್ತವನ್ನು ಅನುಷ್ಠಾನ ಮಾಡಿದರೆ ಪೂರ್ಣಫಲಪ್ರದ ಎಂಬುದು

ಕೈಮುತ್ಯಸಿದ್ಧ. ಆದ್ದರಿಂದ ನಿಮ್ಮ ಶಿಷ್ಯನ ಕರ್ಮವೈಷಮ್ಯವನ್ನು ಸರಿಪಡಿಸಿರಿ ಎಂದು ಭಗವಂತ ಹೇಳಿದ.

ಭಗವಂತನಿಗೆ ಶುಕ್ರಾಚಾರ್ಯರು ಹೇಳಿದರು. ಭಗವನ್! ನೀನೇ ಯಜ್ಞಪುರುಷ. ಯಜ್ಞನಾಮಕನು ನೀನೇ. ಕರ್ಮಗಳಿಗೆಲ್ಲ ಒಡೆಯ ನೀನೇ. ಸಕಲಕರ್ಮಗಳಿಗೆ ಫಲಪ್ರದಾತೃವೂ ನೀನೇ. ಸರ್ವಸಮರ್ಪಣದಿಂದ, ಆತ್ಮಾರ್ಪಣ ಮಾಡುವ ಮೂಲಕ ಬಲಿಯು ನಿನ್ನನ್ನು ಸೇವಿಸಿದ್ದಾನೆ. ಇಂಥ ಬಲಿಯು ಮಾಡಿದ ಕರ್ಮದಲ್ಲಿ ವೈಷಮ್ಯವೆಲ್ಲಿಯದು? ಬಲಿಯು ಮಾಡಿದ ಈ ಕರ್ಮ ಅಸಮಗ್ರ ಹೇಗಾಗುವುದು? ಯಾವಾತನ ಪ್ರೇರಣಯಾ, ಯಾವಾತನ ಪ್ರೀತ್ಯರ್ಥಂ ಕರ್ಮಗಳನ್ನು ಮಾಡುತ್ತೇವೆಯೋ ಅಂಥ ಪರಮಾತ್ಮನೇ ಪ್ರತ್ಯಕ್ಷವಾಗಿರುವಾಗ ಯಾವ ದೋಷ ಬರಲು ಸಾಧ್ಯ? ಯಾವ ದೋಷವೂ ಬರುವುದಿಲ್ಲ.

ಹೇ ಭಗವನ್! ನೀನು ಸರ್ವೋತ್ತಮ. ಭಕ್ತಿಪೂರ್ವಕವಾಗಿ ನಿನ್ನ ನಾಮವನ್ನು ಸ್ಮರಿಸಿದರೆ ಸಾಕು. ಮಂತ್ರೋಚ್ಚಾರಣದಲ್ಲಿ ಆದ ಲೋಪದೋಷಗಳು ದಗ್ಧವಾಗುತ್ತವೆ. ಕ್ರಿಯೆಗಳಲ್ಲಿ ಘಟಿಸಿದ ತಪ್ಪುಗಳು ಒಪ್ಪುಗಳಾಗುತ್ತವೆ. ಸ್ಥಾನವ್ಯತ್ಯಾಸದಿಂದ, ಕಾಲವ್ಯತ್ಯಾಸದಿಂದ, ಹೋಮಯೋಗ್ಯವಾದ ಪದಾರ್ಥಗಳ ವ್ಯತ್ಯಾಸದಿಂದ ಆಗಿರುವ ದೋಷವು ಕೂಡಾ ದೂರವಾಗಿ ಹೋಗುತ್ತದೆ. ಅಚ್ಯುತ-ಅನಂತ- ಗೋವಿಂದ ಎಂಬ ನಾಮತ್ರಯಗಳ ಸಂಕೀರ್ತನ ಎಲ್ಲವಿಧವಾದ ದೋಷಗಳನ್ನು ಪರಿಹರಿಸುತ್ತದೆ. ಹೀಗಿರುವಾಗ ಹೇ ಭಗವನ್! ನಾನೇನು ಪ್ರಾಯಶ್ಚಿತ್ತವನ್ನು ಮಾಡಲಿ? ಯಾಕೆ ಮಾಡಲಿ? ಕೀರ್ತನದ ಶಕ್ತಿಯೇ ಇಷ್ಟು ಸಮರ್ಥವಾಗಿದೆ. ಕೀರ್ತನೀಯನಾದ ನಿನ್ನ ಸಾಮರ್ಥ್ಯವು ಅತಿಶಯವೆನ್ನುವಲ್ಲಿ ಸಂದೇಹವೇ ಇಲ್ಲ. ನಾಮಸಂಕೀರ್ತನದಿಂದಲೇ ದೋಷವು ದೂರವಾಗುತ್ತದೆ. ಪ್ರಕೃತ ಬಲಿಯು ನಿನ್ನ ಪೂಜೆಯನ್ನೇ ಮಾಡಿದ್ದಾನೆ. ಹೀಗಾಗಿ ಅವನು ಮಾಡಿದ ಈ ಕರ್ಮದಲ್ಲಿ ಲೋಪವೇ ಇಲ್ಲ.

ಹೇ ಭಗವನ್! ನೀನು ದೇಶ-ಕಾಲ-ಗುಣಗಳಿಂದ ಪೂರ್ಣನಾಗಿರುವಿ. ನಾನು ತಿಳಿದಂತೆ ಈ ಕರ್ಮವು ಪರಿಪೂರ್ಣವಾಗಿದೆ. ಈ ವಿಷಯದಲ್ಲಿ ನನಗೆ ಸಂದೇಹವೇ ಇಲ್ಲ. ಆದರೂ ಪ್ರಾಯಶ್ಚಿತ್ತಗಳನ್ನು ಮಾಡಿ ಈ ಕರ್ಮವನ್ನು ಪೂರ್ಣಗೊಳಿಸು ಎಂದು ನೀನು ಆಜ್ಞೆಯನ್ನು ಮಾಡಿರುವಿ. ನಿನ್ನ ಆಜ್ಞೆಯ ಪಾಲನೆಗಾಗಿ ಮಾತ್ರ ಈ ಕರ್ಮಕಲಾಪವನ್ನು ನಾನು ಮಾಡುತ್ತೇನೆ. ನಿನ್ನ ಆಜ್ಞೆಯನ್ನು ಪರಿಪಾಲಿಸುವುದೇ ಭಕ್ತಜನರ ಮುಕ್ತಿಗೆ ಸಾಧನವಾಗಿದೆ.

ಭಗವದ್ಭಕ್ತರಾದ ಶುಕ್ರಾಚಾರ್ಯರು ಹೀಗೆ ಹೇಳಿದರು. ಶ್ರೀಹರಿಯ ಆಜ್ಞೆಯನ್ನು ಸಂತೋಷದಿಂದ ಅಂಗೀಕರಿಸಿದರು. ಬ್ರಹ್ಮಜ್ಞಾನಿಗಳಾದ ಬ್ರಾಹ್ಮಣರೊಂದಿಗೆ ಕೂಡಿ

ಬಲಿರಾಜನ ಯಜ್ಞದಲ್ಲಿಯ ನ್ಯೂನತೆಯನ್ನು ಪರಿಹರಿಸುವಂಥ ಪ್ರಾಯಶ್ಚಿತ್ತಹೋಮವನ್ನು ಮಾಡಿದರು. ಆ ಯಜ್ಞವನ್ನು ಪೂರ್ಣಗೊಳಿಸಿದರು.

ಭಗವಂತನಾದ ವಾಮನನು ಮತ್ತೆ ತ್ರೈಲೋಕಾಧಿಪತ್ಯವನ್ನು ಪುರಂದರನಾಮಕನಾದ ಇಂದ್ರನಿಗೆ ನೀಡಿದನು.

ದಕ್ಷ-ಮರೀಚಿ ಮೊದಲಾದ ಪ್ರಜೇಶ್ವರರಿಗೆ ಬ್ರಹ್ಮದೇವರು ಅಧಿಪತಿಗಳು. ಸಕಲಲೋಕದ ಹಿತದ ಚಿಂತನೆಯನ್ನು ಮಾಡಿದರು. ಸಕಲಲೋಕದ ಸಂರಕ್ಷಣೆಯನ್ನು ಬಯಸಿದರು. ವಾಮನರೂಪಿಯಾದ ಪರಮಾತ್ಮನನ್ನು ಲೋಕಪಾಲಕರ ಪತಿಯ ಸ್ಥಾನದಲ್ಲಿ ಅಭಿಷೇಕ ಮಾಡಿದನು. ಇದರಿಂದ ಎಲ್ಲ ದೇವತೆಗಳಿಗೂ ಸಂತೋಷವಾಯಿತು. ಕಶ್ಯಪ-ಅದಿತಿಯರು ಸಂಪ್ರೀತರಾದರು.

ಸರ್ವಾಧಿಪತಿಯಾದ ವಾಮನನು ಹೀಗೆ ಲೋಕಾಧಿಪತಿಯಾದ. ಯಾವಾಗ ವಾಮನ ಲೋಕಾಧಿಪತಿಯಾದನೋ ಆವಾಗ ಲೋಕವೆಲ್ಲ ಪ್ರಸನ್ನವಾಯಿತು. ದೇವತೆಗಳ ಆನಂದಕ್ಕಂತೂ ಪಾರವೇ ಇಲ್ಲವಾಯಿತು. ಧರ್ಮಾದಿಗಳೆಲ್ಲವೂ ನರ್ತಿಸಿದವು.

ಹೆಚ್ಚೇನು? ಆ ಪ್ರಸಂಗದಲ್ಲಿ ಸಮಸ್ತ ಪ್ರಪಂಚವೇ ಆನಂದತುಂದಿಲವಾಯಿತು. ಸಕಲಲೋಕದ ಸಂರಕ್ಷಣೆಗಾಗಿಯೇ ವಾಮನನನ್ನು ಪತಿಯನ್ನಾಗಿ ಬ್ರಹ್ಮದೇವರು ಮಾಡಿದ್ದರು. ಹೀಗಾಗಿ ಆ ಪ್ರಸಂಗದಲ್ಲಿ ಯಾರಿಗೂ ಕಷ್ಟವಾಗಲಿಲ್ಲ. ಅನಿಷ್ಟವೆಂದು ಯಾರೂ ಭಾವಿಸಲಿಲ್ಲ. ತ್ರಿವಿಷ್ಟಪದ ಲಾಭದಿಂದ ಇಂದ್ರ ಸಂತುಷ್ಟನಾದ. ಲೋಕಪಾಲಕರಿಂದ ಸಮೇತನಾಗಿ ವಾಮನನನ್ನು ತಮ್ಮ ಲೋಕಕ್ಕೆ ಕರೆದೊಯ್ದ.

ವಾಮನ ಸ್ವರ್ಗಕ್ಕೆ ಬಂದಾಗಿನಿಂದ ಇಂದ್ರ ನಿರ್ಭೀತನಾದ. ಸಂತುಷ್ಟನಾಗಿ ಮತ್ತೆ ತಾನು ಮಾಡಬೇಕಾದ ವ್ಯಾಪಾರದಲ್ಲಿ ತೊಡಗಿಕೊಂಡ.

ಬ್ರಹ್ಮ-ರುದ್ರ-ಸ್ಕಂದ ಮುಂತಾದ ದೇವತೆಗಳು, ಭೃಗು-ಅಂಗಿರ ಮುಂತಾದ ಋಷಿಗಳು, ಪಿತೃಗಳು, ಸಿದ್ಧರು ಎಲ್ಲ ಜೀವರೂ ವಾಮನನ ಚರಿತೆಯನ್ನು ಗಾನ ಮಾಡುತ್ತಾ ತಮ್ಮ ತಮ್ಮ ಸ್ಥಾನಗಳನ್ನು ಸೇರಿಕೊಂಡರು. ಇದೆಲ್ಲದಕ್ಕೂ ಕಾರಣಳಾದ ಅದಿತಿದೇವಿಯನ್ನು ಪ್ರಶಂಸಿಸಿದರು.

ಈ ವಾಮನನ ಚರಿತೆಯು ಸರ್ವವಿಧವಾದ ಪಾಪಗಳನ್ನು ಪರಿಹರಿಸುತ್ತದೆ. ಇಂಥ ಚರಿತೆಯನ್ನು ಶುಕಾಚಾರ್ಯರು ಪರೀಕ್ಷಿತ ಮಹಾರಾಜನಿಗೆ ಉಪದೇಶಿಸಿದರು.

ಭಗವಂತನ ಚರಿತೆಯನ್ನು ಸಮಗ್ರವಾಗಿ ವರ್ಣಿಸುವ ಶಕ್ತಿ ಯಾರಿಗೂ ಇಲ್ಲ. ಬ್ರಹ್ಮಾದಿಗಳಿಗೂ ಆರಾಧ್ಯದೇವನಾದ ವಾಮನನ ಚರಿತೆಯನ್ನು ಕೇಳಿದವನು, ಹೇಳಿದವನು ಅತ್ಯುತ್ತಮವಾದ ವೈಕುಂಠವನ್ನು ಪಡೆದು ಸುಖಿಸುತ್ತಾನೆ.

ದೇವತಾಸಂಬಂಧಿಯಾದ ಕರ್ಮವಾಗಿರಲಿ, ಪಿತೃಶ್ರಾದ್ಧ ಮುಂತಾದ ಕರ್ಮವಿರಲಿ, ಲೌಕಿಕವಾದ ಯಾವುದೇ ಕರ್ಮವಿರಲಿ, ಇಂಥ ಪ್ರಸಂಗದಲ್ಲಿ ವಾಮನಾವತಾರದ ಚರಿತೆಯನ್ನು ಶ್ರವಣ ಮಾಡಬೇಕು. ಆ ಎಲ್ಲ ಕರ್ಮಗಳು ಸಂಪನ್ನವಾಗುತ್ತವೆ. ಆ ಕರ್ಮಗಳ ಫಲವು ಸಮಗ್ರವಾಗಿ ಲಭಿಸುತ್ತದೆ.

ಈ ಚರಿತೆಯನ್ನು ಶ್ರವಣಮಾಡಿದವರಿಗೆ ಭಗವಂತನಲ್ಲಿ ಭಕ್ತಿಯು ಅಭಿವೃದ್ಧವಾಗುತ್ತದೆ. ವಾಮನನಂತೆ ಇರುವ ಭಕ್ತಿಯು ತ್ರಿವಿಕ್ರಮವಾಗಿ ಬೆಳೆಯುತ್ತದೆ. ಊರ್ಧ್ವಲೋಕಗಳು ಅವನ ವಶವಾಗುತ್ತವೆ. ಈ ವಿಷಯದಲ್ಲಿ ಸಂದೇಹವೇ ಇಲ್ಲ.

॥ ಇತಿ ಶ್ರೀಮದ್ಭಾಗವತೇ ಅಷ್ಟಮಸ್ಕಂಧೇ ಏಕವಿಂಶೋಽಧ್ಯಾಯಃ ॥

★★★

## ಅಥ ದ್ವಾವಿಂಶೋಽಧ್ಯಾಯಃ

ಪರೀಕ್ಷಿತ ಪ್ರಶ್ನಿಸಿದ. ಭಗವಂತನ ಕರ್ಮಗಳು ಅದ್ಭುತ. ಮೋಕ್ಷಾದಿಸಮಸ್ತ ಇಷ್ಟಾರ್ಥಗಳನ್ನು ನೀಡುವ ದೊರೆ ಆತ. ಅಂಥ ಪರಮಾತ್ಮ ಮತ್ಸ್ಯಾವತಾರವನ್ನು ತಾಳಿದ. ದಶಾವತಾರಗಳಲ್ಲಿ ಮೊದಲ ಅವತಾರವಿದು. ತನ್ನ ಸಾಮರ್ಥ್ಯವನ್ನು ಮತ್ಸ್ಯಾವತಾರದಲ್ಲಿಯೂ ತೋರಿಸಿದ ಭಗವಂತನ ಅವತಾರವಿದು. ಈ ಅವತಾರದ ಕಥೆಯನ್ನು ಕೇಳಲು ಬಯಸಿದ್ದೇನೆ. ಆ ಕಥೆಯನ್ನು ನನ್ನ ಮೇಲಿನ ದಯೆಯಿಂದ ವಿವರಿಸಬೇಕು.

ಭಗವಂತ ಸರ್ವನಿಯಾಮಕ. ತಾನು ಕರ್ಮಗ್ರಸ್ತನಾದ ಜೀವನಂತೆ ತಾಮಸಸ್ವಭಾವದ ಮತ್ಸ್ಯರೂಪವನ್ನು ಯಾಕೆ ಗ್ರಹಿಸಿದ? ಮತ್ಸ್ಯದ ಗಂಧ ಜನರಿಂದ ನಿಂದಿತವಾಗಿದೆ. ಇಂಥ ಜುಗುಪ್ಸಿತವಾದ ದೇಹವನ್ನು ಭಗವಂತ ಯಾಕೆ ಧರಿಸಿದ? ಯಾವ ಪ್ರಯೋಜನದ ಅಪೇಕ್ಷೆಯಿಂದ ಭಗವಂತ ಈ ದೇಹವನ್ನು ಧರಿಸಿದ?

ಇದನ್ನು ತಿಳಿಯಲು ನಾನು ಬಯಸಿದ್ದೇನೆ. ಈ ವಿಷಯಗಳನ್ನು ಉಪದೇಶಿಸಬೇಕು. ಭಗವಂತನ ಚರಿತೆ ಎಲ್ಲ ಜನರಿಗೂ ಸುಖದಾಯಕವಲ್ಲವೇ?

ಪರೀಕ್ಷಿತನಿಂದ ಪ್ರಾರ್ಥಿತರಾದ ಶುಕಾಚಾರ್ಯರು ಸಂತುಷ್ಟರಾದರು. ಮತ್ಸ್ಯಾವತಾರದ ಕಥೆಯನ್ನು ನಿರೂಪಿಸಲು ಉಪಕ್ರಮಿಸಿದರು.

ಭಗವಂತ ಸರ್ವನಿಯಾಮಕ. ಗೋ-ಬ್ರಾಹ್ಮಣಪರಿಪಾಲಕ. ಸರ್ವಸಾಧುಜನಸಂರಕ್ಷಕ. ವೇದಗಳ ಸಂರಕ್ಷಕ. ಧರ್ಮ-ಮುಕ್ತಿಗಳ ಸಂರಕ್ಷಣೆಯನ್ನು ಮಾಡಲು ಸಚ್ಚಿದಾನಂದಾತ್ಮಕವಾದ ದೇಹಗಳನ್ನು ಧರಿಸುತ್ತಾನೆ. ಈ ಭೂಮಿಯಲ್ಲಿ ಅವತರಿಸುತ್ತಾನೆ.

ಹಯಗ್ರೀವಾಸುರನನ್ನು ಸಂಹರಿಸಿ, ವೇದಗಳನ್ನು ಸಂರಕ್ಷಿಸುವುದಕ್ಕಾಗಿಯೇ ಭಗವಂತ ಮತ್ಸ್ಯನಾಗಿ ಅವತರಿಸಿದ್ದಾನೆ.

ಮತ್ಸ್ಯ-ಕೂರ್ಮ-ವರಾಹಯೋನಿಗಳು ಲೋಕನಿಂದಿತವಾಗಿವೆ. ಇಂಥ ರೂಪಗಳನ್ನು ಭಗವಂತ ಧರಿಸಿದ. ಆದರೂ ಭಗವಂತ ಲೋಕನಿಂದಿತನಾಗಲಿಲ್ಲ. ಲೋಕವಂದ್ಯವಿಭೂತಿ ಎನಿಸಿಕೊಂಡ. ಇದು ಭಗವಂತನಲ್ಲಿಯ ಆಶ್ಚರ್ಯಕರವಾದ ಚರಿತೆ.

ಕಳೆದು ಹೋದ ದಿನಕಲ್ಪದ ಕೊನೆಯಲ್ಲಿ ಬ್ರಹ್ಮದೇವರ ನಿದ್ರಾಕಾಲೀನವಾದ ಪ್ರಲಯವು ಘಟಿಸಿತು. ಆ ಪ್ರಲಯದಲ್ಲಿ ಭೂರಾದಿಲೋಕಗಳು ಸತ್ಯಲೋಕಪರ್ಯಂತ-ವಾಗಿ ಸಮುದ್ರದಲ್ಲಿ ಮುಳುಗಿದವು.

ಬಲಿಷ್ಠನಾದ ಹಯಗ್ರೀವನೆಂಬ ಅಸುರ ಬ್ರಹ್ಮದೇವರಿಂದ ವೇದಗಳನ್ನು ಅಪಹರಿಸಿದ. ಬ್ರಹ್ಮದೇವರ ಮುಖದಿಂದ ಹೊರಬಂದ ವೇದಾಭಿಮಾನಿಗಳಾದ ದೇವತೆಗಳನ್ನು ಅಪಹರಿಸಿದ.

ಹಯಗ್ರೀವಾಸುರನ ಆ ವೇದಾಪಹಾರವನ್ನು ಕಂಡು ಆ ವೇದಾಭಿಮಾನಿಗಳನ್ನು ಬಿಡಿಸಿಕೊಳ್ಳಲು ಮತ್ಸ್ಯಾವತಾರವನ್ನು ಗ್ರಹಿಸಿದ ಪರಮಾತ್ಮ. ಈ ಮೊದಲ ಮತ್ಸ್ಯಾವತಾರದಲ್ಲಿ ಹಯಗ್ರೀವನನ್ನು ಸಂಹರಿಸಿದ. ವೇದಾಭಿಮಾನಿಗಳಾದ ಆ ದೇವತೆಗಳನ್ನು ಬ್ರಹ್ಮದೇವರಿಗೆ ಒಪ್ಪಿಸಿದ. ವೇದಗಳನ್ನು ಉಪದೇಶ ಮಾಡಿದ.

ಆ ದಿನಪ್ರಲಯದಲ್ಲಿ ಸತ್ಯವ್ರತನೆಂಬ ರಾಜರ್ಷಿ ಇದ್ದ. ತತ್ತ್ವಜ್ಞಾನಿಯಾಗಿದ್ದ. ಆತ ಸಮುದ್ರದ ನೀರಿನಲ್ಲಿ ತಪಸ್ಸು ಮಾಡಲು ತೊಡಗಿದ. ಈ ಸತ್ಯವ್ರತನು ಹಿಂದಿನ ಶ್ವೇತವರಾಹಕಲ್ಪದಲ್ಲಿ ಸೂರ್ಯನ ಮಗನಾಗಿ ಜನಿಸಿದ. ಇವನು ಶ್ರಾದ್ಧದೇವನೆಂದೇ ಪುರಾಣಗಳಲ್ಲಿ ಖ್ಯಾತನಾದ. ಮನ್ವಂತರದ ಅಧಿಪತಿಯಾಗಿ ನಿಯಮಿತನಾದ.

ಒಂದು ಬಾರಿ ಆ ಸತ್ಯವ್ರತ ದ್ರವಿಡದೇಶದಲ್ಲಿರುವ ಕೃತಮಾಲಾ ನದೀತೀರದಲ್ಲಿ ಸ್ನಾನ ಮಾಡಿ ಜಲತರ್ಪಣವನ್ನು ನೀಡುತ್ತಿದ್ದಾನೆ. ತರ್ಪಣಕ್ಕಾಗಿ ಸ್ವೀಕರಿಸಿದ ನೀರಿನಲ್ಲಿ ಸಣ್ಣದಾದ ಮತ್ಸ್ಯ ಕಾಣಿಸಿತು. ಅದು ಲೋಕವಿಲಕ್ಷಣವಾಗಿತ್ತು. ನೀರಿನಿಂದ ಸಹಿತವಾಗಿ ಆ ಮೀನನ್ನು ನದಿಯಲ್ಲಿಯೇ ಬಿಟ್ಟ.

ನದಿಯಲ್ಲಿಂದಲೇ ಆ ಮತ್ಸ್ಯವು ಮಾತನಾಡಿತು. ಹೇ ರಾಜನ್! ನೀನು ಕರುಣಾಮಯಿ. ನನ್ನ ವಿಷಯದಲ್ಲಿ ನೀನ್ಯಾಕೆ ನಿರ್ದಯಿಯಾಗುತ್ತಿರುವಿ. ನಾನಿನ್ನೂ ಸಣ್ಣವನು. ಈ ನದಿಯಲ್ಲಿ ದೊಡ್ಡದಾದ ಮೀನುಗಳಿವೆ. ಜಲಚರ ಪ್ರಾಣಿಗಳಿವೆ. ನನ್ನನ್ನು ತಿಂದು ಬಿಡುತ್ತವೆ. ನಾನು ಭಯಗ್ರಸ್ತನಾಗಿದ್ದೇನೆ. ನಾನು ದೀನನಾಗಿರುವೆ. ನನ್ನನ್ನು ಸಂರಕ್ಷಿಸು. ಇಂಥ ನದಿಯಲ್ಲಿ ನನ್ನನ್ನು ಬಿಡುವುದು ಬೇಡ. ಶರಣಾದವರನ್ನು ಪರಿತ್ಯಜಿಸುವುದು ರಾಜರ ಕರ್ತವ್ಯ ಅಲ್ಲ.

ಪಾಪ. ವೈವಸ್ವತಮನುವಿಗೆ ಗೊತ್ತಿಲ್ಲ. ಹೀಗೆಲ್ಲ ಕರುಣೆಯಿಂದ ಮಾತನಾಡುತ್ತಿರುವ ಮತ್ಸ್ಯವು ಭಗವಂತನೆಂದು ಗೊತ್ತಿಲ್ಲ. ಸಚ್ಚಿದಾನಂದವಿಗ್ರಹನೆಂದು ತಿಳಿಯಲಾಗಲಿಲ್ಲ. ಹೀಗಾಗಿ ಆ ಮತ್ಸ್ಯವನ್ನು ಸಂರಕ್ಷಿಸಬೇಕೆಂದು ಸಂಕಲ್ಪಿಸಿದ.

ಸ್ವಾಭಾವಿಕವಾಗಿಯೇ ಆ ಸತ್ಯವ್ರತರಾಜ ಕರುಣಾಮಯಿಯಾಗಿದ್ದ. ದೈನ್ಯಯುಕ್ತವಾದ ಆ ಮತ್ಸ್ಯದ ಮಾತನ್ನು ಕೇಳಿ ಅವನ ಮನಸ್ಸು ಮತ್ತಿಷ್ಟು ಕರಗಿಹೋಯಿತು. ಆ ಮೀನನ್ನು ತನ್ನ ಕಮಂಡಲುವಿನಲ್ಲಿ ಹಾಕಿಕೊಂಡು ತನ್ನ ಆಶ್ರಮಕ್ಕೆ ತಂದ.

ಆ ರಾತ್ರಿ ಕಳೆಯಿತು. ಮರುದಿನವಾಯಿತು. ಅತಿ ಚಿಕ್ಕದಾದ ಮತ್ಸ್ಯವು ಬೆಳಗಾಗುವಷ್ಟರಲ್ಲಿ ಆ ಕಲಶದ ತುಂಬ ಬೆಳೆದಿತ್ತು. ಬೆಳೆದ ಮತ್ಸ್ಯವು ಸತ್ಯವ್ರತನೊಂದಿಗೆ ಮತ್ತೆ ಮಾತನಾಡಿತು. ಹೇ ರಾಜನ್! ನಿನ್ನ ಈ ಕಲಶದಲ್ಲಿ ಸುಖವಾಗಿ ವಾಸ ಮಾಡಲು ನನ್ನಿಂದಾಗುತ್ತಿಲ್ಲ. ಈ ಇರುಕಿನಲ್ಲಿ ವಾಸ ಮಾಡಲು ನಾನು ಬಯಸುವುದಿಲ್ಲ. ನಾನು ಸುಖವಾಗಿ ಇರುವಂತೆ ಜಲಾಶಯದಲ್ಲಿ ನನ್ನನ್ನು ಹಾಕು ಎಂದು ಹೇಳಿತು. ನನಗೊಂದು ವಿಸ್ತಾರವಾದ ಸ್ಥಾನವನ್ನು ಕಲ್ಪಿಸಿಕೊಡು ಎಂದು ಕೇಳಿತು.

ಆ ಸತ್ಯವ್ರತ ಮತ್ಸ್ಯವನ್ನು ತೆಗೆದು ಆಶ್ರಮದ ಬಾವಿಯಲ್ಲಿ ಹಾಕಿದ. ಬಾವಿಯಲ್ಲಿರುವ ಆ ಮತ್ಸ್ಯವು ಒಂದೇ ಮೂಹೂರ್ತದಲ್ಲಿ ಬಾವಿಗಾತ್ರದ್ದಾಯಿತು.

ಹೇ ಸತ್ಯವ್ರತರಾಜನೇ! ಈ ಬಾವಿಯೂ ನನಗೆ ಸಾಕಾಗುತ್ತಿಲ್ಲ. ಇದಕ್ಕಿಂತ ವಿಸ್ತಾರವಾದ ಸ್ಥಳದಲ್ಲಿ ನನ್ನನ್ನು ಇರಿಸು. ಎಂದು ಹೇಳಿತು. ನಾನು ನಿನಗೆ ಶರಣಾಗಿದ್ದೇನೆ. ಶರಣಾಗತರ ಪರಿತ್ರಾಣ ರಾಜರ ಕಾರ್ಯವಾಗಿದೆ. ನನ್ನನ್ನು ಸಂರಕ್ಷಿಸು.

ಸತ್ಯವ್ರತರಾಜ ಆ ಮೀನನ್ನು ಬಾವಿಯಿಂದ ಹೊರತೆಗೆದ. ವಿಶಾಲವಾದ ಸರೋವರದಲ್ಲಿ ತಂದು ಹಾಕಿದ. ಆ ಸರೋವರವನ್ನೆಲ್ಲ ವ್ಯಾಪಿಸಿಬಿಟ್ಟಿತು. ಮತ್ಸ್ಯವು ಮತ್ತೆ ಹೇಳಿತು. ರಾಜನೇ! ನಾನು ನೀರಿನಲ್ಲಿಯೇ ಬದುಕುವ ಪ್ರಾಣಿ. ನನಗೆ ಈ ಸರೋವರದಲ್ಲಿ ಇರಲು ಆಗುತ್ತಿಲ್ಲ. ಮತ್ತಿಷ್ಟು ವಿಶಾಲವಾದ ಜಲಾಶಯದಲ್ಲಿ ನನ್ನನ್ನು ಹಾಕು. ಎಲ್ಲಿ ನನಗೆ ತಲದ ಸ್ಪರ್ಶವೇ ಆಗುವುದಿಲ್ಲವೋ ಅಂಥ ಜಲಾಶಯದಲ್ಲಿ ನನ್ನನ್ನು ಹಾಕು ಎಂದು ಹೇಳಿತು.

ಹೀಗೆಯೇ ದೊಡ್ಡ ದೊಡ್ಡ ಮಡುವುಗಳಲ್ಲಿ ಆ ಮತ್ಸ್ಯವನ್ನು ಹಾಕುತ್ತ ಹೋದ ಸತ್ಯವ್ರತ. ಕೊನೆಗೆ ಆ ಮತ್ಸ್ಯದ ವಾಸಕ್ಕೆ ಎಲ್ಲ ಮಡುಗಳೂ ಸಣ್ಣದಾಗಿ ಹೋದವು. ಏನು ಮಾಡಬೇಕೆಂದು ರಾಜನಿಗೆ ತೋಚಲಿಲ್ಲ. ಸಮುದ್ರದಲ್ಲಿ ತಂದು ಆ ಮತ್ಸ್ಯವನ್ನು ಬಿಟ್ಟ.

ಸಮುದ್ರದಲ್ಲಿ ಹಾಕಿದ ಮೇಲೆ ಆ ಮತ್ಸ್ಯವು ಮತ್ತೆ ರಾಜನೊಂದಿಗೆ ಮಾತನಾಡಿತು. ರಾಜನ್! ನೀನು ಪ್ರಾರಂಭಿಸಿದ ಕಾರ್ಯವನ್ನು ಕೊನೆಗಾಣಿಸುವ ಸಮರ್ಥನಾಗಿರುವಿ.

ನಾನು ಸಣ್ಣವನು. ಈ ಸಮುದ್ರದಲ್ಲಿ ತಿಮಿಗಳು ತಿಮಿಂಗಿಲಗಳು, ತಿಮಿಂಗಿಲಗಿಲಗಳು ಇವೆ. ನನ್ನನ್ನು ತಿಂದು ಹಾಕುತ್ತವೆ. ಹೇಗಾದರೂ ಮಾಡಿ ನನ್ನನ್ನು ಸಂರಕ್ಷಿಸು. ಸಂರಕ್ಷಣೆ ಇಲ್ಲದ ಈ ಸಮುದ್ರದಲ್ಲಿ ನನ್ನನ್ನು ಹಾಕಿ ಹೋಗಬೇಡ. ನೀನೇ ನನಗೆ ಆಧಾರ.

ದಯೆ ತರಿಸುವಂಥ, ಅತ್ಯಂತ ಮನೋಹರವಾದ ಆ ಮಾತುಗಳನ್ನು ರಾಜ ಕೇಳಿದ. ವಿಮೋಹಿತನಾದ. ಮತ್ತೆ ಎಚ್ಚರಗೊಂಡ. ಮತ್ಸ್ಯಕ್ಕೆ ಪ್ರತಿಯಾಗಿ ನುಡಿದ. ನೀನಾರು? ನನ್ನನ್ನೇ ಮೋಹಗೊಳಿಸುತ್ತಿರುವಿ? ನೀನು ಎಲ್ಲ ಮೀನುಗಳಂತೆ ಇಲ್ಲ. ವಿಲಕ್ಷಣನಾಗಿರುವಿ. ನೀನು ಯಾರೆಂದು ಹೇಳು.

ನಿನ್ನ ಹಾಗೆ ಬೆಳೆಯುವ ಯಾವ ಜಲಚರಪ್ರಾಣಿಯನ್ನೂ ನಾನು ಕಂಡಿಲ್ಲ. ಕೇಳಿಯೂ ಇಲ್ಲ. ನೋಡನೋಡುತ್ತಿದ್ದಂತೆಯೇ ನೂರು ಯೋಜನದಷ್ಟು ನೀನು ಬೆಳೆದಿರುವಿ. ಹೀಗಾಗಿ ನೀನು ವಿಲಕ್ಷಣನಾಗಿರುವಿ.

ಯದ್ಯಪಿ ಸತ್ಯವ್ರತರಾಜ ಮೋಹಿತನಾಗಿದ್ದ. ಆದರೂ ಆ ಮತ್ಸ್ಯವನ್ನು ಸಂರಕ್ಷಿಸಿದ ಪುಣ್ಯದಿಂದ ಈ ಮತ್ಸ್ಯ ಯಾರೆಂದು ಊಹಿಸಲು ಸಮರ್ಥನಾದ. ನಂತರ ಮಾತನಾಡಿದ.

ನೀನು ಸಾಮಾನ್ಯವ್ಯಕ್ತಿಯಲ್ಲ. ಸಾಮಾನ್ಯವ್ಯಕ್ತಿಗಳಲ್ಲಿ ಈ ರೀತಿಯಾದ ಸಾಮರ್ಥ್ಯವು ಇರಲು ಸಾಧ್ಯವೇ ಇಲ್ಲ. ನೀನು ವಿಷ್ಣುವೇ ಆಗಿರುವಿ. ಸಮಗ್ರಐಶ್ವರ್ಯಗಳಿಂದ ಸಂಪನ್ನನಾದ ಭಗವಂತನೇ ನೀನಾಗಿರುವಿ. ನಮ್ಮಂಥ ಜೀವರ ಅನುಗ್ರಹಕ್ಕಾಗಿಯೇ ಈ ರೂಪಗಳನ್ನು ನೀನು ಧರಿಸುವಿ. ಪ್ರಕೃತ ಮತ್ಸ್ಯನಾಗಿ ನಮ್ಮನ್ನು ಮಂಕುಗೊಳಿಸುತ್ತಲಿರುವಿ.

ನನ್ನ ಈ ತಿಳುವಳಿಕೆ ಭ್ರಾಂತಿಯಲ್ಲ. ನೀನು ನಿಶ್ಚಿತವಾಗಿಯೂ ಪುರುಷೋತ್ತಮನೇ ಆಗಿರುವಿ. ದೇಶ-ಕಾಲ-ಗುಣಗಳಿಂದ ವ್ಯಾಪ್ತನಾಗಿರುವಿ. ನಿನಗೆ ನಮಸ್ಕರಿಸುತ್ತೇನೆ. ನನ್ನ ಅಪರಾಧಗಳನ್ನು ಮನ್ನಿಸು. ನಿನ್ನನ್ನು ತಪ್ಪು ತಪ್ಪಾಗಿ ನಾನು ತಿಳಿದೆ. ಆ ಮೋಹವನ್ನು ಕ್ಷಮಿಸು. ನಮ್ಮನ್ನು ಉದ್ಧರಿಸು ಎಂದು ಪ್ರಾರ್ಥಿಸಿದ. ವಿನೀತನಾಗಿ ವಿನಂತಿಸಿದ.

ನಿನ್ನ ಯಾವ ಅವತಾರಗಳೂ ಸ್ವಾರ್ಥಕ್ಕಾಗಿ ಅಲ್ಲ. ಸಜ್ಜನಾರ್ಥ. ಸಜ್ಜನ ಸಂರಕ್ಷಣಾರ್ಥ. ಆದ್ದರಿಂದ ಯಾವ ಕಾರಣಕ್ಕಾಗಿ ಯಾರ ಹಿತಕ್ಕಾಗಿ ಈ ಮತ್ಸ್ಯರೂಪವನ್ನು ತಾಳಿರುವಿ. ಆ ವಿಷಯವನ್ನು ತಿಳಿಯಲು ನಾನು ಬಯಸಿದ್ದೇನೆ. ತಿಳಿಯಲು ನಾನು ಯೋಗ್ಯನಾಗಿದ್ದರೇ ಈ ರಹಸ್ಯವನ್ನು ತಿಳಿಸು.

ಸುಹೃತ್, ಪತ್ನಿ, ಪುತ್ರ, ತಂದೆ, ತಾಯಿ ಮುಂತಾದ ಎಲ್ಲರಿಗಿಂತಲೂ ನೀನು ಪ್ರಿಯನಾಗಿರುವಿ. ನಿನ್ನಂಥವರ ದರ್ಶನ ನಮ್ಮಂಥ ಪಾಪಿಗಳಿಗೆ ಹೇಗೆ ದೊರೆಯಲು ಸಾಧ್ಯ. ನಿನ್ನ ಪ್ರಸಾದದ ಪ್ರಸಕ್ತಿಯಿಲ್ಲದೇ ನಿನ್ನನ್ನು ದರ್ಶನ ಮಾಡಿಕೊಳ್ಳುವುದು ಅಸಾಧ್ಯವೇ ಆಗಿದೆ. ಈ ಕಡಲಲ್ಲಿ ಕರುಣೆಯ ಕಡಲಾಗಿ ನೀನು ಸನ್ನಿಹಿತನಾಗಿರುವಿ. ಹೀಗೆ ಪ್ರಾರ್ಥಿಸುತ್ತಿದ್ದ ರಾಜನನ್ನು ಕುರಿತು ಮತ್ಸ್ಯಾವತಾರಿಯಾದ ಶ್ರೀಹರಿ ಹೇಳಿದ.

ಹೇ ಸತ್ಯವ್ರತನೇ! ಇವತ್ತಿನಿಂದ ಏಳನೆಯ ದಿವಸ ಪ್ರಲಯವಾಗುತ್ತದೆ. ಭೂಲೋಕ, ಭುವರ್ಲೋಕ ಮತ್ತು ಸ್ವರ್ಗಲೋಕಗಳು ಪ್ರಲಯಜಲದಲ್ಲಿ ಮುಳುಗಿಹೋಗುತ್ತವೆ.

ಹೀಗೆ ಮೂರ್ಲೋಕಗಳು ಮುಳುಗುತ್ತಿರಲು ಒಂದು ಹಡಗು ನಿಮ್ಮ ಹತ್ತಿರ ಬರುತ್ತದೆ. ಅತ್ಯಂತ ವಿಶಾಲವಾದ ಹಡಗು ಅದು. ನೀನು ಎಲ್ಲವಿಧವಾದ ಔಷಧಿ-ವನಸ್ಪತಿಗಳ ಬೀಜಗಳನ್ನು ತೆಗೆದುಕೊಂಡು ಆ ನಾವಿನಲ್ಲಿ ಹತ್ತಿ ಕುಳಿತುಕೋ. ಸಪ್ತರ್ಷಿಗಳು ಕೂಡಾ ಇದೇ ಹಡಗನ್ನು ಹತ್ತುತ್ತಾರೆ. ಆ ಪ್ರಸಂಗದಲ್ಲಿ ಸೂರ್ಯ-ಚಂದ್ರರು ಬೆಳಗುವುದೇ ಇಲ್ಲ. ಕಗ್ಗತ್ತಲು ಎಲ್ಲೆಡೆ ಕವಿಯುತ್ತದೆ. ಸಮುದ್ರಗಳೆಲ್ಲ ಒಂದಾಗುತ್ತವೆ. ನೋಡಿದಲ್ಲೆಲ್ಲ ನೀರು. ಅಂಥ ರಭಸವಾದ ಅಲೆಗಳ ಮಧ್ಯದಲ್ಲಿ ಆ ಹಡಗನ್ನು ಹತ್ತಲು ಅಸಾಧ್ಯ . ಆದರೆ ಸಪ್ತರ್ಷಿಗಳ ತಪಃಪ್ರಭಾವದಿಂದ ಅನಾಯಾಸವಾಗಿ ಆ ಹಡಗಿನಲ್ಲಿ ಕುಳಿತುಕೊಳ್ಳಲು ಸಾಧ್ಯವಾಗುತ್ತದೆ.

ಆ ಪ್ರಸಂಗದಲ್ಲಿ ನಾನು ಕೂಡಾ ಅಲ್ಲಿಗೆ ಬರುತ್ತೇನೆ. ಭಗವದ್ಭಕ್ತರ ಸಂಗದಿಂದ ನಿನಗೆ ಯಾವುದೇ ವಿಧವಾದ ಆತಂಕಗಳು ಎದುರಾಗುವುದಿಲ್ಲ. ಆ ಪ್ರಸಂಗದಲ್ಲಿ ಉಪಸ್ಥಿತವಾದ ದೊಡ್ಡದಾದ ಹಾವಿನಿಂದ ನನ್ನ ಕೋಡಿಗೆ ಆ ಹಡಗನ್ನು ಕಟ್ಟಿಬಿಡು. ಸುಖವಾಗಿ ಆ ಹಡಗನ್ನು ನಾನು ಸಂರಕ್ಷಿಸುತ್ತೇನೆ.

ಈ ಪ್ರಲಯ ಮುಗಿಯುವ ತನಕ ನಿಮ್ಮನ್ನು ನಾನು ಸಂರಕ್ಷಿಸುತ್ತೇನೆ. ನೀನು ಮಾಡುವ ಎಲ್ಲ ಪ್ರಶ್ನೆಗಳಿಗೆ ಮನ ಮುಟ್ಟುವಂತೆ ಉತ್ತರಗಳನ್ನು ಹೇಳುತ್ತೇನೆ. ತತ್ತ್ವೋಪದೇಶವನ್ನು ಮಾಡುತ್ತಾ ನಿನ್ನ ದುಃಖಗಳನ್ನೆಲ್ಲ ಪರಿಹರಿಸುತ್ತೇನೆ. ಅನುಗ್ರಹಪೂರ್ವಕವಾದ ನನ್ನ ಉಪದೇಶದಿಂದ ನೀನು ಎಲ್ಲ ತತ್ತ್ವಗಳನ್ನು ಚೆನ್ನಾಗಿ ತಿಳಿಯುತ್ತಿ .

ಹೀಗೆ ಮತ್ಸ್ಯವು ಆದೇಶ ಮಾಡಿ ಅಲ್ಲಿಯೇ ಅಂತರ್ಹಿತವಾಯಿತು. ಭಗವಂತನ ಆದೇಶಗಳನ್ನು ಪಾಲಿಸುವುದಕ್ಕಾಗಿ ಸಿದ್ಧನಾಗಿ ಕಾಯುತ್ತ ಕುಳಿತನು.

ಸತ್ಯವ್ರತರಾಜ ಪೂರ್ವದಿಕ್ಕಿಗೆ ಅಗ್ರವಾಗುವಂತೆ ದರ್ಭಾಸನವನ್ನು ಹಾಸಿದ. ಈಶಾನ್ಯಕ್ಕೆ ಮುಖಮಾಡಿ ಆ ಆಸನದ ಮೇಲೆ ಕುಳಿತ. ಮತ್ಸ್ಯರೂಪಿಯಾದ ಪರಮಾತ್ಮನ ಪಾದಗಳನ್ನೇ ಧ್ಯಾನಿಸಿದ.

ದೇವರು ಹೇಳಿದಂತೆ ಏಳು ದಿನಗಳು ಕಳೆದವು. ನಂತರ ಮಳೆ ಪ್ರಾರಂಭವಾಯಿತು. ಸಮುದ್ರ ಎಲ್ಲೆ ಮೀರಿತು. ಎಲ್ಲವೂ ಆ ಪ್ರಲಯಜಲದಲ್ಲಿ ಕೊಚ್ಚಿಹೋಯಿತು. ಭಗವಂತನ ಆದೇಶಕ್ಕೆ ಅನುಗುಣವಾಗಿ ಅಲ್ಲಿಗೆ ಹಡಗು ಬಂದಿತು. ವಿಶಾಲವಾದ ಅಂಥ ಹಡಗನ್ನು ಸತ್ಯವ್ರತರಾಜ ನೋಡಿಯೇ ಇರಲಿಲ್ಲ. ಅದನ್ನು ಕಂಡು ಆಶ್ಚರ್ಯಚಕಿತನಾದ. ಮುಂದಿನ ಸೃಷ್ಟಿಗೆ ಉಪಯುಕ್ತವಾದ ಬೀಜಗಳನ್ನೆಲ್ಲ ತೆಗೆದುಕೊಂಡ. ವಿಪ್ರರ್ಷಿಗಳೊಂದಿಗೆ ಆ

ನಾವಿನಲ್ಲಿ ಹತ್ತಿ ಕುಳಿತ. ಮುನಿಗಳ ಆದೇಶದಂತೆ ಭಗವಂತನನ್ನು ಧ್ಯಾನ ಮಾಡಿದ. ಆ ಧ್ಯಾನಕ್ಕೆ ಪ್ರಸನ್ನನಾದ ಪರಮಾತ್ಮ ಅಲ್ಲಿಯೇ ಪ್ರತ್ಯಕ್ಷವಾದ. ಸ್ವರ್ಣವರ್ಣದ ಬೃಹದ್ಗಾತ್ರ. ಒಂದು ಶೃಂಗ. ಆ ಶೃಂಗಕ್ಕೆ ಸರ್ಪವನ್ನು ಕಟ್ಟಿದ.

ಭಗವಂತನ ಎಲ್ಲ ಆಜ್ಞೆಗಳನ್ನು ನಾನು ಪಾಲಿಸಿಯಾಯಿತು ಎಂದು ಸಂತುಷ್ಟನಾದ. ಈ ಸಮುದ್ರವನ್ನು ಸುಲಭವಾಗಿ ದಾಟಿಸಿದಂತೆ ಸಂಸಾರಸಾಗರವನ್ನು ದಾಟಿಸಲಿ ಎಂದು ಭಗವಂತನನ್ನು ಪ್ರಾರ್ಥಿಸಿದ. ದೇವರನ್ನು ಸ್ತುತಿಸಿದ.

ನೀನೇ ನಮಗೆಲ್ಲ ಗುರುವಾಗಿರುವಿ. ನೀನೇ ನಮ್ಮ ಸರ್ವಸ್ವ. ನಮ್ಮ ಈ ಅವಿದ್ಯಾಗ್ರಂಥಿಯನ್ನು ಬಿಡಿಸು. ಈ ಸಂಸಾರದಿಂದ ನಮ್ಮನ್ನು ಮುಕ್ತನನ್ನಾಗಿಸು ಎಂಬುದಾಗಿ ಪ್ರಾರ್ಥಿಸಿದ.

ಸತ್ಯವ್ರತರಾಜನ ಸ್ತುತಿಗೆ ಪರಮಾತ್ಮ ಪ್ರಸನ್ನನಾದ. ಅನೇಕ ರಹಸ್ಯತತ್ತ್ವಗಳನ್ನು ಉಪದೇಶಿಸಿದ. ಪ್ರಲಯದ ಕಷ್ಟವಾಗದಂತೆ ಸತ್ಯವ್ರತಾದಿಗಳನ್ನು ಸಂರಕ್ಷಿಸಿದ.

ಭಗವಂತನ ಅನುಗ್ರಹದಿಂದ ಅನೇಕ ತತ್ತ್ವಗಳ ಉಪದೇಶ ಪಡೆದ ಸತ್ಯವ್ರತ. ಆ ಪುಣ್ಯದ ಪ್ರಭಾವದಿಂದ ಈ ಶ್ವೇತವರಾಹಕಲ್ಪದಲ್ಲಿ ವೈವಸ್ವತಮನುವಾದ. ಮನ್ವಂತರಕ್ಕೆ ಅಧಿಪತಿಯಾದ. ರಾಜನ, ಮತ್ಸ್ಯರೂಪಿಯಾದ ಪರಮಾತ್ಮನ ಈ ವಿಚಿತ್ರವಾದ ಸಂವಾದವನ್ನು ಆಲಿಸಿದವನು, ಕೇಳಿಸಿದವನು ಸಂಸಾರಬಂಧನದಿಂದ ಮುಕ್ತನಾಗುತ್ತಾನೆ. ಈ ಮತ್ಸ್ಯಾವತಾರದ ಕಥೆಯನ್ನು ಪ್ರತಿನಿತ್ಯವೂ ಆಲಿಸಬೇಕು. ಕೀರ್ತಿಸಬೇಕು. ಅವನ ಸಂಕಲ್ಪಗಳೆಲ್ಲವೂ ಕ್ಷಣದಲ್ಲಿಯೇ ಸಿದ್ಧಿಸುತ್ತವೆ. ಪರಮಗತಿಯನ್ನು ಪಡೆಯುತ್ತಾನೆ.

**॥ ಇತಿ ಶ್ರೀಮದ್ಭಾಗವತೇ ಅಷ್ಟಮಸ್ಕಂಧೇ ದ್ವಾವಿಂಶೋಽಧ್ಯಾಯಃ ॥**

★★★



# ಅಥ ಶ್ರೀಮದ್ಭಾಗವತೇ - ಅಷ್ಟಮಸ್ಕಂಧೇ

# ಪ್ರಥಮೋಽಧ್ಯಾಯಃ

**ಶ್ರೀವಿಜಯಧ್ವಜರ ಅವತರಣಿಕಾ :-**

ಹರಿಭಕ್ತಿಯೇ ಭಗವಂತನ ಮನಸ್ಸನ್ನು ಸೆಳೆಯಲು ಸಮರ್ಥವೆಂದು ತಿಳಿಸಲು ಅನಂತ ಉಪನಿಷತ್ತುಗಳಿಂದ ಪ್ರತಿಪಾದ್ಯನಾದ ಶ್ರೀಹರಿಯ ಜಗದ್ರಕ್ಷಣಾದಿ ಮಾಹಾತ್ಮ್ಯವನ್ನು ನಿರೂಪಿಸುವರು. ಅದರಲ್ಲಿಯೂ-

**''ವಿಮಲತರಮುರಮಥನದುರಿತಹರಚರಿತಾಮೃತಪಾನಾಪ್ಯಾಯಿತಪ್ರಾಣೋ ವಿಸ್ಮೃತಾನಶನಕ್ಲೇಶಃ ಪರೀಕ್ಷಿತ್.....''**

ಪರಮಾತ್ಮ ಮುರನಾಮಕದೈತ್ಯನನ್ನು ಸಂಹರಿಸಿದ್ದಾನೆ. ಅಂತಹ ಶ್ರೀಹರಿಯ ಚರಿತ್ರೆ ಅತ್ಯಂತಪರಿಶುದ್ಧವಾಗಿದೆ. ಪಾಪನಾಶಕವಾಗಿದೆ. ಶ್ರೀಹರಿಚರಿತೆ ಎಂಬ ಅಮೃತಪಾನದಿಂದ ತೃಪ್ತನಾಗಿದ್ದಾನೆ ಪರೀಕ್ಷಿತ. ಉಪವಾಸದ ಕಷ್ಟವನ್ನೇ ಮರೆತಿದ್ದಾನೆ. ಅಂಥ ಪರೀಕ್ಷಿತ್‌ರಾಜನು ಹಿಂದಿನ ಕಥೆಯನ್ನು ಅನುವಾದ ಮಾಡಿ, ಅವಶ್ಯ ಕೇಳಲೇಬೇಕಾದ ಕಥೆಯನ್ನು ಹೇಳಿರೆಂದು ಶುಕಾಚಾರ್ಯರನ್ನು ಪ್ರಾರ್ಥಿಸುವನು.

**ಶ್ರೀಸತ್ಯಧರ್ಮರ ಅವತರಣಿಕಾ :-**

ಶ್ರೀಮಚ್ಛ್ರುತಿಪತಿಸುತೇನ ಮಯಾ ಶ್ರುತಮಶ್ರುತಪ್ರಾಯಮಿತಿ ವಿಜಿಜ್ಞಾಪಯಿಷತಃ ಕಿಂಚಿದನುವಿವಿಚ್ಯೋಕ್ತ್ವೋತ್ತರತ ಉತ್ತಾರಣಕಾರಣಹರಿಚರಿತಶ್ರವಣೇಚ್ಛುಃ ಪರೀಕ್ಷಿತ್ ಪರೀಕ್ಷ್ಯ ಅಂತರ್ನಿರ್ಭೃತತತ್ಕಮನುಚರಿತವರ್ಣನಂ ಕುರ್ವಿತಿ ಸರ್ವಮತಿಂ ಸಾರ್ವಭೌಮೋಽರ್ಥಯತ ಇತಿ ವಕ್ತಿ ।। **ರಾಜೇತಿ** ।।

ಶ್ರೀವೇದವ್ಯಾಸರ ಮಕ್ಕಳಾದ ಶ್ರೀಶುಕಾಚಾರ್ಯರು ಇಲ್ಲಿಯ ವರೆಗೆ ನನಗೆ ಅನೇಕ ತತ್ತ್ವಗಳನ್ನು ಉಪದೇಶ ಮಾಡಿದರು. ನಾನೂ ಶ್ರವಣ ಮಾಡಿದೆ. ಆದರೆ ಶ್ರುತವಾದ ಆ

ಎಲ್ಲ ತತ್ತ್ವಗಳು ನನಗೆ ನೆನಪಿವೆಯೋ ಇಲ್ಲವೋ ಎಂದು ತಿಳಿಯಲು ಬಯಸಿದ ಪರೀಕ್ಷಿತ. ಹಾಗೆ ಬಯಸಿ ಶುಕಾಚಾರ್ಯರಿಂದ ಶ್ರುತವಾದ ತತ್ತ್ವಗಳನ್ನು ಅವರ ಮುಂದೆ ಸಂಕ್ಷಿಪ್ತವಾಗಿ ಅನುವಾದ ಮಾಡಿದ. ಆ ಸದನುವಾದದಿಂದ ಶುಕಾಚಾರ್ಯರು ಸಂತುಷ್ಟರಾಗಿದ್ದಾರೆ ಎಂದು ತಿಳಿದುಕೊಂಡ. ಭಗವಂತನ ಚರಿತೆಗಳ ಶ್ರವಣ ಮುಕ್ತಿಗೆ ಸಾಧನವಾಗಿವೆ. ಆದ್ದರಿಂದ ಆ ಭಗವಂತನ ಚರಿತೆಗಳನ್ನು ಹೇಳಿರಿ ಎಂದು ಶುಕಾಚಾರ್ಯರನ್ನು ಕುರಿತು ಪ್ರಶ್ನಿಸಿದ.

**ಶ್ರೀ ಛಲಾರಿ ಆಚಾರ್ಯರ ಅವತರಣಿಕಾ :-**

ಈ ಅಷ್ಟಮಸ್ಕಂಧದಲ್ಲಿ ಹದಿನಾಲ್ಕು ಮನ್ವಂತರಗಳನ್ನು ತಿಳಿಸುವರು. ಅದರಲ್ಲಿಯೂ ಮೊದಲನೇ ಅಧ್ಯಾಯದಲ್ಲಿ ಸ್ವಾಯಂಭುವ, ಸ್ವಾರೋಚಿಷ, ಉತ್ತಮ, ತಾಪಸ ಎಂಬ ನಾಲ್ಕು ಮನುಗಳನ್ನು ತಿಳಿಸುವರು. ಮೊದಲಿಗೆ ಪರೀಕ್ಷಿದ್ರಾಜನು ಹಿಂದಿನದನ್ನು ಅನುವಾದ ಮಾಡಿ, ಕೇಳಬೇಕಾದ ಕಥೆಯನ್ನು ಪ್ರಾರ್ಥಿಸುವನು.

**ಶ್ರೀ ಲಿಂಗೇರೀ ಆಚಾರ್ಯರ ಅವತರಣಿಕಾ :-**

ಸ್ವಾಯಂಭುವಮನುವಿನ ಸ್ತುತಿಯಿಂದ ಶ್ರೀಹರಿಯು ಪ್ರಸನ್ನನಾದ. ಸ್ವಾಯಂಭುವಮನುವನ್ನು ಸಂರಕ್ಷಿಸಿದ. ಆ ಮಹಿಮೆಯನ್ನು ಪ್ರಸ್ತುತ ಹೇಳುತ್ತಿದ್ದಾರೆ. ಈ ಕಥಾಶ್ರವಣದಿಂದ ಭಗವಂತನಲ್ಲಿ ಅತಿಶಯಿತವಾದ ಭಕ್ತಿಯು ಜನಿಸುತ್ತದೆ. ಮೊದಲಿಗೆ ನಡೆದ ಕಥೆಯನ್ನು ಪರೀಕ್ಷಿತ ಅನುವಾದ ಮಾಡಿ, ತನಗಿಷ್ಟವಾದ ಕಥೆಯನ್ನು ಹೇಳಿರೆಂದು ಶುಕಾಚಾರ್ಯರನ್ನು ಪ್ರಾರ್ಥಿಸುತ್ತಿದ್ದಾನೆ ಎಂದು ಸೂತರು ಶೌನಕರಿಗೆ ಹೇಳುವರು.

**ರಾಜೋವಾಚ**

**ಸ್ವಾಯಂಭುವಸ್ಯೇಹ ಮನೋರ್ವಂಶೋಽಯಂ ವಿಸ್ತರಾಚ್ಛ್ರುತಃ ।**
**ಯತ್ರ ವಿಶ್ವಸೃಜಾಂ ಸರ್ಗೋ ಮನೂನನ್ಯಾನ್ ವದಸ್ವ ನಃ ॥೧॥**

**ಹೇ ಬ್ರಹ್ಮನ್** (ಬ್ರಹ್ಮನ್ ಎಂಬ ಪದವು ೩ನೇ ಶ್ಲೋಕದಲ್ಲಿ ಇದೆ. ಅದನ್ನು ಇಲ್ಲಿಯೂ ಅನ್ವಯ ಮಾಡಿಕೊಳ್ಳಬೇಕು.) ಬ್ರಹ್ಮಜ್ಞಾನಿಗಳಾದ ಶುಕಾಚಾರ್ಯರೇ ! **ಇಹ** ಎರಡನೇ ಸ್ಕಂಧದಿಂದ ಆರಂಭಿಸಿ ಏಳನೇಸ್ಕಂಧ ಮುಗಿಯುವವರೆಗೆ **ಯತ್ರ** ಯಾವ ವಂಶದಲ್ಲಿ **ವಿಶ್ವಸೃಜಾಂ ಸರ್ಗಃ** ಮರೀಚಿ ಮೊದಲಾದ ಪ್ರಜೇಶ್ವರರಿಂದ ಆಕೂತಿ ಮುಂತಾದ ಸ್ವಾಯಂಭುವ ಕನ್ಯೆಯರಲ್ಲಿ ಯಾವ ಸೃಷ್ಟಿಯು ಆಗಿದೆಯೋ **ಅಯಂ** ಅಂತಹ, **ಸ್ವಾಯಂಭುವಸ್ಯ ಮನೋಃ** ಸ್ವಾಯಂಭುವಮನುವಿನ **ವಂಶಃ** ಸಂತತಿಯು (ಚರಿತ್ರೆಯು) **ವಿಸ್ತರಾತ್** ವಿಸ್ತಾರವಾಗಿ **ಶ್ರುತಃ** ಕೇಳಲ್ಪಟ್ಟಿದೆ. ಪ್ರಕೃತದಲ್ಲಿ, **ಅನ್ಯಾನ್** ಉಳಿದ ಸ್ವಾರೋಚಿಷ ಮೊದಲಾದ **ಮನೂನ್** ಮನುಗಳ ವಂಶ ಮುಂತಾದವುಗಳನ್ನು **ನಃ** ನಮಗಾಗಿ **ವದಸ್ವ** ಹೇಳಿರಿ.

ಸತ್ಯ ಃ- ಇಲ್ಲಿ **ವದಸ್ವನಃ** ಎನ್ನುವುದು ಒಂದೇ ಪದ ಎಂದಿಟ್ಟುಕೊಳ್ಳಬೇಕು. ವದಃ ಇತಿ ವಾಗ್ಮೀ ಇತಿ ಸ್ವನಃ ಧ್ವನಿಃ ಪ್ರಸಿದ್ಧಿರಿತಿ ಯಾವತ್, ಯಸ್ಯ ಸಃ ವದಸ್ವನಃ । ತ್ವಂ ವದ ಇತಿ ಶೇಷಃ । **ವದಃ ಇತಿ** ವಾಗ್ಮಿಗಳೆಂದು **ಸ್ವನಃ** ಪ್ರಸಿದ್ಧರಾದ (**ತ್ವಂ** ನೀವು **ವದ** ಹೇಳಿರಿ) ಎಂದು ಅರ್ಥ.

ಅಥವಾ **ಸ್ವನಃ ವದ** ಎಂದು ಪದಚ್ಛೇದ ಮಾಡಿಕೊಳ್ಳಬೇಕು. (ಸ್ವೇ ಸ್ವಕೀಯಾಶ್ಚ ತೇ ವಯಂ ಚೇತಿ ಸ್ವವಯಂ, ತೇಷಾಂ ತಾನ್, ಸ್ವನಃ ಪ್ರತಿ ವದ) ಸ್ವನಃ ಸ್ವಕೀಯರಾದ ನಮಗೆ ವದ ಹೇಳು ಎಂದು ಅರ್ಥ.

ಇಲ್ಲಿ **ಗುರೋಃ** ಎಂದು ಇನ್ನೊಂದು ಪಾಠ. ಈ ಪಾಠದಲ್ಲಿ **ಗುರೋಃ** ಎಲ್ಲರಿಗೂ ಮೂಲನಾದ **ಸ್ವಾಯಂಭುವಸ್ಯ** ಸ್ವಾಯಂಭುವಮನುವಿನ ಎಂದು ಅನ್ವಯ ತಿಳಿಯುವುದು.

**ಗುರೋ** ಎಂದು ಸಂಬುದ್ಧ್ಯಂತವಾದ ಮತ್ತೊಂದು ಪಾಠ. ಈ ಪಾಠದಲ್ಲಿ **ಹೇ ಗುರೋ** ಶುಕಾಚಾರ್ಯರೇ ! ಎಂದು ಅನ್ವಯ ಮಾಡಿಕೊಳ್ಳುವುದು. ||೧||

ವಿಜಯ ಃ- ಇತರಮನುಗಳ ಬಗ್ಗೆ ಹೇಳುವಾಗಲೂ ಆ ಪ್ರಸಂಗದಲ್ಲಿ ವಿಶೇಷಕಥೆಯನ್ನು ಹೇಳಬೇಕೆಂದು ಪ್ರಾರ್ಥಿಸುವರು -

ಲಿಂಗೇರೀ ಃ- ಇತರಮನುಕಥಾಶ್ರವಣಾದಿಗಳ ಆವಶ್ಯಕತೆಗೆ ನಿಮಿತ್ತವನ್ನು ಹೇಳುವರು -

**ಯತ್ರ ಧರ್ಮಾ ಹಿ ವಿವಿಧಾಶ್ಚತುರ್ವರ್ಣಾಶ್ರಿತಾಃ ಶುಭಾಃ ।**
**ಮನ್ವಂತರೇ ಹರೇರ್ಜನ್ಮ ಕರ್ಮಾಣಿ ಚ ಮಹೀಯಸಃ ||೨||**

**ಯತ್ರ** ಮುಂದೆ ಹೇಳಬೇಕೆಂದಿರುವ **ಮನ್ವಂತರೇ** ಪ್ರತಿಯೊಂದು ಮನ್ವಂತರದಲ್ಲಿಯೂ **ಚತುರ್ವರ್ಣಾಶ್ರಿತಾಃ** ಬ್ರಾಹ್ಮಣಾದಿ ನಾಲ್ಕು ವರ್ಣಗಳಿಗೆ ಸಂಬಂಧಿಸಿದ **ಶುಭಾಃ** ಮೋಕ್ಷಸಾಧನವಾದ **ವಿವಿಧಾಃ ಧರ್ಮಾಃ** ಬೇರೆ ಬೇರೆ ಧರ್ಮಗಳಿವೆಯೋ ಅವುಗಳನ್ನು **ಚ** ಮತ್ತು **ಮಹೀಯಸಃ** ಮಹತೋಮಹೀಯನಾದ ಸರ್ವೋತ್ತಮನಾದ **ಹರೇಃ** ಶ್ರೀಹರಿಯ **ಜನ್ಮ ಕರ್ಮಾಣಿ ಚ** ಅವತಾರಗಳು ಹಾಗೂ ಆ ಅವತಾರಗಳು ಮಾಡಿದ ಕಾರ್ಯಗಳನ್ನು (**ವದ** ಹೇಳಿರಿ ಎಂದು ಮುಂದಿನ ಶ್ಲೋಕದಿಂದ ಅನ್ವಯ.)

**ಹಿ** ಯಾವ ಕಾರಣ **ತತ್ರ** ಆ ಮನ್ವಂತರಗಳಲ್ಲಿ **ಧರ್ಮಾಃ ಪ್ರವರ್ತಿತಾಃ** ಧರ್ಮಗಳು ನಡೆದಿವೆಯೋ ಆ ಕಾರಣ ಹೇಳಿರಿ ಎಂದು ಭಾವ.

ಚತುರ್ವರ್ಣಾಶ್ರಿತಾಃ ಎನ್ನುವಲ್ಲಿ ಪಂಚಸ್ಕಂಧೇಭ್ಯಃ ಮುಂತಾದವುಗಳಂತೆ 'ಚತ್ವಾರಶ್ಚ ತೇ ವರ್ಣಾಶ್ಚ' ಎಂದು ವಿಶೇಷಣಸಮಾಸ. ಅಥವಾ 'ವರ್ಣಾನ್ ಆಶ್ರಿತಾಃ ವರ್ಣಾಶ್ರಿತಾಃ,

ಚತ್ವಾರಶ್ಚ ತೇ ವರ್ಣಾಶ್ರಿತಾಶ್ಚ' ಎಂದು ವಿಗ್ರಹ. (ಸಾಮರ್ಥ್ಯಾತ್ ಇತರತ್ರ ಅನ್ವಯಾಯೋಗಾತ್ ಚ ಚತುಷ್ಟಸ್ಯ ವರ್ಣಪದಾರ್ಥೇ ಅನ್ವಯಃ) ಇದರ ಚರ್ಚೆಯನ್ನು ಹಿಂದಿನ ಎರಡು ಸ್ಕಂಧಗಳ ವ್ಯಾಖ್ಯಾನದಲ್ಲಿ ನಾವೇ ಸಪ್ತಘಟಿಕಾಭೋಜನಂ, ತ್ರಿಲೋಕನಾಥಃ, ದೀಪ್ತಾನಲಾರ್ಕದ್ಯುತಿಮಪ್ರಮೇಯಂ ಎಂಬುದಾಗಿ ಪ್ರಮೇಯದೀಪಿಕಾ ಮುಂತಾದ ಉದಾಹರಣೆ ಕೊಟ್ಟು ವಿವರಿಸಿದ್ದನ್ನು ಇಲ್ಲಿ ಅನುಸಂಧಾನ ಮಾಡಿರಿ ಎನ್ನುತ್ತಾರೆ ಶ್ರೀಸತ್ಯಧರ್ಮರು.

ಈ ಶ್ಲೋಕದ ಪಾಠಾಂತರ ಹೀಗಿದೆ. ಇಲ್ಲಿಯ ಉತ್ತರಾರ್ಧ ಹೀಗಿದೆ -

**ಯತ್ರ ಯತ್ರ ಹರೇರ್ಜನ್ಮ ಕರ್ಮಾಣಿ ಚ ಮಹೀಯಸಃ ।**
**ಗೃಣಂತಿ ಕವಯೋ ಬ್ರಹ್ಮನ್ ತಾನಿ ನೋ ವದ ಶ್ರುಣ್ವತಾಮ್ ॥**

ಇಲ್ಲಿ '**ಯತ್ರ ಯತ್ರ**' ಎಂದು ಎರಡು ಸಲ ಹೇಳಿದ್ದರಿಂದ ಶ್ರೀಹರಿಯ ಚರಿತ್ರೆಗಳು ಮನುಚರಿತ್ರೆಯಲ್ಲಿ ಇದ್ದೇ ಇರುವವು ಎಂದು ಸೂಚಿಸುವರು.

**ಯತ್ರ ಯತ್ರ** ಯಾವ ಯಾವ ಮನ್ವಂತರದಲ್ಲಿ **ಹರೇಃ** ಶ್ರೀಹರಿಯ **ಜನ್ಮ ಕರ್ಮಾಣಿ** ಜನ್ಮ ಕರ್ಮಗಳನ್ನು **ಕವಯಃ** ಜ್ಞಾನಿಗಳು **ಗೃಣಂತಿ** ಹೇಳುವರೋ **ತಾನಿ** ಅವುಗಳನ್ನು **ಶ್ರುಣ್ವತಾಂ ನಃ ವದ** ಕೇಳುತ್ತಿರುವ ನಮಗೆ ಹೇಳಿರಿ ಎಂದು ಅರ್ಥ ತಿಳಿಯುವುದು. ॥೨॥

**ಗೃಣಂತಿ ಕವಯೋ ಬ್ರಹ್ಮನ್ ತಾನಿ ನೋ ವದ ಶೃಣ್ವತಾಮ್ ।**
**ಯದಸ್ಮಿನ್ನಂತರೇ ಬ್ರಹ್ಮನ್ ಭಗವಾನ್ ವಿಶ್ವಭಾವನಃ ।**
**ಕೃತವಾನ್ ಕುರುತೇ ಕರ್ತಾ ಹ್ಯತೀತೇಽನಾಗತೇಽಥ ವಾ ॥೩॥**

**ಬ್ರಹ್ಮನ್** ಯೋಗ್ಯತಾನುಸಾರವಾಗಿ ಜ್ಞಾನಪೂರ್ಣರಾದ ಶುಕಾಚಾರ್ಯರೇ ! **ಕವಯಃ** ಜ್ಞಾನಿಗಳಾದ ಲಕ್ಷ್ಮೀ-ಬ್ರಹ್ಮಾದಿಗಳು **ತಾನಿ** ಆ ಶ್ರೀಹರಿಯ ಅವತಾರಕಥೆಗಳನ್ನು **ಗೃಣಂತಿ** ಕೀರ್ತಿಸುವರು, ಸ್ತುತಿಸುವರು. **ವಿಶ್ವಭಾವನಃ** ಜಗದುತ್ಪಾದಕನಾದ ಅಥವಾ ವಾಯುದೇವರಿಗೆ ಜನಕನಾದ **ಭಗವಾನ್** ಭಗವಂತನು **ಅತೀತೇ** ಕಳೆದುಹೋದ **ಯಸ್ಮಿನ್ ಅಂತರೇ** ಯಾವ ಮನ್ವಂತರದಲ್ಲಿ **ಯತ್ ಕೃತವಾನ್** ಏನು ಮಾಡಿದನು? **ಅಸ್ಮಿನ್ನಂತರೇ** ಈ ವೈವಸ್ವತ ಮನ್ವಂತರದಲ್ಲಿ **ಯತ್ ಕುರುತೇ** ಏನು ಮಾಡುತ್ತಾನೆ? **ಅನಾಗತೇ ವಾ** ಮುಂದೆ ಬರುವ ಯಾವ ಮನ್ವಂತರದಲ್ಲಿ **ಯತ್ ಕರ್ತಾ** ಏನೇನು ಮಾಡುವನೋ **ತಾನಿ** ಅವುಗಳನ್ನು **ಶ್ರುಣ್ವತಾಂ** ಕೇಳುತ್ತಿರುವ **ನಃ** ನಮಗೆ **ವದ** ಹೇಳಿರಿ. **ಹಿ** ಇದು ಪ್ರಮಾಣಪ್ರಸಿದ್ಧ.

ಜ್ಞಾನಿಗಳು ಅನುಸರಿಸಿದ ಮಾರ್ಗವನ್ನು ಅನುಸರಿಸಿ ನಾವು ಕೇಳುತ್ತೇವೆ. ಅಜ್ಞಾನಿಗಳ ಮಾರ್ಗವನ್ನು ಅನುಸರಿಸಿಲ್ಲವೆಂದು ಅಭಿಪ್ರಾಯ. ಇದರಿಂದ -

**ನ ಸರಣಿರಿಯಂ ಅನುಸರಣೀಯಾ ಕೈರಪಿ ವಿವೇಕಿಪ್ರವೇಕೈರನನುಸೃತತ್ವಾತ್ ।**

ಈ ಕಥೆ ಕೇಳುವ ಮಾರ್ಗವನ್ನು ಯಾವ ಶ್ರೇಷ್ಠ ವಿವೇಕಿಗಳೂ ಅನುಸರಿಸಿಲ್ಲದ ಕಾರಣ ನಾವು ಅನುಸರಿಸಬಾರದು ಎಂಬ ಶಂಕೆ ಪರಿಹಾರವಾಯಿತು.

'ಕವಯಃ' ಎಂದದ್ದರಿಂದ ''ಶತಮಪ್ಯಂಧಾನಾಂ ನ ಪಶ್ಯತಿ'' ಕುರುಡರು ನೂರಾದರೇನು? ಸಾವಿರ ಆದರೇನು? ಅವರು ನೋಡುವುದಿಲ್ಲ. ಎಂಬ ನೀತಿವಿಷಯವಾಗುವದನ್ನು ತಪ್ಪಿಸಿರುವರು.

**ವಿಶ್ವಭಾವನಃ** ಎನ್ನುವಲ್ಲಿ ''ವಿಶ್ವೇಷು ಭಾವಯತೀತಿ ವಿಶ್ವಭಾವನಃ'' ಎಂದು ವಿಗ್ರಹ ಮಾಡಿ, ಸ್ವಾರ್ಥೇ ಣಿಚ್ ಎಂದಿಟ್ಟುಕೊಂಡು, ಹದಿನಾಲ್ಕು ಮನ್ವಂತರಗಳಲ್ಲಿ ಅವತರಿಸಿ ಅತೀತ-ಅನಾಗತ-ವರ್ತಮಾನ ಮನ್ವಂತರಗಳಲ್ಲಿ ಏನು ಕರ್ಮಗಳನ್ನು ಮಾಡಿದನೆಂದೂ ಛಲಾರೀ ಆಚಾರ್ಯರು ಅರ್ಥ ಮಾಡಿರುವರು. ।।೩।।

ಶುಕಾಚಾರ್ಯರೂ ಸುಮ್ಮನೇ ಕುಳಿತರೋ? ರಾಜನ ಪ್ರಶ್ನೆಗೆ ಉತ್ತರಿಸಿದರೋ ? ಎಂದರೆ ಹೇಳುವರು -

**ಋಷಿರುವಾಚ**

**ಮನವೋಽಸ್ಮಿನ್ ವ್ಯತೀತಾಃ ಷಟ್ ಕಲ್ಪೇ ಸ್ವಾಯಂಭುವಾದಯಃ ।**
**ಆದ್ಯಸ್ತೇ ಕಥಿತೋ ಯತ್ರ ದೇವಾದೀನಾಂ ಚ (ತು) ಸಂಭವಃ ।।೪।।**

**ಅಸ್ಮಿನ್ ಕಲ್ಪೇ** ಈ ಶ್ವೇತವರಾಹಕಲ್ಪದಲ್ಲಿ ಅಥವಾ ಬ್ರಹ್ಮನ ದಿನಕಲ್ಪದಲ್ಲಿ ಅಥವಾ ವೈವಸ್ವತಮನ್ವಂತರ ನಡೆದಿರುವಾಗ **ಸ್ವಾಯಂಭುವಾದಯಃ ಷಟ್ ಮನವಃ** ಸ್ವಾಯಂಭುವ ಮೊದಲಾದ ಆರು ಮನುಗಳು ಅಂದರೆ ಸ್ವಾಯಂಭುವ, ಸ್ವಾರೋಚಿಷ, ಉತ್ತಮ, ತಾಪಸ, ರೈವತ, ಚಾಕ್ಷುಷ ಎಂಬುವ ಆರು ಮನ್ವಂತರಗಳು **ವ್ಯತೀತಾಃ** ಕಳೆದಿವೆ. ಏಳನೆಯದಾದ ವೈವಸ್ವತಮನ್ವಂತರವು ಕಳೆದಿಲ್ಲ. ಆದರೆ ಕಳೆದಂತೆಯೇ. (ಅದರಲ್ಲಿ ಆಗಬೇಕಾದ ದಶಾವತಾರಗಳೂ ಕಲ್ಕಿಯನ್ನು ಬಿಟ್ಟು ಆಗಿವೆ ಎಂದರ್ಥ.) **ಯತ್ರ** ಯಾವ ಸ್ವಾಯಂಭುವ ಮನ್ವಂತರದಲ್ಲಿ **ದೇವಾದೀನಾಂ** ದೇವತೆಗಳ ಮನುಪುತ್ರರ, ಸಪ್ತಋಷಿಗಳ, ಇಂದ್ರನ, ಹರಿಯ ವರಾಹಾದ್ಯವತಾರಗಳ **ಸಂಭವಃ** ಸೃಷ್ಟಿ ಆಯಿತೋ **ಸಃ** ಆ **ಆದ್ಯಃ** ಮೊದಲನೆಯದಾದ ಸ್ವಾಯಂಭುವಮನ್ವಂತರವು **ತೇ** ನಿನಗೆ **ಕಥಿತಃ** ಹೇಳಲ್ಪಟ್ಟಿದೆ.

**ಅತ್ರ** ಎಂಬ ಪಾಠದಲ್ಲಿಯೂ ಸ್ವಾಯಂಭುವಮನ್ವಂತರದಲ್ಲಿ ಎಂದು ಅರ್ಥ. **ತು** ವಿಶೇಷವಾಗಿ ಹೇಳಿದೆ ಎಂದರ್ಥ. 'ಅತೀತೇಽನಾಗತೇಽಥವಾ' (ಶ್ಲೋ-೩) ಎಂದು ಮನ್ವಂತರಗಳಿಗೆ ಅತೀತತ್ವಾದಿಗಳನ್ನು ಹೇಳಿತ್ತು. ಅದರಲ್ಲಿ ಅತೀತಮನ್ವಂತರಕಥಾ ಹೇಳಲು ಅತೀತಮನ್ವಂತರಸಂಖ್ಯೆಯನ್ನು ಇಲ್ಲಿ ಹೇಳಿರುವರು. ।।೪।।

**ಆಕೂತ್ಯಾಂ ದೇವಹೂತ್ಯಾಂ ಚ ದುಹಿತ್ರೋಸ್ತಸ್ಯ ವೈ ಮನೋಃ ।**
**ಧರ್ಮಜ್ಞಾನೋಪದೇಶಾರ್ಥಂ ಭಗವಾನ್ ಪುತ್ರತಾಂ ಗತಃ ॥೫॥**

ಈ ಸ್ವಾಯಂಭುವ ಮನ್ವಂತರದಲ್ಲಿಯೂ ಯಜ್ಞನಾಮಕ ಶ್ರೀಹರಿಯು ಮಾಡಿದ ಸ್ವಾಯಂಭುವಮನುವಿನ ರಕ್ಷಣೆಯನ್ನು ಹೇಳಿರಲಿಲ್ಲ. ಅದನ್ನು ಹೇಳುವದಕ್ಕಾಗಿ ಪ್ರಾರಂಭಿಸುತ್ತಾರೆ. **ತಸ್ಯ** ಆ **ಮನೋಃ** ಸ್ವಾಯಂಭುವಮನುವಿನ **ದುಹಿತ್ರೋಃ** ಹೆಣ್ಣುಮಕ್ಕಳಾದ **ಆಕೂತ್ಯಾಂ ದೇವಹೂತ್ಯಾಂ ಚ** ಆಕೂತಿ-ದೇವಹೂತಿಯರಲ್ಲಿ **ಭಗವಾನ್** ಶ್ರೀಹರಿಯು **ಧರ್ಮಜ್ಞಾನೋಪದೇಶಾರ್ಥಂ** ಧರ್ಮ-ಜ್ಞಾನಗಳ ಉಪದೇಶ ಮಾಡುವದಕ್ಕಾಗಿ **ಪುತ್ರತಾಂ ಗತಃ** ಕ್ರಮವಾಗಿ ಯಜ್ಞ, ಕಪಿಲ ಎಂಬ ಹೆಸರಿನಿಂದ ಮಗನಾಗಿ ಅವತಾರ ಮಾಡಿದನು.

ಎರಡು ಅವತಾರಗಳ ಪ್ರಯೋಜನವೂ ಒಂದೇ ಎಂಬುದನ್ನು 'ಧರ್ಮಜ್ಞಾನೋಪದೇಶಾರ್ಥಂ' ಎಂಬುದರಿಂದ, ಎರಡು ಅವತಾರಗಳಿಗೆ ಭೇದವಿಲ್ಲವೆಂಬುದನ್ನು 'ಗತಃ' ಎಂಬ ಏಕವಚನದಿಂದಲೂ ತಿಳಿಸಿರುವರು.

ಲಿಂಗೇರೀ ಃ- 'ಭಗವಾನ್' ಎಂಬುದರಿಂದ -

**ಐಶ್ವರ್ಯಸ್ಯ ಸಮಗ್ರಸ್ಯ ವೀರ್ಯಸ್ಯ ಯಶಸಃ ಶ್ರಿಯಃ ।**
**ಜ್ಞಾನವಿಜ್ಞಾನಯೋಶ್ಚೈವ ಷಣ್ಣಾಂ ಭಗ ಇತೀರಣಾ ॥**
**('ಜ್ಞಾನವೈರಾಗ್ಯಯೋಶ್ಚೈವ' ಎಂದೂ ಕೆಲವರ ಪಾಠವಿದೆ.)**

ಸಮಗ್ರಜ್ಞಾನವೂ ಭಗಶಬ್ದಾರ್ಥಾಂತರ್ಗತವಾಗಿದೆ. ಹೀಗಾಗಿ ಭಗವಾನ್ ಎಂದು ಪ್ರಯೋಗಿಸಿರುವುದರಿಂದ ಧರ್ಮ-ಜ್ಞಾನಗಳನ್ನು ಉಪದೇಶ ಮಾಡುವ ಸಾಮರ್ಥ್ಯ ಯಜ್ಞ-ಕಪಿಲರಿಗೆ ಇದೆ ಎಂದು ಸೂಚಿತವಾಗುವದು.

ಅವತಾರಣಿಕಾಃ- ಸತ್ಯ ಃ- ಆಕೂತಿಯ ಮಗನ ಚರಿತ್ರೆಯನ್ನು ಹೇಳಲು ಉತ್ಕಂಠವಾದ ಮನಸ್ಸುಳ್ಳ ಶುಕಾಚಾರ್ಯರು ಮೂರನೇ ಸ್ಕಂಧದಲ್ಲಿ ಹೇಳಿದ್ದನ್ನು ಜ್ಞಾಪಿಸುತ್ತ ಹೇಳಬೇಕಾದುದನ್ನು ಪ್ರತಿಜ್ಞೆ ಮಾಡುವರು ಎಂದು ಹೇಳುವರು-

**ಕೃತಂ ಪುರಾ ಭಗವತಃ ಕಪಿಲಸ್ಯಾನುವರ್ಣಿತಮ್ ।**
**ಆಖ್ಯಾಸ್ಯೇ ಭಗವಾನ್ ಯಜ್ಞೋ ಯಚ್ಚಕಾರ ಕುರೂದ್ವಹ ॥೬॥**

**ಹೇ ಕುರೂದ್ವಹ** ಕುರುಕುಲ ಉದ್ಧಾರಕನೇ ! **ಭಗವತಃ ಕಪಿಲಸ್ಯ** ದೇವಹೂತಿಯ ಮಗನಾಗಿ ಅವತರಿಸಿದ ಐಶ್ವರ್ಯಶಾಲಿಯಾದ ಕಪಿಲನಾಮಕ ಶ್ರೀಹರಿಯ **ಕೃತಂ** ಚರಿತೆಯು **ಪುರಾ** ಮೂರನೇ ಸ್ಕಂಧದಲ್ಲಿ **ಅನುವರ್ಣಿತಂ** ನಿನಗೆ ನನ್ನಿಂದ ಹೇಳಲ್ಪಟ್ಟಿತು.

**ಭಗವಾನ್ ಯಜ್ಞಃ** ಯಜ್ಞನಾಮಕನಾಗಿ ಆಕೂತಿಸುತನಾಗಿ ಅವತರಿಸಿದ ಶ್ರೀಹರಿಯು **ಯತ್ ಚಕಾರ** ಯಾವ ಕಾರ್ಯ ಮಾಡಿದನೋ **ತತ್** ಅದನ್ನು **ಆಖ್ಯಾಸ್ಯೇ** ನಿನಗೆ ಹೇಳುವೆನು. ॥೬॥

ವಿಶೇಷ ಃ- ಪರೀಕ್ಷಿತನಿಗೆ ಮುಂದೆ ಹೇಳುವ ವಿಷಯದಲ್ಲಿ ಮನಃಪ್ರಣಿಧಾನ ಬರಲು ಕುರೂದ್ವಹ ಎಂದು ಸ್ತೋತ್ರರೂಪವಾದ ಸಂಬೋಧನೆಯನ್ನು ಶುಕಾಚಾರ್ಯರು ಮಾಡಿರುತ್ತಾರೆ. ॥೬॥

**ವಿರಕ್ತಃ ಕಾಮಭೋಗೇಷು ಶತರೂಪಾಪತಿಃ ಪ್ರಭುಃ ।**
**ವಿಸೃಜ್ಯ ರಾಜ್ಯಂ ತಪಸೇ ಸಭಾರ್ಯೋ ವನಮಾವಿಶತ್ ॥೭॥**

**ಪ್ರಭುಃ** ವಿಷಯಾನುಭವಪರಿತ್ಯಾಗ ಮಾಡಲು ಸಮರ್ಥನಾದ **ಶತರೂಪಾಪತಿಃ** ಶತರೂಪಾದೇವಿಯ ಪತಿಯಾದ ಸ್ವಾಯಂಭುವಮನುವು **ಕಾಮಭೋಗೇಷು** ವಿಷಯಭೋಗಾನುಭವದಲ್ಲಿ **ವಿರಕ್ತಃ** ಹೇಯತಾಬುದ್ಧಿ ಉಳ್ಳವನಾಗಿ **ರಾಜ್ಯಂ ವಿಸೃಜ್ಯ** ರಾಜ್ಯವನ್ನು ಬಿಟ್ಟು **ಸಭಾರ್ಯಃ** ಪತ್ನೀಸಹಿತನಾಗಿ **ತಪಸೇ** ತಪಸ್ಸು ಮಾಡುವದಕ್ಕಾಗಿ **ವನಂ ಆವಿಶತ್** ವನವನ್ನು ಪ್ರವೇಶಿಸಿದನು.

ಸಭಾರ್ಯಃ ಎನ್ನುವ ಮೂಲಕ ಶತರೂಪಾಳಿಗೆ ಪಾತಿವ್ರತ್ಯಸೂಚನ ಮಾಡುವದರಿಂದ, ಶತರೂಪಾಪತಿಃ ಎಂದು ಶತರೂಪಾಳಿಗೆ ಏನು ಪ್ರಸಿದ್ಧಿಯು ಧ್ವನಿತವಾಗಿತ್ತೋ ಅದನ್ನು ಉಪಪಾದಿಸಿದಂತಾಯಿತು. ಮತ್ತು ಅವಳೂ ಸಹ ವಿಷಯಭೋಗವಿರಕ್ತಿ ಉಳ್ಳವಳೆಂದು ಸೂಚಿಸಿರುವರು. 'ವಿಸೃಜ್ಯ ರಾಜ್ಯಂ' ರಾಜ್ಯವನ್ನು ಪರಿತ್ಯಜಿಸಿ ಎಂದು ಹೇಳುವುದರಿಂದ ಅವರ ವೈರಾಗ್ಯ ಅಭಾವವೈರಾಗ್ಯವಲ್ಲ, ಭಾವವೈರಾಗ್ಯವೆಂದು ಸೂಚಿಸುತ್ತಿದ್ದಾರೆ.

ಸತ್ಯಃ- ಸಭೆಯಲ್ಲಿರುವ ಸಭಿಕರ ಔದಾಸೀನ್ಯವನ್ನು, ಅವರು ತೋರುತ್ತಿರುವ ಅಗೌರವವನ್ನು ಗಮನಿಸಿ ಸ್ವಾಯಂಭುವಮನು ಸಾಮ್ರಾಜ್ಯವನ್ನು ಪರಿತ್ಯಜಿಸಿದ ಎಂದು ತಿಳಿಯಬಾರದು. ಆ ಸಭಿಕರೆಲ್ಲರೂ ಅತಿಶಯವಾದ ಗೌರವವನ್ನೇ ಸ್ವಾಯಂಭುವ ಮನುವಿನಲ್ಲಿ ತೋರಿಸುತ್ತಿರುವಾಗಲೇ ವನಕ್ಕೆ ಹೋದ ಎಂದು ತಿಳಿಯಬೇಕು. ಈ ವಿಷಯವನ್ನು **ಸಭಾರ್ಯಃ** ಎಂಬ ಪದವು ಹೇಳುತ್ತಿದೆ. **ಸಭಾನಾಂ** ಸಭಿಕರಿಗೆ **ಆರ್ಯಃ** ಸ್ವಾಮಿಯಾದವನು ಅಥವಾ **ಆರ್ಯಃ** ಶ್ರೇಷ್ಠನಾದವನು ಎಂದರ್ಥ. ಅಂದರೆ ಸಭಿಕರೆಲ್ಲ ಸ್ವಾಯಂಭುವಮನುವನ್ನು ಸ್ವಾಮಿಯನ್ನಾಗಿಯೇ ಕಾಣುತ್ತಿದ್ದರು. ಶ್ರೇಷ್ಠನನ್ನಾಗಿಯೇ ಕಾಣುತ್ತಾ ಗೌರವಿಸುತ್ತಿದ್ದರು. ಆದರೂ ರಾಜ್ಯವನ್ನು ಪರಿತ್ಯಜಿಸಿ ವನಕ್ಕೆ ನಡೆದ ಎಂದು ತಿಳಿಯಬೇಕು.

♦ ವನಕ್ಕೆ ಹೋಗಬೇಕಲ್ಲಾ ಎಂಬ ಕ್ಲೇಶದಿಂದ ಕಳೆಗುಂದಿದವನಾಗಿ ಹೋಗಲಿಲ್ಲ ಎಂಬ ಅರ್ಥವೂ **ಸಭಾರ್ಯಃ** ಎಂಬ ಪದದಿಂದ ತಿಳಿದು ಬರುತ್ತದೆ. **ಸಭಾಃ** ಭಾಸಾ ಸಹಿತಾಃ ಪ್ರಕಾಶದಿಂದ ಸಹಿತರಾದವರು ಪ್ರಕಾಶವಂತರು ಎಂದು ಅರ್ಥ. ಅವರಿಗೆ **ಅರ್ಯಃ** ಸ್ವಾಮಿಯಾದವನು ಅಥವಾ **ಆರ್ಯಃ** ಪ್ರಕಾಶವಂತರಲ್ಲಿ ಶ್ರೇಷ್ಠನಾದವನು ಎಂದು ಅರ್ಥ. ಇದರಿಂದ ಕಳೆತುಂಬಿದ, ಪ್ರಕಾಶತುಂಬಿದ, ನಗು ತುಂಬಿದ, ಮುಖದಿಂದಲೇ ಸ್ವಾಯಂಭುವ ಮನು ವನಕ್ಕೆ ಹೊರಟ ಎಂದು ತಿಳಿದು ಬರುತ್ತದೆ.

♦ ವನ ಷಣ ಸಂಭಕ್ತೌ ಎಂಬ ಕ್ರಿಯಾಪದದಿಂದ ಸಿದ್ಧವಾದ ವನತೇ ಇತಿ ವನಂ ಎಂಬ ಪದಕ್ಕೆ ಮನಃಪೂರ್ವಕವಾಗಿ ಎಂದೂ ಅರ್ಥ.

♦ ದುರ್ವಿಷಯದಲ್ಲಿ ವೈರಾಗ್ಯ ತಾಳಿದಂತೆ ಸದ್ವಿಷಯದಲ್ಲಿಯೂ ವೈರಾಗ್ಯವನ್ನು ತಾಳಿದ್ದನೇ? ಎಂದರೆ ಅಲ್ಲವೆಂದು ವಿರಕ್ತಃ ಎಂಬುದರಿಂದ ಹೇಳುತ್ತಾರೆ. 'ವಿಃ ಪಕ್ಷಿಪರಮಾತ್ಮನೋಃ' ಎಂದು ಅಭಿಧಾನವಿರುವದರಿಂದ **ವೌ** ಭಗವಂತನಲ್ಲಿ (ಪರಮವಿಷಯದಲ್ಲಿ) **ರಕ್ತಃ** ಆಸಕ್ತನು ಎಂದರ್ಥ. ಹೀಗೆ ಭಗವದ್ವಿಷಯದಲ್ಲಿ ಆಸಕ್ತನಾಗಿ ತಪಸ್ಸು ಮಾಡುವುದಕ್ಕಾಗಿಯೇ ವನಕ್ಕೆ ತೆರಳಿದ ಎಂದು ತಿಳಿಯಬೇಕು. ||೧.೭||

ತಪಸ್ಸು ಮಾಡಿದ ರೀತಿಯನ್ನು ಹೇಳುವರು -

**ಸುನಂದಾಯಾಂ ವರ್ಷಶತಂ ಪದ್ಯೆಕೇನ ಭುವಂ ಸ್ಪೃಶನ್ ।**
**ತಪ್ಯಮಾನಸ್ತಪೋ ಘೋರಮಿದಮನ್ವಾಹ ಭಾರತ** ||೮||

**ಹೇ ಭಾರತ** ಪರೀಕ್ಷಿತನೇ ! ಸ್ವಾಯಂಭುವಮನುವು **ಸುನಂದಾಯಾಂ** ಗಂಗಾನದಿಯಲ್ಲಿ **ಏಕೇನ ಪದಾ ಭುವಂ ಸ್ಪೃಶನ್** ಒಂದು ಕಾಲಿನಿಂದ ಭೂಮಿಯನ್ನು ಸ್ಪರ್ಶಿಸುತ್ತ (ಮತ್ತೊಂದು ಕಾಲನ್ನು ಎತ್ತಿ ಎಂದರ್ಥ) **ವರ್ಷಶತಂ** ಒಂದು ನೂರು ವರ್ಷಕಾಲ **ಘೋರಂ** ಇತರಾಸಾಧ್ಯವಾದ (ಅವಿರಕ್ತ ಜನರಿಗೆ ಭಯಂಕರವಾದ) **ತಪಃ ತಪ್ಯಮಾನಃ** ತಪಸ್ಸು ಮಾಡುವವನಾಗಿ **ಇದಂ ಅನ್ವಾಹ** ಉಪನಿಷದ್ವಚನವನ್ನು ಹೇಳಿದನು, ಸ್ತುತಿಸಿದನು.

♦ ''ಸೀತಾ ಅಲಕನಂದಾ ಚಕ್ಷುಃ ಭದ್ರಾ'' ಎಂದು ಐದನೇ ಸ್ಕಂಧದಲ್ಲಿ ಹೇಳಿದ ನಾಲ್ಕು ವಿಭಾಗಗಳಲ್ಲಿ ಒಂದಾದ ಅಲಕನಂದಾ ಎಂಬ ಗಂಗೆಗೆ ಸುನಂದಾ ಎಂದು ಮತ್ತೊಂದು ಹೆಸರು. ಹಾಗಾಗಿ ಸುನಂದಾಯಾಂ ಎಂದರೆ ಅಲಕನಂದಾದಲ್ಲಿ ಎಂದರ್ಥ.

♦ **ಅನು ಆಹ** ಎಂದು ಪದವಿಭಾಗ ಮಾಡಿಕೊಂಡು ಲಿಂಗೇರೀ ಆಚಾರ್ಯರು ಹೀಗೆ ಅರ್ಥವನ್ನು ತಿಳಿಸಿದ್ದಾರೆ. **ಅನು** 'ಯ ಆದಿತ್ಯಮಂತರೋ ಯಮಯತಿ' ಮುಂತಾದ ಶ್ರುತಿ-ಸ್ಮೃತಿಸಮೂಹವನ್ನು ಅನುಸರಿಸಿ **ಇದಂ** ಮುಂದೆ ಹೇಳುವ ಸ್ತೋತ್ರವನ್ನು **ಆಹ** ಹೇಳಿದನು.

ಲಿಂಗೇರೀ- 'ಕಾಲಾಧ್ವನೋರತ್ಯಂತಸಂಯೋಗೇ ದ್ವಿತೀಯಾ' ಎಂದು ಸೂತ್ರದಲ್ಲಿ ಹೇಳಿದ ಪ್ರಕಾರ ಸಪ್ತಮ್ಯರ್ಥದಲ್ಲಿ ಬಂದ ದ್ವಿತೀಯಾದಿಂದ ನೂರುವರ್ಷಗಳಲ್ಲಿ ಒಂದು ಕ್ಷಣವೂ ತಪಸ್ಸಿನ ವಿಚ್ಛೇದವಾಗಲಿಲ್ಲವೆಂಬುದನ್ನು **ವರ್ಷಶತಂ** ಎಂಬಲ್ಲಿಯ ದ್ವಿತೀಯಾದಿಂದ ಸೂಚಿಸಿರುವರು.

**ಸ್ವಾಯಂಭುವಃ ಸ್ವದೌಹಿತ್ರಂ ವಿಷ್ಣುಂ ಯಜ್ಞಾಭಿದಂ ಮನುಃ ।**
**ಈಶಾವಾಸ್ಯಾದಿಭಿರ್ಮಂತ್ರೈಸ್ತುಷ್ಟಾವಾವಹಿತಾತ್ಮನಾ ॥**

ಎಂಬುದಾಗಿ ಈಶಾವಾಸ್ಯಭಾಷ್ಯದಲ್ಲಿ ಸ್ವಾಯಂಭುವಮನುವು ತನ್ನ ಮಗಳ (ಆಕೂತಿಯ) ಮಗನಾದ ಯಜ್ಞನಾಮಕ ವಿಷ್ಣುವನ್ನು ಏಕಾಗ್ರಮನಸ್ಸಿನಿಂದ 'ಈಶಾವಾಸ್ಯಮಿದಂ ಸರ್ವಂ' ಮುಂತಾದ ಮಂತ್ರಗಳಿಂದ ಸ್ತುತಿಸಿದನು ಎಂದು ಹೇಳಿದೆ.

ಆ ಉಪನಿಷತ್ತಿನ ಅರ್ಥವನ್ನು ಅನುವಾದ ಮಾಡುವರು -

**ಯೇನಾಽಯಂ ತಪತೇ ವಿಶ್ವಂ ವಿಶ್ವವೀರ್ಯಂ ಯತಸ್ತಪಃ ।**
**ಯೋ ಜಾಗರ್ತಿ ಶಯಾನೇಽಸ್ಮಿನ್ ನಾಽಯಂ ತಂ ವೇದ ವೇದ ಸಃ ॥೯॥**

**ಅರ್ಥ :- 1**

**ಅಯಂ** ಈ ಆದಿತ್ಯನು **ಯೇನ** ಯಾವ ಶ್ರೀಹರಿಯಿಂದ ಪ್ರೇರಿತನಾಗಿ **ವಿಶ್ವಂ** ಜಗತ್ತನ್ನು **ತಪತೇ** ಬೆಳಗುವನೋ **ವಿಶ್ವವೀರ್ಯಂ** (ವಿಶ್ವಸ್ಯ) ಜಗತ್ತಿಗೆ (ವೀರ್ಯಂ) ಶಕ್ತಿಯು ಯಾವುದರಿಂದ ದೊರೆಯುವುದೋ ಅಥವಾ (ವಿಶ್ವಂ) ಸಮಸ್ತವಾದ (ವೀರ್ಯಂ) ಪ್ರಕಾಶನಾದಿಶಕ್ತಿ ಯಾವುದರಿಂದ ದೊರೆಯುವದೋ ಅಂತಹ **ತಪಃ** ತಪಸ್ಸು **ಯತಃ ಭವತಿ** ಯಾವ ಶ್ರೀಹರಿಯಿಂದ ಆಗುವದೋ, ಮತ್ತು **ಅಸ್ಮಿನ್** ಈ ಸೂರ್ಯನು **ಶಯಾನೇ** ಮಲಗಿರುವಾಗ ಅಂದರೆ ಕಾರ್ಯ ಮಾಡದಿರುವಾಗ **ಯಃ** ಯಾವ ಶ್ರೀಹರಿಯು **ಜಾಗರ್ತಿ** ಎಚ್ಚರದಿಂದ ಇರುವನೋ (ಕಾರ್ಯ ಮಾಡುತ್ತಿರುವನೋ) **ತಂ** ಅಂತಹ ತನ್ನ ನಿಯಾಮಕನಾದ ಶ್ರೀಹರಿಯನ್ನು **ಅಯಂ** ಈ ಸೂರ್ಯನು **ನ ವೇದ** ಪೂರ್ಣವಾಗಿ ತಿಳಿದಿಲ್ಲ. ಆದರೆ **ಸಃ** ಶ್ರೀಹರಿಯು **ವೇದ** ಎಲ್ಲವನ್ನೂ ತಿಳಿದಿರುವನು. ಅಥವಾ **ತಂ** ಸೂರ್ಯನನ್ನು **ವೇದ** ಪೂರ್ಣವಾಗಿ ತಿಳಿದಿರುವನು. **ತಂ** ಅಂತಹ ಶ್ರೀಹರಿಯನ್ನು **ಧ್ಯಾಯಾಮಿ** ಧ್ಯಾನ ಮಾಡುತ್ತೇನೆ.

''ಧ್ಯೇಯಃ ಸದಾ ಸವಿತೃಮಂಡಲಮಧ್ಯವರ್ತೀ....'' ಮುಂತಾದ ಪ್ರಮಾಣದಂತೆ ಆದಿತ್ಯಾಂತರ್ಗತ ಭಾರತೀರಮಣಮುಖ್ಯಪ್ರಾಣಾಂತರ್ಗತ ಶ್ರೀಹರಿಯನ್ನು ಸ್ತೋತ್ರ ಮಾಡಿರುವರು. ''ಭಯಾತ್ ತಪತಿ ಸೂರ್ಯಃ'' ''ಭೀಷೋದೇತಿ ಸೂರ್ಯಃ'' ''ಯೋ ನ ವೇದೇತಿ ವೇದ ಚ'' ''ಯಸ್ಯ ಭಾಸಾ ಸರ್ವಮಿದಂ ವಿಭಾತಿ'' ಮುಂತಾದ ಶ್ರುತಿಗಳು ಈ ವಿಷಯದಲ್ಲಿ ಇವೆ. ಇದರಿಂದ ''ಆಪ್ರಾ ದ್ಯಾವಾ ಪೃಥಿವೀ ಅಂತರಿಕ್ಷಂ ಸೂರ್ಯ ಆತ್ಮಾ

ಜಗತಃ ತಸ್ಥುಷಶ್ಚ'' ಎಂಬ ಶ್ರುತಿಯಂತೆ ಸರ್ವಾಧಿಪತಿ ಆದಿತ್ಯನಿಗೂ ಶ್ರೀಹರಿಯು ನಿಯಾಮಕನೆಂದು ಹೇಳಿದ್ದರಿಂದ ಶ್ರೀಹರಿಯು ನಿರತಿಶಯಮಹಿಮನೆಂಬುದು ಯುಕ್ತವೆಂದು ತಿಳಿಯಬೇಕು. ಆದಿತ್ಯನು ಶ್ರೀಹರಿಯ ಅಧೀನನಾಗಿದ್ದಾನೆ.

**ಅರ್ಥ :- 2**

**ಅಯಂ** ಈ ಜೀವನು (ಜೀವಸಮೂಹವು) **ಯೇನ** ಜ್ಞಾನಸ್ವರೂಪಿಯಾದ **ಯೇನ** ಯಾವ ಶ್ರೀಹರಿಯಿಂದ ಪ್ರೇರಿತನಾಗಿ **ವಿಶ್ವಂ** ಸುಖ-ದುಃಖ ಮುಂತಾದವುಗಳನ್ನು **ತಪತೇ** ಆಲೋಚಿಸುವನು ಅಂದರೆ ಅನುಭವಿಸುವನು. 'ಪಿಪ್ಪಲಂ ಸ್ವಾದ್ವತ್ತಿ' ಎಂದು ಶ್ರುತಿ ಇದೆ. ಶ್ರೀಹರಿಯಿಂದ ನಿಯತನಾಗಿ ಅನುಭವಿಸುವನು ಎಂಬುದಕ್ಕೆ ಏನು ಪ್ರಮಾಣ? ಎಂದರೆ ಹೇಳುತ್ತಾರೆ- **ವಿಶ್ವವೀರ್ಯಂ** ಸುಖ-ದುಃಖದ ವೀರ್ಯವಾದ (ಕಾರಣವಾದ) **ತಪಃ** ಅನುಭವವು **ಯತಃ ಭವತಿ** ಯಾವನಿಂದ ಬರುವದೋ 'ಏಷ ಹ್ಯೇವಾನಂದಯತಿ' ಜೀವನನ್ನು ಸುಖಪಡಿಸುವವನು ಎಂದರ್ಥ. **ಯತಃ** ಏತೀತಿ ಯನ್ ತಸ್ಯ **ಯತಃ** ನಾನಾಯೋನಿಗಳಲ್ಲಿ ಹೋಗುವ ಜೀವನಿಗೆ **ತಪಃ** ಅನುಭವವು **ವಿಶ್ವವೀರ್ಯಂ** (ವಿಶ್ವಸ್ಯ) ಭಗವಂತನ (ವೀರ್ಯಂ) ವೀರ್ಯವೇ ಕಾರಣವಾಗಿವುಳ್ಳದ್ದು. **ಯೇನ** ಯಾವ ಭಗವಂತನಿಂದ **ಅಯಂ ಈ** ಜೀವನು **ತಪತೇ** ಆನಂದಾದಿಗಳನ್ನು ಅನುಭವಿಸುವನು. ಇದು ಅಸಂಭಾವಿತವಲ್ಲ ಎಂದು ತಿಳಿಸುತ್ತಾರೆ. **ಯತಃ** ಯಾವ ಕಾರಣ **ವಿಶ್ವಂ** ಜಗತ್ತು ವಿಶ್ವವೀರ್ಯಂ 'ವಿಶ್ವಂ ವಿಷ್ಣುಃ' ಎಂದಿರುವದರಿಂದ (ವಿಶ್ವ) ವಿಷ್ಣುವಿನಿಂದ **ವಿ** ವಿವಿಧವಾಗಿ **ಈರ್ಯಂ** ಪ್ರೇರ್ಯವಾಗಿದೆ. ಅಂದಮೇಲೆ ಜಗದಂತರ್ಗತವಾದ ಜೀವಸಂಘದ **ತಪಃ** ಆನಂದಾನುಭವವು ಅವನಿಂದಲೇ ಪ್ರೇರ್ಯವಾದುದು ಎಂದು ಭಾವ.

ವೈಭವಾತ್ ಮತ್ತೆ ಹೇತುಗಳನ್ನು ಹೇಳುವರು :- **ಅಸ್ಮಿನ್** ಜೀವಸಮೂಹವು **ಶಯಾನೇ ಸತಿ** ನಿದ್ರಿಸುತ್ತಿರಲು **ಯಃ** ಯಾವ ಶ್ರೀಹರಿಯು **ಜಾಗರ್ತಿ** ನಿದ್ರೆಯಿಲ್ಲದೇ ಎಚ್ಚರ ಇರುವನು. **ಅಯಂ** ಈ ಜೀವಸಮೂಹವು **ತಂ** ನಿಯಾಮಕನಾದ ಶ್ರೀಹರಿಯನ್ನು **ನ ವೇದ** ತಿಳಿದಿಲ್ಲವೋ **ಸಃ** ಆ ಶ್ರೀಹರಿಯು **ವೇದ** ಜೀವನನ್ನೂ ಎಲ್ಲವನ್ನೂ ತಿಳಿದಿರುವನು. (ಸತಾ ಸೌಮ್ಯ ತದಾ ಸಂಪನ್ನೋ ಭವತಿ) ಸುಷುಪ್ತಿಯಲ್ಲಿ ಪ್ರಾಜ್ಞನಿಂದ ಜೀವನು ಸಂಗತನಾಗುವನು.

'ನ ತತ್ರ ಚಕ್ಷುರ್ಗಚ್ಛತಿ ನ ವಾಗ್ಗಚ್ಛತಿ ನೋ ಮನಃ' 'ನ ವಿದ್ಮ ನ ವಿಜಾನೀಮಃ' ಎಂಬ ಶ್ರುತಿಯು ಭಗವಂತನು ಜೀವಾಜ್ಞೇಯನಾಗಿದ್ದಾನೆ ಎಂದು ತಿಳಿಸುವದು. 'ಯಃ ಸರ್ವಜ್ಞಃ' ಎಂದು ಶ್ರುತಿಯು ಶ್ರೀಹರಿಯು ಸರ್ವಜ್ಞನಾಗಿದ್ದಾನೆ ಎಂದು ತಿಳಿಸುತ್ತದೆ.

ಜೀವನು ನಿದ್ರಿಸುವಾಗ ತುರೀಯನಾಮಕ ಪರಮಾತ್ಮನು ಎಚ್ಚರವಾಗಿಯೇ ಇರುತ್ತಾನೆ. ಈ ವಿಷಯ ಮಾಂಡೂಕ್ಯೋಪನಿಷತ್-ಭಾಷ್ಯಗಳಲ್ಲಿ ಹೀಗೆ ಇದೆ -

ಬೀಜನಿದ್ರಾಯುತಃ ಪ್ರಾಜ್ಞಃ ಸಾ ಚ ತುರ್ಯೇ ನ ವಿದ್ಯತೇ ।
ಸ್ವಪ್ನನಿದ್ರಾಯುತಾವಾದ್ಯೌ ಪ್ರಾಜ್ಞಸ್ತ್ವ ಸ್ವಪ್ನನಿದ್ರಯಾ ।
ನ ನಿದ್ರಾಂ ನೈವ ಚ ಸ್ವಪ್ನಂ ತುರ್ಯೇ ಪಶ್ಯಂತಿ ನಿಶ್ಚಿತಾಃ ॥
(ಮಾಂಡೂಕೋಪನಿಷತ್ ಖಂ-೨)

ಸರ್ವಂ ತು ದರ್ಶಯೇನ್ಮುಕ್ತೌ ತುರೀಯಃ ಪರಮೇಶ್ವರಃ । ಇತಿ ಪ್ರತ್ಯಯೇ ।
ಸರ್ವಪ್ರದರ್ಶಕೇ ಚೈವ ತುರೀಯೇ ಸರ್ವದರ್ಶನಮ್ । ಇತಿ ಬ್ರಹ್ಮತರ್ಕೇ ।
ನಿದ್ರಾಯುತಾಸ್ತು ವಿಶ್ವಾದ್ಯಾಸ್ತದಧೀನಾ ಯತೋ ಹಿ ಸಾ । (ಮಾಂಡೂಕ್ಯಭಾಷ್ಯ)

**ಸಾರಾಂಶ :-** ವಿಶ್ವ, ತೈಜಸ, ಪ್ರಾಜ್ಞ, ತುರೀಯ ಎಂದು ನಾಲ್ಕುರೂಪಗಳು. ಮೊದಲಿನ ಮೂರು ರೂಪಗಳು ಜಾಗ್ರತ್, ಸ್ವಪ್ನ, ಸುಷುಪ್ತಿ ಈ ಮೂರು ಅವಸ್ಥೆಗಳಿಗೆ ನಿಯಾಮಕವಾಗಿವೆ. ತುರೀಯನು ಮುಕ್ತನಿಯಾಮಕನು. ಇಲ್ಲಿ ನಿದ್ರಾಶಬ್ದದಿಂದ ಅಜ್ಞಾನ ಕರೆಯಲ್ಪಡುವುದು. ಜಾಗ್ರತ್ಕಾಲದಲ್ಲಿ ಬರುವ ಸಂಶಯ, ವಿಪರೀತಜ್ಞಾನಕ್ಕೆ ಕಾರಣವಾದ ಅಜ್ಞಾನ ಕೊಡುವವನು ವಿಶ್ವ. ಅದರಂತೆ ಸ್ವಪ್ನದಲ್ಲಿ ಭ್ರಮಕಾರಣವಾದ ಅಜ್ಞಾನ ಕೊಡುವವ ತೈಜಸ. ಬೀಜನಿದ್ರಾ ಎಂದರೆ ಕೇವಲ ಸ್ವಾತಂತ್ರ್ಯಭ್ರಮಕ್ಕೆ ಕಾರಣವಾದ ಮೂಲ ಅವಿದ್ಯಾವನ್ನು ಕೊಡುವವ ಪ್ರಾಜ್ಞ. ಹೀಗಾಗಿ ವಿಶ್ವ-ತೈಜಸ-ಪ್ರಾಜ್ಞರು ಅಜ್ಞಾನನಿಯಾಮಕರಾದ್ದರಿಂದ ನಿದ್ರಾಯುತರೆಂದು ಕರೆಸಿಕೊಳ್ಳುತ್ತಾರೆ. ತುರೀಯನು ಮಾತ್ರ ಅವಸ್ಥಾತ್ರಯ ನಿಯಮನ ಮಾಡದೇ ಇದ್ದುದರಿಂದ ನಿದ್ರಾಯುತನಲ್ಲವೆಂದು ಕೆರೆಸಿಕೊಳ್ಳುವನು. ಮುಕ್ತಿಯಲ್ಲಿ ಕೇವಲ ಯಥಾರ್ಥಜ್ಞಾನ ಮಾತ್ರ ಮಾಡಿಸುವನು. ಅದೇ ಜಾಗರಣವೆಂದರ್ಥ.

♦ ತಪತಿ ಎಂದು ಹೇಳಬೇಕಾದಲ್ಲಿ ತಪತೇ ಎಂದು ಹೇಳಿದ್ದರಿಂದ **ತ್ವಂ ತಪ** ನೀನು ತಪಸ್ಸು ಮಾಡು. **ತೇ ತಪಃ** ನಿನ್ನ ತಪಸ್ಸು **ಯತಃ** ಯಾವ ನನ್ನಿಂದಲೇ ಆಗುವದು' ಎಂದು ವಿಭಾಗ ಮಾಡಿಕೊಂಡು ಅರ್ಥವನ್ನು ತಿಳಿಯಲು ಅನುಕೂಲವಾಗುತ್ತದೆ ಎಂದು ಹಾಗೆ ಪ್ರಯೋಗಿಸಿದ್ದಾರೆ ಎಂದು ತಿಳಿಯಬೇಕು.

♦ **ಯೇನ** ಯಾವನಿಂದ **ಅಯಂ** ಸ್ವಶುಭಾವಹದೈವವನ್ನು ಅನುಸರಿಸಿ **ಅಯಂ** ಆದಿತ್ಯನು **ತಪತೇ** ಪ್ರಕಾಶಗೊಳಿಸುವನೋ. ಎಂಬುದಾಗಿಯೂ ಅನ್ವಯಾರ್ಥವನ್ನು ತಿಳಿಯಬಹುದು. ''ಅಯಃ ಶುಭವಹೋ ವಿಧಿಃ'' ಎಂದು ಕೋಶವಿದೆ.

♦ ಸೂರ್ಯನ ಪ್ರಕಾಶವಿಲ್ಲದ ದೇಶ ಇಲ್ಲವೇನು ? ಎಂದರೆ ಹೇಳುವರು - ಅವಿಶ್ವಂ ಸ್ವಪ್ರಕಾಶ್ಯಮ್ ಅಸಮಸ್ತಂ ತನ್ನಿಂದ (ಸೂರ್ಯನಿಂದ) ಪ್ರಕಾಶ್ಯವಾದುದು ಎಲ್ಲವೂ ಅಲ್ಲ. ಏಕೆ ಸೂರ್ಯನ ಶಕ್ತಿ ಸಂಕೋಚ ಮಾಡಲ್ಪಟ್ಟಿತು ? ಎಂದರೆ ಹೇಳುವರು - ಯತಃ ತಪಃ । 'ತಪೋ ಬ್ರಹ್ಮ' ಎಂದು ಶ್ರುತಿ ಇರುವದರಿಂದ ಯಾವ ಕಾರಣ **ತಪಃ** ಬ್ರಹ್ಮನು

**ವಿಶ್ವವೀರ್ಯಂ** ಸಮಸ್ತಶಕ್ತಿಯುಳ್ಳವನು. ಆದ್ದರಿಂದ ಸೂರ್ಯನ ಶಕ್ತಿ ಅಸಮಸ್ತವೆಂದು ಭಾವ. **ವಿಶ್ವವೀರ್ಯಂ** ಚೇತನ ಜಗತ್ತಿಗೆ ಮೋಕ್ಷಾದಿಗಳನ್ನು ಹೊಂದುವ ಸಾಮರ್ಥ್ಯವನ್ನು ಕೊಡುವ **ತಪಃ** ಜ್ಞಾನವು **ಯತಃ** ಯಾವ ಶ್ರೀಹರಿಯಿಂದ **ಭವತಿ** ಆಗುವದು. 'ಅಜ್ಞಾನಾಂ ಜ್ಞಾನದೋ ವಿಷ್ಣುಃ' ಎಂದಿದೆ. 'ಯ ಆದಿತ್ಯಮಂತರೋ ಯಮಯತಿ' 'ಯದಾದಿತ್ಯಗತಂ ತೇಜಃ' ಎಂಬ ಶ್ರುತಿ-ಸ್ಮೃತಿಗಳು ಇವೆ. ವಿಶ್ವವೀರ್ಯಂ **ವಿಶ್ವಸ್ಯ** ಜಗತ್ತಿನ ಸೃಷ್ಟಿಯಲ್ಲಿ (ಸೃಷ್ಟಿ ಮಾಡಲು) **ವೀರ್ಯಂ** ಸಾಮರ್ಥ್ಯಪ್ರದವಾದ **ತಪಃ** ತಪಸ್ಸು ಜ್ಞಾನವು **ಯತಃ** ಯಾವ ಹರಿಯಿಂದ ಚತುರ್ಮುಖನಿಗೆ ಬರುವದೋ. ಹೀಗೂ ಅರ್ಥ ಮಾಡಿರುವರು. ॥೯॥

ರಾಜರು ಮೊದಲಾದವರು ಹೊರಗಿದ್ದು ಪ್ರಜೆಗಳನ್ನು ನಿಯಮಿಸುವಂತೆ ಪರಮಾತ್ಮ ಹೊರಗಿದ್ದು ಸೂರ್ಯನನ್ನು ಪ್ರೇರಿಸುತ್ತಾನೆ ಎಂದಲ್ಲ. ಕಿಂತು ಸೂರ್ಯನ ಒಳಗೂ ಇದ್ದು ಪ್ರೇರಕನಾಗಿದ್ದಾನೆ ಎಂದು ಹೇಳುವರು -

ಛಲಾರೀ ಃ- ಉಪದಿಷ್ಟವಾದ ತತ್ವವು ವೈರಾಗ್ಯವುಳ್ಳವರಿಗೇನೇ ಹೃದಯದಲ್ಲಿ ನಿಲ್ಲುವದು. ಬೇರೆಯವರಿಗೆ ನಿಲ್ಲುವುದಿಲ್ಲವೆಂಬ ತತ್ವ ತಿಳಿಸಲು ಮೊದಲು ವೈರಾಗ್ಯವನ್ನು ವಿಧಾನ ಮಾಡುವರು-

**ಆತ್ಮಾವಾಸ್ಯಮಿದಂ ವಿಶ್ವಂ ಯಜ್ಜಗತ್ಯಾಂ ಜಗನ್ಮನಃ ।**
**ತೇನ ತ್ಯಕ್ತೇನ ಭುಂಜೀಥಾ ಮಾ ಗೃಧಃ ಕಸ್ಯಚಿದ್ಧನಮ್ ॥೧೦॥**

**ಜಗತ್ಯಾಂ** ಭಗವದಧೀನವಾದ ಪ್ರಕೃತಿಯಲ್ಲಿ **ಯತ್ ಜಗತ್** ನಿತ್ಯವಾದ ಅನಿತ್ಯವಾದ, ಜಂಗಮವಾದ, ಸ್ಥಾವರವಾದ ಯಾವ ಎಲ್ಲವೂ ಆಶ್ರಿತವಾಗಿದೆಯೋ **ಇದಂ ವಿಶ್ವಂ** ಅದೆಲ್ಲವೂ **ಆತ್ಮಾವಾಸ್ಯಂ** ಆತತಗುಣನಾದ ಶ್ರೀಹರಿಯ ಆವಾಸಕ್ಕೆ ಯೋಗ್ಯವಾಗಿದೆ. **ಹೇ ಮನಃ** ಎಲೋ ಮನಸ್ಸೇ ! **ತ್ವಂ** ನೀನು **ತೇನ** ಪರಮಾತ್ಮನಿಂದ **ತ್ಯಕ್ತೇನ** ನಿನಗಾಗಿ ಕೊಡಲ್ಪಟ್ಟಿರುವ ಧನಾದಿಗಳಿಂದ, ಯದೃಚ್ಛಾಲಬ್ಧವಾದುದರಿಂದ ಎಂದರ್ಥ. **ಭುಂಜೀಥಾಃ** ಭೋಗ ಮಾಡು. ಭೋಜನಾದಿಗಳನ್ನು ಮಾಡು. ಶರೀರಪಾಲನೆ ಮಾಡು ಎಂದು ಕೆಲವರು ಅರ್ಥ ಮಾಡಿರುವರು.

ಸತ್ಯಃ- ಭುಂಜೀಥಾಃ ಎಂಬುದಕ್ಕೆ ಪಾಲನ ಎಂದು ಅರ್ಥ ಮಾಡಿದರೆ ಆತ್ಮನೇ ಪದವಿರೋಧ ಬರುತ್ತದೆ. ''ಭುಜೋಽನವನೇ'' (ಸಿ.ಕೌ. ೨೭೩೭) ಇತಿ ನಿಷೇಧಾತ್. ಅವನ ಎಂದರೆ ರಕ್ಷಣೆ ಎಂದು ಅರ್ಥ. ಈ ಅರ್ಥದಿಂದ ಭಿನ್ನವಾದ ಅರ್ಥದಲ್ಲಿ ಭುಜ ಧಾತು ಆತ್ಮನೇಪದಿಯಾಗುತ್ತದೆ. ಪ್ರಕೃತವಾದರೋ ಪಾಲನ ಎಂಬ ಅರ್ಥವನ್ನು ಮಾಡಿದರೆ ಪರಸ್ಮೈಪದಿಯಾಗಬೇಕಿತ್ತು . ಆತ್ಮನೇಪದಿಯಲ್ಲಿರುವುದು ವಿರುದ್ಧವಾಗುತ್ತದೆ. ಆದ್ದರಿಂದ ಈಶಾವಾಸ್ಯಟೀಕಾದಲ್ಲಿ ಹೇಳಿದಂತೆ ಭುಂಜೀಥಾಃ ಎಂಬುದಕ್ಕೆ ಭೋಗಂ ಕುರ್ಯಾಃ ಎಂದು ಅರ್ಥವನ್ನು ಮಾಡಿ ಅವಿರೋಧವನ್ನು ಸಂಪಾದಿಸಬೇಕು ಎನ್ನುತ್ತಾರೆ

ಶ್ರೀಸತ್ಯಧರ್ಮರು. **ಇದಂ ಧನಂ** ಈ ಹಣವು **ಚಿದಪಿ** ಜ್ಞಾನವೂ **ಕಸ್ಯ** ದೇವರನ್ನು ಬಿಟ್ಟು ಬೇರಾರದು? ಯಾರದೂ ಅಲ್ಲ. ಎಲ್ಲವೂ ಭಗವಂತನದ್ದೇ ಆಗಿದೆ. **ಅತಃ** ಆದ್ದರಿಂದ **ಕಸ್ಯಚಿತ್** ಅಸ್ವತಂತ್ರರಾದ ರಾಜಾದಿಗಳಿಂದ **ಮಾ ಗೃಧಃ** ಏನನ್ನೂ ಇಚ್ಛಿಸಬೇಡ. ಸ್ವತಂತ್ರನಾದ ಶ್ರೀಹರಿ ಕೊಟ್ಟಿದ್ದರಲ್ಲಿಯೇ ತೃಪ್ತನಾಗು.

♦ ಮನುವು ತನ್ನ ಅಂತಃಕರಣಕ್ಕೆ ಮತ್ತು ತನಗೆ ಅಭಿಮುಖರಾದ ಜೀವರಾಶಿಗಳಿಗೂ ಶಿಕ್ಷಣೆ ಮಾಡುತ್ತಿದ್ದಾನೆ. 'ಮನನಾನ್ಮನ ಉದ್ದಿಷ್ಟಃ' ಎಂದು ಜೀವನಲ್ಲಿಯೂ ಮನಃಶಬ್ದವು ಪ್ರವೃತ್ತವಾದ್ದರಿಂದ ಹೇ ಮನಃ ಎಂದು ಇಬ್ಬರಿಗೂ ಸಂಬೋಧನವಾಗಿದೆ. ಅಥವಾ **ಕಸ್ಯಚಿತ್** ಬೇರೆಯವರ **ಧನಂ** ದ್ರವ್ಯವನ್ನು **ಮಾ ಗೃಧಃ** ಅಪೇಕ್ಷಿಸಬೇಡ. **ಕಸ್ಯ** ಸುಖಾತ್ಮಕನಾದ **ಹರೇಃ** ಶ್ರೀಹರಿಯ **ಧನಂ** ಸೌಭಾಗ್ಯವನ್ನು, ಸ್ವಾತಂತ್ರ್ಯವನ್ನು **ಮಾ ಗೃಧಃ** ಇಚ್ಛಿಸಬೇಡ. ಅಂದರೆ ಐಕ್ಯವನ್ನು ಚಿಂತಿಸಬೇಡ ಎಂದು ಅರ್ಥ. 'ಸಾಮ್ಯಂ ವಾ ನೈವ ಚಿಂತಯೇತ್' ಎಂದು ಪ್ರಮಾಣವಿರುವುದರಿಂದ ಎಂದು ಭಾವ. **ಕಸ್ಯಚಿತ್** ಬ್ರಹ್ಮಾದಿಗಳ **ಧನಂ** ಅವರ ಸ್ಥಾನಾದಿಗಳನ್ನು **ಮಾ ಗೃಧಃ** ಇಚ್ಛಿಸಬೇಡ ಎಂದರ್ಥ. 'ಕಾಮೇನ ಮೇ ಕಾಮ ಆಗಾತ್' ಎಂದಿರುವುದರಿಂದ ಅವರ ಇಚ್ಛೆಗೆ ಅನುಕೂಲವಾದ ಇಚ್ಛೆಯುಳ್ಳವನಾಗು ಎಂದು ಭಾವ. ಸ್ವಾರ್ಥಕ್ಕಾಗಿ **ಕಸ್ಯಚಿತ್ ಧನಂ** ಯಾರ ಧನವನ್ನೂ **ಮಾ ಗೃಧಃ** ಇಚ್ಛಿಸಬೇಡ. 'ತೇನ ತ್ಯಕ್ತೇನ ಭುಂಜೀಥಾಃ' ಅವರು ಕೊಟ್ಟಿದ್ದನ್ನು ಅನುಭವಿಸು ಹೀಗೂ ಅರ್ಥ ಮಾಡುವರು. **ಇದಂ ಸರ್ವಂ** ಇದೆಲ್ಲವೂ **ಕಸ್ಯ** ಸುಖರೂಪನಾದ **ಮಾಗೃಧಃ ಮಾ** ಲಕ್ಷ್ಮಿಯ **ಗೃಧಃ** ಆಕಾಂಕ್ಷೆಯುಳ್ಳ ಭಗವಂತನ **ಚಿದೇವ** ಧನಂ ಧನವಾಗಿದೆ. ಆದ್ದರಿಂದ ಅವನು ಕೊಟ್ಟದ್ದನ್ನು ಮಾತ್ರ ಉಣ್ಣು ಎಂದು ಹೀಗೂ ಶ್ರೀಸತ್ಯಧರ್ಮರು ವ್ಯಾಖ್ಯಾನಿಸಿದ್ದಾರೆ.

ಸತ್ಯ ಃ- ಭಗವಂತನು ಎಲ್ಲಕಡೆಗೆ ಇರುವದಾದರೆ ಏಕೆ ಕಾಣುವದಿಲ್ಲ ? ಎಂದರೆ, ಅವನ ಲಕ್ಷಣ ಹೀಗಿದೆ ಎಂದು ಹೇಳುವರು - ಛಲಾರೀ ಃ- ಈ ರೀತಿಯಾಗಿ ವೈರಾಗ್ಯವನ್ನು ಉಪದೇಶಿಸಿ ಪ್ರಕೃತದಲ್ಲಿ ಶ್ರೀಹರಿಯನ್ನು ಭಜಿಸು ಎಂದು ಹೇಳುವರು- ಲಿಂಗೇರೀ ಃ- ಲಕ್ಷಣವಿಲ್ಲದೇ ವಸ್ತುಸಿದ್ಧಿಯಾಗುದಿಲ್ಲವಾದ್ದರಿಂದ ಭಗವಂತನ ಲಕ್ಷಣ ಹೇಳುವರು-

**ಯಂ ನ ಪಶ್ಯಂತಿ ಪಶ್ಯಂತಂ ಚಕ್ಷುರ್ಯಸ್ಯ ನ ರಿಷ್ಯತಿ ।**
**ತಂ ಭೂತನಿಲಯಂ ದೇವಂ ಸುಪರ್ಣಮುಪಧಾವತ ॥೧೦॥**

**ಪಶ್ಯಂತಂ** ಎಲ್ಲವನ್ನು ಪ್ರತ್ಯಕ್ಷವಾಗಿಯೇ ತಿಳಿಯುವ **ಯಂ** ಯಾವ ಶ್ರೀಹರಿಯನ್ನು **ಯೋಗಿನೋಽಪಿ** ಯೋಗಿಗಳು ಕೂಡಾ **ನ ಪಶ್ಯಂತಿ** ಅವನ ಅನುಗ್ರಹವಿಲ್ಲದೇ ಅಪರೋಕ್ಷೀಕರಿಸಿಕೊಳ್ಳಲಾರರು. ಅವನ ಅನುಗ್ರಹವಿದ್ದರೂ ಸಾಕಲ್ಯೇನ ತಿಳಿಯಲಾರರು. 'ನ ಚಕ್ಷುಷಾ ಪಶ್ಯತಿ ಕಶ್ಚಿದೇನಂ' ಎಂಬ ಶ್ರುತಿಯು ಇದೇ ವಿಷಯವನ್ನು ಪ್ರತಿಪಾದಿಸುತ್ತದೆ. **ಯಸ್ಯ** ಶ್ರೀಹರಿಯ ಅಥವಾ ಜ್ಞಾನಾತ್ಮಕನ **ಚಕ್ಷುಃ** ಜ್ಞಾನವು **ನ ರಿಷ್ಯತಿ** ನಾಶವಾಗುವದಿಲ್ಲ

**ತಂ ಭೂತನಿಲಯಂ** ಸರ್ವಭೂತಗಳ ಆವಾಸಸ್ಥಾನನಾದ **ಸುಪರ್ಣಂ** ಚೆನ್ನಾಗಿ ಪರಮಾನಂದವುಳ್ಳ, ಸುಖಪೂರ್ಣನಾದ ಅಥವಾ ಶರೀರವೆಂಬ ವೃಕ್ಷದಲ್ಲಿ ಗರುಡಪಕ್ಷಿರೂಪದಿಂದಿರುವ **ದೇವಂ** ಕ್ರೀಡಾದಿಗುಣವಿಶಿಷ್ಟನಾದ **ತಂ** ನಾರಾಯಣನನ್ನು **ಉಪಧಾವತ** ಸ್ಮರಿಸಿರಿ, ಭಜಿಸಿರಿ.

◆ ಘಟದ ನಾಶವಾದರೆ ದೇವದತ್ತನಿಗೆ ಆ ಘಟವಿಷಕವಾದ ಚಾಕ್ಷುಷಜ್ಞಾನವು ನಷ್ಟವಾದಂತೆ ಈಶ್ವರನಿಗೂ ಜ್ಞಾನನಾಶವಾಗುವದಿಲ್ಲ ಎಂದರ್ಥ. ಜ್ಞಾನವು ಭಗವಂತನ ಸ್ವರೂಪವಾಗಿದೆ. ಆದ್ದರಿಂದ ವಿಷಯದ ನಾಶವಾದರೂ ಭಗವಂತನ ಜ್ಞಾನದ ನಾಶವಾಗುವುದಿಲ್ಲ. ಪ್ರಕಾಶ್ಯವಾದ ವಸ್ತು ನಾಶವಾದಾಗ ಸೂರ್ಯಪ್ರಕಾಶ ನಾಶವಾಗುವದಿಲ್ಲ. ವಿಷಯನಾಶದಿಂದ ವೃತ್ತಿಜ್ಞಾನವು ನಷ್ಟವಾಗುತ್ತದೆ. ವೃತ್ತಿಜ್ಞಾನವು ಈಶ್ವರನಿಗೆ ಇಲ್ಲ. ಸ್ವರೂಪಭೂತವಾದ ಜ್ಞಾನವೇ ದೇವರಿಗೆ ಇದೆ. ಆದ್ದರಿಂದ ಆ ಸ್ವರೂಪಭೂತವಾದ ಜ್ಞಾನ ಎಂದಿಗೂ ಕ್ಷೀಣವಾಗುವುದಿಲ್ಲ. ಪ್ರತಿಹತವಾಗುವದಿಲ್ಲ. ಛಲಾರೀ ಆಚಾರ್ಯರು ಈ ವ್ಯಾಖ್ಯಾನ ಮಾಡಿದ್ದಾರೆ. ಈ ವಿಷಯದಲ್ಲಿ 'ನ ಹಿ ದ್ರಷ್ಟುಃ ದೃಷ್ಟೇಃ ವಿಪರಿಲೋಪಃ' 'ತುರೀಯಂ ತತ್ಸರ್ವದೃಕ್ ಸದಾ' ಮುಂತಾಗಿ ಪ್ರಮಾಣಗಳಿವೆ.

ಸತ್ಯ:- ಮನುವು ತನ್ನ ಮನಸ್ಸನ್ನು ಕುರಿತು ಮತ್ತು ಮೋಕ್ಷಯೋಗ್ಯಜೀವರನ್ನು ಕುರಿತು ಈ ರೀತಿಯಾಗಿ ಹೇಳುತ್ತಿದ್ದಾನೆ. ಶ್ರೀಸತ್ಯಧರ್ಮರು ಇಲ್ಲಿ ಒಂದು ಶಂಕೆಯನ್ನು ಮಾಡಿಕೊಂಡು ಸಮಾಧಾನ ಹೇಳುತ್ತಾರೆ.

ಶಂಕೆ :- ಈ ಶ್ಲೋಕದಲ್ಲಿ ಉಪಧಾವತ ಎಂಬ ಕ್ರಿಯಾಪದವು ಬಹುವಚನವಾಗಿದೆ. ತನ್ನ ಮನಸ್ಸು ಒಂದೇ ಆಗಿದೆ. ಆದ್ದರಿಂದ ಬಹುವಚನ ಹೇಗೆ ಉಪಪನ್ನವಾಗುತ್ತದೆ?

ಸಮಾಧಾನ :- ತನ್ನ ಮನಸ್ಸು ಒಂದೇ ಆಗಿದ್ದರೂ ಮನೋವೃತ್ತಿಗಳು ಅನೇಕವಾಗಿವೆ. ಮನೋವೃತ್ತಿವಿವಕ್ಷೆಯಿಂದ ಉಪಧಾವತ ಎಂಬ ಬಹುವಚನವು ಯುಕ್ತವಾಗಿದೆ.

ಶಂಕೆ :- ಸುಪರ್ಣ ಎಂದರೆ ಗರುಡ ಎಂಬ ಅರ್ಥ ಪ್ರಸಿದ್ಧವಾಗಿದೆ. ಆ ಅರ್ಥವನ್ನು ಬಿಟ್ಟು ಪರಮಾತ್ಮ ಎಂದು ಅರ್ಥವನ್ನು ಮಾಡುವುದು ಸರಿಯೇ?

ಸಮಾಧಾನ :- 'ವಿ ಸುಪರ್ಣಃ...' ಎಂಬ ಋಕ್ಕಿನ ಭಾಷ್ಯವನ್ನು ಬರೆಯುತ್ತ 'ಸುಪರ್ಣಃ ಪರಾನಂದಾತ್'' ಎಂದು ಶ್ರೀಮದಾಚಾರ್ಯರು ಹೇಳುತ್ತಾರೆ. ಈ ಭಾಷ್ಯಕ್ಕೆ ಟೀಕಾಚಾರ್ಯರು ''ಸು ಅತಿಶಯೇನ ಪರೋ ಣಃ ಆನಂದೋ ಅಸ್ಯ ಇತಿ' ಎಂದು ಟೀಕೆಯನ್ನು ರಚಿಸಿದ್ದಾರೆ. ಈ ಭಾಷ್ಯ ಮತ್ತು ಟೀಕೆಗಳನ್ನು ಗಮನಿಸಿದಾಗ ಅತಿಶಯೇನ ಉತ್ತಮವಾದ ಆನಂದ ಉಳ್ಳವನು ಎಂದು ಅರ್ಥವಾಗುತ್ತದೆ. ಈ ಆನಂದ ಉಳ್ಳವನು ಪರಮಾತ್ಮನೇ ಆಗಿದ್ದಾನೆ. ಹೀಗಾಗಿ ಮುಖ್ಯವಾಗಿ ಸುಪರ್ಣಶಬ್ದವಾಚ್ಯನಾದವನು

ವಿಷ್ಣುವೇ ಆಗಿದ್ದಾನೆ ಎಂದು ತಿಳಿದು ಬರುತ್ತದೆ. 'ಣೋ ಹಿ ನಿರ್ವೃತಿವಾಚಕಃ' ಎಂದಿರುವುದರಿಂದ ಣಕಾರವು ಸುಖವಾಚಕವಾಗಿದೆ ಎಂದು ತಿಳಿಯಬೇಕು.

♦ ಅಥವಾ **ಸುಪರ್ಣಂ ಉಪಧೌ ಅತ** ಎಂದು ವಿಭಾಗ ಮಾಡಿಕೊಳ್ಳಬೇಕು. **ನ** ಎಂಬುದನ್ನು ಇಲ್ಲಿಯೂ ಅನ್ವಯಿಸಿ ಕೊಳ್ಳಬೇಕು. ಹೀಗೆ ಮಾಡಿಕೊಂಡಾಗ **ಹೇ ಮನಃ ಸುಪರ್ಣಂ ದೇವಂ ಉಪಧೌ ನ ಅತ** ಎಂದು ಅನ್ವಯ ಸಿದ್ಧವಾಗುತ್ತದೆ.

♦ ಉಪಧಿ ಎಂಬ ಶಬ್ದಕ್ಕೆ ವ್ಯಾಜ ನಿಮಿತ್ತ ಎಂದು ಅರ್ಥ. ''ಉಪಧಿ ರ್ವ್ಯಾಜಚಕ್ರಯೋಃ'' ಎಂಬ ವಿಶ್ವಕೋಶವು ಉಪಧಿ ಎಂಬ ಶಬ್ದಕ್ಕೆ ನಿಮಿತ್ತ ಎಂದು ಅರ್ಥವನ್ನು ಹೇಳುತ್ತದೆ. ಆದ್ದರಿಂದ ಈ ವಾಕ್ಯಕ್ಕೆ ಹೀಗೆ ಅರ್ಥವನ್ನು ಹೇಳಬೇಕು.

♦ **ಹೇ ಮನಃ ಹೇ** ಮನವೇ **ಸುಪರ್ಣಂ ದೇವಂ** ಹಂಸರೂಪಿಯಾದ ಭಗವಂತನನ್ನು **ಉಪಧೌ** ಫಲಾದ್ಯಭಿಲಾಷರೂಪ ನಿಮಿತ್ತವಿದ್ದಾಗ **ನ ಅತ ನ ಗಚ್ಛ** ಅವನನ್ನು ಕುರಿತು ಹೋಗಬೇಡ. ಅಂದರೆ ಫಲಾಪೇಕ್ಷೆಯಿಂದ ಪರಮಾತ್ಮನನ್ನು ಸೇವಿಸಬೇಡ ಎಂದು ಅರ್ಥ. ''ನಿರೌಪಧಂ ಮೇ' ಎಂಬ ತಾತ್ಪರ್ಯನಿರ್ಣಯದ ವಚನವು ಇದೇ ವಿಷಯವನ್ನು ತಿಳಿಸುತ್ತದೆ.

♦ ಸುಪರ್ಣ ಎಂಬ ಶಬ್ದಕ್ಕೆ ಋಗ್ಭಾಷ್ಯದಂತೆ ಒಂದು ಅರ್ಥವನ್ನು ತಿಳಿದಾಯಿತು. ಮತ್ತೊಂದು ರೀತಿಯಾಗಿಯೂ ಅರ್ಥವನ್ನು ಹೇಳಬಹುದು. ಶೋಭನಂ ಪರ್ಣಂ ಯಸ್ಯ ಸಃ ತಂ ಸುಪರ್ಣಂ ಎಂಬುದಾಗಿ ವಿಗ್ರಹ ಮಾಡಬೇಕು. **ಸು** ಶೋಭನವಾದ **ಪರ್ಣಂ** ವಟಪತ್ರವು ಯಾರಿಗೆ ಹಾಸಿಗೆಯಾಗಿ ಇದೆಯೋ ಅಂಥ ಪರಮಾತ್ಮನನ್ನು ನಿಷ್ಕಾಮವಾಗಿ ಸೇವಿಸಿರಿ. ಸಕಾಮವಾಗಿ ಸೇವಿಸಬೇಡಿರಿ. ಎಂದು ಅರ್ಥವನ್ನು ತಿಳಿಯಬೇಕು.

♦ ಅಥವಾ ಸುಪರ್ಣಃ ವಾಹನತ್ವೇನ ಅಸ್ಯ ಅಸ್ತಿ ಇತಿ ಸುಪರ್ಣಃ ತಂ ಸುಪರ್ಣಂ ಎಂಬುದಾಗಿ ವಿಗ್ರಹ ಮಾಡಿಕೊಳ್ಳಬೇಕು.

ಅಂದರೆ ಗರುಡನು ಯಾರಿಗೆ ವಾಹನನಾಗಿ ಇರುವನೋ ಅಂಥ ವಿಷ್ಣು ಎಂದು ಸುಪರ್ಣ ಶಬ್ದದ ಅರ್ಥ. ಗರುಡನನ್ನು ವಾಹನವನ್ನಾಗಿ ಪಡೆದ ವಿಷ್ಣುವನ್ನು ನಿಷ್ಕಾಮವಾಗಿ ಭಜನೆ ಮಾಡಿರಿ. ಸಕಾಮವಾಗಿ ಚಿಂತಿಸಬೇಡಿರಿ. ಎಂದು ಅರ್ಥವನ್ನು ಮಾಡಿಕೊಳ್ಳಬೇಕು.

ಲಿಂಗೇರೀ :- ಒಟ್ಟಿನಲ್ಲಿ ತನ್ನ ಪ್ರಸಾದವಿಲ್ಲದೇ ಸಾಕಲ್ಯೇನ ಬ್ರಹ್ಮಾದ್ಯಜ್ಞೇಯತ್ವ, ಸರ್ವದಾ ಸರ್ವಸಾಕ್ಷಿಕತ್ವ, ಸರ್ವಭೂತಾಶ್ರಯತ್ವ, ಪೂರ್ಣಸುಖತ್ವ ಮುಂತಾದ ಲಕ್ಷಣಗಳಿಂದ ಪರಮಾತ್ಮನೆಂಬ ವಸ್ತು ಸಿದ್ಧನಾಗುವುದರಿಂದ ಸ್ಥಾವರಜಂಗಮಾತ್ಮಕ ಸಮಸ್ತಜಗತ್ತಿಗೆ ಭಗವದಾವಾಸ್ಯತ್ವವು ನಿಷ್ಕಂಟಕವಾಗಿ ಸಿದ್ಧವಾಯಿತು ಎಂದು ಸೂಚಿಸಿರುವರು.

◆ ಈಶಾವಾಸ್ಯೋಪನಿಷತ್ತಿನಲ್ಲಿಯ ಈಶಾವಾಸ್ಯಂ ಎಂಬ ಪದದಲ್ಲಿಯ ಈಶ ಎಂಬ ಪದಕ್ಕೆ ರುದ್ರದೇವರು ಎಂದು ಹಲವರು ಅರ್ಥ ಮಾಡುತ್ತಾರೆ. ಅದು ಸರಿಯಲ್ಲ ಎಂದು ತಿಳಿಸುವುದಕ್ಕಾಗಿ ಭಾಗವತವು ಆತ್ಮಾವಾಸ್ಯಂ ಎಂದು ವ್ಯಾಖ್ಯಾನ ಮಾಡಿದೆ. ಈಶ ಎಂಬ ಪದವು ರುದ್ರದೇವರಲ್ಲಿ ಪ್ರಸಿದ್ಧವಾಗಿದ್ದರೂ ಆತ್ಮ ಎಂಬ ಪದಕ್ಕೆ ರುದ್ರದೇವರು ಎಂಬ ಅರ್ಥ ಪ್ರಸಿದ್ಧವಿಲ್ಲ. ಅಲ್ಲದೇ ಆತ್ಮ ಎಂಬ ಪದ ಪರಮಾತ್ಮನಲ್ಲಿಯೇ ಪ್ರಸಿದ್ಧವಾಗಿದೆ. ''ಆತ್ಮಬ್ರಹ್ಮಾದಯಃ ಶಬ್ದಾಃ ತಮೃತೇ ವಿಷ್ಣುಮವ್ಯಯಮ್ । ನ ವದಂತಿ...'' (ಅನು.೪.೧.೫) ಎಂದು ಪ್ರಮಾಣವಚನವು ಈ ವಿಷಯವನ್ನು ಸ್ಪಷ್ಟಪಡಿಸುತ್ತದೆ. ಆದ್ದರಿಂದ ಉಪನಿಷತ್ತಿನಲ್ಲಿಯ ಈಶ ಪದ ರುದ್ರಪರವಲ್ಲ. ಕಿಂತು ವಿಷ್ಣು ಪರ ಎಂದು ಭಾಗವತದ ಆತ್ಮಾವಾಸ್ಯಂ ಎಂಬ ವಚನದಿಂದ ತಿಳಿದು ಬರುತ್ತದೆ. ।।೧೧।।

ಸತ್ಯ :- ಜನನವಿದ್ದವರನ್ನು ಜನರು ಭಜಿಸಲಾರರು. ವಿಷ್ಣುವಿಗೆ ಜನರಂತೆ ಜನನವಿದೆ ಎಂದಾದರೆ ವಿಷ್ಣು ಭಜನೀಯನಾಗಲಾರ ಎಂಬ ಶಂಕೆಗೆ ಈ ಶ್ಲೋಕವು ಉತ್ತರ ನೀಡುತ್ತದೆ- ಛಲಾರೀ :- ಈಶ್ವರನ ಪರಿಚ್ಛೇದಶೂನ್ಯತ್ವ ಮುಂತಾದ ಮಹಿಮೆಯನ್ನು ಈ ಶ್ಲೋಕದಲ್ಲಿ ಹೇಳುವರು- ಲಿಂಗೇರೀ :- ವೈಭವದಿಂದಾಗಿ ಆ ಪರಮಾತ್ಮನ ಬೇರೆ ಬೇರೆ ಲಕ್ಷಣಗಳನ್ನು ಹೇಳುವರು-

**ಯಸ್ಯಾದ್ಯಂತೌ ನ ಮಧ್ಯಂ ಚ ನ ಪರೋ ನಾಂತರಂ ಬಹಿಃ ।**
**ವಿಶ್ವಸ್ಯಾಮೂನಿ ಯದ್ಯಸ್ಮಾದ್ ವಿಶ್ವಂ ಚ ತದೃತಂ ಮಹತ್ ।।೧೨।।**

**ಯಸ್ಯ** ಯಾವನಿಗೆ **ಆದ್ಯಂತೌ** ಉತ್ಪತ್ತಿ-ನಾಶಗಳು ಅಥವಾ ಪೂರ್ವಾವಧಿ ಉತ್ತರಾವಧಿಗಳು **ನ** ಇರುವದಿಲ್ಲ ಆದ್ದರಿಂದಲೇ **ಮಧ್ಯಂ ನ** ಉತ್ಪತ್ತಿ-ನಾಶಗಳ ಮಧ್ಯದಲ್ಲಿಯ ಸ್ಥಿತ್ಯವಸ್ಥೆಯೂ (ಸ್ಥಿತಿಯೂ) ಇಲ್ಲ. **ನ ಪರಃ** ಪರಮಾತ್ಮನಂತೆ ಸ್ವತಂತ್ರನಾದ ವ್ಯಕ್ತಿಯು ಉತ್ತಮನಾಗಲೀ ಅಧಮನಾಗಲೀ ಇಲ್ಲ. ಅಥವಾ **ಪರಃ** ವಿಪ್ರಕೃಷ್ಟನು ಅಂದರೆ ದೂರನು **ನ** ಅಲ್ಲ ಪರಮಾತ್ಮನು ವ್ಯಾಪ್ತನಾದುದರಿಂದ ದೂರನಾದವನು ಅಲ್ಲ. **ನ ಅಂತರಂ ನ ಬಹಿಃ** ಸರ್ವತ್ರ ವ್ಯಾಪ್ತನಾದದ್ದರಿಂದಲೇ ಒಳಗೆ ಇಲ್ಲ ಹೊರಗೆ ಇಲ್ಲ ಎಂದಲ್ಲ. ಒಳಗೂ ಇದ್ದಾನೆ. ಹೊರಗೂ ಇದ್ದಾನೆ. **ಯತ್** ಯಾವ ಕಾರಣ **ಯಸ್ಮಾತ್** ಯಾವನಿಂದ **ಏವಂ** ಈ ರೀತಿಯಾಗಿ **ಅಮೂನಿ** ಉತ್ಪತ್ತ್ಯಾದಿಗಳು **ವಿಶ್ವಸ್ಯ** ಪ್ರಪಂಚಕ್ಕೆ ಆಗುವವೋ **ತತ್** ಆ ಕಾರಣದಿಂದ **ವಿಶ್ವಂ** ವಿಶ್ವಸ್ವಾಮಿಯಾದ್ದರಿಂದ ವಿಶ್ವನೆಂದು ಕರೆಯಲ್ಪಡುವನು. ಅಥವಾ **ವಿಶ್ವಂ** ಎಂದರೆ ವ್ಯಾಪ್ತನೆಂದಾದರೂ ಅರ್ಥ. **ಋತಂ** ಸತ್ಯಶಬ್ದಾಭಿಧೇಯನು. **ಮಹತ್** ಬ್ರಹ್ಮನು ಗುಣಪೂರ್ಣನು ಪರಮಮಹತ್ಪರಿಮಾಣವುಳ್ಳವನು.

ಸತ್ಯ :- ನ ಪರಃ ಎಂಬಲ್ಲಿ ಮತ್ತೊಂದು ಕೃತ್ಯವನ್ನು ಹೇಳಿದ್ದಾರೆ. ಪರಮಾತ್ಮನಿಂದ ಭಿನ್ನನಾದ ಸ್ವತಂತ್ರನು ಯಾರೂ ಇಲ್ಲ ಎಂದು ಹೇಳಬೇಕಾದರೆ ನೇತರಃ ಎಂದಿಷ್ಟೇ

ಪ್ರಯೋಗಿಸಬಹುದಾಗಿತ್ತು . ನೇತರಃ ಎನ್ನದೇ ನ ಪರಃ ಎಂದು ಗ್ರಹಣ ಮಾಡಿದ್ದರಿಂದ ಪರಃ ಶತ್ರುಗಳು ಯಾರೂ ಪರಮಾತ್ಮನಿಗೆ ಇಲ್ಲ ಎಂಬ ವಿಶೇಷವನ್ನೂ ತಿಳಿಸುತ್ತಿದ್ದಾರೆ. ''ಪರೋಽರಿಪರಮಾತ್ಮನೋಃ'' ಎಂಬ ಕೋಶವು ಪರ ಎಂಬ ಶಬ್ದಕ್ಕೆ ಶತ್ರು ಎಂಬ ಅರ್ಥವನ್ನು ಹೇಳಿದೆ.

ವಿಶ್ವಸ್ಯ ಎಂಬ ಪದಕ್ಕೆ ಕೃತ್ಯವನ್ನು ಈ ರೀತಿಯಾಗಿ ತಿಳಿಸುತ್ತಾರೆ. ಜಗತಃ ಎಂದು ಹೇಳದೇ ವಿಶ್ವಸ್ಯ ಎಂದು ಹೇಳಿದ್ದರಿಂದ, **ತತ್** ಶ್ರೀಹರಿಯು **ಋತಂ** ಸತ್ಯಶಬ್ದಾಭಿಧೇಯ-ನಾಗಿದ್ದಾನೆ. ಪೂರ್ವಾವಗತನಾದಂತೆಯೇ ಸದಾ ಸ್ಥಿತನಾಗಿದ್ದಾನೆ. **ಮಹತ್** ಗುಣಪೂರ್ಣನಾಗಿದ್ದಾನೆ, ಪರಮಮಹತ್ಪರಿಮಾಣವುಳ್ಳವನು. **ಇತಿ** ಎಂದು **ವಿಶ್ವಸ್ಯ** ವಿಶ್ವಾಸ ಮಾಡಿ **ಉಪಧಾವತ** ಭಗವಂತನನ್ನು ಸೇವಿಸಿರಿ ಎಂದೂ ಅನ್ವಯ ಮಾಡಿಕೊಂಡು ಅರ್ಥ ಮಾಡಿಕೊಳ್ಳಬೇಕೆಂದು ತಿಳಿಸುತ್ತಾರೆ.

ಲಿಂಗೇರೀ :- **ವಿಶ್ವಸ್ಯಾಮೂನಿ** ಎಂಬ ಸ್ಥಳದಲ್ಲಿ **ವಿಶ್ವಸ್ಯ ಮೂಲಂ** ಎಂಬ ಪಾಠವನ್ನು ಗ್ರಹಿಸಿ **ಯತ್** ಯಾವ ವಸ್ತುವು **ವಿಶ್ವಸ್ಯ** ಜಗತ್ತಿಗೆ **ಮೂಲಂ** ಉತ್ಪಾದಕವಾಗಿದೆಯೋ ಎಂಬುದಾಗಿ ವ್ಯಾಖ್ಯಾನ ಮಾಡಿದ್ದಾರೆ.

♦ ''ಯಸ್ಯಾದ್ಯಂತೌ ನ ಮಧ್ಯಂ ಚ'' ಎಂಬ ಶ್ಲೋಕವನ್ನು ವ್ಯಾಖ್ಯಾನಿಸುತ್ತಾ ಸತ್ಯಧರ್ಮರು 'ಸರ್ವಂ ಅನ್ಯಾಧೀನಂ ನ ಇತ್ಯರ್ಥಃ' ಎಂದು ಹೇಳಿದ್ದಾರೆ. ಉತ್ಪತ್ತಿ-ನಾಶ-ಸ್ಥಿತಿಗಳು ಅನ್ಯಾಧೀನವಾಗಿ ಇಲ್ಲ. ಎಂದು ಸತ್ಯಧರ್ಮರ ಈ ವಾಕ್ಯಕ್ಕೆ ಅರ್ಥವಾಗುತ್ತದೆ. ಅನ್ಯಾಧೀನವಾದ ಉತ್ಪತ್ತಿ-ನಾಶ-ಸ್ಥಿತಿಗಳು ಇಲ್ಲ ಅಂದರೆ ಸ್ವತಂತ್ರವಾಗಿ ಉತ್ಪತ್ತಿ-ನಾಶ-ಸ್ಥಿತಿಗಳು ಇವೆ ಎಂದು ಭ್ರಮ ಬರಲು ಅವಕಾಶವಿದೆ. ಕಾರಣ ಸತ್ಯಧರ್ಮರ ವಾಕ್ಯಕ್ಕೆ ಹಾಗೆ ಅರ್ಥವನ್ನು ತಿಳಿಯಬಾರದು. ಕಿಂತು ಪರಾಧೀನವಾದ ಸೃಷ್ಟ್ಯಾದಿಗಳಂತೂ ಭಗವಂತನಿಗೆ ಇಲ್ಲವೇ ಇಲ್ಲ. ಸ್ವತಂತ್ರನಾದ ವ್ಯಕ್ತಿ ಸೃಷ್ಟ್ಯಾದಿದೋಷಗಳ ಸಂಬಂಧ ತನಗೆ ಆಗುವಂತೆ ಮಾಡಿಕೊಳ್ಳಲಾರ. ಆದ್ದರಿಂದ ಸ್ವತಂತ್ರವಾಗಿಯೂ ಉತ್ಪತ್ತ್ಯಾದಿಗಳು ಭಗವಂತನಿಗೆ ಇವೆ ಎಂದು ತಿಳಿಯುವುದು ಸಮಂಜಸವಾಗಲಾರದು.

ಚೇತನಾಚೇತನದಲ್ಲಿರುವ ಉತ್ಪತ್ತ್ಯಾದಿಗಳು ಭಗವಂತನ ಅಧೀನವಾಗಿವೆ. ಆದ್ದರಿಂದ ಆ ಉತ್ಪತ್ತ್ಯಾದಿಗಳೆಲ್ಲವೂ ಭಗವಂತನಿಗೂ ಇವೆ ಎಂದು ಕೆಲವರು ಹೇಳುತ್ತಾರೆ. ಅದು ಸರಿಯಲ್ಲ. ಈ ಶ್ಲೋಕದಲ್ಲಿಯೇ ಆದ್ಯಂತೌ ನ ಎಂದು ಸ್ಪಷ್ಟವಾಗಿ ಆದ್ಯಂತಾದಿಗಳು ಭಗವಂತನಿಗೆ ಇಲ್ಲವೆಂದು ನಿಷೇಧ ಮಾಡುತ್ತಿದ್ದಾರೆ. ಅಲ್ಲದೇ ವಿಶ್ವವೆಲ್ಲ ತನ್ನ ಅಧೀನ-ವಾಗಿದೆ. ಆ ವಿಶ್ವಕ್ಕೆ ಸಂಬಂಧಿಸಿದ ಉತ್ಪತ್ತ್ಯಾದಿದೋಷಗಳನ್ನು ಬಿಡಲು ಸ್ವಾತಂತ್ರ್ಯವಿರುವದರಿಂದ ತನಗೆ ಉತ್ಪತ್ತ್ಯಾದಿಗಳಿಲ್ಲದಂತೆ ಮಾಡಿಕೊಂಡಿರುವನು.

ಉಳಿದವರಿಗೆ ಅವರವರ ಕರ್ಮಾನುಸಾರ ಉತ್ತಮತ್ವಾದಿಗಳನ್ನು ಕೊಟ್ಟಿರುವನು ಎಂದು ತಿಳಿಯಬೇಕು. ॥೧೨॥

ಸತ್ಯ :- ನನ್ನಿಂದ ಉಪಾಸ್ಯನಾದ ರಮಾರಮಣನು ಅವ್ಯಭಿಚಾರಿಸದ್ಗುಣನು ಎಂದು ಈಗ ಹೇಳುವರು- ಥಲಾರೀ :-ಬ್ರಹ್ಮನ ಜನ್ಮಾದಿಕರ್ತೃತ್ವರೂಪವಾದ ಮಹಿಮೆಯನ್ನು ಹೇಳುವರು- ಲಿಂಗೇರೀ :-'ವಿಶ್ವಸ್ಯ ಮೂಲಂ' ಎಂದು ಹೇಳಿದ ಜಗಜ್ಜನ್ಮಾದಿಕರ್ತೃತ್ವವನ್ನು ವಿವರಿಸುವರು -

**ಸ ವಿಶ್ವಕಾಯಃ ಪುರುಹೂತ ಈಶಃ ಸತ್ಯಂ ಪರಂಜ್ಯೋತಿರಜಃ ಪುರಾಣಃ ।**
**ಧತ್ತೇಽಸ್ಯ ಜನ್ಮಾದ್ಯಜಯಾಽಽತ್ಮಶಕ್ತ್ಯಾ ತಾಂ ವಿದ್ಯಯೋದಸ್ಯ ನಿರೀಹ ಆಸ್ತೇ ॥**

**ವಿಶ್ವಕಾಯಃ** ೧) ವ್ಯಾಪ್ತವಾದ ಶರೀರ ಉಳ್ಳವನು, ೨) ಪ್ರಲಯೇ ವಿಶ್ವಂ ಕಾಯೇ ಯಸ್ಯ ಸಃ ಪ್ರಲಯಕಾಲದಲ್ಲಿ ಸಮಸ್ತಪ್ರಪಂಚವನ್ನು ತನ್ನ ದೇಹದಲ್ಲಿ ಧರಿಸಿದವನು, ೩) ಸೃಷ್ಟೌ ವಿಶ್ವಮೇವ ಕಾಯಃ ಯಸ್ಯ ಸಃ ವಿಶ್ವಕಾಯಃ ಸೃಷ್ಟಿಕಾಲದಲ್ಲಿ ಸಮಸ್ತಪ್ರಪಂಚವನ್ನು ತನ್ನ ದೇಹವಾಗಿಸಿಕೊಂಡಿರುವ (ತನ್ನಿಂದ ಸೃಷ್ಟವಾದ ಜಗತ್ತಿನಲ್ಲಿ ಭಗವಂತ ಪ್ರವೇಶಿಸಿರುವದರಿಂದ ಪ್ರಪಂಚವು ಭಗವಂತನ ಶರೀರ ಎಂದು, ಆ ಪ್ರಪಂಚ ಪರಮಾತ್ಮನ ಪ್ರತಿಮೆ ಎಂದು ತಿಳಿಯಬೇಕು.) ೪) ನಿಯಮ್ಯ್ಯತಾಸಾಮ್ಯವಿರುವದರಿಂದ ಜಗದ್ರೂಪಶರೀರವುಳ್ಳವನು. ಶರೀರವು ನಿಯಮ್ಯವಾಗಿ ಇರುತ್ತದೆ. ಹಾಗೆಯೇ ಈ ಸಮಸ್ತ ಪ್ರಪಂಚವು ಈಶ್ವರನಿಂದ ನಿಯಮ್ಯವಾಗಿದೆ. ಹೀಗೆ ಶರೀರಕ್ಕೂ ಪ್ರಪಂಚಕ್ಕೂ ನಿಯಮ್ಯತಾ ಎಂಬುದು ಸಮಾನವಾಗಿದೆ. ಆದ್ದರಿಂದ ಪ್ರಪಂಚವನ್ನು ಶರೀರ ಎಂದು ವ್ಯವಹರಿಸಿದ್ದಾರೆ.

ಇಂದ್ರ ಸರ್ವತ್ರ ವ್ಯಾಪ್ತನಲ್ಲ. ಪರಮಾತ್ಮ ಎಲ್ಲ ವಿಶ್ವದಲ್ಲಿ ವ್ಯಾಪ್ತನಾಗಿದ್ದಾನೆ. ಆದ್ದರಿಂದ ಇಲ್ಲಿ ಪುರುಹೂತ ಎಂಬ ಶಬ್ದಕ್ಕೆ ಶಚೀಪತಿಯಾದ ಇಂದ್ರನನ್ನು ಸ್ವೀಕರಿಸಬಾರದು. ಕಿಂತು ಪರಮಾತ್ಮ ಎಂಬ ಅರ್ಥವನ್ನೇ ಯೌಗಿಕವಾಗಿ ಹೇಳಬೇಕೆಂದು ಸೂಚಿಸುವರು. **ಪುರುಹೂತಃ** ಬಹುನಾಮ ಉಳ್ಳವನು (ಪುರೂಣಿ ಬಹೂನಿ ಹೂತಾನಿ ನಾಮಾನಿ ಯಸ್ಯ ಸಃ) ಈಶಃ ಅಘಟಿತಘಟಕ ಐಶ್ವರ್ಯ ಉಳ್ಳವನು, ೨) ನಿಯಮನ ಸ್ವಭಾವವುಳ್ಳವನು, ೩) ಅಸ್ಯ ಸ್ತ್ರೀ ಈ, ಯಾಃ ಶಂ ಅನೇನ ಇತಿ ಈಶಃ ಅ ಎಂದರೆ ವಾಸುದೇವ ಎಂದು ಅರ್ಥ. ಅಸ್ಯ ವಾಸುದೇವನ ಸ್ತ್ರೀ ಪತ್ನಿಯು ಆದ್ದರಿಂದ ಈ ಎಂದರೆ ರಮಾ ಎಂದು ಅರ್ಥ. ಯಾಃ ಇಂಥ ಲಕ್ಷ್ಮೀದೇವಿಗೆ, ಶಂ ಸುಖವು ಯಾವ ಪರಮಾತ್ಮನಿಂದ ಆಗುವುದೋ ಅಂಥ ಪರಮಾತ್ಮ ಈಶ ಎಂದು ತಿಳಿಯಬೇಕು. ರಮಾದೇವಿಗೆ ಸುಖ ಕೊಡುವವನು ಎಂದರ್ಥ. **ಸತ್ಯಂ** ಸಾಧುಗುಣನು. ಅಥವಾ ಬಹುನಾಮವಿರುವದಕ್ಕೆ ಕಾರಣ ಹೇಳುವರು 'ಈಶಃ' ಎಂದು. ಆ ಆ ಶಬ್ದಪ್ರವೃತ್ತಿನಿಮಿತ್ತ ಸಾಮರ್ಥ್ಯವುಳ್ಳವನು ಎಂದರ್ಥ. **ಪರಂಜ್ಯೋತಿಃ** ಮುಕ್ತಪ್ರಾಪ್ಯನು ಪರಂಜ್ಯೋತಿಶಬ್ದವಾಚ್ಯನು.

**ಅಜಃ** ಕರ್ಮಾಧೀನನಾಗಿ ಜನಿಸದವನು, ಉತ್ಪತ್ತಿಶೂನ್ಯನು. **ಪುರಾಣಃ** ಪುರಾತನನು, ಆದಿಪುರುಷನು. ಅಥವಾ ಪುರಂ ದೇಹಂ ಅಣತೀತಿ ಪುರಾಣಃ ನಿಯಮನಕ್ಕಾಗಿ ಜೀವರ ಶರೀರಗಳಲ್ಲಿರುವ **ಸಃ** ಪರಮಾತ್ಮನು **ಅಜಯಾ** ಪ್ರಕೃತಿಯಿಂದ **ಶಕ್ತ್ಯಾ** ಮುಖ್ಯಕಾರಣವಾದ ಸ್ವರೂಪಶಕ್ತಿಯಿಂದ **ಆತ್ಮಶಕ್ತ್ಯಾ** ತನ್ನ ಸ್ವರೂಪಶಕ್ತಿಗೆ ವಿಷಯಳಾದ ಲಕ್ಷ್ಮೀದೇವಿಯಿಂದ ಪ್ರೇರಿತವಾದ **ಅಜಯಾ** ಜಡಪ್ರಕೃತಿಯಿಂದ **ಅಸ್ಯ** ಜಗತ್ತಿಗೆ ಅಂದರೆ ಚತುರ್ಮುಖನೇ ಮೊದಲಾದ ಜೀವರಾಶಿಗೆ, ಸತ್ವಾದಿಜಡಗಳಿಗೂ **ಜನ್ಮಾದಿ** ಉತ್ಪತ್ತ್ಯಾದಿ ಅಷ್ಟಕವನ್ನು **ಧತ್ತೇ** ಕೊಡುವನು.

**ಸ ಏವ** ಅವನೇ ಪ್ರಲಯಕಾಲದಲ್ಲಿ **ತಾಂ** ಆ ಪ್ರಕೃತಿಯನ್ನು **ವಿದ್ಯಯಾ** ಸರ್ವಜ್ಞತ್ವಾದಿಶಕ್ತಿಯಿಂದ **ಉದಸ್ಯ** ನಿರಾಕರಿಸಿ ಅದರಿಂದ ಬದ್ಧನಾಗದೇ **ನಿರೀಹಃ** ಸೃಷ್ಟ್ಯಾದಿವ್ಯಾಪಾರರಹಿತನಾಗಿ **ಆಸ್ತೇ** ಇರುವನು.

ಅಥವಾ **ಅಯಂ** ಶ್ರೀಹರಿಯಿಂದ ಸೃಷ್ಟನಾದ ಬ್ರಹ್ಮ ಮೊದಲಾದ ಅಧಿಕಾರಿಗಳು **ಯಸ್ಯ ವಿದ್ಯಯಾ** ಯಾವ ಶ್ರೀಹರಿಯ ಜ್ಞಾನದಿಂದ **ತಾಂ ಅಜಾಂ** ಬಂಧಕವಾದ ಅವಿದ್ಯಾ-ಕಾರಣವಾದ ಪ್ರಕೃತಿಯನ್ನು **ಉದಸ್ಯ** ತ್ಯಜಿಸಿ **ನಿರೀಹಃ** ಶ್ರೀಹರಿಯಿಂದ ಭಿನ್ನವಾದ ವಿಷಯಾಭಿಲಾಷೆರಹಿತರಾಗಿ **ಆಸ್ತೇ** ಇರುತ್ತಾರೆ. **ತಂ ಸುಪರ್ಣಂ ಉಪಧಾವತ** ಎಂದು ಅನ್ವಯ.

♦ 'ವಿದ್ಯಯಾಽಮೃತಮಶ್ನುತೇ' ಎಂದಿರುವದರಿಂದ ಭಿನ್ನವಿಷಯತಯಾ ಅಂದರೆ ಜೀವಪರವಾಗಿ ಯೋಜಿಸಿದ್ದು ಪ್ರಯೋಜನವಿಶೇಷವುಳ್ಳದ್ದು ಎಂದು ತಿಳಿಯಬೇಕು. ಹೀಗೆ ಶ್ರೀಸತ್ಯಧರ್ಮರು ವ್ಯಾಖ್ಯಾನಿಸುತ್ತಾರೆ.

♦ ನಿರಸ್ಯ ಎಂಬ ಪದವನ್ನು ಬಿಟ್ಟು ಉದಸ್ಯ ಎಂಬ ಪದ ಗ್ರಹಣ ಮಾಡುವುದರಿಂದ ಮತ್ತೊಂದು ಅನ್ವಯವೂ ಸೂಚಿತವಾಗುತ್ತದೆ. **ಉದಸ್ಯ** ಉದಕದ, **ಮಧ್ಯೇ** ಎಂದು ಅಧ್ಯಾಹಾರ. **ನಿರೀಹಃ ಆಸ್ತೇ** (ಎಂದು ಅನ್ವಯ) ಕ್ಷೀರಸಮುದ್ರದ ಮಧ್ಯದಲ್ಲಿರುವ **ಸುಪರ್ಣಂ** ವಟಪತ್ರಶಾಯಿಯನ್ನು **ಉಪಧಾವತ** ಭಜಿಸಿರಿ ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸಿರುವರೆಂದು ಶ್ರೀಸತ್ಯಧರ್ಮರು ತಿಳಿಸುತ್ತಾರೆ.

♦ ಅಥವಾ ಉತ್ ಅಸ್ಯ ಎಂದು ಪದಚ್ಛೇದ. **ಅಸ್ಯ** ಯಾರ ಹೆಸರು **ಉತ್** ಎಂದಿದೆಯೋ **ತಂ** ಅವನನ್ನು **ಉಪಧಾವತ** ಹೀಗೂ ಅರ್ಥ. 'ಅಸ್ಯೋದಿತಿ ನಾಮ' ಎಂದು ಶ್ರುತಿಯಿದೆ. ಈ ವಿಷಯದಲ್ಲಿ 'ಯೋ ದೇವಾನಾಂ ನಾಮಧಾ' 'ಸರ್ವನಾಮಾ ಸರ್ವಕರ್ಮಾ' 'ಸ ಈಶಃ ಸೋಽಸಪತ್ನಃ (ಶತ್ರುರಹಿತಃ)' 'ಸತ್ಯಂ ಜ್ಞಾನಂ' 'ಪರಂಜ್ಯೋತಿರೂಪಂ' 'ಅಜಮನಿದ್ರಂ' 'ಪುರುಷಃ ಪುರಾಣಃ' ಎಂಬ ಶ್ರುತಿಪ್ರತೀಕಗಳನ್ನು ಈಶಃ ಮುಂತಾದವುಗಳಿಂದ ಗ್ರಹಿಸಿರುವರು. 'ಶಕ್ಯತ್ವಾತ್ ಶಕ್ತಯೋ ಭಾರ್ಯಾಃ' 'ಪರಂಜ್ಯೋತಿರುಪಸಂಪದ್ಯ ಸ್ವೇನ ರೂಪೇಣಾಭಿನಿಷ್ಪದ್ಯತೇ' 'ಅಜೋ ನಿತ್ಯಃ

ಶಾಶ್ವತೋಽಯಂ ಪುರಾಣಃ' 'ಯಃ ಪೃಥಿವ್ಯಾಂ ತಿಷ್ಠನ್' 'ಉತ್ಪತ್ತಿಸ್ಥಿತಿಸಂಹಾರಾ ನಿಯತಿರ್ಜ್ಞಾನಮಾವೃತಿಃ । ಬಂಧಮೋಕ್ಷೌ ಚ ಪುರುಷಾತ್ ಯಸ್ಮಾತ್ಸ ಹರಿರೇಕರಾಟ್' (ಸ್ಕಾಂದವಚನ) ಎಂದು ಪ್ರಮಾಣಗಳಿವೆ. ।।೧೩।।

ಲಿಂಗೇರೀ ಃ- ಈ ರೀತಿಯಾಗಿ ಲಕ್ಷಣಗಳಿಂದ ಪರಬ್ರಹ್ಮವಸ್ತುವು ಸಿದ್ಧವಾದ ಮೇಲೆ ಅವನ ಪ್ರಸಾದದಿಂದ ಅವನ ಪ್ರಾಪ್ತ್ಯಾದಿರೂಪವಾದ ಮೋಕ್ಷದ ಸಿದ್ಧಿಗಾಗಿ ದುಷ್ಕರ್ಮಗಳನ್ನು ಕಳೆಯುವ ಮೂಲಕ ಅಂತಃಕರಣಶುದ್ಧಿ, ವೈರಾಗ್ಯ, ಭಕ್ತಿ, ಉಪಾಸನಾ, ಅಪರೋಕ್ಷಜ್ಞಾನ, ಭಗವತ್ಪ್ರಸಾದ ಇವುಗಳಿಗೆ ಕಾರಣವಾದ ತನ್ನ ವರ್ಣಾಶ್ರಮೋಚಿತ ಕರ್ಮ ಮಾಡುವ ವಿಷಯದಲ್ಲಿ ಹಿಂದಿನವರ ಆಚಾರವನ್ನು ತಿಳಿಸುವರು -

ಛಲಾರೀ ಃ- ಈ ರೀತಿಯಾಗಿ ಪರಮಾತ್ಮನ ಸ್ವರೂಪವನ್ನು ನಿರೂಪಿಸಿ ಈಗ ಅವನ ಪ್ರಾಪ್ತಿಗೆ ಸಾಧನವಾದ ಜ್ಞಾನಾದಿಕರ್ಮಗಳನ್ನು ಮಾಡಲೇಬೇಕು ಎಂಬ ಅಭಿಪ್ರಾಯದಿಂದ ಹೇಳುವರು -

ಸತ್ಯ ಃ- ಪ್ರವೃತ್ತಮಪಿ ಕರ್ಮ ಮರ್ಮಜ್ಞಾನುಷ್ಠಿತಂ ನಿವೃತ್ತೌಪಯಿಕಂ ಸದ್‌ಜ್ಞಾನಸಾಧನಂ ಭವತೀತಿ ತರಾನ್ ಶಿಕ್ಷಯತಃ ಭಗವತಃ ಚರಿತಮನುಸರಂತಃ ಪ್ರೇಕ್ಷಾವಂತಃ ಏವಮಾಚರಂತೀತಿ ಈರಯತಿ **ಅಥೇತಿ-**

ಮರ್ಮಜ್ಞರು ಮಾಡಿದ ಪ್ರವೃತ್ತಕರ್ಮವೂ ನಿವೃತ್ತಕರ್ಮಕ್ಕೆ ಉಪಯುಕ್ತವಾಗಿ ಜ್ಞಾನಸಾಧನವಾಗುವದು ಎಂದು ಇತರರಿಗೆ ಶಿಕ್ಷಣ ಮಾಡುವ ಭಗವಂತನ ಚರಿತ್ರೆಯನ್ನು ಅನುಸರಿಸುವ ಪ್ರೇಕ್ಷಾವಂತರು ಈ ರೀತಿ ಆಚರಿಸುವರು ಎಂದು ಹೇಳುವರು-

**ಅಥಾಗ್ರ ಋಷಯಃ ಕರ್ಮಾಣೀಹಂತೇ ಕರ್ಮಹಂತವೇ ।**
**ಈಹಮಾನೋ ಹಿ ಪುರುಷಃ ಪ್ರಾಯೋಽನೀಹಾಂ ಪ್ರಪದ್ಯತೇ ।।೧೪।।**

**ಅಥ** ಭಗವಂತನ ಜ್ಞಾನಸಂಪಾದನೆಯ ಪ್ರಾರಂಭದ ದಶೆಯಲ್ಲಿ **ಋಷಯಃ** ಜ್ಞಾನಿಗಳು ಸಾಮಾನ್ಯವಾಗಿ **ಅಗ್ರೇ** ಮೊದಲು **ಕರ್ಮಾಣಿ** ಜ್ಯೋತಿಷ್ಟೋಮಾದಿ ಕರ್ಮಗಳನ್ನು **ಕರ್ಮಹಂತವೇ** ಜ್ಞಾನ ಹುಟ್ಟಲು ಪ್ರತಿಬಂಧಕಗಳಾದ ದುಷ್ಕರ್ಮಗಳನ್ನು ನಾಶಮಾಡಲು **ಈಹಂತೇ** ಮಾಡುವರು. **ಈಹಮಾನಃ ಪುರುಷಃ** ಫಲಾಭಿಲಾಷೆಯಿಂದ ಮಾಡುತ್ತಿದ್ದವನು ಕ್ರಮವಾಗಿ **ಪ್ರಾಯಃ** ಬಹುಶಃ **ಅನೀಹಾಂ** ಫಲೇಚ್ಛಾರಾಹಿತ್ಯವನ್ನು ನಿವೃತ್ತಿಮಾರ್ಗವನ್ನು **ಪ್ರಪದ್ಯತೇ** ಹೊಂದುವನು.

♦ ನಿವೃತ್ತಮಾರ್ಗವೇ ಫಲವಲ್ಲ. 'ನಿವೃತ್ತಂ ಸೇವಮಾನಸ್ತು ಬ್ರಹ್ಮಾಭ್ಯೇತಿ ಸನಾತನಮ್' ಎಂದು ನಿವೃತ್ತಮಾರ್ಗದಿಂದ ಬ್ರಹ್ಮಪ್ರಾಪ್ತಿಯಾಗುತ್ತದೆಂದು ಹೇಳಿದ್ದಾರೆ. ಇಲ್ಲಿ ಹಿಶಬ್ದದಿಂದ ಬ್ರಹ್ಮಪ್ರಾಪ್ತಿರೂಪವಾದ ಫಲವಾಗುತ್ತದೆಂದು ತಿಳಿಸುತ್ತಿದ್ದಾರೆ.

♦ ತುಮರ್ಥೇ ಸೇಸೇನಸೇ ಅಸೇನ್ಕ್ಸೇಕಸೇನಧ್ಯೈ ಅಧ್ಯೈನ್ಕಧ್ಯೈ ಕಧ್ಯೈನ್ ಶಧ್ಯೈ ಶಧ್ಯೈನ್ತವೈತವೇಙ್ತವೇನಃ ।।ಸಿ.ಕೌ.೩೪೩೬।। ತುಮರ್ಥದಲ್ಲಿ ಹನ್ ಧಾತುವಿಗೆ ತವೇನ್ ಪ್ರತ್ಯಯವು ಬಂದು ಹಂತವೇ ಎಂದಾಗಿದೆ ಎಂದು ತಿಳಿಯಬೇಕು.

♦ 'ಈಹಂತೇಽಕರ್ಮಹೇತವೇ' ಎಂದು ಪಾಠವಿಟ್ಟುಕೊಂಡು ಅಕರ್ಮ ಎಂದು ವಿಭಾಗ ಮಾಡಿ ಮೋಕ್ಷಕ್ಕಾಗಿ ಎಂದು ಹಲವರು ವ್ಯಾಖ್ಯಾನ ಮಾಡುತ್ತಾರೆ. ಈ ವ್ಯಾಖ್ಯಾನವು 'ಕರ್ಮಣಾ ಕರ್ಮನಿರ್ಹಾರೋ ನ ಹ್ಯಾತ್ಯಂತಿಕ ಇಷ್ಯತೇ' 'ಕ್ಷೀಯಂತೇ ಚಾಸ್ಯ ಕರ್ಮಾಣಿ ತಸ್ಮಿನ್ ದೃಷ್ಟೇ ಪರಾವರೇ' ಎಂಬ ಪ್ರಮಾಣಗಳಿಗೆ ವಿರುದ್ಧವಾಗುತ್ತದೆ. ಮತ್ತು 'ಅನೀಹಾಂ ಪ್ರಪದ್ಯತೇ' ಎಂಬ ಮುಂದಿನ ಮಾತಿಗೂ ವಿರುದ್ಧವೆಂದು ತಿಳಿಯಬೇಕು.

♦ 'ಹಂತವೈ' ಎಂದೂ ಪಾಠವಿದೆ. ಆಗ ತವೈನ್ ಪ್ರತ್ಯಯ ಎಂದು ತಿಳಿಯಬೇಕು. ಮಧ್ಯಮಜೀವರು ಫಲಾಪೇಕ್ಷಿಗಳು, ನಿವೃತ್ತಿಮಾರ್ಗಕ್ಕೆ ಬರುವದಿಲ್ಲ. ಅವರನ್ನು ವ್ಯಾವೃತ್ತಿ ಮಾಡಲು ಪ್ರಾಯಃ ಎಂದಿದ್ದಾರೆ. ಇದರಿಂದ 'ಕುರ್ವನ್ನೇವೇಹ ಕರ್ಮಾಣಿ ಜಿಜೀವಿಷೇಚ್ಛತಗ್ಂ ಸಮಾಃ' ಎಂಬ ಎರಡನೇ ಮಂತ್ರೋಪನಿಷದ್ಭಾಗವನ್ನು ವಿವರಿಸಿದಂತಾಯಿತು.

♦ **ಅಥ** ಸ್ವವಿಹಿತಕರ್ಮ ಮಾಡುವದರಿಂದ ಹಿಂದೆ ಹೇಳಿದ ಪ್ರಕಾರ ಮೋಕ್ಷರೂಪಫಲವಿರುವದರಿಂದ **ಕರ್ಮಹಂತವೇ** ದುಷ್ಕರ್ಮವಿನಾಶಾದಿಫಲಕ್ಕಾಗಿ **ಕರ್ಮಾಣಿ** ತಮಗೆ ವಿಹಿತವಾದ ಕರ್ಮಗಳನ್ನು **ಈಹಂತೇ** ಮಾಡುವರು. 'ಅಹರಹಃ ಸಂಧ್ಯಾಮುಪಾಸೀತ' ಎಂದು ವಿಹಿತವಾದ ಸಂಧ್ಯಾವಂದನದಿಂದ, 'ಸೂರ್ಯಶ್ಚ ಮಾಮನ್ಯುಶ್ಚ ಮನ್ಯುಪತಯಶ್ಚ ಮನ್ಯುಕೃತೇಭ್ಯಃ । ಪಾಪೇಭ್ಯೋ ರಕ್ಷಂತಾಂ' ಎಂಬ ಶ್ರುತ್ಯಾದಿಗಳಿಂದ ದುಷ್ಕರ್ಮನಾಶ ತಿಳಿದು ಬರುವದು. **ಏವಂ** ಹೀಗೆ **ಕರ್ಮಾಣಿ ಈಹಮಾನಃ** ಕರ್ಮ ಮಾಡುವ ಅಧಿಕಾರಿಯು ಸರ್ವಾತ್ಮನಾ **ಅನೀಹಾಂ** ಅಂದರೆ ವಿಧಿ ನಿಷೇಧಬದ್ಧರಾಗಿ ಮಾಡುವ ಕರ್ಮಗಳಿಂದ ಶೂನ್ಯವಾದ ಮುಕ್ತಿಯನ್ನು **ಪ್ರಪದ್ಯತೇ** ಹೊಂದುವನು. ಹೊರತು ಸರ್ವಥಾ ಚಲನಾದಿಕರ್ಮಶೂನ್ಯವಾದ ಮುಕ್ತಿಯನ್ನು ಎಂದರ್ಥವಲ್ಲ. ಕಾರಣ 'ಜಕ್ಷನ್ ಕ್ರೀಡನ್' ಮುಂತಾದ ಶ್ರುತಿಯಿಂದ ಅಲ್ಲಿಯೂ ಕರ್ಮಗಳಿವೆ ಎಂದು ತಿಳಿದುಬರುವದು. ಹೀಗೆ ಲಿಂಗೇರೀ ಆಚಾರ್ಯರು ವ್ಯಾಖ್ಯಾನಿಸಿದ್ದಾರೆ. ।।೧೪।।

ಸತ್ಯ ಃ- ಮುನಿಗಳು ಹೀಗೆ ಮಾಡುತ್ತಾರೆ ಎನ್ನುವುದು ಆಶ್ಚರ್ಯವಲ್ಲ. ಜನಾರ್ದನನೂ ಜನರನ್ನು ಅನುಕರಿಸುವನೆಂದು ಮನು ಹೇಳುವನು-

ಲಿಂಗೇರೀ ಃ- ಪರಮಾತ್ಮನೂ ತನ್ನ ಫಲಕ್ಕಾಗಿ ಕರ್ಮ ಮಾಡುವದು ಕಂಡಿದೆ. ಅಂದಮೇಲೆ ಅವನ ಅನುಗ್ರಹದಿಂದ ಮೋಕ್ಷವಾಗುವದು ಎಂದು ಹೇಳಿದ್ದು ಹೇಗೆ ? ಅವನಿಗೂ ಅನ್ಯಾಪೇಕ್ಷೆ(ಕರ್ಮಾಪೇಕ್ಷೆ) ಇದ್ದಮೇಲೆ 'ಪರಮಾತ್ಮ ಸ್ವತಂತ್ರವಾಗಿ ಮುಕ್ತಿಯನ್ನು ಕೊಡುತ್ತಾನೆ' ಎಂಬುದು ಕೂಡಲಾರದು ಎಂಬ ಶಂಕೆಯನ್ನು ಪರಿಹರಿಸುವರು-

ಛಲಾರೀ ಃ- ಕರ್ಮ ಮಾಡುವವನು ಕರ್ಮಗಳಿಂದ ತಡೆಯಲ್ಪಟ್ಟು ಕೇಶಕಾರನಂತೆ (ಕೂದಲನ್ನು ಅಲಂಕರಿಸುವವನು ಅವುಗಳಿಂದ ಬದ್ಧನಾಗುವವನಂತೆ) ಬದ್ಧನಾಗುತ್ತಾನೆ ಎಂದರೆ ಹೇಳುವರು-

**ಈಹತೇ ಭಗವಾನೀಶೋ ನ ಹಿ ತತ್ರ ವಿಷಜ್ಜತೇ ।**
**ಆತ್ಮಲಾಭೇನ ಪೂರ್ಣಾರ್ಥೋ ನಾವಸೀದಂತಿ ಯೇಽನು ತಮ್ ॥೧೫॥**

ಛಲಾರೀ ಃ- **ಹಿ** ಯಾವ ಕಾರಣ **ಭಗವಾನ್** ರಾಮಕೃಷ್ಣಾದಿರೂಪಿಯಾದ ಭಗವಂತನು **ಈಹತೇ** ಲೋಕಸಂಗ್ರಹಕ್ಕಾಗಿ ಕರ್ಮಗಳನ್ನು ಮಾಡುವನು. ಆದರೆ **ತತ್ರ** ಆ ಕರ್ಮಗಳಲ್ಲಿ **ನ ವಿಷಜ್ಜತೇ** ಸಿಲುಕುವದಿಲ್ಲ. ಆದ್ದರಿಂದ **ಯೇ** ಯಾರು **ಅನುವರ್ತಮಾನಾಃ** ಕರ್ಮಗಳನ್ನು ಮಾಡುವರೋ **ತೇ** ಅವರು ಕರ್ಮಗಳನ್ನು ಮಾಡಿದರೂ **ಆತ್ಮಲಾಭೇನ** ಭಗವಂತನನ್ನು ಪಡೆಯುವದರಿಂದ **ಪೂರ್ಣಾರ್ಥಾಃ (ಸಂತಃ)** ಅಭೀಷ್ಟ ಪಡೆದವರಾಗಿ **ನಾವಸೀದಂತಿ** ಬದ್ಧರಾಗುವದಿಲ್ಲ.

ಸತ್ಯ ಃ- **ಆತ್ಮಲಾಭೇನ ಪೂರ್ಣಾರ್ಥಃ** ಸ್ವರೂಪಾನಂದಾನುಭವಲಾಭದಿಂದ ಎಲ್ಲ ಪ್ರಯೋಜನಗಳನ್ನು ಪಡೆದ **ಭಗವಾನ್** ಸಮಗ್ರ ಐಶ್ವರ್ಯವುಳ್ಳ **ಈಶಃ ಅಪಿ** ಪರಮಾತ್ಮನೂ ಕೂಡಾ **ಈಹತೇ** ಕರ್ಮ ಮಾಡುವನು **ತತ್ರ ನ ವಿಷಜ್ಜತೇ** ಅದರ ಸಂಗ ಇವನಿಗೆ ಆಗುವದಿಲ್ಲ. **ಯೇ** ಯಾವ ಮುನಿ ಮುಂತಾದವರು **ತಂ ಅನುವರ್ತಂತೇ** ಪರಮಾತ್ಮನನ್ನು ಅನುಸರಿಸುವರೋ **ತೇ ಅಪಿ** ಅವರೂ ಸಹ **ನಾವಸೀದಂತಿ** ತೊಂದರೆಗೀಡಾಗುವದಿಲ್ಲ, ಕರ್ಮಬದ್ಧರಾಗುವದಿಲ್ಲ. ಇನ್ನು ಅವನು ಬದ್ಧನಾಗುವದಿಲ್ಲವೆಂದು ಏನು ಹೇಳುವದು! ಎಂದರ್ಥ.

ಸತ್ಯ ಃ- **ಆತ್ಮಲಾಭೇನಪೂರ್ಣಾರ್ಥಃ** ಎಂಬುದು ಒಂದೇ ಪದವೆಂದು ಇಟ್ಟುಕೊಂಡು ಹೀಗೂ ಅರ್ಥವನ್ನು ಹೇಳಬಹುದು. ಆತ್ಮಾ ಲಾಭಃ ಯೇಷಾಂ ತೇ ಆತ್ಮಲಾಭಾಃ ಆತ್ಮಲಾಭಾನಾಂ ಇನಾಃ ಆತ್ಮಲಾಭೇನಾಃ ಆತ್ಮಲಾಭೇನೇಭ್ಯಃ ಪೂರ್ಣಃ ಅರ್ಥಃ ಯಸ್ಯ ಸಃ ಆತ್ಮಲಾಭೇನಪೂರ್ಣಾರ್ಥಃ ಎಂದು ವಿಗ್ರಹ ಮಾಡಿಕೊಳ್ಳಬೇಕು. **ಆತ್ಮಾ** ಸ್ವರೂಪಭೂತವಾದ **ಲಾಭಃ** ಆನಂದಾದಿಗಳ ಪ್ರಾಪ್ತಿಯು **ಯೇಷಾಂ ತೇ ಆತ್ಮಲಾಭಾಃ** ಯಾವ ಅಧಿಕಾರಿಗಳಿಗೆ

ಇದೆಯೋ ಅವರು ಆತ್ಮಲಾಭರು. **ಆತ್ಮಲಾಭಾನಾಂ** ಆತ್ಮಲಾಭರಿಗೆ **ಇನಾಃ** ಇನರು ಅಂದರೆ ಸ್ವಾಮಿಗಳು ಬ್ರಹ್ಮಾದಿಗಳು. **ಆತ್ಮಲಾಭೇನೇಭ್ಯಃ ಪೂರ್ಣಃ ಅರ್ಥಃ ಯಸ್ಯ** ಅಂಥ ಬ್ರಹ್ಮಾದಿಗಳಿಗಿಂತಲೂ ಪೂರ್ಣವಾದ ಅರ್ಥ ಉಳ್ಳವನು ಶ್ರೀಹರಿ ಎಂದು ಅರ್ಥ.

ಲಿಂಗೇರೀ ಃ- ಸಮಗ್ರೈಶ್ವರ್ಯ ಉಳ್ಳ ಭಗವಂತನು ಕರ್ಮಗಳನ್ನು ಮಾಡಿದರೂ ಸ್ವರೂಪಾನಂದಾನುಭವಲಾಭದಿಂದ ಎಲ್ಲ ಪ್ರಯೋಜನ ಪಡೆದವನಾದ್ದರಿಂದ ಕರ್ಮಗಳಲ್ಲಿ ಆಸಕ್ತನಾಗುವದಿಲ್ಲ ಎಂದು ಹೇಳಿ ಶಂಕೆ-ಸಮಾಧಾನ ಹೀಗೆ ಮಾಡಿರುವರು. ಪರಮಾತ್ಮನೂ ಸಹ ದುಷ್ಕರ್ಮಬದ್ಧನಾದ್ದರಿಂದಲೇ ಮಕ್ಕಳಾಗಲು ಪ್ರತಿಬಂಧಕವಾದ ಕರ್ಮನಿವೃತ್ತಿಯಾಗಿ ಮಕ್ಕಳಾಗಲೆಂದು ಶ್ರೀಕೃಷ್ಣನು ಕೈಲಾಸಕ್ಕೆ ಹೋಗುವದು, ರುದ್ರನನ್ನು ಸ್ತುತಿಸುವುದು ಮುಂತಾದ ಕರ್ಮದಲ್ಲಿ ಪ್ರವೃತ್ತಿ ಕಂಡಿದೆ. ಅಂದಮೇಲೆ ಅವನು ಬೇರೆಯವರಿಗೆ ಮುಕ್ತಿ ಹೇಗೆ ಕೊಡುವನು ಎಂಬ ಕುಚೋದ್ಯಕ್ಕೂ ಇದೇ ಉತ್ತರ. ಭಗವಾನ್ ಈಶಃ ಕರ್ಮಾಣಿ ಈಹತೇ ಸಜ್ಜನಶಿಕ್ಷಣಕ್ಕಾಗಿ, ದುರ್ಜನರ ಮೋಹನಕ್ಕಾಗಿ ಕೈಲಾಸಗಮನಾದಿ ಕರ್ಮಗಳನ್ನು ಮಾಡುವನು. ಆದರೂ ತತ್ರ ನ ವಿಷಜ್ಜತೇ ತನಗೆ ಮಕ್ಕಳಾಗದಂತೆ ಮಾಡುವ ದುಷ್ಕರ್ಮದ ಪರಿಹಾರವಾಗಲಿ ಎಂದು ಈ ಕರ್ಮಗಳನ್ನು ಮಾಡುವುದಿಲ್ಲ. ಮತ್ತು ಅದಕ್ಕಾಗಿ ಸಂಕಟವನ್ನು ಅನುಭವಿಸುವದಿಲ್ಲ. ಕಾರಣ ತನಗೆ ಬಂಧಕವಾದ ಕರ್ಮಗಳೇ ಇಲ್ಲ.

'ನ ಮಾಂ ಕರ್ಮಾಣಿ ಲಿಂಪಂತಿ' ಎಂದು ಗೀತೆಯಲ್ಲಿ ಹೇಳಿರುವನು. ''ಕುಮಾರಶ್ಚಿತ್ಪಿತರಂ ವಂದಮಾನಂ ಪ್ರತಿ ನಾನಾಮ ರುದ್ರೋಪಯಂತಂ ಭೂರೇರ್ದಾತಾರಂ ಸತ್ಪತಿಂ ಗೃಣಿಷೇ ಸ್ತುತಸ್ತ್ವಂ ಭೇಷಜಾ ರಾಸ್ಯಸ್ಮೇ'' ಇತ್ಯಾದಿ ಪ್ರತ್ಯಕ್ಷಶ್ರುತಿ ಇರುವದರಿಂದ ಕೃಷ್ಣನಿಗೆ ದುಷ್ಕರ್ಮಬಂಧನವಿಲ್ಲ, ಫಲಾಪೇಕ್ಷಾ ಇಲ್ಲದಿದ್ದರೂ ಮೋಕ್ಷಯೋಗ್ಯಜನರಿಗೆ ಶಿಕ್ಷಣ ಮಾಡುವದಕ್ಕಾಗಿ ಕರ್ಮದಲ್ಲಿ ಪ್ರವೃತ್ತನಾಗುವನು ಎಂಬುದು ಪ್ರಮಿತವಾಗಿದೆ. ಈ ಶ್ರುತಿ-ಸ್ಮೃತಿಗಳ ಅರ್ಥವನ್ನು ವಿಸ್ತಾರವಾಗಿ ನಾವು ಮಾಡಿದ 'ತತ್ವವಾದಿಕಂಠಾಭರಣ' ಮುಂತಾದ ಗ್ರಂಥಗಳಲ್ಲಿ ನೋಡಿರಿ ಎನ್ನುತ್ತಾರೆ ಲಿಂಗೇರಿ ಶ್ರೀನಿವಾಸಾಚಾರ್ಯರು.

ಕುಮಾರಃ ಎಂಬ ಮಂತ್ರದ ವ್ಯಾಖ್ಯಾನವನ್ನು ಹೀಗೆ ತಿಳಿಯಬೇಕು.

**ಹೇ ರುದ್ರ** ರುದ್ರದೇವರೇ **ಕುಮಾರಃ** ಮಗನಾದ ನೀನು **ಉಪಯಂತಂ** ಅಜ್ಞರನ್ನು ಮೋಹಿಸುವುದಕ್ಕಾಗಿ ಕೈಲಾಸಪರ್ವತಕ್ಕೆ ಹೋಗುತ್ತಿರುವ, **(ತ್ವಾಂ)** ನಿನ್ನನ್ನು **ವಂದಮಾನಂ** ನಮಸ್ಕರಿಸುತ್ತಿರುವ **ಪಿತರಂ** ತಂದೆಯಾದ ಶ್ರೀಕೃಷ್ಣನನ್ನು ಕುರಿತು **ಪ್ರತಿ ನನಾಮ** ಪ್ರತಿಯಾಗಿ ನಮಸ್ಕರಿಸಿದಿ. **ಸ್ತುತಃ ತ್ವಂ** ಆ ಶ್ರೀಕೃಷ್ಣನಿಂದ ಸ್ತುತನಾದ ನೀನು **ಭೂರೇಃ** ಪುರುಷಾರ್ಥಗಳನ್ನು **ದಾತಾರಂ** ನೀಡುವ **ಸತ್ಪತಿಂ** ಸ್ವಾಮಿಯಾದ ಶ್ರೀಕೃಷ್ಣನನ್ನು **ಗೃಣೀಷೇ**

ಸ್ತೋತ್ರ ಮಾಡಿದಿ. ಇಂಥ ನೀನು ನಮ್ಮಿಂದ ಸ್ತುತನಾಗಿ **ಅಸ್ಮೇ** ನಮಗೆ **ಭೇಷಜಾ** ಸಂಸಾರವ್ಯಾಧಿಯನ್ನು ಪರಿಹರಿಸುವಲ್ಲಿ ಔಷಧದಂತಿರುವ ತತ್ತ್ವಜ್ಞಾನವನ್ನು **ರಾಸಿ** ನೀಡು.

ಲಿಂಗೇರಿ ಆಚಾರ್ಯರು ಭೇಷಜಾ ಎಂಬ ಶಬ್ದಕ್ಕೆ ವ್ಯರ್ಥ ಸುಳ್ಳು ಎಂದು ಅರ್ಥವನ್ನು ಹೇಳಿ ಹೀಗೆ ಅನ್ವಯಿಸಿದ್ದಾರೆ.

**ಹೇ ರುದ್ರ** ರುದ್ರದೇವರೇ **ಕುಮಾರಃ** ಮಗನಾದ ನೀನು **ಉಪಯಂತಂ** ಅಜ್ಞರನ್ನು ಮೋಹಿಸುವುದಕ್ಕಾಗಿ ಕೈಲಾಸಪರ್ವತಕ್ಕೆ ಹೋಗುತ್ತಿರುವ, **(ತ್ವಾಂ)** ನಿನ್ನನ್ನು **ವಂದಮಾನಂ** ನಮಸ್ಕರಿಸುತ್ತಿರುವ **ಪಿತರಂ** ತಂದೆಯಾದ ಶ್ರೀಕೃಷ್ಣನನ್ನು ಕುರಿತು **ಪ್ರತಿ ನನಾಮ** ಪ್ರತಿಯಾಗಿ ನಮಸ್ಕರಿಸಿದಿ. **ಸ್ತುತಃ ತ್ವಂ** ಆ ಶ್ರೀಕೃಷ್ಣನಿಂದ ಸ್ತುತನಾದ ನೀನು **ಭೂರೇಃ** ಪುರುಷಾರ್ಥಗಳನ್ನು **ದಾತಾರಂ** ನೀಡುವ **ಸತ್ಪತಿಂ** ಸ್ವಾಮಿಯಾದ ಶ್ರೀಕೃಷ್ಣನನ್ನು **ಗೃಣೀಷೇ** ಸ್ತೋತ್ರ ಮಾಡಿದಿ. ಇಂಥ ನೀನು **ಅಸ್ಮೇ** ನಿನ್ನನ್ನು ವ್ಯರ್ಥವಾಗಿಯೇ ಸ್ತುತಿಸಿದ ಶ್ರೀಕೃಷ್ಣನಿಗೆ **ಭೇಷಜಾ** ಸುಳ್ಳಾಗಿಯೇ **ರಾಸಿ** ಮಕ್ಕಳನ್ನು ನೀಡಿದಿ. ಅರ್ಥಾತ್ ಸಮಸ್ತಪ್ರಪಂಚದ ಸೃಷ್ಟ್ಯಾದಿಗಳಿಗೆ ಕಾರಣನಾದ ಶ್ರೀಕೃಷ್ಣಪರಮಾತ್ಮ ತನ್ನ ಸಾಮರ್ಥ್ಯದಿಂದಲೇ ಮಕ್ಕಳನ್ನು ಪಡೆದಿದ್ದಾನೆ. ನೀನು ವರ ನೀಡಿದ್ದು ಮಿಥ್ಯೆಯಾಗಿದೆ. ಅಜ್ಞಜನ ಮೋಹನಕ್ಕಾಗಿ ಮಾತ್ರ ಈ ನಟನೆ ಎಂದು ತಿಳಿಯಬೇಕು.

ಇಲ್ಲಿ ಕೈಮುತ್ಯವನ್ನು ಹೇಳುವರು. **ಯೇ** ಯಾವ ಅಧಿಕಾರಿಗಳು **ತಂ ಅನುವರ್ತಂತೇ** ಭಗವಂತನನ್ನು ಅನುಸರಿಸಿ ಕರ್ಮ ಮಾಡುವರೋ **ತೇ ಅಪಿ ನಾವಸೀದಂತಿ** ಅವರು ಕೂಡಾ ನಾಶ ಹೊಂದುವುದಿಲ್ಲ. ಭಗವದನುವರ್ತಿಗಳು ಕೂಡಾ ಅವಶ್ಯವಾಗಿ ಅನುಭವಿಸಲೇಬೇಕಾದ ಪ್ರಾರಬ್ಧಕರ್ಮಗಳಿಗೂ ಕಾಲಾದಿ ಉಪಮರ್ದವನ್ನು (ಬಹಳ ಪ್ರಮಾಣದಲ್ಲಿ ಅನುಭವಿಸಬೇಕಾದ ದುಃಖಾದಿಗಳನ್ನು ಕಡಿಮೆ ಮಾಡುವುದು ಇತ್ಯಾದಿ) 'ಉಪಮರ್ದಂ ಚ' ಮುಂತಾದ ಸೂತ್ರಗಳಿಂದ ಹೇಳಿದ್ದಾರೆ. ಅಂದಮೇಲೆ ಈಶ್ವರನು ತನ್ನ ಫಲಕ್ಕಾಗಿ ಕಷ್ಟಪಡುವದಿಲ್ಲವೆಂದು ಪ್ರತ್ಯೇಕ ಹೇಳಬೇಕಿಲ್ಲವೆಂದು ಭಾವ. ।।೧೫।।

ಸತ್ಯ :- ಪರೋಕ್ಷವಾಗಿ ಪ್ರೇಕ್ಷಾವಂತರು ಕರ್ಮ ಮಾಡಿದರೂ ತೊಂದರೆಪಡುವುದಿಲ್ಲ ಎಂದು ಹೇಳುವುದರಿಂದ ನಿಮಗೇನು ಎಂದರೆ, ಆ ರೀತಿ ಉಪಾಸನೆ ಮಾಡಿದರೆ ನನಗೂ ನಿರೀಹತಾ ಬರುವುದು ಎಂದು ಆ ರೀತಿ ಸ್ತುತಿಸುವನು-

**ತಮೀಹಮಾನಂ ನಿರಹಂಕೃತಂ ಬುಧೈ-**
**ರ್ನಿರಾಶಿಷಂ ಪೂರ್ಣಮನನ್ಯಚೋದಿತಮ್ ।**
**ತಚ್ಛಿಕ್ಷಯಂತಂ ನಿಜವರ್ತ್ಮಮೂಢಾನ್**
**ಪ್ರಭುಂ ಪ್ರಪದ್ಯೇಽಖಿಲಧರ್ಮಭಾವನಮ್** ।।೧೬।।

**ಈಹಮಾನಂ** ಕರ್ಮಗಳನ್ನು ಮಾಡುವ, ಆದರೂ **ನಿರಹಂಕೃತಂ** ಅಭಿಮಾನ-ರಹಿತನಾದ, **ನಿರಾಶಿಷಂ** ಅಭಿಲಾಷೆಗಳಿಲ್ಲದ, **ಅನನ್ಯಚೋದಿತಂ** ಬೇರೆಯವರಿಂದ ಪ್ರೇರಿತನಲ್ಲದ, **ನಿಜವರ್ತ್ಮಮೂಢಾನ್** ತನ್ನ ಮಾರ್ಗವನ್ನು ತಿಳಿಯದಿರುವ ಜನರನ್ನು ಕುರಿತು (ಅಥವಾ ನಿಜವರ್ತ್ಮ ಮೂಢಾನ್ ಎಂದು ಪದಚ್ಛೇದ) **ತತ್ ನಿಜವರ್ತ್ಮ** ತನ್ನ ಆ ಮಾರ್ಗವನ್ನು **ಶಿಕ್ಷಯಂತಂ** ಕಲಿಸುವ, **ಬುಧೈಃ** ತನ್ನಿಂದ ಭಿನ್ನರಾದ ಜ್ಞಾನಿಗಳಿಂದಲೂ **ಶಿಕ್ಷಯಂತಂ** ಕಲಿಸುವ, **ಅಖಿಲಧರ್ಮಭಾವನಂ** ಎಲ್ಲ ಧರ್ಮಗಳಿಗೆ ಉತ್ಪಾದಕನಾದ, **ಪ್ರಭುಂ** ಸ್ವಾಮಿಯಾದ **ತಂ** ಪೂರ್ವೋಕ್ತಮಹಿಮೋಪೇತನಾದ ಯಜ್ಞನಾಮಕನಾದ ಶ್ರೀಹರಿಯನ್ನು **ಪ್ರಪದ್ಯೇ** ಶರಣು ಹೊಂದುವೆನು.

ಛಲಾರೀ :- ಕರ್ಮ ಮಾಡಿದರೆ ಜೀವಸಾಮ್ಯ ಬಂತಲ್ಲ ? ಎಂದರೆ, ನಿರಹಂಕೃತಂ ನಿರಾಶಿಷಂ ಅನನ್ಯಚೋದಿತಂ ಎಂಬ ವಿಶೇಷಣತ್ರಯದಿಂದ ಜೀವವೈಲಕ್ಷಣ್ಯವನ್ನು ಹೇಳುವರು.

♦ ಛಲಾರಿ ಆಚಾರ್ಯರ ಪ್ರಕಾರ 'ಬುಧಂ' ಎಂದು ಪಾಠ. ಬುಧಂ ಎಂದರೆ ಜ್ಞಾನಿಯಾದ ಎಂದು ಅರ್ಥ. ಜ್ಞಾನಿಯಾದದ್ದರಿಂದಲೇ ನಿರಂಹಾರಿಯಾಗಿದ್ದಾನೆ. ಎಂದು ನಿರಹಂಕಾರಿಯಾಗಿರುವುದಕ್ಕೆ ಕಾರಣವನ್ನು ಬುಧ ಎಂಬ ಪದದಿಂದ ತಿಳಿಸಿದ್ದಾರೆ. ಎಂದು ಛಲಾರಿಯವರ ಅಭಿಪ್ರಾಯ.

ನಿರಾಶಿಷಂ ಕಾಮನೆಗಳಿಂದ ರಹಿತ ಎಂದು ಅರ್ಥ. ಯಾಕೆಂದರೆ ಪರಮಾತ್ಮ ಪೂರ್ಣಂ ಪೂರ್ಣನಾಗಿದ್ದಾನೆ. ಪೂರ್ಣನಾದದ್ದರಿಂದ ಯಾವುದೇ ಕಾಮನೆಗಳಿಲ್ಲ ಎಂಬುದಾಗಿ ತಿಳಿಯಬೇಕು. 'ಆಪ್ತಕಾಮಸ್ಯ ಕಾ ಸ್ಪೃಹಾ' ಎಂದು ಶ್ರುತಿಯಿದೆ. ಅನನ್ಯಚೋದಿತಂ ಅಂದರೆ ಅನಿಯಮ್ಯ ಎಂದು ಅರ್ಥ. ಯಾಕೆಂದರೆ ಪ್ರಭುಂ ಸ್ವತಂತ್ರನಾಗಿದ್ದಾನೆ. ಭಗವಂತ ಸ್ವತಂತ್ರನಾದದ್ದರಿಂದ ಯಾರಿಂದಲೂ ಪ್ರೇರಿತನಲ್ಲ ಎಂದು ತಿಳಿಯಬೇಕು. ಇಂಥವನೂ ಸಹ ಕರ್ಮಾನುಷ್ಠಾನ ಕಾರಣವಾದ ತನ್ನ ಮಾರ್ಗವನ್ನು ಅರಿಯದ ಜನರಿಗೆ, ತನ್ನ ಭಕ್ತರಿಗೆ ತನಕಿಂತ ಅವರರಾದವರಿಂದ ಕಲಿಸುತ್ತಾನೆ. ಎಲ್ಲ ಧರ್ಮಗಳ ಪ್ರವರ್ತಕನಾದ ಶ್ರೀಹರಿಯನ್ನು ಮೊರೆ ಹೋಗುವೆನೆಂದರ್ಥ. ಪರಮಾತ್ಮನಿಗೆ ಕರ್ಮಫಲವಿಲ್ಲವೆಂದರೆ ಅವನು ದಡ್ಡನೆಂದಾಗುವನಲ್ಲ ? ಎಂದು ಶಂಕಿಸಿ, ತನಗೆ ಪ್ರಯೋಜನವಿಲ್ಲದಿದ್ದರೂ ಪರಪ್ರಯೋಜನಕ್ಕಾಗಿ ಸಮಗ್ರಜ್ಞಾನಯೋಗ್ಯರಿಗೆ ಶಿಕ್ಷಣ ಕೊಡಲು ಕರ್ಮ ಮಾಡುವದರಿಂದ ಅವನ ಪ್ರವೃತ್ತಿ ವಿಫಲವಲ್ಲವೆಂದು ತಿಳಿಸುತ್ತಿದ್ದಾರೆ.

**ಶ್ರೀಶುಕ ಉವಾಚ**

**ಇತಿ ಮಂತ್ರೋಪನಿಷದಂ ವ್ಯಾಹರಂತಂ ಸಮಾಹಿತಮ್ ।**
**ದೃಷ್ಟ್ವಾಽಸುರಾ ಯಾತುಧಾನಾ ಜಗ್ಧುಮಭ್ಯದ್ರವನ್ ಕ್ಷುಧಾ ॥೧೭॥**

**ಇತಿ** ಈ ರೀತಿಯಾಗಿ **ಮಂತ್ರೋಪನಿಷದಂ** ಮಂತ್ರರಹಸ್ಯವನ್ನು (ಇದನ್ನು ಮೋಕ್ಷಧರ್ಮದಲ್ಲಿ 'ವೇದಸ್ಯೋಪನಿಷತ್ ಸತ್ಯಂ ಸತ್ಯಸ್ಯೋಪನಿಷತ್ ದಮಃ' ಮುಂತಾಗಿ ಹೇಳಿದೆ.) ಅಥವಾ ಮಂತ್ರವರ್ಣದಿಂದ ಕೂಡಿದ ಉಪನಿಷತ್ತನ್ನು **ವ್ಯಾಹರಂತಂ** ಪಠಿಸುತ್ತಿರುವ **ಸಮಾಹಿತಂ** ಸಮಾಧಿಸ್ಥನಾದ ಮನುವನ್ನು **ದೃಷ್ಟ್ವಾ** ನೋಡಿ **ಅಸುರಾಃ ಯಾತುಧಾನಾಃ ಚ** ಅಸುರರು ಮತ್ತು ಯಾತುಧಾನರು **ಕ್ಷುಧಾ** ಹಸಿವೆಯಿಂದ **ಜಗ್ಧುಂ** ತಿನ್ನಲು **ಅಭ್ಯದ್ರವನ್** ಬಂದರು.

ಸತ್ಯ ಃ- ಕ್ರುಧಾ ಎಂದು ಮತ್ತೊಂದು ಪಾಠವಿದೆ. ಮನುವು ಈಶಾವಾಸ್ಯ ಉಪನಿಷತ್ತಿನಿಂದ ಯಜ್ಞನಾಮಕ ಪರಮಾತ್ಮನ ಸ್ತೋತ್ರವನ್ನು ಮಾಡಲು ಪ್ರಾರಂಭಿಸಿದ. ಶ್ರೀಹರಿಯ ಆ ಸ್ತುತಿಯನ್ನು ಅಲ್ಲಿಯ ದೈತ್ಯರಿಗೆ ಕೇಳಲಾಗಲಿಲ್ಲ. ದೈತ್ಯರಿಗೆ ಸಿಟ್ಟು ಬಂದಿತು. ಸ್ತೋತ್ರ ಮಾಡುತ್ತಿರುವ ಮನುವನ್ನು ಸಿಟ್ಟಿನಿಂದ ತಿನ್ನಲು ಬಂದರು. ಈ ದುಷ್ಟತನ ದೈತ್ಯರಿಗೆ ಉಚಿತವೇ ಆಗಿದೆ ಎಂದು ತಿಳಿಯಬೇಕು.

♦ ಮನುವೂ ಸಹ ರಾಜನೇ ಆಗಿದ್ದಾನೆ. ದೈತ್ಯರನ್ನು ಸಂಹರಿಸುವ ಸಾಮರ್ಥ್ಯ ಅವನಿಗೆ ಇದ್ದೇ ಇದೆ. ತಾನೇ ಯಾಕೆ ಆ ದೈತ್ಯರನ್ನು ಸಂಹರಿಸಲಿಲ್ಲ ಎಂದು ಶಂಕೆಯು ಬರುತ್ತದೆ. ಆ ಸಂಶಯವನ್ನು ಪರಿಹರಿಸಲು ಸಮಾಹಿತಂ ಎಂದು ಹೇಳಿದ್ದಾರೆ. ಆ ಸಂದರ್ಭದಲ್ಲಿ ಮನುವು ಸಮಾಧಿಸ್ಥನಾದುದರಿಂದ ದೈತ್ಯರು ಬಂದುದೇ ಅವನಿಗೆ ತಿಳಿಯಲಿಲ್ಲ. ಹೀಗಾಗಿ ಮನುವು ದೈತ್ಯರನ್ನು ಸಂಹರಿಸಲಿಲ್ಲ ಎಂದು ತಿಳಿಯಬೇಕು.

♦ ಅಥವಾ ಆ ಅಸುರರಲ್ಲಿ ಯಾವುನೋ ಒಬ್ಬ ಶಾಂತನಾಗಿದ್ದ. ಅಂಥ ಶಾಂತನಾದ ಅಸುರನನ್ನು ಸಂಹರಿಸದೇ ಇರಬಹುದಾಗಿತ್ತಲ್ಲ? ಎಲ್ಲರನ್ನೂ ಯಾಕೆ ಸಂಹರಿಸಿದ ಎಂದು ಶಂಕೆಯು ಪ್ರಾಪ್ತವಾಗುತ್ತದೆ. ಈ ಶಂಕೆಯನ್ನು ಸಮಾಹಿತಂ ಎಂಬ ಶಬ್ದವೇ ಪರಿಹರಿಸುತ್ತದೆ. ಸಮೇ ಅಹಿತಾಃ ಯಸ್ಯ ಸಃ ತಂ ಸಮಾಹಿತಂ ಎಂಬುದಾಗಿ ವಿಗ್ರಹಮಾಡಿಕೊಳ್ಳಬೇಕು. **ಸಮೇ** ತಿನ್ನಲು ಬಂದ ದೈತ್ಯರಲ್ಲಿ ಎಲ್ಲರೂ **ಅಹಿತಾಃ ಯಸ್ಯ ತಂ** ಯಾವನಿಗೆ ಅಹಿತವನ್ನುಂಟು ಮಾಡುವವರೇ ಆಗಿದ್ದರೋ ಅಂಥ ದೈತ್ಯರು ಎಂದು ಅರ್ಥ. ಹೀಗಾಗಿ ಎಲ್ಲ ದೈತ್ಯರೂ ಮನುವಿಗೆ ಅಹಿತವನ್ನು ಮಾಡಲೇ ಬಂದಿದ್ದರು. ಅಹಿತ ಮಾಡಲು ಬಂದ ಆ ಎಲ್ಲ ಅಸುರರನ್ನು ಪರಮಾತ್ಮ ಸಂಹರಿಸಿದ ಎಂಬುದಾಗಿ ತಿಳಿಯಬೇಕು. ||೧೭||

**ತಾಂಸ್ತಥಾಽವಸಿತಾನ್ ವೀಕ್ಷ್ಯ ಯಜ್ಞಃ ಸರ್ವಗತೋ ಹರಿಃ |**
**ಯಾಮೈಃ ಪರಿವೃತೋ ದೇವೈರ್ಹತ್ವಾಽಶಾಸತ್ ತ್ರಿವಿಷ್ಟಪಮ್ ||೧೮||**

**ಸರ್ವಗತಃ** ಎಲ್ಲ ಕಡೆಗೆ ಇರುವ **ಯಜ್ಞಃ ಹರಿಃ** ಯಜ್ಞನಾಮಕ ಶ್ರೀಹರಿಯು **ತಥಾ ಅವಸಿತಾನ್** ಕೊಲ್ಲಬೇಕೆಂಬ ನಿಶ್ಚಯವುಳ್ಳ **ತಾನ್** ರಾಕ್ಷಸರನ್ನು **ವೀಕ್ಷ್ಯ** ನೋಡಿ (ಮನುವಿನ ಸ್ತೋತ್ರವನ್ನೂ ಕೇಳಿ) **ತಾನ್** ರುದ್ರದೇವರಿಂದ ಅವಧ್ಯರಾದ ಆ ರಾಕ್ಷಸರನ್ನು **ಹತ್ವಾ** ಸಂಹರಿಸಿ

ಮನುವನ್ನು ಮೋಚನ ಮಾಡಿದನು. **ಯಾಮೈಃ ಪರಿವೃತಃ** ಯಾಮನಾಮಕ ದೇವತೆಗಳಿಂದ ಸುತ್ತುವರೆಯಲ್ಪಟ್ಟು **ತ್ರಿವಿಷ್ಟಪಂ ಅಶಾಸತ್** ತಾನು ಇಂದ್ರನಾಗಿ ಸ್ವರ್ಗವನ್ನು ಆಳಿದನು.

ಸತ್ಯ ಃ- ''ನ ಯಾಮಸಾಹಿತೀ ಯಾತುಧಾನವಧೇ ಇತಿ ಜ್ಞೇಯಮ್'' ದೈತ್ಯರನ್ನು ಸಂಹರಿಸುವುದಕ್ಕಾಗಿ ದೇವತೆಗಳ ಸಹಾಯವನ್ನು ಪರಮಾತ್ಮ ಪಡೆದ ಎಂಬುದಾಗಿ ತಿಳಿಯಬಾರದು. ಕಿಂತು ಯಾಮನಾಮಕ ದೇವತೆಗಳಿಂದ ಸಹಿತನಾಗಿ ಸ್ವರ್ಗವನ್ನು ಆಳಿದ ಎಂಬುದಾಗಿ ತಿಳಿಯಬೇಕು.

**ಮನ್ವಂತರ ಷಡ್ವಿಧ-ಪಂಚವಿಧ**

**ಮನ್ವಂತರಂ ಮನುರ್ದೇವಾ ಮನುಪುತ್ರಾಃ ಸುರೇಶ್ವರಾಃ ।**
**ಋಷಯೋಽಂಶಾವತಾರಶ್ಚ ಹರೇಃ ಷಡ್ವಿಧಮುಚ್ಯತೇ ।।೧೨.೬.೫೪।।**

ಮನ್ವಂತರಸ್ವರೂಪವನ್ನು ಹನ್ನೆರಡನೇ ಸ್ಕಂಧದಲ್ಲಿ ಆರನೇ ಅಧ್ಯಾಯದಲ್ಲಿ ಹೀಗೆ ತಿಳಿಸಿದ್ದಾರೆ.

ಒಂದು ಮನ್ವಂತರದಲ್ಲಿ ೧) ಮನುವು ೨) ದೇವತೆಗಳು ೩) ಮನುಪುತ್ರರು ೪) ಇಂದ್ರರು ೫) ಋಷಿಗಳು ೬) ಹರಿಯ ಅಂಶಾವತಾರ ಹೀಗೆ ಆರು ಇರಬೇಕೆಂದು ಸೂತರು ಹೇಳುವರು. ಆದರೆ ಯಾವಾಗ ಹರಿಯೇ ಇಂದ್ರನಾಗುವನೋ ಆವಾಗ ಐದುವಿಧವೆಂದು ತಿಳಿಯಬೇಕು.

**''... ... ... ... ..ಸ್ವಯಂಭುವೇಽಂತರೇ ।**
**ಮರೀಚಿಮಿಶ್ರಾ ಋಷಯೋ ಯಜ್ಞಃ ಸುರಗಣೇಶ್ವರಃ ।।೪.೧.೮**
**ಪ್ರಿಯವ್ರತೋತ್ತಾನಪಾದೌ ... ... ... .. ।।೪.೧.೯।।**

ಮುಂತಾಗಿ ಈ ಮಾತನ್ನು ನಾಲ್ಕನೇ ಸ್ಕಂಧದ ಮೊದಲನೇ ಅಧ್ಯಾಯದಲ್ಲಿ ಹೀಗೆ ಹೇಳಿದ್ದಾರೆ.

**ಯಸ್ಯ ಹೀಂದ್ರಃ ಸ್ಪರ್ಧಮಾನೋ ಭಗವಾನ್ ವರ್ಷೇ ನ ವವರ್ಷ ।।೫.೪.೩।।**
**ತದುಕ್ತಂ- ದುಷ್ಟಾನಾಂ ಮೋಹನಾರ್ಥಾಯ ಯಜ್ಞ ಇಂದ್ರಪದೇ ಸ್ಥಿತಃ ।**
**ಪಸ್ಪರ್ಧ ಋಷಭೇಣೇವ ಸ್ವರೂಪೇಣ ಹರಿಃ ಸ್ವಯಮ್ ।। ಭಾ.ತಾ.೫.೪.೩।।**

ಎಂದು ತಾತ್ಪರ್ಯಸಹಿತವಾದ ಐದನೇ ಸ್ಕಂಧದಲ್ಲಿಯೂ ತಿಳಿಸಿದ್ದಾರೆ.

ಋಷಭನಾಮಕ ಶ್ರೀಹರಿಯು ರಾಜ್ಯಭಾರ ಮಾಡುವಾಗ ಯಜ್ಞನಾಮಕ ಹರಿಯು ಋಷಭನಾಳುವ ಖಂಡದಲ್ಲಿ ಇವನೊಡನೆ ಸ್ಪರ್ಧೆ ಮಾಡುವಂತೆ ಮಳೆ ಸುರಿಸಲಿಲ್ಲ.

ಆವಾಗ ಋಷಭನು ತನ್ನ ಸಾಮರ್ಥ್ಯದಿಂದ ಮಳೆ ತರಿಸಿದ. ಮುಂತಾಗಿ ಅಸುರಮೋಹನಕ್ಕಾಗಿ ಹೇಳಿದೆ. ಅಂತೂ ಹರಿಯು ಇಂದ್ರಪದವಿಯಲ್ಲಿರುವಾಗ ಅಂಶಾವತಾರ ಇರುವ ಕಾರಣವಿಲ್ಲ ಎಂಬುದು ಸ್ಪಷ್ಟವಾಗುತ್ತದೆ.

ಸ್ವಾಯಂಭುವಮನ್ವಂತರದಲ್ಲಿ ಸ್ವಾಯಂಭುವನು ಮನು. ಮನುಪುತ್ರರು ಪ್ರಿಯವ್ರತ, ಉತ್ತಾನಪಾದರು. ಮರೀಚಿ ಮುಂತಾದವರು ಸಪ್ತ ಋಷಿಗಳು. ಯಜ್ಞನು (ಪುತ್ರಿಕಾಪುತ್ರನ್ಯಾಯದಿಂದ ಮನುವಿನಿಂದ ಗೃಹೀತನು) ಹರಿಯ ಅವತಾರ. ಆ ಯಜ್ಞನೇ ಇಂದ್ರ. ಯಾಮಾದಿಗಳು ದೇವತೆಗಳು. ಹೀಗೆ ಐದುವಿಧವೆಂದು ತಿಳಿಯುವುದು. ಹನ್ನೆರಡನೇ ಸ್ಕಂಧದಲ್ಲಿ ಷಡ್ವಿಧ ಎಂದು ಹೇಳಿದ್ದು ಇದನ್ನು ಬಿಟ್ಟು ಉಳಿದ ಮನ್ವಂತರವಿಷಯಕವಾದ್ದರಿಂದ ವಿರೋಧವಿಲ್ಲ. ಎಂದು ಶ್ರೀಸತ್ಯಧರ್ಮರು ವಿರೋಧ ಪರಿಹರಿಸಿದ್ದಾರೆ.

ತ್ರಿವಿಷ್ಟಪ ಎಂಬ ಶಬ್ದಕ್ಕೆ ಸತ್ಯಧರ್ಮರು ಈ ರೀತಿಯಾಗಿ ಅರ್ಥವನ್ನು ತಿಳಿಸಿದ್ದಾರೆ. ವಿಶಂತಿ ಸುಕೃತಿನಃ ಅತ್ರ ಇತಿ ವಿಷ್ಟಪಂ. ಪುಣ್ಯಮಾಡಿದವರು ಪ್ರವೇಶಿಸುವ ಸ್ಥಳ ವಿಷ್ಟಪ. ತ್ರಿವಿಷ್ಟಪ ಎಂದರೆ ಮೂರನೆಯ ಲೋಕ ಎಂದು ಅರ್ಥ. ಭೂಲೋಕ ಭುವರ್ಲೋಕ ಸ್ವರ್ಗಲೋಕ ಎಂದು ತಿಳಿಯುವಾಗ ಸ್ವರ್ಗಲೋಕವು ಮೂರನೆಯ ಲೋಕವಾಗುತ್ತದೆ. ಆದ್ದರಿಂದ ಸ್ವರ್ಗವನ್ನು ತ್ರಿವಿಷ್ಟಪ ಎಂದು ಕರೆದಿದ್ದಾರೆ.

**ವಿರೋಧಪರಿಹಾರ –**

''ಆಗ್ನೀಧ್ರಶ್ಚಾಗ್ನಿಬಾಹುಶ್ಚ ಋಭೂಃ ಸವನ ಏವ ಚ । ಜ್ಯೋತಿಷ್ಮಾನ್ ದ್ಯುತಿಮಾನ್ ಹವ್ಯೋ ಮೇಧಾ ಮೇಧಾತಿಥಿರ್ವಸುಃ ।। ಸ್ವಾಯಂಭುವಸ್ಯಾಸ್ಯ ಮನೋರ್ದಶೈತೇ ವಂಶವರ್ಧನಾಃ । ಪ್ರತಿಸರ್ಗಮಮೀ ಕೃತ್ವಾ ಜಗ್ಮುಸ್ತೇ ಪರಮಂ ಪದಮ್ ।। ಏತತ್ಸ್ವಾಯಂಭುವಂ ಪ್ರೋಕ್ತಂ... '' ಮುಂತಾಗಿ ಮತ್ಸ್ಯಪುರಾಣದಲ್ಲಿ ಹೇಳಿದ ಮಕ್ಕಳನ್ನು ಇಲ್ಲಿ ಹೇಳಲಿಲ್ಲವಲ್ಲ? ಅದರಂತೆ, ಮುಂದೆ ''ಸ್ವಾರೋಚಿಷಸ್ಯ ತನಯಾಶ್ಚತ್ವಾರೋ ನಭೋ ನಭಸ್ಯಃ ಪ್ರಸೃತಿರ್ಭಾನವಃ'' ಮುಂತಾಗಿ ಪುತ್ರರು ಮತ್ತು ಋಷಿಗಳ ನಾಮಗಳನ್ನು ವ್ಯತ್ಯಾಸವಾಗಿ ಹೇಳಿರುವದು ಹೇಗೆ? ಎಂದರೆ, ಪ್ರಸಿದ್ಧವಾದುದನ್ನು ಮಾತ್ರ ಭಾಗವತದಲ್ಲಿ ಹೇಳಿದೆ. ಹೊರತು ಬೇರೆಯವರನ್ನು ನಿಷೇಧಿಸುವುದರಲ್ಲಿ ತಾತ್ಪರ್ಯವಿಲ್ಲವೆಂದು ತಿಳಿಯಬೇಕು. ತೃತೀಯಾಂಶ ವಿಷ್ಣುಪುರಾಣ ವಿಷ್ಣುರಹಸ್ಯಾದಿ ವಿರೋಧವೂ ಇಲ್ಲ. ಕಲ್ಪಭೇದದಿಂದ ಸಮಾಧಾನ ತಿಳಿಯಬೇಕು ಎಂದು ಕೆಲವರು ಹೇಳುತ್ತಾರೆ. ಹೀಗೆಂದು ಸತ್ಯಧರ್ಮರು ವ್ಯಾಖ್ಯಾನಿಸುತ್ತಾರೆ. ।।೧೮।।

ಎರಡನೆಯ ಮನ್ವಂತರದಲ್ಲಿ ಮನ್ವಾದಿಗಳನ್ನು ಹೇಳುವರು -

**ಸ್ವಾರೋಚಿಷೋ ದ್ವಿತೀಯಸ್ತು ಮನುರಗ್ನೇಃ ಸುತೋಽಭವತ್ ।**
**ದ್ಯುಮತ್ಸುಷೇಣರೋಚಿಷ್ಮತ್ಪ್ರಮುಖಾಸ್ತಸ್ಯ ಚಾತ್ಮಜಾಃ ॥೧೯॥**

**ಅಗ್ನೇಃ** ಅಗ್ನಿದೇವನ **ಸುತಃ** ಮಗನಾದ **ಸ್ವಾರೋಚಿಷಃ ತು** ಸ್ವಾರೋಚಿಷ ಎಂಬುವವರಾದರೂ **ದ್ವಿತೀಯಃ ಮನುಃ** ಎರಡನೇ ಮನ್ವಂತರದ ಅಧಿಪತಿಗಳು **ಅಭವತ್** ಆದರು. **ತಸ್ಯ** ಆ ಸ್ವಾರೋಚಿಷರಿಗೆ **ದ್ಯುಮತ್ಸುಷೇಣರೋಚಿಷ್ಮತ್ಪ್ರಮುಖಾಃ** ದ್ಯುಮಾನ್, ಸುಷೇಣ, ರೋಚಿಷ್ಮಾನ್ ಮೊದಲಾದ **ಆತ್ಮಜಾಃ** ಮಕ್ಕಳು **ಅಭವನ್** ಆದರು. ॥೧೯॥

**ತತ್ರೇಂದ್ರೋ ರೋಚನಸ್ತ್ವಾಸೀತ್ ದೇವಾಶ್ಚ ತುಷಿತಾದಯಃ ।**
**ಊರ್ಜಸ್ತಂಭಾದಯಃ ಸಪ್ತ ಋಷಯೋ ಬ್ರಹ್ಮವಾದಿನಃ ॥೨೦॥**

**ತತ್ರ** ಆ ಸ್ವಾರೋಚಿಷಮನ್ವಂತರದಲ್ಲಿ **ಇಂದ್ರಃ ಚ** ಇಂದ್ರನಾದರೂ **ರೋಚನಃ ಆಸೀತ್** ರೋಚನ ಎಂಬುವವರು ಆದರು. **ತುಷಿತಾದಯಃ** ತುಷಿತ ಮುಂತಾದ ಹೆಸರಿನವರು **ದೇವಾಃ** ದೇವತೆಗಳು **ಆಸೀತ್** ಆದರು. **ಬ್ರಹ್ಮವಾದಿನಃ** ಬ್ರಹ್ಮಜ್ಞಾನಿಗಳಾದ **ಊರ್ಜಸ್ತಂಭಾದಯಃ** ಊರ್ಜಸ್ತಂಭಾದಿಗಳು **ಸಪ್ತ ಋಷಯಃ ಆಸನ್** ಸಪ್ತಋಷಿಗಳು ಆದರು.

ತತ್ರ ಸ್ವಾರೋಚಿಷಮನ್ವಂತರೇ ವಾಯೂ ರೋಚನಃ ತನ್ನಾಮೇಂದ್ರ ಆಸೀತ್ ॥ ಛಲಾರೀ ॥ ಸ್ವಾರೋಚಿಷ ಮನ್ವಂತರದಲ್ಲಿ ವಾಯುದೇವರು ರೋಚನನಾಮಕರಾಗಿ ಇಂದ್ರರಾಗಿದ್ದರು. ಎಂದು ಛಲಾರೀ ಆಚಾರ್ಯರು ಹೇಳುತ್ತಾರೆ.

**ಏಳು ಮನ್ವಂತರಗಳಲ್ಲಿ ಏಳು ಇಂದ್ರರು**

ಛಲಾರೀ :- ಸ್ವಾಯಂಭುವಮನ್ವಂತರದಿಂದಾರಂಭಿಸಿ ವೈವಸ್ವತಮನ್ವಂತರವರೆಗಿನ ಏಳು ಮನ್ವಂತರಗಳಲ್ಲಿ ವಿಷ್ಣು, ವಾಯು, ಯಮ, ಅಶ್ವಿನೀದೇವತೆಗಳು, ಪುರಂದರನು ಕ್ರಮವಾಗಿ ಇಂದ್ರರಾಗುವರು. ಅವರಲ್ಲಿ ಪುರಂದರನು ಎರಡು ಮನ್ವಂತರಗಳಲ್ಲಿ ಇಂದ್ರನಾಗುವನು. ಇದನ್ನು ಶ್ರೀಮನ್ಮಹಾಭಾರತತಾತ್ಪರ್ಯನಿರ್ಣಯದ ಹನ್ನೆರಡನೇ ಅಧ್ಯಾಯದಲ್ಲಿ ಹೇಳಿದ್ದಾರೆ -

**ಅತೀತೇಂದ್ರಾ ಏವ ತೇ ವಿಷ್ಣುಷಷ್ಠಾಃ**
**ಪೂರ್ವೇಂದ್ರೋಽಸೌ ಯಜ್ಞನಾಮಾ ರಮೇಶಃ ।**
**ಸ ವೈ ಕೃಷ್ಣೋ ವಾಯುರಥ ದ್ವಿತೀಯಃ**
**ಸ ಭೀಮಸೇನೋ ಧರ್ಮ ಆಸೀತ್ ತೃತೀಯಃ ॥ತಾ.ನಿ.೧೨.೧೩೪॥**

**ಯುಧಿಷ್ಠಿರೋಽಸಾವಥ ನಾಸತ್ಯದಸ್ರೌ**
**ಕ್ರಮಾತ್ತಾವೇತೌ ಮಾದ್ರವತೀಸುತೌ ಚ ।**

**ಪುರಂದರಃ ಷಷ್ಠ ಉತಾಽತ್ರ ಸಪ್ತಮಃ**
**ಸ ಏವೈಕಃ ಫಲ್ಗುನೋ ಹ್ಯೇತ ಇಂದ್ರಾಃ ।।ತಾ.ನಿ.೧೨.೧೩೫।।**

ಸ್ವಾಯಂಭುವಮನ್ವಂತರದಲ್ಲಿ ಶ್ರೀಹರಿಯೇ ಯಜ್ಞನಾಮಕನಾಗಿ ಇಂದ್ರನಾಗಿದ್ದ. ಎರಡನೆಯ ಸ್ವಾರೋಚಿಷ ಮನ್ವಂತರದಲ್ಲಿ ವಾಯುದೇವರು ರೋಚನನಾಮಕರಾಗಿ ಇಂದ್ರರಾಗಿದ್ದರು ಎಂದು ಹೇಳಿದಂತಾಯಿತು. ।।೨೦।।

**ಋಷೇಸ್ತು ವೇದಶಿರಸಸ್ತುಷಿತಾ ನಾಮ ಪತ್ನ್ಯಭೂತ್ ।**
**ತಸ್ಯಾಂ ಜಜ್ಞೇ ತತೋ ದೇವೋ ವಿಭುರಿತ್ಯಭಿವಿಶ್ರುತಃ ।।೨೧।।**

**ವೇದಶಿರಸಃ ಋಷೇಃ** ವೇದಶಿರಸ್ ಎಂಬ ಋಷಿಗಳಿಗೆ **ತುಷಿತಾ ನಾಮ** ತುಷಿತಾ ಎಂಬ ಹೆಸರಿನ ಅಥವಾ ''ತುಷಿತಾ'' ಎಂದು ಪ್ರಸಿದ್ಧಳಾದ **ಪತ್ನೀ** ಹೆಂಡತಿಯು **ಅಭೂತ್** ಇದ್ದಳು. **ತಸ್ಯಾಂ** ಅವಳಲ್ಲಿ **ತತಃ** ವೇದಶಿರಸ್ಸಿನಿಂದ **ದೇವಃ** ಕ್ರೀಡಾದಿಗುಣವಿಶಿಷ್ಟನಾದ ಶ್ರೀಹರಿಯು **ವಿಭುಃ ಇತಿ** ವಿಭು ಎಂದು **ಅಭಿವಿಶ್ರುತಃ** ಪ್ರಸಿದ್ಧನಾಗಿ **ಜಜ್ಞೇ** ವ್ಯಕ್ತನಾದನು. (ಅಂಶಾವತಾರವಿದು.) ।।೨೧।।

**ಅಷ್ಟಾಶೀತಿಸಹಸ್ರಾಣಿ ಮುನಯೋ ಯೇ ಧೃತವ್ರತಾಃ ।**
**ಅನ್ವಶಿಕ್ಷನ್ ವ್ರತಂ ತಸ್ಯ ಕೌಮಾರಬ್ರಹ್ಮಚಾರಿಣಃ ।।೨೨।।**

**ಧೃತವ್ರತಾಃ** ವ್ರತಧಾರಿಗಳಾದ **ಕೌಮಾರಬ್ರಹ್ಮಚಾರಿಣಃ** ಬಾಲ್ಯದಿಂದಲೇ ಬ್ರಹ್ಮಚಾರಿಗಳಾದ **ಯೇ** ಯಾವ **ಅಷ್ಟಾಶೀತಿಸಹಸ್ರಾಃ** ಎಂಭತ್ತೆಂಟುಸಾವಿರ ಸಂಖ್ಯಾಕರಾದ **ಮುನಯಃ** ಋಷಿಗಳಿದ್ದರೋ **ತೇ** ಅವರು **ತಸ್ಯ** ಆ ವಿಭುನಾಮಕನಾದ ಪರಮಾತ್ಮನ ಆವಿರ್ಭಾವದಿಂದ **ವ್ರತಂ** ಮೋಕ್ಷಸಾಧನವಾದ ವ್ರತವನ್ನು **ಅನ್ವಶಿಕ್ಷನ್** ಕಲಿತರು. ।।೨೨।।

**ತೃತೀಯ ಉತ್ತಮೋ ನಾಮ ಪ್ರಿಯವ್ರತಸುತೋ ಮನುಃ ।**
**ಪವನಃ ಸೃಂಜಯೋ ಯಜ್ಞಹೋತ್ರಾದ್ಯಾಸ್ತತ್ಸುತಾ ನೃಪ ।।೨೩।।**

**ನೃಪ** ಪರೀಕ್ಷಿತನೇ ! **ಪ್ರಿಯವ್ರತಸುತಃ** ಸ್ವಾಯಂಭುವಮನುವಿನ ಮಗನಾದ ಪ್ರಿಯವ್ರತನ ಮಗನಾದ **ಉತ್ತಮಃ ನಾಮ** ಉತ್ತಮ ಎಂಬ ಹೆಸರುಳ್ಳವನು **ತೃತೀಯಃ ಮನುಃ** ಮೂರನೇ ಮನ್ವಂತರದ ಅಧಿಪತಿಯು **ಅಭೂತ್** ಆದನು. **ಪವನಃ** ಪವನನು **ಸೃಂಜಯಃ** ಸೃಂಜಯನು **ಯಜ್ಞಹೋತ್ರಾದ್ಯಾಃ** ಯಜ್ಞಹೋತ್ರ ಎಂಬುವವನೇ ಮೊದಲಾದವರು **ತತ್ಸುತಾಃ ಅಭೂವನ್** ಉತ್ತಮಮನುವಿನ ಮಕ್ಕಳು ಆದರು. ।।೨೩।।

**ವಸಿಷ್ಠತನಯಾಃ ಸಪ್ತ ಋಷಯಃ ಪ್ರಮದಾದಯಃ ।**
**ಸತ್ಯಾ ವೇದಶ್ರುತಾ ಭದ್ರಾ ದೇವಾ ಇಂದ್ರಸ್ತು ಸತ್ಯಜಿತ್ ।।೨೪।।**

**ವಸಿಷ್ಠತನಯಾಃ** ವಸಿಷ್ಠರ ಮಕ್ಕಳಾದ **ಪ್ರಮದಾದಯಃ** ಪ್ರಮದ ಮುಂತಾದವರು **ಸಪ್ತ ಋಷಯಃ** ಸಪ್ತಋಷಿಗಳಾದರು. **ಸತ್ಯಾಃ ವೇದಶ್ರುತಾಃ ಭದ್ರಾಃ** ಸತ್ಯ-ವೇದಶ್ರುತ-ಭದ್ರ ಈ ಮೂರು ಹೆಸರಿನವರು **ದೇವಾಃ** ದೇವತೆಗಳಾದರು. **ಸತ್ಯಜಿತ್ ತು** ಸತ್ಯಜಿತ್ ನಾಮಕನಾದ ಯಮಧರ್ಮನಾದರೋ **ಇಂದ್ರಃ** ಇಂದ್ರನಾದನು. ।।೨೪।।

ಹರಿಯ ಅವತಾರವನ್ನು ಹೇಳುವರು -

**ಧರ್ಮಸ್ಯ ಸೂನೃತಾಯಾಂ ತು ಭಗವಾನ್ ಪುರುಷೋತ್ತಮಃ ।**
**ಸತ್ಯಸೇನ ಇತಿ ಖ್ಯಾತೋ ಜಾತಃ ಸತ್ಯವ್ರತೈಸ್ಸಹ ।।೨೫।।**

ಆ ಉತ್ತಮಮನ್ವಂತರದಲ್ಲಿ **ಪುರುಷೋತ್ತಮಃ** ಕ್ಷರಾಕ್ಷರಪುರುಷರಿಗಿಂತ ಉತ್ತಮನಾದ **ಭಗವಾನ್** ಷಡ್ಗುಣೈಶ್ವರ್ಯಸಂಪನ್ನನಾದ ಶ್ರೀಹರಿಯು **ಸೂನೃತಾಯಾಂ** ಸೂನೃತಾ ಎಂಬ ತಾಯಿಯಲ್ಲಿ **ಧರ್ಮಸ್ಯ ಸಕಾಶಾತ್** ಯಮಧರ್ಮನ ದೆಸೆಯಿಂದ **ಸತ್ಯವ್ರತೈಃ ಸಹ** ಸತ್ಯವ್ರತರೆಂಬ ದೇವತೆಗಳಿಂದ ಸಹಿತನಾಗಿ **ಸತ್ಯಸೇನ ಇತಿ ಖ್ಯಾತಃ** ಸತ್ಯಸೇನ ಎಂದು ಪ್ರಸಿದ್ಧನಾಗಿ **ಜಾತಃ** ಪ್ರಾದುರ್ಭೂತನಾದನು. ।।೨೫।।

**ಅವತಾರಿಕೆ** :- ಅವತಾರಪ್ರಯೋಜನವನ್ನು ಹೇಳುವರು -

**ಸೋಽನೃತವ್ರತದುಃಶೀಲಾನಸತೋ ಯಕ್ಷರಾಕ್ಷಸಾನ್ ।**
**ಭೂತದ್ರುಹೋ ಭೂತಗಣಾಂಸ್ತ್ವವಧೀತ್ ಸತ್ಯಜಿತ್‌ಸ್ತುತಃ ।।೨೬।।**

**ಸತ್ಯಜಿತ್‌ಸ್ತುತಃ** ಸತ್ಯಜಿತ್ ಎಂಬ ಇಂದ್ರನಿಂದ ಸ್ತುತಿಸಲ್ಪಟ್ಟವನಾಗಿ **ಸಃ** ಸತ್ಯಸೇನನೆಂಬ ವಿಷ್ಣುವು **ಅನೃತವ್ರತದುಃಶೀಲಾನ್** ಸುಳ್ಳು ಹೇಳುವುದೇ ವ್ರತವಾಗಿ ಉಳ್ಳ ದುಷ್ಟಸ್ವಭಾವದವರಾದ **ಅಸತಃ** ನೀಚರಾದ **ಭೂತದ್ರುಹಃ** ಎಲ್ಲ ಪ್ರಾಣಿಗಳಿಗೆ ದ್ರೋಹ ಮಾಡುವ **ಯಕ್ಷರಾಕ್ಷಸಾನ್** ಯಕ್ಷ-ರಾಕ್ಷಸರನ್ನು **ಭೂತಗಣಾನ್** ಭೂತಗಣಗಳನ್ನು **ಅವಧೀತ್** ಸಂಹರಿಸಿದನು. ।।೨೬।।

**ಚತುರ್ಥ ಉತ್ತಮಭ್ರಾತಾ ಮನುರ್ನಾಮ್ನಾ ಚ ತಾಪಸಃ ।**
**(ಹರಿರಿತ್ಯಾಹುತೋ ಯೇನ ಗಜೇಂದ್ರೋ ಮೋಚಿತೋ ಗ್ರಹಾತ್ ।।)**
**ವೃಷಃ ಖ್ಯಾತಿರ್ನರಃ ಕೇತುರಿತ್ಯಾದ್ಯಾ ದಶ ತತ್ಸುತಾಃ ।।೨೭।।**

**ಉತ್ತಮಭ್ರಾತಾ** ಪ್ರಿಯವ್ರತನ ಮಗನಾದ ಮೂರನೆಯ ಮನುವಾದ ಉತ್ತಮನ ತಮ್ಮನಾದ **ನಾಮ್ನಾ ತಾಪಸಃ** ತಾಪಸ ಎಂಬ ಹೆಸರುಳ್ಳವರು **ಚತುರ್ಥಃ ಮನುಃ** ನಾಲ್ಕನೇ ಮನುವು. **ವೃಷಃ ಖ್ಯಾತಿಃ ನರಃ ಕೇತುಃ ಇತ್ಯಾದ್ಯಾಃ** ವೃಷ, ಖ್ಯಾತಿ, ನರ, ಕೇತು ಈ ಹೆಸರಿನವರೇ ಮುಂತಾದವರು **ದಶ** ಹತ್ತುಜನರು **ತತ್ಸುತಾಃ** ಆ ತಾಪಸಮನುಗಳ ಮಕ್ಕಳು.

ಸತ್ಯ ಃ- ಈ ವಿಷಯವು ಮತ್ಸ್ಯಪುರಾಣದಲ್ಲಿದೆ-

**ಹರಿಸ್ತಾಪಸನಾಮಾಽಸೌ ಜಾತಸ್ತಪಸಿ ವೈ ಮನುಃ ।**
**ಗಜೇಂದ್ರಂ ಮೋಚಯಾಮಾಸ ಸಸರ್ಜ ಚ ಜಗದ್ವಿಭುಃ ॥**

ತಾಪಸಮನ್ವಂತರದಲ್ಲಿ ಶ್ರೀಹರಿಯೇ ತಾಪಸನಾಮಕ ಮನುವಾದನು. ಈ ಮನುವಾದ ಈ ತಾಪಸನು ಗಜೇಂದ್ರನನ್ನು ಮೊಸಳೆಯಿಂದ ಮೋಚನ ಮಾಡಿದನು. ಜಗತ್ತನ್ನೂ ಸೃಷ್ಟಿಸಿದನು. ಇವನಿಗೇ ವಿಷ್ಣುರಹಸ್ಯದಲ್ಲಿ 'ಜಾತಸ್ತಮಸಿ' ಮುಂತಾಗಿ ಹೇಳಿದ್ದರಿಂದ ತಾಮಸ ಎಂದೂ ಬೇರೊಂದು ಹೆಸರಿದೆ ಎಂದು ತಿಳಿದುಬರುತ್ತದೆ. ಆದ್ದರಿಂದಲೇ ವಿಷ್ಣುಪುರಾಣದಲ್ಲಿ ಬಹಳ ಸಂದರ್ಭಗಳಲ್ಲಿ ತಾಮಸ ಎಂದು ಹೇಳುವದು ಸಂಭಾವಿತ ಎಂದು ತಿಳಿಯಬೇಕು. ಮಾರ್ಕಂಡೇಯಪುರಾಣದಲ್ಲಿ ಮನ್ವಂತರಗಳನ್ನು ಹೇಳುವಾಗ-

**'ಅವೇಕ್ಷ್ಯ ಭಾವಿನೀಮೃದ್ಧಿಂ ನಾಮ ಚಕ್ರುರ್ಮಹಾತ್ಮನಃ ।**
**ತಾಮಸೀಂ ಭಜಮಾನಾಯಾಂ ಯೋನಿಂ ಮಾತರ್ಯಜಾಯತ ॥**
**ತಮಸಾ ಚಾವೃತೇ ಲೋಕೇ ತಾಮಸೋಽಯಂ ಭವಿಷ್ಯತಿ ।**
**ತತಃ ಸ ತಾಮಸಸ್ತೇನ ಪಿತ್ರಾ ಸಂವರ್ಧಿತೋ ವನೇ ॥**

ಎಂದಿದೆ. ಅದರ ಅರ್ಥ ಃ- ಜಗತ್ತೆಲ್ಲ ತಮಸ್ಸಿನಿಂದ ಆವೃತವಾದಾಗ ಇವನು ಪ್ರಾದುರ್ಭವಿಸುವನು ಆದ್ದರಿಂದ ಈ ಹರಿಯು ತಾಮಸನಾಮಕನಾದನು. ಮುಂದೆ ಆಗುವ ಸಮೃದ್ಧಿಯನ್ನು ಕಂಡು, ತಾಮಸಯೋನಿಯನ್ನು ಹೊಂದಿದ ಅರ್ಥಾತ್ ಹೆಣ್ಣುಜಿಂಕೆಯ ರೂಪವನ್ನು ಪಡೆದ ತಾಯಿಯಲ್ಲಿ ಜನಿಸಿದ್ದರಿಂದಲೂ ಮಹಾತ್ಮರು ಇವನಿಗೆ ತಾಮಸ ಎಂದು ಹೆಸರಿಟ್ಟರು. ನಂತರ ಈ ತಾಮಸನನ್ನು ತಂದೆಯು ವನದಲ್ಲಿ ಬೆಳೆಸಿದನು. ಎಂಬುದಾಗಿ ವಿಷ್ಣುರಹಸ್ಯದಲ್ಲಿ ಹೇಳಿದ್ದಾರೆ.

ಇನ್ನು ಆಚಾರ್ಯರು ದ್ವಿತೀಯಸ್ಕಂಧತಾತ್ಪರ್ಯದ ಏಳನೆಯ ಅಧ್ಯಾಯದಲ್ಲಿ ಮಾತ್ಸ್ಯವಚನವನ್ನು ಉದಾಹರಿಸಿ ತಪಸಿ ಸ್ಥಿತತ್ವಾತ್ ತಾಪಸಃ ಎಂದು ಒಂದೇ ನಿರ್ವಚನವನ್ನು ತೋರಿಸಿದ್ದಾರೆ. ತಾಮಸ ನಾಮದ ನಿರ್ವಚನವನ್ನು ತೋರಿಸಿಲ್ಲ. 'ಗುಣೈರಪಿ ನ ತೂಪಾಸ್ಯೋ ಯೇ ಪೂರ್ಣತ್ವವಿರೋಧಿನಃ' ಎಂದಿರುವುದರಿಂದ ಈ ರೀತಿ ಉಪಾಸನಾ ಮಾಡಬಾರದೆಂಬ ಅಭಿಪ್ರಾಯದಿಂದ ಎರಡನೆಯ ನಿರ್ವಚನವನ್ನು ತೋರಿಸಿಲ್ಲ ಎಂದು ತಿಳಿಯಬೇಕು. ಹೊರತು ಮಾರ್ಕಂಡೇಯಪುರಾಣೋಕ್ತವಾದ ತಾಮಸ ಎಂಬ ನಾಮವಿಲ್ಲವೆಂದಲ್ಲ ಎಂದು ತಿಳಿಯಬೇಕು. ಶ್ರೀಸತ್ಯಧರ್ಮರು ಈ ರೀತಿಯಾದ ವ್ಯಾಖ್ಯಾನವನ್ನು ಮಾಡಿದ್ದಾರೆ.

ಛಲಾರೀ :- **ಸ ಚ** ಆ ನಾಲ್ಕನೇ ಮನುವು **ಹರಿಃ ಇತಿ ಆಹುತಃ** ಹರಿ ಎಂದು ಕರೆಯಲ್ಪಟ್ಟನು. ಈ ನಾಲ್ಕನೇ ಮನುವಿಗೆ ಹರಿಯೆಂದು ಹೆಸರು. ಇವನು ಹರಿ ಎಂಬ ಹೆಸರಿನಿಂದ ಪ್ರಿಯವ್ರತನು ತಪಸ್ಸು ಮಾಡುವಾಗ ಹುಟ್ಟಿದವನಾದುದರಿಂದ ತಾಪಸನೆಂದೂ ಕರೆದರು. ಅವನ ಕಾರ್ಯ ಹೇಳುವರು- **ಯೇನ** ಯಾವ ತಾಪಸನಿಂದ **ಗಜೇಂದ್ರಃ** ಗಜೇಂದ್ರನು **ಗ್ರಹಾತ್** ಮೊಸಳೆಯಿಂದ **ಮೋಚಿತಃ** ಬಿಡಿಸಲ್ಪಟ್ಟನು. ಪುಸ್ತಕದಲ್ಲಿ ಈ ರೀತಿ ಪಾಠವಿಲ್ಲದ ಕಾರಣ ಈ ರೀತಿ ವ್ಯಾಖ್ಯಾನ ಹೇಗೆ ? ಎಂದರೆ, ಅದು ಸರಿಯಲ್ಲ. ತಾಪಸನು ಭಗವದವತಾರನಾದುದರಿಂದ ಹೇಳಿಲ್ಲ. ಅದು ಭಾಗವತದಲ್ಲಿ ಪ್ರಸಿದ್ಧವಾಗಿದೆ ಎಂದು ಹತ್ತನೇ ಅಧ್ಯಾಯ ಗೀತಾಭಾಷ್ಯಟೀಕಾದಲ್ಲಿ ಟೀಕಾಚಾರ್ಯರು ''ಚತುರ್ಥ ಉತ್ತಮಭ್ರಾತಾ ಮನುರ್ನಾಮ್ನಾ ಚ ತಾಪಸಃ । ಹರಿರಿತ್ಯಾಹುತೋ ಯೇನ ಗಜೇಂದ್ರೋ ಮೋಚಿತೋ ಗ್ರಹಾತ್ ॥'' ಎಂಬ ಪಾಠಕ್ರಮವು ಕೇಳಿಬರುವದರಿಂದ ಹೀಗೆ ವ್ಯಾಖ್ಯಾನಿಸಿದೆ. ಅದರಂತೆ ಯಾದವಾರ್ಯರ ದ್ವಿತೀಯಸ್ಕಂಧತಾತ್ಪರ್ಯಟಿಪ್ಪಣಿಯಲ್ಲಿ ಏಳನೇ ಅಧ್ಯಾಯದಲ್ಲಿಯೂ ಇದೇ ರೀತಿ ಪಾಠಕ್ರಮ ಕೇಳಿ ಬರುವದು. ಇದರಿಂದ ಗಜೇಂದ್ರಮೋಚಕತ್ವಲಿಂಗದಿಂದ ತಾಪಸಮನುವು ಹರಿಯ ಅವತಾರ ಎಂದು ಹೇಳಿದಂತಾಯಿತು. ಅದನ್ನು ದ್ವಿತೀಯಸ್ಕಂಧತಾತ್ಪರ್ಯದಲ್ಲಿ ''ಹರಿಸ್ತಾಪಸನಾಮಾಽಸೌ ಜಾತಸ್ತಪಸಿ ವೈ ಮನುಃ । ಗಜೇಂದ್ರಂ ಮೋಚಯಾಮಾಸ ಸಸರ್ಜ ಚ ಜಗತ್ಪ್ರಭುಃ ॥'' ಎಂದು ಹೇಳಿದ್ದಾರೆ ಎನ್ನುತ್ತಾರೆ ಛಲಾರಿ ಆಚಾರ್ಯರು. ॥೨೭॥

**ಸತ್ಯಕಾ ಹರಯೋ ವೀರಾ ದೇವಾಸ್ತ್ರಿಶಿಖ ಈಶ್ವರಃ ।**
**ಜ್ಯೋತಿರ್ಧಾಮಾದಯಃ ಸಪ್ತ ಋಷಯಸ್ತಾಪಸೇಽಂತರೇ ॥೨೮॥**

**ತಾಪಸೇ ಅಂತರೇ** ತಾಪಸಮನ್ವಂತರದಲ್ಲಿ **ಸತ್ಯಕಾಃ ಹರಯಃ ವೀರಾಃ** ಸತ್ಯಕರು, ಹರಿಗಳು, ವೀರರು ಎಂಬುವವರು **ದೇವಾಃ** ದೇವತೆಗಳು **ತ್ರಿಶಿಖಃ** ತ್ರಿಶಿಖ ಎಂಬ ಹೆಸರಿನವನು **ಈಶ್ವರಃ** ದೇವತೆಗಳಿಗೆ ಈಶ್ವರನು ಅಂದರೆ ಇಂದ್ರನು ಎಂದರ್ಥ. **ಜ್ಯೋತಿರ್ಧಾಮಾದಯಃ** ಜ್ಯೋತಿರ್ಧಾಮ ಮುಂತಾದವರು **ಸಪ್ತ ಋಷಯಃ** ಏಳು ಋಷಿಗಳು. ಇಲ್ಲಿ ತ್ರಿಶಿಖನೆಂಬ ಹೆಸರಿನಿಂದ ಇಂದ್ರನಾದವನು ಅಶ್ವಿನೀದೇವತೆಗಳಲ್ಲಿ ಒಬ್ಬನಾದ ನಾಸತ್ಯ ಎಂಬ ದೇವತೆ. ಈ ಮನ್ವಂತರವೂ ಸ್ವಾಯಂಭುವಮನ್ವಂತರದಂತೆ ಐದು ವಿಧವಾಗಿದೆ. ತಾಪಸಮನುವೇ ಈಶ್ವರಾವತಾರವಾದುದರಿಂದ ಬೇರೆ ಈಶ್ವರಾವತಾರವಿಲ್ಲ ಎಂದು ತಿಳಿಯಬೇಕು. ॥೨೮॥

**ಅವತರಣಿಕಾ** :- ಇದೇ ಮನ್ವಂತರದಲ್ಲಿ ಇತರ ದೇವತೆಗಳ ಉತ್ಪತ್ತಿ, ಅವರ ಹೆಸರು, ಅದಕ್ಕೆ ನಿಮಿತ್ತವನ್ನು ಹೇಳುವರು -

**ದೇವಾ ವೈಧೃತಯೋ ನಾಮ ವಿಧೃತೇಸ್ತನಯಾ ನೃಪ ।**
**ನಷ್ಟಾಃ ಕಾಲೇನ ಯೈರ್ವೇದಾ ವಿಧೃತಾಃ ಸ್ವೇನ ತೇಜಸಾ ॥೨೯॥**

**ನೃಪ** ಪರೀಕ್ಷಿತನೇ ! **ವಿಧೃತೇಃ** ವಿಧೃತಿ ಎಂಬುವವಳ **ತನಯಾಃ** ಮಕ್ಕಳಾದ **ವೈಧೃತಯಃ** ವೈಧೃತಿಗಳೆಂಬ **ದೇವಾಃ** ದೇವತೆಗಳು ಆದರು. **ಯೈಃ** ಯಾವ ಈ ದೇವತೆಗಳಿಂದ **ಕಾಲೇನ** ಕಾಲಕ್ರಮದಿಂದ **ನಷ್ಟಾಃ** ಅಪಪಾಠಾದಿಗಳಿಂದ ನಿಜವಾದ ಸ್ವರೂಪದಿಂದ ಕಾಣದಿರುವ **ವೇದಾಃ** ವೇದಗಳು **ಸ್ವೇನ ತೇಜಸಾ** ತಮ್ಮ ತಪಸ್ಸಾಮರ್ಥ್ಯದಿಂದ **ವಿಧೃತಾಃ** ಮತ್ತೆ ನಿಜವಾದ ಸ್ವರೂಪಗಳಿಂದ ಉದ್ಧರಿಸಲ್ಪಟ್ಟವು (ವೇದಗಳನ್ನು ಕಂಡುಕೊಂಡರೆಂದರ್ಥ). ಈ ಕಾರಣದಿಂದಲೂ ವೈಧೃತಿ ಎಂಬ ಹೆಸರು ಅವರಿಗೆ ಯುಕ್ತವಾಗಿದೆ.

ಸತ್ಯ ಃ- ಪೂರ್ವೋಕ್ತರಾದ ಸತ್ಯಕಾದಿಗಳ ತಾಯಿ ವಿಧೃತಿಯಾಗಿದ್ದಾಳೆ. ವಿಧೃತಿಯ ಮಕ್ಕಳಾದ ಆ ಸತ್ಯಕಾದಿಗಳೇ ವೇದಗಳನ್ನು ಕಂಡುಕೊಂಡರು. ಆದ್ದರಿಂದ ಅವರಿಗೆ ವೈಧೃತಿಗಳು ಎಂಬ ಹೆಸರು ಬಂದಿತು ಎಂಬುದಾಗಿ ತಿಳಿಯಬೇಕು ಎಂದು ಹೇಳುತ್ತಾರೆ. ಹಾಗಾದರೆ ಈ ಶ್ಲೋಕದಲ್ಲಿ 'ದೇವಾಃ' ಎಂದು ಪುನಃ ಪ್ರಯೋಗಿಸಿದ್ದು ವ್ಯರ್ಥ ಎಂದಾಗಬೇಕಾಗುವುದು. ಆದ್ದರಿಂದ ಆ ಹೇಳಿಕೆಯು ವಿಚಾರಣೀಯವಾಗಿದೆ. ಆದ್ದರಿಂದ ಸತ್ಯಕಾದಿಗಳು ಬೇರೆ, ವೈಧೃತಿಗಳು ಬೇರೆ ಎಂಬುದಾಗಿಯೇ ತಿಳಿಯಬೇಕು. ॥೨೯॥

**ತತ್ರಾಽಪಿ ಜಜ್ಞೇ ಭಗವಾನ್ ಹರಿಣ್ಯಾಂ ಹರಿಮೇಧಸಃ ।**
**ಹರಿರಿತ್ಯಾಹುತೋ ಯೇನ ಗಜೇಂದ್ರೋ ಮೋಚಿತೋ ಗ್ರಹಾತ್ ॥೩೦॥**

**ತತ್ರಾಪಿ** ಈ ತಾಪಸಮನ್ವಂತರದಲ್ಲಿಯೂ **ಹರಿಣ್ಯಾಂ** ಹರಿಣಿ ಎಂಬುವವಳಲ್ಲಿ **ಹರಿಮೇಧಸಃ** ಹರಿಮೇ(ಧಾ)ಧಸ್ ಎಂಬುವರಿಂದ **ಭಗವಾನ್** ಶ್ರೀಹರಿಯು **ಜಜ್ಞೇ** ಅವತರಿಸಿದನು. **ಹರಿಃ ಇತಿ ಆಹುತಃ** ಹರಿ ಎಂದು ಕರೆಯಲ್ಪಟ್ಟನು. **ಯೇನ** ಯಾವ ಈ ಹರಿಯಿಂದ **ಗಜೇಂದ್ರಃ** ಗಜೇಂದ್ರನು (ಶಾಪದಿಂದ ಆನೆಯಾಗಿದ್ದ ಇಂದ್ರದ್ಯುಮ್ನರಾಜನು) **ಗ್ರಹಾತ್** ಮೊಸಳೆಯಿಂದ (ಶಾಪದಿಂದ ಮೊಸಳೆಯಾಗಿದ್ದ ಗಂಧರ್ವನಿಂದ) **ಮೋಚಿತಃ** ಬಿಡಿಸಲ್ಪಟ್ಟನು.

ಸತ್ಯಃ-'ತತ್ರಾಪಿ ಜಜ್ಞೇ' ಎಂಬ ಅರ್ಧವು ಹೇಳಬಾರದು. ಕಾರಣ ಅದು ಕಲ್ಪಿತವಾದುದು ಎಂದು ಹೇಳುವರು.

ಅದು ಕಲ್ಪಿತವೇಕೆ ? ''....... ಅರ್ಥತಃ ॥ ತಾಮಸಸ್ಯಾಂತರೇ ಚೈವ ಸಂಪ್ರಾಪ್ತೇ ಪುನರೇವ ಹ । ಹರಿಣ್ಯಾಂ ಹರಿಭಿಃ ಸಾರ್ಧಂ ಹರಿರೇವ ಬಭೂವ ಹ ॥'' ಎಂದು ವಿಷ್ಣುಪುರಾಣದಲ್ಲಿ ಮೂರನೇ ಅಂಶದಲ್ಲಿ ಮೊದಲನೇ ಅಧ್ಯಾಯದಲ್ಲಿ ಹೇಳಿದ್ದರಿಂದ,

ಅದು ಒಂದು ಬೇರೆ ಅವತಾರವಾಗುತ್ತದೆಯಾದ್ದರಿಂದ ಅದು ಕಲ್ಪಿತ ಹೇಗೆ ? ಎಂದು ಶಂಕಿಸುವುದು ಸರಿಯಲ್ಲ. ಕಾರಣ ಅಲ್ಲಿಯೂ ಲೇಖಕರ ಹಸ್ತದೋಷವು ಉಂಟಾಗುವ ಸಂಭವವಿದೆ. ಸಂಪ್ರದಾಯಜ್ಞರಾದವರು ಗೀತಾಭಾಷ್ಯ ಪ್ರಮೇಯದೀಪಿಕಾ ವ್ಯಾಖ್ಯಾನ ಮಾಡುವಾಗ ಹಾಗೆ ಬರೆದಿದ್ದಾರೆ - ''ಮನುರ್ನಾಮ್ನಾ ಚ ತಾಪಸಃ । ಹರಿರಿತ್ಯಾಹುತಃ'' ಎಂಬ ವಾಕ್ಯವನ್ನು ಉದಾಹರಣ ಮಾಡಿ ಮಧ್ಯದಲ್ಲಿ ''ತತ್ರಾಪಿ ಜಜ್ಞೇ ಭಗವಾನ್ ಹರಿಣ್ಯಾಂ ಹರಿಮೇಧಸಃ'' ಎಂಬ ಅರ್ಧವು ಕಲ್ಪಿತವೆಂದು ತಿಳಿಯುವದು. ಹಾಗಿದ್ದಲ್ಲಿ ಹರಿನಾಮಕರೂಪಕ್ಕೇನೇ ಗಜೇಂದ್ರಮೋಚಕತ್ವ ಬರುವದರಿಂದ,

''ಹರಿಃ ತಾಪಸನಾಮಾಽಸೌ ಜಾತಸ್ತಪಸಿ ವೈ ಮನೋಃ । ಗಜೇಂದ್ರಂ ಮೋಚಯಾಮಾಸ ಸಸರ್ಜ ಚ ಜಗದ್ವಿಭುಃ ಇತಿ ಮಾತ್ಸ್ಯೇ ।।'' ಎಂಬ ದ್ವಿತೀಯಸ್ಕಂಧ ಭಾಗವತತಾತ್ಪರ್ಯದಿಂದ, ಹಾಗೂ 'ತ್ವಾಂ ತಾಪಸಂ ಮೋಚಿತಹಸ್ತಿಮಲ್ಲಂ' ಎಂಬ ಸಂಗ್ರಹರಾಮಾಯಣದಿಂದಲೂ ವಿರೋಧ ಬರಬೇಕಾಗುತ್ತದೆ.

ಬೇರೆ ಮನ್ವಂತರಗಳಂತೆ ತಾಪಸಮನ್ವಂತರದಲ್ಲಿಯೂ ಭಗವದವತಾರವನ್ನು ಹೇಳಲೇಬೇಕಾದ್ದರಿಂದ ಅದಕ್ಕಾಗಿ 'ತತ್ರಾಪಿ ಜಜ್ಞೇ' ಎಂಬ ಅರ್ಧವು ಆವಶ್ಯಕ ಎಂದು ಶಂಕಿಸುವುದು ಸರಿಯಲ್ಲ. ಕಾರಣ ಇತರ ಮನುಗಳು ಭಗವದ್ಭಿನ್ನರಾದುದರಿಂದ ಅಸಮರ್ಥರಾದ ಕಾರಣ ಬಂದ ಉಪದ್ರವಗಳನ್ನು ಪರಿಹರಿಸಲು ಅಲ್ಲಿ ಭಗವದವತಾರದ ಆವಶ್ಯಕತೆ ಇದೆ. ಇಲ್ಲಿಯಾದರೂ ಭಗವಂತನೇ ಮನು ಆಗಿರುವದಿರಂದ ಅವನಿಂದ ಭಿನ್ನವಾದ ಸ್ವತಂತ್ರ ಅವತಾರ ಹೇಳಬೇಕಿಲ್ಲ, ಈ ಮುಂತಾಗಿ ಆಲೋಚಿಸಬೇಕೆಂದು ಸಂಪ್ರದಾಯಜ್ಞರು ಅಭಿಪ್ರಾಯಪಟ್ಟಿದ್ದಾರೆ.

ಕೆಲವರು ಹರಿನಾಮಕನಾಗಿ ಅವತರಿಸಿದ ಭಗವಂತನು ಗಜವನ್ನು ಮೋಚನ ಮಾಡಿದನು. ತಾಪಸನಾದರೂ ಜಗದ್ವೃಷಖ್ಯಾತ್ಯಾದಿಗಳನ್ನು ಸೃಷ್ಟಿಸಿದನು ಎಂಬುದಾಗಿ ದ್ವಿತೀಯಸ್ಕಂಧಭಾಗವತತಾತ್ಪರ್ಯಕ್ಕೆ ವ್ಯಾಖ್ಯಾನ ಮಾಡುವವರಾಗಿ, ಎರಡು ರೂಪಗಳನ್ನು ಒಪ್ಪುವವರಾಗಿ, ಹಿಂದೆ ಹೇಳಿದ ಯುಕ್ತಿಯನ್ನು ದಾಟಿದವರಂತೆ 'ಸಸರ್ಜ ಚ' ಎಂಬ ತಾತ್ಪರ್ಯದಲ್ಲಿಯ ಸಮುಚ್ಚಾಯಕಚಶಬ್ದವೈಯರ್ಥ್ಯವನ್ನೂ ಆಲೋಚನೆ ಮಾಡದಿರುವರಂತೆ, 'ಹರಿಸ್ತಾಪಸರೂಪೇಣ' ಎಂದು ಹರಿನಾಮದವನಿಗೆ ಪ್ರತ್ಯೇಕ ಅವತಾರತ್ವಭ್ರಮವನ್ನೂ ಭ್ರಂಶ ಮಾಡುವ ತಾತ್ಪರ್ಯದಲ್ಲಿ 'ತಾಪಸನಾಮಾಸೌ' ಎಂಬುದನ್ನೂ ಮನಸ್ಸಿನಲ್ಲಿ ತಂದುಕೊಂಡಿಲ್ಲವೆಂದು ತಿಳಿಯಬೇಕು.

ಇನ್ನು ''ಚತ್ವಾರೋ ಮನವಸ್ತಥಾ'' ಎಂಬ ಗೀತಾವ್ಯಾಖ್ಯಾನ ಮಾಡುವಾಗ ಭಾಷ್ಯದಲ್ಲಿ ''ಗೌತಮಖಿಲೇಷು ಚೋಕ್ತಮ್ । ಸ್ವಾಯಂಭುವಂ ರೋಚಿಷಂ ಚ ತಥೋತ್ತಮವಮ್ । ವೇದ ಯಃ ಸಃ ಪ್ರಜಾವಾನ್ '' ಎಂದು ಹೇಳಿದ್ದರಿಂದ

ನಾಲ್ಕನೆಯವನು ಉತ್ತಮ ಎಂದು ಹೇಳಲಾಗಿದೆ. ಅಂದಮೇಲೆ ತಾಪಾಸ ನಾಲ್ಕನೆಯವನು ಎಂದು ಹೇಗೆ ಹೇಳುತ್ತೀರಿ ? ಎಂದರೆ, ಮುಂದಿನ ಭಾಷ್ಯ ಹಾಗೂ ಅದರ ಟೀಕಾಗಳಿಂದ ಅದಕ್ಕೆ ಗತಿ ಹೇಳಿದೆ. ಅದೇನೆಂದರೆ :- ತಾಪಸನು ಭಗವದವತಾರನಾದುದರಿಂದ ಅವನನ್ನು ಹೇಳಲಿಲ್ಲ. ಅವನು ಭಗವದವತಾರವೆಂಬುದು ಭಾಗವತದಲ್ಲಿ ಪ್ರಸಿದ್ಧವಾಗಿದೆ. ಎಲ್ಲ ಮನುಗಳಿಗೂ ಮಾನಸತ್ವವನ್ನು ಭಾಗವತದಲ್ಲಿ ಹೇಳಿದೆ - 'ತತೋ ಮನೂನ್ ಸಸರ್ಜಾಂತೇ ಮನಸಾ ಲೋಕಭಾವನಾನ್ ||' ಎಂದು.

ತಾಪಸನಿಗೆ ಭಗವದವತಾರತ್ವವು ಹೇಗೆ ? ಎಂದು ಪ್ರಮಾಣಶಂಕೆ ಬಂದರೆ 'ತಚ್ಚ ಭಾಗವತೇ ಪ್ರಸಿದ್ಧಂ' ಎಂದಿದ್ದಾರೆ. ''ಚತುರ್ಥ ಉತ್ತಮಭ್ರಾತಾ ಮನುರ್ನಾಮ್ನಾ ಚ ತಾಪಸಃ । ಹರಿರಿತ್ಯಾಹುತೋ ಯೇನ ಗಜೇಂದ್ರೋ ಮೋಚಿತೋ ಗ್ರಹಾತ್ ಇತ್ಯಾದಿನಾ'' ಎಂದು. ಭಗವದವತಾರನಾದ ತಾಪಸನಿಗೆ ಮಾನಸಜಾತತ್ವವು ಅನುಪಪನ್ನ. ಆದ್ದರಿಂದ ನಾಲ್ಕನೆಯವನಾದ ತಾಪಸನ ಸ್ಥಾನದಲ್ಲಿ ಐದನೆಯವನಾದ ಉತ್ತಮನನ್ನು ಸ್ವೀಕರಿಸಿದ್ದು. ಇಲ್ಲಿ ಅಲ್ಲಿಯಂತೆ ಬಾಧಕ ಯಾವದೂ ಇಲ್ಲ. ಕಾರಣ ತಾಪಸನನ್ನೇ ನಾಲ್ಕನೆಯವನೆಂದು ಸ್ವೀಕರಿಸಿದೆ ಎಂದು ತಿಳಿಯಬೇಕು.

ಕೆಲವರು ಈ ಪದ್ಯದ ಅರ್ಥವನ್ನು ತಿಳಿಸುವ ವಿಷ್ಣುಪುರಾಣಪದ್ಯಕ್ಕೆ ''ಪ್ರಿಯವ್ರತನಿಗೆ ಹರಿಮೇಧಾ ಎಂದು ಮತ್ತೊಂದು ಹೆಸರು. ಹರಿಣಿ ಎಂದು ಅವನ ಪತ್ನಿ. ಹರಯಃ ಎಂದು ದೇವತೆಗಳ ಹೆಸರು. ಪುನಃ ಎಂದು ಸತ್ಯದೇವತೆಗಳೊಡನೆ ಸತ್ಯನಾಮಕ ಭಗವದವತಾರಾನಂತರ ಎಂದು ತಾಪಸನೇ ಸ್ವೀಕರಿಸಲ್ಪಡುತ್ತಾನೆ ಎಂಬುದಾಗಿ ಏಕವಿಷಯಕವಾಗಿ ವ್ಯಾಖ್ಯಾನ ಮಾಡುತ್ತಾರೆ.

ಇಲ್ಲಿ ಮೂರನೆಯವನು ಉತ್ತಮ ಎಂಬ ಹೆಸರಿನ ಪ್ರಿಯವ್ರತನ ಮಗ ಎಂದು ಹೇಳಿದ್ದೇ ಕ್ರಮ. ಗೌತಮಖಿಲದಲ್ಲಿ ಆನುಪೂರ್ವಿಕ್ರಮ ಇಲ್ಲವೆಂದು ಬಹಳಜನ ಪ್ರಮೇಯದೀಪಿಕಾಟಿಪ್ಪಣೀಕಾರರು ಬರೆದಿರುವರು. ಹೆಚ್ಚಿನ ವಿಸ್ತಾರವನ್ನು ಅಲ್ಲಿಯೇ ತಿಳಿಯುವದು. ||೩೦||

ಶುಕಾಚಾರ್ಯರು ಸಾಮಾನ್ಯವಾಗಿ ಹೇಳಿದ್ದರಿಂದ ವಿಸ್ತಾರವಾಗಿ ಹೇಳಬೇಕೆಂಬ ಅಭಿಪ್ರಾಯ ಅವರಿಗಿದೆ ಎಂದು ರಾಜರು ಪ್ರಶ್ನೆ ಮಾಡುತ್ತಾರೆ -

**ರಾಜೋವಾಚ**

**ಬಾದರಾಯಣ ಏತತ್ತೇ ಶ್ರೋತುಮಿಚ್ಛಾಮಹೇ ವಯಮ್ ।**
**ಹರಿರ್ಯಥಾ ಗಜಪತಿಂ ಗ್ರಾಹಗ್ರಸ್ತಮಮೂಮುಚತ್ ||೩೧||**

**ಹೇ ಬಾದರಾಯಣ** ವ್ಯಾಸಪುತ್ರರಾದ ಶುಕಾಚಾರ್ಯರೇ ! **ಹರಿಃ** ಶ್ರೀಹರಿಯು **ಗ್ರಾಹಗ್ರಸ್ತಂ** ಮೊಸಳೆಯಿಂದ ಹಿಡಿಯಲ್ಪಟ್ಟ **ಗಜಪತಿಂ** ಗಜೇಂದ್ರನನ್ನು **ಯಥಾ** ಹೇಗೆ **ಅಮೂಮುಚತ್** ಬಿಡಿಸಿದನು? **ಏತತ್** ಆ ಪ್ರಕಾರವನ್ನು **ತೇ** ನಿಮ್ಮಿಂದ **ಶ್ರೋತುಂ** ಕೇಳಲು **ವಯಂ ಇಚ್ಛಾಮಹೇ** ನಾನು ಮತ್ತು ಸಭಿಕರು ಇಚ್ಛಿಸುತ್ತೇವೆ. ।।೩೦।।

ಶ್ರವಣೇಚ್ಛೆಗೆ ಕಾರಣ ಹೇಳುವರು -

**ತತ್ಕಥಾಸು ಮಹಾಪುಣ್ಯಂ ಧನ್ಯಂ ಸ್ವಸ್ತ್ಯಯನಂ ಶುಭಮ್ ।**
**ಯತ್ರ ಯತ್ರೋತ್ತಮಶ್ಲೋಕೋ ಭಗವಾನ್ ಗೀಯತೇ ಹರಿಃ ।।೩೨।।**

**ಯತ್ರ ಯತ್ರ** ಎಲ್ಲಿ ಎಲ್ಲಿ **ಉತ್ತಮಶ್ಲೋಕಃ** ಬ್ರಹ್ಮಾದಿಗಳಿಂದ ಕೀರ್ತಿತನಾದ ಅತ್ಯುತ್ತಮ ಕೀರ್ತಿಯುಳ್ಳ **ಭಗವಾನ್ ಹರಿಃ** ಅಷ್ಟೈಶ್ವರ್ಯಸಂಪನ್ನನಾದ ಶ್ರೀಹರಿಯು **ಗೀಯತೇ** ಹೇಳಲ್ಪಡುವನೋ **ತತ್** ಆ ಗ್ರಂಥವು **ಕಥಾಸು** ಕಥೆಗಳಲ್ಲಿ **ಮಹಾಪುಣ್ಯಂ** ಮಹಾಪುಣ್ಯಕರವು, **ಧನ್ಯಂ** ಧನ್ಯರಾದ ಶ್ರೋತೃಗಳುಳ್ಳದ್ದು, ಧನಪ್ರಾಪಕವು, **ಸ್ವಸ್ತ್ಯಯನಂ** ಕ್ಷೇಮಕರವು, ಮೋಕ್ಷಪ್ರದವು, **ಶುಭಂ** ಮಂಗಳಕರವು. ಆದ್ದರಿಂದ ಕೇಳಬಯಸುವೆನು. **ಮಹತ್** ಎಂಬ ಪಾಠದಲ್ಲಿ ಶ್ರೇಷ್ಠವೆಂದರ್ಥ. ।।೩೨।।

ಪರೀಕ್ಷಿತನ ಪ್ರಶ್ನೆಯನ್ನು ಪರೀಕ್ಷಿಸಿ ಉತ್ತರಿಸಿದರೆ? ಇಲ್ಲವೇ? ಎಂಬ ಶೌನಕಾದಿಗಳ ಮಾನಸಿಕಶಂಕೆಯನ್ನು ಸೂತರು ಪರಿಹರಿಸುವರು -

**ಸೂತ ಉವಾಚ**

**ಪರೀಕ್ಷಿತೈವಂ ಸ ತು ಬಾದರಾಯಣಿಃ**
**ಪ್ರಾಯೋಪವಿಷ್ಟೇನ ಕಥಾಸು ಚೋದಿತಃ ।**
**ಉವಾಚ ವಿಪ್ರಾಃ ಪ್ರತಿನಂದ್ಯ ಪ್ರಾರ್ಥಿವಂ**
**ಮುದಾ ಮುನೀನಾಂ ಸದಸಿ ಸ್ಮ ಶ್ರುಣ್ವತಾಮ್ ।।೩೩।।**

**।। ಇತಿ ಶ್ರೀಮದ್ಭಾಗವತೇ ಅಷ್ಟಮಸ್ಕಂಧೇ ಪ್ರಥಮೋऽಧ್ಯಾಯಃ ।।**

**ಹೇ ವಿಪ್ರಾಃ** ಶೌನಕಾದಿಗಳೇ ! **ಏವಂ** ಈ ರೀತಿಯಾಗಿ **ಪ್ರಾಯೋಪವಿಷ್ಟೇನ** ಅನಶನವ್ರತವನ್ನು ಹಿಡಿದು ಕಥಾಶ್ರವಣಕ್ಕಾಗಿ ಕುಳಿತಿದ್ದ **ಪರೀಕ್ಷಿತಾ** ಪರೀಕ್ಷಿತ್ ರಾಜನಿಂದ **ಕಥಾಸು** ಪರಮಾತ್ಮನ ಗುಣಕಥನದಲ್ಲಿ **ಚೋದಿತಃ** ಪ್ರೇರಿತರಾದ **ಬಾದರಾಯಣಿಃ ತು** ವ್ಯಾಸಪುತ್ರರಾದ ಶುಕಾಚಾರ್ಯರಾದರೋ **ಶ್ರುಣ್ವತಾಂ** ಕೇಳಲು ಕುತೂಹಲ ಉಳ್ಳವರಾಗಿದ್ದ **ಮುನೀನಾಂ** ಮನನಶೀಲರಾದ ಜ್ಞಾನಿಗಳ **ಸದಸಿ** ಸಭೆಯಲ್ಲಿ **ಪಾರ್ಥಿವಂ** ಪರೀಕ್ಷಿದ್ರಾಜನನ್ನು **ಪ್ರತಿನಂದ್ಯ** ಪ್ರಶಂಸಿಸಿ **ಮುದಾ** ಸಂತೋಷದಿಂದ **ಉವಾಚ ಸ್ಮ** ಹೇಳಿದರು. ।।೩೩।।



# ಅಥ ದ್ವಿತೀಯೋಽಧ್ಯಾಯಃ

## (ಗಜೇಂದ್ರಮೋಕ್ಷ ಪ್ರಾರಂಭ)

ಸತ್ಯ ಃ- 'ಮನ್ಯೇ ಧನ.....' ಮುಂತಾಗಿ 'ಭಕ್ತ್ಯಾ ತುತೋಷ ಭಗವಾನ್ನನು ಯೂಥಪಾಯ' ಎಂಬಲ್ಲಿವರೆಗೆ ಸಪ್ತಮಸ್ಕಂಧದಲ್ಲಿ, ''ನ ಜನ್ಮ ನೂನಂ ಮಹತೋ ನ ಸೌಭಗಂ ನ ಚಾಂಗ ಬುದ್ಧಿರ್ನಾಕೃತಿಸ್ತೋಷಹೇತುಃ । ತಿರ್ಯಗ್ವಿಸೃಷ್ಟಾನಪಿ ನೋ ವನೌಕಸಶ್ಚಕಾರ ಸಖ್ಯೇ ಚ ಸ ಲಕ್ಷ್ಮಣಾಗ್ರಜಃ ॥'' ಎಂಬುದಾಗಿ ಐದನೇಸ್ಕಂಧದಲ್ಲಿ ಜಾತಿಯು ಅಪ್ರಯೋಜಕ ಎಂದು ವಿವರಿಸಿದೆ. ಅಷ್ಟೇ ಅಲ್ಲದೇ ಈ ಮುಂದೆ ಹೇಳುವ ಕಾರಣದಿಂದಲೂ ಜಾತಿಯು ಅಪ್ರಯೋಜಕವು. ಶ್ರೀಹರಿಯನ್ನು ಸಂತೋಷಪಡಿಸಲು ಭಕ್ತಿಯೊಂದೇ ಪ್ರಯೋಜಕ ಎಂಬುದನ್ನು ಗಜೇಂದ್ರಮೋಚನ ಇತಿಹಾಸ ಹೇಳುವ ಮೂಲಕ ತಿಳಿಸುವರು. ಮೊದಲಿಗೆ ಹೆಣ್ಣಾನೆಗಳೊಡನೆ ಗಜರಾಜನ ಕ್ರೀಡೆಯನ್ನು, ಕ್ರೀಡಾಸಾಧನವನ್ನು ಕ್ರೋಡೀಕರಿಸಿ ಹೇಳುವರು -

ಲಿಂಗೇರೀ ಃ- ಗಜೇಂದ್ರನಿಂದ ಸ್ತುತನಾದ ಭಗವಂತ ಪ್ರಸನ್ನನಾದ. ಗ್ರಾಹದಿಂದ (ಮೊಸಳೆ) ಗಜೇಂದ್ರನನ್ನು ಮೋಚನ ಮಾಡಿದ. ಗಜೇಂದ್ರನಂತೆ ನಾವೆಲ್ಲರೂ ಸಂಸಾರಗ್ರಾಹದಿಂದ ಗ್ರಸ್ತರಾಗಿದ್ದೇವೆ. ಭಗವಂತನ ಸ್ತೋತ್ರಾದಿರೂಪವಾದ ಆರಾಧನೆಯನ್ನು ಮಾಡಿದಾಗಲೇ ಪರಮಾತ್ಮ ಪರಿತುಷ್ಟನಾಗುತ್ತಾನೆ. ಪರಮಾತ್ಮನ ಪ್ರಸಾದದಿಂದ ಸಂಸಾರರೂಪಗ್ರಾಹದಿಂದ ನಾವೆಲ್ಲ ಮುಕ್ತರಾಗುತ್ತೇವೆ. ಇದನ್ನು ಬೋಧಿಸಲು ಉಪೋದ್ಘಾತರೂಪವಾಗಿ ಗಜೇಂದ್ರಮೋಚನ ಪ್ರಕಾರವನ್ನು ಹೇಳುತ್ತಿದ್ದಾರೆ-

**ಶ್ರೀಶುಕ ಉವಾಚ**

**ಆಸೀದ್ ಗಿರಿವರೋ ರಾಜನ್ ತ್ರಿಕೂಟ ಇತಿ ವಿಶ್ರುತಃ ।**
**ಕ್ಷೀರೋದೇನಾವೃತಃ ಶ್ರೀಮಾನ್ ಯೋಜನಾಯುತಮುಚ್ಛ್ರಿತಃ ॥೧॥**

**ರಾಜನ್** ಪರೀಕ್ಷಿತನೇ ! **ಕ್ಷೀರೋದೇನ** ಕ್ಷೀರಸಮುದ್ರದಿಂದ (ಹಾಲಿನಂತಿರುವ ನೀರುಳ್ಳ ಸರೋವರದಿಂದ) **ಆವೃತಃ** ಸುತ್ತುವರೆದ **ಶ್ರೀಮಾನ್** ರತ್ನ ಮೊದಲಾದ ಸಂಪತ್ತುಳ್ಳ **ಯೋಜನಾಯುತಂ** ಹತ್ತುಸಾವಿರ ಯೋಜನಗಳಷ್ಟು **ಉಚ್ಛ್ರಿತಃ** ಎತ್ತರವಾದ **ತ್ರಿಕೂಟಃ ಇತಿ ವಿಶ್ರುತಃ** ತ್ರಿಕೂಟವೆಂದು ಪ್ರಸಿದ್ಧವಾದ **ಗಿರಿವರಃ** ಶ್ರೇಷ್ಠವಾದ ಪರ್ವತವು **ಆಸೀತ್** ಇದ್ದಿತು. (ಇದೆ.)

ನಾಲ್ಕು ಕ್ರೋಶ ಎಂದರೆ ಒಂದು ಯೋಜನ. ಒಂದುಕ್ರೋಶ ಎಂದರೆ ಮೂರು ಮೈಲುಗಳು, ಒಂದು ಹರದಾರಿ. ಒಟ್ಟು ತ್ರಿಕೂಟ ಪರ್ವತವು ೧೨,೦೦೦ ಸಾವಿರ ಮೈಲು ಎತ್ತರವಾಗುವದು.

''ಉದಕಸ್ಯೋದಃ ಸಂಜ್ಞಾಯಾಮ್'' (ಸಿ.ಕೌ.೯೫೫) ಎಂದು ಉದಕಶಬ್ದಕ್ಕೆ ಉದಾದೇಶವಾಗಿ ಉದ ಎಂದಾಗುತ್ತದೆ. ।।೧।।

**ತಾವತಾ ವಿಸ್ತೃತಃ ಪರ್ಯಕ್ ತ್ರಿಭಿಃ ಶೃಂಗೈಃ ಪಯೋನಿಧಿಮ್ ।**
**ದಿಶಶ್ಚ ರೋಚಯನ್ನಾಸ್ತೇ ರೌಪ್ಯಾಯಸಹಿರಣ್ಮಯೈಃ ।।೨।।**

**ತಾವತಾ ಪರ್ಯಕ್ ವಿಸ್ತೃತಃ** ಹತ್ತುಸಾವಿರ ಯೋಜನ ಸುತ್ತಳತೆಯುಳ್ಳ (ಅಗಲವಿರುವ) **ರೌಪ್ಯಾಯಸಹಿರಣ್ಮಯೈಃ** ಬೆಳ್ಳಿ, ಕಬ್ಬಿಣ, ಬಂಗಾರದ **ತ್ರಿಭಿಃ** ಮೂರು **ಶೃಂಗೈಃ** ಶಿಖರಗಳಿಂದ **ಪಯೋನಿಧಿಂ** ಕ್ಷೀರಸಮುದ್ರವನ್ನು **ದಿಶಃ** ದಿಕ್ಕುಗಳನ್ನು **ರೋಚಯನ್ ಆಸ್ತೇ** ಪ್ರಕಾಶಗೊಳಿಸುತ್ತಾ ಇದೆ. ಇದರಿಂದ ಮೂರು ಕೂಟ (ಶಿಖರ) ವಿರುವದರಿಂದ ತ್ರಿಕೂಟ ಎಂದು ಹೆಸರಾಗಿದೆ ಎಂದು ತಿಳಿಸಿದಂತಾಯಿತು. ।।೨।।

**ಅನ್ಯೈಶ್ಚ ಕಕುಭಃ ಸರ್ವಾ ರತ್ನಧಾತುವಿಚಿತ್ರಿತೈಃ ।**
**ನಾನಾದ್ರುಮಲತಾಗುಲ್ಮೈಃ ನಿರ್ಘೋಷೈರ್ನಿರ್ಝರಾಂಭಸಾಮ್ ।।೩।।**

**ರತ್ನಧಾತುವಿಚಿತ್ರಿತೈಃ** ರತ್ನಗಳಿಂದಲೂ ಗೈರಿಕಾದಿಧಾತುಗಳಿಂದಲೂ ವಿವಿಧ ಬಣ್ಣಗಳುಳ್ಳ **ಅನ್ಯೈಃ ಚ** ಇತರ ಶಿಖರಗಳಿಂದಲೂ **ಸರ್ವಾಃ ಕಕುಭಃ** ಎಲ್ಲ ದಿಕ್ಕುಗಳನ್ನು **ರೋಚಯನ್** ಪ್ರಕಾಶಗೊಳಿಸುತ್ತಾ **ಆಸ್ತೇ** ಇರುವದು. **ನಾನಾದ್ರುಮಲತಾಗುಲ್ಮೈಃ** ಬಗೆ ಬಗೆಯ ಮರಗಳು, ಬಗೆ ಬಗೆಯ ಬಳ್ಳಿಗಳು, ಬಗೆಯ ಬಗೆಯ ಪೊದೆಗಳು ಇವುಗಳಿಂದ **ನಿರ್ಝರಾಂಭಸಾಂ** ಬೆಟ್ಟದ ಝರಿಗಳ ನೀರಿನ **ನಿರ್ಘೋಷೈಃ** ಶಬ್ದಗಳಿಂದ ಎಲ್ಲ ದಿಕ್ಕುಗಳನ್ನು ಪ್ರಕಾಶಪಡಿಸುತ್ತಾ ಇದೆ. ।।೩।।

**ಸದಾ ನಿರ್ಣಿಜ್ಯಮಾನಾಂಘ್ರಿಃ ಸಮಂತಾತ್ ಪಯಊರ್ಮಿಭಿಃ ।**
**ಕರೋತಿ ಶ್ಯಾಮಲಾಂ ಭೂಮಿಂ ಶುಭ್ರೈರ್ಮರಕತಾದಿಭಿಃ ।।೪।।**

**ಪಯಊರ್ಮಿಭಿಃ** (ಕ್ಷೀರಸಮುದ್ರದ) ನೀರಿನ ಅಲೆಗಳಿಂದ ಸದಾ ಯಾವಾಗಲೂ **ನಿರ್ಣಿಜ್ಯಮಾನಾಂಘ್ರಿಃ** ತೊಯ್ಯಲ್ಪಡುವ (ಅಂಘ್ರಿಪದದಿಂದ ಪಾದಪದವನ್ನು ಲಕ್ಷಣಯಾ ತೆಗೆದುಕೊಂಡು, 'ಪಾದಾಃ ಪ್ರತ್ಯಂತಪರ್ವತಾಃ' ಎಂದಿರುವದರಿಂದ) ಪ್ರತ್ಯಂತಪರ್ವತ-ಗಳುಳ್ಳ, **ಶುಭ್ರೈಃ** ಬೇರೆಕಲ್ಲುಗಳಿಂದ ಮಿಶ್ರವಲ್ಲದ, ತ್ರಾಸಾದಿದೋಷರಹಿತವಾದ (ರತ್ನದಲ್ಲಿರುವ ವಡಕು-ಬಿರುಕುಗಳಿಗೆ ತ್ರಾಸವೆನ್ನುವರು, ಅವುಗಳಿಲ್ಲದ) **ಮರಕತಾದಿಭಿಃ** ಇಂದ್ರನೀಲಮಣಿ (ಪಚ್ಚೆ) ರತ್ನಗಳಿಂದ **ಭೂಮಿಂ** ಸಮೀಪಪ್ರದೇಶವನ್ನು **ಶ್ಯಾಮಲಾಂ** ಹಸಿರು ಬಣ್ಣದ್ದನ್ನಾಗಿ **ಕರೋತಿ** ಮಾಡುವದು. ಇದರಿಂದ ಅಲ್ಲಿ ಸಮೃದ್ಧವಾಗಿ ಪಚ್ಚೆಗಳಿವೆ ಎಂದು ತಿಳಿಯುವದು. ।।೪।।

**ಸಿದ್ಧಚಾರಣಗಂಧರ್ವವಿದ್ಯಾಧರಮಹೋರಗೈಃ ।**
**ಕಿನ್ನರೈರಪ್ಸರೋಭಿಶ್ಚ ಕ್ರೀಡದ್ಭಿರ್ಜುಷ್ಟಕಂದರಃ ।।೫।।**

**ಕ್ರೀಡದ್ಭಿಃ** ವಿಹಾರ ಮಾಡುತ್ತಿರುವ **ಸಿದ್ಧಚಾರಣಗಂಧರ್ವವಿದ್ಯಾಧರ- ಮಹೋರಗೈಃ,** ದೇವತೆಗಳ ಕಾರ್ಯಗಳಿಗೆ ಸದಾ ಸಿದ್ಧರಾದ ಸಿದ್ಧರು, ಜಯಕಾರ ಮಾಡುವ ಚಾರಣರು ಗಾನಮಾಡುವ ಗಂಧರ್ವರು, ನರ್ತನಮಾಡುವ ವಿದ್ಯಾಧರರು **ಮಹೋರಗೈಃ** ಪೂಜ್ಯಶ್ರೇಷ್ಠಸರ್ಪಗಳಿಂದ, **ಚ** ಮತ್ತು **ಕಿನ್ನರೈಃ** ಗಾಯಕರಿಂದ **ಅಪ್ಸರೋಭಿಶ್ಚ** ದೇವಲೋಕದ ನರ್ತಕಿಯರಿಂದ **ಜುಷ್ಟಕಂದರಃ** ಸೇವಿತವಾದ ಗುಹೆಗಳುಳ್ಳದ್ದಾಗಿದೆ ಈ ಪರ್ವತ. ।।೫।।

**ಯತ್ರ ಸಂಗೀತಸನ್ನಾದೈರ್ನದದ್ಗುಹಮಮರ್ಷಯಾ ।**
**ಅಭಿ ಗರ್ಜಂತಿ ಹರಯಃ ಶ್ಲಾಘಿನಃ ಪರಶಂಕಯಾ ।।೬।।**

**ಯತ್ರ** ಯಾವ ತ್ರಿಕೂಟಪರ್ವತದಲ್ಲಿ **ಸಂಗೀತಸನ್ನಾದೈಃ** ಗಂಧರ್ವಾದಿಗಳ ಸಂಗೀತದ ಶಬ್ದಗಳಿಂದ **ನದದ್ಗುಹಂ** ಪ್ರತಿಧ್ವನಿ ಮಾಡುವ ಗುಹೆಗಳಿವೆಯೋ **ಅಭಿ** ಆ ಪ್ರದೇಶಗಳನ್ನು ಕುರಿತು, **ಶ್ಲಾಘಿನಃ** ತಾವೇ ಶ್ರೇಷ್ಠವೆಂದು ತಿಳಿದಿರುವ **ಹರಯಃ** ಸಿಂಹಗಳು **ಪರಶಂಕಯಾ** ಶತ್ರುವಾದ ಆನೆಯೆಂಬ ಸಂದೇಹದಿಂದ ಅಥವಾ ಮತ್ತೊಂದು ಸಿಂಹ ಎಂಬ ಶಂಕೆಯಿಂದ **ಅಮರ್ಷಯಾ** ಅಸಹನೆಯಿಂದ **ಗರ್ಜಂತಿ** ಕೂಗುತ್ತವೆ. ಅಂತಹ ಪರ್ವತವು ಇದೆ ಎಂದು ಅನ್ವಯ. ।।೬।।

**ನಾನಾರಣ್ಯಪಶುವ್ರಾತಸಂಕುಲದ್ರೋಣ್ಯಲಂಕೃತಃ ।**
**ಚಿತ್ರದ್ರುಮಸುರೋದ್ಯಾನಕಲಕಂಠವಿಹಂಗಮಃ ।।೭।।**

**ನಾನಾ** ಅನೇಕಬಗೆಯ **ಅರಣ್ಯಪಶು** ವನ್ಯಮೃಗಗಳ **ವ್ರಾತ** ಸಮೂಹದಿಂದ **ಸಂಕುಲ** ವ್ಯಾಪ್ತವಾದ **ದ್ರೋಣ್ಯಲಂಕೃತಃ** ಎರಡು ಪರ್ವತಗಳ ಮಧ್ಯಪ್ರದೇಶದಿಂದ

ಅಲಂಕೃತವಾದ, **ಚಿತ್ರದ್ರುಮ** ಅನೇಕ ಆಶ್ಚರ್ಯಕರ ಮರಗಳುಳ್ಳ **ಸುರೋದ್ಯಾನ** ದೇವತೆಗಳ ವಿಹಾರಯೋಗ್ಯವಾದ ಉದ್ಯಾನಗಳಲ್ಲಿರುವ **ಕಲಕಂಠವಿಹಂಗಮಃ** ಮಧುರವಾಗಿ ಧ್ವನಿಮಾಡುವ ಪಕ್ಷಿಗಳುಳ್ಳ, ತ್ರಿಕೂಟವೆಂಬ ಪರ್ವತವಿದೆ ಎಂದನ್ವಯ. ।।೭।।

**ಸರಿತ್ಸರೋಭಿರಚ್ಛೋದೈಃ ಪುಲಿನೈರ್ಮಣಿವಾಲುಕೈಃ ।**
**ದೇವಸ್ತ್ರೀಮಜ್ಜನಾಮೋದಸೌರಭಾಕ್ತಾನಿಲೈರ್ಯುತಃ ।।೮।।**

**ಅಚ್ಛೋದೈಃ** ನಿರ್ಮಲವಾದ ನೀರುಗಳುಳ್ಳ **ಸರಿತ್ಸರೋಭಿಃ** ನದಿ ಮತ್ತು ಸರೋವರಗಳಿಂದ **ಯುತಃ** ಕೂಡಿದ, **ಮಣಿವಾಲುಕೈಃ** ಮಣಿಗಳೆಂಬ ಮರಳಿನಿಂದ **ಯುತಃ** ಕೂಡಿದ, **ಪುಲಿನೈಃ** ನದೀತೀರಗಳಿಂದ **ಯುತಃ** ಕೂಡಿದ, **ದೇವಸ್ತ್ರೀ** ದೇವತಾಸ್ತ್ರೀಯರ **ಮಜ್ಜನ** ಸ್ನಾನದಿಂದ ಹುಟ್ಟಿದ **ಆಮೋದ** ಪ್ರಮೋದಗಂಧ (ಅಂದರೆ ಉತ್ತಮಜಾತಿಯ ಹೆಂಗಸಿನ ಉಸಿರಿನ ವಾಸನೆ, ಬಾಯಿಯ ಪರಿಮಳ) ಅದರಿಂದ ಉಂಟಾದ **ಸೌರಭ್ಯ** ಸುಗಂಧದಿಂದ **ಆಕ್ತ** ಮಿಶ್ರವಾದ **ಅನಿಲೈಃ** ಗಾಳಿಗಳಿಂದ **ಯುತಃ** ಕೂಡಿದ ಪರ್ವತ ಇದೆ ಎಂದನ್ವಯ. ।।೮।।

**ತಸ್ಯ ದ್ರೋಣ್ಯಾಂ ಭಗವತೋ ವರುಣಸ್ಯ ಮಹಾತ್ಮನಃ ।**
**ಉದ್ಯಾನಮೃತುಮನ್ನಾಮ ಆಕ್ರೀಡಂ ಸುರಯೋಷಿತಾಮ್ ।।೯।।**

**ತಸ್ಯ** ಆ ತ್ರಿಕೂಟಪರ್ವತದ **ದ್ರೋಣ್ಯಾಂ** ತಗ್ಗುಪ್ರದೇಶದಲ್ಲಿ **ಮಹಾತ್ಮನಃ** ಪ್ರಶಸ್ತಮನಸ್ಸುಳ್ಳ **ಭಗವತಃ** ಸ್ವಯೋಗ್ಯ ಐಶ್ವರ್ಯಾದಿಗಳುಳ್ಳ **ವರುಣಸ್ಯ** ವರುಣದೇವರ **ಸುರಯೋಷಿತಾಂ** ದೇವಸ್ತ್ರೀಯರ **ಆಕ್ರೀಡಂ** ಕ್ರೀಡೆಗೆ ಉಚಿತಸ್ಥಲವಾದ **ಋತುಮನ್ನಾಮ ಉದ್ಯಾನಂ ಆಸೀತ್** ಎಲ್ಲ ಋತುಗಳಲ್ಲಿ ಬರುವ ಎಲ್ಲ ಹೂ-ಹಣ್ಣು ಮುಂತಾದವುಗಳಿಂದ ಯಾವಾಗಲೂ ತುಂಬಿರುವದರಿಂದ ಋತುಮತ್ ಎಂಬ ಹೆಸರಿನ ಉದ್ಯಾನವನವು ಇದ್ದಿತು.

ನಾಮ ಆಕ್ರೀಡಂ ಎನ್ನುವಲ್ಲಿ ವಿವಕ್ಷಾ ಇಲ್ಲದ್ದರಿಂದ ಸಂಧಿಯಾಗಿಲ್ಲ. ಅದು ಮನುಷ್ಯಾದ್ಯಗಮ್ಯತ್ವಕ್ಕೆ ಸೂಚಕವಾಗಿದೆ. ।।೯।।

ಉದ್ಯಾನವನ್ನು ವರ್ಣಿಸುತ್ತಾರೆ-

**ಸರ್ವತೋಽಲಂಕೃತಂ ದಿವ್ಯೈರ್ನಿತ್ಯಪುಷ್ಪಫಲದ್ರುಮೈಃ ।**
**ಮಂದಾರೈಃ ಪಾರಿಜಾತೈಶ್ಚ ಪಾಟಲಾಶೋಕಚಂಪಕೈಃ ।।೧೦।।**

**ದಿವ್ಯೈಃ** ಅಲೌಕಿಕವಾದ ಶ್ರೇಷ್ಠವಾದ **ನಿತ್ಯಂ** ಯಾವಾಗಲೂ **ಪುಷ್ಪಫಲದ್ರುಮೈಃ** ಹೂವು ಹಣ್ಣುಗಳಿಂದ ಕೂಡಿದ ಗಿಡಗಳಿಂದ, **ಮಂದಾರೈಃ** ಮಂದಾರಗಳಿಂದ, **ಪಾರಿಜಾತೈಃ** ಪ್ರಸಿದ್ಧ ಪಾರಿಜಾತಗಳಿಂದಲೂ, **ಪಾಟಲಾಶೋಕಚಂಪಕೈಃ** ಪಾಟಲ ಪಾದರಿ ಅಶೋಕ

(ಬಕುಲ)ಮುಲ್ಲಮುತ್ತ **ಚಂಪಕೈಃ** ಸಂಪಿಗೆ ಮರಗಳಿಂದ **ಸರ್ವತಃ** ಸುತ್ತಲೂ **ಅಲಂಕೃತಂ** ಅಲಂಕೃತವಾದ ಉದ್ಯಾನವಿದೆ.

ಮಂದಾರ ಎಂದರೆ ಅರ್ಕವೃಕ್ಷ, ಎಕ್ಕೇಗಿಡ.

**ಜ್ಞೇಯಂ ಪ್ರಾಯಃ ಪ್ರತಿಪದಂ ವಿವೃತಾವಮರಸ್ಯ ತು ।**
**ಯತ್ರಾನ್ಯದೀಯಂ ತನ್ನಾಮ ಗೃಹ್ಯತೇಽತ್ರೇತಿ ಚ ಸ್ಥಿತಿಃ ॥**

ಅಂದರೆ :- ಅಮರದಲ್ಲಿ ಒಂದುಶಬ್ದಕ್ಕೆ ಅನೇಕ ಅರ್ಥ ಹೇಳಿರುವಾಗ ಆ ಅರ್ಥವನ್ನು ಹೇಳುವ ಬೇರೆ ಪದವಿದ್ದಾಗ ಅದನ್ನು ಬಿಟ್ಟು ಇನ್ನೊಂದು ಅರ್ಥ ತೆಗೆದುಕೊಳ್ಳುವದು ಪದ್ಧತಿ ಎಂದು ಭಾವ. ಉದಾಹರಣೆ : ಇದೇ ಮಂದಾರ ಪದಕ್ಕೆ ೧) ಇಂದ್ರನ ಉದ್ಯಾನದಲ್ಲಿಯ ದೇವತರುಗಳ ಐದರಲ್ಲಿ (ಮಂದಾರ, ಪಾರಿಜಾತ, ಸಂತಾನ, ಕಲ್ಪವೃಕ್ಷ, ಹರಿಚಂದನ ಇವು ಐದು ನಂದನವನದಲ್ಲಿರುವವು. ಅವುಗಳಲ್ಲಿ) ಒಂದು ಮಂದಾರ (ಸಂತೋಷದಾಯಕ) ೨) ಪಾರಿಜಾತ ೩) ಅರ್ಕವೃಕ್ಷ ೪) ಉಮ್ಮತಿಗಿಡ ೫) ಆನೆ ಹೀಗೆ ಅನೇಕ ಅರ್ಥ ಇವೆ. ಇಲ್ಲಿ ಮಂದಾರ ಪಾರಿಜಾತ ಎರಡು ಹೇಳಿದ್ದರಿಂದ ಮಂದಾರ ಪದಕ್ಕೆ ಪಾರಿಜಾತ ಎಂಬ ಅರ್ಥ ಬಿಟ್ಟು ಅರ್ಕವೃಕ್ಷ ಎಂಬ ಅರ್ಥ ಮಾಡಿದೆ. ।।೧೦।।

**ಚೂತೈಃ ಪ್ರಿಯಾಲೈಃ ಪನಸೈರಾಮ್ರೈರಾಮ್ರಾತಕೈರಪಿ ।**
**ಕ್ರಮುಕೈರ್ನಾರಿಕೇಲೈಶ್ಚ ಖರ್ಜೂರೈರ್ಬೀಜಪೂರಕೈಃ ।।೧೧।।**

**ಚೂತೈಃ** ಮಾವಿನಮರಗಳಿಂದ **ಪ್ರಿಯಾಲೈಃ** (ಚಾರಿವಾಳವೃಕ್ಷಗಳಿಂದ) ಸಪೋಟಾ ವೃಕ್ಷಗಳಿಂದ **ಪನಸೈಃ** ಹಲಸಿನ ಮರಗಳಿಂದ **ಆಮ್ರೈಃ** ರಸಭರಿತವಾದ ದೊಡ್ಡಹಣ್ಣಿನ ಮಾವಿನ ಗಿಡಗಳಿಂದ **ಆಮ್ರಾತಕೈಃ** ಅಮಟೆ ಗಿಡಗಳಿಂದ **ಕ್ರಮುಕೈಃ** ಅಡಿಕೆ ಗಿಡಗಳಿಂದ **ನಾರಿಕೇಲೈಃ** ತೆಂಗಿನ ಮರಗಳಿಂದ **ಖರ್ಜೂರೈಃ** ಖರ್ಜೂರದ ಗಿಡಗಳಿಂದ **ಬೀಜಪೂರಕೈಃ** ದಾಳಿಂಬೆ ಅಥವಾ ಚೇಪೇ (ಪೇರಲ) ಗಿಡಗಳಿಂದ ಅಲಂಕೃತವಾದ ಉದ್ಯಾನವೆಂದು ಅನ್ವಯ. ।।೧೧।।

**ಮಧುಕೈಃ ಸಾಲತಾಲೈಶ್ಚ ತಮಾಲೈ ರಸನಾರ್ಜುನೈಃ ।**
**ಅರಿಷ್ಟೋದುಂಬರಪ್ಲಕ್ಷೈರ್ವಟೈಃ ಕಿಂಶುಕಚಂದನೈಃ ।।೧೨।।**

**ಮಧುಕೈಃ** ಇಪ್ಪಿಗಿಡಗಳಿಂದ **ಸಾಲ** ಸರ್ಜಮರಗಳಿಂದ **ತಾಲೈಃ** ತಾಳಮರಗಳಿಂದ **ತಮಾಲೈಃ** ಹೊಂಗೆಮರಗಳಿಂದ **ರಸನಾರ್ಜುನೈಃ** ಉಮ್ಮತಿಗಿಡಗಳಿಂದ (ಅತ್ತಿಗಿಡಗಳಿಂದ) **ಅಸನ** ಹೊನ್ನಮರ **ಅರ್ಜುನ** ಕೆಂಪು ಮತ್ತಿಮರ **ಅರಿಷ್ಟೋದುಂಬರಪ್ಲಕ್ಷೈಃ** ಕ್ರಮವಾಗಿ ಅರಟಾಲ ಅತ್ತಿ ಬಸರಿ ಗಿಡಗಳಿಂದ **ವಟೈಃ** ಆಲದ ಮರಗಳಿಂದ **ಕಿಂಶುಕ** ಮುತ್ತಲ **ಚಂದನೈಃ** ಶ್ರೀಗಂಧದ ಗಿಡಗಳಿಂದ ಕೂಡಿದ ವನ. ।।೧೨।।

**ಪಿಚುಮಂದೈಃ ಕೋವಿದಾರೈಃ ಸರಲೈಃ ಸುರದಾರುಭಿಃ ।**
**ದ್ರಾಕ್ಷೇಕ್ಷುರಂಭಾಜಂಬೂಭಿರ್ಬದರ್ಯಕ್ಷಾಭಯಾಮಲೈಃ ॥೧೩॥**

**ಪಿಚುಮಂದೈಃ** ಬೇವಿನ ಮರಗಳಿಂದ **ಕೋವಿದಾರೈಃ** ಕಂಚಾಲಿ ಮರಗಳಿಂದ **ಸರಲೈಃ** ಸರ(ಹೊನ್ನೆ) ಮರಗಳಿಂದ **ಸುರದಾರುಭಿಃ** ದೇವದಾರು ಮರಗಳಿಂದ **ದ್ರಾಕ್ಷೇಕ್ಷು** ದ್ರಾಕ್ಷಿ, ಕಬ್ಬು **ರಂಭಾ** ಬಾಳೆ **ಜಂಬೂಭಿಃ** ನೇರಳೆ ಗಿಡಗಳಿಂದ **ಬದರಿ** ಬೋರೆಗಿಡ **ಅಕ್ಷತಾರಿ** ಅಭಯ ಅರಳಿ(ಅಶ್ವತ್ಥ) **ಆಮಲೈಃ** ನೆಲ್ಲಿಗಿಡಗಳಿಂದ ಅಲಂಕೃತ ಉದ್ಯಾನವನ. ॥೧೩॥

**ಬಿಲ್ವೈಃ ಕಪಿತ್ಥೈರ್ಜಂಬೀರೈರ್ವೃತೋ ಭಲ್ಲಾತಕಾದಿಭಿಃ ।**
**ತಸ್ಮಿನ್ ಸರಃ ಸುವಿಪುಲಂ ಲಸತ್ಕಾಂಚನಪಂಕಜಮ್ ॥೧೪॥**

**ಬಿಲ್ವೈಃ** ಬಿಲ್ವಪತ್ರೆಗಿಡಗಳಿಂದ **ಕಪಿತ್ಥೈಃ** ಬೆಳವಲಮರಗಳಿಂದ **ಜಂಬೀರೈಃ** ನಿಂಬೆ ಗಿಡಗಳಿಂದ **ಭಲ್ಲಾತಕಾದಿಭಿಃ** ಕೇರುಮರಗಳಿಂದ **ವೃತಃ** ಕೂಡಿದ್ದಾಗಿ **ಆಸ್ತೇ** ಇದೆ. **ತಸ್ಮಿನ್** ತ್ರಿಕೂಟಪರ್ವತದಲ್ಲಿರುವ ಋತುಮನ್ನಾಮಕ ವರುಣನ ಉದ್ಯಾನವನದಲ್ಲಿ **ಸುವಿಪುಲಂ** ವಿಸ್ತಾರವಾದ **ಲಸತ್ಕಾಂಚನಪಂಕಜಂ** ಬಂಗಾರದಂತೆ ಪ್ರಕಾಶಮಾನವಾದ ಕಮಲಗಳಿಂದ ಯುಕ್ತವಾದ **ಸರಃ** ಸರೋವರವು ಇದೆ. ॥೧೪॥

**ಕುಮುದೋತ್ಪಲಕಲ್ಹಾರಶತಪತ್ರಶ್ರಿಯೋರ್ಜಿತಮ್ ।**
**ಮತ್ತಷಟ್ಪದನಿರ್ಜುಷ್ಟಂ ಶಕುಂತೈಃ ಕಲನಿಃಸ್ವನೈಃ ॥೧೫॥**

**ಕುಮುದ** ಕನ್ನೈದಿಲೆ **ಉತ್ಪಲ** ನೈದಲೆ **ಕಲ್ಹಾರ** ಕುವಲಯಪುಷ್ಪ **ಶತಪತ್ರ** ನೂರುದಳದ ಕಮಲ ಇವುಗಳ **ಶ್ರಿಯಾ** ಕಾಂತಿಯಿಂದ **ಊರ್ಜಿತಂ** ಉತ್ಕೃಷ್ಟವಾದ, **ಮತ್ತಷಟ್ಪದ-ನಿರ್ಜುಷ್ಟಂ** ಪುಷ್ಪರಸವನ್ನು ಹೀರಿ ಮತ್ತವಾದ ದುಂಬಿಗಳಿಂದ ಸಂಪೂರ್ಣವಾಗಿ ಸೇವಿತವಾದ, (ನಿರ್ಘುಷ್ಟ ಎಂಬ ಪಾಠದಲ್ಲಿ ದುಂಬಿಗಳ ಝೇಂಕಾರದಿಂದ ಕೂಡಿದ ಎಂದರ್ಥ) **ಕಲನಿಃಸ್ವನೈಃ** ಅವ್ಯಕ್ತ ಮಧುರ ಧ್ವನಿಯುಳ್ಳ **ಶಕುಂತೈಃ** ಹಕ್ಕಿಗಳಿಂದ **ಊರ್ಜಿತಂ** ಶೋಭಿಸುವ ಸರೋವರವಿದೆ. ॥೧೫॥

**ಹಂಸಕಾರಂಡವಾಕೀರ್ಣಂ ಚಕ್ರಾಹ್ವೈಃ ಸಾರಸೈರಪಿ ।**
**ಜಲಕುಕ್ಕುಟಕೋಯಷ್ಟಿದಾತ್ಯೂಹಕುಲಕೂಜಿತಮ್ ॥೧೬॥**

**ಹಂಸ** ಹಂಸಪಕ್ಷಿ **ಕಾರಂಡವ** ಬಾತುಕೋಳಿ ಇವುಗಳಿಂದ **ಆಕೀರ್ಣಂ** ತುಂಬಿದ, **ಚಕ್ರಾಹ್ವೈಃ** ಚಕ್ರವಾಕಗಳಿಂದ **ಸಾರಸೈಃ ಅಪಿ** ಬಕಪಕ್ಷಿಗಳಿಂದಲೂ ತುಂಬಿದ, **ಜಲಕುಕ್ಕುಟ** ನೀರುಕೋಳಿ **ಕೋಯಷ್ಟಿ** ಕಣ್ಣುಕಾಣದ ಬಕ **ದಾತ್ಯೂಹ** ಕಪ್ಪುಕುತ್ತಿಗೆಯ ಬಾತುಕೋಳಿ ಇವುಗಳ **ಕುಲ** ಸಮೂಹದಿಂದ **ಕೂಜಿತಂ** ಶಬ್ದವುಳ್ಳ ಸರೋವರವಿದೆ. ॥೧೬॥

**ಮತ್ಸ್ಯಕಚ್ಛಪಸಂಚಾರಚಲತ್ಪದ್ಮರಜಃ ಪಯಃ ।**
**ಕದಂಬವೇತಸನಲನೀಪವಂಜುಲಕೈರ್ವೃತಮ್ ॥೧೭॥**

**ಮತ್ಸ್ಯ** ಮೀನು **ಕಚ್ಛಪ** ಆಮೆ ಇವುಗಳ **ಸಂಚಾರ** ಸಂಚಾರದಿಂದ **ಚಲತ್** ಅಲ್ಲಾಡುವ **ಪದ್ಮ** ಕಮಲಗಳ **ರಜಃಪಯಃ** ಪರಾಗಗಳುಳ್ಳ ನೀರುಳ್ಳ **ಕದಂಬ** ಕಡಹದ ಮರ **ವೇತಸ** ಜೊಂಡು ನಲ ದೇವನೀಲ **ನೀಪ** ಒಂದುಬಗೆಯ ಕಡಹ **ವಂಜುಲಕೈಃ** ಜೊಂಡಿನ ವಿಶೇಷಗಳಿಂದ **ವೃತಂ** ಕೂಡಿರುವ ಸರೋವರ. ॥೧೭॥

**ಕುಂದೈಃ ಕುರಬಕಾಶೋಕೈಃ ಶಿರೀಷೈಃ ಕುಟಜೇಂಗುದೈಃ ।**
**ಕುಬ್ಜಕೈಃ ಸ್ವರ್ಣಯೂಥೀಭಿರ್ನಾಗಪುನ್ನಾಗಜಾತಿಭಿಃ ॥೧೮॥**

**ಮಲ್ಲಿಕಾಶತಪತ್ರೈಶ್ಚ ಮಾಧವೀಜಾಲಕಾದಿಭಿಃ ।**
**ಶೋಭಿತಂ ತೀರಜೈಶ್ಚಾನ್ಯೈರ್ನಿತ್ಯರ್ತುಭಿರಲಂದ್ರುಮೈಃ ॥೧೯॥**

**ತೀರಜೈಃ** ದಡದಲ್ಲಿ ಬೆಳೆದಿರುವ **ಕುಂದೈಃ** ಮೊಳ್ಳೆಹೂವಿನಗಿಡ **ಕುರಬಕಾಶೋಕೈಃ** ಗೋರಂಟೆ (ಕೆಂಪು) ಬಿಳಿಕೆಂಪು ಎರಡು ಬಗೆಯ ಅಶೋಕವೃಕ್ಷಗಳಿಂದ **ಶಿರೀಷೈಃ** ಶೀರಿಷಪುಷ್ಪದ ಗಿಡಗಳಿಂದ **ಕುಟಜ** ಬೆಟ್ಟಮಲ್ಲಿಗೆ **ಇಂಗುದೈಃ** ಇಂಗಲಿ ಹೂ ಗಿಡಗಳಿಂದ **ಕುಬ್ಜಕೈಃ** ಭದ್ರಕರಣಿ ಹೂವುಗಿಡಗಳಿಂದ **ಸ್ವರ್ಣಯೂಥೀಭಿಃ** ಶೇವಂತಿಕಾ ಹೂಗಿಡಗಳಿಂದ **ನಾಗ** ನಾಗಕೇಶರ **ಪುನ್ನಾಗ** ಸುರಗಿ **ಜಾತಿಭಿಃ** ಜಾಜಿ ಗಿಡಗಳಿಂದ,

**ಮಲ್ಲಿಕಾ** ಮಲ್ಲಿಗೆ **ಶತಪತ್ರೈಶ್ಚ** ಹೆಚ್ಚುದಳಗಳಿರುವ (ಗುಲಾಬಿ) ಹೂಗಿಡಗಳಿಂದ **ಮಾಧವೀ** ವಸಂತಿಕಾಬಳ್ಳಿ **ಜಾಲಕಾದಿಭಿಃ** ಕಸ್ತೂರಿಜಾಲ ಗಿಡಗಳಿಂದ **ಅನ್ಯೈಃ** ಇಲ್ಲಿ ಹೇಳದಿರುವ ಆಯಾ ಹೆಸರಿನ ಹೂಗಳಿಂದ **ಶೋಭಿತಂ** ಅಲಂಕೃತವಾದ, ಅನೇಕ ರೀತಿಯ **ನಿತ್ಯರ್ತುಭಿಃ** ಎಲ್ಲ ಋತುಗಳಲ್ಲಿಯೂ ಇರುವ **ಅಲಂದ್ರುಮೈಃ** ನಿತ್ಯವೂ ಫಲಪುಷ್ಪಗಳುಳ್ಳ ಗಿಡಗಳಿಂದ ಶೋಭಿಸುವ ಸರೋವರವಿದೆ. ॥೧೮,೧೯॥

ಯಾವುದಕ್ಕಾಗಿ ಇಷ್ಟೆಲ್ಲ ಹೇಳಿದರೋ ಅದನ್ನು ಹೇಳುವರು -

**ತತ್ರೈಕದಾ ತದ್ಗಿರಿಕಾನನಾಶ್ರಯಃ ಕರೇಣುಭಿರ್ವಾರಣಯೂಥಪಶ್ಚರನ್ ।**
**ಸಕಂಟಕಂ ಕೀಚಕವೇಣುವೇತ್ರವದ್ವಿಶಾಲಗುಲ್ಮಂ ಪ್ರರುಜನ್ ವನಸ್ಪತೀನ್॥೨೦॥**

''ತತ್ರ ವಾರಣಯೂಥಪಃ ತತ್ಸರೋವರಾಭ್ಯಾಶಂ ದ್ರುತಂ ಅಗಮತ್'' ಎಂದು ೨೪ನೇ ಶ್ಲೋಕದಿಂದ ಅನ್ವಯ.

**ತತ್ರ** ಆ ಉದ್ಯಾನವನದಲ್ಲಿ ಅಥವಾ ಹಿಂದೆ ಹೇಳಿದ ಗುಣಗಳುಳ್ಳ ಸರೋವರದ ಸಮೀಪದಲ್ಲಿ (ವಟೇ ಗಾವಃ ಎಂಬಂತೆ ಸಾಮಿಪ್ಯಾಧಿಕರಣೇ ಸಪ್ತಮೀ) **ಏಕದಾ** ಒಂದು

ಕಾಲದಲ್ಲಿ **ತದ್ಗಿರಿಕಾನನಾಶ್ರಯಃ** ಆ ತ್ರಿಕೂಟಪರ್ವತದ ಅಡವಿಯಲ್ಲಿ ವಾಸಿಸುವ **ವಾರಣಯೂಥಪಃ** ಆನೆಯ ಗುಂಪಿಗೆ ಪಾಲಕವಾದ ಸಲಗವು **ಕರೇಣುಭಿಃ** ಹೆಣ್ಣಾನೆಗಳಿಂದ ಕೂಡಿಕೊಂಡು **ಚರನ್** ಸಂಚರಿಸುತ್ತ **ಸಕಂಟಕಂ** ಮುಳ್ಳಿನಿಂದ ಕೂಡಿದ, (ಹೂಹಣ್ಣುಗಳಿಲ್ಲದ) **ಕೀಚಕ** ಪೊಳ್ಳು ಬಿದರು, **ವೇಣು** ಗಟ್ಟಿಬಿದರು **ವೇತ್ರವತ್** ಬೆತ್ತದ ಗಿಡಗಳುಳ್ಳ, **ವಿಶಾಲಗುಲ್ಮಂ** ವಿಸ್ತಾರವಾದ ಪೊದೆಗಳನ್ನು **ಪ್ರರುಜನ್** ಹಾಳು ಮಾಡುತ್ತ **ವನಸ್ಪತೀನ್** ಹೂವಿಲ್ಲದೇ ಹಣ್ಣು ಬಿಡುವ ದೊಡ್ಡ ದೊಡ್ಡ ಮರಗಳನ್ನು **ಪ್ರರುಜನ್** ಕಿತ್ತುಹಾಕುತ್ತ (ಇತ್ತು).

♦ ವಾರಣಯೂಥಪಃ ಎಂಬಲ್ಲಿ ಯದ್ಯಪಿ 'ಇಭಃ ಸ್ತಂಬೇರಮಃ ಪದ್ಮೀ ಯೂಥನಾಥಸ್ತು ಯೂಥಪಃ' ಎಂಬ ಅಮರದ ಪ್ರಕಾರ ಯೂಥಪಪದದಿಂದಲೇ ಆನೆ ಎಂದರ್ಥ ಆಗುವದು. ಆದರೂ ವಾರಣಶಬ್ದದಿಂದ ನಿವಾರಿತ ಅರ್ಥವುಳ್ಳದ್ದಾಗಿ ಯೂಥಪಶಬ್ದವು ಕೇವಲ ನಾಥ ಎಂಬರ್ಥವನ್ನು ಮಾತ್ರ ಕೊಡುವದು. ವಾಚಕಪದ (ಸಮಭಿವ್ಯಾಹರ) ಸಮೀಪದಲ್ಲಿದ್ದರೆ ವಿಶೇಷ್ಯಮಾತ್ರಬೋಧಕತ್ವ ಬರುವದು. ಉದಾಹರಣೆಗೆ ಃ- ಕೀಚಕಶಬ್ದಕ್ಕೇನೆ ಮಾರುತಪೂರ್ಣರಂಧ್ರವಿಶಿಷ್ಟ ವೇಣುಭೋದಕತ್ವ ಇದೆ. 'ಕೀಚಕಾ ವೇಣವಸ್ತೇ ಸ್ಯುಃ ಯೇ ಸ್ವನಂತ್ಯನಿಲೋದ್ಧತಾಃ' ಎಂದಿದೆ. ಆದರೆ 'ಸಕೀಚಕೈರ್ಮಾರುತಪೂರ್ಣರಂಧ್ರೈಃ' ಎಂಬ ಪ್ರಯೋಗದಲ್ಲಿ ಕೀಚಕ ಎಂದರೆ ಕೇವಲ ವೇಣು ಎಂದಿಷ್ಟೇ ಅರ್ಥ. ಅದರಂತೆ ಇಲ್ಲಿಯೂ ಕೂಡ ಅರ್ಥವನ್ನು ಇಟ್ಟುಕೊಳ್ಳಬೇಕು.

ಅಥವಾ 'ವಾಃ ಉದಕಂ ತದರ್ಥಂ ಅಣತೀತಿ ವಾರಣಃ, ಸ ಚಾಸೌ ಯೂಥಪಶ್ಚ' ಎಂದಾದರೂ ಮಾಡಬಹುದು. ನೀರಿಗಾಗಿ ಸಂಚರಿಸುವ ಆನೆ ಎಂದರ್ಥ. ಅಥವಾ 'ಯೂಥಂ ವೃಂದಮಾತ್ರೇऽಪಿ' ಎಂದಿರುವದರಿಂದ 'ವಾರಣಾನಾಂ ಯೂಥಂ ಪಾತೀತಿ ವಾರಣಯೂಥಪಃ' ಆನೆಗಳ ಹಿಂಡನ್ನು ರಕ್ಷಿಸುವ ಎಂದರ್ಥ. ಮೊದಲು ಯೂಥಶಬ್ದಕ್ಕೆ ಆನೆಹಿಂಡು ಎಂದರ್ಥ ಇಟ್ಟುಕೊಂಡಿತ್ತು.

ಆ ಆನೆಗಳೆಲ್ಲ ಯಜಮಾನವಾದ ಈ ಆನೆಯ ಮಾತು ಕೇಳುತ್ತಿರಲಿಲ್ಲವೆಂದಲ್ಲ. ಈ ಯಜಮಾನನ ಮಾತನ್ನು ಕೇಳುತ್ತಿದ್ದವು ಎಂದೂ ಅರ್ಥವನ್ನು **ತದ್ಗಿರಿಃ** ಎಂಬ ಪದದಿಂದ ಹೀಗೆ ತಿಳಿಯಬೇಕು. ಎಂದೂ ಹೇಳುವರು. ಸಾ ಚ ಸಾ ಗೀಶ್ಚ ತದ್ಗೀಃ, ತಸ್ಯಾಂ ತದ್ಗಿರಿ, ಸ್ಥಿತೈಃ ಎಂದು ಶೇಷ. ಅವನ ಮಾತನ್ನು ಕೇಳುವ ಎಂದರ್ಥ. ತದ್ಗೀಃ ಎಂಬುದು ಆನೆಗಳಿಗೆ ವಿಶೇಷಣ. **ಕಾನನಾಶ್ರಯಃ** ಎಂದು ವಿಭಾಗ. ಅಥವಾ **ಗಿರಿಕಾನನಾಶ್ರಯಃ** ಗಿರಿಕಾಯಾಃ ಅನನಂ ಸರ್ವಚೇಷ್ಟಾ ತಸ್ಯಾಶ್ರಯಃ. ಗಿರಿಕಾ ಎಂಬ ಹೆಂಡತಿಯ ಎಲ್ಲ ಚೇಷ್ಟೆಗೆ ಆಶ್ರಯನಾದವನೆಂದರೆ ಉಪರಿಚರವಸು. ಅವನಂತೆ ಚರನ್ ಸಂಚರಿಸುತ್ತ ಎಂದರ್ಥ. ಮೇಲೆಯೇ ಸಂಚರಿಸುತ್ತ ಎಂದರ್ಥ. ಆದಿಪರ್ವದಲ್ಲಿ ಹೀಗಿದೆ ''ಚಕಾರ ಪತ್ನೀಂ ಕನ್ಯಾಂ ತು ದಯಿತಾಂ ಗಿರಿಕಾಂ ನೃಪಃ । ವಸೋಃ ಪತ್ನೀತಿ ಗಿರಿಕಾ...'' ಎಂದು. ।।೧೯।।

ಸಿಂಹಸಮೂಹಗಳು ಹಿಂಸೆಗೊಳಗಾಗಿ ಓಡುವಾಗ ಮಿಕ್ಕವರ ಪಾಡೇನು ? ಅವನ ಬಳಗ ಅಂತಹದು ಎಂದು ಹೇಳುವರು -

**ಯದ್ಗಂಧಮಾತ್ರಾದ್ಧರಯೋ ಗಜೇಂದ್ರಾ**
**ವ್ಯಾಘ್ರಾದಯೋ ವ್ಯಾಲಮೃಗಾಃ ಸಖಡ್ಗಾಃ ।**
**ಮಹೋರಗಾಶ್ಚಾಪಿ ಭಯಾದ್ ದ್ರವಂತಿ**
**ಸಗೌರಕೃಷ್ಣಾಃ ಶಲಭಾಶ್ಚಮರ್ಯಃ** **॥೨೦॥**

**ಯದ್ಗಂಧಮಾತ್ರಾತ್** ಯಾವ ಈ ಸಲಗವನ್ನು (ಗಂಡಾನೆಯನ್ನು) ನೋಡದಿದ್ದರೂ ಕೇವಲ ಅದರ ಮದೋದಕದ ವಾಸನೆಯಿಂದಲೇ ಕಾಡಿನ ದೊಡ್ಡ ದೊಡ್ಡ ಭಯಂಕರ ಪ್ರಾಣಿಗಳಾದ **ಹರಯಃ** ಸಿಂಹಗಳು, **ಗಜೇಂದ್ರಾಃ** ಬೇರೆ ಸಲಗಗಳು, **ವ್ಯಾಘ್ರಾದಯಃ** ಹುಲಿ ಮೊದಲಾದವುಗಳು, **ಸಖಡ್ಗಾಃ** ಘೇಂಡಾಮೃಗಗಳಿಂದ ಕೂಡಿದ **ವ್ಯಾಲಮೃಗಾಃ** ದುಷ್ಟವಾದ ನಾಲ್ಕು ಕಾಲಿನ ಪ್ರಾಣಿಗಳು ('ವ್ಯಾಲೋ ಜ್ಞೇಯಃ ಚತುಷ್ಪಾದಃ' ಎಂದು ಅನೇಕಾರ್ಥಧ್ವನಿಮಂಜರಿ.) ಅಗಲಮೂತಿಯ ಸರ್ಪಾಕಾರಮೃಗ (ಹಾವುಗಳು) **ಮಹೋರಗಾಃ** ಹೆಬ್ಬಾವುಗಳು **ಸಗೌರಕೃಷ್ಣಾಃ** ಬಿಳಿ ಕಪ್ಪು ಹಳದಿ ಕೆಂಪು ಮೃಗಗಳಿಂದ ಕೂಡಿದ **ಶಲ(ರ)ಭಾಃ** ಎಂಟು ಕಾಲಿನ ಮೃಗಗಳು (ಎರಡು ತಲೆ) **ಚಮರ್ಯಃ** ಹೆಣ್ಣು ಚಮರೀ ಮೃಗಗಳು **ಅಪಿ** ಇವೆಲ್ಲವು **ಭಯಾತ್** ಹೆದರಿಕೆಯಿಂದ **ದ್ರವಂತಿ** ಓಡುವವು.

ಆನೆಯನ್ನು ಕೊಲ್ಲುವ ಸಿಂಹಗಳಿಗೆ ಆನೆಯ ಭಯ ಹೇಗೆ ? ಎಂದರೆ ನಿಜ. ಆನೆಯನ್ನು ಕೊಲ್ಲುವದು ಸಿಂಹದ ಸ್ವಭಾವ. ಆದರೆ ಇವನು ಶಾಪದಿಂದ ಆನೆಯ ದೇಹ ಪಡೆದ ರಾಜನು. ಆದ್ದರಿಂದ ಸಿಂಹ ಮುಂತಾದ ಎಲ್ಲವನ್ನು ಹೆದರಿಸುತ್ತಿದ್ದನು. ಹರಿಯ ಅರ್ಚನೆಯ ಪ್ರಭಾವವುಳ್ಳವರಿಗೆ ಯಾವುದು ಅಸಾಧ್ಯ ? ॥೨೦॥

**ವೃಕಾ ವರಾಹಾ ಮಹಿಷರ್ಕ್ಷಶಲ್ಯಾ ಗೋಪುಚ್ಛಶಾಲಾವೃಕಮರ್ಕಟಾಶ್ಚ ।**
**ಅನ್ಯೇ ಚ ಕ್ಷುದ್ರಾ ಹರಿಣಾಃ ಶಶಾದಯಶ್ಚರಂತ್ಯಭೀತಾ ಯದನುಗ್ರಹೇಣ ॥೨೧॥**

(ವೃಷಾಃ ಕಾಡುಗೂಳಿಗಳು) **ವೃಕಾಃ** ತೋಳಗಳು **ವರಾಹಾಃ** ಕಾಡುಹಂದಿಗಳು **ಮಹಿಷ** ಕಾಡೆಮ್ಮೆಗಳು **ಋಕ್ಷ** ಕರಡಿಗಳು **ಶಲ್ಯಾಃ** ಮುಳ್ಳುಹಂದಿಗಳು **ಗೋಪುಚ್ಛ** ಹಸುವಿನಂತೆ ಬಾಲವುಳ್ಳ ಕೋತಿಗಳು **ಶಾಲಾವೃಕ** ನರಿಗಳು, ನಾಯಿಗಳು **ಚ** ಮತ್ತು **ಮರ್ಕಟಾಃ** ಕಪಿಗಳು **ಭಯಾತ್** ತಮ್ಮ ಪ್ರಾಣಕ್ಕೆ ಅಪಾಯವೆಂಬ ಹೆದರಿಕೆಯಿಂದ **ದ್ರವಂತಿ** ಇದ್ದ ಸ್ಥಳವನ್ನು ಬಿಟ್ಟು ಓಡುವವು. **ಚ** ಮತ್ತು **ಯದನುಗ್ರಹೇಣ** ಯಾವ ಸಲಗದ ದಯೆಯಿಂದ, ಸಹಾಯದಿಂದ **ಅನ್ಯೇ** ಈ ಹೇಳಿದ ಪ್ರಾಣಿಗಳಿಂದ ಭಿನ್ನವಾದ **ಕ್ಷುದ್ರಾಃ** ಸಣ್ಣ ಸಣ್ಣ **ಹರಿಣಾಃ** ಜಿಂಕೆಗಳು **ಶಶಾದಯಃ** ಮೊಲ ಮೊದಲಾದ ಕಾಡುಪ್ರಾಣಿಗಳು **ಅಭೀತಾಃ** ಮೇಲೆ ಹೇಳಿದ ಕ್ರೂರಪ್ರಾಣಿಗಳ ಭಯವಿಲ್ಲದೇ **ಚರಂತಿ** ಸಂಚರಿಸುವವು. ॥೨೧॥

**ಸ ಘರ್ಮತಪ್ತಃ ಕರಿಭಿಃ ಕರೇಣುಭಿಃ**
**ವೃತೋ ಮದಚ್ಯುತ್ಕಲಭೈರನುದ್ರುತಃ ।**
**ಗಿರಿಂ ಗರಿಮ್ಣಾ ಪರಿತಃ ಪ್ರಕಂಪಯನ್**
**ನಿಷೇವ್ಯಮಾಣೋಽಲಿಕುಲೈರ್ಮದಾಶನೈಃ** ॥೨೩॥

**ಸರೋಽನಿಲಂ ಪಂಕಜರೇಣುರೂಷಿತಂ**
**ಜಿಘ್ರನ್ನದೂರಾನ್ಮದವಿಹ್ವಲೇಕ್ಷಣಃ ।**
**ವೃತಃ ಸ್ವಯೂಥೇನ ತೃಷಾರ್ದಿತೇನ ತತ್**
**ಸರೋವರಾಭ್ಯಾಶಮಥಾಗಮದ್ ದ್ರುತಮ್** ॥೨೪॥

**ಸಃ** ಆ ಗಜೇಂದ್ರನು **ಘರ್ಮತಪ್ತಃ** ಬಿಸಿಲಿನಿಂದ ಬೆಂದವನಾಗಿ **ಕರಿಭಿಃ** ಗಂಡಾನೆಗಳಿಂದ **ಕರೇಣುಭಿಃ** ಹೆಣ್ಣಾನೆಗಳಿಂದ **ವೃತಃ** ಸುತ್ತುವರೆಯಲ್ಪಟ್ಟವನಾಗಿ **ಮದಚ್ಯುತ್** ಮದೋದಕವನ್ನು ಸುರಿಸುತ್ತ ಅಥವಾ **ಮದಚ್ಯುತ್ಕಲಭೈಃ** ಮದೋದಕ ಸುರಿಸುತ್ತಿರುವ ಮರಿಯಾನೆಗಳಿಂದ **ಅನುದ್ರುತಃ** ಹಿಂಬಾಲಿಸಲ್ಪಟ್ಟವನಾಗಿ **ಗರಿಮ್ಣಾ** ತಮ್ಮ ಭಾರದಿಂದ **ಗಿರಿಂ** ತ್ರಿಕೂಟಪರ್ವತವನ್ನು **ಪರಿತಃ** ಸುತ್ತಲೂ **ಪ್ರಕಂಪಯನ್** ಅಲ್ಲಾಡುವಂತೆ ಮಾಡಿ **ಮದಾಶನೈಃ** ಮದೋದಕವನ್ನು ಕುಡಿಯುತ್ತಿರುವ **ಅಲಿಕುಲೈಃ** ದುಂಬಿಗಳ ಗುಂಪಿನಿಂದ **ನಿಷೇವ್ಯಮಾಣಃ** ಸೇವಿಸಲ್ಪಡುವವನಾಗಿ,

**ಮದವಿಹ್ವಲೇಕ್ಷಣಃ** ಮದದಿಂದ ಚಂಚಲಗಳಾದ ಕಣ್ಣಗಳುಳ್ಳವನಾಗಿ **ಅದೂರಾತ್** ಸಮೀಪದಲ್ಲಿ **ಪಂಕಜರೇಣುರೂಷಿತಂ** ಕಮಲಪರಾಗಗಳಿಂದ ವ್ಯಾಪ್ತವಾದ **ಸರೋಽನಿಲಂ** ಸರೋವರದ ಮೇಲೆ ಬೀಸುತ್ತಿರುವ ತಂಪು ಗಾಳಿಯನ್ನು **ಜಿಘ್ರನ್** ಮೂಸುತ್ತ, ಹತ್ತಿರದಲ್ಲಿ ಕೊಳವಿದೆ ಎಂದು ತಿಳಿದು **ತೃಷಾರ್ದಿತೇನ** ನೀರಡಿಕೆಯಿಂದ ಪೀಡಿತವಾದ **ಸ್ವಯೂಥೇನ ಚ** ತನ್ನ ಆನೆಗಳ ಹಿಂಡಿನಿಂದಲೂ ಕೂಡಿ **ಅಥ** ಸರೋವರವಿದೆ ಎಂದು ತಿಳಿದ ನಂತರ **ದ್ರುತಂ** ವೇಗವಾಗಿ **ತತ್ಸರೋವರಾಭ್ಯಾಶಂ** ಆ ಸರೋವರದ ಸಮೀಪಕ್ಕೆ **ಆಗಮತ್** ಬಂದನು. ॥೨೩,೨೪॥

**ವಿಗಾಹ್ಯ ತಸ್ಮಿನ್ನಮೃತಾಂಬು ನಿರ್ಮಲಂ**
**ಹೇಮಾರವಿಂದೋತ್ಪಲರೇಣುವಾಸಿತಮ್ ।**
**ಪಪೌ ನಿಕಾಮಂ ನಿಜಪುಷ್ಕರೋದ್ಧೃತಂ**
**ಸ್ವಾತ್ಮಾನಮದ್ಭಿಃ ಸ್ನಪಯನ್ ಗತಕ್ಲಮಃ** ॥೨೫॥

**ಸಃ** ಆ ಗಜೇಂದ್ರನು **ತಸ್ಮಿನ್** ಆ ಸರೋವರದಲ್ಲಿ **ವಿಗಾಹ್ಯ** ಇಳಿದು **ಸ್ವಾತ್ಮಾನಂ** ತನ್ನ ಶರೀರವನ್ನು **ಅದ್ಭಿಃ** ನೀರಿನಿಂದ **ಸ್ನಪಯನ್** ತೊಳೆದುಕೊಂಡು **ಗತಕ್ಲಮಃ** ಶ್ರಮವನ್ನು

ಕಳೆದುಕೊಂಡು **ನಿಜಪುಷ್ಕರೋದ್ಧೃತಂ** ತನ್ನ ಸೊಂಡಿಲಿನಿಂದ ಹೀರಿದ **ಹೇಮಾರ-ವಿಂದೋತ್ಪಲರೇಣುವಾಸಿತಂ** ಬಂಗಾರದಂಥ ಕಮಲ ಮತ್ತು ನೈದಿಲೆಗಳ ಧೂಳಿನಿಂದ ಸುವಾಸಿತವಾದ **ನಿರ್ಮಲಂ** ಕೊಳೆಯಿಲ್ಲದ ಸ್ವಚ್ಛವಾದ **ಅಮೃತಾಂಬು** ಅಮೃತದಂತೆ ಇರುವ ಸಿಹಿ ನೀರನ್ನು **ನಿಕಾಮಂ** ತೃಪ್ತಿಯಾಗುವಷ್ಟು **ಪಪೌ** ಕುಡಿದನು. ।।೨೫।।

**ಸ್ವಪುಷ್ಕರೇಣೋದ್ಧೃತಶೀಕರಾಂಬುಭಿ-**
**ರ್ನಿಪಾಯಯನ್ ಸಂಸ್ನಪಯನ್ ಯಥಾ ಗೃಹೀ ।**
**°ಘೃಣೀ ಕರೇಣೂನ್ ಕಲಭಾಂಶ್ಚ ದುರ್ಮದೋ**
**ನಾಚಷ್ಟ ಕೃಚ್ಛ್ರಂ ಕೃಪಣೋಽಜಮಾಯಯಾ ।।೨೬।।**

**ಅಜಮಾಯಯಾ** ಶ್ರೀಹರಿಯ ಬಂಧಕಶಕ್ತಿಯಿಂದ **ಕೃಪಣಃ** ಸಂಸಾರದಲ್ಲಿ ಲುಬ್ಧನಾದ **ಗೃಹೀ** ಗೃಹಸ್ಥಾಶ್ರಮಿಯು **ಯಥಾ** ಹೇಗೆ ದಯೆಯುಳ್ಳವನೋ **ತಥಾ** ಹಾಗೆ ತನ್ನ ಹೆಂಡತಿ ಮಕ್ಕಳಲ್ಲಿ **ಘೃಣೀ** ದಯೆಯುಳ್ಳ ಗಜೇಂದ್ರನು **ಕರೇಣೂನ್** ಹೆಣ್ಣಾನೆಗಳನ್ನು **ಕಲಭಾನ್** ಮರಿಗಳನ್ನು **ಸ್ವಪುಷ್ಕರೇಣ** ತನ್ನ ಸೊಂಡಿಲಿನಿಂದ **ಉದ್ಧೃತ** ಎತ್ತಲ್ಪಟ್ಟ **ಶೀಕರಾಂಬುಭಿಃ** ತಣ್ಣಗಿನ ನೀರಿನಿಂದ **ನಿಪಾಯಯನ್** ಪಾನ ಮಾಡಿಸುತ್ತ **ಸಂಸ್ನಪಯನ್** ಚೆನ್ನಾಗಿ ಸ್ನಾನ ಮಾಡಿಸುತ್ತ **ದುರ್ಮದಃ** ದುಷ್ಟಮದದಿಂದ ಕೂಡಿದ ಗಜೇಂದ್ರನು **ಅಜಮಾಯಯಾ** ಹರಿಯ ಇಚ್ಛೆಯಿಂದ ಮೋಹಿತನಾಗಿ **ಕೃಚ್ಛ್ರಂ** ಮುಂದೆ ಬರುವ ಕಷ್ಟವನ್ನು **ನ ಆಚಷ್ಟ** ತಿಳಿಯಲಿಲ್ಲ.

♦ **ಘೂರ್ಣನ್** ಎಂಬ ಪಾಠದಲ್ಲಿ ತಿರುಗುತ್ತ ಎಂದರ್ಥ. **ರಮನ್** ಎಂಬ ಪಾಠದಲ್ಲಿ ಸಂತೋಷಪಡಿಸುತ್ತ ಎಂದರ್ಥ. ।।೨೬।।

**ತಂ ತತ್ರ ಕಶ್ಚಿನ್ನೃಪ ದೈವಚೋದಿತೋ**
**ಗ್ರಾಹೋ ಬಲೀಯಾಂಶ್ಚರಣೇ ರುಷಾಽಗ್ರಹೀತ್ ।**
**ಯದೃಚ್ಛಯೈವಂ ವ್ಯಸನಂ ಗತೋ ಗಜೋ**
**ಯಥಾಬಲಂ ಸೋಽತಿಬಲೋ ವಿಚಕ್ರಮೇ ।।೨೭।।**

**ಹೇ ನೃಪ** ಪರೀಕ್ಷಿತನೇ ! **ದೈವಚೋದಿತಃ** ಯಾವನ ಮಾಯೆಯಿಂದ ಇವನು ದುಷ್ಟಮದವುಳ್ಳವನಾಗಿದ್ದನೋ ಆ ದೈವನಾದ ಶ್ರೀಹರಿಯಿಂದ ಪ್ರೇರಿತವಾದ **ಕಶ್ಚಿತ್** ಶಾಪಗ್ರಸ್ತವಾದ **ಬಲೀಯಾನ್** ಆದ್ದರಿಂದಲೇ ಆನೆಗಿಂತ ಬಲಿಷ್ಠವಾದ **ಕಶ್ಚಿತ್** ಒಂದು **ಗ್ರಾಹಃ** ಮೊಸಳೆಯು **ರುಷಾ** ಆನೆಯು ತನ್ನನ್ನು ಕಾಲಿನಿಂದ ತುಳಿಯಿತು ಎಂಬ ಕೋಪದಿಂದ **ತಂ** ಆ ಆನೆಯನ್ನು **ತತ್ರ** ಆ ಸರೋವರದಲ್ಲಿ **ಚರಣೇ** ಕಾಲಿನಲ್ಲಿ **ಅಗ್ರಹೀತ್** ಗಟ್ಟಿಯಾಗಿ ಹಿಡಿದುಕೊಂಡಿತು, ಕಾಲನ್ನು ಕಚ್ಚಿಕೊಂಡಿತು ಎಂದರ್ಥ. **ಯದೃಚ್ಛಯಾ** ಶ್ರೀಹರಿಯ

ಇಚ್ಛೆಯಿಂದ **ಏವಂ** ಅನಿರೀಕ್ಷಿತವಾಗಿ **ವ್ಯಸನಂ ಗತಃ** ದುಃಖಕ್ಕೆ ಈಡಾದ **ಸಃ** ಆ ಕಾಡಿನಲ್ಲಿರುವ **ಅತಿಬಲಃ** ಅತ್ಯಂತ ಬಲಿಷ್ಠವಾದ **ಗಜಃ** ಸಲಗವು **ಯಥಾಬಲಂ** ತನ್ನ ಶಕ್ತಿಯಿದ್ದಷ್ಟು **ವಿಚಕ್ರಮೇ** ಕಾಲನ್ನು ಮೊಸಳೆಯಿಂದ ಬಿಡಿಸಿಕೊಳ್ಳಲು ಬಹಳ ಪರಾಕ್ರಮ (ಪ್ರಯತ್ನ) ಮಾಡಿತು.

ಸತ್ಯ ಃ-'ಯಸ್ಯಾಪರಾಧಃ ಖಲು ತಸ್ಯ ದಂಡಃ' ಎಂಬ ನೀತಿಗೆ ಅನುಗುಣವಾಗಿ ಕಾಲಿನಿಂದ ತುಳಿದದ್ದರಿಂದ ಕಾಲನ್ನು ಹಿಡಿದುದು ಯುಕ್ತವಾಗಿದೆ.

♦ ಅಂಘ್ರಿ ಪಾದ ಮುಂತಾದ ಪದವನ್ನು ಪ್ರಯೋಗಿಸದೇ ಚರಣೇ ಎಂದು ಹೇಳಿದ್ದರಿಂದ ಮುಂದೆ 'ಚರಣಂ ಪವಿತ್ರಂ ವಿತತಂ ಪುರಾಣಂ' ಎಂಬ ಪ್ರಮಾಣಪ್ರಮಿತವಾದ ಚಕ್ರದಿಂದಲೇ ಗಜೇಂದ್ರನ ಮೋಚನವಾಗುವದು ಎಂಬುದನ್ನು 'ಚರಣೆ ಆಗಾಮಿನಿ ಸತಿ' ಅಂದರೆ ಮುಂದೆ ಚಕ್ರ ಬಂದಾಗ ಮುಕ್ತಿ ಎಂದೂ ವ್ಯಾಸರು ಅಭಿಪ್ರಾಯವನ್ನು ಧ್ವನಿತಪಡಿಸಿರುವರು.

♦ ವಿಚಕ್ರಮೇ ವಿಃ ಪಾದವಿಹರಣೇ ಎಂದಿರುವದರಿಂದ ವಿಪೂರ್ವಕವಾದ ಕ್ರಮಧಾತುವಿಗೆ ಆತ್ಮನೇಪದ ಹೇಳಿದ್ದರಿಂದ ಪಾದವಿಹರಣ ಮಾಡಿದನೆಂದರ್ಥ.

♦ 'ಯಥಾ ತಂ ಅಬಲಂ ನಿರ್ಬಲಂ ಕಲಯಾಮಿ ಇತಿ ತಥಾ ಅತಿಬಲೋ ವಿಚಕ್ರಮೇ' ಅಂದರೆ ಅತಿಬಲಶಾಲಿಯಾದ ಮೊಸಳೆಯು ಆನೆಯನ್ನು ನಿರ್ಬಲಗೊಳಿಸುವಂತೆ ಸೆಳೆಯಿತು, ಇತ್ತ ಆನೆಯು ಮೊಸಳೆಯು ಬಲ ಕಳೆದುಕೊಳ್ಳುವಂತೆ ಕಾಲು ಕಿತ್ತುಕೊಂಡಿತು ಎಂದೂ ಅರ್ಥ.

♦ ಚ ರಣೇ ಎಂದು ಪದವಿಭಾಗ ಮಾಡಿಕೊಂಡು ಅರ್ಥವನ್ನು ಹೀಗೆ ತಿಳಿಯಬೇಕು. **ರುಷಾ ಚ** ಸಿಟ್ಟಿನಿಂದಲೇ **ರಣೇ** ಯುದ್ಧವಿಷಯದಲ್ಲಿ **ಅಗ್ರಹೀತ್** ಹಿಡಿಯಿತು ಎಂದೂ ಸೂಚಿಸಿರುವರು. ಇದು ಯುದ್ಧವೇ ಎಂಬುದಾಗಿ ಮುಂದೆ 'ನಿಯುಧ್ಯತೋಃ' ಎಂಬ ಪದದಿಂದ ಹೇಳುವರು. ।।೨೭।।

**ತಥಾಽಽತುರಂ ಯೂಥಪತಿಂ ಕರೇಣವೋ**
**ವಿಕೃಷ್ಯಮಾಣಂ ತರಸಾ ಬಲೀಯಸಾ ।**
**ವಿಚುಕ್ರುಶುರ್ದೀನಧಿಯೋಽಪರೇ ಗಜಾಃ**
**ಪಾರ್ಷ್ಣಿಗ್ರಹಾಃ ಪಾರಯಿತುಂ ನ ಚಾಶಕನ್ ।।೨೮।।**

**ತಥಾ** ಮೇಲೆ ಹೇಳಿದಂತೆ **ಆತುರಂ** ದುಃಖವನ್ನು ಹೊಂದಿದ, **ಬಲೀಯಸಾ** ಬಹಳ ಬಲವುಳ್ಳ ಮೊಸಳೆಯಿಂದ **ತರಸಾ** ವೇಗದಿಂದ ಬಲದಿಂದ **ವಿಕೃಷ್ಯಮಾಣಂ** ನೀರಿನ ಒಳಗೆ ಎಳೆಯಲ್ಪಡುವ, **ಯೂಥಪತಿಂ** ತಮ್ಮ ಗುಂಪಿನ ಪಾಲಕನಾದ ಗಜೇಂದ್ರನನ್ನು **ದೃಷ್ಟ್ವಾ**

ನೋಡಿ **ಕರೇಣವಃ** ಹೆಣ್ಣಾನೆಗಳು **ದೀನಧಿಯಃ** ಸಹಾಯ ಮಾಡುವ ಯೋಗ್ಯತೆ ಇಲ್ಲವಲ್ಲ ಎಂಬ ಮನಸ್ಸಿನಿಂದ **ವಿಚುಕ್ರುಶುಃ** ಅತ್ತವು. **ಅಪರೇ ಗಜಾಃ** ಬೇರೆ ಗಂಡಾನೆಗಳು **ಪಾರ್ಷ್ಣಿಗ್ರಹಾಃ** ಸಹಾಯಕ್ಕಾಗಿ ಬಂದವಾದರೂ **ಪಾರಯಿತುಂ** ಗಜೇಂದ್ರನನ್ನು ಮೊಸಳೆಯಿಂದ ತಪ್ಪಿಸಲು **ನ ಅಶಕನ್** ಸಮರ್ಥವಾಗಲಿಲ್ಲ **ಚ** ದೀನಮನಸ್ಸಿನಿಂದ ಅತ್ತವೂ ಕೂಡ. ।।೨೮।।

**ನಿಯುಧ್ಯತೋರೇವಮಿಭೇಂದ್ರನಕ್ರಯೋ-**
**ರ್ವಿಕರ್ಷತೋರಂತರತೋ ಬಹಿರ್ಮಿಥಃ ।**
**ಸಮಾಃ ಸಹಸ್ರಂ ವ್ಯಗಮನ್ ಮಹೀಪತೇ**
**ಸಪ್ರಾಣಯೋಶ್ಚಿತ್ರಮಮಂಸತಾಮರಾಃ** **।।೨೯।।**

**ಹೇ ಮಹೀಪತೇ** ಪರೀಕ್ಷಿದ್ರಾಜನೇ ! **ಏವಂ** ಈ ರೀತಿಯಾಗಿ **ನಿಯುಧ್ಯತೋಃ** ಸ್ಪರ್ಧೆಯಿಂದ ಹೊಡೆದಾಡುತ್ತಿರುವ (ದ್ವಂದ್ವಯುದ್ಧ ಮಾಡುವ) **ಮಿಥಃ** ಪರಸ್ಪರವಾಗಿ **ಬಹಿಃ** ಹೊರಗೆ **ಅಂತರತಃ** ಒಳಗೆ **ವಿಕರ್ಷತೋಃ** ಎಳೆಯುತ್ತಿರುವ **ಇಭೇಂದ್ರನಕ್ರಯೋಃ** ಗಜೇಂದ್ರ-ಮೊಸಳೆಗಳಿಗೆ **ಸಹಸ್ರಂ ಸಮಾಃ** ಸಾವಿರ ವರ್ಷಗಳು **ವ್ಯಗಮನ್** ಕಳೆದವು. **ತಥಾಽಪಿ** ಆದರೂ **ಸಪ್ರಾಣಯೋಃ** ಪ್ರಾಣಸಹಿತರಾಗಿರುವ (ಬದುಕಿರುವ) **ತಯೋಃ** ಅವರಿಬ್ಬರ ವಿಷಯದಲ್ಲಿ **ಅಮರಾಃ** ದೇವತೆಗಳು **ಚಿತ್ರಂ** ಅದ್ಭುತವೆಂದು, ಆಶ್ಚರ್ಯವೆಂದು **ಅಮಂಸತ** ತಿಳಿದರು.

ಸತ್ಯ :- ದೇವತೆಗಳು ಅಮೃತ ಕುಡಿದು ಅಮರರಾಗಿದ್ದಾರೆ. ಈ ಎರಡು ಪ್ರಾಣಿಗಳು ಅಮೃತಪಾನ ಮಾಡಿಲ್ಲ. ಆದರೂ ಆಹಾರವಿಲ್ಲದಲೇ ಯುದ್ಧ ಮಾಡುತ್ತ ಸಾವಿರ ವರ್ಷಗಳ ತನಕ ಬದುಕಿರುವುದು ದೇವತೆಗಳಿಗೂ ಅದ್ಭುತವೆನಿಸಿತು. ಇದು ಯುಕ್ತವೇ ಆಗಿದೆ.

♦ ಇಭೇಂದ್ರನಕ್ರಯೋಃ ಎಂದು ಹೇಳಿದ್ದಕ್ಕೆ ಅನುಗುಣವಾಗಿ ಆನೆ ಹೊರಗೆ ಎಳೆಯುತ್ತಿತ್ತು , ಮೊಸಳೆ ಒಳಗೆ ಎಳೆಯುತ್ತಿತ್ತು ಎಂದು ಹೇಳಲು ಬಹಿಃ ಅಂತರತಃ ಎನ್ನಬೇಕಿತ್ತು. ಹಾಗೆ ಹೇಳದೆ ಅಂತರತಃ ಬಹಿಃ ಎಂದು ಹೇಳಿದ್ದು ಯಾಕೆಂದರೆ, ಮೊಸಳೆಯು ಒಳಗೆ ಎಳೆಯುತ್ತಿದ್ದರೂ ಅದಕ್ಕೆ ಪ್ರತಿಕ್ರಿಯೆ ಮಾಡುವ ಸಾಮರ್ಥ್ಯ ಆನೆಗೆ ಸಾಕ್ಷಾತ್ತಾಗಿ ಇದೆ ಎಂಬುದನ್ನು ಸೂಚಿಸಲು ಎಂದು ತಿಳಿಯಬೇಕು. ।।೨೯।।

**ತತೋ ಗಜೇಂದ್ರಸ್ಯ ಸಹೋಬಲೌಜಸಾಂ**
**ಕಾಲೇನ ದೀರ್ಘೇಣ ಮಹಾನಭೂದ್ವ್ಯಯಃ ।**
**ವಿಕೃಷ್ಯಮಾಣಸ್ಯ ಜಲೇಽವಸೀದತೋ**
**ವಿಪರ್ಯಯೋಽಭೂತ್ ಸಕಲಂ ಜಲೌಕಸಃ** **।।೩೦।।**

**ತತಃ** ಸಾವಿರವರ್ಷಗಳು ಕಳೆದದ್ದರಿಂದ **ದೀರ್ಘೇಣ ಕಾಲೇನ** ಬಹುಕಾಲದಿಂದ **ತತಃ** (ಸಾರ್ವವಿಭಕ್ತಿಕಃ ತಸಿಃ ತೇನ) ಮೊಸಳೆಯಿಂದ **ಜಲೇ** ನೀರಿನಲ್ಲಿ **ವಿಕೃಷ್ಯಮಾಣಸ್ಯ** ಎಳೆಯಲ್ಪಡುತ್ತಿರುವ ಆದ್ದರಿಂದಲೇ **ಅವಸೀದತಃ** ಕಷ್ಟಪಡುವ **ಗಜೇಂದ್ರಸ್ಯ** ಆನೆಯ **ಸಹಃ** ಸಹನಶಕ್ತಿಯು (ಇಂದ್ರಿಯಗಳ ಶಕ್ತಿ ಕುಂದದಂತೆ ಪಟುವಾಗಿ ಇಟ್ಟುಕೊಳ್ಳುವ ಶಕ್ತಿಯು) **ಬಲ** ಇತ್ತ ಅತ್ತ ಚಲಿಸುವ ಶಕ್ತಿಯು **ಓಜಸಾಂ** ಇಂದ್ರಿಯಸಾಮರ್ಥ್ಯ ಇವುಗಳ (ಬಲ ಪ್ರಾಣಶಕ್ತಿ, ಓಜ ಶರೀರಸಾಮರ್ಥ್ಯಗಳ) **ಮಹಾನ್ ವ್ಯಯಃ ಅಭೂತ್** ಬಹಳ ನಾಶವಾಯಿತು. **ಜಲೌಕಸಃ** ನೀರಿನಲ್ಲಿ ವಾಸವಾಗಿರುವ ಮೊಸಳೆಗೆ **ಸಕಲಂ** ಈ ಸಹ-ಬಲ-ಓಜಸ್ಸುಗಳ **ವಿಪರ್ಯಯಃ** ವಿರುದ್ಧವು (ವ್ಯಯಕ್ಕೆ ವಿರುದ್ಧ ಅಭಿವೃದ್ಧಿಯು) **ಅಭೂತ್** ಆಯಿತು. ಆನೆಯ ಶಕ್ತಿ ಕುಗ್ಗಿದಂತೆಲ್ಲ ಮೊಸಳೆಯ ಶಕ್ತಿ ಹೆಚ್ಚುತ್ತ ಹೋಯಿತು ಎಂದು ಭಾವ. ಆನೆಗೆ **ಮಹಾನ್ ವಿಪರ್ಯಯಃ** ಬಹಳ ಹ್ರಾಸವು **ಅಭೂತ್** ಆಯಿತು. **ಜಲೌಕಸಃ** ಮೊಸಳೆಗೆ **ಸಕಲಂ** ಷೋಡಶಕಲೆಗಳಿಂದ ಕೂಡಿದ ಕಲೇವರವು **ವ್ಯಯಃ** **ವಿ** ವಿಶಿಷ್ಟವಾದ **ಅಯಃ ಕಾಲಾಯಸಂ ಅಭೂತ್** ಕಬ್ಬಿಣವಾಯಿತು, ಅದರಂತೆ ಗಟ್ಟಿಯಾಯಿತೆಂದರ್ಥ.

'ಕಾಲಾಯಸಾಯಸೀ' ಎಂದು ಅಮರವಿದೆ. ಜಲೌಕಸಃ ಎಂದದ್ದರಿಂದ ತನ್ನ ಮನೆಯಲ್ಲಿದ್ದ ಮೊಸಳೆಗೆ ಅಭಿವೃದ್ಧಿಯು ಸಂಭಾವಿತವೇ. 'ನಕ್ರಃ ಸ್ವಸ್ಥಾನಮಾಸಾದ್ಯ' ಎಂದಿದೆಯಷ್ಟೇ. ಸಹೋಬಲಂ ಸ್ಥಿತಸ್ಥಾನವು ಓಜಃ ದೀಪ್ತಿಯು, ತಾನು ನಿಂತಸ್ಥಳವು ಕಾಂತಿಯು ಕುಂದಿತು. ''ಬಲಂ ಗಂಧರಸೇ ರೂಪೇ ಸ್ಥಾನೇ ನಿಃಸ್ಥೌಲ್ಯಸೈನ್ಯಯೋಃ । ಓಜೋ ಬಲೇ ಚ ದೀಪ್ತೌ ಚ... ॥'' ಎಂದು ವಿಶ್ವವಿದೆ. ॥೩೦॥

**ಇತ್ಥಂ ಗಜೇಂದ್ರಃ ಸ ಯದಾಽಽಪ ಸಂಕಟಂ**
**ಪ್ರಾಣಸ್ಯ ದೇಹೀ ವಿವಶೋ ಯದೃಚ್ಛಯಾ ।**
**ಅಪಾರಯನ್ನಾತ್ಮವಿಮೋಕ್ಷಣೇ ಚಿರಂ**
**ದಧ್ಯಾವಿಮಾಂ ಬುದ್ಧಿಮಥಾಭ್ಯಪದ್ಯತ** ॥೩೦॥

**ವಿವಶಃ** ಪರಾಧೀನನಾದ, ವಿಷ್ಣುವಶನಾದ, ಅಸ್ವಾಧೀನ ಇಂದ್ರಿಯವುಳ್ಳ, ಸ್ಮರಣರಹಿತನಾದ **ದೇಹೀ** ದೇಹಾಭಿಮಾನವುಳ್ಳ ಅಥವಾ ಸ್ಥೂಲದೇಹವುಳ್ಳ, **ಸಃ ಗಜೇಂದ್ರಃ** ಆ ಗಜೇಂದ್ರನು **ಯದಾ** ಯಾವಾಗ **ಯದೃಚ್ಛಯಾ** ಶ್ರೀಹರಿಯ ಇಚ್ಛೆಯಂತೆ **ಇತ್ಥಂ** ಹಿಂದೆ ಹೇಳಿದಂತೆ **ಪ್ರಾಣಸ್ಯ** ಪ್ರಾಣಗಳ **ಸಂಕಟಂ** ಕಷ್ಟವನ್ನು **ಆಪ** ಹೊಂದಿದನೋ **ತದಾ** ಆಗ **ಆತ್ಮವಿಮೋಕ್ಷಣೇ** ಮೊಸಳೆಯ ಹಿಡಿತದಿಂದ ತನ್ನನ್ನು (ತನ್ನ ದೇಹವನ್ನು) ಬಿಡಿಸಿಕೊಳ್ಳುವಲ್ಲಿ **ಅಪಾರಯನ್** ಸಮರ್ಥವಾಗದೇ **ಚಿರಂ** ಬಹುಕಾಲ **ದಧ್ಯೌ** ಯೋಚಿಸಿತು. **ಅಥ** ಯೋಚಿಸಿದ ನಂತರ **ಇಮಾಂ** ಮುಂದೆ ಹೇಳುವ **ಬುದ್ಧಿಂ** ಜ್ಞಾನವನ್ನು ಸ್ತೋತ್ರವನ್ನು **ಅಭ್ಯಪದ್ಯತ** ಪಡೆಯಿತು. ಅದರ ಮನಸ್ಸಿಗೆ ಹೊಳೆಯಿತು ಎಂದರ್ಥ.

♦ ಯದೃಚ್ಛಯಾ ಎಂಬುದು ಸಂಕಟಮಾಪ ಎಂಬಲ್ಲಿ ಅನ್ವಿತವಾದಂತೆ ದಧ್ಯೌ ಎಂಬಲ್ಲಿ, ಇಮಾಂ ಬುದ್ಧಿಂ ಅಥಾಭ್ಯಪದ್ಯತ ಎಂಬಲ್ಲಿಯೂ ಅನ್ವಯವಾಗುತ್ತದೆ. ಬುದ್ಧಿಂ ಎಂದರೆ ನಿಶ್ಚಿತವಾದ ಜ್ಞಾನವನ್ನು ಎಂದರ್ಥ. ಬುದ್ಧ್ಯತೇ ಅನಯಾ ಇತಿ ಬುದ್ಧಿಃ ತಾಂ, ಸ್ತೋತ್ರ ಮಾಡುವ ಮಾತುಗಳನ್ನು ಎಂದರ್ಥ. ಅಥವಾ ಸಾಂಖ್ಯವಿಷಯಕವಾದ ಬುದ್ಧಿಯು ಯಾವ ವಾಕ್ಯದಿಂದ ತಿಳಿಯುವದೋ ಆ ಮಾತುಗಳಿಂದ ಎಂದು ಅರ್ಥ. ಬುದ್ಧಿಂ ಕಾರ್ಯಾಕಾರ್ಯನಿಶ್ಚಯವನ್ನು ಎಂದೂ ಅರ್ಥ. 'ಜ್ಞಾನಂ ಪ್ರತೀತಿರ್ಬುದ್ಧಿಸ್ತು ಕಾರ್ಯಾಕಾರ್ಯವಿನಿಶ್ಚಯಃ' ಎಂದು ಅಭಿಧಾನವಿದೆ. ಅಭ್ಯಪದ್ಯತ ಹೊಂದಿದನು.

ಅವನ ಬುದ್ಧಿಗೆ ಏನು ಹೊಳೆಯಿತು ? ಎಂದು ಹೇಳುವರು -

**ನ ಮಾಮಿಮೇ ಜ್ಞಾತಯ ಆತುರಂ ಗಜಾಃ**
**ಕುತಃ ಕರಿಣ್ಯಃ ಪ್ರಭವಂತಿ ಮೋಚಿತುಮ್ ।**
**ಗ್ರಾಹೇಣ ಪಾಶೇನ ವಿಧಾತುರಾವೃತೋಽ-**
**ಪ್ಯಹಂ ಚ ತಂ ಯಾಮಿ ಪರಂ ಪರಾಯಣಮ್ ॥೩೨॥**

**ಇಮೇ** ಈ **ಜ್ಞಾತಯಃ** ನನ್ನ ಜಾತಿಯ **ಗಜಾಃ** ಗಂಡಾನೆಗಳು **ಆತುರಂ** ದುಃಖಕ್ಕೀಡಾಗಿರುವ **ಮಾಂ** ನನ್ನನ್ನು **ಮೋಚಿತುಂ** ದುಃಖದಿಂದ ಬಿಡಿಸಲು **ನ ಪ್ರಭವಂತಿ** ಸಮರ್ಥರಾಗಿಲ್ಲ ಎಂದಮೇಲೆ **ಕುತಃ ಕರಿಣ್ಯಃ ಪ್ರಭವಂತಿ** ಹೆಣ್ಣಾನೆಗಳು ಯಾವ ಕಾರಣದಿಂದ ಸಮರ್ಥವಾಗುವವು ? ಅವು ಬಿಡಿಸುವದು ಅಸಂಭಾವಿತ ಎಂದರ್ಥ. **ಅಹಂ ಚ** ನಾನಾದರೂ **ವಿಧಾತುಃ** ಅದೃಷ್ಟನಿಯಾಮಕನ **ಪಾಶೇನ ಗ್ರಾಹೇಣ** ಬಂಧಕವಾದ ಮೊಸಳೆಯಿಂದ **ಆವೃತಃ** ಬಂಧಿಸಲ್ಪಟ್ಟಿದ್ದೇನೆ (ಆವರಿಸಲ್ಪಟ್ಟಿದೇನೆ) **ಅಪಿ** ಆದರೂ **ಪರಾಯಣಂ** ಮುಕ್ತಾಶ್ರಯನಾದ **ತಂ** ಪರಮಾತ್ಮನನ್ನು **ಯಾಮಿ** ಶರಣು ಹೋಗುವೆನು. ಬಂಧಕನಾದ ಅವನೇ ಮೋಚಕನೆಂದು ಅಭಿಪ್ರಾಯ.

ಸತ್ಯ :- **ವಿಧಾತುಃ** ಜಗತ್ತನ್ನು ಸೃಷ್ಟಿಸಿರುವ ಬ್ರಹ್ಮನ **ಪಾಶೇನ** ಒಳಗೆ ಕರ್ಮರೂಪವಾದ ಪಾಶದಿಂದ ಹೊರಗೆ ಮೊಸಳೆರೂಪ ಪಾಶದಿಂದ ಬದ್ಧನಾದ **ಅಹಂ ಚ** ನಾನು ಸಹ ಅಸಮರ್ಥನೇ. **ಅತಃ ಪರಂ** ಜಗದ್ವಿಲಕ್ಷಣನಾದ **ಪರಾಯಣಂ** ಮುಖ್ಯಾಶ್ರಯನಾದ ಶ್ರೀಹರಿಯನ್ನು **ಯಾಮಿ** ಶರಣು ಹೋಗುವೆನು.

**ಮೇ** ನನ್ನ **ಜ್ಞಾತಯಃ** ಕುಲದಲ್ಲಿ ಜನಿಸಿದ **ಅಂಗಜಾಃ ಅಪಿ** ಮಕ್ಕಳೂ ಸಹ **ಅಪಿ ಯದ್ಯಪಿ ಆತುಃ** ಬಂದರು. (ಅತ ಆತತುಃ ಆತುಃ, ಅತ ಸಾತತ್ಯಗಮನೇ ಲಿಟ್) **ಕುತಃ** ಭೂಮಿಯಲ್ಲಿ **ಗ್ರಾಹೇಣ** ಮೊಸಳೆ ಎಂಬ **ಪಾಶೇನ** ಪಾಶದಿಂದ ಸಹಿತನಾದ ನನ್ನನ್ನು **ಮೋಚಿತುಂ ನ ಪ್ರಭವಂತಿ** ಸಮರ್ಥರಾಗುವದಿಲ್ಲ.

♦ **ಕರಿಣ್ಯಃ ಅಪಿ ನ** ಹೆಣ್ಣಾನೆಗಳೂ ಬಿಡಿಸಲಾರವು. ಸ್ತ್ರೀಯರಿಗೆ ಅಸಾಮರ್ಥ್ಯವಿರಲಿ, ಪುರುಷರನ್ನು ಪರೀಕ್ಷಿಸೋಣ ಎಂದರೆ ಆತುರಾವೃತಃ ಎಂಬುದರಿಂದ ಅದೂ ಇಲ್ಲ ಎಂದು ಹೇಳುತ್ತಾರೆ. ಆತುರಾವೃತಃ ಆತುರಾಭಿಃ ಆತುರೈಶ್ಚ ಆವೃತಃ ಅಪಿ, ಅತೋ ಮೇ ಮಮ ಇಯಂ **ವಿಧಾ** ಪ್ರಕಾರಃ ದಶಾ ಇತಿ ಯಾವತ್, ಅಂದರೆ ಸ್ತ್ರೀಯರೂ ದುಃಖಿತರೇ, ಪುರುಷರೂ ದುಃಖಿತರೇ. ಅವರಿಂದ ಸುತ್ತುವರೆದವನಾದ್ದರಿಂದ ನನ್ನ ಅವಸ್ಥೆ ಹೀಗೆ ಎಂದು ಭಾವ. ವಿಧಾ ಆತುರಾವೃತಃ ಎಂದು ಪದವಿಭಾಗ ಮಾಡಿಕೊಳ್ಳಬೇಕು.

♦ ನ ವಿಧಾ ಎಂದು ವಿಭಾಗ ಮಾಡಿ ಮತ್ತೊಂದು ರೀತಿಯಾಗಿ ಅರ್ಥ ತಿಳಿಯಬೇಕು. ಎಲ್ಲರಿಗೂ ಅಸಾಮರ್ಥ್ಯ ಬರಲು ಇದು ನಿಮಿತ್ತವೆಂದು ಹೇಳುವನು - **ನ ವಿಧಾ** ಎಂದು. **ವಿಧಾ** ನಮ್ಮಿಂದ ಉಪಭೋಗ್ಯವಾದ ಅನ್ನವು **ನ** ಇಲ್ಲ. ಆದ್ದರಿಂದಲೂ ಸಾಮರ್ಥ್ಯವಿಲ್ಲ. 'ವಿಧಾ ಗಜಾನ್ನೇ ಋದ್ಧೌ ಚ ಪ್ರಕಾರೇ ರೇಚನೇ ವಿಧೌ' ಎಂದು ವಿಶ್ವ.

♦ ಅಥವಾ ಆತುರಂ ಎಂಬಲ್ಲಿ ಆತುಃ ಅಂ ಗಜಾಃ ಎಂದು ಪದವಿಭಾಗ ಮಾಡಿಕೊಳ್ಳಬೇಕು. ಮತ್ತು ನಮಾಮಿ ಚತಂ ಯಾಮಿಪರಂ ಎಂಬವುಗಳು ಒಂದೇ ಪದಗಳು ಎಂದಿಟ್ಟುಕೊಂಡು ಹೀಗೆ ಅರ್ಥವನ್ನು ತಿಳಿಯಬೇಕು. **ಅತಃ** ಆದ್ದರಿಂದ **ಅಹಂ** ನಾನು **ಚತಂ** ಎಲ್ಲರಿಂದ ಯಾಚಿತನಾದ ಪ್ರಾರ್ಥಿತನಾದ **ಯಾಮಿಪರಂ** ನಾಶ-ನಾಶಕಾತೀತನಾದ ವಿಲಕ್ಷಣನಾದ **ಅಂ** ಭಗವಂತನನ್ನು **ನಮಾಮಿ** ನಮಸ್ಕರಿಸುವೆನು. 'ಚತೇ ಯಾಚನೇ ಚ' ಎಂದು ಪ್ರಮಾಣವಿದೆ. ಯಾಮಃ ಉಪರಮಃ ವಿನಾಶಃ ಯೇಷಾಂ ತೇ ಯಾಮಿನಃ, ನಾಶವುಳ್ಳವರು. 'ದ್ವೌ ಯಾಮಪ್ರಹರೌ ಸಮೌ' ಎಂಬುದನ್ನು ವ್ಯಾಖ್ಯಾನ ಮಾಡುವಾಗ 'ಯಮಯತಿ ಉಪರಮಯತೀತಿ ಯಾಮಃ' ಎಂದಿರುವದರಿಂದ ಯಾಮಃ ಉಪರಮಪ್ರಾಪಕಾಃ ಯೇಷಾಂ ಅಸ್ತಿ ತೇ ಯಾಮಿನಃ ನಾಶಕಸಹಿತಾಃ ತೇಭ್ಯಃ ಪರಂ ವಿಲಕ್ಷಣಂ ಯಾಮಿಪರಂ ನಾಶಕ ಉಳ್ಳವರಿಂದ ವಿಲಕ್ಷಣ ಎಂದರೆ ನಾಶನಾಶಕ ಇಲ್ಲದವನೆಂದರ್ಥ, ಅಂಥಹ (ಅಂ) ನಾರಾಯಣನನ್ನು ನಮಸ್ಕರಿಸುವೆನು. 'ನ ಮಾಮಮೀ ಜ್ಞಾತಯ' ಎಂದು ಬರೆಯದೇ 'ನ ಮಾಮಿಮೇ' ಎಂದು ಪ್ರಯೋಗಿಸಿದ್ದರಿಂದ ನಾವು ಹೇಳಿದ ಅನ್ವಯವನ್ನು ಸೂಚಿಸಿರುವರು ಎಂದು ತಿಳಿಯಬೇಕು. ।।೩೨।।

**ಯಃ ಕಶ್ಚನೇಶೋ ಬಲಿನೋಽಂತಕೋರಗಾತ್**
**ಪ್ರಚಂಡವೇಗಾದಭಿಧಾವತೋ ಭೃಶಮ್ ।**
**ಭೀತಂ ಪ್ರಪನ್ನಂ ಪರಿಪಾತಿ ಯದ್ಭಯಾತ್**
**ಮೃತ್ಯುಃ ಪ್ರಧಾವತ್ಯರಣಂ ತಮೀಮಹಿ** **।।೩೩।।**

**।। ಇತಿ ಶ್ರೀಮದ್ಭಾಗವತೇ ಅಷ್ಟಮಸ್ಕಂಧೇ ದ್ವಿತೀಯೋಽಧ್ಯಾಯಃ ।।**

**ಕಶ್ಚನ** ಲೋಕವಿಲಕ್ಷಣನಾದ **ಈಶಃ** ಸರ್ವನಿಯಾಮಕನಾದ ಅಘಟಿತಘಟನಾ-ಸಮರ್ಥನಾದ **ಯಃ** ಯಾವ ಶ್ರೀಹರಿಯು **ಪ್ರಚಂಡವೇಗಾತ್** ಅತ್ಯಂತವೇಗದಿಂದ **ಅಭಿಧಾವತಃ** ತನ್ನ ಕಡೆಗೆ ಓಡಿ ಬರುತ್ತಿರುವ **ಬಲಿನಃ** ಶ್ರೀಹರಿಯ ಅನುಗ್ರಹವಿಲ್ಲದೇ ತಪ್ಪಿಸಿಕೊಳ್ಳಲಾಗದಷ್ಟು ಬಲವುಳ್ಳ **ಅಂತಕೋರಗಾತ್** ಮೃತ್ಯುವೆಂಬ ಸರ್ಪದಿಂದ **ಭೃಶಂ** ಅತ್ಯಂತವಾಗಿ **ಭೀತಂ** ಹೆದರಿರುವ ಆದರೆ **ಪ್ರಪನ್ನಂ** ತನ್ನನ್ನು ಮೊರೆಹೊಕ್ಕ ಪ್ರಾಣಿಯನ್ನು **ಪರಿಪಾತಿ** ರಕ್ಷಿಸುವನೋ ಮತ್ತು **ಯದ್ಭಯಾತ್** ಯಾವ ಶ್ರೀಹರಿಯ ಹೆದರಿಕೆಯಿಂದ **ಮೃತ್ಯುಃ** ಯಮ ಅಥವಾ ದುರ್ಗಾದೇವಿಯು **ಪ್ರಧಾವತಿ** ಸಾಯಲಿರುವವನ ಕಡೆಗೆ ಓಡುವವರೋ, ಸಾವಿಗೀಡಾದವರನ್ನು ಬಿಟ್ಟು ಓಡುವವರೋ **ತಂ** ಅಂತಹ ಸರ್ವಮೋಚಕನಾದ ಶ್ರೀಹರಿಯನ್ನು **ಅರಣಂ** ರಕ್ಷಕನನ್ನಾಗಿ **ಈಮಹಿ** ಹೊಂದುವೆನು.

ಸತ್ಯ ಃ- ಯಃ ಕಶ್ಚನ ಎಂದುದರಿಂದ ಸಾಕಲ್ಯೇನ ವರ್ಣನೆ ಮಾಡಲಾಗದ ವರ್ಣಗಳುಳ್ಳವನೆಂದು ತಿಳಿಸಿರುವರು. **ಈಶಃ** ಎಲ್ಲವನ್ನೂ ನಿಯಮನ ಮಾಡುವ ಸ್ವಭಾವದವನು. ಅಥವಾ ಯಾಃ ಶಂ ಯಸ್ಮಾತ್ ಸಃ **ಈಶಃ** ರಮೆಗೆ ಸುಖ ನೀಡುವವನು. **ಬಲಿನಃ** ಸ್ವದಯೋದಯಮತಿಹಾಯೇತರಾಪರಿಹಾರ್ಯಬಲವತಃ, ತನ್ನ ದಯೆ ಇಲ್ಲದೇ ಇತರರಿಂದ ಅಪರಿಹಾರ್ಯವಾದಂತಹ ಬಲವುಳ್ಳ, **ಪ್ರಚಂಡವೇಗಾದಭಿಧಾವತಃ** ಯಾರಿಂದಲೂ ತಡೆಯಲಾಗದ ವೇಗದಿಂದ ಬರುವ **ಅಂತಕೋರಗಾತ್** ಯಮನೆಂಬ ಸರ್ಪದಿಂದ **ಚಕ್ಷುಃಶ್ರವಸ್ತ್ವೇನ ಅಂತಕೋತ್ಪ್ರೇಕ್ಷಣಂ** ಕಣ್ಣಿನಲ್ಲಿಯೇ ಕಿವಿಯುಳ್ಳ ಹಾವೆಂದು ಮೃತ್ಯುವನ್ನು ಉತ್ಪ್ರೇಕ್ಷಿಸಿದ್ದು ಪ್ರಸ್ತುತವಾದ ಗ್ರಹಕ್ಕೆ ಅಂದರೆ ಮೊಸಳೆಗೆ ಯುಕ್ತವೇ. ಕಾಲಿಯನನ್ನು ಕಾಲಿಂದಿ(ಯಮುನೆ)ಯಿಂದ ಹೊರಗೆ ಹಾಕಿ ಎಲ್ಲರನ್ನು ನಿರ್ಭೀತರನ್ನಾಗಿ ಮಾಡಿದವನನ್ನು ಸ್ತುತಿಸಿದರೆ ಈ ನಕ್ರನನ್ನೂ ಹೊರಗೆ ಹಾಕುವನು ಎಂದೂ ಅಭಿಪ್ರಾಯ.

♦ ಭೃಶಂ ಭೀತಂ ಭೃಶಂ ಪ್ರಪನ್ನಂ ಇತರರನ್ನು ಬಿಟ್ಟು ಶರಣಾಗತನಾದ ಎಂದರ್ಥ. ಯದ್ಭಯಾತ್ ಮೃತ್ಯುಃ ಪ್ರಧಾವತಿ ಆಗಚ್ಛತಿ ಗಚ್ಛತಿ ಚ ಯಾವನ ಭಯದಿಂದ ಮೃತ್ಯುವು ಬರುವದು ಹೋಗವದು. ''ಭೀಷಾಽಸ್ಮಾದ್ವಾತಃ ಪವತೇ ಭೀಷೋದೇತಿ ಸೂರ್ಯಃ ಭೀಷಾಽಸ್ಮಾದಗ್ನಿಶ್ಚೇಂದ್ರಶ್ಚ ಮೃತ್ಯುರ್ಧಾವತಿ ಪಂಚಮ ಇತಿ'' ಎಂದು ಶ್ರುತಿ ಇದೆ. 'ಮೃತ್ಯುಮೃತ್ಯುಂ ನಮಾಮ್ಯಹಂ' ಎಂದಿದೆ. ಯಃ ಕಶ್ಚ ಯಃ ಕೋಽಪಿ ಯಸ್ಮಾತ್ ನ ಈಶೋ ನ ಸಮರ್ಥಃ, ಯಃ ಕಃ ಚತುರಾನನಃ, ಚನ ಅಪಿ, ಬ್ರಹ್ಮನೂ ಸಹ ಎಂದರ್ಥ. ಅಥೈತಯೋಃ ಪಥೋರ್ನೈಕತರೇಣ ಚನ'' ಎಂದು ಛಾಂದೋಗ್ಯಭಾಷ್ಯ ಮುಂತಾದವುಗಳ ವ್ಯಾಖ್ಯಾನದಲ್ಲಿ 'ಚನೇತ್ಯಪ್ಯರ್ಥಃ' ಎಂದಿದ್ದಾರೆ.

♦ **ಅಭಿಧಾವತಃ** ಅಭಿಧಾ ಉಳ್ಳ, ಲೋಕದಲ್ಲಿ ಪ್ರಸಿದ್ಧಿಯುಳ್ಳವರು, ಹೆಸರುವಾಸಿಗಳು, ಲೋಕಾನ್ ಪ್ರತಿ ಅಭಿಧಾವತಃ ಎಂದು ಆವೃತ್ತಿ ಮಾಡಿ ಅನ್ವಯ. **ಯಃ**

ಜ್ಞಾನಾತ್ಮಕನು, 'ಯೇತಿ ಜ್ಞಾನಂ ಸಮುದ್ದಿಷ್ಟಂ' ಎಂದು ತಾತ್ಪರ್ಯದಲ್ಲಿದೆ. 'ಕಶ್ಚಾನಂದಸ್ವರೂಪತಃ' ಎಂದು ಗೀತಾತಾತ್ಪರ್ಯವಿರುವದರಿಂದ ಸುಖಾತ್ಮಕನು. ಬಲಿನಶ್ಚನ ಬಲಿನೋಽಪಿ, ತಂ ಎಂದಿರುವದಿರಂದ ಯಃ ಎಂದು ಅಧ್ಯಾಹಾರ ಮಾಡಿಕೊಳ್ಳಬೇಕು. **ಬಲಿನಃ ಅಂತಃ ಪರಿವರ್ತಮಾನಾತ್** ಒಳಗೆ ಸುತ್ತಾಡುವ **ಅಂತಕೋರಗಾತ್** ಅಂತಪ್ರಾಪಕಂ ಕಂ ಯಾಮುನೋದಕಂ ಯೇನ ಸಃ ಅಂತಕಃ ಅಂತಕಶ್ಚಾಸೌ ಉರಗಶ್ಚ ಅಂತಕೋರಗಃ ಕಾಲಿಯಃ ತಸ್ಮಾತ್ ಭೀತಂ ಅಂದರೆ ಯಾವನಿಂದ ಯಮುನೆಯ ನೀರು ಜನರಿಗೆ ನಾಶಪ್ರಾಪಕವಾಯಿತೋ ಅವನು ಅಂದರೆ ಕಾಲಿಯನು, ಅವನಿಂದ ಹೆದರಿದ ಎಂದರ್ಥ. **ಪ್ರಪನ್ನಂ** ಶರಣಾಗತರಾದ ಗೋಪಾಲಜನರನ್ನು **ಪರ್ಯಪಾತ್** ರಕ್ಷಿಸಿದನೋ **ಸಃ** ಅವನು **ಮಾಂ ಪರಿಪಾತಿ** ನನ್ನನ್ನು ರಕ್ಷಿಸುವನು.

♦ **ಯದ್ಭಯಾತ್ ಮೃತ್ಯುಃ ಅಯಂ** ಯಾವನ ಭಯದಿಂದ ಈ ಮೃತ್ಯುವು ಯಾರಿಗಾದರೂ ಬರುವದು ಅಂತಹ ರಕ್ಷಕನನ್ನು ಶರಣಾಗುವೆನು ಎಂದು ಕೃಷ್ಣನಿಗೆ ಪ್ರಾರ್ಥನೆ. ''ಕೃಷ್ಣ ಕೃಷ್ಣೇತಿ ಕೃಷ್ಣೇತಿ ಯೋ ಮಾಂ ಸ್ಮರತಿ ನಿತ್ಯಶಃ ।। ಜಲಂ ಭಿತ್ವಾ ಯಥಾ ಪದ್ಮಂ ನರಕಾದುದ್ಧರಾಮ್ಯಹಮ್ ।।'' ಎಂದಿದೆ. ಪದ್ಮ ಎಂದರೆ ಆನೆಯೆಂದು ಸಾಂಪ್ರದಾಯಿಕರು ಹೇಳಿದ್ದಾರೆ ಎನ್ನುತ್ತಾರೆ ಶ್ರೀಸತ್ಯಧರ್ಮರು. ಯಾರು ಕೃಷ್ಣ ಕೃಷ್ಣ ಎಂದು ಸ್ಮರಿಸುವರೋ ಅವರನ್ನು ನೀರಿನಿಂದ ಗಜನನ್ನು ಉದ್ಧರಿಸಿದಂತೆ ನರಕದಿಂದ ಉದ್ಧರಿಸುವೆ.

♦ ''ಪ್ರಪನ್ನಗಜಸ್ಯ ಪನ್ನಗಭೀತತ್ರಾಯಕತಾ ಉಚಿತಾ ಇತಿ ವಾ, ಅಂತಕೋರಗಾದಿತಿ ಜಗಾದ'' ಶರಣಾಗತನಾದ ಗಜನಿಗೆ, ಕಾಲಿಯನಿಂದ ಭೀತರಾದವರ ರಕ್ಷಕನಿಂದ ರಕ್ಷಣೆಯು ಯೋಗ್ಯವೆಂದು ಹೀಗೆ ಹೇಳಿರುವರು ಎನ್ನುತ್ತಾರೆ.

♦ ತಮೀ 'ತಮೋ ಹಿ ದುರ್ಗಾ' ಎಂದಿರುವದರಿಂದ ತಮಸ್ತಮಸಿ ಶಬ್ದಗಳು ಪರ್ಯಾಯವಾದ್ದರಿಂದ ತಮೀ ಚ ದುರ್ಗಾ ಚ ಮಹೀ ಚ ಭೂಶ್ಚ ತಯೋಃ ಸಮಾಹಾರಃ ತಮೀಮಹಿ ದುರ್ಗಾದೇವಿ-ಭೂದೇವಿಯರು **ಪ್ರಧಾವತಿ** ಓಡುವರು ಎಂದರ್ಥ. ತಮಃ ಪ್ರವರ್ತನೀಯತ್ವೇನ ಅಸ್ಯ ಅವ್ಯಕ್ತಸ್ಯ ಅಸ್ತೀತಿ ತಮೀ ದುರ್ಗಾ, ಈ ಶ್ರೀಶ್ಚ ಮಹೀ ಭೂಶ್ಚ ತಾಸಾಂ ದುರ್ಗಾಶ್ರೀಭುವಾಂ ಸಮಾಹಾರಃ ಶ್ರೀಭೂದುರ್ಗೆಯರು ಎಂದೂ ಅರ್ಥ.

♦ ಕಃ ಬ್ರಹ್ಮಾ ಈಶಃ ರುದ್ರಃ ಇತ್ಯೇತೇ ಚನ ಅಪಿ ನ ಬಲಿನಃ ಶ್ರೀ-ಭೂ-ದುರ್ಗಾ-ಬ್ರಹ್ಮ-ರುದ್ರ ಇವರಾರೂ ಬಲಿಷ್ಠರಲ್ಲ. ಇವರಿಗೂ ಯಾವನ ಭಯದಿಂದ ಮೃತ್ಯುವು ಬರುವದೋ, ಶ್ರೀ-ಭೂ-ದುರ್ಗೆಯರಿಗೆ ಅತ್ಯಂತಸಾಮೀಪ್ಯರೂಪವಾದ ಮೃತ್ಯು , ಬ್ರಹ್ಮಾದಿಗಳಿಗೆ ಪ್ರಸಿದ್ಧಮೃತ್ಯು ಬರುವದು. ಆದ್ದರಿಂದ ಅವರು ದುರ್ಬಲರು.

**ಇಲ್ಲಿಗೆ ಎರಡನೇ ಅಧ್ಯಾಯ ಮುಗಿಯಿತು.**

 

# ಅಥ ತೃತೀಯೋऽಧ್ಯಾಯಃ

ಸತ್ಯ ಃ- ಜಗದೀಶನನ್ನು ಭಜಿಸುವವರಿಗೆ ನಾಶವಿಲ್ಲ ಎಂಬುದನ್ನು ದಂತೀಂದ್ರ(ಗಜೇಂದ್ರ)ನಿಗೆ ಬಂದ ಆಪತ್ತಿನ ಪರಿಹಾರವನ್ನು ದೃಷ್ಟಾಂತದಿಂದ ತೋರಿಸಲು, ಈ ಅಧ್ಯಾಯದ ಮೊದಲಿಗೆ ಹೀನಯೋನಿಯಲ್ಲಿ ಜನಿಸಿದವನಿಗೆ ಈ ರೀತಿಯಾದ ಬುದ್ಧಿ ಹೇಗೆ ಬಂದಿತು? ಎಂದರೆ ಪ್ರಾಚೀನಾಚೀರ್ಣಸತ್ಕರ್ಮಸಂಸ್ಕಾರ (ಹಿಂದೆ ಮಾಡಿದ ಸತ್ಕರ್ಮಸಂಸ್ಕಾರ)ಪಾಟವದಿಂದ ಬಂದಿತು ಎಂದು ಹೇಳುವರು -

**ಶ್ರೀಶುಕ ಉವಾಚ**

**ಏವಂ ವ್ಯವಸಿತೋ ಬುದ್ಧ್ಯಾ ಸಮಾಧಾಯ ಮನೋ ಹೃದಿ ।**
**ಜಜಾಪ ಪರಮಂ ಜಾಪ್ಯಂ ಪ್ರಾಗ್ಜನ್ಮನ್ಯನುಶಿಕ್ಷಿತಮ್** ॥೧॥

**ಏವಂವ್ಯವಸಿತಃ** ಹಿಂದಿನ ಅಧ್ಯಾಯದ ಕೊನೆಗೆ ಹೇಳಿದಂತೆ ನಿಶ್ಚಯಿಸಿಕೊಂಡ ಗಜೇಂದ್ರನು (ಸಮಸ್ತಪದ ಬಹುವ್ರೀಹಿ) **ಬುದ್ಧ್ಯಾ** ವಿವೇಕದಿಂದ **ಮನಃ** ಮನಸ್ಸನ್ನು **ಹೃದಿ** ಹೃದಯದಲ್ಲಿ ವಾಸಿಸುವದರಿಂದ ಹೃತ್‌ಶಬ್ದವಾಚ್ಯನಾದ ಭಗವಂತನಲ್ಲಿ ಸಮಾಧಾಯ ಇರಿಸಿ, **ಅಬುದ್ಧ್ಯಾ** ಬುದ್ಧಿಹೀನವಾದ ಆನೆಯ ಜಾತಿಯವನಾಗಿದ್ದರೂ **ಏವಂವ್ಯವಸಿತಃ** ಈ ರೀತಿ ನಿಶ್ಚಯವುಳ್ಳವನಾಗಿ **ಪ್ರಾಗ್ಜನ್ಮನಿ** ಹಿಂದಿನ ಇಂದ್ರದ್ಯುಮ್ನಜನ್ಮದಲ್ಲಿ (ಆ ಜನ್ಮದಲ್ಲಿಯೂ ಉಪದೇಶವಿಲ್ಲದೇ ಅಭ್ಯಾಸ ಮಾಡಿದ್ದಲ್ಲ ಎಂದು ಹೇಳುವರು-) **ಪ್ರಾಗ್ಜನ್ಮನಿ** ಪ್ರಥಮಜರಾದ ವಿಪ್ರಗುರುವಿನಲ್ಲಿ **ಅನುಶಿಕ್ಷಿತಂ** ಅಭ್ಯಸ್ತವಾದ (ಚೆನ್ನಾಗಿ ಅಧ್ಯಯನ ಮಾಡಲ್ಪಟ್ಟ) **ಪರಮಂ ಜಾಪ್ಯಂ** ಜಪಿಸಲು ಅತ್ಯುತ್ತಮಯೋಗ್ಯವಾದ ಮಂತ್ರವನ್ನು **ಜಜಾಪ** ಜಪಿಸಿದನು, ಅರ್ಥಾನುಸಂಧಾನಪೂರ್ವಕ ಮತ್ತೆ ಉಚ್ಚರಿಸಿದನು.

'ಜಪ್ಯಂ' ಎಂಬ ಕೆಲವೆಡೆ ಇರುವ ಪಾಠ ಸರಳವಾದುದು. ಬಹಳ ಕಡೆ 'ಜಾಪ್ಯಂ' ಎಂದು ಪಾಠವಿದೆ. 'ಜಪ್ತುಂ ಯೋಗ್ಯಂ ಜಪ್ಯಂ ತದೇವ ಜಾಪ್ಯಂ, ಸ್ವಾರ್ಥದಲ್ಲಿ ಅಣ್ ಪ್ರತ್ಯಯವು ಎಂದು ತಿಳಿಯಬೇಕು. ॥೧॥

ಜಪಕ್ರಮವನ್ನು ಹೇಳುವರು -

**ಗಜೇಂದ್ರ ಉವಾಚ**

**ಓಂ ನಮೋ ಭಗವತೇ ತಸ್ಮೈ ಯತ ಏತಚ್ಚಿದಾತ್ಮಕಮ್ ।**
**ಪುರುಷಾಯಾಽಽದಿಬೀಜಾಯ ಪರೇಶಾಯಾಭಿಧೀಮಹಿ** ॥೨॥

ಮಹಾಮಂತ್ರವಾದ್ದರಿಂದ 'ಸ್ರವತ್ಯನೋಂಕೃತಂ ಬ್ರಹ್ಮ' ಎಂದು ಹೇಳಿದ್ದರಿಂದ ಓಂ ಎಂದಿದ್ದಾರೆ. **ಚಿದಾತ್ಮಕಂ** ಜ್ಞಾನಾನಂದಾತ್ಮಕವಾದ **ಏತತ್** ಈ ಚೇತನಸಮೂಹವು **ಯತಃ** ಯಾವ ಶ್ರೀಹರಿಯಿಂದ ಅಭೀಷ್ಟವನ್ನು ಪಡೆಯುವದೋ **ತಸ್ಮೈ** ಅಂತಹ **ಆದಿಬೀಜಾಯ** ಮೂಲಕಾರಣನಾದ, **ಆದಿತ್ವೇನ** ಸಂಪ್ರತಿಪನ್ನರಾದವರಿಗೂ (ಬ್ರಹ್ಮಾದಿಗಳಿಗೂ) ವ್ಯಂಜಕನಾದುದರಿಂದ ಬೀಜನೆನಿಸಿದ **ಪುರುಷಾಯ** ಪೂರ್ಣಷಡ್ಗುಣನಾದ, 'ಪೂರ್ಷು ಶೇತೇ ಪುರಿಶಯಃ' ಎಂಬ ಪ್ರಮಾಣದಂತೆ ಎಲ್ಲರ ಶರೀರದಲ್ಲಿರುವ **ಪರೇಶಾಯ** ಪರರಾದ ಲಕ್ಷ್ಮೀ ಮುಂತಾದವರಿಗೂ ನಿಯಾಮಕನಾದ **ಓಂ** ದೇಶತಃ ಕಾಲತಃ ಗುಣತಃ ಪೂರ್ಣನಾದ **ಭಗವತೇ** ಸಮಗ್ರ ಐಶ್ವರ್ಯಸಂಪನ್ನನಾದ ವಾಸುದೇವನಾಮಕ ಶ್ರೀಹರಿಗೆ **ನಮಃ** ನಮಸ್ಕಾರವು. **ಏತತ್** ಈ ಬ್ರಹ್ಮನನ್ನು **ಅಭಿಧೀಮಹಿ** ಧ್ಯಾನ ಮಾಡೋಣ.

ವಿಜಯ :- 'ಪರೇಶಾಯ ಹಿ ಧೀಮಹಿ' ಎಂದು ಪಾಠ ಇಟ್ಟುಕೊಂಡು ಹಿಶಬ್ದದಿಂದ 'ಪರಾತ್ಪರಂ ಪುರಿಶಯಂ ಪುರುಷಮೀಕ್ಷತೇ' ಎಂಬ ಶ್ರುತಿಪ್ರಸಿದ್ಧಿ ಹೇಳಿರುವರು.

ಸತ್ಯ :- ಯಾವ ಬ್ರಹ್ಮನ ಸ್ತೋತ್ರ ಮಾಡುತ್ತಿದ್ದಾರೆ ಅಂತಹ ಬ್ರಹ್ಮನೂ ಭಯವುಳ್ಳವನಾದರೆ ಅವನ ಸ್ತುತಿಯಿಂದೇನು ಪ್ರಯೋಜನ ? ಎಂದು ಶಂಕೆ ಬಂದರೆ, ಅದಕ್ಕಾಗಿ ಹೇಳಿದರು- ಅಭಿ (ಧೀಮಹಿ) ನ ವಿದ್ಯತೇ ಭೀಃ ಯಸ್ಯ ತತ್ ಅಭಿ, ಭಯರಹಿತನು ಎಂದರ್ಥ. ಅವನು ಸ್ವಯಂ ಭಯರಹಿತನಾಗಲಿ, ಆದರೆ ಅವನಿಂದ ಬೇರೆಯವರಿಗೆ ಭಯವಿಲ್ಲವಾದರೆ 'ನ ನಕ್ರವಕ್ರತೋಽತಿಕ್ರಮಃ' ಮೊಸಳೆ ಬಾಯಿಯಿಂದ ಪಾರಾಗುವದಿಲ್ಲವಲ್ಲ ಎಂದರೆ, ಅದಕ್ಕೂ ಹೇಳಿದರು **ಏತತ್** ಜಗತ್ತು **ಯತಃ ಅಭಿ** ಅತ್ಯಂತಂ ಭೀಃ ಯಸ್ಮಾತ್ ತತ್ ಅಭಿ ಯಾವನಿಂದ ಈ ಜಗತ್ತು ಅತ್ಯಂತ ಭಯಯುತವಾಗಿದೆ, **ಏತತ್ ಚಿತ್** ಬ್ರಹ್ಮಾದಿಗಳೂ ಕೂಡ **ಆತ್ಮಕಂ** ಸ್ವರೂಪಸುಖವನ್ನು (ಅದರ ಆವಿರ್ಭಾವವನ್ನು) **ಯತಃ** ಯಾವನ ದೆಸೆಯಿಂದ ಪಡೆಯುವರೋ ಎಂದರ್ಥ.

ಧೀಮಹಿ ಧಿಯಾ ಸಹಿತಾ ಮಹೀ (ಭಾವಪ್ರಧಾನನಿರ್ದೇಶ) ಯಸ್ಯ ತತ್, ಬುದ್ಧಿಯಿಂದ ಸಹಿತವಾದ ಮಹಿತ್ವವೇ ಆಶ್ರಯವಾಗಿವುಳ್ಳ (ಬ್ರಹ್ಮನಿಗೆ ವಿಶೇಷಣ) ಹೀಗೂ ಅರ್ಥ. ಅಥವಾ ಧೀಶ್ಚ ಮಹಶ್ಚ (ಉತ್ಸವಶ್ಚ) ಧೀಮಹೌ, ತೌ ಅಸ್ಯ ಸ್ತಃ ಇತಿ, ತತ್ಸಹಿತಶ್ಚಾಸೌ ಮಹಶ್ಚ ಸಃ ಅಸ್ಯ ಅಸ್ತೀತಿ ಬುದ್ಧಿಸಹಿತವಾದ ಉತ್ಸವವುಳ್ಳವನು ಎಂದರ್ಥ.

ಛಲಾರೀ ಃ- ಮೊಸಳೆ ಹಿಡಿದುಕೊಂಡದ್ದರಿಂದ ಕಾಯಿಕ ನಮಸ್ಕಾರ ಅಶಕ್ಯವಾದ್ದರಿಂದ 'ನಮಃ' 'ಅಭಿಧೀಮಹಿ' ಎಂದು ಅನ್ವಯ ಮಾಡಿ, ಮನಸಾ ವಚಸಾ ನಮಸ್ಕಾರವೆಂದರ್ಥ ಎನ್ನುವರು.

ಲಿಂಗೇರೀ ಃ- ವಿಭಕ್ತಿವಿಪರಿಣಾಮ ಮಾಡಿ 'ಆದಿಬೀಜತ್ವಾದಿಗುಣವಿಶಿಷ್ಟಂ ಪುರುಷಂ ನಾರಾಯಣಂ ಧೀಮಹಿ' ಎಂದು ಅನ್ವಯ ಮಾಡಿರುವರು. ಆ ಭಗವಂತನನ್ನು ಸ್ತುತಿಸುವರು- **ಯತಃ** ಯಾವ ವಾಸುದೇವನಿಂದ **ಏತತ್** ಪ್ರಮಾಣಪ್ರಮಿತವಾದ **ಚಿದಾತ್ಮಕಂ** ಚೇತನಸಮುದಾಯವು 'ಮುಕ್ತಿಪ್ರದೋ ವಾಸುದೇವೋऽಖಿಲಸ್ಯ' ಎಂದಿರುವುದರಿಂದ, ಮೋಕ್ಷ ಮುಂತಾದ ಎಲ್ಲ ಪುರುಷಾರ್ಥವನ್ನು ಹೊಂದುವದು. ಇಲ್ಲಿ **'ಓಂ ನಮೋ ಭಗವತೇ'** ಎಂಬುದರಿಂದ ವಾಸುದೇವದ್ವಾದಶಾಕ್ಷರಜಪ ಸೂಚಿತವಾಗಿದೆ. **ಧೀಮಹಿ** ಎಂಬುದರಿಂದ ಗಾಯತ್ರೀಜಪ ಸೂಚಿತವಾಗಿದೆ ಎಂದು ಅಭಿಪ್ರಾಯಪಡುತ್ತಾರೆ.

ಛಲಾರೀ ಃ- ಮುಕ್ತಿಯನ್ನು ಕೊಡುವವನು ಎಂದು ಹೇಳಿದರು. ಈಗ ಸೃಷ್ಟಿ ಮೊದಲಾದವುಗಳನ್ನು ಮಾಡುವವನು ಎಂದು ಹೇಳುವರು- ವಿಜಯ ಃ- ಮಂತ್ರದಲ್ಲಿ ಹೇಳಿದ ವಿಶೇಷಣಗಳ ವಿವರಣೆಯೊಂದಿಗೆ ಧ್ಯಾನವನ್ನು ಹೇಳುತ್ತಾರೆ -

**ಯಸ್ಮಿನ್ನಿದಂ ಯತಶ್ಚೇದಂ ಯೇನೇದಂ ಯ ಇದಂ ಸ್ವಯಮ್ ।**
**ಯೋऽಸ್ಮಾತ್ ಪರಸ್ಮಾಚ್ಚ ಪರಸ್ತಂ ಪ್ರಪದ್ಯೇ ಸ್ವಯಂಭುವಮ್ ॥೩॥**

**ಇದಂ** ಪ್ರಮಾಣಪ್ರಮಿತವಾದ ಈ ಜಗತ್ತು **ಯಸ್ಮಿನ್** ಯಾವ ಶ್ರೀಹರಿಯಲ್ಲಿ ಮುಕ್ತಿಕಾಲದಲ್ಲಿ, ಪ್ರಳಯಕಾಲದಲ್ಲಿ, ಸುಷುಪ್ತಿಕಾಲದಲ್ಲಿ ಇರುವದೋ ಅಥವಾ ಯದಧಿಷ್ಠಾನಕಂ ಅಂದರೆ ಯಾವನನ್ನು ಆಶ್ರಯಿಸಿರುವದೋ, 'ಯತ್ಪ್ರಯಂತಿ' ಎಂಬ ಶ್ರುತಿ ಇದನ್ನು ತಿಳಿಸುವದು, **ಇದಂ** ಈ ಜಗತ್ತು **ಯತಃ** ಯಾವನಿಂದ ಹುಟ್ಟುವದೋ, (ಯತೋ ವಾ ಇಮಾನಿ ಭೂತಾನಿ ಜಾಯಂತೇ ಎಂಬ ಶ್ರುತಿ ಇದೆ) **ಚ** ಬೇರೆ ಯಾರಿಂದಲೂ ಹುಟ್ಟುವುದಿಲ್ಲವೋ (ಯತಶ್ಚ ಯಸ್ಮಾದೇವ) **ಇದಂ** ಈ ಹುಟ್ಟಿದ ಜಗತ್ತು **ಯೇನ** ಯಾವ ಶ್ರೀಹರಿಯಿಂದ ಪ್ರವೃತ್ತವಾಗುವದೋ (ಇರುವುದೋ) (ಯೇನ ಜಾತಾನಿ ಜೀವಂತಿ) **ಇದಂ** ಈ ಜಗತ್ತು **ಯಃ** ಸ್ವಯಂ ಯಾವನ ಅಧೀನವಾದ ಸತ್ತಾವುಳ್ಳದ್ದಾದ್ದರಿಂದ ಅವನೇ ಎಂದು ಕರೆಯಲ್ಪಡುವದೋ (ಸರ್ವಂ ಖಲ್ವಿದಂ ಬ್ರಹ್ಮ ಎಂದು ಶ್ರುತಿ ಇದೆ.) ಯಃ ಸ್ವಯಂ ಎಂಬುದಕ್ಕೆ ತಾನೇ ಜಗತ್ತು ಎಂದು ಅಭೇದ ಏಕೆ ಹೇಳಬಾರದು ? ಎಂದರೆ ಹೇಳುವರು **ಯಃ** ಯಾವ ಶ್ರೀಹರಿಯು **ಅಸ್ಮಾತ್** ಕಣ್ಣಿಗೆ ಕಾಣುವ (ಅಮುಕ್ತ) ಪ್ರಪಂಚದಿಂದಲೂ **ಪರಸ್ಮಾತ್ ಚ** ಕಣ್ಣಿಗೆ ಕಾಣದ (ಅಮುಕ್ತರಿಗೆ ಕಾಣದ) ಮುಕ್ತಪ್ರಪಂಚಕ್ಕಿಂತ **ಪರಃ** ಭಿನ್ನನೂ ವಿಲಕ್ಷಣನೂ ಉತ್ತಮನೋ **ತಂ** ಅಂತಹ **ಸ್ವಯಂಭುವಂ** ತನ್ನಿಂದಲೇ ತನ್ನ ಸತ್ತಾವನ್ನೂ ಹೊಂದಿರುವ ಶ್ರೀಹರಿಯನ್ನು **ಪ್ರಪದ್ಯೇ** ಶರಣು ಹೋಗುವೆನು.

**ಭಾಗವತತಾತ್ಪರ್ಯ :-**

ಈ ಶ್ಲೋಕದಲ್ಲಿ ಯತಃ ಎಂಬ ಪಂಚಮಿಯು ಉಪಾದಾನಾರ್ಥಕವಾದುದರಿಂದ ಪರಮಾತ್ಮನಿಗೆ ವಿಕಾರವನ್ನು ತಿಳಿಸುವದು. ಆದರೆ ಅದು 'ನಿರ್ವಿಕಾರೋऽಕ್ಷರಃ ಶುದ್ಧಃ' ಮುಂತಾದ ಪ್ರಮಾಣಗಳಿಂದ ಬಾಧಿತವಾದ ಕಾರಣ, ವಿವಕ್ಷಿತವಾದ ಪಂಚಮೀ ಅರ್ಥ ಹೇಳುವರು -

**ಯತ ಇತಿ ಸ್ರಷ್ಟೃತ್ವಮ್ । ಯೇನೇತಿ ಪ್ರವರ್ತಕತ್ವಮ್ । ಯ ಇತಿ ಸತ್ತಾಪ್ರದತ್ವಮ್ । ನ ಸಂತಿ ಯದುಪೇಕ್ಷಯಾ ಇತ್ಯುಕ್ತತ್ವಾತ್ ॥**

**ಉತ್ಪನ್ನಸ್ಯಾಪಿ ಯತ್ಸತ್ತಾ ಹರೇಸ್ತತ್ಸ ಇತೀರ್ಯತೇ ।**
**ಹರೇರ್ವಿಶ್ವಂ ಭಿನ್ನಮಪಿ ಪರಮೋऽಸೌ ಯತೋ ವಿಭುಃ'' ಇತಿ ಬ್ರಹ್ಮತರ್ಕೇ ॥**

ಯತಃ ಎಂಬುವದರಿಂದ ಶ್ರೀಹರಿಗೆ ಜಗತ್ಸ್ರಷ್ಟೃತ್ವ ಹೇಳಿದೆ. ಅಂದರೆ ಹೇತೌ ಪಂಚಮೀ ಎಂದಂತಾಯಿತು. ಜ್ಞಾನೇಚ್ಛಾಪ್ರಯತ್ನ ಉಳ್ಳ ಕರ್ತೃತ್ವವೇ ಇದರರ್ಥ ಎಂದಂತಾಯಿತು. ಹಾಗಾದರೆ ಯತಃ ಎಂಬುದರಿಂದ ಕರ್ತೃತ್ವ ಹೇಳಿದ ಮೇಲೆ ಕರಣತ್ವ ಬ್ರಹ್ಮನಿಗೆ ಅಸಂಭಾವಿತ, ಪ್ರಧಾನಕ್ಕೆ ಹೇಳಬೇಕು. ಅಂದಮೇಲೆ ಯೇನ ಎಂಬುವುದು ನಿರರ್ಥಕ ಎಂದರೆ, ಕುರುಪಾಂಡವನ್ಯಾಯದಿಂದ ಸಮಾಧಾನ ಹೇಳುವರು :- ಯೇನ ಎಂಬುದರಿಂದ ಪ್ರವರ್ತಕತ್ವ ಹೇಳಿರುವರೆಂದು. ಅಂದರೆ ಶ್ರೀಹರಿಗೆ ಇರುವ ಕರ್ತೃತ್ವ ಕುಲಾಲಾದಿಗಳಂತೆ ಹೊರಗೆ ಇದ್ದದ್ದಲ್ಲ. ಕಿಂತು ಅವುಗಳ ಒಳಗಿದ್ದು ಸೃಷ್ಟಿ ಮಾಡುವನು ಮತ್ತು ಅದಕ್ಕೆ ಸ್ಥಿತಿ ಕೊಡುವವನು ಎಂದರ್ಥ. ಈ ಪ್ರವರ್ತಕತ್ವವೇ ತೃತೀಯಾಕ್ಕೆ ಅರ್ಥವೆಂದು ಭಾವ.

'ಯ ಇದಂ ಸ್ವಯಂ' ಎಂಬುದರಿಂದ ಜಗತ್ತಿನ ಅಭೇದ ಹೇಳುವದು ಎಂಬುದನ್ನು ನಿರಾಕರಿಸುತ್ತ ವ್ಯಾಖ್ಯಾನಿಸುವರು- 'ಯ ಇದಂ ಸ್ವಯಂ' ಎಂಬುದರಿಂದ ಸತ್ತಾಪ್ರದತ್ವವನ್ನು ತಿಳಿಸುವರು. ಸತ್ತಾ ಅವನ ಅಧೀನವಲ್ಲ ಅಂದಮೇಲೆ ಸತ್ತಾಪ್ರದತ್ವ ಹೇಗೆ? ಎಂಬ ಶಂಕೆಯನ್ನು ಪರಿಹರಿಸುತ್ತಾರೆ 'ನ ಸಂತಿ ಯದುಪೇಕ್ಷಯೇತ್ಯುಕ್ತತ್ವಾತ್' ಎಂದು. ''ದ್ರವ್ಯಂ ಕರ್ಮ ಚ ಕಾಲಶ್ಚ ಸ್ವಭಾವೋ ಜೀವ ಏವ ಚ । ಯದನುಗ್ರಹತಃ ಸಂತಿ ನ ಸಂತಿ ಯದುಪೇಕ್ಷಯಾ ॥'' ಎಂಬ ಪ್ರಮಾಣದಿಂದ ಜಗತ್ತಿನ ಸತ್ತಾ ಭಗವಂತನ ಅಧೀನವೆಂದು ತಿಳಿಯುವದು. ಪ್ರಕೃತಕ್ಕೆ ಅನುಗುಣವಾಗಿ 'ದ್ರವ್ಯಂ ಕರ್ಮ ಚ' ಎಂಬುದನ್ನು ಮೊದಲಿಗೆ ಕಂಠತಃ ಉದಾಹರಿಸಬೇಕಿತ್ತು. 'ನ ಸಂತಿ ಯದುಪೇಕ್ಷಯಾ' ಎಂಬ ಅಂಶವನ್ನು ಏಕೆ ಉದಾಹರಿಸಿದ್ದು ? ಎಂದರೆ, ನಿಜ. ವ್ಯತಿರೇಕವನ್ನು ಹೇಳುವದರಿಂದ ಜಗತ್ತಿನ ಸತ್ತಾ ಭಗವದಧೀನ ಎನ್ನುವುದು ದೃಢವಾಗುವುದು. ಆದ್ದರಿಂದ ಹೀಗೆ ಹೇಳಿರುವರು ಎಂದು ಭಾವ. ಅಂದರೆ ಅವನಿಲ್ಲದೇ ಸತ್ತಾ ಇಲ್ಲ ಎಂದರೆ ಅವನಿಂದಲೇ ಸತ್ತಾ ಎಂದಾಗುವದು ಎಂದು ಅಭಿಪ್ರಾಯ.

ಭಗವಂತನು ಸತ್ತಾಪ್ರದ (ಪ್ರವರ್ತಕ) ಆಗಲಿ. 'ಯ ಇದಂ' ಎಂಬ ಅಭೇದೋಕ್ತಿಯ ಗತಿಯೇನು ? ಎಂದರೆ, ಬ್ರಹ್ಮತರ್ಕವಚನವನ್ನು ಉದಾಹರಿಸುವ ಮೂಲಕ ಅದರ ಅಭಿಪ್ರಾಯ ತಿಳಿಸುತ್ತಾರೆ :- ಹುಟ್ಟಿದ ಜಗತ್ತಿನ ಅಸ್ತಿತ್ವವು ಯಾವ ಕಾರಣ ಶ್ರೀಹರಿಯಿಂದ ಆಗುವದೋ ಆ ಕಾರಣ ಜಗತ್ತೇ ಹರಿ ಎಂದು ಹೇಳಲ್ಪಡುವನು. ಸಾಕ್ಷಾತ್ ಅಭೇದ ಏಕೆ ಇಲ್ಲಿ ಅರ್ಥವಲ್ಲ ? ಎಂದರೆ ಆದಕ್ಕೆ ಯುಕ್ತಿ ಹೇಳುವ ಅಂಶವನ್ನೂ ಉದಾಹರಿಸಿರುವರು 'ಹರೇಃ ವಿಶ್ವಂ' ಎಂದು. ಅಂದರೆ ಜಗತ್ತು ಶ್ರೀಹರಿಯಿಂದ ಭಿನ್ನವಾಗಿದ್ದರೂ ಅಭಿನ್ನವೇಕೆ ? ಎಂದರೆ ಯಾವ ಕಾರಣ ಶ್ರೀಹರಿಯು ಪರಮಃ ಸರ್ವೋತ್ತಮನು, ವಿಭುಃ ವ್ಯಾಪ್ತನು ಆಗಿರುವನೋ ಆ ಕಾರಣ ಸತ್ತಾ ಅವನ ಅಧೀನವಾದ್ದರಿಂದಲೇ ಅವನೆಂದು ಹೇಳಿದ್ದು. ಹೊರತು ಅಭೇದವಿದ್ದುದರಿಂದಲ್ಲ. ಇದನ್ನೇ ಬೇರೆ ಸ್ಥಳದಲ್ಲಿ 'ಯದಧೀನಾ ಯಸ್ಯ ಸತ್ತಾ ತತ್ತದಿತ್ಯೇವ ಭಣ್ಯತೇ ।' ಎಂದು ಹೇಳಿದೆ. ಜಗತ್ತಿನ ಸತ್ತಾ ಅವನ ಅಧೀನವಾಗಿದೆ ಕಾರಣ 'ಯ ಇದಂ ಸ್ವಯಂ' ಎಂದು ಹೇಳಿದ್ದು. 'ಮಮಾತ್ಮಾ ಭದ್ರಸೇನಃ' ಎಂಬಲ್ಲಿಯಂತೆ ಎಂದು ತಿಳಿಯಬೇಕು.

ಸತ್ಯ :- ಈ ಶ್ಲೋಕದಲ್ಲಿ ಒಂದೇ 'ಇದಂ' ಶಬ್ದವನ್ನು ಪ್ರಯೋಗಿಸಿದರೂ ಸಾಕಾಗಿತ್ತು. ಆ ಇದಂ ಶಬ್ದವನ್ನೇ ಅಪೇಕ್ಷಿತವಾದ ಎಲ್ಲಕಡೆಗೆ ಅನ್ವಯ ಮಾಡಲು ಬರುತ್ತಿತ್ತು. ಆದರೂ ಶ್ರುತಿಯಲ್ಲಿ ಇಮಾನಿ ಎಂದು ಬಹುವಚನವಿದ್ದದ್ದರಿಂದ ಆ ಬಹುವಚನಕ್ಕೆ ಅನುಗುಣವಾಗಿ ಇದಂ ಎಂದು ಅನೇಕ ಸಲ ಪ್ರಯೋಗಿಸಿದ್ದಾರೆ ಎಂದು ತಿಳಿಯಬೇಕು. ಅಥವಾ ಇದಂ ಶಬ್ದ ಉಳ್ಳ 'ಸರ್ವಂ ಖಲ್ವಿದಂ ಬ್ರಹ್ಮ' 'ಇದಮಗ್ರೇ' 'ಯಸ್ಮಿನ್ನಿದಂ' ಮುಂತಾದ ಅನೇಕ ಶ್ರುತಿಗಳನ್ನು ಸಂಗ್ರಹಿಸುವುದಕ್ಕಾಗಿ ಅನೇಕ ಇದಂ ಶಬ್ದಗಳನ್ನು ಪ್ರಯೋಗಿಸಿದ್ದಾರೆ ಎಂದು ತಿಳಿಯಬೇಕು.

ಯತಶ್ಚೇದಂ ಎಂಬಲ್ಲಿ ಇದಂ ಸಂಪತ್ಪ್ರದಂ ಕಾಮಿತದಾತಾರಂ ಎಂದು ಅರ್ಥ ಮಾಡಬಹುದು. 'ಇಷ್ಟದಾನಾತ್ತಥೇಂದವಃ' ಎಂಬ ಋಗ್ಭಾಷ್ಯಟೀಕಾದಲ್ಲಿ 'ಇಃ ಕಾಮಃ ಸಮುದಾಹೃತಃ' ಎಂದು ಉದಾಹರಿಸಿ 'ಇಂ ಕಾಮಂ ದದಂತಿ ಇತಿ ಇಂದವಃ' ಎಂದು ವಿವರಿಸಿರುವರು. ಅಥವಾ 'ಇಂ ತಮೇವ ದ್ಯತೀತಿ ಇದಃ ತಮ್' ಅಂದರೆ ಕೆಲವು ಸಲ ವಿರಕ್ತಿ ಬರಲಿ ಎಂದು ಕಾಮವನ್ನು ಖಂಡಿಸುವನು, ಆದ್ದರಿಂದ ಇದಂ.

ಯ ಇದಂ ಎಂಬಲ್ಲಿ ಯಃ ಇತ್+ಅಂ ಎಂದು ಪದವಿಭಾಗ ಮಾಡಿಕೊಳ್ಳಬೇಕು. **ಯಃ** ಯಾವ ಭಗವಂತನು ಈ ಜಗತ್ತನ್ನು **ಇತ್** ಪ್ರವೇಶಿಸಿರುವನು (ಏತೀತಿ ಇತ್) **ಅಂ** ಅಕಾರವಾಚ್ಯನಾದ **ತಂ** ಶ್ರೀಹರಿಯನ್ನು **ಪ್ರಪದ್ಯೇ** ಎಂಬ ಅರ್ಥವಿವಕ್ಷೆಯಿಂದ ನಾಲ್ಕು ಇದಂ ಶಬ್ದಗಳು. ಕಾರಣ ಯಸ್ಮಿನ್ ಯೇನ ಯತಃ ಎಂಬಲ್ಲಿ ಒಂದೇ ಇದಂಶಬ್ದವು ಸರ್ವಾನ್ವಯಿ. **ಯ ಇದಂ** ಯಾವನ ಅಧೀನ ಸತ್ತಾವನ್ನು, **ಯಃ ಸ್ವಯಂ** ಸ್ವಸಾಮರ್ಥ್ಯದಿಂದಲೇ **ಅಸ್ಮಾತ್** ಅಮುಕ್ತರಿಂದ **ಪರಸ್ಮಾತ್** ಮುಕ್ತವರ್ಗದಿಂದ **ಪರಃ**

ವಿಲಕ್ಷಣನು, **ಸ್ವಯಂಭೂಃ** ತನ್ನಿಂದಲೇ ಇರುವವನು **ತಂ ಪ್ರಪದ್ಯೇ** ಶರಣಂ ಎಂದು ಶೇಷ, **ಸ್ವಯಂ ತು** ಅನನ್ಯಾಧೀನವಾದ್ದರಿಂದ ಅಯಂ ಶುಭಾವಹದ್ಯೆವಕ್ಕೆ ಅಯಶಬ್ದವಾಚ್ಯ-ವಾದದ್ದಕ್ಕೆ ಸುಶಬ್ದದಿಂದ ಶೋಭನತೆಯನ್ನು ತಿಳಿಯಬೇಕು. ಮಹಾದ್ಯೆವಂ ಎಂದಾದರೂ ಅರ್ಥ. ಸ್ವಯಂಭುವಂ ಸ್ವಾಶ್ರಯನೆಂದಾದರೂ ಅರ್ಥ.

ಇಲ್ಲಿ ಆಚಾರ್ಯರು ತಾತ್ಪರ್ಯ ಬರಿಯಬೇಕಿರಲಿಲ್ಲ. ಯ ಇದಂ ಎಂಬುದರಿಂದ ತೋರಿದ ಅಭೇದವನ್ನು ಬಾದರಾಯಣರೇ ಯೋ ಅಸ್ಮಾಚ್ಚ ಪರಸ್ಮಾಚ್ಚ ಪರಃ ಎಂಬುದರಿಂದ ಪರಿಹರಿಸಿರುವರು ಎಂದರೆ, ನಿಜ. ಆದರೆ ಯ ಇದಂ ಎಂಬುದೇ ಯೋ ಅಸ್ಮಾತ್ ಎಂಬುದಕ್ಕೆ ಅಪವಾದಕವೋ ಅಥವಾ ಇದು ಯೋ ಅಸ್ಮಾತ್ ಎಂಬುದು ಯ ಇದಂ ಎಂಬುದಕ್ಕೆ ಅಪವಾದಕವೋ ಅಥವಾ ಯ ಇದಂ ಎಂದು ಅಭೇಧವನ್ನು ಯೋ ಅಸ್ಮಾತ್ ಎಂದು ಭೇದವನ್ನು ಚಶಬ್ದದಿಂದ ಸಮುಚ್ಚಯ ಮಾಡಿರುವದರಿಂದ ಭೇಧಾಭೇದವನ್ನು ಹೇಳಿರುವರು ಎಂಬುದಾಗಿ ಯಾವನೋ ದಡ್ಡ ಶಂಕಿಸಬಹುದು. ಕಾರಣ ಬ್ರಹ್ಮತರ್ಕವಚನವಿತ್ತು ನಿರಾಕರಿಸುವರು ಹೊರತು ಆಚಾತುರ್ಯದಿಂದಲ್ಲ ಎಂದು ಭಾವ. ।।೩।।

ಚೇತನಾಚೇತನಾತ್ಮಕಪ್ರಪಂಚಕ್ಕೂ ಪರಮಾತ್ಮನಿಗೂ ಭೇದವನ್ನು ಸ್ಪಷ್ಟಪಡಿಸಲು ಹೇಳಿದ ವಿಷಯವನ್ನೇ ವಿವರಿಸುತ್ತಾರೆ -

**ಯಃ ಸ್ವಾತ್ಮನೀದಂ ನಿಜಮಾಯಯಾರ್ಪಿತಂ**
**ಕ್ವಚಿದ್ವಿಭಾತಂ ಕ್ವ ಚ ತತ್ತಿರೋಹಿತಮ್ ।**
**ಅವಿದ್ಧದೃಕ್ ಸಾಕ್ಷ್ಯುಭಯಂ ತದೀಕ್ಷತೇ**
**ಸ ಆತ್ಮಮೂಲೋಽವತು ಮಾಂ ಪರಾತ್ಪರಃ ।।೪।।**

**ಅವಿದ್ಧದೃಕ್** ಅಕುಂಠಿತವಾದ ಜ್ಞಾನವುಳ್ಳ **ಸಾಕ್ಷೀ** ಎಲ್ಲವನ್ನು ಸಾಕ್ಷಾತ್ತಾಗಿ ಪ್ರತ್ಯಕ್ಷವಾಗಿ ತಿಳಿಯುವ (ನೋಡುವ) **ಯಃ** ಯಾವ ಶ್ರೀಹರಿಯು (ನೀನು) **ಕ್ವಚಿತ್** ಜಾಗ್ರದವಸ್ಥೆಯಲ್ಲಿ **ವಿಭಾತಂ** ತಿಳಿಯುವ (ಜ್ಞಾನವಿಷಯವಾದ) **ಕ್ವ ಚ** ನಿದ್ರಾವಸ್ಥೆಯಲ್ಲಿ **ತಿರೋಹಿತಂ** ಮರೆಯಾದ (ಜ್ಞಾನಕ್ಕೆ ವಿಷಯವಾಗದ), ಅಥವಾ **ಕ್ವಚಿತ್** ಬ್ರಹ್ಮಾದಿದೇವತೆಗಳಲ್ಲಿ **ವಿಭಾತಂ** ತೋರುವ **ಕ್ವಚ** ನಮ್ಮಂಥವರಲ್ಲಿ **ತಿರೋಹಿತಂ** ಕಾಣದ **ತತ್ ಉಭಯಂ** ಆ ಎರಡುಬಗೆಯ **ತತ್ ಇದಂ** ಈ ಜಗತ್ತನ್ನು **ನಿಜಮಾಯಯಾ** ನಿನ್ನ ಇಚ್ಛೆಯಿಂದ **ಸ್ವಾತ್ಮನಿ** ನಿನ್ನ ದೇಹದಲ್ಲಿ (ಉದರದಲ್ಲಿ) **ಅರ್ಪಿತಂ** ಇಟ್ಟುಕೊಂಡದ್ದನ್ನು **ಈಕ್ಷತೇ** ನೋಡುತ್ತಿಯೋ **ಆತ್ಮಮೂಲಃ** ತನಗೆ ತಾನೇ ಕಾರಣನಾಗಿರುವ, ತನಗೆ ತಾನೇ ಆಧಾರನಾಗಿರುವ, ತನಗೆ ತಾನೇ ಸತ್ತಾಪ್ರದನಾದ ಆದ್ದರಿಂದಲೇ **ಪರಾತ್ ಪರಃ** ಅಕ್ಷರಶಬ್ದವಾಚ್ಯಳಾದ ಲಕ್ಷ್ಮೀದೇವಿಗಿಂತಲೂ ಉತ್ತಮನಾದ **ಸಃ** ಆ ನೀನು **ಮಾಂ** ನನ್ನನ್ನು **ಅವತು** ರಕ್ಷಿಸು.

ಆತ್ಮಮೂಲಶಬ್ದದಿಂದ ಸ್ವಯಂಭೂಶಬ್ದವನ್ನು ವಿವರಿಸಿರುವರು. 'ಸ್ವಮಹಿಮ್ನಿ ಸ್ಥಿತಃ' ಎಂಬ ಶ್ರುತಿಯು ತನಗೆ ತಾನೇ ಆಧಾರನೆಂಬುದನ್ನು ಹೇಳುತ್ತದೆ. 'ಅಕ್ಷರಾತ್ ಪರತಃ ಪರಃ' ಎಂದೂ ಶ್ರುತಿಯಿದೆ. ಶರೀರದಲ್ಲಿ ಇದ್ದು ನೋಡುವನಾದರೆ ಜೀವರಂತೆ ಜ್ಞಾನಲೋಪವಾಗಿ ನೋಡುವದೇ ಅಸಂಭಾವಿತವೆಂಬ ಶಂಕೆಯನ್ನು ಅವಿದ್ಧದೃಕ್ ಎಂಬುದರಿಂದಲೂ, ಹೇಗೆ ನೋಡುವನು ಎಂಬ ಶಂಕೆಯನ್ನು ಸಾಕ್ಷೀ ಎಂಬ ಪದದಿಂದಲೂ ಪರಿಹರಿಸಿರುವರು.

ಸತ್ಯ ಃ- **ಯಃ ಸ್ವಾತ್ಮನಿ** ತನ್ನ ಉದರದಲ್ಲಿ **ನಿಜಮಾಯಯಾ** ತನ್ನ ಶಕ್ತಿಯಿಂದ **ಅರ್ಪಿತಂ** ಇರಿಸಲ್ಪಟ್ಟ **ಇದಂ** ಜಗತ್ತನ್ನು **ಕ್ವಚಿತ್** ಪ್ರಲಯಕಾಲದಲ್ಲಿ **ತಿರೋಹಿತಂ** ಮರೆಯಾದ **ಕ್ವಚಿತ್** ಸೃಷ್ಟಿಕಾಲದಲ್ಲಿ **ವಿಭಾತಂ** ಪ್ರಕಾಶಮಾನವಾದ ಅಂದರೆ ಕಾರ್ಯೋನ್ಮುಖತೆ ಅನುನ್ಮುಖತೆಗಳಿಂದ ವಿಭಾನ-ತಿರೋಧಾನಗಳನ್ನು ತಿಳಿಯಬೇಕು. **ತದುಭಯಂ** ಅವೆರಡನ್ನು **ಇತಿ ಈಕ್ಷತೇ** ಈ ರೀತಿಯಾಗಿ ತಿಳಿಯುವನು. ಆ ನೋಟವು ಅವ್ಯಭಿಚರಿತವಾದುದು ಎಂದು ಹೇಳುವರು **ಅವಿದ್ಧದೃಕ್** ಎಂದು. ಅಪ್ರತಿಹತವಾದ ಜ್ಞಾನವುಳ್ಳವನೆಂದರ್ಥ. 'ಅವಿಲುಪ್ತಾವಬೋಧಾತ್ಮಾ' ಎಂದಿದೆ. ನ ಪರಸ್ಯ ಪರತಃ ಪರವದೀಕ್ಷಣಂ ಇತ್ಯಾಹ ಉತ್ತಮನಾದ ಶ್ರೀಹರಿಗೆ ಇತರರಂತೆ ಬೇರೆಯವರಿಂದ ಅಥವಾ ಶಬ್ದಾನುಮಾನಗಳಿಂದ ತಿಳುವಳಿಕೆ ಅಲ್ಲವೆಂದು ಹೇಳುವರು ಸಾಕ್ಷೀ ಎಂದು. ತಾನೇ ತನ್ನ ಕಣ್ಣಿನಿಂದ ತಿಳಿಯುವವನೆಂದರ್ಥ.

ಚತುರ್ಮುಖಬ್ರಹ್ಮನು ಜಗತ್ತಿಗೆ ಕಾರಣನೆಂದು ಕೇಳಿಬರುವನು. ಆದ್ದರಿಂದ ಹರಿಯು ಆದಿಬೀಜನು ಹೇಗಾಗಲು ಸಾಧ್ಯ ಎಂಬ ಶಂಕೆಯು ಬರುತ್ತದೆ. ಆತ್ಮಮೂಲಃ ಎಂದು ಹೇಳುವ ಮೂಲಕ ಈ ಶಂಕೆಯನ್ನು ಪರಿಹರಿಸುತ್ತಾರೆ. ''ಆತ್ಮಾ ವಿರಿಂಚಃ ಸುಮನಾಃ'' ಎಂಬ ಕೋಶವಿರುವುದರಿಂದ ಆತ್ಮನಿಗೆ ಚತುರ್ಮುಖನಿಗೆ ಮೂಲಕಾರಣನು ಪರಮಾತ್ಮ ಎಂಬುದಾಗಿ ಅರ್ಥವಾಗುತ್ತದೆ. ಆದ್ದರಿಂದ ಭಗವಂತ ಆದಿಬೀಜನೆಂಬುದು ಅಯುಕ್ತವೇನಲ್ಲ ಎಂದು ತಿಳಿಯಬೇಕು.

ಸರಿ, ಶ್ರೀಹರಿಗೂ ಒಬ್ಬ ಮೂಲ ಇದ್ದರೆ ಅವನೇ ಉಪಾಸನೆಯೋಗ್ಯನಾಗುವನಲ್ಲ ಎಂದರೆ, ಇಲ್ಲವೆಂದು ಹೇಳುವನು ಆತ್ಮಮೂಲಃ ಎಂದು. ಆತ್ಮೈವ ಮೂಲಂ ಯಸ್ಯ ಸಃ ತನಗೆ ತಾನೇ ಮೂಲ. ಅವನಿಗೆ ಮತ್ತೊಬ್ಬ ಮೂಲನಿಲ್ಲವೆಂದು ಭಾವ. ಎಲ್ಲರಿಗೂ ಮೂಲನಾದರೆ ಆಗಲಿ, ನೀನು ಉಪಾಸನೆ ಮಾಡಲು ನಿನಗೂ ಅವನಿಗೂ ಏನು ಸಂಬಂಧ ? ಎಂದರೆ, ನನಗೂ ಅದೇ ಸಂಬಂಧವಿದೆ ಎಂದು ಹೇಳುವನು- ಆತ್ಮಮೂಲಃ ಎಂದು. ಆತ್ಮನಃ ನನಗೆ ಮೂಲಃ ಕಾರಣನು ಎಂದು. ''ಶೀಲಮೂಲಮಂಗಲತಾಲ'' ಎಂಬ ಲಿಂಗಾನುಶಾಸನದಲ್ಲಿ ''ಪುಂಸಿ ಚ'' ಎಂದು ಹೇಳಿದ್ದರಿಂದ ಮೂಲಶಬ್ದ ಪುಲ್ಲಿಂಗವಾಗಿದೆ.

ಅಥವಾ ಸ್ವಾತ್ಮನಿ ಮೂಲರೂಪದಲ್ಲಿ ಅರ್ಪಿತಂ ಇರುವ ರೂಪವು ಸ್ವಾಭಾವಿಕವು. ಅದೇ ನಿಜಮಾಯಯಾ ನಿನ್ನ ಇಚ್ಛೆಯಿಂದ ವಿಭಾತಂ ರಾಮಕೃಷ್ಣಾದಿಗಳು ವಿಶೇಷಪ್ರಕಾಶಮಾನವಾದವು. ತಿರೋಹಿತಂ ಮತ್ಸ್ಯಾದಿಗಳು ತಿರೋಹಿತವಾದಂತೆ ಇರುವವು ಎಂದು ತಿಳಿಯಬೇಕು. ಆದ್ದರಿಂದಲೇ ''ನಮಃ ಶಾಂತಾಯ ಘೋರಾಯ ಮೂಢಾಯ'' ಎಂದು ಹೇಳಿ ಮೂಢೋ ಮತ್ಸ್ಯಾದಿಃ ಎಂದು ವ್ಯಾಖ್ಯಾನಿಸಿರುವರು. ಇವೆರಡೂ ಪರಸ್ಪರಸಹಕಾರಿಗಳು ಎಂದು ತಿಳಿಯಬೇಕು. ತತ್ ಉಭಯಂ ತಿರೋಹಿತ ಮತ್ತು ವಿಭಾತವೆಂಬ ಎರಡೂ ತತ್ ವ್ಯಾಪ್ತವಾದುದರಿಂದ ತತ್ ಎನಿಸುವದು. ತತ್ ಆದ್ದರಿಂದಲೇ ಈಕ್ಷತೇ ಎಲ್ಲವನ್ನು ನೋಡುವವು ಅವಿದ್ಧದೃಕ್ ಚ ಅಪ್ರತಿಹತ ಜ್ಞಾನವುಳ್ಳವುಗಳು. ಸಃ ಯಃ ಅವನಾರೋ ಸ್ವಾತ್ಮಾ ಆತ್ಮಮೂಲಃ ಎಂದು ಯೋಜಿಸಿದರು. ಮೂಲರೂಪವೇ ಅವತಾರರೂಪಕ್ಕೆ ವ್ಯಂಜಕವೆಂದು ಭಾವ.

''ಪೂರ್ಣಮದಃ ಪೂರ್ಣಮಿದಂ'' ಎಂದಿದೆ. ಮೂಲರೂಪವೂ ಪೂರ್ಣ, ಅವತಾರರೂಪವೂ ಪೂರ್ಣ. ಮೂಲರೂಪದಿಂದ ಅವತಾರರೂಪ ವ್ಯಕ್ತವಾಗುವದು ಮತ್ತು ಮೂಲರೂಪದಲ್ಲಿ ಸಂಶ್ಲೇಷವಿಶೇಷವನ್ನು ಹೊಂದಿ ಮೂಲರೂಪವೂ ಉಳಿಯುವದು ಎಂದು ಸಂಪೂರ್ಣವಾಕ್ಯದ ಅರ್ಥ. **ಸಃ** ಆ ಪರಾತ್ಪರನು ಅತ್ಯುತ್ತಮನು **ಮಾಂ ಅವತು** ನನ್ನನ್ನು ರಕ್ಷಿಸಲಿ. **ಇದಂ** ಜಗತ್ತು **ನಿಜಮಾಯಯಾ** ನ ಜಾಯತೇ ಇತಿ ನಿಜಾ, ನಿಜಾ ಚ ಸಾ ಮಾಯಾ ಚ ಇತಿ ನಿಜಮಾಯಾ ತಯಾ ನಿಜಮಾಯಯಾ ಅಂದರೆ ನಿತ್ಯವಾದ ಪ್ರಕೃತಿಯಿಂದ **ಅರ್ಪಿತಂ** ಸಂಪೃಕ್ತಂ ಸಂಬದ್ಧವಾದುದು. **ಯತ್ತತ್** ಆದ್ದರಿಂದ **ಅವಿದ್ಧದೃಕ್ ಕ್ವ** ಅಪ್ರತಿಹತಜ್ಞಾನವುಳ್ಳದ್ದು ಎಲ್ಲಿ ? ನ ಕ್ವಾಪಿ ಎಲ್ಲಿಯೂ ಇಲ್ಲ. ಹಾಗಾದರೆ ಅದರ ಜ್ಞಾನ ಎಂಥದು ಎಂದರೆ, **ಕ್ವಚಿತ್ ವಿಭಾತಂ** (ಭಾವಪ್ರತ್ಯಯ) ಕೆಲವು ಪ್ರಮಾರೂಪವಾದುದು. **ತಿರೋಹಿತಂ** ಭ್ರಮವೂ ಎಂದರ್ಥ. ಚತುರ್ಮುಖನಿಗೂ ಮಧ್ಯಾಹ್ನಸೂರ್ಯನ ಕ್ಷೋಭೆಯಂತೆ ಕ್ಷೋಭವೇ ತಿರೋಧಾನವೆಂದು ತಿಳಿಯಬೇಕು. ಹಾಗಾದರೆ ಅಂಥ ಜ್ಞಾನ ಯಾರಿಗೆ ಎಂದರೆ ಹೇಳುವರು. ಯಃ **ಸಾಕ್ಷೀ** ಸನ್ **ಈಕ್ಷತೇ** ತಸ್ಯೈವ ಚಿತ್ ತಾದೃಗ್ ಜ್ಞಾನಂ ಎಂದು. ಯಾವನು ಸಾಕ್ಷಾತ್ತಾಗಿ ಎಲ್ಲವನ್ನು ತಿಳಿಯುವನೋ ಅವನಿಗೆ ಮಾತ್ರ ಅಂತಹ ಅಪ್ರತಿಹತಜ್ಞಾನವು. ಇನ್ನು **ಯಃ ಪರಾತ್ಪರಃ** ಎಂಬುವುದು ಇಂತಹ ಜ್ಞಾನ ಅಸಂಭಾವಿತ ಎಂಬುದನ್ನು ಪರಿಹರಿಸಲು ಕೊಟ್ಟ ವಿಶೇಷಣ. ಇಂಥವನು ರಕ್ಷಿಸಲಿ.

**ಅವಿದ್ಧದೃಕ್** ಎಂಬಲ್ಲಿ ಯತಃ ಇದಂ **ಅವಿತ್ ತತ್** ತತಃ **ದೃಕ್ ಕ್ವ ಹ** ಯಾವ ಕಾರಣ ಈ ಜಗತ್ತು ಅಜ್ಞಾನಿ ಆದ್ದರಿಂದ ಜ್ಞಾನವೆಲ್ಲಿಯದು ಹ ಖೇದವು. **ಯಯಾ ನಿಜಮಾಯಯಾ** ಯಾವ ತನ್ನ ಹೆಂಡತಿಯಿಂದ **ಉಭಯಂ** (ಇಲ್ಲಿ ಉಭಯಂ ಎಂಬುದನ್ನು ಓಃ ಭಯಂ ಎಂದುದಾಗಿ ಅನ್ವಯ ಮಾಡಿಕೊಳ್ಳಬೇಕು.) ಓಃ ರುದ್ರನಿಗೆ ಭಯಂ ಭಯವೋ ಹೀಗೂ ಅರ್ಥ. ''ಉಃ ಶಂಭುಃ ಸಮುದಾಹೃತಃ'' ಎಂದಿದೆ. ''ಅಹಂ ರುದ್ರಾಯ ಧನುರಾತನೋಮಿ''

ಎಂದೂ ಇದೆ. ತಾಂ **ಮಾಂ** ಅಂತಹ ಲಕ್ಷ್ಮಿಯನ್ನು **ಸ್ವಾತ್ಮನಿ** ತನ್ನ ದೇಹದಲ್ಲಿ ವಕ್ಷಸ್ಥಳದಲ್ಲಿ **ಈಕ್ಷತೇ** ನೋಡುವನೋ ಅವನು ರಕ್ಷಿಸಲಿ. ಇದರಿಂದ ನಾರಾಯಣನ ಅಸಾಧಾರಣಲಕ್ಷಣ ಹೇಳಿದಂತಾಯಿತು.

**ಕ್ವಚಿದ್ವಿಭಾತಂ** ಕೆಲವೆಡೆ ಪ್ರಕಾಶಮಾನವಾದುದು. **ಕ್ವಚ** ಕೆಲವೊಮ್ಮೆ **ಕ್ಷತೇ** ಜಾತೇ ಯಾವನು ಮಾಡಿದ ಗಾಯವಾದಾಗ ಭೇದನದಿಂದ ತಿರೋಹಿತವಾಗುವದು ಅಂದರೆ ಬ್ರಹ್ಮನನ್ನು ಚರ್ಮ ಸುಲಿದು ತಲೆಗೆ ಕಟ್ಟಿಕೊಳ್ಳುವನು ಶ್ರೀಹರಿಯು. ಆಗ ಅವನು ಮರೆಯಾಗುವನೆಂದರ್ಥ. ''ಬ್ರಹ್ಮಚರ್ಮಶಿರಃಪಟ್ಟೀ ದಿಕ್ಪಾಲೋರ್ಧ್ವಾಂಗಭೂಷಣಃ'' ಎಂದಿದೆ. **ಯಯಾ** ಯಾವ ಲಕ್ಷ್ಮೀದೇವಿಯಿಂದ **ಸ್ವಾತ್ಮನಿ ವಿಭಾತಂ** ವಕ್ಷಸ್ಥಲದಲ್ಲಿ ಪ್ರಕಾಶಿಸಲ್ಪಟ್ಟಿತೋ **ಸಾ ಈ** ಆ ಲಕ್ಷ್ಮೀದೇವಿಯು ಯೇನ ಯಾವನಿಂದ **ನಿಜಮಾ** ಸ್ವರೂಪಭೂತ ಸಂಪತ್ತುಳ್ಳವರಾಗಿದ್ದರು **ಮಾಂ** ನನ್ನನ್ನು ಶ್ರೀಹರಿಯನ್ನು **ಪುನಃ ಈಕ್ಷತೇ** ಮತ್ತೆ ನೋಡುವಳು ಎಂದರ್ಥ. ಇದನ್ನೇ 'ನವನವಸುವಿಶೇಷೋಪಲಂಭಾತ್' 'ಶ್ರಿಯೋಽಪಿ ಚ ಜ್ಞಾನಸ್ಫೂರ್ತಿಃ' ಎಂದಿದೆ.

**ಸ್ವಾತ್ಮನಿ** ತನ್ನಲ್ಲಿ **ತಂ** ತಂ ಎಂಬುದು ಭಾವಪ್ರಧಾನನಿರ್ದೇಶ ಎಂಬುದಾಗಿ ತಿಳಿಯಬೇಕು. ಹೀಗಾಗಿ ತಂ ಎಂದರೆ ತತ್ತ್ವಂ ಎಂದು ಅರ್ಥ. ಚೋರತ್ವವು ಎಂದು ಅರ್ಥ. ''ತಕಾರಃ ಕೀರ್ತಿತಶ್ಚೋರೇ'' ಎಂದು ವಿಶ್ವಕೋಶವಿದೆ. ಆ ಚೋರತ್ವವು **ನಿಜಮಾಯಯಾ** ತನ್ನ ಇಚ್ಛೆಯಿಂದ **ವಿಭಾತಂ** ಪ್ರಕಾಶಿತವು. **ಕ್ವಚಿತ್ ತಿರೋಹಿತಂ** ಅಡಗಿದೆ.

ಕೃಷ್ಣಾವತಾರದಲ್ಲಿ ಚೋರತ್ವ ವ್ಯಕ್ತಮಾಡಿದ. ರಾಮಾವತಾರದಲ್ಲಿ ತೋರಿಸಲಿಲ್ಲ. ಹಾಗಾದರೆ ಬಾಲಕೃಷ್ಣ ಮಾಡಿದ ಚೋರತ್ವಲೀಲೆ ಐಂದ್ರಜಾಲಿಕವೆ ? ಎಂದರೆ, ಅಲ್ಲ ಎನ್ನುವರು **ಅವಿದ್ಧದೃಕ್** ಎಂದು. ವಿದ್ಧಾ ಅಪ್ರತಿಬದ್ಧಾ ಜನಾನಾಂ ದೃಕ್ ಯೇನ ತತ್ ಜನರ ಕಣ್ಣುಕಟ್ಟಿ ಮಾಡಿದ್ದಲ್ಲ. ತನ್ನ ಗೆಳೆಯಂದಿರನ್ನು ಚೋರರಂತೆ ಮಾಡುವನು. ಉಭಯಂ ಉ ಕುತ್ಸಾ ತತ್ಸಹಿತಂ ಭಯಂ ಅಸ್ಮಿನ್ ಕರ್ಮಣಿ ತತ್ ಯಥಾ ಭವತಿ ತಥಾ ಈಕ್ಷತೇ ಕಳ್ಳತನ ಮಾಡುವಾಗ ಹೆದರಿದಂತೆ ನೋಡುವನು. ಯಃ ಯಾವನು ಸಃ ಅವನು ಆತ್ಮಮೂಲಃ ಆತ್ಮಾ ಆತ್ಮೀಯವಾದ ಮೂಲಂ ದರೀನಿಕುಂಜೋ ವಾಸಾಯ ಯಸ್ಯ ಸಃ, ಗುಹೆ ಅಥವಾ ಬಿಲವನ್ನು ತನ್ನ ವಾಸಸ್ಥಾನ ಮಾಡಿಕೊಂಡವನು ಎಂದರ್ಥ. ''ಉರ್ವಾಚ್ಯೇ ಚಾಪಿ ಕುತ್ಸಾಯಾಮ್'' ''ಮೂಲಮಾದ್ಯೇ ಶಿಫಾಯಾಂ ಸ್ಯಾದ್ದರೀಕುಂಜೇತಿ ಕೇಽಪಿ ಚ'' ಎಂದು ವಿಶ್ವವಿದೆ. ಇಂತಹ ಕೃಷ್ಣನು ನನ್ನನ್ನು ರಕ್ಷಿಸಲಿ ಮುಂತಾಗಿ ಅನೇಕ ಅರ್ಥಗಳನ್ನು ಶ್ರೀಸತ್ಯಧರ್ಮರು ಮಾಡಿರುವರು. ।।೪।।

ಸತ್ಯ :- ಪರಾತ್ಪರತ್ವಸ್ವರೂಪವು ಅಸಿದ್ಧ ಎಂಬ ಶಂಕೆಯನ್ನು ಪರಿಹರಿಸಲು ಸಾಕಲ್ಯೇನ ಸಕಲಾಜ್ಞೇಯತ್ವವನ್ನು ಎರಡು ಶ್ಲೋಕಗಳಿಂದ ಹೇಳುವರು- (೮೦) ಪ್ರಕೃತಿಶಕ್ತಿಗೆ ಅವಿಷಯವಾದದ್ದೆಂದು ತಿಳಿಸುವ ಮೂಲಕ ಪರಾತ್ಪರತ್ವವನ್ನು ಸ್ಪಷ್ಟಪಡಿಸುವರು -

**ಕಾಲೇನ ಪಂಚತ್ವಮಿತೇಷು ಕೃತ್ಸ್ನಶೋ**
**ಲೋಕೇಷು ಲೀನೇಷು ಚ ಸರ್ವಹೇತುಷು ।**
**ತಮಸ್ತದಾಽಽಸೀದ್ ಗಹನಂ ಗಭೀರಂ**
**ಯಸ್ತಸ್ಯ ಪಾರೇಽಭಿವಿರಾಜತೇ ವಿಭುಃ ॥೫॥**

**ನ ಯಸ್ಯ ದೇವಾ ಋಷಯಃ ಪದಂ ವಿದು-**
**ರ್ಜಂತುಃ ಪುನಃ ಕೋಽರ್ಹತಿ ಗಂತುಮೀರಿತಮ್ ।**
**ಯಥಾ ನಟಸ್ಯಾಕೃತಿಭಿರ್ವಿಚೇಷ್ಟತೋ**
**ದುರನ್ವಯಾಽನುಕ್ರಮಣಃ ಸ ಮಾಽವತು ॥೬॥**

**ಕಾಲೇನ** ಕಾಲನಾಮಕನಾದ ಶ್ರೀಹರಿಯಿಂದ **ಲೋಕೇಷು** ಕಾರ್ಯವಾದ ಪೃಥಿವ್ಯಾದಿಗಳು **ಕೃತ್ಸ್ನಶಃ** ಎಲ್ಲವೂ **ಪಂಚತ್ವಂ ಇತೇಷು** ಪಂಚಭೂತಗಳಾಗುತ್ತಿರಲು **ಸರ್ವಹೇತುಷು** ಪೃಥಿವ್ಯಾದಿಗಳಿಗೆ ಕಾರಣಗಳಾದ ಗಂಧಾದಿತನ್ಮಾತ್ರಾಗಳು **ಲೀನೇಷು** ತಮ್ಮ ತಮ್ಮ ಕಾರಣಗಳ ಸ್ವರೂಪವನ್ನು ಹೊಂದುತ್ತಿರಲು **ಯತ್ತತ್** ಯಾವ **ಗಹನಂ** ತಿಳಿಯಲಾಗದ **ಗಭೀರಂ** ದಟ್ಟವಾದ **ತಮಃ** ಕತ್ತಲೆಯು **ಆಸೀತ್** ಇದ್ದಿತೋ, **ಯಃ ವಿಭುಃ** ಯಾವ ಸಮರ್ಥನಾದ **ಭವಾನ್** ನೀನು **ತಸ್ಯ** ಆ ಕತ್ತಲೆಯ **ಪಾರೇ** ಸಂಪರ್ಕವಿಲ್ಲದ ಪ್ರದೇಶದಲ್ಲಿ **ಅಭಿವಿರಾಜತೇ** ಮುಖ್ಯವಾಗಿ ಪ್ರಕಾಶಮಾನನಾಗಿರುವೆಯೋ **ಸಃ** ಅಂತಹ ನೀನು **ಮಾ** ನನ್ನನ್ನು **ಅವತು** ರಕ್ಷಿಸು.

**ದೇವಾಃ** ಬ್ರಹ್ಮಾದಿದೇವತೆಗಳು **ಋಷಯಃ** ನಾರದಾದಿಋಷಿಗಳು **ಯಸ್ಯ ಪದಂ** ಯಾವನ ಸ್ವರೂಪವನ್ನು **ನ ವಿದುಃ** ಸಂಪೂರ್ಣವಾಗಿ ತಿಳಿಯಲಾರರೋ **ಪುನಃ** ಅಂದಮೇಲೆ **ಕಃ ಜಂತುಃ** ಯಾವ ಪ್ರಾಣಿಯು **ಗಂತುಂ** ತಿಳಿಯಲು **ಈರಿತುಂ** ಹೇಳಲು **ಅರ್ಹತಿ** ಯೋಗ್ಯನಾಗುವನು ? ಸಮರ್ಥನಾಗುವನು ? ಸಾಕಲ್ಯೇನ ತಿಳಿಯಲು ಹೇಳಲು ಯಾರಿಗೂ ಸಾಧ್ಯವಿಲ್ಲ ಎಂದರ್ಥ. **ಆಕೃತಿಭಿಃ** ಹನುಮಂತ ಮೊದಲಾದ ವೇಷಗಳಿಂದ **ವಿಚೇಷ್ಟತಃ** ಆಯಾ ಆಕಾರಕ್ಕೆ ತಕ್ಕಂತೆ ಅಭಿನಯ ಮಾಡುತ್ತಿರುವ **ನಟಸ್ಯ** ವೇಷಧಾರಿಯ ಸ್ವರೂಪವು **ಯಥಾ** ಹೇಗೆ ತಿಳಿಯಲಾಗುವದಿಲ್ಲವೋ **ತಥಾ** ಹಾಗೆ **ದುರನ್ವಯಾನುಕ್ರಮಣಃ** ತಿಳಿಯಲಾಗದ ಚರಿತ್ರೆಯುಳ್ಳ **ಸಃ** ಶ್ರೀಹರಿಯು **ಮಾ** ನನ್ನನ್ನು **ಅವತು** ರಕ್ಷಿಸಲಿ.

ಸತ್ಯ ಃ- ಕಾಲೇನಪಂಚತ್ವಮಿತೇಷು ಕೃತ್ಸ್ನಶೋ ಎಂಬಲ್ಲಿ ಕಾಲಾ ಇನಪಂಚತ್ವಂ ಇತಾ ಇಷುಕೃತ್ಸ್ನಶಾ ಉಲೋಕೇಷು ಎಂಬುದಾಗಿ ಪದಗಳನ್ನು ಬಿಡಿಸಿಕೊಂಡು ಹೀಗೆ ಅರ್ಥವನ್ನು ತಿಳಿಯಬೇಕು.

**ಯೇನ** ಯಾವ ಶ್ರೀಕೃಷ್ಣನಿಂದ **ಕಾಲಾ** ಕಪ್ಪುಬಣ್ಣ ಉಳ್ಳ ದ್ರೌಪದಿಯು **ಇನಪಂಚತ್ವಂ** ಐದುಮಂದಿ ಗಂಡಂದಿರನ್ನು **ಇತಾ** ಹೊಂದಿದಳು. 'ಇನಾಃ ಪಂಚ ಯಸ್ಯಾಃ ಸಾ ತಸ್ಯಾ

ಭಾವಃ ಇನಪಂಚತ್ವಂ' ಎಂದಾದರೂ ಮಾಡಬಹುದು. ಮೊದಲು ಉತಾಮೃತತ್ವಸ್ಯೇಶಾನಃ ಎಂಬಲ್ಲಿಯಂತೆ ವರ್ಗಾರ್ಥೇ ತ್ವಪ್ರತ್ಯಯ ಮಾಡಿತ್ತು. ಐದುಮಂದಿ ಗಂಡಂದಿರುಳ್ಳ ದ್ರೌಪದಿಯು **ಯಥಾ** ಹೇಗೆ **ಉಲೋಕೇಷು** ಕುತ್ಸಿತಜನರಲ್ಲಿ **ತಮಃ ಆಸೀತ್** ದುಃಖವುಳ್ಳವಳಾದಳು, ''ತಮಃ ಶೋಕೇ ಗುಣಾಂತರೇ'' ಎಂದು ವಿಶ್ವವಿದೆ. **ತೇನ** ಆದ್ದರಿಂದ **ಸರ್ವಹೇತುಷು** (ಅರ್ವ ಷರ್ವ ಹಿಂಸಾಯಾಂ ಎಂದಿರುವದರಿಂದ) ಹಿಂಸಾಕಾರಣಗಳು **ಲೀನೇಷು** ಓಡಿಹೋಗುತ್ತಿರಲು **ಇಷುಕೃತ್ಸ್ನಶಾ** (ಇಷುಣಾ ಬಾಣದಿಂದ ಅಂದರೆ ಅದರ ದ್ವಾರಾ ಕೃತ್ಸ್ನಂ ಶಂ ಯಸ್ಯಾಃ ಸಾ) ಸಂಪೂರ್ಣ ಸುಖವುಳ್ಳವಳಾದಳು. **ಯದ್ಗಭೀರಂ** ಇತರರಿಂದ ಅಪರಿಹಾರ್ಯವಾದ **ಗಹನಂ** ವನವೂ **ಆಸೀತ್** ಇತ್ತು. **ತಸ್ಯ** ಆ ಪಂಚಕಕ್ಕೆ **ಪಾರೇ ಪಾರಣೇ** ದಾಟಲು **ವಿಭುಃ ಆಸೀತ್** ಸಮರ್ಥವಾಯಿತು.

ನ ಯಸ್ಯ ಎಂದು ಬಿಡಿಸಿಕೊಳ್ಳದೇ ನಯಸ್ಯ ಎಂದು ಅಖಂಡವಾಗಿಯೇ ಪಠಿಸಿಕೊಳ್ಳಬೇಕು. ಹೀಗೆ ಅರ್ಥವನ್ನು ತಿಳಿಯಬೇಕು. **ನಯಸ್ಯ ಪದಂ** ಯಾವನ ನೀತಿಯ ಇಯತ್ತೆಯನ್ನು **ದೇವಾಃ ಋಷಯಃ ಮಾ ವಿದುಃ** ದೇವತೆಗಳು ಋಷಿಗಳು ತಿಳಿದಿಲ್ಲ.

ಅಭಿವಿ ರಾಜತೇ ಎಂಬುದಾಗಿ ಬಿಡಿಸಿಕೊಂಡು ಹೀಗೆ ಅರ್ಥವನ್ನು ತಿಳಿಯಬೇಕು. ಲೀಲಾಕಾಲದಲ್ಲಿ **ನಟಸ್ಯ ಆಕೃತಿಭಿಃ ವಿಚೇಷ್ಟತಃ** ನಟರಂತೆ ವ್ಯಾಪಾರ ಮಾಡುವ ಶ್ರೀಕೃಷ್ಣನ **ಯಶ್ಚ** ಯಾವನು **ದುರನ್ವಯಾನುಕ್ರಮಣಃ** ''ಯಸ್ಮಿನ್ ವಿರುದ್ಧಗತಯೋಽಪ್ಯನಿಶಂ ಪತಂತಿ'' ಎಂದಿರುವದರಿಂದ ಏಕಕಾಲದಲ್ಲಿ ಅಣುತ್ವ-ಮಹತ್ವಗಳನ್ನು ತೋರಿಸುವದು ಎಂಬ ಲೋಕವಿರುದ್ಧಚರ್ಯನು, ಅಥವಾ ಚೌರ್ಯಾದಿಚರ್ಯನು **ಅಭಿವಿ** ಗರುಡನಲ್ಲಿ **ರಾಜತೇ** ಶೋಭಿಸುವನೋ **ಸಃ** ಅವನು **ಮಾಂ ಅವತು** ನನ್ನನ್ನು ರಕ್ಷಿಸಲಿ.

**ಗಹನಂ ಗಭೀರಂ** ತಮ್ಮ ನಿಬಿಡವಾದ ಕತ್ತಲೆಯು **ತಸ್ಯ** ಐದುಮಂದಿಯ ಮಧ್ಯದಲ್ಲಿರುವ ಅರ್ಜುನನಿಗೆ **ಪಾರೇ ಸತಿ** ಸವಿತರಿ ಸೈಂಧವವಧಸಂಧಾಪಾರಣವಿಷಯೇ **ಯೇನ ಆಸೀತ್** ಯಾವನಿಂದ ಸೂರ್ಯನಿರುವಾಗಲೇ ಸೈಂಧವನ ವಧ ಮಾಡಿ ಮುಗಿಸಲಾಯಿತೋ ಮತ್ತು ಬ್ರಾಹ್ಮಣನ ಮಗನನ್ನು ತರುವಾಗ ಯತ್ ಗಹನಂ ಗಭೀರಂ ತಮಃ ತಸ್ಯ ಪಾರೇ ಚ ಯಃ ಆಸೀತ್ **ಸಃ ಮಾಂ ಅವತು** ನಿಬಿಡವಾದ ತಮಸ್ಸನ್ನು ದಾಟಿ ಯಾವನು ಇದ್ದನೋ ಅವನು ನನ್ನನ್ನು ರಕ್ಷಿಸಲಿ ಎಂಧರ್ಥ. ।।೫।।೬।।

ಸತ್ಯ ಃ- ಈ ಮಂತ್ರವನ್ನು ಜಪಿಸಲು ನನಗೆ ಮಾತ್ರ ಅಧಿಕಾರವಲ್ಲ, ಕಿಂತು ಪ್ರಾಚೀನರಾದ ಪ್ರೇಕ್ಷಾವಂತರು ಇದೇ ರೀತಿ ವಾಸುದೇವನ ಉಪಾಸನೆಯನ್ನು ಮಾಡಿರುವರು ಎಂದು ಪ್ರಮಾಣಸಹಿತವಾಗಿ ಹೇಳಿದೆ ಎಂದು ಹೇಳುವರು -

ಭಲಾರೀ ಃ- ಈ ವಿಧ ಮಹಿಮೆಯುಳ್ಳ ಭಗವಂತನ ಜ್ಞಾನ ಆಗುವದು ಹೇಗೆ ? ಎಂದರೆ, ಅವನ ಜ್ಞಾನೋಪಾಯವನ್ನು ಹೇಳುತ್ತ ಪ್ರಾರ್ಥಿಸುವನು -

ಲಿಂಗೇರೀ ಃ- ಶ್ರೀಹರಿಯು ಅಜ್ಞೇಯನಾದರೆ ಅವನ ಪ್ರಸಾದದಿಂದ ಮೋಕ್ಷಾದಿ-ಪುರುಷಾರ್ಥಾಪೇಕ್ಷೆ ಮತ್ತು ಅದಕ್ಕೆ ಸಾಧನವಾದ ಅವನ ಸಾಕ್ಷಾತ್ಕಾರದ ಆಶೆಯೂ ಅನುಚಿತ ಎಂದು ಆಶಂಕಿಸಿ, ಶ್ರೀಹರಿಯು ತನ್ನ ಅನುಗ್ರಹವಿಲ್ಲದೇ ಅಜ್ಞೇಯನಾದರೂ ತನ್ನ ಅನುಗ್ರಹವಾದಾಗ ಜ್ಞೇಯನಾಗುವನು. ಆದ ಕಾರಣ ಜ್ಞಾನಸಾಧನವಾದ ವೈರಾಗ್ಯಾದಿಗಳಲ್ಲಿ ಋಷಿಗಳು ಪ್ರವೃತ್ತರಾಗುವ ಕಾರಣ ಮೋಕ್ಷಾಕಾಂಕ್ಷೆಯು ಉಚಿತವೇ ಎಂದು ಪರಿಹರಿಸುವರು -

**ದಿದೃಕ್ಷವೋ ಯಸ್ಯ ಪದಂ ಸುಮಂಗಲಂ**
**ವಿಮುಕ್ತಸಂಗಾ ಮುನಯಃ ಸುಸಾಧವಃ ।**
**ಚರಂತ್ಯಲೋಕವ್ರತಮವ್ರಣಂ ವನೇ**
**ಸರ್ವಾತ್ಮಭೂತಾಃ ಸುಹೃದಃ ಸ ಮೇ ಗತಿಃ ॥೭॥**

**ವಿಮುಕ್ತಸಂಗಾಃ** ಹೆಂಡತಿ ಮೊದಲಾದ ವಿಷಯಗಳಲ್ಲಿ ಸ್ನೇಹವನ್ನು ಬಿಟ್ಟ **ಸುಸಾಧವಃ** ಅತ್ಯಂತಸಾಧುಗಳಾದ **ಮುನಯಃ** ಮನನಶೀಲರಾದ ಜ್ಞಾನಿಗಳು **ಯಸ್ಯ** ಯಾವ ಶ್ರೀಹರಿಯ **ಸುಮಂಗಲಂ** ಪರಮಮಂಗಲಕರವಾದ **ಅಲೋಕವ್ರತಂ** ಲೋಕವಿಲಕ್ಷಣವಾದ ಸೃಷ್ಟಿ ಮೊದಲಾದ ವ್ರತವುಳ್ಳ **ಅವ್ರಣಂ** ನಿರ್ದೋಷವಾದ **ಪದಂ** ಸ್ವರೂಪವನ್ನು **ದಿದೃಕ್ಷವಃ** ನೋಡುವ ಇಚ್ಛೆಯುಳ್ಳವರಾಗಿ **ವನೇ** ಕಾಡಿನಲ್ಲಿ ಸಜ್ಜನಸಹವಾಸದಲ್ಲಿ **(ತಪಃ) ಚರಂತಿ** ತಪಸ್ಸು ಮಾಡುವರೋ **ಸಃ** ಅಂತಹ **ಸರ್ವಾತ್ಮಭೂತಃ** ಎಲ್ಲರ ಅಂತರ್ನಿಯಾಮಕನಾದ ಶ್ರೀಹರಿಯು **ಸುಹೃದಃ** ಶುದ್ಧಮನಸ್ಕನಾದ ಸ್ನೇಹಿತನಾದ **ಮೇ** ನನಗೆ **ಗತಿಃ** ದಿಕ್ಕಾಗಿರುವನು. ಅಥವಾ **ಅವ್ರಣಂ** ಸಾಂಗವಾದ **ಅಲೋಕವ್ರತಂ** ಸಾಮಾನ್ಯರಿಂದ ಮಾಡಲಾಗದ ಕಠಿಣ ತಪಸ್ಸೆಂಬ ವ್ರತವನ್ನು **ಚರಂತಿ** ಮಾಡುವರೋ ಎಂದಾದರೂ ಅನ್ವಯ.

ಸರ್ವಾತ್ಮಭೂತ ಎಂಬುದರಿಂದ ಮೊಸಳೆಗೆ ಈ ವಿಧಶಕ್ತಿಪ್ರದನು ಭಗವಂತನೇ ಎಂಬ ತನ್ನ ಜ್ಞಾನವನ್ನು ಪ್ರಕಟಪಡಿಸಿರುವನು. ''ಜಗದ್ವ್ಯಾಪಾರವರ್ಜಮ್'' ಎಂಬ ಸೂತ್ರದಿಂದ ಬ್ರಹ್ಮಾದಿಗಳಿಗಾರಿಗೂ ಸ್ರಷ್ಟೃತ್ವವಿಲ್ಲವೆಂಬುದು ಸ್ಪಷ್ಟವಾಗಿದೆ. **ಅವ್ರಣಂ** ವಿಚ್ಛೇದಾದಿದೋಷರಹಿತವಾದ **ಅಲೋಕವ್ರತಂ** ಅಸಂಪ್ರಜ್ಞಾತಸಮಾಧಿರೂಪವಾದ ಧ್ಯಾನವನ್ನು **ಆಚರಂತಿ** ಮಾಡುವರು ಹೀಗೂ ಅನ್ವಯಾರ್ಥ ಮಾಡಿರುವರು. ಮತ್ತು **ಸರ್ವಾತ್ಮಭೂತಾಃ** ಸರ್ವಸ್ವಾಮಿಯಾದ ಭಗವಂತನಲ್ಲಿ ಇರುವ ಅಂದರೆ ಬ್ರಹ್ಮನಿಷ್ಠರಾದ **ಸುಹೃದಃ** ಶುದ್ಧಾಂತಃಕರಣರಾದ ಫಲೇಚ್ಛಾಶೂನ್ಯರಾದ ಸಾಧುಗಳು ಮುನಿಗಳು ಹೀಗೂ ಅನ್ವಯ ಮಾಡಿರುವರು.

ಸತ್ಯ ಃ- **ಯಸ್ಯ** ಯಾವನ **ಸುಮಂಗಲಂ** ಮಹಾಮಂಗಲಪ್ರದವಾದ **ಪದಂ** ಸ್ವರೂಪವನ್ನು **ದಿದೃಕ್ಷವಃ** ನೋಡಲಿಚ್ಛಿಸುವ **ಸುಸಾಧವಃ ಮುನಯಃ** ಅತ್ಯಂತ ಸಾಧುಗಳಾದ ಮುನಿಗಳು **ವಿಮುಕ್ತಸಂಗಾಃ** ಮನೆ-ಮಡದಿಗಳ ಸಂಬಂಧವಿಲ್ಲದೇ **ಸರ್ವಾತ್ಮಭೂತಾಃ** ಸರ್ವಸ್ವಾಮಿಯಲ್ಲಿ ಇದ್ದವರಾಗಿ ಅಥವಾ ತಮ್ಮಲ್ಲಿ ಅವನನ್ನು ಇಟ್ಟುಕೊಂಡವರಾಗಿ **ಸುಹೃದಃ** ಶುದ್ಧಬುದ್ಧಿಗಳಾಗಿ **ಅಲೋಕವ್ರತಂ** ಜನಜನಿತನಿಯಮವಿಲಕ್ಷಣವಾದ ನಿಯಮವನ್ನು **ಅವ್ರಣಂ (ನಿಚ್ಛಿದ್ರಂ)** ದೋಷವಿಲ್ಲದೇ **ಚರಂತಿ** ಮಾಡುವರೋ **ಸಃ ಮೇ ಗತಿಃ** ಅವನೇ ನನಗೆ ಪ್ರಾಪ್ಯಸ್ಥಾನನು.

ದಿದೃಕ್ಷವಃ, ಅಯಸಿ, ಅಪದಂ, ಸುಮಂಗಲಂ, ವಿಂ, ಉಕ್ತಸಂಗಾಃ ಎಂದು ಪದಚ್ಛೇದ ಮಾಡಬೇಕು. **ಉಕ್ತಸಂಗಾಃ** ಶಾಸ್ತ್ರದಲ್ಲಿ ಹೇಳಿದ ಸತ್ಸಂಗದಿಂದ ಕೂಡಿದವರು, **ವಿಂ** ಪರಮಾತ್ಮನನ್ನು **ದಿದೃಕ್ಷವಃ** ನೋಡಲಿಚ್ಛೆಯುಳ್ಳವರು, ಅದು ಸುಲಭವಲ್ಲವೆಂದು ಹೇಳುವರು - **ಅಪದಂ** ದುರ್ಲಭವು. **ಅಯಸಿ ತಪ್ತೇ** ಎಂದು ಶೇಷ. ಕಾಯಿಸಿದ ಕಬ್ಬಿಣದ ಮೇಲೆ ಕ್ವಚಿತ್ ಕೆಲವು ಸಲ ಅಪದಂ ಶ್ವಾಸನಿರೋಧ ಮಾಡಿ ಭೂಮಿಯ ಮೇಲೆ ಪಾದ ಇಡದೇ **ಚರಂತಿ** ಸಂಚರಿಸುವರು ಅಥವಾ **ಅಯಸಿ ಚೂರ್ಣೇ ಸತಿ ಚರಂತಿ** ಕಬ್ಬಿಣದ ಪುಡಿಯನ್ನು ತಿನ್ನುವರು. ಅಥವಾ **ವನೇ** ಅಡವಿಯಲ್ಲಿ **ಸುಮಂ** ''ಸುಮಂ ಸ್ಯಾತ್ ಪುಷ್ಪಫಲಯೋಃ'' ಎಂದಿರುವದರಿಂದ ಹೂವುಗಳನ್ನೋ ಹಣ್ಣುಗಳನ್ನೋ ತಿನ್ನುವರು. ''ಸೂನಂ ಪ್ರಸೂನಂ ಕುಸುಮೇ ಸುಮಂ ಚ ಪರಿಕೀರ್ತಿತಮ್'' ಎಂದು ದ್ವಿರೂಪಕೋಶವಿದೆ. ''ಗಲಂ ಸರ್ಜರಸಮ್'' ಅಂದರೆ ಸಾಲವೃಕ್ಷದ ರಸವನ್ನು (ಹಾಲನ್ನು) **ಚರಂತಿ** ಕುಡಿಯುವರು. ''ಗಲಃ ಸರ್ಜರಸೇ ಕಂಠೇ'' ಎಂದು ವಿಶ್ವವಿದೆ. **ವನೇ** ಅಂದರೆ ನೀರಿನಲ್ಲಿ **ಚರಂತಿ** ತಿನ್ನುವರು, ಸಂಚರಿಸುವರು ಎಂದು ಭಾವ. ಇದು ಅಲೋಕವ್ರತದ ಲೋಕವಿಲಕ್ಷಣವಾದ ವ್ರತದ ವಿವರಣೆ ಎಂದು ತಿಳಿಯಬೇಕು.

**ವನೇ** ಅಡವಿಯಲ್ಲಿ **ವಿಮುಕ್ತಸಂಗಾಃ** ''ಪತಿಸುತಾನ್ವಯಭ್ರಾತೃಬಾಂಧವಾನತಿ-ವಿಲಂಘ್ಯ ತೇ ಹ್ಯಚ್ಯುತಾಗತಾಃ'' ಎಂದು ಹೇಳಿದಂತೆ ಗಂಡಮಕ್ಕಳು-ಸಂಬಂಧಿಗಳನ್ನು ಬಿಟ್ಟವರು ಎಂದು ಅರ್ಥ. ಸುಸಾಃ ಧವಃ ಎಂದು ವಿಭಾಗ ಮಾಡಿಕೊಂಡು ಹೀಗೆ ಅರ್ಥವನ್ನು ತಿಳಿಯಬೇಕು. **ಸುಸಾಃ** ''ಸಾ ಲಕ್ಷ್ಮೀಃ ಸಮುದೀರಿತಾ'' ಎಂದು ಏಕಾಕ್ಷರಕೋಶ. **ಸಾರತ್ವಾತ್** ಸಾ ಲಕ್ಷ್ಮೀ, ಸು ಶೋಭನಾ ಯಾಸಾಂ ತಾಃ ಲಕ್ಷ್ಮಿಯ ಸನ್ನಿಧಾನ ಉಳ್ಳವರು **ಪದಂ** ಪದಗಳನ್ನು **ದಿದೃಕ್ಷವಃ** ನೋಡಲಿಚ್ಛಿಸುವ **ಮುನಯಃ ಇವ** ಮುನಿಗಳಂತೆ ಪರಸ್ಪರವಾರ್ತೆ ತಿಳಿಯದಿರಲು ಮೌನವ್ರತಧಾರಿಗಳಾದವರು **ಅವ್ರಣಂ** ಭೇದಾದಿಗಳಿಲ್ಲದ **ಅಲೋಕವ್ರತಂ** ಏಕಾಂತವ್ರತವನ್ನು **ಚರಂತಿ** ಮಾಡುವರು. **ಸರ್ವಾತ್ಮಭೂತಾಃ** ಎಲ್ಲ ರೀತಿಯಿಂದ ಪಿಶಾಚಪ್ರಾಯರಾದ **ಸುಹೃದಃ ಮೇ** ಪ್ರಿಯನಾದ

ನನಗೆ **ಸಃ** ಕೃಷ್ಣನು **ಗತಿಃ** ಗತಿಯು **ಸಃ** ಕೃಷ್ಣನು **ಧವಃ** ಪತಿಯೆಂದು **ಯಂ** ಯಾವನನ್ನು **ಚರಂತಿ ಅಚರನ್** ತಿಳಿದರೋ ಅವನು ಎಂದರ್ಥ.

**ಅಗತಿಃ** ೧. ಅಗೇನ ಗೋವರ್ಧನಪರ್ವತದಿಂದ ತಿಃ ಆನಂದವು ಯಸ್ಯ ಸಃ ಯಾವನಿಗೋ ಅವನು ೨. ಅಥವಾ ಅಗಸ್ಯ ಮಾಹೇಂದ್ರಪರ್ವತಕ್ಕೆ, ಇಂದ್ರನಿಗೆ ಕ್ಲೃಪ್ತವಾದ ಯಜ್ಞದ ಅನ್ನವನ್ನು ತನ್ನ ಆದೇಶದಿಂದ ತಿನ್ನುವದರಿಂದ ತಿಃ ಆನಂದವು ಯೇನ ಯಾವನಿಂದ ಆಯಿತೋ ಅವನು ಎಂದರ್ಥ.

ಶ್ರೀಕೃಷ್ಣನಿಗೂ ಇನ್ನೊಬ್ಬ ಗತಿ ಇದ್ದರೆ ಅವನೇ ಪ್ರಾರ್ಥನೀಯ. ಮಧ್ಯೇ ಕೃಷ್ಣ ಯಾಕೆ ಬೇಕು? ಎಂದರೆ ಉತ್ತರಿಸುವರು- ಅಗತಿಃ ಎಂದು. ನ ವಿದ್ಯತೇ ಅನ್ಯಾ ಗತಿಃ ಯಸ್ಯ ಸಃ ಬೇರೆ ಗತಿ ಇಲ್ಲದವನೆಂದರ್ಥ.

ಯಸ್ಯ ಪದಂ ಸುಮಂ ಗಲಂ ಎಂಬುದಾಗಿ ವಿಭಾಗಮಾಡಿಕೊಂಡು ಅರ್ಥವನ್ನು ತಿಳಿಯಬೇಕು. **ಯಸ್ಯ** ಯಾವನ **ಪದಂ ಗಲಂ** ವಾ ಉದ್ದಿಶ್ಯ ಪಾದಗಳನ್ನು ಕುತ್ತಿಗೆಯನ್ನು ಉದ್ದೇಶಿಸಿ **ಸುಮಂ** ಹೂವುಗಳನ್ನು **ದಿದೃಕ್ಷವಃ** ನೋಡಲು **ಸುಸಾಧವಃ ಮುನಯಃ ಇವ ವಿಚರಂತಿ ವನೇ** ಸಜ್ಜನರಾದ ಮುನಿಗಳಂತೆ ಅಡವಿಯಲ್ಲಿ ಸಂಚರಿಸುವರು. **ಸಃ** ಅವನು **ಸುಹೃದಃ** ಶುದ್ಧಬುದ್ಧಿಯುಳ್ಳ **ಮೇ** ನನಗೆ **ಗತಿಃ** ಪ್ರಾಪ್ಯನು.

**ಅವ್ರಣಂ** ಭೇದಭೇದಾದಿರಹಿತನಾದ 'ಕ್ವ ವ್ರಣಾದಿಃ ಕ್ವ ಚಾಜ್ಞಾನಂ' ಎಂದು ತತ್ವನಿರ್ಣಯದಲ್ಲಿ ಹೇಳಿದೆ. ಅಥವಾ ಅವ್ರಣಂ ನಿತ್ಯಪೂರ್ಣಗುಣತ್ವತಃ ಎಂದು ಈಶಾವಾಸ್ಯಭಾಷ್ಯದಲ್ಲಿ ಹೇಳಿದ್ದರಿಂದ ಪೂರ್ಣಗುಣನೆಂದೂ ಅರ್ಥ. **ಅಲೋಕವ್ರತಂ** ಲೋಕನಿಯಮಾತೀತನಾದ **ಪದಂ** ತಮ್ಮಿಂದ ಪ್ರಾಪ್ಯವಾದ ಸ್ಥಾನಕ್ಕಾಗಿ **ವನೇ** ಅಡವಿಯಲ್ಲಿ **ವಿಂ** ಹರಿಯನ್ನು **ದಿದೃಕ್ಷವಃ** ನೋಡಲು ಬಯಸಿದ **ಮುನಯಃ** ಮುನಿಗಳು **ಚರಂತಿ** ಸಂಚರಿಸುವರು, ಅವರು ಐದಾರು ಜನ ಮಾತ್ರವಲ್ಲ **ಸಮೇ** ಎಲ್ಲರೂ ಎಂದರ್ಥ. **ನಹಿ ಪ್ರೇಕ್ಷಾವತಾಂ ಬಹೂನಾಂ ಪ್ರವೃತ್ತಿರೇಕವಿಧಾಽಮಾನಿಕೀ ಭವತೀತಿ ಭಾವಃ** ಇದರಿಂದ ಬಹುಜನ ಪ್ರೇಕ್ಷಾವಂತರ ಏಕವಿಧವಾದ ಪ್ರವೃತ್ತಿಯು ಅಪ್ರಾಮಾಣಿಕವಾಗಿರಲಾರದು ಎಂದು ಭಾವ. ॥೭॥

ಸತ್ಯ ಃ- ಈ ಭಗವಂತನು ದೇವದತ್ತಾದಿಗಳಂತೆ ಸರ್ವಸಮ್ಮತವಾದ ಜನ್ಮಾದಿಗಳುಳ್ಳವನಲ್ಲ. ಆದ್ದರಿಂದ ಮೊದಲಿಗೆ ಹೇಳಿದ ದುರ್ಜ್ಞೇಯತ್ವವು ಉಚಿತವೆಂದು ತಿಳಿಯಬೇಕು ಎಂದು ಹೇಳುವರು-

ಲಿಂಗೇರೀ ಃ- ನಾರಾಯಣನಿಗೆ ಸೃಷ್ಟ್ಯಾದಿಗಳಿಂದ ಪ್ರಯೋಜನವಿದೆ ಎಂದರೆ ಸೃಷ್ಟಿಯ ಮೊದಲು ಆ ಪ್ರಯೋಜನವಿರಲಿಲ್ಲವಾದುದರಿಂದ ಅಪೂರ್ಣತೆ ಬರುವುದು.

ಪ್ರಯೋಜನವಿಲ್ಲವಾದರೆ ಅಂತಹ ಸೃಷ್ಟ್ಯಾದಿಗಳಲ್ಲಿ ಪ್ರವೃತ್ತನಾದರೆ ''ಪ್ರಯೋಜನಮನುದ್ದಿಶ್ಯ ನ ಮಂದೋऽಪಿ ಪ್ರವರ್ತತೇ'' ಎಂಬ ನ್ಯಾಯದಿಂದ ಅತ್ಯಂತ ಮಂದನೆಂದಾಗುವನು. ಮತ್ತು ನಾರಾಯಣನಿಗೆ ಜನ್ಮಕರ್ಮಾದಿಗಳು ಇವೆ ಎಂದರೆ ದೇವದತ್ತನಂತೆ ಜಗತ್ಸ್ರಷ್ಟೃತ್ವ ಕೂಡಲಾರದು. ಅಲ್ಲದೇ ಇವನು ಬೇರೆಯವರಿಂದ ಪ್ರೇರ್ಯನೆಂದಾದರೆ ಆ ಪ್ರೇರಕನೇ ಉತ್ತಮನಾದುದರಿಂದ ಅವನ ಪ್ರಾರ್ಥನೆಯೇ ಉಚಿತ, ಹೊರತು ಈ ನಾರಾಯಣನ ಪ್ರಾರ್ಥನೆ ಉಚಿತವಲ್ಲ ಎಂದು ಶಂಕಿಸುವುದು ಸರಿಯಲ್ಲ. ಕಾರಣ ಭಗವಂತನಾದ ನಾರಾಯಣನಿಗೆ ಸರ್ವಾಭೀಷ್ಟಪ್ರಾಪ್ತಿಯು ಸರ್ವದಾ ಇರುವರಿಂದ (ಹೊಂದಬೇಕಾದುದನ್ನೆಲ್ಲ ಹೊಂದಿದವನಾದುದರಿಂದ) ಜಗತ್ಸೃಷ್ಟ್ಯಾದಿಗಳಿಂದ ಬರಬೇಕಾದ ಪ್ರಯೋಜನವಿಲ್ಲದಿದ್ದರೂ ಮೂರುಲೋಕದಲ್ಲಿರುವ ತನ್ನ ಭಕ್ತರಿಗೆ ಮೋಕ್ಷಾದಿಶುಭಫಲಪ್ರಾಪ್ತಿಗಾಗಿ ಅನ್ಯರಿಂದ ಪ್ರೇರಿತನಾಗದೇ ದುಷ್ಕರ್ಮಾದಿಗಳಿಂದ ಬರದಿರುವ ಪ್ರಾದುರ್ಭಾವರೂಪ ಜನ್ಮಾದಿಗಳಿರುವದರಿಂದ ಯಾವ ಅನುಪಪತ್ತಿ ಇಲ್ಲವೆಂದು ಪರಿಹರಿಸುವರು-

**ನ ವಿದ್ಯತೇ ಯಸ್ಯ ಚ ಜನ್ಮ ಕರ್ಮ ವಾ**
**ನ ನಾಮರೂಪೇ ಗುಣದೋಷ ಏವ ವಾ ।**
**ತಥಾऽಪಿ ಲೋಕಾಶ್ರಯ(ಲೋಕತ್ರಯ)ಸಂಭವಾಯ ಯಃ**
**ಸ್ವಮಾಯಯಾ ತಾನ್ಯನುಕಾಲಮೃಚ್ಛತಿ** ॥೮॥

**ಯಸ್ಯ** ಯಾವ ಪರಮಾತ್ಮನಿಗೆ **ಜನ್ಮ** ದುಷ್ಕರ್ಮಗಳಿಂದ ಅನ್ಯರ ಪ್ರೇರಣೆಯಿಂದ ಲಭ್ಯವಾಗುವ **ಜನ್ಮ ನ ವಿದ್ಯತೇ** ಜನ್ಮವು ಇಲ್ಲವೋ **ಕರ್ಮ** ಸ್ವಾಪೇಕ್ಷಿತವಾದ ಫಲಕ್ಕಾಗಿ ಕರ್ತವ್ಯವಾದ ಕರ್ಮವು ನ ಇಲ್ಲವೋ **ವಾ** ಮತ್ತು **ನಾಮರೂಪೇ** ನಿರರ್ಥಕವಾದ ಸಾಂಕೇತಿಕವಾದ ನಾಮಗಳು ಪ್ರಾಕೃತವಾದ ರೂಪಗಳು **ನ** ಇಲ್ಲವೋ **ಗುಣದೋಷ ಏವ ವಾ** ಸತ್ತ್ವಾದಿಗುಣಗಳಾಗಲೀ ಸಾದಿತ್ವ-ವಿನಾಶಿತ್ವ ಮುಂತಾದ ದೋಷಗಳಾಗಲೀ **ನ** ಇಲ್ಲವೋ **ತಥಾऽಪಿ** ಹಾಗಿದ್ದರೂ ಕೂಡಾ **ಯಃ** ಯಾವ ಪರಮಾತ್ಮನು **ಲೋಕತ್ರಯಸಂಭವಾಯ** ಮೂರು ಲೋಕದಲ್ಲಿಯ ಜನರಿಗೆ ಮಂಗಳವನ್ನುಂಟುಮಾಡಲು **ಸ್ವಮಾಯಯಾ** ತನ್ನ ಇಚ್ಛೆಯಿಂದ **ತಾನಿ** ಆ ಜನ್ಮಾದಿಗಳನ್ನು **ಅನುಕಾಲಂ** ಕಾಲಕ್ಕೆ ಅನುಗುಣವಾಗಿ **ಋಚ್ಛತಿ** ಪಡೆಯುತ್ತಾನೋ **ತಸ್ಮೈ ನಮಃ** ಅಂಥ ಪರಮಾತ್ಮನಿಗೆ ನಮಸ್ಕಾರ ಎಂದು ಮುಂದಿನ ಶ್ಲೋಕಕ್ಕೆ ಅನ್ವಯ.

ಸತ್ಯ :- **ಯಸ್ಯ** ಯಾವನಿಗೆ **ಜನ್ಮ** ಶುಕ್ಲಶೋಣಿತಸಂಪರ್ಕದಿಂದ ಉಂಟಾಗುವ ದೇಹಸಂಬಂಧರೂಪ ಉತ್ಪತ್ತಿಯು **ನ ವಿದ್ಯತೇ** ಇರುವದಿಲ್ಲ. ''ನ ಶುಕ್ಲಪ್ರಭವೋऽಸ್ಯ ದೇಹಃ'' ''ನ ಜಾಯತೇ'' ಇತ್ಯಾದಿಪ್ರಮಾಣಗಳಿಂದ ಇದು ಸಿದ್ಧವಾಗಿದೆ. ನ ವಿದ್ಯತೇ

ಎಂಬುದು ಅಲ್ಲಲ್ಲಿಗೆ ಬೇಕಾದಂತೆ ವಿಪರಿಣತವಾಗಿ ಅವಿಪರಿಣತವಾಗಿ ಅನ್ವಯಿಸುವದು. **ಕರ್ಮ** ದುಷ್ಟವಾದ ಕ್ಲೇಶದಾಯಕವಾದ ತನ್ನ ಫಲಕ್ಕಾಗಿ ಮಾಡಬೇಕಾದ ಕಾರ್ಯವು **ನ ವಿದ್ಯತೇ** ಇರುವದಿಲ್ಲ. **ನಾಮರೂಪೇ ನ ವಿದ್ಯತೇ** ಅಪ್ರಸಿದ್ಧನಾದುದರಿಂದ ನಾಮವಿಲ್ಲದವನು, ಭೌತಿಕರೂಪವಿಲ್ಲದವನು ಎಂದರ್ಥ. (ನಾಮರೂಪಗಳು ಇರುವದಿಲ್ಲ.) ''ಅನಾಮಾ ಸೋಽಪ್ರಸಿದ್ಧತ್ವಾತ್ ಅರೂಪೋ ಭೂತವರ್ಜನಾತ್'' ಎಂದಿದೆ. **ಗುಣದೋಷಃ ನ ವಿದ್ಯತೇ** ಗುಣದಿಂದ ಕೂಡಿದ ದೋಷವಿಲ್ಲ ಅಥವಾ ಸತ್ವಾದಿಗುಣಕೃತದೋಷವಾಗಲೀ ಇಲ್ಲ. 'ನಿರನಿಷ್ಟೋ ನಿರವದ್ಯಃ' ಎಂದು ಪ್ರಮಾಣವಿದೆ. 'ಗುಣಃ ನ' ಎಂದು ಪ್ರತ್ಯೇಕ ಹೇಳಿದ್ದರೆ ಮಂದಬುದ್ಧಿಗಳಿಗೆ ನಿರ್ಗುಣನೆಂಬ ಭ್ರಮ ಬರುವದು. ಸಮಾಸಮಾಡಿ ಏಕವಚನದಿಂದ ಹೇಳಿದಾಗ ದೋಷಸಮಾನಾಧಿಕರಣವಾದ ಒಂದೂ ಗುಣವು ಇಲ್ಲ ಎಂದು ಗುಣನಿಷೇಧವನ್ನು ತಿಳಿಯಪಡಿಸಿರುವರು.

ಹಾಗಾದರೆ ನಿಂದಿತನಾದ ನಿನಗೆ ಅವನ ದರ್ಶನವಾಗುವದು ಹೇಗೆ ಹೇಳು ? ಎಂದರೆ ಹೇಳುವನು- **ತಥಾ ಅಪಿ** ಆದರೂ **ಸ್ವಮಾಯಯಾ** ತನ್ನ ಇಚ್ಛೆಯಿಂದ **ಲೋಕಾಶ್ರಯ-ಸಂಭವಾಯ** ಮೂರುಲೋಕಗಳ ಶುಭಪ್ರಾಪ್ತಿಗಾಗಿ **ತಾನಿ** ಜನ್ಮ- ಕರ್ಮ-ನಾಮ-ರೂಪ ಈ ನಾಲ್ಕನ್ನು **ಅನುಕಾಲಂ** ಕಾಲಾನುಸಾರ **ಋಚ್ಛತಿ** ಹೊಂದುವನು. **ಸಃ** ಅವನು **ಮೇ ಗತಿಃ** ಎಂದು ಹಿಂದೆ ಅನ್ವಯ. ಅಥವಾ **ತಸ್ಮೈ ನಮಃ** ಎಂದು ಮುಂದೆ ಆದರೂ ಅನ್ವಯ.

ವಿದ್ಯತೇ ಎಂಬುದು ಕ್ರಿಯಾಪದವಲ್ಲ. ಶ್ರೀಕೃಷ್ಣನಿಗೆ ಸಂಬೋಧನವಾಗಿದೆ. **ವಿದ್ಯತೇ** ವಿತ್ ವಿಜ್ಞಾನಿಯೆಂದು ತಿಳಿಯಲ್ಪಟ್ಟ ಯತಿಃ ಅರ್ಜುನಾತ್ಮಾ ಯಸ್ಯ ಸಃ ತಸ್ಯ ಸಂಬುದ್ಧಿಃ ವಿದ್ಯತೇ ಅರ್ಜುನನೆಂಬ ಯತಿಯುಳ್ಳವನೇ ! ಅಥವಾ ನವಿದ್ಯತೇ ಎಂಬುದೇ ಸಂಬೋಧನ ಎಂದು ತಿಳಿಯಬೇಕು. ''ತತತ್ವಾದನ್ಯಥಾಜ್ಞಾನಂ ತೀತ್ಯೇವ ಸಮುದೀರ್ಯತೇ'' ಎಂದು ತಾತ್ಪರ್ಯಾಂತರದಲ್ಲಿ ಹೇಳಿರುವದರಿಂದ ನವಿದ್ಯತೇ ನವಿದ್ಯವತ್ ಅಜ್ಞನಂತೆ ತಿಃ ಅನ್ಯಥಾಜ್ಞಾನವು ಯಸ್ಯ ಯಾವನಿಗೋ ತಸ್ಯ ಸಂಬುದ್ಧಿಃ ಅಂದರೆ ಅಜ್ಞಾನಿಯಂತೆ ಅನ್ಯಥಾಜ್ಞಾನವುಳ್ಳವನೇ ! **ಹೇ ಲೋಕಾಶ್ರಯ** ''ಸಹಸ್ರಶೀರ್ಷ್ಣೋಽಸ್ಯ ಬತ್ವೈಕಮೂರ್ಧ್ನಿ ಧರಾಽಖಿಲೇಯಂ ನನು ಸರ್ಷಪಾಯತಿ'' ಎಂದು ಹೇಳಿದೆ. ಸಾವಿರತಲೆಯ ಶೇಷನ ಒಂದು ತಲೆಯಲ್ಲಿ ಈ ಬ್ರಹ್ಮಾಂಡ ಸಾಸಿವೆಯಂತೆ ಕಾಣುವದು ಎಂದು ಹೇಳಿದ ಪ್ರಕಾರ ಲೋಕಾಧಾರಕನೇ ! **ಅಗುಣ** ಅಣ್ಣನಾದುದರಿಂದ ಅಪ್ರಧಾನನಲ್ಲದವನೇ ಬಲರಾಮನೇ **ಯಸ್ಯ ಚ** ಯಾವನಿಗೆ **ನ ಜನ್ಮ** ಈ ಕುಲದಲ್ಲಿ ಹುಟ್ಟಿರುವನೆಂಬ ಜ್ಞಾನವಿಲ್ಲವೋ **ಕರ್ಮ ಚ** ಕರ್ಮವೂ ತಿಳಿದಿಲ್ಲವೋ **ಭಗವಾನ್** ಶ್ರೀಹರಿಯು (ಶ್ರೀಕೃಷ್ಣನು) **ಯಂ ನನಾಮ** ನಮಸ್ಕರಿಸಿದನೋ ಯಸ್ಯ ರೂಪೇ ಯಾವ ಆಕಾರದಲ್ಲಿ ''ರೂಪಮಾಕಾರಶ್ಲೋಕಯೋರಪಿ'' ಎಂದು ವಿಶ್ವ. ದೋಷ ಏವ ವಿದ್ಯತೇ ದೋಷವೇ ಇದೆ.

ನಿನಗೆ ಮನಃಪೂರ್ವಕ ನಮಸ್ಕಾರವು ಎಂದು ಹೇಳುವರು ಸು ಅಮಾಯಯಾ **ಅತ್ಯಂತ** ಕಾಪಟ್ಯವಿಲ್ಲದೇ **ಯಃ** ಯಾವ ನಾನು **ಸಂಭವಾಯ** ಅಣ್ಣನನ್ನು ಅನುಸರಿಸಿದುದರಿಂದ ಬರುವ ಮಂಗಲಕ್ಕಾಗಿ **ಭವಂತಂ ಅನು ಅತಾನಿ** ನಿನ್ನನ್ನು ಅನುಸರಿಸಿ ನಡೆಯುವೆನು. (ಅನುಕಾಲಂ ಎಂದು ಕಾಲಪದದ ಜೊತೆಗೆ ಇರುವ ಅನು ಎಂಬ ಪದವನ್ನು ಇಲ್ಲಿ ತೆಗೆದುಕೊಳ್ಳಲಾಗಿದೆ.) ಅನುಕಾಲಂ ಕಾಲಾನುಸಾರ ಋಚ್ಛತಿ ಜನೇ ಎಂದು ಶೇಷ. ಜನರು ಹೋಗುವರು ನೀನೇನು ಮಾಡುವಿ ? ಕಾಲವು ಬಲಿಷ್ಠವಾಗಿದೆ.

**ಹೇ ಆಯ** ಒಳ್ಳೆಯ ಜ್ಞಾನವುಳ್ಳವನೇ ಸುದೈವವೇ **ಸ್ವಂ** ನಿನ್ನನ್ನು ಅಥವಾ ನನ್ನನ್ನು **ಅನುಯಾತಾ** ಅನುಸರಿಸಿದ ಅನುಜಾ ಇತಿ ಯಾವತ್, ತಂಗಿಯಾದ ಸುಭದ್ರೆಯು **ನ್ಯನುಕಾ** ನಿಶ್ಚಯೇನ ಅನುಕಃ ಯಸ್ಯಾಃ ಸಾ ನ್ಯನುಕಾ ''ಕಾಮಿಕೇ ಕಮಿತಾನುಕೇ'' ಎಂದು ಅಮರವಿದೆ. ಅನುಕಾಮಿಕಾ ಎಂದು ಸಾಧುವಾದುದು. ನಿಶ್ಚಿತವಾಗಿ ಅರ್ಜುನನನ್ನು ಅಪೇಕ್ಷಿಸುವವಳು **ಅಲಂ ಋಚ್ಛತಿ** ಅರ್ಜುನನನ್ನು ಕುರಿತು ಹೋಗೇ ಹೋಗುವಳು.

**ಹೇ ಅಗುಣದ** ಕುಲಕ್ಕೆ ಅಪಕೀರ್ತಿ ಮುಂತಾದ ದೋಷ ಕೊಡುವವನೇ ! **ಉಷೇ ಏವ ವಾ** ಪ್ರಾತಃಕಾಲದಲ್ಲೇ **ಋಚ್ಛತಿ** ಎದ್ದು ಹೋಗುವಳು. **ಅಹಂ** ನಾನು **ಸ್ವಮಾಯಯಾ** ಕಾಪಟ್ಯದಿಂದ **ಭವಂತಂ ಅತಾನಿ** ನಿನ್ನನ್ನು ಅನುಸರಿಸುವೆನು. **ಸ ತು** ಅರ್ಜುನನಾದರೂ **ಅನುಕಾಲಂ** ಸಮಯವನ್ನು ಅತಿಕ್ರಮಿಸದೇ **ಋಚ್ಛತಿ** ಸುಭದ್ರೆಯನ್ನು ಕರೆದುಕೊಂಡು ಹೋಗುವನು ಎಂದು **ಯಃ** ಯಾವನು **ಅವದತ್** ಹೇಳಿದನೋ **ಸಃ** ಆ ಶ್ರೀಕೃಷ್ಣನು **ಮಮ ಗತಿಃ** ನನಗೆ ಗತಿಯು, **ತಸ್ಮೈ ನಮಃ** ಎಂದಾದರೂ ಅನ್ವಯ.

**ಯಶ್ಚ** ಯಾವನು **ಅನುಕಾಲಂ** ಕಾಲಯವನನನ್ನು ನಿಂದಿಸಿ **ಋಚ್ಛತಿ** ಅಗಚ್ಛತ್ ಹೋದನೋ **ಸಃ** ಅವನು ಎಂದೂ ಅರ್ಥ. **ಯಃ** ಭಗವಂತನು **ಮಾಯಯಾ** ಅರ್ಜುನನ ಮಾತಿನಿಂದ **ತಥಾ** ನಿಶ್ಚಯದಿಂದ **ಆಪಿ** ಪ್ರಾಪಿತಃ ಹೊಂದಲ್ಪಟ್ಟನು.

**ಕ್ಲಿಷ್ಟತೋಽಕ್ಲಿಷ್ಟತಾ ಕಾರ್ಷ್ಣೀ ಭೋ ಜನಾ ಯೋಜನಾ ಪುರಃ ।**
**ಕರ್ತುಂ ಶಕ್ಯಾಪ್ಯಾದರಾದ್ವಿಸ್ತರಾದುಪರಮ್ಯತೇ ॥**

ಭೋ ಜನಾಃ ಎಲೋ ಜನರೇ ! ಕಾರ್ಷ್ಣೀ ಯೋಜನಾ ಕೃಷ್ಣನ ಪರ ಯೋಜನೆಯು ಕ್ಲಿಷ್ಟತಃ ಕಷ್ಟಪಟ್ಟು ಅಕ್ಲಿಷ್ಟತಾ ಸುಲಭವಾಗಿ ಪುರಃ ಮುಂದೆ ಕರ್ತುಂ ಶಕ್ಯಾ ಅಪಿ ಸಾಧ್ಯವಾದರೂ ವಿಸ್ತರಾತ್ ಆದರಾತ್ ವಿಸ್ತಾರದ ಸ್ವಲ್ಪ ಭಯದಿಂದ ಉಪರಮ್ಯತೇ ವಿಶ್ರಮಿಸಲ್ಪಡುವದು ಎನ್ನುತ್ತಾರೆ ಶ್ರೀಸತ್ಯಧರ್ಮರು.

**ಯಸ್ಯ ಜನ್ಮ ಕರ್ಮ ವಾ ನ ನಾಸ್ತಿ ತಥಾಪಿ ಯಃ ತಾನಿ ಋಚ್ಛತಿ ತದ್ವಿಷಯೇ** ಯಾವನಿಗೆ ಜನ್ಮಕರ್ಮಗಳಿಲ್ಲವೋ ಆದರೂ ಅವುಗಳನ್ನು ಹೊಂದುವನೋ ಅವನ ವಿಷಯದಲ್ಲಿ ನ

**ವಿತ್** ಅಜ್ಞನಾದರೂ ನಾನು **ಯತೇ** ಪ್ರಯತ್ನ ಮಾಡುವೆನು ಎಂದಾದರೂ ಅರ್ಥ. ''ಪ್ರಯತ್ನಮೇಕಮಗ್ರತೋ ವಿಧಾಯ ಭೂತಿಮಾಪ್ನುಮಃ'' ಎಂದು ಇದೆ ಅಷ್ಟೇ !

ಈ ಶ್ಲೋಕದಲ್ಲಿ ಸುಭದ್ರಾಪಹರಣ ಕಥೆಯನ್ನು ಹೀಗೆ ಸಂಗ್ರಹಿಸಿರುವರು. ಶ್ರೀಕೃಷ್ಣನು ಅರ್ಜುನಸನ್ಯಾಸಿಯನ್ನು ಜ್ಞಾನಿ ಎಂದು ತಿಳಿದನು. ಭೂಮಂಡಲವನ್ನು ತಲೆಯ ಮೇಲೆ ಹೊತ್ತ ಶೇಷಾಂಶನಾದ ಅಣ್ಣನೇ ಅಜ್ಞಾನಿಯಂತೆ ತಪ್ಪು ತಿಳಿದ. ಯಾವನ ಆಕಾರದಲ್ಲಿ ದೋಷಗಳೇ ಇವೆಯೋ ಅಂಥವನಿಗೆ ಶ್ರೀಕೃಷ್ಣನು ನಮಸ್ಕರಿಸಿದನೋ ಅಣ್ಣನ ಅನುಸರಣದಿಂದ ಬರುವ ಮಂಗಲಕ್ಕಾಗಿ ನಿನ್ನನ್ನು ಅನುಸರಿಸುವೆನು. ಜನರು ಕಾಲಾನುಸಾರ ನಡೆಯುವರು. ನೀನಾದರೂ ಏನು ಮಾಡುವಿ. ಕಾಲವೇ ಬಲವಾದುದು. ಎಲೋ ಜ್ಞಾನಿಯಾದ ಅಣ್ಣನೇ ನಮ್ಮ ತಂಗಿಯಾದ ಸುಭದ್ರೆಯು ಅರ್ಜುನನನ್ನು ಇಚ್ಛಿಸುವಳು. ನಿಜವಾಗಿ ಅವನನ್ನು ಪಡೆಯುವಳು. ಸನ್ಯಾಸಿಯ ಸೇವೆಗೆ ಬಿಡಬೇಡ, ಅಪಕೀರ್ತಿ ಬಂದೀತು. ನಿನಗೆ ತಿಳಿಯದೇ ಪ್ರಾತಃಕಾಲದಲ್ಲಿಯೇ ಎದ್ದು ಹೊರಡುವರು ಎಂದೆಲ್ಲ ಹೇಳಿ, ಆದರೂ ನಿನ್ನನ್ನು ಅನುಸರಿಸುವೆನು. ಮನಸಿಲ್ಲದೆ ಹೀಗೆ ಹೇಳಿದ ಕೃಷ್ಣನಿಗೆ ನಮಸ್ಕಾರವೆಂದು ಭಾವ.

ಭಗವಂತನಿಗೆ ಜನ್ಮಾದಿಗಳು ಇಲ್ಲವೇ ಇಲ್ಲ ಎಂದು ಏಕೆ ಹೇಳಬಾರದು. ಪ್ರಾಕೃತರೂಪವಿಲ್ಲ, ಸತ್ವಾದಿಗುಣವಿಲ್ಲ, ಆನಂದಾದಿಗುಣವುಂಟು, ಅಪ್ರಾಕೃತರೂಪ ಉಂಟು ಎಂಬ ವ್ಯವಸ್ಥೆ ಏಕೆ ? ಎಂದರೆ, ಜನ್ಮಾದಿಗಳುಂಟು ಎಂದು ಹೇಳುವ ಪ್ರಮಾಣವಿರೋಧ ಹಾಗೂ ಉರುರೂಪಾಯ ಆಶ್ಚರ್ಯಕರ್ಮಣೇ ಎಂಬ ಮುಂದಿನ ಗ್ರಂಥವಿರೋಧ ಬರುವದು. ಕಾರಣ ಈ ವ್ಯವಸ್ಥೆ ಅಂಗೀಕರಿಸಬೇಕು. 'ಯತ್ರ ಗುಣಾಃ ತತ್ರ ದೋಷಾಃ' ಎಂದಿರುವದರಿಂದ ದೋಷವೂ ಇವೆಯೇ ? ಎಂದರೆ 'ದೋಷ ಏವ ನ ವಿದ್ಯತೇ' ಅಂದರೆ ಯಾವ ಒಂದು ದೋಷವೂ ಇಲ್ಲ. ವಾಶಬ್ದದಿಂದ ಅಸತಃ ಸತ್ತಾಸಂಬಂಧರೂಪ ಜನ್ಮವಿಲ್ಲ, ಪ್ರಾದುರ್ಭಾವ ಉಂಟು. ಕರ್ಮ ತನ್ನ ಪ್ರಯೋಜನಕ್ಕಾಗಿ ಇಲ್ಲ, ಭಕ್ತಾನುಗ್ರಹಕ್ಕಾಗಿ ಉಂಟು. ನಾಮ ನಿರರ್ಥಕಸಾಂಕೇತಿಕವಾದುದು ಇಲ್ಲ, ಸಾರ್ಥಕವಿದೆ. ರೂಪ ಭೌತಿಕವಿಲ್ಲ, ಪ್ರಾಕೃತವಿಲ್ಲ, ಅಪ್ರಾಕೃತವಿದೆ. ಗುಣ ಸತ್ವಾದಿಗಳಿಲ್ಲ, ಆನಂದಾದಿಗಳಿವೆ ಎಂದು ವ್ಯವಸ್ಥೆ ಹೇಳುವೆವು. ''ಅಜೋಽಪಿ ಸನ್ನವ್ಯಯಾತ್ಮಾ'' ''ಸಂಭವಾಮ್ಯಾತ್ಮಮಾಯಯಾ' ''ಅರೂಪೋ ಭೂತವರ್ಜನಾತ್'' ''ತ್ರಿಗುಣ-ವರ್ಜಿತಮ್'' ಮುಂತಾದ ಪ್ರಮಾಣಗಳಿವೆ. ॥೮॥

ಶ್ರೀಹರಿಯನ್ನು ಸ್ತುತಿಸಲು ಅಶಕ್ತರಾದವರಿಗೆ 'ಭೂಯಿಷ್ಠಾಂ ತೇ ನಮ ಉಕ್ತಿಂ ವಿಧೇಮ' ಎಂದು ಹೇಳಿದೆ. ನತಿಯೇ ಗತಿ ಎಂಬ ಭಾವನೆಯಿಂದ ಆದರದಿಂದ ಮತ್ತೆ ನಮಸ್ಕರಿಸುವನು-

**ತಸ್ಮೈ ನಮಃ ಪರೇಶಾಯ ಬ್ರಹ್ಮಣೇಽನಂತಶಕ್ತಯೇ ।**
**ಅರೂಪಾಯೋರುರೂಪಾಯ ನಮ ಆಶ್ಚರ್ಯಕರ್ಮಣೇ ॥೯॥**

**ಪರೇಶಾಯ** ಬ್ರಹ್ಮಾದಿಮುಕ್ತರಿಗೆ ಸ್ವಾಮಿಯಾದ **ಅನಂತಶಕ್ತಯೇ** ಎಲ್ಲ ದೇಶಕಾಲಗಳಲ್ಲಿ ಒಂದೇ ಬಗೆಯಾದ ಸಾಮರ್ಥ್ಯ ಉಳ್ಳ **ಬ್ರಹ್ಮಣೇ** ನಾರಾಯಣನಾದ **ತಸ್ಮೈ** ಅವನಿಗೆ **ನಮಃ ಅಸ್ತು** ನಮಸ್ಕಾರವಿರಲಿ. **ಅರೂಪಾಯ** ಪ್ರಾಕೃತರೂಪವಿಲ್ಲದ ಆದರೆ **ಉರುರೂಪಾಯ** ಅಪ್ರಾಕೃತ ಅನಂತರೂಪಗಳುಳ್ಳ **ಆಶ್ಚರ್ಯಕರ್ಮಣೇ** ಯಾರಿಂದಲೂ ಮಾಡಲಾಗದ ಸೃಷ್ಟ್ಯಾದಿಕ್ರಿಯೆಗಳನ್ನು ಮಾಡುವ ಶ್ರೀಹರಿಗೆ **ನಮಃ** ನಮಸ್ಕಾರ.

ಸತ್ಯ ಃ- **ಪರೇಶಾಯ** ಯಾಃ ಈಶಃ ಈಶಃ ಪರಾಯಾಃ ಈಶಃ (ಪರಪದಾರ್ಥಕ್ಕೆ ತಾದಾತ್ಮ್ಯಸಂಬಂಧದಿಂದ ಈಶಪದಾರ್ಥದಲ್ಲಿ ಯೋಗ್ಯತಯಾ ಅನ್ವಯ) ಲಕ್ಷ್ಮೀದೇವಿಗೆ ಮುಖ್ಯಸ್ವಾಮಿಯಾದ ಎಂದರ್ಥ. ಅಥವಾ ಪರಾ ಚ ಸಾ ಈ ಚ ಪರೇ ತಸ್ಯಾಃ ಶಂ ಯಸ್ಮಾತ್ ಸಃ ತಸ್ಮೈ ಬ್ರಹ್ಮಾದ್ಯುತ್ತಮಳಾದ ಲಕ್ಷ್ಮೀದೇವಿಗೆ ಸುಖ ಕೊಡುವ ಎಂದರ್ಥ. ಏಕಾರಾಂತಸ್ತ್ರೀಲಿಂಗ ಪರೇಶಬ್ದ.

**ಅನಂತಶಕ್ತಯೇ** ಬಹುವಾದ ಅಪ್ರತಿಬದ್ಧವಾದ ಶಕ್ತಿಯುಳ್ಳ 'ಸರ್ವೋಪೇತಾ ಚ ತದ್ದರ್ಶನಾತ್' 'ಪರಾಸ್ಯ ಶಕ್ತಿರ್ವಿವಿಧೈವ ಶ್ರೂಯತೇ' ಮುಂತಾಗಿ ಸೂತ್ರ-ಶ್ರುತಿಗಳಿವೆ. ಅಥವಾ ಅನಂತಸ್ಯ ಶೇಷನಿಗೆ ಅಥವಾ ಗರುಡನಿಗೆ ಶಕ್ತಿಃ ಯೇನ ತಸ್ಮೈ ಶೇಷ-ಗರುಡರಿಗೆ ಶಕ್ತಿಪ್ರದನಾದವನಿಗೆ ಎಂದರ್ಥ. 'ಯೋಽನಂತನಾಮಾ ಗರುಡಸ್ತದಂಸಕೇ' ಎಂದು ಆಚಾರ್ಯರು ಹೇಳಿರುವದರಿಂದ ಅನಂತ ಎಂದರೆ ಗರುಡನೂ ಆಗುವನು. ಸರೂಪತ್ವ-ಅರೂಪತ್ವಗಳು ಬೇರೆಡೆ ಅಸಂಭಾವಿತ. ಇಲ್ಲಿ ಹೇಗೆ ? ಎಂದರೆ ಸಂಭಾವಕಲಕ್ಷಣ ಹೇಳುವರು- **ಆಶ್ಚರ್ಯಕರ್ಮಣೇ** ಎಂದು. ಅದ್ಭುತವಾದ ಕರ್ಮವುಳ್ಳವನು ಎಂದರ್ಥ.

**ನಮ ಆತ್ಮಪ್ರದೀಪಾಯ ಸಾಕ್ಷಿಣೇ ಪರಮಾತ್ಮನೇ ।**
**ನಮೋ ಗಿರಾಂ ವಿದೂರಾಯ ಮನಸಶ್ಚೇತಸಾಮಪಿ ॥೧೦॥**

**ಆತ್ಮಪ್ರದೀಪಾಯ** ಸ್ವಪ್ರಕಾಶನಾದ ಅಥವಾ ಜೀವಸ್ವರೂಪಪ್ರಕಾಶಕನಾದ ಅಥವಾ ಮೋಕ್ಷಯೋಗ್ಯಚೇತನರಿಗೆ ಮಾತ್ರ ತನ್ನ ಆರಾಧನೆಯಿಂದ ಪ್ರಕಾಶಮಾನನಾದ **ಸಾಕ್ಷಿಣೇ** ಪ್ರತ್ಯಕ್ಷವಾಗಿ ಎಲ್ಲ ಜಗತ್ತನ್ನು ನೋಡುವ **ಪರಮಾತ್ಮನೇ** ಚೇತನೋತ್ತಮನಾದ **ಗಿರಾಂ** ವಚನಗಳಿಗೆ (ವೇದಗಳಿಗೆ) **ವಿದೂರಾಯ** ಸಾಕಲ್ಯೇನ ಅವಿಷಯನಾದ (ವೇದಗಳೂ ಯಾವನನ್ನು ಸಂಪೂರ್ಣವಾಗಿ ತಿಳಿಸಲು ಸಾಧ್ಯವಿಲ್ಲವೋ ಅಂತಹ) **ಮನಸಶ್ಚ ವಿದೂರಾಯ** ಮನಸ್ಸಿಗೂ ತಿಳಿಯದ **ಚೇತಸಾಂ ಅಪಿ ವಿದೂರಾಯ** ಮನೋವೃತ್ತಿಜ್ಞಾನ-ಗಳಿಗೂ ದೂರನಾದ ಶ್ರೀಹರಿಗೆ **ನಮಃ** ನಮಸ್ಕಾರವು.

ಸತ್ಯ ಃ- ಗಿರಾಂ ಚೇತಸಾಂ ಎಂಬಲ್ಲಿಯಂತೆ ಮನಸಾಂ ಎಂದು ಬಹುವಚನ ಹೇಳಬೇಕಾದಲ್ಲಿ ಮನಸಃ ಎಂದು ಏಕವಚನ ಹೇಳಿದ್ದರಿಂದ ''ಯತೋ ವಾಚೋ ನಿವರ್ತಂತೇ ಅಪ್ರಾಪ್ಯ ಮನಸಾ ಸಹ'' ಎಂಬ ಶ್ರುತಿಯನ್ನು ಅನುಕರಿಸಿರುವರು ಎಂದು ತಿಳಿಯಬೇಕು. ವೃತ್ತಿಗಳಲ್ಲಿ ಭೇದವಿರುವದರಿಂದ ಚೇತಸಾಂ ಎಂದು ಬಹುವಚನವನ್ನು ಪ್ರಯೋಗಿಸಿದ್ದಾರೆ. ಅಥವಾ ಆದಿ ಎಂಬ ಅರ್ಥದಲ್ಲಿ ಬಹುವಚನ, ಚೇತಆದೀನಾಂ ಎಂದರ್ಥ. ''ಅಶಬ್ದಮಸ್ಪರ್ಶಮರೂಪಮ್'' ''ನ ತತ್ರ ಚಕ್ಷುರ್ಗಚ್ಛತಿ'' ಮುಂತಾಗಿ ಪ್ರಮಾಣಗಳು ತಿಳಿಸುವಂತೆ ಚಕ್ಷುರಾದಿಗಳಿಗೂ ಅವಿಷಯ ಎಂದು ಅಭಿಪ್ರಾಯ. ।।೧೧।।

ಹಾಗಾದರೆ ಅವನು ದೊರೆಯುವದು ಹೇಗೆ ? ಎಂದರೆ ಹೇಳುವರು -

**ಸತ್ತ್ವೇನ ಪ್ರತಿಲಭ್ಯಾಯ ನೈಷ್ಕರ್ಮ್ಯೇಣ ವಿಪಶ್ಚಿತಾಮ್ ।**
**ನಮಃ ಕೈವಲ್ಯನಾಥಾಯ ನಿರ್ವಾಣಸುಖಸಂವಿದೇ ।।೧೧।।**

**ವಿಪಶ್ಚಿತಾಂ** ಜ್ಞಾನಿಗಳಿಗೆ **ನೈಷ್ಕರ್ಮ್ಯೇಣ** ನಿವೃತ್ತಧರ್ಮದಿಂದ ಲಬ್ಧವಾದ **ಸತ್ತ್ವೇನ** ಜ್ಞಾನದಿಂದ **ಪ್ರತಿಲಭ್ಯಾಯ** ಪ್ರಾಪ್ಯನಾದ, **ಕೈವಲ್ಯನಾಥಾಯ** ಮುಕ್ತಿಗೆ ಒಡೆಯನಾದ **ನಿರ್ವಾಣಸುಖಸಂವಿದೇ** ಸ್ವರೂಪಸುಖಾನುಭವವುಳ್ಳವನಿಗೆ **ನಮಃ** ನಮಸ್ಕಾರವು.

ಸತ್ಯ ಃ- **ಸತ್ತ್ವೇನ** ವ್ಯವಸಾಯದಿಂದ ಅಂದರೆ ಪ್ರಯತ್ನದಿಂದ (ನಿಶ್ಚಯದಿಂದ ಎಂದೂ ಅರ್ಥ) **ವಿಪಶ್ಚಿತಾ** ಎಂಬ ಪಾಠದಲ್ಲಿ ಜ್ಞಾನಿಯಿಂದ ಎಂದರ್ಥ. 'ವಿದ್ವಾನ್ ವಿಪಶ್ಚಿತ್' ಎಂದು ಅಮರವಿದೆ. ವಿಪ್ರಕೃಷ್ಟೇ ನಿಶ್ಚಿನೋತಿ ಚಿಂತಯತೀತಿ ವಾ ವಿಪಶ್ಚಿತ್. ಕೇವಲಸ್ಯ ಭಾವಃ ಕೈವಲ್ಯಂ ಬಂಧವಿಲ್ಲದೇ ಇರುವದು (ಗುಣವಚನೇತಿ ಷ್ಯಞ) ಅಂದರೆ ಮುಕ್ತಿ, ಅದಕ್ಕೆ ಸ್ವಾಮಿ ಎಂದರ್ಥ. 'ಮುಕ್ತಿಃ ಕೈವಲ್ಯನಿರ್ವಾಣ...' ಎಂದು ಅಮರವಿದೆ. **ನಿರ್ವಾಣಸುಖಸಂವಿದೇ** ಸ್ವಯಂ ನಿರ್ವಾಣಂ ಅಂದರೆ ಪ್ರಾಕೃತಶರೀರದಿಂದ ಅಭೋಗ್ಯವಾದ ಯಾವ ಸುಖವುಂಟೋ ಅದರ ಸಂವಿತ್ ಅನುಭವವುಳ್ಳವನು ಎಂದರ್ಥ. ಅಥವಾ ನಿರ್ವಾಣಾಃ ಪ್ರಾಕೃತದೇಹವಿಲ್ಲದವರು. ಅವರಿಗೆ ಸುಖ ಹಾಗೂ ಸಂವಿತ್ (ಜ್ಞಾನವು) (ಯೇನ ಸಃ ತಸ್ಮೈ) ಯಾವನಿಂದ ಬರುವದೋ ಅವನಿಗೆ ಎಂದೂ ಅರ್ಥ. ಅಥವಾ ಕೈವಲ್ಯನಾಥಾಯ ನಿರ್ವಾಣಸುಖಸಂವಿದೇ ಎಂಬುವುದು ವ್ಯಧಿಕರಣ ಚತುರ್ಥಿಗಳು. ತತ್ರ ಪ್ರಥಮಾ ಷಷ್ಠ್ಯರ್ಥೇ.

ಅಥವಾ ಕೈವಲ್ಯನಾಥಾಯನಿರ್ವಾಣಸುಖಸಂವಿದೇ ಎಂಬುದು ಒಂದೇ ಪದ. ಕೈವಲ್ಯಸ್ಯ ಮುಕ್ತಿಯ ನಾಥಃ ನಾಥನಂ ಪ್ರಾರ್ಥನೆ ತಂ ಪ್ರತಿ ಅಯತೇ ಇತಿ ಕೈವಲ್ಯನಾಥಾಯಃ ಕೈವಲ್ಯನಾಥಾಯಸ್ಯ ಅವನಿಗೆ ನಿರ್ವಾಣಸುಖಸಂವಿಚ್ಚ ಯಸ್ಮಾತ್ ಸಃ ತಥಾ ತಸ್ಮೈ ಮುಕ್ತಿಯನ್ನು ಪ್ರಾರ್ಥಿಸಿದವನಿಗೆ ಸ್ವರೂಪಸುಖವನ್ನು ಕೊಡುವವನಿಗೆ ಎಂದರ್ಥ. ।।೧।।

**ನಮಃ ಶಾಂತಾಯ ಘೋರಾಯ ಗೂಢಾಯ ಗುಣಕರ್ಮಣೇ ।**
**ನಿರ್ವಿಶೇಷಾಯ ಸಾಮ್ಯಾಯ ನಮೋ ಜ್ಞಾನಘನಾಯ ಚ ॥೧೨॥**

**ಶಾಂತಾಯ** ಸೌಮ್ಯವಾದ ರಾಮ ಮುಂತಾದ ರೂಪವುಳ್ಳವನಿಗೆ ಅಥವಾ ಸುಖನಿರ್ಣಾಯಕನಿಗೆ (ಅಂತೋ ನಿರ್ಣಯಃ ಎಂದು ಗೀತಾಭಾಷ್ಯ) **ಘೋರಾಯ** ವೈರಿಗೆ ಭಯಂಕರವಾದ ನರಸಿಂಹಾದಿರೂಪವುಳ್ಳವನಿಗೆ **ಗೂಢಾಯ** ತನ್ನ ಪ್ರಸಾದವಿಲ್ಲದೇ ಪ್ರಕಾಶನಾಗದ **ಮೂಢಾಯ** ಎಂಬ ಪಾಠದಲ್ಲಿ ಮೀನ ಮುಂತಾದ ಹೀನಯೋನಿಯಲ್ಲಿ ಅವತರಿಸಿದ, ಗುಣತ್ರಯಕಾರ್ಯಪ್ರವರ್ತಕನಾದ್ದರಿಂದ ಒಬ್ಬನೇ ಆದರೂ ಹೀಗೆ ವ್ಯವಹರಿಸಲ್ಪಡುವನು ಎಂದು ಭಾವ. ಸತ್ವಾದಿಗಳಿರುವದರಿಂದಲೇ ಈ ರೀತಿಯಾದವನು ಎಂದೇಕೆ ಹೇಳಲ್ಪಡುವದಿಲ್ಲ ಎಂದರೆ ಹೇಳುವರು. **ಗುಣಕರ್ಮಣೇ** ಗುಣಾನಾಂ ಸತ್ವಾದಿಗಳ ಕರ್ಮಾಣಿ ಸಮೀಚಿನಗಳಾದ ಅಸಮೀಚೀನಗಳಾದ (ಒಳ್ಳೆಯ ಕೆಟ್ಟ ಸಂತ ಅಸಂತಃ ವ್ಯಾಪಾರಗಳು ಯಾವನಿಂದ ನಡೆಯುವವೋ (ಯೇನ ಸಃ) ಸ್ವತಂತ್ರನಾದುದರಿಂದ ಎಲ್ಲವೂ ಅಸಂಭವವಲ್ಲವೆಂದೂ ಹೇಳುವರು. ಗುಣಕರ್ಮಣೇ ಎಂದು. ಗುಣಾಃ ಕರ್ಮಾಣಿ ಯಸ್ಮಾತ್ ಸಃ ತಸ್ಮೈ ಅಂದರೆ ಕರ್ಮಾಣಿ ಜೀವರು ಗುಣಾಃ ಅಪ್ರಧಾನರು ಯಾರಿಂದ ಆಗಿರುವರೋ ಅವನೆಂದರ್ಥ. ''ಕರೋऽಸ್ಮಿನ್ ಮೀಯತೇ ಇತಿ ಕರ್ಮ ಜೀವ ಉದಾಹೃತಃ'' ಎಂದು ಗೀತಾತಾತ್ಪರ್ಯದಲ್ಲಿ ಹೇಳಿದೆ. **ನಿರ್ವಿಶೇಷಾಯ** ಅವತಾರಗಳಲ್ಲಿ ವಿಶೇಷವಿಲ್ಲದಿರುವ **ಸಾಮ್ಯಾಯ** ಅವರವರ ಯೋಗ್ಯತಾನುಸಾರ ಸಮನಾದವನಿಗೆ ಅಮ್ಯಾಃ ತನ್ನ ಪ್ರಸಾದಸಂಪಾದಕರಾದ ಅಂಗದೇವತೆಗಳು. ಅವರಿಂದ ಕೂಡಿದವರು ಸಾಮ್ಯರು ಹೀಗೂ ಅರ್ಥ ಮಾಡಿಕೊಳ್ಳಬಹುದು. **ಅರ್ಥಜ್ಞಾನಘನಾಯ** ಜ್ಞಾನಾತ್ಮಕನಿಗೆ ಅಥವಾ ಜ್ಞಾನಾಮೃತ ಸುರಿಸಿದ ಮೇಘರೂಪನಿಗೆ (ಮೋಡ) ಜ್ಞಾನದಿಂದ ಮಹತ್ತಾದವನಿಗೆ **ನಮಃ** ನಮಸ್ಕಾರವು.

**ಶಾಂತಾಯ** ಸಜ್ಜನರಿಗೆ ಸೌಮ್ಯರೂಪನಾದ **ಘೋರಾಯ** ಅಸಜ್ಜನರಿಗೆ ಕ್ರೂರನಾದ **ಮೂಢಾಯ** ಮೋಹಜನಕನಾದ ಮುಹ ವೈಚಿತ್ಯೇ ಎಂದು ಧಾತು ಇದೆ. **ಗೂಢಾಯ** ಎಂದಿದ್ದಾಗ ಅವ್ಯಕ್ತನಾದವನಿಗೆ ಎಂದರ್ಥ. **ಗುಣಕರ್ಮಣೆ** ಆ ಆ ಯೋನಿಗುಣಕರ್ಮಗಳಿಗೆ ಕಾರಣನಾದ **ನಿರ್ವಿಶೇಷಾಯ** ಅವತಾರಗಳಲ್ಲಿ ವ್ಯತ್ಯಾಸವಿಲ್ಲದೆ **ಸಾಮ್ಯಾಯ** ಯೋಗ್ಯತಾನುಸಾರ ಸಮನಾದ **ಜ್ಞಾನಘನಾಯ** ಜ್ಞಾನಸ್ವರೂಪನಾದ ಹೀಗೂ ಅರ್ಥ ಮಾಡಿರುವರು. **ಶಾಂತಾಯ** ವಾಸುದೇವಾದಿರೂಪನಿಗೆ **ಘೋರಾಯ** ಸಂಕರ್ಷಣ-ಪರಶುರಾಮಾದಿರೂಪನಿಗೆ **ಗೂ(ಮೂ)ಢಾಯ** ವರಾಹ-ಮತ್ಸ್ಯಾದಿರೂಪನಿಗೆ **ಗುಣಕರ್ಮಣೇ** ಜ್ಞಾನಾನಂದಾದಿಗುಣ ಮತ್ತು ಸೃಷ್ಟ್ಯಾದಿ ಪ್ರಶಸ್ತಕರ್ಮವುಳ್ಳವನಿಗೆ **ನಿರ್ವಿಶೇಷಾಯ** ತನಗಿಂತ ಉತ್ತಮರಿಲ್ಲದ ಅಥವಾ ತನ್ನ ಮೂಲರೂಪ-ಅವತಾರರೂಪಗಳಲ್ಲಿ ಗುಣಕರ್ಮಾದಿಗಳಿಂದ ವಿಶೇಷವಿಲ್ಲದ ತನ್ನ ನಿಯಮ್ಯವಸ್ತುಗಳ

ನೀಚೋಚ್ಚತೆಯಿಂದ ಬಂದ ವಿಶೇಷವಿಲ್ಲದವಗೆ **ಸಾಮ್ಯಾಯ** ಯೋಗ್ಯತೆ ಮೀರಿ ಶತ್ರು-ಮಿತ್ರರಿಲ್ಲದ **ಜ್ಞಾನಘನಾಯ** ಪೂರ್ಣಜ್ಞಾನನಾದವನಿಗೆ **ನಮಃ** ನಮಸ್ಕಾರವು. ಹೀಗೂ ಅರ್ಥ ಮಾಡಿರುವರು. ''ಮತ್ತಃ ಪರತರಂ ನಾನ್ಯತ್'' ''ನ ಸ್ಥಾನತೋಽಪಿ ಪರಸ್ಯೋಭಯಲಿಂಗಂ ಸರ್ವತ್ರ ಹಿ'' ಎಂಬ ಪ್ರಮಾಣ ತಿಳಿಯಬಹುದು. ||೧೨||

ನಿರ್ವಿಶೇಷತೆಯ ಸ್ಥಿರತೆಗೆ ಅವತಾರಾನವತಾರ ಯೋಗ್ಯಗುಣವಿಶಿಷ್ಟಭಗವಂತನನ್ನು ಸ್ತುತಿಸುವರು-

**ಕ್ಷೇತ್ರಜ್ಞಾಯ ನಮಸ್ತುಭ್ಯಂ ಸರ್ವಾಧ್ಯಕ್ಷಾಯ ಸಾಕ್ಷಿಣೇ ।**
**ಪುರುಷಾಯಾತ್ಮಮೂಲಾಯ ಮೂಲಪ್ರಕೃತಯೇ ನಮಃ ||೧೩||**

**ಕ್ಷೇತ್ರಜ್ಞಾಯ** ಕ್ಷೀಯತೇ ಅತ್ರೇತಿ ಕ್ಷೇತ್ರಂ ಎಂದರೆ ಶರೀರಾದಿಗಳು ಕ್ಷೇತ್ರಂ ಜಾನಾತಿ ಅವುಗಳನ್ನು ತಿಳಿದವನು ''ಜ್ಞಾ ಅವಬೋಧನೇ'', **ಸರ್ವಾಧ್ಯಕ್ಷಾಯ** ಎಲ್ಲಕ್ಕೂ ಸ್ವಾಮಿಯಾದ **ಸಾಕ್ಷಿಣೇ** ಜೀವನ ಕರ್ಮವನ್ನು ನೋಡುವವನಿಗೆ **ಪುರುಷಾಯ** ಪೂರ್ಣಷಡ್ಗುಣನಾದ **ಆತ್ಮಮೂಲಾಯ** ಬ್ರಹ್ಮಾದಿಜೀವರಿಗೆ ಆಶ್ರಯನಾದ **ಮೂಲಪ್ರಕೃತಯೇ** ಚೇತನಾಚೇತನಪ್ರಕೃತಿಗಳಿಗೂ ಆಶ್ರಯನಾದ್ದರಿಂದ ಮೂಲಪ್ರಕೃತಿ ಎನಿಸುವ (ತೇ ನಮಃ ನಿನಗೆ ನಮಸ್ಕಾರವು.) ||೧೩||

◆ ಕ್ಷೇತ್ರಜ್ಞಾಯ ಎಂಬುದಕ್ಕೆ ಮತ್ತೊಂದು ಅರ್ಥವನ್ನು ಹೀಗೆ ತಿಳಿಯಬೇಕು. **ಕ್ಷೇತ್ರ** ಎಂದರೆ ಅವ್ಯಕ್ತತತ್ವ-ಮಹದಹಂಕಾರಾದಿಗಳು, **ಜ್ಞ** ಅವುಗಳನ್ನು ತಿಳಿದವನು, ''ಮಹಾಭೂತಾನ್ಯಹಂಕಾರೋ ಬುದ್ಧಿರವ್ಯಕ್ತಮೇವ ಚ । ಏತತ್ ಕ್ಷೇತ್ರಂ...'' ಎಂದು ಗೀತೆಯಲ್ಲಿ ಹೇಳಿದೆ. ಇದನ್ನು ಆರನೇ ಸ್ಕಂಧದಲ್ಲಿ ವಿಸ್ತಾರವಾಗಿ ವಿವರಿಸಿದೆ.

**ಸರ್ವೇಂದ್ರಿಯಗುಣದ್ರಷ್ಟ್ರೇ ಸರ್ವಪ್ರತ್ಯಯಹೇತವೇ ।**
**ಅಸತ್ಯಾಚ್ಛವಿಮುಕ್ತಾಯ ಸದಾಭಾಸಾಯ ತೇ ನಮಃ ||೧೪||**

**ಸರ್ವೇಂದ್ರಿಯಗುಣದ್ರಷ್ಟ್ರೇ** ಎಲ್ಲ ಇಂದ್ರಿಯಗಳ ಎಲ್ಲ ವಿಷಯಗಳನ್ನು ನೋಡುವ (ಸರ್ವಾಣಿ ಚ ತಾನಿ ಇಂದ್ರಿಯಾಣಿ ಚ ತೇಷಾಂ ಸರ್ವೇ ಗುಣಾಃ ಶಬ್ದಾದ್ಯಾಃ ತಾನ್ ದ್ರಷ್ಟಾ ತಸ್ಮೈ) **ಸರ್ವಪ್ರತ್ಯಯಹೇತವೇ** ಎಲ್ಲ ಜೀವರ ಎಲ್ಲ ಜ್ಞಾನಗಳಿಗೆ ಕಾರಣನಾದ ಅರ್ಜುನಾದಿಗಳಿಗೆ ಉಪದೇಶಮಾಡಿ ವಿಶ್ವಾಸ ಕಾರಣನಾದ **ಅಸತ್ಯಾತ್ ವಿಮುಕ್ತಾಯ** ಅಸಾರದಿಂದ ನಿತ್ಯಮುಕ್ತನಾದ ಅನೃತ ಸುಳ್ಳಿನಿಂದ ಮುಕ್ತನಾದ ''ಅನನ್ಯಾಶ್ಚಿಂತಯಂತೋ ಮಾಂ ಯೇ ಜನಾಃ ಪರ್ಯುಪಾಸತೇ । ತೇಷಾಂ ನಿತ್ಯಾಭಿಯುಕ್ತಾನಾಂ ಯೋಗಕ್ಷೇಮಂ ವಹಾಮ್ಯಹಮ್'' ಮುಂತಾದ ಸತ್ಯಪ್ರತಿಜ್ಞೆಯುಳ್ಳ **ಸದಾಭಾಸಾಯ** ಯಾವಾಗಲೂ ಎಲ್ಲ ವಿಷಯಗಳ ಅಪ್ರತಿಹತಜ್ಞಾನವಿರುವ ಅಥವಾ ನಿರ್ದುಷ್ಟವಾದ

ದೇಹವುಳ್ಳ **ಸಂತಃ** ವಾಯ್ವಾದಿಗಳು **ಆಭಾಸಾಃ** ಸಾಕ್ಷಾತ್ ಪರಂಪರಯಾ ಪ್ರತಿಬಿಂಬರಾಗಿ ಉಳ್ಳವನಿಗೆ **ಅಸತ್ಕಾತ್** ದುರ್ಜನಸಮೂಹದಿಂದ **ವಿಮುಕ್ತಾಯ** ಮುಕ್ತನಾದ **ತೇ** ನಿನಗೆ **ನಮಃ** ನಮಸ್ಕಾರವು. ||೧೪||

ಇಲ್ಲಿಯವರೆಗೆ ಪ್ರಸ್ತುತನಾದ ಮತ್ತು ಸ್ತುತನಾದ ಪರಮಾತ್ಮ ಅಸಾಧಾರಣ-ಧರ್ಮಗಳಿಂದ ಅಸಾಧಾರಣಶಕ್ತಿಯುಳ್ಳವರಿಂದ ತಿಳಯಲ್ಪಟ್ಟಿದ್ದಾನೆ. ಸಾಧಾರಣಜನರಿಂದ ತಿಳಿಯಲ್ಪಟ್ಟಿಲ್ಲ. ಈಗ ಪಾಮರಾಪಾಮರರಿಂದ ಪ್ರಮಿತವಾದ ಹೆಸರಿನಿಂದ ಆ ಪರಮಾತ್ಮನನ್ನು ಸಂಬೋಧಿಸುತ್ತಾ ನಮಸ್ಕರಿಸುತ್ತಿದ್ದಾರೆ-

**ನಮೋ ನಮಸ್ತೇಽಖಿಲಕಾರಣಾಯ**
**ನಾರಾಯಣಾಯಾರ್ತಿವಿನಾಶನಾಯ ।**
**ಸರ್ವಾಗಮಾಮ್ನಾಯಮಹಾರ್ಣವಾಯ**
**ನಮೋಽಪವರ್ಗಾಯ ಪರಾಯಣಾಯ** ||೧೫||

**ಅಖಿಲಕಾರಾಣಯ** ಚಿದಚಿತ್ ಆದ ಎಲ್ಲ ಜಗತ್ತಿಗೆ ಸ್ವತಂತ್ರಕಾರಣನಾದ **ನಾರಾಯಣಾಯ** ಗುಣಪೂರ್ಣನಾದ ದೋಷದೂರನಾದ ಜ್ಞೇಯನಾದ ಗಮ್ಯನಾದ ಲಕ್ಷ್ಮೀಪತಿಯಾದ ಇತ್ಯಾದಿ ಅನೇಕ ಅರ್ಥ ಹೇಳಿದೆ **ಆರ್ತಿವಿನಾಶನಾಯ** ತನ್ನ ಶರಣಾದವರ ಎಲ್ಲ ದುಃಖವನ್ನು ನಾಶಮಾಡುವ **ತೇ ನಮಃ** ನಿನಗೆ ನಮಸ್ಕಾರ. ತಾನು ಹೇಳಿದ ಹೇಳುವ ಗುಣವಿಶಿಷ್ಟತ್ವವಿಷಯದಲ್ಲಿ ಪ್ರಮಾಣ ಹೇಳುವರು. **ಸರ್ವಾಗಮಾಮ್ನಾಯ-ಮಹಾರ್ಣವಾಯ** ಪೌರುಷೇಯವಾದ ಪಂಚರಾತ್ರ-ಭಾರತ-ಮುಂತಾದ ಎಲ್ಲ ಆಗಮಗಳು ಹಾಗೂ ವೇದಗಳಿಗೆ ಸಮುದ್ರದಂತಿರುವ ''ನದೀನಾಂ ಸಾಗರೋ ಗತಿಃ'' ''ಸರ್ವೇ ವೇದಾ ಯತ್ಪದಮಾಮನಂತಿ'' ಮುಂತಾಗಿದೆ. **ಅಪವರ್ಗಾಯ** ಮೋಕ್ಷರೂಪನಾದ ಅಥವಾ ಷಡ್ವರ್ಗರಹಿತನಾದವನಿಗೆ ಅಥವಾ ನಿತ್ಯಮುಕ್ತನಾದ **ಪರಾಯಣಾಯ** ಮುಖ್ಯಾಶ್ರಯನಾದ ಮುಕ್ತಾಶ್ರಯನಾದ **ತೇ** ನಿನಗೆ **ನಮಃ ನಮಃ** ನಮಸ್ಕಾರವು. ||೧೫||

ಸತ್ಯ :- ಅಥವಾ **ಅಖಿಲಕಸ್ಯ** ಸಮಗ್ರಸುಖಕ್ಕೆ ಅಥವಾ ಸ್ವರೂಪಸುಖಕ್ಕೆ **ಅರಣಾಯ** ಆಶ್ರಯನಾದ ಎಂದು ಅರ್ಥ ತಿಳಿಯಬೇಕು.

♦ ಅಥವಾ ಆರ್ತಿವಿನಾಶನಾಯ ಎಂಬ ಪದದಿಂದ ಶ್ರೀರಾಮಚಂದ್ರನಿಗೂ ಇವನಿಗೂ ಏನೂ ವಿಶೇಷವಿಲ್ಲವೆಂದೂ ತಿಳಿಸುವರು. ಆರ್ತಿ ಎಂದರೆ ಪಿನಾಕಕೋಟಿ ಧನುಸ್ಸಿನ ತುದಿ ಅದನ್ನು ನಾಶ ಮಾಡಿದವನಿಗೆ ಎಂದರ್ಥ. (ಸೀತಾಸ್ವಯಂವರದಲ್ಲಿ ಧನುರ್ಭಂಗ ಮಾಡಿದವನೆಂದರ್ಥ. ''ಆರ್ತಿಃ ಪೀಡಾಧನುಷ್ಕೋಟ್ಯೋಃ'' ಎಂದು ವಿಶ್ವವಿದೆ.

♦ ನಾರಾಯಣ ಎಂದು ಸಂಬೋಧನ ಮಾಡಿಕೊಂಡು ಅಯಾರ್ತಿವಿನಾಶನಾಯ ಎಂದು ಪದ ಮಾಡಿಕೊಳ್ಳಬೇಕು. ಅಯಾರ್ತಿಃ ಅಯಾನಾಂ ಅಜ್ಞರಿಗೆ ಆರ್ತಿಃ ದುಃಖವು ಯೇನ ಸಃ ಯಾರಿಂದಲೋ ಅವನು. ''ಯೇತಿ ಜ್ಞಾನಂ ಸಮುದ್ದಿಷ್ಟಮ್'' ಎಂದು ತಾತ್ಪರ್ಯದಲ್ಲಿ ಬೇರೇ ಕಡೆ ಹೇಳಿದೆ. **ವಿನಾಶನಾಯ** ವಿನಾ ಅಶನೇನ ಅಶನಂ ವಾ ವರ್ತತೇ ಇತಿ ಅನಶನಃ ತಸ್ಮೈ ಆಹಾರವಿಲ್ಲದೇ ಪ್ರಕಾಶಮಾನನಾದವನಿಗೆ ಎಂದರ್ಥ. ಅಯಾರ್ತಿಶ್ಚಾಸೌ ವಿನಾಶನಶ್ಚ ಅಯಾರ್ತಿವಿನಾಶನಾಯ ಎಂದು ವಿಗ್ರಹಮಾಡಿಕೊಳ್ಳಬೇಕು. ''ಅನಶ್ನನ್ ಅನ್ಯಃ ಅಭಿಚಾಕಶೀತಿ'' ಎಂದಿದೆ. ಈ ರೀತಿ ಉಪಾಸನೆ ಮಾಡುವದರಿಂದ ತನ್ನ ತನುವಿನಾಶನವನ್ನೂ ಅಶನವಿಲ್ಲದಿದ್ದರೂ ಮಾಡುವದಿಲ್ಲವೆಂದು ಸಮಯೋಚಿತ ಮಾತೆಂದು ತಿಳಿಯಬೇಕು. ||೧೫||

''ಸರ್ವಪ್ರತ್ಯಯಹೇತವೇ'' ಎಂಬುದರಿಂದ ಎಲ್ಲ ಜ್ಞಾನಗಳಿಗೆ ಕಾರಣ ಇವನು ಎಂದು ಹೇಳಿಯಾಯಿತು. (ಹಾಗಾದರೆ ಉಳಿದವರು ಅವನೇ ಕಾರಣವಾಗಿವುಳ್ಳವರೆ ಎಂದರೇ ಅಲ್ಲವೆಂದು ಹೇಳುವರು.) ಅದನ್ನೇ ಸ್ಪಷ್ಟಪಡಿಸುವರು-

**ಗುಣಾರಣಿಚ್ಛನ್ನಚಿದೂಷ್ಮಪಾಯ**
**ತತ್ಕ್ಷೋಭವಿಸ್ಫೂರ್ಜಿತಮಾನಸಾಯ ।**
**ಯುಕ್ತಾತ್ಮಭಿಃ ಸ್ವಹೃದಯೇ ಪರಿಭಾವಿತಾಯ**
**ಜ್ಞಾನಾತ್ಮನೇ ಭಗವತೇ ನಮ ಈಶ್ವರಾಯ** ||೧೬||

**ಗುಣಾರಣಿಚ್ಛನ್ನಚಿದೂಷ್ಮಪಾಯ ಗುಣ** ಸತ್ವಾದಿಗುಣಗಳ **ಅರಣಿ** ಕಡೆಯುವ ಕಟ್ಟಿಗೆಯಲ್ಲಿ **ಛನ್ನ** ಅಡಗಿರುವ **ಚಿದೂಷ್ಮಪಾಯ** ಜ್ಞಾನವೆಂಬ ಅಗ್ನಿಯನ್ನು ವ್ಯಕ್ತಗೊಳಿಸುವ (ಊಷ್ಮ ಎಂದರೆ ಬಿಸಿ ಅದಕ್ಕೆ ಕಾರಣವಾದ ಬೆಂಕಿಯನ್ನು ಆ ಪದದಿಂದ ತೆಗೆದುಕೊಂಡಿದೆ) **ತತ್ಕ್ಷೋಭವಿಸ್ಫೂರ್ಜಿತಮಾನಸಾಯ ತತ್ಕ್ಷೋಭ** ಆ ಗುಣಗಳ ಮತ್ತು ಗುಣಗಳಿಗೆ ಕಾರಣವಾದ ಪ್ರಕೃತಿಯ ಕ್ಷೋಭವಾದರೂ ಅಂದರೆ ಕಾರ್ಯೋನ್ಮುಖವಾದರೂ **ವಿಸ್ಫೂರ್ಜಿತ** ವಿಕಾರವಿಲ್ಲದೆ ಏಕಪ್ರಕಾರವಿರುವ **ಮಾನಸಾಯ** ಮನಸ್ಸುಳ್ಳ ''ಪ್ರಕೃತಿಂ ಪುರುಷಂ ಚೈವ ಪ್ರವಿಶ್ಯ ಪುರುಷೋತ್ತಮಃ । ಕ್ಷೋಭಯಾಮಾಸ ಭಗವಾನ್ ಸೃಷ್ಟ್ಯರ್ಥಂ ಜಗತೋ ವಿಭುಃ'' ಎಂದಿರುವದರಿಂದ ಅವುಗಳ ಕ್ಷೋಭವಾದರೂ ಇವನ ಮನಸ್ಸಿಗೆ ಕ್ಷೋಭವಿಲ್ಲ. ''ಟು ಓ ಸ್ಫೂರ್ಜಾವಜ್ರನಿರ್ಘೋಷೇ'' ಎಂದು ಧಾತುವ್ಯಾಖ್ಯನವಿದೆ. ಆದರೂ ''ಅನೇಕಾರ್ಥಾ ಹಿ ಧಾತವಃ'' ಎಂದಿರುವದರಿಂದ ಈ ರೀತಿ ಅರ್ಥಮಾಡಿದೆ. ಅಜ್ಞೇಯನಾದರೂ ದಯಾಸಮುದ್ರನು ಈ ಗುಣದಿಂದಲೂ ಲುಬ್ಧನು ನಮ್ಮ ದೇವನು ಎಂದು ಹೇಳುವರು. **ಯುಕ್ತಾತ್ಮಭಿಃ** ಮನೋಯೋಗ ಉಳ್ಳವರಿಂದ **ಪರಿಭಾವಿತಾಯ** ಚಿಂತಿತನಾದ **ಈಶ್ವರಾಯ** ಅಚಿಂತ್ಯಶಕ್ತಿಯುಳ್ಳ **ಜ್ಞಾನಾತ್ಮನೇ** ಕೇವಲ ಜ್ಞಾನಸ್ವರೂಪವಾದ ತದಾತ್ಮಕಶರೀರವುಳ್ಳ ನಾರಾಯಣನಿಗೆ **ನಮಃ** ನಮಸ್ಕಾರ.

''ಯೋಗಿನಾಂ ಹೃದಯೇ ಹರಿಃ'' ಎಂದಿರುವುದರಿಂದ **ಸ್ವಹೃದಯೇ** ಎಂಬುದರಿಂದ ಅವರಿಗೆ ಯೋಗಿತ್ವ ಅಭಿಪ್ರೇತವಾಗಿದೆ. ಯುಕ್ತಾತ್ಮಭಿಃ ಪರಿತೋ ಭಾವಿತಾಯ ಎಂದೂ ಅನ್ವಯ ಮಾಡಿಕೊಳ್ಳಬೇಕು. ಸರ್ವತ್ರ ವಿದಿತಾತ್ಮನಾಂ ಎಂದಿರುವುದರಿಂದ ಮನೋಯೋಗವಿದ್ದವರು ಎಲ್ಲ ಕಡೆ ಭಗವಂತನ ಚಿಂತನೆಯನ್ನು ಮಾಡುತ್ತಾರೆ ಎಂಬ ವಿಷಯವು ತಿಳಿದು ಬರುತ್ತದೆ. ''ಪರಿಃ ಸ್ಯಾತ್ ಸರ್ವತೋ ಭಾವೇ ವ್ಯಾಪ್ತೌ'' ಎಂದು ವಿಶ್ವವಿದೆ.

ಹನ್ನೆರಡನೆಯ ಶ್ಲೋಕದಲ್ಲಿ ''**ನಮೋ ಜ್ಞಾನಘನಾಯ ಚ**'' ಎಂದು ಹೇಳಿದ್ದಾರೆ. ಇದರಿಂದ ಜ್ಞಾನೇನ ಘನಃ ಎಂದಾಗಲೀ, ಜ್ಞಾನಂ ಘನಂ ಯಸ್ಮಿನ್ ಎಂದಾಗಲೀ, ವಿಗ್ರಹಮಾಡಿಕೊಂಡು ಮಂದರು ಭೇದಶಂಕಾ ಮಾಡಿಕೊಳ್ಳುತ್ತಾರೆ. ಅದನ್ನು ಪರಿಹರಿಸಲು **ಜ್ಞಾನಾತ್ಮನೇ** ಎಂದಿರುವರು. ಇದರಿಂದ ಭಗವತೇ ಎಂಬುದಕ್ಕೂ ಅರ್ಥ ಶೋಧಿಸಿದಂತಾಯಿತು. ಹಾಗಾದರೆ ಗುಣಿತ್ವಾದಿವ್ಯವಹಾರಕ್ಕೇನು ಔಷಧ ಎಂದರೆ ಹೇಳುವರು. **ಈಶ್ವರಾಯ** ಬೇರೆ ಕಡೆ ಐಶ್ವರ್ಯವಿಲ್ಲದ್ದರಿಂದ ಗುಣಗುಣಿಭಾವ ಇಲ್ಲದಿದ್ದರೂ ಇಲ್ಲಿ ಇದೆ ಎಂದರ್ಥ. ||೧೬||

ಎಲ್ಲ ಪುರುಷಾರ್ಥಗಳೂ ಸರ್ವೇಶ್ವರನಾದ ಇವನಿಂದಲೇ ಆಗುವವು. ಆದ್ದರಿಂದ ಅದಕ್ಕಾಗಿ ಸ್ವರ್ಗವಾಸಿಗಳಾದ ಯಾವ ದೇವತೆಗಳೂ ಪ್ರಾರ್ಥನೀಯರಲ್ಲ ಎಂದು ಹೇಳುವರು-

**ಯಂ ಧರ್ಮಕಾಮಾರ್ಥವಿಮುಕ್ತಕಾಮಾ**
**ಭಜಂತ ಇಷ್ಟಾಂ ಗತಿಮಾಪ್ನುವಂತಿ ।**
**ಕಿಂತ್ವಾಶಿಷೋ ರಾತ್ಯಪಿ ದೇಹಮವ್ಯಯಂ**
**ಕರೋತು ಮೇऽದಭ್ರದಯೋ ವಿಮೋಕ್ಷಣಮ್** ||೧೭||

**ಧರ್ಮಕಾಮಾರ್ಥವಿಮುಕ್ತಕಾಮಾಃ** ಧರ್ಮ, ಕಾಮ, ಅರ್ಥ, ಮೋಕ್ಷಗಳೆಂಬ ಚತುರ್ವಿಧ ಪುರುಷಾರ್ಥಾಪೇಕ್ಷಿಗಳು **ಯಂ** ಯಾವ ನಾರಾಯಣನನ್ನು **ಭಜಂತೇ** ತಮ್ಮ ಅಭೀಷ್ಟಸಿದ್ಧಿಗಾಗಿ ಭಜಿಸುವರೋ ಪ್ರಸನ್ನನಾದ ಅವನಿಂದ **ಇಷ್ಟಾಂ ಗತಿಂ** ತಮಗಿಷ್ಟವಾದ ಪ್ರಯೋಜನವನ್ನು **ಆಪ್ನುವಂತಿ** ಹೊಂದುವರೋ **ಕಿಂ ಚ** ಮತ್ತು **ಆಶಿಷಃ** ಮಕ್ಕಳೇ ಮುಂತಾದ ಅವಾಂತರ ಅಪೇಕ್ಷೆಗಳನ್ನು **ಆಪ್ನುವಂತಿ** ಹೊಂದುವರೋ **ಯಃ** ಯಾವನು **ಅವ್ಯಯಂ** ನಾಶವಾಗದಿರುವ **ದೇಹಂ ಅಪಿ** ಜ್ಞಾನಾನಂದಾತ್ಮಕಸಾಗರರೂಪದೇಹವನ್ನು ಅದರ ಆವರಣಗಳನ್ನು ತೆಗೆಯುವ ಮೂಲಕ **ರಾತಿ** ಕೊಡುವನೋ ವ್ಯಕ್ತಮಾಡುವನೋ (ಇದರಿಂದ ನಿರಾಕಾರರೂಪಮೋಕ್ಷವಲ್ಲ ನಾಶವಾಗದ ಸಾಕಾರಮೋಕ್ಷಕೊಡುವನೆಂದು ಹೇಳಿದಂತಾಯಿತು.) **ಅದಭ್ರದಯಃ** ಬಹಳ ದಯಾವಂತನಾದ **ಸಃ** ಆ ನಾರಾಯಣನು **ಮೇ**

ನನಗೆ **ವಿಮೋಕ್ಷಣಂ** ಕೇವಲ ಮೊಸಳೆಯಿಂದ ಮಾತ್ರವಲ್ಲ ಸಂಸಾರದಿಂದ ಮೋಕ್ಷವನ್ನು **ಕರೋತು** ಅನುಗ್ರಹಿಸಲಿ. ಇದೊಂದೇ ನಾನು ಪ್ರಾರ್ಥಿಸುವದು ಎಂದು ಭಾವ.

ಸತ್ಯ ಃ- **ಅದಭ್ರಧಿಯಃ** ಎಂಬ ಪಾಠದಲ್ಲಿ ಮಹಾಬುದ್ಧಿಯುಳ್ಳ ಎಂದರ್ಥ. ಮೋಕ್ಷವನ್ನೇ ಕೊಡುವನೆಂದಮೇಲೆ ಇತರ ಐಹಿಕಸಂಪತ್ತು ಕೊಡುವದೇನು ಆಶ್ಚರ್ಯವಲ್ಲ. ತುಶಬ್ದ ಅಧಿಕಾರಾನುಗಣಫಲಲಾಭ ಎಂಬ ವಿಶೇಷ ತಿಳಿಸುವದು.

♦ **ದೇಹಂ** ಈಗಿರುವ ದೇಹವನ್ನೇ **ಅವ್ಯಯಂ** ಪ್ರಸ್ತುತವಾದ ಬಾಧದಿಂದ ಅಬಾಧ್ಯವಾಗಿ ನಾಶಶೂನ್ಯವನ್ನಾಗಿ **ಕರೋತು** ಮಾಡಲಿ **ಅಪಿ** ಅನಂತರ **ವಿಮೋಕ್ಷಣಂ ಚ ಕರೋತು** ಮೋಕ್ಷವನ್ನು ಕೊಡಲಿ ಈ ಪಕ್ಷದಲ್ಲಿ ವಿ ಶಬ್ದವೇ ಮುಕ್ತಿಗೆ ಸಾಕಾರತೆಯನ್ನು ತಿಳಿಸುವದು. ।।೧೭।।

ಸತ್ಯ- ''ಏಕಾಂತಾನಾಂ ನ ಕಸ್ಯಚಿದರ್ಥೇ ನಾರಾಯಣೋ ದೇವಃ ಸರ್ವಮನ್ಯತ್ತದರ್ಥಕಮ್'' ಎಂಬ ಶ್ರುತ್ಯರ್ಥವನ್ನು ಅನುಸಂಧಾನ ಮಾಡುತ್ತಾ ಹೇಳುತ್ತಿದ್ದಾರೆ-

ಛಲಾರೀ- ನಾನು ಏಕಾಂತಭಕ್ತನಲ್ಲ. ಅಲ್ಪಭಕ್ತ. ಆದ್ದರಿಂದ ಪುರುಷಾರ್ಥವನ್ನು ಪ್ರಾರ್ಥಿಸುತ್ತಿದ್ದೇನೆ. ಏಕಾಂತಭಕ್ತರು ಹೀಗೆ ಪ್ರಾರ್ಥಿಸುವುದಿಲ್ಲ ಎಂದು ಹೇಳುತ್ತಿದ್ದಾರೆ-

**ಏಕಾಂತಿನೋ ಯಸ್ಯ ನ ಕಂಚನಾರ್ಥಂ**
**ವಾಂಛಂತಿ ತೇ ವೈ ಭಗವತ್ಪ್ರಧಾನಾಃ ।**
**ಅತ್ಯದ್ಭುತಂ ಯಚ್ಚರಿತಂ ಸುಮಂಗಲಂ**
**ಗಾಯಂತ ಆನಂದಸಮುದ್ರಮಗ್ನಾಃ** ।।೧೮।।

**ಭಗವತ್ಪ್ರಧಾನಾಃ** ಭಗವಂತನನ್ನೇ ಮುಖ್ಯವಾಗಿ ಆಶ್ರಯಿಸಿರುವ **ಯೇ** ಯಾವ **ಏಕಾಂತಿನಃ** ಏಕಾಂತಭಕ್ತರು ಇರುವರೋ **ತೇ** ಅವರು **ಅತ್ಯದ್ಭುತಂ** ಪರಮಾಶ್ಚರ್ಯ-ಕರವಾದ **ಸುಮಂಗಲಂ** ಅತ್ಯಂತ ಮಂಗಲಕರವಾದ **ಯಚ್ಚರಿತಂ** ಯಾವ ಶ್ರೀಹರಿಯ ಚರಿತ್ರೆಯನ್ನು **ಗಾಯಂತಃ** ಹಾಡುವವರಾಗಿ **ಆನಂದಸಮುದ್ರಮಗ್ನಾಃ** ಆನಂದಸಮುದ್ರದಲ್ಲಿ ಮುಳುಗಿದವರಾಗಿ **ಯಸ್ಯ ಸಕಾಶಾತ್** ಯಾವ ಶ್ರೀಹರಿಯಿಂದ **ಕಿಂಚನಾರ್ಥಂ** ಯಾವ ಪ್ರಯೋಜನವನ್ನೂ ಮೋಕ್ಷವನ್ನೂ **ನ ವಾಂಛಂತಿ** ಅಪೇಕ್ಷಿಸುವುದಿಲ್ಲವೋ ಅವನ ಪ್ರಸಾದವನ್ನು ಮಾತ್ರ ಅಪೇಕ್ಷಿಸುವರೋ **ತಂ ಪರೇಶಂ ಈಡೇ** ಅಂತಹ ಪರಮಾತ್ಮನನ್ನು ಸ್ತುತಿಸುತ್ತೇನೆ. ಎಂದು ಮುಂದಿನ ಶ್ಲೋಕದಿಂದ ಅನ್ವಯ. ।।೧೮।।

ಸತ್ಯ ಃ- ಆನಂದಮಗ್ನರಾದದ್ದರಿಂದ ಏಕಾಂತಭಕ್ತರು ಯಾವುದನ್ನೂ ಅಪೇಕ್ಷಿಸುವುದಿಲ್ಲ ಎಂದು ತಿಳಿಯಬೇಕು. ತಾನು ಏಕಾಂತಲೋಕಾಂತನಿವಿಷ್ಟನಾದರೂ, ಗಜೇಂದ್ರನು

''ಯೋಗಿನಾಂ ಹೃದಯೇ ಹರಿಃ'' ಎಂದಿರುವುದರಿಂದ **ಸ್ವಹೃದಯೇ** ಎಂಬುದರಿಂದ ಅವರಿಗೆ ಯೋಗಿತ್ವ ಅಭಿಪ್ರೇತವಾಗಿದೆ. ಯುಕ್ತಾತ್ಮಭಿಃ ಪರಿತೋ ಭಾವಿತಾಯ ಎಂದೂ ಅನ್ವಯ ಮಾಡಿಕೊಳ್ಳಬೇಕು. ಸರ್ವತ್ರ ವಿದಿತಾತ್ಮನಾಂ ಎಂದಿರುವುದರಿಂದ ಮನೋಯೋಗವಿದ್ದವರು ಎಲ್ಲ ಕಡೆ ಭಗವಂತನ ಚಿಂತನೆಯನ್ನು ಮಾಡುತ್ತಾರೆ ಎಂಬ ವಿಷಯವು ತಿಳಿದು ಬರುತ್ತದೆ. ''ಪರಿಃ ಸ್ಯಾತ್ ಸರ್ವತೋ ಭಾವೇ ವ್ಯಾಪ್ತೌ'' ಎಂದು ವಿಶ್ವವಿದೆ.

ಹನ್ನೆರಡನೆಯ ಶ್ಲೋಕದಲ್ಲಿ ''**ನಮೋ ಜ್ಞಾನಘನಾಯ ಚ**'' ಎಂದು ಹೇಳಿದ್ದಾರೆ. ಇದರಿಂದ ಜ್ಞಾನೇನ ಘನಃ ಎಂದಾಗಲೀ, ಜ್ಞಾನಂ ಘನಂ ಯಸ್ಮಿನ್ ಎಂದಾಗಲೀ, ವಿಗ್ರಹಮಾಡಿಕೊಂಡು ಮಂದರು ಭೇದಶಂಕಾ ಮಾಡಿಕೊಳ್ಳುತ್ತಾರೆ. ಅದನ್ನು ಪರಿಹರಿಸಲು **ಜ್ಞಾನಾತ್ಮನೇ** ಎಂದಿರುವರು. ಇದರಿಂದ ಭಗವತೇ ಎಂಬುದಕ್ಕೂ ಅರ್ಥ ಶೋಧಿಸಿದಂತಾಯಿತು. ಹಾಗಾದರೆ ಗುಣತ್ವಾದಿವ್ಯವಹಾರಕ್ಕೇನು ಔಷಧ ಎಂದರೆ ಹೇಳುವರು. **ಈಶ್ವರಾಯ** ಬೇರೆ ಕಡೆ ಐಶ್ವರ್ಯವಿಲ್ಲದ್ದರಿಂದ ಗುಣಗುಣಿಭಾವ ಇಲ್ಲದಿದ್ದರೂ ಇಲ್ಲಿ ಇದೆ ಎಂದರ್ಥ. ॥೧೬॥

ಎಲ್ಲ ಪುರುಷಾರ್ಥಗಳೂ ಸರ್ವೇಶ್ವರನಾದ ಇವನಿಂದಲೇ ಆಗುವವು. ಆದ್ದರಿಂದ ಅದಕ್ಕಾಗಿ ಸ್ವರ್ಗವಾಸಿಗಳಾದ ಯಾವ ದೇವತೆಗಳೂ ಪ್ರಾರ್ಥನೀಯರಲ್ಲ ಎಂದು ಹೇಳುವರು-

**ಯಂ ಧರ್ಮಕಾಮಾರ್ಥವಿಮುಕ್ತಕಾಮಾ**
**ಭಜಂತ ಇಷ್ಟಾಂ ಗತಿಮಾಪ್ನುವಂತಿ ।**
**ಕಿಂತ್ವಾಶಿಷೋ ರಾತ್ಯಪಿ ದೇಹಮವ್ಯಯಂ**
**ಕರೋತು ಮೇಽದಭ್ರದಯೋ ವಿಮೋಕ್ಷಣಮ್** ॥೧೭॥

**ಧರ್ಮಕಾಮಾರ್ಥವಿಮುಕ್ತಕಾಮಾಃ** ಧರ್ಮ, ಕಾಮ, ಅರ್ಥ, ಮೋಕ್ಷಗಳೆಂಬ ಚತುರ್ವಿಧ ಪುರುಷಾರ್ಥಾಪೇಕ್ಷಿಗಳು **ಯಂ** ಯಾವ ನಾರಾಯಣನನ್ನು **ಭಜಂತೇ** ತಮ್ಮ ಅಭೀಷ್ಟಸಿದ್ಧಿಗಾಗಿ ಭಜಿಸುವರೋ ಪ್ರಸನ್ನನಾದ ಅವನಿಂದ **ಇಷ್ಟಾಂ ಗತಿಂ** ತಮಗಿಷ್ಟವಾದ ಪ್ರಯೋಜನವನ್ನು **ಆಪ್ನುವಂತಿ** ಹೊಂದುವರೋ **ಕಿಂ ಚ** ಮತ್ತು **ಆಶಿಷಃ** ಮಕ್ಕಳೇ ಮುಂತಾದ ಅವಾಂತರ ಅಪೇಕ್ಷೆಗಳನ್ನು **ಆಪ್ನುವಂತಿ** ಹೊಂದುವರೋ **ಯಃ** ಯಾವನು **ಅವ್ಯಯಂ** ನಾಶವಾಗದಿರುವ **ದೇಹಂ ಅಪಿ** ಜ್ಞಾನಾನಂದಾತ್ಮಕಸಾಗರರೂಪದೇಹವನ್ನು ಅದರ ಆವರಣಗಳನ್ನು ತೆಗೆಯುವ ಮೂಲಕ **ರಾತಿ** ಕೊಡುವನೋ ವ್ಯಕ್ತಮಾಡುವನೋ (ಇದರಿಂದ ನಿರಾಕಾರರೂಪಮೋಕ್ಷವಲ್ಲ ನಾಶವಾಗದ ಸಾಕಾರಮೋಕ್ಷಕೊಡುವನೆಂದು ಹೇಳಿದಂತಾಯಿತು.) **ಅದಭ್ರದಯಃ** ಬಹಳ ದಯಾವಂತನಾದ **ಸಃ** ಆ ನಾರಾಯಣನು **ಮೇ**

ನನಗೆ **ವಿಮೋಕ್ಷಣಂ** ಕೇವಲ ಮೊಸಳೆಯಿಂದ ಮಾತ್ರವಲ್ಲ ಸಂಸಾರದಿಂದ ಮೋಕ್ಷವನ್ನು **ಕರೋತು** ಅನುಗ್ರಹಿಸಲಿ. ಇದೊಂದೇ ನಾನು ಪ್ರಾರ್ಥಿಸುವದು ಎಂದು ಭಾವ.

ಸತ್ಯ :- **ಅದಭ್ರಧಿಯಃ** ಎಂಬ ಪಾಠದಲ್ಲಿ ಮಹಾಬುದ್ಧಿಯುಳ್ಳ ಎಂದರ್ಥ. ಮೋಕ್ಷವನ್ನೇ ಕೊಡುವನೆಂದಮೇಲೆ ಇತರ ಐಹಿಕಸಂಪತ್ತು ಕೊಡುವದೇನು ಆಶ್ಚರ್ಯವಲ್ಲ. ತುಶಬ್ದ ಅಧಿಕಾರಾನುಗಣಫಲಲಾಭ ಎಂಬ ವಿಶೇಷ ತಿಳಿಸುವದು.

♦ **ದೇಹಂ** ಈಗಿರುವ ದೇಹವನ್ನೇ **ಅವ್ಯಯಂ** ಪ್ರಸ್ತುತವಾದ ಬಾಧದಿಂದ ಅಬಾಧ್ಯವಾಗಿ ನಾಶಶೂನ್ಯವನ್ನಾಗಿ **ಕರೋತು** ಮಾಡಲಿ **ಅಪಿ** ಅನಂತರ **ವಿಮೋಕ್ಷಣಂ ಚ ಕರೋತು** ಮೋಕ್ಷವನ್ನು ಕೊಡಲಿ ಈ ಪಕ್ಷದಲ್ಲಿ ವಿ ಶಬ್ದವೇ ಮುಕ್ತಿಗೆ ಸಾಕಾರತೆಯನ್ನು ತಿಳಿಸುವದು. ।।೧೭।।

ಸತ್ಯ- ''ಏಕಾಂತಾನಾಂ ನ ಕಸ್ಯಚಿದರ್ಥೇ ನಾರಾಯಣೋ ದೇವಃ ಸರ್ವಮನ್ಯತ್ತದರ್ಥಕಮ್'' ಎಂಬ ಶ್ರುತ್ಯರ್ಥವನ್ನು ಅನುಸಂಧಾನ ಮಾಡುತ್ತಾ ಹೇಳುತ್ತಿದ್ದಾರೆ-

ಛಲಾರೀ- ನಾನು ಏಕಾಂತಭಕ್ತನಲ್ಲ. ಅಲ್ಪಭಕ್ತ. ಆದ್ದರಿಂದ ಪುರುಷಾರ್ಥವನ್ನು ಪ್ರಾರ್ಥಿಸುತ್ತಿದ್ದೇನೆ. ಏಕಾಂತಭಕ್ತರು ಹೀಗೆ ಪ್ರಾರ್ಥಿಸುವುದಿಲ್ಲ ಎಂದು ಹೇಳುತ್ತಿದ್ದಾರೆ-

**ಏಕಾಂತಿನೋ ಯಸ್ಯ ನ ಕಂಚನಾರ್ಥಂ**
**ವಾಂಛಂತಿ ತೇ ವೈ ಭಗವತ್ಪ್ರಧಾನಾಃ ।**
**ಅತ್ಯದ್ಭುತಂ ಯಚ್ಚರಿತಂ ಸುಮಂಗಲಂ**
**ಗಾಯಂತ ಆನಂದಸಮುದ್ರಮಗ್ನಾಃ** **।।೧೮।।**

**ಭಗವತ್ಪ್ರಧಾನಾಃ** ಭಗವಂತನನ್ನೇ ಮುಖ್ಯವಾಗಿ ಆಶ್ರಯಿಸಿರುವ **ಯೇ** ಯಾವ **ಏಕಾಂತಿನಃ** ಏಕಾಂತಭಕ್ತರು ಇರುವರೋ **ತೇ** ಅವರು **ಅತ್ಯದ್ಭುತಂ** ಪರಮಾಶ್ಚರ್ಯ-ಕರವಾದ **ಸುಮಂಗಲಂ** ಅತ್ಯಂತ ಮಂಗಲಕರವಾದ **ಯಚ್ಚರಿತಂ** ಯಾವ ಶ್ರೀಹರಿಯ ಚರಿತ್ರೆಯನ್ನು **ಗಾಯಂತಃ** ಹಾಡುವವರಾಗಿ **ಆನಂದಸಮುದ್ರಮಗ್ನಾಃ** ಆನಂದಸಮುದ್ರದಲ್ಲಿ ಮುಳುಗಿದವರಾಗಿ **ಯಸ್ಯ ಸಕಾಶಾತ್** ಯಾವ ಶ್ರೀಹರಿಯಿಂದ **ಕಿಂಚನಾರ್ಥಂ** ಯಾವ ಪ್ರಯೋಜನವನ್ನೂ ಮೋಕ್ಷವನ್ನೂ **ನ ವಾಂಛಂತಿ** ಅಪೇಕ್ಷಿಸುವುದಿಲ್ಲವೋ ಅವನ ಪ್ರಸಾದವನ್ನು ಮಾತ್ರ ಅಪೇಕ್ಷಿಸುವರೋ **ತಂ ಪರೇಶಂ ಈಡೇ** ಅಂತಹ ಪರಮಾತ್ಮನನ್ನು ಸ್ತುತಿಸುತ್ತೇನೆ. ಎಂದು ಮುಂದಿನ ಶ್ಲೋಕದಿಂದ ಅನ್ವಯ. ।।೧೮।।

ಸತ್ಯ :- ಆನಂದಮಗ್ನರಾದದ್ದರಿಂದ ಏಕಾಂತಭಕ್ತರು ಯಾವುದನ್ನೂ ಅಪೇಕ್ಷಿಸುವುದಿಲ್ಲ ಎಂದು ತಿಳಿಯಬೇಕು. ತಾನು ಏಕಾಂತಲೋಕಾಂತನಿವಿಷ್ಟನಾದರೂ, ಗಜೇಂದ್ರನು

ಏಕಾಂತಭಕ್ತರಲ್ಲಿ ಸೇರಿದ್ದರೂ ಪರೋಕ್ಷವಾಗಿ ಹೇಳುವದರಿಂದ ತನಗೆ ಅಪಕ್ವಭಕ್ತಿತ್ವವನ್ನು ತಿಳಿಸುವನು. ಹೊರತು ಅನೈಕಾಂತಿತ್ವವನ್ನಲ್ಲ. ''ಪಾರ್ಷದತಾಂ ಗಮಿತೇನ'' ಎಂಬ ಮುಂದಿನ ಮಾತಿನಿಂದ ಈ ರೀತಿಯಾಗಿ ತಿಳಿಯಬೇಕು.

♦ ಕೆಲವರು ಏಕಾಂತಿಗಳು ಎಂದರೆ ಅಚ್ಛಿನ್ನಭಕ್ತರು ಎಂದು ಇಟ್ಟುಕೊಂಡು ಏಕಾಂತಿಕರೆಂದರೆ ಪರಶುಕ್ಲತ್ರಯರೆಂದು ಹೇಳುವರು. ಅವರ ಪಕ್ಷದಲ್ಲಿ ಇವನು ಏಕಾಂತಭಕ್ತನಲ್ಲವಾದ್ದರಿಂದ ಪರೋಕ್ಷವ್ಯವಹಾರ ಸರಿಯಾಗಿ ಹೊಂದುವದು ಎಂದು ತಿಳಿಯಬೇಕು.

♦ ಏಕಾಂತಭಕ್ತರು ಮೋಕ್ಷವನ್ನೂ ಯಾಕೆ ಬಯಸುವುದಿಲ್ಲವೆಂದರೆ ಗಾಯಂತಃ ಎಂದು ಹೇಳುವರು. **ಯಚ್ಚರಿತಂ** ಯಾವ ಪರಮಾತ್ಮನ ಚರಿತೆಯನ್ನು **ಗಾಯಂತಃ** ಗಾನ ಮಾಡುವವರಾಗಿ **ಆನಂದಸಮುದ್ರಮಗ್ನಾಃ** ಆನಂದಾಂಬುಧಿಯಲ್ಲಿ ಮಗ್ನರಾಗಿರುತ್ತಾರೆ ಆದ್ದರಿಂದ ಏಕಾಂತಭಕ್ತರು ಮುಕ್ತಿಯನ್ನೂ ಅಪೇಕ್ಷಿಸುವುದಿಲ್ಲ ಎಂದು ತಿಳಿಯಬೇಕು.

♦ ನಾನು ಅಂಥ ಏಕಾಂತಿಯಲ್ಲ. ನಾನು ಏಕಾಂತಿಯೇ ಆಗಿದ್ದರೆ ಯಾರಿಂದಲೂ ಏನೂ ಬೇಡದೇ ಇರುತ್ತಿದ್ದೆನು. ಅಲ್ಲದೇ ಈ ರೀತಿಯಾದ ಆಪತ್ತಿನಲ್ಲಿ ನಾನಿದ್ದರೂ ಹೃದಯಗ್ರಂಥಿಮೋಕ್ಷವನ್ನೇ ಇಚ್ಛಿಸುವೆನು. ಪ್ರಧಾನವಾಗಿ ಈ ವಿಪತ್ತಿನ ಮೋಚನವನ್ನಲ್ಲ ಎಂದು ತನಗೆ ಮಧ್ಯಮಭಕ್ತತ್ವವನ್ನೂ ಪ್ರಕಟಗೊಳಿಸಿರುವನು ಎಂದು ಲಿಂಗೇರಿ ಆಚಾರ್ಯರು ವ್ಯಾಖ್ಯಾಸಿಸುತ್ತಾರೆ. ।।೧೮।।

ಉಪನಿಷದುಕ್ತಗುಣವುಳ್ಳವನೆಂದು ಸ್ತುತಿಸಿದರೆ ಶ್ರೀಹರಿಯು ಸ್ವಸ್ಯ ಉಪನೀಷೀದತೀತಿ ತನ್ನ ಹತ್ತಿರ ಬಂದು ನಿಲ್ಲುವನೆಂದು ತಿಳಿದು ಆ ರೀತಿ ಸ್ತುತಿಸುವನು-

**ತಮಕ್ಷರಂ ಬ್ರಹ್ಮಪರಂ ಪರೇಶಂ**
**ಅವ್ಯಕ್ತಮಧ್ಯಾತ್ಮಿಕಯೋಗಗಮ್ಯಮ್ ।**
**ಅತೀಂದ್ರಿಯಂ ಸೂಕ್ಷ್ಮಮಿವಾತಿದೂರಂ**
**ಅನಂತಮಾದ್ಯಂ ಪರಿಪೂರ್ಣಮೀಡೇ** ।।೧೯।।

**ಅಕ್ಷರಂ** ನಾಶರಹಿತನಾದ **ಬ್ರಹ್ಮ** ಗುಣಪೂರ್ಣನಾದ **ಪರಂ** ಲೋಕವಿಲಕ್ಷಣನಾದ **ಪರೇಶಂ** ಉತ್ತಮರೆಂದು ಸಮ್ಮತರಾದ ಬ್ರಹ್ಮಾದಿಗಳಿಗಿಂತ ಉತ್ತಮನಾದ **ಅವ್ಯಕ್ತಂ** ತನ್ನ ಪ್ರಸಾದವಿಲ್ಲದೇ ಕಾಣಿಸದ **ಆಧ್ಯಾತ್ಮಿಕಯೋಗಗಮ್ಯಂ** ಅಧಿಕಾತ್ಮನಾದ ನಾರಾಯಣನ ಸಂಬಂಧಿಯಾದ ಉಪಾಯದಿಂದ ಪ್ರಾಪ್ಯನಾದ ಅಥವಾ ಪ್ರಾಣಾಯಾಮಾದಿ-ಯೋಗದಿಂದ ಪ್ರಾಪ್ಯನಾದ **ಅತೀಂದ್ರಿಯಂ** ಇತರೇಂದ್ರಿಯಗಳನ್ನು ಮೀರಿರುವ **ಅತಿದೂರಂ** ಅತ್ಯಂತ ದೂರವುಳ್ಳವುನು ಮತ್ತು ಅತಿಕ್ರಾಂತಃ ದೂರಂ ಇತಿ ಅತಿದೂರಃ

ಅಂತಿಕೇ ವಿದ್ಯಮಾನಂ ಹತ್ತಿರದಲ್ಲಿಯೂ ಇದ್ದವನು ಎಂದರ್ಥ ಮಾಡಿದರೆ ''ತದ್ವಂತಿಕೇ'' ಎಂಬುದರ ಅರ್ಥವನ್ನೂ ಸ್ವೀಕರಿಸಿದರೆ ಎಲ್ಲ ಶ್ರುತಿಯನ್ನು ಅನುಸರಿಸಿದಂತಾಗುವದು. **ಅನಂತಂ** ನಾಶರಹಿತನಾದ **ಆದ್ಯಂ** ಜಗತ್ತಿನ ಸೃಷ್ಟಿಗಿಂತ ಮೊದಲಿರುವ ''ಇದಮಗ್ರೇ'' ಎಂದಿದೆ. ಸರ್ವೋಪಜೀವ್ಯನಾದ **ಪರಿಪೂರ್ಣಂ** ವಿಶ್ವವ್ಯಾಪಿಯಾದ **ಸೂಕ್ಷ್ಮಮಿವ** ಅಣುಪರಿಮಾಣವುಳ್ಳ ಮಹತ್ಪರಿಮಾಣವೂ ಇದೆ ಎಂದು ಸೂಚಿಸಲು ಇವ ಎಂದಿರುವರು. ಇಂತಹ **ತಂ** ನಾರಾಯಣನನ್ನು **ಈಡೇ** ಸ್ತುತಿಸುವೆನು. ।।೧೯।।

ಸತ್ಯ :- **ಬ್ರಹ್ಮಪರಂಪರೇಶಂ** ಎಂಬುದು ಒಂದೇ ಪದ ಎಂದು ಇಟ್ಟುಕೊಂಡು ಹೀಗೆ ಅರ್ಥ ಮಾಡಬೇಕು. ''ಬ್ರಹ್ಮಾಣಿ ಜೀವಾಃ ಸರ್ವೇಽಪಿ ಪರಬ್ರಹ್ಮಾಣಿ ಮುಕ್ತಿಗಾಃ'' ಎಂದಿರುವದರಿಂದ ಬ್ರಹ್ಮ ಎಂದರೆ ಜೀವರು ಎಂದರ್ಥ. ಬ್ರಹ್ಮಪರಂಪರಾಯಾಃ ಜೀವರ ಪರಂಪರೆಗೆ ಈಶಃ ಸ್ವಾಮಿಯಾದ, ಅಥವಾ ಜೀವರ ಪರಂಪರೆಯಿಂದ ಸಹಿತಳಾದ ಲಕ್ಷ್ಮೀದೇವಿಗೂ ಉತ್ತಮನಾದ, ಅಥವಾ ಜೀವರ ಪರಂಪರೆಗೆ, ಜೀವರ ಪರಂಪರೆಯಿಂದ ಸಹಿತಳಾದ ಲಕ್ಷ್ಮೀದೇವಿಗೆ ಸುಖವನ್ನು ನೀಡುವ ಎಂದೂ ಅರ್ಥ.

♦ ಅವ್ಯಕ್ತ ಎಂದರೆ ಮತ್ತೊಂದು ಅರ್ಥವನ್ನು ತಿಳಿಯಬೇಕು. ವ್ಯಕ್ತ ಎಂದರೆ ವಿ ವಿಶೇಷವಾಗಿ ಅಕ್ತ ಸಂಬದ್ಧನಾದವನು ಅಂದರೆ ವಿಶೇಷವಾಗಿ ಸಂಸಾರದಲ್ಲಿ ಆಸಕ್ತನಾದವನು ಎಂದು ಅರ್ಥ. ಅವ್ಯಕ್ತ ಎಂದರೆ ಸಂಸಾರದ ಸಂಬಂಧವಿಲ್ಲದವನು ಎಂದು ಅರ್ಥ.

''ನಕ್ತೋಷಾಸಾ...'' ಎಂಬ ಮಂತ್ರದ ''ನಕ್ತಾ ಸ್ಯಾನ್ನಾಕ್ತೋ ಯಸ್ಮಾತ್ ಸ ಸರ್ವತಃ'' ಎಂಬ ಋಗ್ಭಾಷ್ಯದ ಟೀಕೆಯಲ್ಲಿ ಯಸ್ಮಾತ್ ಸ ವಿಷ್ಣುಃ ಸರ್ವೇಣ ಪಾಪಾದಿನಾ ನಾಕ್ತೋ ನ ಸಂಗತಃ ತಸ್ಮಾತ್ ನಕ್ತಾ ಸ್ಯಾತ್ । ಅಂಜತೇಃ ಕ್ತಃ ಎಂದಿರುವರು. ನಾಕ್ತಃ ಎಂದರೆ ಸಕಲಪಾಪಾದಿಗಳಿಂದ ಸಂಬದ್ಧನಲ್ಲ ಆದ್ದರಿಂದ ವಿಷ್ಣು ನಾಕ್ತ ಎನಿಸಿದ್ದಾನೆ. ಅಂಜತಿ ಎಂಬುದಕ್ಕೆ ಕ್ತ ಪ್ರತ್ಯಯ ಬಂದು ನಞ ಸಮಾಸವಾದಮೇಲೆ ನಾಕ್ತ ಎಂಬ ರೂಪ ಸಿದ್ಧವಾಗುತ್ತದೆ. ಎಂದು ಹೇಳಿದ್ದಾರೆ.

ಹಾಗೆಯೇ ಪ್ರಕೃತದಲ್ಲಿಯೂ ವಿ ಉಪಸರ್ಗಪೂರ್ವಕ ಅಂಜತಿ ಎಂಬ ಧಾತುವಿಗೆ ಕ್ತ ಪ್ರತ್ಯಯ ಮಾಡಿದಾಗ ವ್ಯಕ್ತ ಎಂದಾಗುತ್ತದೆ. ನ ವ್ಯಕ್ತಃ ಅವ್ಯಕ್ತಃ ತಂ ಅವ್ಯಕ್ತಂ ಎಂದು ಪದ ಸಿದ್ಧವಾಗುತ್ತದೆ. ವಿ ವಿಶೇಷವಾಗಿ **ಅಕ್ತ** ಸಂಬದ್ಧನಾದವನು. **ವ್ಯಕ್ತ** ಎಂದರೆ ವಿಶೇಷವಾಗಿ ಸಂಸಾರದ ಸಂಬಂಧ ಇದ್ದವನು ಎಂದು ಅರ್ಥ. **ಅವ್ಯಕ್ತ** ಎಂದರೆ ಸಂಸಾರದ ಸಂಬಂಧ ಇಲ್ಲದವನು ಎಂಬ ಅರ್ಥವು ಬರುತ್ತದೆ ಎಂಬುದಾಗಿ ತಿಳಿಯಬೇಕು.

♦ ಅತೀಂದ್ರಿಯಂ ಎಂಬುದಕ್ಕೆ ಮತ್ತೊಂದು ರೀತಿಯಾಗಿ ಅರ್ಥ ತಿಳಿಯಬೇಕು. ಆಯಾ ಇಂದ್ರಿಯವ್ಯಾಪಾರವನ್ನು ಅತಿಕ್ರಮಿಸಿ ಎಲ್ಲ ಇಂದ್ರಿಯಗಳಿಂದ ಎಲ್ಲ

ವ್ಯಾಪಾರಮಾಡುವದರಿಂದ ಅತೀಂದ್ರಿಯನೆನಿಸುವ ಅಥವಾ ಸ್ತುತ್ಯವಾದ ಇಂದ್ರಿಯ ಉಳ್ಳ, ಉತ್ಕೃಷ್ಟವಾದ ಇಂದ್ರಿಯವುಳ್ಳ, ''ಅತಿಶಬ್ದಃ ಪ್ರಶಂಸಾಯಾಮುತ್ಕರ್ಷೇ ಲಂಘನೇಽಪಿ ಚ'' ಎಂದು ವಿಶ್ವವಿದೆ.

◆ ಅನಂತ ಎಂಬುದಕ್ಕೆ ಮತ್ತೊಂದು ವಿಧವಾಗಿ ಅರ್ಥವನ್ನು ತಿಳಿಯಬೇಕು. ಅನಿತರಪ್ರೇರಣಯಾ ಚೇಷ್ಟಮಾನಃ ಇತಿ ಅನನ್ ತಂ ಅಂದರೆ ಬೇರೆಯವರ ಪ್ರೇರಣೆ ಇಲ್ಲದೇ ಚೇಷ್ಟೇ ಮಾಡುವ ಎಂದರ್ಥ.

◆ ಪರಿಪೂರ್ಣಂ ಎಂಬುದಕ್ಕ ಹೀಗೂ ಅರ್ಥ ತಿಳಿಯಬೇಕು. **ಪೂರ್ಣಂ** ಪುರಿ ವೈಕುಂಠದಲ್ಲಿರುವ **ಣಃ** ನಿರ್ವೃತಿಃ ಸುಖವು **ಪರಿ** ಯೋಗ್ಯತಾನುಸಾರ ಪೂರ್ಣಃ ಯೇನ ತಂ ಯಾವ ಪರಮಾತ್ಮನಿಂದ ಪೂರ್ಣವಾಗಿದೆಯೋ, ವೈಕುಂಠದಲ್ಲಿ ಯೋಗ್ಯತಾನುಸಾರ ಪೂರ್ಣಾನಂದಕೊಡುವವನೆಂದರ್ಥ. ''ಪರಿಸ್ಯಾದ್ವ್ಯಾಪ್ತೌ ನಿವಸನೇಽಪಿ ಚ'' ಎಂದು ವಿಶ್ವವಿದೆ.

ಪರೇಶತ್ವ ಅಸಿದ್ಧಿಯನ್ನು ಪರಿಹರಿಸಲು ನಿರವಕಾಶಲಿಂಗವನ್ನು ಹೇಳುವರು-

**ಯಸ್ಯ ಬ್ರಹ್ಮಾದಯೋ ದೇವಾ ವೇದಾ ಲೋಕಾಶ್ಚರಾಚರಾಃ ।**
**ನಾಮರೂಪವಿಭೇದೇನ ಜಲ್ಪ್ಯಾ ಚ ಕಲಯಾ ಕೃತಾಃ ॥೨೦॥**

**ಯಸ್ಯ ಕಲಯಾ** ಯಾವ ಶ್ರೀಹರಿಯ ಭಿನ್ನಾಂಶದಿಂದ **ಜಲ್ಪ್ಯಾ ಚ** ಮಾತಿನಿಂದ **ಬ್ರಹ್ಮಾದಯಃ ದೇವಾಃ** ಬ್ರಹ್ಮಾದಿದೇವತೆಗಳು **ವೇದಾಃ** ವೇದಗಳು **ಲೋಕಾಃ** ಲೋಕಗಳು ಹೀಗೆ **ಚರಾಚರಾಃ** ಚೇತನಾಚೇತನಾತ್ಮಕವಾದ ಜಗತ್ತು **ಚ** ಉಪಾದಾನಕಾರಣವಾದ ಪ್ರಕೃತಿಯು **ನಾಮರೂಪವಿಭೇದೇನ ನಾಮ** ವಿಧಿ, ರುದ್ರ, ಇಂದ್ರ, ಮುಂತಾದ ನಾಮಗಳಿಂದಲೂ **ರೂಪ** ನಾಲ್ಕುಮುಖ, ಐದುಮುಖ ಮುಂತಾದ ರೂಪಗಳಿಂದ **ವಿಭೇದೇನ** ವಿಲಕ್ಷಣವಾಗಿ **ಕೃತಾಃ** ಹುಟ್ಟಿಸಲ್ಪಟ್ಟಿರುವರು.

◆ ಶ್ರೀಹರಿಯು ಜಡಪ್ರಕೃತಿಯನ್ನು ಉಪಾದಾನ ಮಾಡಿಕೊಂಡು ಬ್ರಹ್ಮಾದಿಸ್ಥಾವರಾಂತ ಜಗತ್ತನ್ನು ನಾಲ್ಕು ಐದು ಆರು ಮುಖಗಳಿರುವಂತೆ ಭಿನ್ನಭಿನ್ನವಾಗಿ ಸೃಷ್ಟಿಸಿ ವಿರಿಂಚ-ರುದ್ರ ಮುಂತಾಗಿ ಹೆಸರಿಟ್ಟನು. ಛಲಾರೀ ಆಚಾರ್ಯರು ಈ ವಿಷಯವನ್ನು ತಿಳಿಸುತ್ತಾರೆ.

ಭಗವಂತನ ಅವತಾರವಾದ ಪುರುಷಾದಿರೂಪಗಳಿಂದ ಬ್ರಹ್ಮಾದಿಗಳು ಜನಿಸಿದರು. ವೇದಗಳು ನಾರಾಯಣನ ವಚನರೂಪವೆಂದು ತಿಳಿಯಬೇಕು. ಲಿಂಗೇರಿ ಆಚಾರ್ಯರು ಈ ವಿಷಯವನ್ನು ತಿಳಿಸಿದ್ದಾರೆ.

ಸತ್ಯ ಃ- ಯಚ್ಛಬ್ದಕ್ಕೆ ಸ ಜಯತಾತ್ ಎಂದು ಮುಂದಿನ ಶ್ಲೋಕದಿಂದ ಅನ್ವಯ. ಅಥವಾ ತಂ ಈಡೇ ಎಂದು ಹಿಂದಿನಿಂದಲೂ ಅನ್ವಯ ಮಾಡಬಹುದು.

''ಅಂಶೋ ನಾನಾ...'' ''ಸ್ಮರಂತಿ ಚ'' ಎಂಬ ಸೂತ್ರಭಾಷ್ಯದಲ್ಲಿ ''ಸ್ವಾಂಶಶ್ಚಾಥೋ ವಿಭಿನ್ನಾಂಶ ಇತಿ ದ್ವೇಧಾಂಶ ಇಷ್ಯತೇ । ವಿಭಿನ್ನಾಂಶೋಽಲ್ಪಶಕ್ತಿಃ ಸ್ಯಾತ್'' ಎಂದು ಹೇಳಲಾಗಿದೆ. ಅಂದರೆ ಅಂಶವು ಸ್ವರೂಪಾಂಶ ಮತ್ತು ವಿಭಿನ್ನಾಂಶ ಎಂದು ಎರಡು ವಿಧವಾಗಿದೆ. ಅಲ್ಪಶಕ್ತಿಯಾದ ಜೀವರು ಭಗವಂತನ ವಿಭಿನ್ನಾಂಶರೆಂದು ತಿಳಿಯಬೇಕು. ಹೀಗೆ ಇಲ್ಲಿ ಹೇಳಿರುವ ವಿಭಿನ್ನಾಂಶವನ್ನೇ ವೇದವ್ಯಾಸದೇವರು ವಿಭೇದೇನ ಎನ್ನುವ ಮೂಲಕ ತಿಳಿಸುತ್ತಿದ್ದಾರೆ.

''ಆಭಾಸ ಏವ ಚ'' ಎಂಬ ಸೂತ್ರಭಾಷ್ಯದಲ್ಲಿ ಈ ವರಾಹವಚನವನ್ನು ಉದಾಹರಿಸಿ ಇದೇ ವಿಷಯವನ್ನು ತಿಳಿಸಿದ್ದಾರೆ.

**ದ್ವಿರೂಪಾವಂಶಕೌ ತಸ್ಯ ಪರಮಸ್ಯ ಹರೇರ್ವಿಭೋಃ ।**
**ಪ್ರತಿಬಿಂಬಾಂಶಕಶ್ಚಾಥ ಸ್ವರೂಪಾಂಶಕ ಏವ ಚ ॥**

**ಪ್ರತಿಬಿಂಬಾಂಶಕಾ ಜೀವಾಃ ಪ್ರಾದುರ್ಭಾವಾಃ ಪರೇ ಸ್ಮೃತಾಃ ।**
**ಪ್ರತಿಬಿಂಬೇಷ್ವಲ್ಪಸಾಮ್ಯಂ ಸ್ವರೂಪಾಣೀತರಾಣಿ ತು ॥**

ಪರಮಾತ್ಮನಿಗೆ ಪ್ರತಿಬಿಂಬಾಂಶ ಮತ್ತು ಸ್ವರೂಪಾಂಶ ಎಂದು ಎರಡು ಅಂಶಗಳು ಇವೆ. ಜೀವರು ಪ್ರತಿಬಿಂಬಾಂಶರಾಗಿದ್ದಾರೆ. ಪರಮಾತ್ಮನ ರಾಮ-ಕೃಷ್ಣಾದಿ ಪ್ರಾದುರ್ಭಾವಗಳು ಸ್ವರೂಪಾಂಶವಾಗಿವೆ. ಪ್ರತಿಬಿಂಬಾಂಶರಾದ ಜೀವರು ಅತ್ಯಲ್ಪಾಂಶರಾಗಿದ್ದಾರೆ ಎಂದು ತಿಳಿಯಬೇಕು. ರಾಮ-ಕೃಷ್ಣಾದಿಗಳು ಸ್ವರೂಪವಾಗಿವೆ ಎಂಬುದಾಗಿ ತಿಳಿಯಬೇಕು.

ಇಲ್ಲಿ ನಾಮ-ರೂಪಗಳನ್ನು ಹೇಳಿದ್ದಾರೆ. ಆದರೆ ಪ್ರಕೃತಿಯನ್ನು ಹೇಳಿಲ್ಲ ಎಂಬ ಶಂಕೆಗೆ ಅವಕಾಶವಿಲ್ಲ. ಯಾಕೆಂದರೆ ನಾಮ-ರೂಪಗಳು ಕಾರ್ಯವಾಗಿವೆ. ಇವುಗಳಿಗೆ ಪ್ರಕೃತಿಯು ಉಪಾದಾನಕಾರಣವಾಗಿದೆ. ಕಾರ್ಯವನ್ನು ಗ್ರಹಣ ಮಾಡಿದ ಮೇಲೆ ಕಾರ್ಯವನ್ನು ಕೂಡಾ ಗ್ರಹಣ ಮಾಡಿದಂತೆಯೇ ಎಂದು ತಿಳಿಯಬೇಕು. ಆದ್ದರಿಂದ ಪ್ರಕೃತಿಯನ್ನು ಪ್ರತ್ಯೇಕವಾಗಿ ಹೇಳಿಯೂ ಇಲ್ಲ. ಮತ್ತು ಚಶಬ್ದದಿಂದ ಉಪಲಕ್ಷಣಾನೂ ಮಾಡಿಲ್ಲ ಎಂದು ತಿಳಿಯಬೇಕು.

ಬ್ರಹ್ಮಾದಿಗಳು ಎಲ್ಲರೂ ಸಮರ್ಥರಲ್ಲ. ಆದ್ದರಿಂದ ಭಗವಂತನ ಅಭಿನ್ನಾಂಶರಲ್ಲ ಎಂಬುದನ್ನು ಚರಾಚರಾಃ ಎಂಬ ಪದದಿಂದ ತಿಳಿಸುತ್ತಿದ್ದಾರೆ. ಚರಂತಿ ಅಂದರೆ ಸಾಮಾನ್ಯವಾಗಿ ತಿಳಿಯುತ್ತಾರೆ. ಏನ ಭಗವತಾ ಚರಂತಿ ಅನಾಮಕನಾದ ಭಗವಂತನ ಆಜ್ಞೆಯಿಂದ ಸಂಚರಿಸುತ್ತಾರೆ. ಆದ್ದರಿಂದ ಬ್ರಹ್ಮಾದಿಗಳು ಚರಾಚರರೆನಿಸಿದ್ದಾರೆ. ಅಂದ

ಮೇಲೆ ಅವರು ಸಮರ್ಥರಲ್ಲ. ಆದ್ದರಿಂದ ಭಗವಂತನ ಅಭಿನ್ನಾಂಶರಲ್ಲ ಎಂದು ಸಿದ್ಧವಾಗುತ್ತದೆ.

ಬ್ರಹ್ಮಾದಿದೇವತೆಗಳು, ವೇದಗಳು, ಚರಾಚರಲೋಕಗಳು ನಾಮರೂಪವಿಭೇದೇನ **ಕಲಯಾ** ಸಾಕ್ಷಾತ್ ಪರಮಾತ್ಮನ ಅಂಶದಿಂದ **ಕೃತಾಃ** ಮತ್ಸ್ಯಾದಿಗಳಂತೆ ಆವಿರ್ಭೂತವಾಗಿವೆ ಎಂಬ ವಾದವು **ಜಲ್ಪ್ಯಂ** ಅನ್ಯಥಾಜ್ಞಾನಹೇತುವಾಚಾ ಚ ಭ್ರಾಂತಿಮೂಲಕವಾದ ಮಾತಿನಿಂದ ದುಶ್ಶಾಸ್ತ್ರದಿಂದ ಹೊರಟದ್ದು ಎಂದು ಭಾವ. ''ಜಲ್ಪ್ಯಂ ವೃತ್ತಂ...'' ಎಂಬುದನ್ನು ವ್ಯಾಖ್ಯಾನ ಮಾಡುವಾಗ ದ್ವಿತೀಯತಾತ್ಪರ್ಯದಲ್ಲಿ ''ಅನ್ಯಥಾಜ್ಞಾನಹೇತುರ್ಯಾ ವಾಕ್ ಸಾ ಜಲ್ಪಿಃ ಪ್ರಕೀರ್ತಿತಾ'' ಇತಿ ತಂತ್ರಮಾಲಾಯಂ ಎಂದು ಹೇಳಿದೆ. ಅನ್ಯಥಾಜ್ಞಾನಕ್ಕೆ ಹೇತುವಾದ ಮಾತಿಗೆ ಜಲ್ಪಿ ಎಂದು ಕರೆಯುತ್ತಾರೆ. ಇದು ತಂತ್ರಮಾಲಾ ಹೇಳುವ ಅರ್ಥವೆಂದು ಶ್ರೀಮದಾಚಾರ್ಯರು ತೋರಿಸುತ್ತಾರೆ. ।।೨೦।।

ಭಗವಂತನ ಸೃಷ್ಟಿಯ ಮಾಹಾತ್ಮ್ಯವನ್ನೇ ದೃಷ್ಟಾಂತದಿಂದ ವಿಶದಪಡಿಸುವರು. ಲಯಪ್ರಕಾರವನ್ನೂ ಹೇಳುವರು.

**ಯಥಾಽರ್ಚಿಷೋಽಗ್ನೇಃ ಸವಿತುರ್ಗಭಸ್ತಯೋ**
**ನಿರ್ಯಾಂತಿ ಸಂಯಾಂತ್ಯಸಕೃತ್ ಸ್ವರೋಚಿಷಃ ।**
**ತಥಾ ಯತೋಽಯಂ ಗುಣಸಂಪ್ರವಾಹೋ**
**ಬುದ್ಧಿರ್ಮನಃ ಖಾನಿ ಶರೀರಸರ್ಗಃ** **।।೨೦।।**

**ಯಥಾ** ಹೇಗೆ **ಅಗ್ನೇಃ** ಬೆಂಕಿಯಿಂದ **ಸ್ವರೋಚಿಷಃ** ಪ್ರಕಾಶಮಾನಗಳಾದ **ಅರ್ಚಿಷಃ** ಜ್ವಾಲೆಗಳು **ಸವಿತುಃ** ಸೂರ್ಯನಿಂದ **ಗಭಸ್ತಯಃ** ಕಿರಣಗಳು **ಅಸಕೃತ್** ಮತ್ತೆ ಮತ್ತೆ **ನಿರ್ಯಾಂತಿ** ಹೊರಡುವವೋ **ಸಂಯಾಂತಿ** ಮತ್ತೆ ಸೇರುವವೋ **ತಥಾ** ಹಾಗೆ **ಯತಃ** ಯಾವ ನಾರಾಯಣನಿಂದ **ಅಯಂ** ಈ **ಬುದ್ಧಿಃ** ಬುದ್ಧಿಯು **ಮನಃ** ಮನಸ್ಸು **ಖಾನಿ** ಇಂದ್ರಿಯಗಳು **ಶರೀರಸರ್ಗಃ** ಇವುಗಳ ಅಭಿಮಾನಿಗಳ ಸೃಷ್ಟಿರೂಪವಾದ **ಗುಣಸಂಪ್ರವಾಹಃ** ಪ್ರಾಕೃತಸತ್ವಾದಿಗುಣಗಳ ಸಂತತ ಕಾರ್ಯರೂಪ ಪ್ರವಾಹವು **ಭವತಿ** ಆಗುವದೋ **ತಂ ಈಡೇ** ಅಂಥ ಪರಮಾತ್ಮನನ್ನು ಸ್ತುತಿಸುತ್ತೇನೆ. ಎಂದು ಹಿಂದಿನ ಶ್ಲೋಕದಿಂದ ಅನ್ವಯ.

ಗುಣಸಂಪ್ರವಾಹದ ವಿವರಣೆಯೇ ಬುದ್ಧಿ ಮೊದಲಾದವು. ಇದರಿಂದ ಜಗತ್ತು ಪ್ರವಾಹತಃ ನಿತ್ಯವೆಂದು ತಿಳಿಸಿರುವರು. ।।೨೧।।

ಪರಮಾತ್ಮ ಇಂಥವನೇ ಎಂದು ನಿರ್ಧಾರಪೂರ್ವಕವಾಗಿ ಹೇಳಲಾಗುವುದಿಲ್ಲ. ಅವನು ಎಲ್ಲರಿಗಿಂತಲೂ ವಿಲಕ್ಷಣ. ಇಷ್ಟು ಮಾತ್ರ ಸತ್ಯ. ಈ ವೈಲಕ್ಷಣ್ಯವನ್ನು ಪ್ರತಿಪಾದಿಸುತ್ತ ಸ್ತುತಿಸಿ ಗಜೇಂದ್ರನು ತನ್ನ ಅಭೀಷ್ಟವನ್ನು ಪ್ರಾರ್ಥಿಸುವನು-

**ಸ ವೈ ನ ದೇವಾಸುರಮರ್ತ್ಯತಿರ್ಯಙ್**
**ನ ಸ್ತ್ರೀ ನ ಷಂಢೋ ನ ಪುಮಾನ್ ನ ಜಂತುಃ ।**
**ನಾಯಂ ಗುಣಃ ಕರ್ಮ ನ ಸನ್ ನ ಚಾಸನ್**
**ನಿಷೇಧಶೇಷೋ ಜಯತಾದಶೇಷಃ** ॥೨೨॥

**ಯಃ** ಯಾವನು ಬ್ರಹ್ಮಾದಿಕರ್ತೃವೋ **ಸಃ** ಅವನು **ದೇವ ಏವ ನ** ದೇವತೆಯೇ ಅಲ್ಲ **ಅಸುರಸ್ತು** ಅಸುರನಂತೂ **ನ** ಸರ್ವಥಾ ಅಲ್ಲ **ಮರ್ತ್ಯಃ ಏವ ನ** ಮನುಷ್ಯನೇ ಅಲ್ಲ **ತಿರ್ಯಕ್ ನ** ಪಶು ಮುಂತಾದವುಗಳಲ್ಲ. **ನ ಸ್ತ್ರೀ** ಹೆಣ್ಣಲ್ಲ **ಷಂಢಃ ನ** ಸರ್ವಥಾ ನಪುಂಸಕನಲ್ಲ ಈ ರೂಪ ಪರಮಾತ್ಮನಿಗೆ ಇಲ್ಲ. **ನ ಪುಮಾನ್** ಪುರುಷನು ಅಲ್ಲ ಅಂದರೆ ನಿಯಮಿತವಾಗಿ ಸ್ತ್ರೀರೂಪವುಳ್ಳವನಲ್ಲ ಸ್ತ್ರೀಧರ್ಮವಾದ ಪುರುಷಾಪೇಕ್ಷೆ ಇಲ್ಲದವನೆಂದರ್ಥ. ಪುರುಷಧರ್ಮವಾದ ಸ್ತ್ರೀ ಅಪೇಕ್ಷೇ ಇಲ್ಲದವನೆಂದರ್ಥ. ಶಾಪಾದಿಗಳಿಂದ ಪುರುಷತ್ವ ಕಳೆದುಕೊಳ್ಳುವ ಪುರುಷನೂ ಅಲ್ಲ. **ಜಂತುಃ ನ** ಚೇತನನಲ್ಲ, ಕ್ರಿಮಿ ಮುಂತಾದ ಪ್ರಾಣಿಮಾತ್ರನಲ್ಲ **ಅಯಂ** ಇವನು **ಗುಣಃ** ರೂಪಾದಿಗುಣಗಳಾಗಲಿ **ಕರ್ಮ** ಪರಿಸ್ಪಂದರೂಪವಾದ ಕ್ರಿಯೆಯಾಗಲಿ **ನ** ಅಲ್ಲ. **ಸತ್** ಪೃಥವೀ-ಅಪ-ತೇಜಸ್ಸು **ನ** ಅಲ್ಲ **ಅಸತ್** ವಾಯು-ಆಕಾಶಗಳಲ್ಲ. ''ಮೂರ್ತಂ ಸದಿತಿ ಸಂಪ್ರೋಕ್ತಮಮೂರ್ತಮಸದುಚ್ಯತೇ । ಮೂರ್ತಾಮೂರ್ತೇತರದ್ಬ್ರಹ್ಮ ನ ಸತ್ತನಾಸದುಚ್ಯತೇ'' ಎಂದು ಇದೆ. ಹಾಗಾದರೆ ಅವನು ಶೂನ್ಯಪ್ರಾಯನೇ ಎಂದರೆ ಅದರ ಅಭಿಪ್ರಾಯ ಹೇಳುವರು. **ನಿಷೇಧಶೇಷಃ** ನಿಷೇಧೇನ ಶಿಷ್ಯತೇ ಇತಿ ನಿಷೇಧಶೇಷಃ ಸರ್ವವಿಲಕ್ಷಣನೆಂದರ್ಥ. ''ಸ ಏಷ ಆತ್ಮಾ ನೇತಿ ನೇತಿ'' ಮುಂತಾಗಿ ಶ್ರುತಿ ಇದೆ. ಶೇಷ ಅಂದರೆ ಅಪ್ರಧಾನ ಎಂದು ಯಾಕಾಬಾರದು ಎಂದರೆ ಅಶೇಷಃ ಸ್ವಪ್ರಧಾನ ಎಂದರ್ಥ. ಅಂದರೆ ಪರಿಪೂರ್ಣನು ಎಂದು ಅರ್ಥ. ಅಂಥ ಪರಮಾತ್ಮ **ಜಯತಾತ್** ನನ್ನ ಅನಿಷ್ಟವನ್ನು ಪರಿಸಹರಿಸಿ ಉತ್ಕೃಷ್ಟನಾಗಿ ಇರಲಿ. ॥೨೨॥

ಸತ್ಯ :- ಇಂಥ ಪರಮಾತ್ಮ ನಾರಾಯಣನೇ ಹೊರತು ಬೇರಾರೂ ಅಲ್ಲವೆಂದೂ ಹೇಳುವರು. ಇಲ್ಲಿ ನದೇ ವಾಸುಃ ಎಂದು ಪದಚ್ಛೇದ ಮಾಡಿಕೊಂಡು ಅರ್ಥವನ್ನು ಹೀಗೆ ತಿಳಿಯಬೇಕು. **ನದೇ** ಸಮುದ್ರದಲ್ಲಿ **ವಾಸುಃ** ವಸತೀತಿ ವಾಸುಃ ವಾಸಿಸುವವನು ಎಂದರ್ಥ. ಅಂತೂ ನದೇ ವಾಸುಃ ಎಂದರೆ ಸಮುದ್ರದಲ್ಲಿ ವಾಸಮಾಡುವ ನಾರಾಯಣ ಎಂಬ ಅರ್ಥವು ಬರುತ್ತದೆ.

♦ ಮುಂದೆ ಅಮರ್ತ್ಯತಿರ್ಯಙ್ ಎಂದು ಪದಚ್ಛೇದ ಮಾಡಿಕೊಳ್ಳಬೇಕು. ಈ ವಿಷಯದಲ್ಲಿ ಹೀಗೆ ಪ್ರಮಾಣಗಳಿವೆ. ''ಸರ್ವತ್ರಾಸೌ ಸಮಸ್ತಂ ಚ ವಸತ್ಯತ್ರೇತಿ ವೈ ಯತಃ । ತತೋಽಸೌ ವಾಸುದೇವೇತಿ ವಿದ್ವದ್ಭಿಃ ಪರಿಗೀಯತೇ'' ಎಂದು ವಿಷ್ಣುಪುರಾಣವಿದೆ. ''ವಾಸನಾದ್ವಾಸದೇವೋಽಸಿ ವಾಸಿತಂ ತೇ ಜಗತ್ತ್ರಯಮ್ । ಸರ್ವಭೂತನಿವಾಸೋಽಸಿ ವಾಸುದೇವ ನಮೋಽಸ್ತು ತೇ'' ಎಂದೂ ಇದೆ.

ಈ ಪಕ್ಷದಲ್ಲಿ ಅಮರ್ತ್ಯಪದದಿಂದಲೇ ಪೂರ್ವಪೂರ್ವದೇವತೆಗಳನ್ನು ಸ್ವೀಕರಿಸುವದರಿಂದ ನ್ಯೂನತೆ ಇಲ್ಲವೆಂದು ತಿಳಿಯಬೇಕು.

♦ ಅಥವಾ ನದೇವಾಸುಃ ಎಂಬುದು ಒಂದೇ ಪದ ಎಂದು ಮಾಡಿಕೊಳ್ಳಬೇಕು. ಆವಾಗ ಒಬ್ಬನೇ ಸಮುದ್ರವಾಸಿಯಲ್ಲ ಕಿಂತು ಲಕ್ಷ್ಮೀಸಹಿತನಾಗಿ ವಾಸವಾಗಿದ್ದಾನೆ ಎಂಬ ಅರ್ಥವೂ ಬರುತ್ತದೆ. **ನದೇ** ಸಮುದ್ರದಲ್ಲಿ **ಯಾ** (ಲಕ್ಷ್ಮೀವಾಚಕವಾದ ಈ ಶಬ್ದದ ತೃತೀಯಾವಿಭಕ್ತಿ ಯಾ ಎಂದು ಆಗುತ್ತದೆ.) ರಮೆಯಿಂದ ಸಹಿತನಾಗಿ ವಸತೀತಿ ನದೇವಾಸುಃ.

♦ ನಶ್ಚಾಸೌ ದೇ ಚಾಸೌ ವಾ ಚಾಸೌ ಸುಶ್ಚ ನದೇವಾಸುಃ ಎಂದು ಮಾಡಿಕೊಳ್ಳಬೇಕು. **ನ** ಎಂದರೆ ನಿಯಾಮಕ ಎಂದು ಅರ್ಥ. **ದೇ** ಎಂದರೆ ದಾತಾ ದಾನ ಮಾಡುವವನು ಎಂದು ಅರ್ಥ. **ವಾ** ಎಂದರೆ ಜ್ಞಾನಸ್ವರೂಪಿ ಎಂದು ಅರ್ಥ. **ಸು** ಎಂದರೆ ಸುಖರೂಪಿ ಎಂದು ಅರ್ಥ. ನಿಯಾಮಕನಾದ, ದಾತೃವಾದ, ಜ್ಞಾನರೂಪನಾದ, ಸುಖರೂಪನಾದ ಪರಮಾತ್ಮ ಎಂದು ನದೇವಾಸುಃ ಎಂಬ ಪದದ ಅರ್ಥ ಎಂದು ತಿಳಿಯಬೇಕು.

ಕರ್ಮನಿರ್ಣಯಭಾಷ್ಯಟೀಕಾಗಳಲ್ಲಿ ''ವಾನಾತ್ತುಸ್ತೇರ್ದೇವನಾದ್ವಾಸುದೇವೋ ವಾಸಾದ್ ದ್ಯುತೇಶ್ಛಾದನಾತ್ ಕ್ರೀಡಯಾ ವಾ । ಬಲಾದಸುತ್ವಾದ್ದಾತೃತೋ ವರ್ತನಾಚ್ಚ ತಂ ವಾಸುದೇವಂ ಪ್ರವದಂತಿ ವೇದಾಃ'' ಇತಿ ಸೌಕರಾಯಣ ಶ್ರುತಿ ಇದೆ.

ಭಗವಂತ ದೇವ ಅಲ್ಲ ಎಂದು ಹೇಳಿದರು. ಆದರೆ ವಿಷ್ಣುಮುಖಾ ವೈ ದೇವಾಃ ಎಂಬಲ್ಲಿ ಮತ್ತು ಸುರಋಷಭಾಯ ಎಂಬಲ್ಲಿ ವಿಷ್ಣುವಿಗೆ ದೇವತ್ವವು ಉಕ್ತವಾಗಿದೆ. ಅದರ ವಿರೋಧ ಬರುತ್ತದೆ. ಈ ವಿರೋಧವನ್ನು ಹೀಗೆ ಪರಿಹರಿಸಿಕೊಳ್ಳಬೇಕು.

ಕೆಲವು ಮನುಷ್ಯರಿಗೆ ಕರ್ಮದಿಂದ ದೇವತ್ವವು ಪ್ರಾಪ್ತವಾಗುತ್ತದೆ. ಹಾಗೆ ದೇವರಿಗೆ ದೇವತ್ವವು ಪ್ರಾಪ್ತವಾಗಿಲ್ಲ ಎಂಬುದನ್ನು ತಿಳಿಯಬೇಕು. ಮತ್ತು ಅಸುರಜಾತಿಯ ರಾಹುವಿನ ಶಿರಸ್ಸಿಗೆ ಅಮೃತದ ಸಂಬಂಧವಾಗಿ ನವಗ್ರಹಗಳಲ್ಲಿ ಒಂದು ದೇವತೆ ಎಂದಾಯಿತು. ಹೀಗೂ ವಿಷ್ಣುವಿಗೆ ದೇವತ್ವ ಬಂದದ್ದಲ್ಲ ಎಂದು ತಿಳಿಯಬೇಕು. ಅದನ್ನು ತಿಳಿಸಲು ವಿಷ್ಣು ದೇವತೆಯಲ್ಲ ಎಂದು ಹೇಳಿದ್ದು. ಹೊರತು ದೇವತ್ವವು ಸರ್ವಥಾ ಇಲ್ಲ ಎಂಬ ಅಭಿಪ್ರಾಯದಿಂದ ಹೀಗೆ ಹೇಳಿದ್ದಲ್ಲವೆಂದು ತಿಳಿಯಬೇಕು.

ಇದರಂತೆ ಶ್ರುತ್ಯಾದಿಗಳಲ್ಲಿ ಶ್ರೀಹರಿಗೆ ಅಸುರತ್ವವನ್ನು ಎಲ್ಲಿಯೂ ಹೇಳಿಲ್ಲ. ಆದ್ದರಿಂದ ಅಸುರತ್ವ ಇಲ್ಲವೆಂದೇ ತಿಳಿಯಬೇಕು. ಮತ್ತು ಪುರುಷನಲ್ಲ ಎಂದರೆ ಪುರುಷತ್ವವಿಲ್ಲ ಎಂದು ಅರ್ಥವಲ್ಲ. ಕಿಂತು ಸ್ವರೂಪತಃ ಪುರುಷನಾದವನು ದುಷ್ಕರ್ಮಗಳಿಂದ ಪ್ರಾಪ್ಯವಾದ ಸ್ತ್ರೀತ್ವ-ಷಂಢತ್ವಸಮಾನಾಧಿಕರಣವಾದ ಪುರುಷತ್ವವು ಇಲ್ಲ ಎಂಬ

ಅಭಿಪ್ರಾಯದಿಂದಲೇ ಹೇಳಿದ್ದು ಎಂಬುದಾಗಿಯೂ ತಿಳಿಯಬೇಕು. ಪರಮಾತ್ಮ ಪುರುಷನೇ ಅಲ್ಲವೆಂದು ಹೇಳಿದರೆ ಸಹಸ್ರಶೀರ್ಷಾ ಪುರುಷಃ ಉತ್ತಮಃ ಪುರುಷಸ್ತ್ವನ್ಯಃ ಮುಂತಾದ ಶ್ರುತಿವಿರೋಧವು ಬರುತ್ತದೆ. ।।೨೨।।

ಸತ್ಯ- ಗಜೇಂದ್ರನು ತನ್ನ ಅಭಿಪ್ರಾಯವನ್ನು ಪ್ರಕಟಗೊಳಿಸುತ್ತಿದ್ದಾನೆ- ಜ್ಞಾನಸಾಧನವಲ್ಲದ ಈ ಶರೀರವನ್ನು ಬಹುಕಾಲ ರಕ್ಷಿಸಿ ಎನು ಪ್ರಯೋಜನವೆಂಬ ಅಭಿಪ್ರಾಯದಿಂದ ಹೇಳುತ್ತಾನೆ-

**ಜಿಜೀವಿಷೇ ನಾಹಮಿಹಾಮುಯಾ ಕಿ-**
**ಮಂತರ್ಬಹಿಶ್ಚಾವೃತಯೇಭಯೋನ್ಯಾ ।**
**ಇಚ್ಛಾಮಿ ಕಾಲೇನ ನ ಯಸ್ಯ ವಿಪ್ಲವಸ್ತ-**
**ಸ್ಯಾತ್ಮಲೋಕಾವರಣಸ್ಯ ಮೋಕ್ಷಣಮ್** ।।೨೩।।

**ಅಹಂ** ನಾನು **ಇಹ** ಈ ಶರೀರದಲ್ಲಿ **ಅಂತರ್ಬಹಿಶ್ಚ** ಒಳಗೂ ಹೊರಗೂ **ಆವೃತಯಾ** ಅಜ್ಞಾನದಿಂದ ಕೂಡಿದ **ಅಮುಯಾ** ಈ **ಇಭಯೋನ್ಯಾ** ಆನೆಯ ಜನ್ಮಕ್ಕೆ ಕಾರಣವಾದ ಪ್ರಕೃತಿಯಿಂದ **ಕಿಂ** ಏನು ಪ್ರಯೋಜನ ಏನೂ ಇಲ್ಲ. ಈ ಕಾರಣದಿಂದ **ಇಹ** ಈ ದೇಹದಲ್ಲಿ **ಚಿರಂ** ಬಹುಕಾಲ **ನ ಜಿಜೀವಿಷೇ** ಬದುಕಲು ಇಚ್ಛಿಸುವದಿಲ್ಲ. ಆನೆಯ ಜನ್ಮಕ್ಕೆ ಕಾರಣವಾದ ಕರ್ಮವು ನಾಶವಾದರೆ ತಾನಾಗಿಯೇ ಆನೆಯ ಶರೀರವು ಹೋಗುವದು. ಆದ್ದರಿಂದ ಬದುಕಲು ಇಚ್ಛಿಸುವದಿಲ್ಲವೆಂದು ಪ್ರಾರ್ಥಿಸಬೇಕಿಲ್ಲವಲ್ಲ. ಎಂದರೆ ಕೇವಲ ಈ ಶರೀರನಾಶವಲ್ಲ ಲಿಂಗಶರೀರನಾಶವನ್ನೇ ಪ್ರಾರ್ಥಿಸುತ್ತೇನೆ. ಎನ್ನುತ್ತಾನೆ ಗಜೇಂದ್ರ. **ಯಸ್ಯ** ಯಾವನ ಶರೀರಕ್ಕೆ **ಕಾಲೇನ** ಕೇವಲ ಕಾಲಕ್ರಮದಿಂದ **ವಿಪ್ಲವಃ** ನಾಶವು **ನ** ಇಲ್ಲವೋ **ತಸ್ಯ** ಅಂತಹ **ಆತ್ಮಲೋಕಾವರಣಸ್ಯ** ಆತ್ಮತ್ರಾಣಕ್ಕೆ ಆವರಕವಾದ ಲಿಂಗಶರೀರದ **ಮೋಕ್ಷಣಂ** ನಾಶವನ್ನು **ಇಚ್ಛಾಮಿ** ಅಪೇಕ್ಷಿಸುತ್ತೇನೆ ಪರಮಾತ್ಮನ ಜ್ಞಾನವಿಲ್ಲದೇ ಲಿಂಗಶರೀರ ನಾಶವಿಲ್ಲ ಆತ್ಮಜ್ಞಾನದಿಂದಲೇ ಲಿಂಗಶರೀರನಾಶ ಎಂದು ಹೇಳಿದಂತಾಯಿತು. ''ತಸ್ಮಿನ್ ದೃಷ್ಟೇ ಪರಾವರೇ'' ಎಂಬ ಶ್ರುತಿಯು ಆತ್ಮಜ್ಞಾನದಿಂದ ಹೃದಯಗ್ರಂಥಿ (ಲಿಂಗಶರೀರವನ್ನು) ನಾಶವನ್ನು ಹೇಳುವದು. **ಅಹಂ** ನಾನು **ಇಹ** ಈ ಅವಸ್ಥೆಯಲ್ಲಿ **ಅಮುಯಾ ಇಭಯೋನ್ಯಾ** ಈ ಆನೆಯ ಜನ್ಮದಿಂದ **ಕಿಂ** ಏನು ಪ್ರಯೋಜನ. ಏನೂ ಪ್ರಯೋಜನವಿಲ್ಲ. ಅದಕ್ಕಾಗಿ **ನ ಜಿಜೀವಿಷೇ** ಬದುಕಲು ಇಚ್ಛಿಸುವದಿಲ್ಲ. ಏಕೆ ಪ್ರಯೋಜನವಿಲ್ಲ ಎಂದರೆ ಹೇಳುವನು **ಅಂತರ್ಬಹಿಶ್ಚ ಆವೃತಯಾ** ತಿರ್ಯಗ್ ಜನ್ಮವಾದ್ದರಿಂದ ಜ್ಞಾನಹೀನವಾದುದರಿಂದ ಆವೃತವಾದದ್ದರಿಂದ, ತನ್ನ ಅಹಂಕಾರ ಶಾಂತಿಗಾಗಿ ಅಥವಾ ಜೀವಸ್ವರೂಪ ಹೇಳುವದಕ್ಕಾಗಿಯೋ ಇದನ್ನು ಹೇಳಿದ್ದು. ಇದು ತುಚ್ಛವಾದ್ದರಿಂದ ಇಚ್ಛಿಸುವದಿಲ್ಲವಾದರೆ ಏನನ್ನು ಇಚ್ಛಿಸುವಿ ಎಂದರೆ ಹೇಳುವನು. **ಕಾಲೇನ** ಕೇವಲಕಾಲದಿಂದ **ಯಸ್ಯ** ಯಾವ

ಲಿಂಗಶರೀರದ **ವಿಪ್ಲವಃ** ನಾಶವು ನ ಇಲ್ಲವೋ **ತಸ್ಯ** ಆ **ಆತ್ಮಲೋಕಾವರಣಸ್ಯ** ಜೀವನ ಸ್ವರೂಪಕ್ಕೆ ಆವರಕವಾದ ಲಿಂಗದೇಹದ **ಮೋಕ್ಷಣಂ** ಭಂಗವನ್ನು **ಇಚ್ಛಾಮಿ** ಇಚ್ಛಿಸುವೆನು. ಕೇವಲ ಕಾಲದಿಂದ ಲಿಂಗದೇಹಭಂಗವಾಗುವದಿಲ್ಲವಾದರೆ ಯಾವುದರಿಂದ ಆಗುವದು. ಎಂದರೆ ಅದನ್ನೂ ಕಾಲೇನ ಎಂಬುದರಿಂದಲೇ ಹೇಳುವನು. **ಕಾಲೇನ** ಜ್ಞಾನದಿಂದ ಎಂದು ಅರ್ಥ. ''ಕಲ ಜ್ಞಾನೇ'' ಎಂದು ಧಾತುವಿದೆ. **ಆತ್ಮಲೋಕೇ** ಸ್ವಪ್ರಕಾಶನಾದ ಶ್ರೀಹರಿಯ ವಿಷಯದಲ್ಲಿ ಅಥವಾ ಆತ್ಮನಿ ಲೋಕಾಃ ಯಸ್ಯ ಇತಿ ವಾ ತನ್ನಲ್ಲಿ ಎಲ್ಲ ಲೋಕವನ್ನಿಟ್ಟು ಕೊಂಡವ ಎಂದರ್ಥ. **ನಯಸ್ಯ** ನೀತಿಯ **ವಿಪ್ಲವಃ** ಅನತಿಕ್ರಮಣವು ಎಂದು ಅರ್ಥ. ಪ್ಲವಃ ಅತಿಕ್ರಮವು ಸಃ ನ ಇತಿ ವಿಪ್ಲವಃ ಅನತಿಲಂಘನ ಅಂದರೆ ನೀತಿಯನ್ನು ಬಿಡದಿರುವದು ಎಂದು ಅರ್ಥ.

ಸತ್ಯ ಃ- **ಆವರಣಸ್ಯ** ಮತ್ತೆ ಇದನ್ನು ಕೊಡು ಕೇಳುವುದರ ಮೋಕ್ಷಣಂ ತ್ಯಾಗವು ತಂ ಕಾಲಂ ಆ ಜ್ಞಾನವನ್ನು ಇಚ್ಛಾಮಿ ನೀತಿಯನ್ನು ಬಿಡದಿರುವ ಏನನ್ನೂ ಬೇಡಬಾರದೆಂಬ ಜ್ಞಾನವನ್ನೂ ಕೊಡು ಎಂದು ಅರ್ಥ.

♦ ಪ್ಲುಙ್ ಗತೌ ಎಂಬ ಕ್ರಿಯಾಪದಕ್ಕೆ ಪಚಾದ್ಯಚ್ ಎಂಬುದರಿಂದ ಅಚ್ ಪ್ರತ್ಯಯ ಮಾಡಿದಾಗ ಪ್ಲವ ಎಂಬ ಪದವು ನಿಷ್ಪನ್ನವಾಗುತ್ತದೆ. ''ಪ್ಲವಃ ಪ್ಲಕ್ಷೇ ಪ್ಲುತೌ ಕಪೌ ಕ್ರಮಾನ್ನಿಮ್ನಮಹೀಭಾಗೇ ವಿಕ್ರಮೇ ಜಲವಾಯಸೇ'' ಪ್ಲವ ಎಂಬ ಶಬ್ದಕ್ಕೆ ಹೈಮಕೋಶದಲ್ಲಿ ಪ್ಲುತಿ ಅಂದರೆ ಅತಿಕ್ರಮಣ ಎಂಬ ಅರ್ಥವು ಇದೆ.

♦ **ಹೇ ಇಭ** ಯಾ ರಮಯಾ ಭಾತೀತಿ ತತ್ಸಂಬುದ್ಧಿಃ ಇಭ ರಮಾದೇವಿಯೊಡನೆ ಪ್ರಕಾಶಿಸುವವನೇ ಎಂದು ಅರ್ಥ. ಭಾ ದೀಪ್ತೌ ಎಂಬ ಧಾತುವಿಗೆ ''ಅನ್ಯೇಷ್ವಪಿ ದೃಶ್ಯತೇ'' (ಸಿ.ಕೌ.೩೦೧೧) ಎಂಬ ಸೂತ್ರದಿಂದ ಡಪ್ರತ್ಯಯ ಬಂದು ಇಭ ಎಂಬ ರೂಪವು ಸಿದ್ಧವಾಗುತ್ತದೆ. ಅಥವಾ ಭೃಞ್ ಧಾತುವಿಗೆ ಡಪ್ರತ್ಯಯ ಬಂದಾಗ ಭ ಎಂಬ ರೂಪವು ಸಿದ್ಧವಾಗುತ್ತದೆ. ಈ ಪಕ್ಷದಲ್ಲಿ ಈಂ ಬಿಭರ್ತಿ ಇತಿ ಇಭಃ ಎಂದು ಅರ್ಥವನ್ನು ಹೇಳಬೇಕು. ಅಂದರೆ ಈಂ ಲಕ್ಷ್ಮೀದೇವಿಯನ್ನು ಬಿಭರ್ತಿ ವಕ್ಷಃಸ್ಥಳದಲ್ಲಿ ಧರಿಸಿದ ಪರಮಾತ್ಮ ಎಂದು ಅರ್ಥವಾಗುತ್ತದೆ.

♦ **ಅತಃ** ದುರ್ಮರಣವಾಗದಿರಲು, ಆದ್ದರಿಂದ **ಆತ್ಮಲೋಕ** ಶ್ರೀಹರಿಯೇ **ರಣಸ್ಯ** ನೀರಿನಲ್ಲಿ ಮುಳುಗಿದ ಜಲಜಂತುವಾದ ಮೊಸಳೆಯ ಯುದ್ಧದ **ಮೋಕ್ಷಣಂ ಚ** ಬಿಡುಗಡೆಯನ್ನು **ಇಚ್ಛಾಮಿ** ಇಚ್ಛಿಸುವೆನು. **ಅತಃ** ಆದ್ದರಿಂದ **ಅಂತಃ ಬಹಿಃ** ಒಳಗೂ ಹೊರಗೂ **ಅವ** ರಕ್ಷಿಸು. ಎಂದೂ ಅನ್ವಯ ಮಾಡಿಕೊಳ್ಳಬಹುದು.

♦ ಅನಂತರ ಹೇ ಅನಂತನೇ ನಾನು ಇದನ್ನು ಇಚ್ಛಿಸುವೆನು ಎಂದೂ ಹೇಳುವನು. **ಕಾಲೇನ** ಕಾಲನಾಮಕನಾದ ನಿನ್ನಿಂದ **ಆವರಣಸ್ಯ ಮೋಕ್ಷಣಂ ಇಚ್ಛಾಮಿ** ಕಾಮನೆಯ

ತ್ಯಾಗವನ್ನು ಅರ್ಥಾತ್ ನಿಷ್ಕಾಮತ್ವನ್ನು ಇಚ್ಛಿಸುವೆನು. ಜಿಜೀವಿಷೇ ಎಂದು ಆತ್ಮನೇಪದ ಪ್ರಯೋಗವು ಛಾಂದಸವೆಂದು ತಿಳಿಯಬೇಕು.

♦ ಅಥವಾ ಅಹಂ ಎಂಬುದಕ್ಕೆ ಇಚ್ಛಾಮಿ ಎಂಬುದರಿಂದ ಅನ್ವಯ. ಜಿಜೀವಿಷಾ ಇನ ಎಂದು ಪದಚ್ಛೇದ ಮಾಡಿಕೊಳ್ಳಬೇಕು. **ಹೇ ಇನ** ಎಲೋ ಸ್ವಾಮಿಯೇ **ಯಸ್ಯ** ಯಾವ ನನಗೆ **ಜಿಜೀವಿಷಾ** ಜಿವನೇಚ್ಛೆಯು **ನ** ಇಲ್ಲವೆಂದರ್ಥ. ''ಭಿದ್ಯತೇ ಹೃದಯಗ್ರಂಥಿಶ್ಛಿದ್ಯಂತೇ ಸರ್ವಸಂಶಯಾಃ ಕ್ಷೀಯಂತೇ ಚಾಽಸ್ಯ ಕರ್ಮಾಣಿ ತಸ್ಮಿನ್ ದೃಷ್ಟೇ ಪರಾವರೇ'' ಎಂದಿರುವದರಿಂದ ಜ್ಞಾನಪ್ರಾರ್ಥನೆಯು ಆವಶ್ಯಕವೆಂದು ತಿಳಿಯಬೇಕು.

♦ ಇಚ್ಛಾಮಿ, ಕಾಲೇನ, ನಯಸಿ, ಅವಿಪ್ಲವಃ, ತಸ್ಯ ಆತ್ಮಲಃ, ಅಕೌ ಅರಣಸ್ಯ, ಮೋಕ್ಷಣಂ ಎಂದು ಪದವಿಭಾಗ ಮಾಡಿಕೊಂಡು ಹೀಗೆ ಅನ್ವಯಾರ್ಥವನ್ನು ತಿಳಿದುಕೊಳ್ಳಬೇಕು.

**ತಸ್ಯ** ಆಗತಸ್ಯ ಬಂದಿರುವ ''ತಕಾರಶ್ಚಾಗತೇ ಚೋರೇ'' ಎಂದು ವಿಶ್ವವಿದೆ. ತ ಎಂದರೆ ಬಂದವನು ಮತ್ತು ಕಳ್ಳ ಎಂಬ ಅರ್ಥವನ್ನು ವಿಶ್ವಕೋಶವು ಹೇಳುತ್ತದೆ. **ಅರಣಸ್ಯ** ಸಕಾಶಾತ್ ಶರಣರೂಪನಾದವನಿಂದ **ಮೋಕ್ಷಣಂ** ಮಯಾ ಉಕ್ಷಣಂ ಜ್ಞಾನಾಮೃತಸೇಚನವನ್ನು **ಇಚ್ಛಾಮಿ** ಇಚ್ಛಿಸುವೆನು. **ಕಾಲೇನ** ಜ್ಞಾನದಿಂದ **ಮಾ** ನನ್ನನ್ನು **ನಯಸಿ ಚೇತ್** ಕರೆದೊಯ್ಯುವಿಯಾದರೇ **ಆತ್ಮಲಃ ಸನ್** ಸ್ವಸ್ವಭಾವವನ್ನು ಸ್ವೀಕರಿಸಿದವನಾಗಿ ಸ್ವರೂಪಾವಿರ್ಭಾವ ಪಡೆದವನಾಗಿ ಆತ್ಮಾನಂ ಸ್ವಸ್ವಭಾವಂ ಲಾತಿ ಆದತ್ತೇ ಇತಿ **ಆತ್ಮಲಃ** ''ಆತ್ಮಾ ಯತ್ನೇ ಧೃತೌ ಜೀವೇ ಸ್ವಭಾವೇ'' ಎಂದು ವಿಶ್ವವಿದೆ. ಲಾ ಆದಾನೇ ಎಂದು ಧಾತುಕೋಶವಿದೆ. **ಅಕೌ** ನಕುಃ ಅಕುಃ ಪೃಥವೀಭಿನ್ನವಾದ ಮೇಲಿರುವ ವೈಕುಂಠದಲ್ಲಿ **ಅವಿಪ್ಲವಃ ಸ್ಯಾಂ** ಚ್ಯುತಿರಹಿತನಾಗುವೆನು ಎಂದು ಇಚ್ಛಿಸುವೆನು. **ತತ್ರ, ಜಿಜೀವಿಷೇ** ಎಂದಾದರೂ ಅನ್ವಯ. ।।೨೩।।

ಸತ್ಯ ಃ- ಗುಣೋಪಸಂಹಾರರೂಪವಾದ ಉಪಾಸನೆಯು ವೇದಾಂತಜ್ಞಾನದಿಂದ ಸಂಭವಿಸುತ್ತದೆ. ಆನೆಯು ತಿರ್ಯಗ್ಯೋನಿಯಾದ್ದರಿಂದ ವೇದಾಂತದಲ್ಲಿ ಅಧಿ ಕಾರವಿರುವುದಿಲ್ಲ. ಆದ್ದರಿಂದ ಆತ್ಮಜ್ಞಾನವೇ ಇಲ್ಲವಾಗಿ ಲಿಂಗಶರೀರನಾಶವಾಗಬೇಕೆಂಬ ಆಸೆಯಷ್ಟೇ ಹೊರತು ಬೇರೆಯಲ್ಲವೆಂದು ಆಶಂಕಿಸಿ ಆನೆ ಜಾತಿಗೆ ವಿಹಿತವಾದ ಪ್ರಣಾಮದಿಂದಲೂ ಪ್ರಸನ್ನನಾದ ಶ್ರೀಹರಿಯ ಪ್ರಸಾದದಿಂದ ಉಂಟಾದ ಜ್ಞಾನದಿಂದ ಲಿಂಗಶರೀರಭಂಗವಾಗುವದೆಂದು ಭಾವಿಸಿ ಆನೆಯ ಮುಖದ ದೇವರಿಗೆ ವಿಶ್ವನಿಗೆ ಆನೆಯು ಪ್ರಣಾಮ ಮಾಡಿತೆಂದು ಹೇಳುತ್ತಿದ್ದಾರೆ-

ಛಲಾರೀ :- ತಿರ್ಯಗ್ಯೋನಿಯಲ್ಲಿ ತಾನು ಜನಿಸಿರುವುದರಿಂದ ಬೇರೇ ಸಾಧನಗಳನ್ನು ಮಾಡಲಾಗುವುದಿಲ್ಲ. ಆದ್ದರಿಂದ ಮುಕ್ತಿಗಾಗಿ ಭಗವಂತನಿಗೆ ನಮಸ್ಕಾರರೂಪವಾದ ಸಾಧನವನ್ನು ಮಾಡುತ್ತಿದೆ ಎಂದು ಹೇಳುತ್ತಿದ್ದಾರೆ-

**ಸೋಽಹಂ ವಿಶ್ವಸೃಜಂ ವಿಶ್ವಮವಿಶ್ವಂ ವಿಶ್ವವೇದಸಮ್ ।**
**ವಿಶ್ವಾತ್ಮಾನಮಜಂ ಬ್ರಹ್ಮ ಪ್ರಣತೋಽಸ್ಮಿ ಪರಂ ಪದಮ್ ॥೨೪॥**

**ಸಃ ಅಹಂ** ಲಿಂಗಶರೀರದ ಭಂಗವನ್ನಪೇಕ್ಷಿಸಿದ ನಾನು **ವಿಶ್ವಸೃಜಂ** ಪ್ರಪಂಚದ ಸೃಷ್ಟ್ಯಾದಿಗಳನ್ನು ಮಾಡುವ **ಅವಿಶ್ವಂ** ಪ್ರಪಂಚವಿಲಕ್ಷಣನಾದ ವಿಶ್ವದ ಹೊರಗೂ ಇರುವ **ವಿಶ್ವಂ** ವಿಶ್ವದಲ್ಲಿ ಪ್ರವಿಷ್ಟನಾದ ವಿಶ್ವವನ್ನು ತನ್ನ ಅಧೀನವಾಗಿಟ್ಟುಕೊಂಡಿರುವದರಿಂದ ವಿಶ್ವನೆನಿಸಿದ **ವಿಶ್ವವೇದಸಂ** ವಿಶ್ವಪ್ರವಿಷ್ಟನಾಗಿದ್ದರೂ ಎಲ್ಲ ವಿಶ್ವವನ್ನು ತಿಳಿದಿರುವ ಸರ್ವಜ್ಞನಾದ **ವಿಶ್ವಾತ್ಮಾನಂ** ವಿಶ್ವವನ್ನು ವ್ಯಾಪಿಸಿರುವ ವಿಶ್ವವನ್ನು ಸ್ವೀಕರಿಸುವ ವಿಶ್ವಕ್ಕೂ ಸ್ವಾಮಿಯಾದ, ಇದರಿಂದ ಇವನಿಗೆ ಸರ್ವಜ್ಞತ್ವವು ಸುಲಭವೆಂದು ತಿಳಿಸಿರುವರು. **ಅಜಂ** ಜನನಾದಿವಿಕಾರವಿಲ್ಲದ ಇದರಿಂದ ಜಗದಾಕಾರವಾಗಿ ಪರಿಣಮಿಸಿಲ್ಲ ಎಂದು ತಿಳಿಸಿರುವರು. **ಬ್ರಹ್ಮ** ಗುಣಪೂರ್ಣನಾದ ಇದರಿಂದ ಅಹಂಕಾರಾತ್ಮನಾದ ರುದ್ರನಲ್ಲ ಎಂದು ಹೇಳಿದಂತಾಯಿತು. **ಪರಂ** ಸರ್ವೋತ್ತಮನಾದ ಇದರಿಂದ ವೇದವಲ್ಲವೆಂದು ತೋರಿಸಿರುವರು. **ಪದಂ** ಗಮ್ಯನಾದ ಇದರಿಂದ ಮುಕ್ತರನ್ನು ವ್ಯಾವೃತ್ತಿಮಾಡಿ-ದಂತಾಯಿತು. ಇಂಥ ಶ್ರೀಹರಿಯನ್ನು **ಪ್ರಣತಃ ಅಸ್ಮಿ** ಭಕ್ತಿಯಿಂದ ನಮಸ್ಕರಿಸುತ್ತೇನೆ.

ಸತ್ಯ :- ವಿಶ್ವನಾಮಕನಾದ ಪರಮಾತ್ಮನಿಗೆ ೧೯ಮುಖಗಳು. ಮಧ್ಯದಲ್ಲಿಯ ಮುಖ ಗಜಮುಖ. ''ಪ್ರಾಗ್ ಜನ್ಮನ್ಯನುಶಿಕ್ಷಿತಮ್'' ಎಂದು ಹಿಂದೆ ಹೇಳಿರುವದರಿಂದ ವೇದಾಂತವೇದ್ಯವಾದ ಭಗವಂತನ ಗುಣಗಳ ಉಪಾಸನೆಯ ಅಧಿಕಾರಕ್ಕೆ ಅನುಗುಣವಾಗಿ ಭಗವಂತನನ್ನು ವರ್ಣನಮಾಡಿ ಸ್ವಯಂ ಗಜಜನ್ಮನಾದದ್ದರಿಂದ ಸೋಽಹಂ ಎಂದು ಗಜಮುಖನಾದ ವಿಶ್ವನಾಮಕನನ್ನು ನಮಿಸುವನು.

♦ ಅಹಂ ಎಂದರೆ ಸಾಕಾಗುತ್ತಿದ್ದರೂ, ಆ ರೂಪ ಈ ರೂಪ ಎರಡು ರೂಪಗಳ ಉಪಾಸನೆಯೂ ಸಾಧ್ಯವೆಂದು ತಿಳಿಸಲು **ಸೋಽಹಂ** ಎಂದಿರುವನು.

♦ **ಸಃ** ಇಂದ್ರದ್ಯುಮ್ನರೂಪಿಯಾದ **ಅಹಂ** ಈಗ ಗಜರೂಪಿಯಾದ ನಾನು ಎಂದರ್ಥ. **ವಿಶ್ವಂ** ಆ ಹೆಸರಿನ ''ಸಪ್ತಾಂಗಃ ಏಕೋನವಿಂಶತಿಮುಖಃ । ಮಧ್ಯಮಂ ತು ಗಜಾಕಾರಂ'' ಮುಂತಾಗಿ ಮಾಂಡುಕೋಪನಿಷತ್ತಿನ ಭಾಷ್ಯದಲ್ಲಿ ವಿಶ್ವನಾಮಕ ಪರಮಾತ್ಮನ ಲಕ್ಷಣ ಹೇಳಿದೆ. **ವಿಶ್ವಾತ್ಮಾನಂ** ಜಗತ್ತಿನಲ್ಲಿ ಆಯಾ ಆಕಾರದಿಂದ ಅಂತರ್ಯಾಮಿಯಾಗಿರುವ ಎಂದರ್ಥ. ॥೨೪॥

ಸತ್ಯ ಃ- **ಉಲೋಕಿರೇ ಲೋಕಾ ಲೋಕೇ ಕೇऽಪಿ ನ ತಮಿತಿ ತ್ವಯಾ ನತಃ ಕಥಮಿತ್ಯತಃ ಕಥಯತಿ** ಜಗತ್ತಿನಲ್ಲಿ ಯಾವ ಜನರೂ ಆ ಪರಮಾತ್ಮನನ್ನು ನೋಡಿಯೇ ಇಲ್ಲ. ಅಂದಮೇಲೆ ನೀನು ಹೇಗೆ ಅವನಿಗೆ ನಮಿಸಿದಿ ಎಂದರೆ ಹೇಳುತ್ತಾರೆ-

**ಯೋಗರಂಧಿತಕರ್ಮಾಣೋ ಹೃದಿ ಯೋಗವಿಭಾವಿತೇ ।**
**ಯೋಗಿನೋ ಯಂ ಪ್ರಪಶ್ಯಂತಿ ಯೋಗೀಶಂ ತಂ ನತೋऽಸ್ಮ್ಯಹಮ್ ॥೨೫॥**

**ಯೋಗರಂಧಿತಕರ್ಮಾಣಃ** ಜ್ಞಾನವೆಂಬ ಮೋಕ್ಷಸಾಧನದಿಂದ ಸುಟ್ಟುಹೋದ ಕರ್ಮಗಳುಳ್ಳ (ಅನಿಷ್ಟವಾದ ಪುಣ್ಯ-ಪಾಪಗಳುಳ್ಳ) **ಯೋಗಿನಃ** ಅಪರೋಕ್ಷಜ್ಞಾನಿಗಳು **ಯೋಗವಿಭಾವಿತೇ** ಶ್ರೀಹರಿಯ ಧ್ಯಾನದಿಂದ ಪ್ರಕಾಶಿತವಾದ ಅಥವಾ ನಿಷ್ಕಾಮಕರ್ಮದಿಂದ ಪರಿಶುದ್ಧವಾದ **ಹೃದಿ** ಹೃದಯದಲ್ಲಿ **ಯಂ** ಯಾವನನ್ನು **ಪ್ರಪಶ್ಯಂತಿ** ಸಾಕ್ಷಾತ್ತಾಗಿ ಕಾಣುವರೋ **ಯೋಗೀಶಂ** ಯೋಗಿಗಳಿಗೆಲ್ಲ ನಿಯಾಮಕನಾದ **ತಂ** ಆ ಪರಮಾತ್ಮನನ್ನು **ಅಹಂ** ನಾನು **ನತಃ ಅಸ್ಮಿ** ನಮಸ್ಕರಿಸುತ್ತೇನೆ. ಹೀಗೆ ಹೇಳುವುದರಿಂದ ಈಶ್ವರನಿದ್ದಾನೆ ಎಂಬ ವಿಷಯದಲ್ಲಿ ಯೋಗಿಗಳ ಪ್ರತ್ಯಕ್ಷವೇ ಪ್ರಮಾಣ ಎಂದು ಹೇಳಿದಂತಾಯಿತು.

♦ ಯೋಗರಂಧಿತಕರ್ಮಾಣಃ ಎಂಬಲ್ಲಿ ರಂಧಿತ ಎಂಬ ಶಬ್ದದ ನಿಷ್ಪತ್ತಿಯನ್ನು ಈ ರೀತಿಯಾಗಿ ತಿಳಿದುಕೊಳ್ಳಬೇಕು.

''ರಧಹಿಂಸಾಸಂರಾಧ್ಯೋಃ'' ಎಂದು ಧಾತುಕೋಶವಿದೆ. ಈ ರಧ ಧಾತುವಿಗೆ ''ರಧಾದಿಭ್ಯಶ್ಚ'' ರಧ, ನಶ್, ತೃಪ್, ದೃಪ್, ದ್ರುಹ್, ಮುಹ್, ಷ್ಣುಹ್, ಷ್ಣಿಹ್, ಏಭ್ಯೋ ವಲಾದ್ಯಾರ್ಧಧಾತುಕಸ್ಯ ವೇಟ್ ಸ್ಯಾತ್ (ಸಿ.ಕೌ.೨೫೧೫) ಎಂಬ ಸೂತ್ರದಿಂದ ವಿಕಲ್ಪೇನ ಇಡಾಗಮವು ಬರಬೇಕು. ನಂತರ ''ರಧಿಜಭೋರಚಿ'' (ಸಿ.ಕೌ.೨೩೦೨) ಎಂಬ ಸೂತ್ರದಿಂದ ನುಮಾಗಮವಾಗಬೇಕು. ಆದರೆ ''ಯಸ್ಯ ವಿಭಾಷಾ'' (ಸಿ.ಕೌ.೩೦೨೫) ಯಾವುದಕ್ಕೆ ವಿಕಲ್ಪೇನ ಇಟ್ ವಿಹಿತವಾಗಿದೆಯೋ ಅಂಥ ಧಾತುವಿನ ನಿಷ್ಠಾಕ್ಕೆ ಅಂದರೆ ಕ್ತಪ್ರತ್ಯಯಾಂತವಾದುದಕ್ಕೆ ಇಡಾಗಮವಾಗುವುದಿಲ್ಲ. ಮತ್ತು ''ನೇಟ್ಯಲಿಟಿ ರಧೇಃ''(ಸಿ.ಕೌ.೨೫೧೬) ಎಂಬ ಸೂತ್ರದಿಂದ ನುಮಾಗಮವೂ ಆಗುವುದಿಲ್ಲ. ಆದ್ದರಿಂದ ರಂಧಿತ ಎಂಬ ಶಬ್ದವೇ ನಿಷ್ಪನ್ನವಾಗುವುದಿಲ್ಲ. ಹೀಗೆ ಶಂಕಿಸಬಾರದು. ಇಲ್ಲಿ ಇಡಾಗಮ ಮತ್ತು ನುಮಾಗಮ ಛಾಂದಸ ಎಂಬುದಾಗಿ ತಿಳಿಯಬೇಕು.

ಅಥವಾ ರಧಧಾತುವಿಗೆ ಣಿಚ್ ಮಾಡಿ ಣಿಜಂತವಾದ ರಧಧಾತುವಿಗೆ ಕ್ತಪ್ರತ್ಯಯ ಮಾಡಿದರೆ ರಧ ಣಿ ತ ಎಂದಿದ್ದಾಗ ಣಿಚ್ ಒಳಗಿನ ಣ್ ಲೋಪವಾಗಿ ರಧ ಇ ತ ಎಂದಿರುವಾಗ ರಧಾದಿಭ್ಯಶ್ಚ ಎಂಬುದರಿಂದ ಇಡಾಗಮವಾಗಿ ರಧ ಇ ಇ ತ

ಎಂದಿರುವಾಗ, ನಿಷ್ಠಾಯಾಂ ಸೇಟಿ (೩೦೫೭) ಎನ್ನುದವರಿಂದ ಣಿಚ್ ಒಳಗಿನ ಇ ಎಂಬುದರ ಲೋಪವಾಗಿ ರಧ ಇ ತ ಎಂದಿರುವಾಗ ''ರಧಿಜಭೋರಚಿ'' ಎನ್ನುವದರಿಂದ ನುಮಾಗಮವಾಗಿ ರಂಧಿತ ಎಂದಾಗಿದೆ ಎಂದು ತಿಳಿಯಬೇಕು.

ಇಲ್ಲಿ ನುಮ್ ನಿಷೇಧಕವಾದ ''ನೇಟ್ಯಲಿ ರಧೇಃ'' ಎನ್ನುವ ಸೂತ್ರವು ಪ್ರವೃತ್ತವಾಗಿ ಇದು ಲಿಟ್ ಲಕಾರದ ಇಟ್ ಆಗದಿರುವದರಿಂದ ನುಮ್ ಬರುವದಿಲ್ಲವೆಂದರೆ ಹಾಗೇನಿಲ್ಲ ಏಕೆಂದರೆ ಇಲ್ಲಿ ಇಟ್ ಎನ್ನುವಲ್ಲಿ ಇಕಾರವನ್ನು ನಿಮಿತ್ತ ಮಾಡಿಕೊಂಡು ನುಮ್ ಬಂದಿಲ್ಲ. ಕಿಂತು ಲುಪ್ತವಾದ ಣಿ ಎನ್ನುವಲ್ಲಿಯ ಇಕಾರವನ್ನು ಸ್ಥಾನಿವದ್ಭಾವವನ್ನು ಆಶ್ರಯಿಸಿ ಬಂದದ್ದು. ನುಮ್ ನಿಷೇಧಕ ಸೂತ್ರವು ಇಟ್ ನಿಮಿತ್ತಕವಾದುದನ್ನು ನಿಷೇಧಿಸಿದೆ ಹೊರತು ಬೇರೆಯದನ್ನಲ್ಲ. ಆದ್ದರಿಂದ ರಂಧಿತ ಎಂಬ ಪದವು ನಿಷ್ಪನ್ನವಾಗುತ್ತದೆ. ಹೀಗೆ ಎರಡು ರೀತಿಯಾಗಿ ಈ ಪದದ ನಿಷ್ಪತ್ತಿಯನ್ನು ಶ್ರೀಸತ್ಯಧರ್ಮರು ತೋರಿಸಿಕೊಟ್ಟಿದ್ದಾರೆ.

ಯೋಗೇನ ರಂಧಿತಾನಿ ಧ್ವಸ್ತಾನಿ ಕರ್ಮಾಣಿ ಪ್ರತಿಬಂಧಕದುಷ್ಕರ್ಮಾಣಿ ಯೇಷಾಂ ತೇ ಯೋಗರಂಧಿತಕರ್ಮಾಃ

ಪ್ರತಿಬಂಧಕವಾದ ದುಷ್ಕರ್ಮಗಳನ್ನು ಜ್ಞಾನವೆಂಬ ಮೋಕ್ಷಸಾಧನರೂಪವಾದ ಯೋಗದಿಂದ ಪರಿಹರಿಸಿಕೊಂಡವರು ಎಂದು ಅರ್ಥವಾಗುತ್ತದೆ.

ಯೋಗೇನ ರಂಧಿತಾನಿ ಸಂಸಿದ್ಧಾನಿ ಮೋಕ್ಷಸಾಧಕಾನಿ ಜ್ಞಾನದ್ವಾರಾ ಕರ್ಮಾಣಿ ಯೇಷಾಂ ತೇ ಯೋಗರಂಧಿತಕರ್ಮಾಣಃ

ಜ್ಞಾನದ್ವಾರಾ ಮೋಕ್ಷಸಾಧಕವಾದ ಕರ್ಮಗಳುಳ್ಳ ಎಂದಾದರೂ ಅರ್ಥವನ್ನು ಮಾಡಬೇಕು. ಹೀಗೆ ಎರಡು ರೀತಿಯಾಗಿ ಶ್ರೀಸತ್ಯಧರ್ಮರು ಅರ್ಥವನ್ನು ಹೇಳಿದ್ದಾರೆ.

''ತತ್ರ ತತ್ರ ಸ್ಥಿತೋ ವಿಷ್ಣುಃ ತತ್ತಚ್ಛಕ್ತಿಪ್ರಬೋಧಕಃ'' ''ಸರ್ವೋಪೇತಾ ಚ ತದ್ದರ್ಶನಾತ್'' ಮುಂತಾಗಿ ಹೇಳಿರುವದರಿಂದ ಪ್ರಕೃತವಾದ ಕಾರ್ಯವು ಶಕ್ತಿಯಿಂದಲೇ ಸಾಧ್ಯವಾಗುವುದರಿಂದ ಆ ಶಕ್ತಿ ಪರಮಾತ್ಮನಿಗೆ ಮಾತ್ರ ಇದೆ ಎಂದು ತಿಳಿದು ಆನೆಯು ಶ್ರೀಹರಿಯನ್ನು ನಮಸ್ಕರಿಸುತ್ತಿದೆ-

**ನಮೋ ನಮಸ್ತುಭ್ಯಮಸಹ್ಯವೇಗ-**
**ಶಕ್ತಿತ್ರಯಾಯಾಖಿಲಧೀಗುಣಾಯ ।**
**ಪ್ರಪನ್ನಪಾಲಾಯ ದುರಂತಶಕ್ತಯೇ**
**ಬುದ್ಧೀಂದ್ರಿಯಾಣಾಮನವಾಪ್ಯವರ್ತ್ಮನೇ** ॥೨೬॥

**ಅಸಹ್ಯವೇಗಶಕ್ತಿತ್ರಯಾಯ** ಮತ್ತೊಬ್ಬರಿಂದ ಸಹಿಸಲಾಗದ ವೇಗವುಳ್ಳ ಉತ್ಪತ್ತಿ-ಸ್ಥಿತಿ-ಸಂಹಾರ ಮಾಡುವ ಮೂರು ಶಕ್ತಿಯುಳ್ಳ ಉತ್ಸಾಹ-ಮಂತ್ರ-ಪ್ರಭು ಎಂಬ ಮೂರು

ಶಕ್ತಿಗಳುಳ್ಳ, ಶಕ್ತಿವಿಷಯವಾದ್ದರಿಂದ ಶಕ್ತಿಶಬ್ದವಾಚ್ಯವಾದ ಸತ್ತ್ವ-ರಜಸ್ಸು- ತಮಸ್ಸುಗಳು ಇವುಗಳ ಕಾರ್ಯವಾದ ಉತ್ಪತ್ತಿ-ಸ್ಥಿತಿ-ಸಂಹಾರಗಳುಳ್ಳ, **ಅಖಿಲಧೀ- ಗುಣಾಯ** ಸರ್ವವಿಷಯಕವಾದ ಜ್ಞಾನವೆಂಬ ಗುಣವುಳ್ಳ **ದುರಂತಶಕ್ತಯೇ** ಇಷ್ಟೇ ಎಂದು ಹೇಳಲಾಗದ ನಿರವಧಿಕಶಕ್ತಿಯುಳ್ಳ **ಬುದ್ಧೀಂದ್ರಿಯಾಣಾಂ** ಎಲ್ಲ ಜೀವರ ಇಂದ್ರಿಯಗಳಿಗೆ **ಅನವಾಪ್ಯವರ್ತ್ಮನೇ** ಸಾಕಲ್ಯೇನ ಹೊಂದಲಾಗದ ತನ್ನ ಜ್ಞಾನಮಾರ್ಗವುಳ್ಳ **ಪ್ರಪನ್ನಪಾಲಾಯ** ಶರಣಾಗತರನ್ನು ಪರಿಪಾಲಿಸುವ **ತುಭ್ಯಂ** ನಿನಗೆ **ನಮೋ ನಮಃ** ಆದರಪೂರ್ವಕವಾದ ನಮಸ್ಕಾರಗಳು.

♦ ಅಖಿಲಧೀಗುಣನೆಂಬುದರಿಂದ ಉತ್ಪತ್ತ್ಯಾದಿಶಕ್ತಿಗಳು ಜ್ಞಾನವಂತನಿಗೆ ಯುಕ್ತವೆಂದೂ, ದುರಂತಶಕ್ತಿ ಎಂಬುದರಿಂದ ಈ ಶಕ್ತಿಗಳು ಜೀವರ ಶಕ್ತಿಗಳಂತೆ ಪರಿಮಿತಗಳಲ್ಲವೆಂದೂ, ಬುದ್ಧೀಂದ್ರಿಯಾಣಾಂ ಅನವಾಪ್ಯವರ್ತ್ಮನೇ ಎಂಬುದರಿಂದ ಪರಿಚ್ಛಿನ್ನಗಳೆಂದು ಅನುಮಾನಪ್ರಯೋಗದಿಂದ ಊಹಿಸಲೂ ಸಾಧ್ಯವಿಲ್ಲವೆಂದೂ ತಿಳಿಸಿರುವರು.

♦ ಪರಮಾತ್ಮಶಕ್ತಯಃ ಪರಿಮಿತಾಃ ಶಕ್ತಿತ್ವಾತ್ ಅಸ್ಮಚ್ಛಕ್ತಿವತ್ ಎಂದು ಇಲ್ಲಿ ಅನುಮಾನ ಮಾಡಿಕೊಳ್ಳಬೇಕು. ಶ್ರೀಹರಿಯ ಶಕ್ತಿಗಳು ಪರಿಮಿತವಾಗಿವೆ. ಶಕ್ತಿಗಳಾದ್ದರಿಂದ. ನಮ್ಮ ಶಕ್ತಿಯಂತೆ. ನಮ್ಮ ಶಕ್ತಿಗಳಲ್ಲಿ ಶಕ್ತಿತ್ವವಿದ್ದದ್ದರಿಂದ ಅವು ಹೇಗೆ ಪರಿಮಿತವಾಗಿವೆಯೋ ಹಾಗೆ. ಎಂದು ಅನುಮಾನ ಮಾಡಬೇಕು. ಆದರೆ ಅದು ಸಾಧ್ಯವಿಲ್ಲ. ಶಕ್ತಿತ್ವ ಎಂಬ ಹೇತುವಿಗೆ ಆಶ್ರಯವಾದ ಪರಮಾತ್ಮಶಕ್ತಿರೂಪವಾದ ಪಕ್ಷವೇ ಜೀವರ ಇಂದ್ರಿಯಕ್ಕೆ ಗೋಚರವಲ್ಲ. ಆದ್ದರಿಂದ ಹೇತುವಿಗೆ ಅಸಿದ್ಧಿ ಎಂಬ ದೋಷವು ಬರುತ್ತದೆ. ಆದ್ದರಿಂದ ಈ ಅನುಮಾನದಿಂದ ಶ್ರೀಹರಿಯ ಶಕ್ತಿಗಳು ಪರಿಮಿತ ಎಂದು ಸಾಧಿಸಲು ಬರುವುದಿಲ್ಲ.

ಸತ್ಯ ಃ- ಅಸಹ್ಯಃ ವೇಗಃ ಯಾಸಾಂ ತಾಃ ತಥಾ. ಅಪ್ರತಿಹತಗಳಾದ ಎಂದರ್ಥ. ಅಂದರೆ ಶ್ರೀಹರಿಯ ಶಕ್ತಿಗಳು ಅಪ್ರತಿಹತವಾಗಿವೆ ಎಂದು ಅರ್ಥ. **ದುರಂತಶಕ್ತಯೇ** ಅಪರಿಮಿತವಾದ ಅಘಟಿತಘಟನಾಶಕ್ತಿಯುಳ್ಳವನು ಅಥವಾ ಮನಸ್ಸು ಮತ್ತು ಇಂದ್ರಿಯಗಳಿಗೆ ವಿಷಯವಾಗದ ಸ್ವರೂಪವುಳ್ಳ ಎಂದೂ ಅರ್ಥ. **ಅಸಹ್ಯವೇಗ** ಅಸದಸಹ್ಯಜವ ದುಷ್ಟರಿಂದ ತಡೆಯಲಾಗದ ವೇಗ ಉಳ್ಳ **ಶಕ್ತಿತ್ರಯಾಯ** ''ಶಕ್ಯತ್ವಾತ್ ಶಕ್ತಯೋ ಭಾರ್ಯಾಃ'' ಎಂದಿರುವದರಿಂದ ಶ್ರೀಹರಿಯ ಸ್ವರೂಪಶಕ್ತಿಗೆ ವಿಷಯರಾದ್ದರಿಂದ ಶಕ್ತಿ ಎನಿಸಿದ ಶ್ರೀ-ಭೂ-ದುರ್ಗಾ ಎಂಬ ಮೂರು ಪತ್ನಿಯರುಳ್ಳ (ಶಕ್ತೀನಾಂ ತ್ರಯಂ ಯಸ್ಯ ಸಃ) ಅಭೇದವಿದ್ದರೂ ಮುನಿತ್ರಯಂ ಎಂಬಲ್ಲಿಯಂತೆ ವಿಶೇಷಬಲದಿಂದಾಗಲಿ ಅವಯವಾವಯವಿಭಾವವಿವಕ್ಷಯಾ ಯಚ್ ಪ್ರತ್ಯಯವು

ಸಂಭವಿಸುವದು. ಮೇಲೆ ಹೇಳಿದ ಶಕ್ತಿತ್ರಯಗಳು ಜ್ಞಾನನಿದಾನಕಾಃ ಜ್ಞಾನವೇ ಕಾರಣವಾಗಿ ಉಳ್ಳವುಗಳು. ಆದ್ದರಿಂದ ಅವೆಲ್ಲ ಇವನಿಗೇನೆ ಎನ್ನುತ್ತಾರೆ. ಅಖಿಲಾಃ ಕಾಲಾದಿಗಳಿಂದ ಪ್ರತಿಹತಿ ಇಲ್ಲದ ಧೀಗುಣಾಃ ಧಿಯಃ ಗುಣಾಃ ವಿಶೇಷಾಃ ಯಸ್ಯ ತಸ್ಮೈ ಜ್ಞಾನವಿಶೇಷವುಳ್ಳ ಅಥವಾ ಅಖಿಲಾನಾಂ ಎಲ್ಲರ ಧಿಯಃ ಜ್ಞಾನಗಳು ಗುಣಗಳು ಯಾರಿಂದ ಬರುವವೋ ಅವನು. **ದುರಂತಶಕ್ತಯೇ** ಅಪರಿಮಿತ ಶಕ್ತಿಯುಳ್ಳ ಅಥವಾ ದುಷ್ಪಸ್ವರೂಪವುಳ್ಳವರಿಗೆ **ಶಕ್ತಿಃ** ಪ್ರಹರಣವಿಶೇಷಃ ಶಕ್ತಿ ಎಂಬ ಆಯುಧವಾಗಲಿ ಬಲವಾಗಲಿ ಇವನಿಂದಲೇ (ಬರುವದು) ಅಂತಹ ಪ್ರಭಾವವುಳ್ಳ,

**ಬುದ್ಧೀಂದ್ರಿಯಾಣಾಂ ಅನವಾಪ್ಯವರ್ತ್ಮನೇ** ಬುದ್ಧೀಂದ್ರಿಯಗಳಿಗೆ ಅನುಗ್ರಹವಿಲ್ಲದೇ ತಿಳಿಯಲಾಗದ ಸ್ವರೂಪವುಳ್ಳ **ಪ್ರಪನ್ನಪಾಲಾಯ** ಶರಣಾಗತರ ರಕ್ಷಕನಾದ ಎಂದು ಅರ್ಥ. ಪರಮಾತ್ಮ ಸರ್ವಥಾ ಅಪ್ರಾಪ್ಯ ಎಂದಾದರೆ ಅವನ ಪ್ರಾರ್ಥನೆ ವ್ಯರ್ಥ ಎಂದರೆ ಹೇಳುವರು. ಬುದ್ಧೀಂದ್ರಿಯಾಣಾಂ ಸಕಾಶಾತ್ ಎಂದು ಇಟ್ಟುಕೊಳ್ಳಬೇಕು. ಬುದ್ಧೇಃ ಇಂದ್ರಿಯಾಣಿ ಪ್ರಕಾಶವಿಶೇಷಗಳು ''ಇಂದ್ರಿಯಂ ಚ ಹೃಷೀಕಂ ಸ್ಯಾದಿಂದ್ರಿಯಂ ತೇಜಸಿ ಸ್ಮೃತಮ್'' ಎಂದು ವಿಶ್ವವಿದೆ. ಅಂಥ ಬುದ್ಧಿಯ ಪ್ರಕಾಶವಿಶೇಷಗಳಿಂದ ಎಂದು ಅರ್ಥ. ಅನವಾಪ್ಯವರ್ತ್ಮನೇ ಎಂಬುದಕ್ಕೆ ಹೀಗೆ ಅರ್ಥ ತಿಳಿಯಬೇಕು. **ಅನೇನ** ಮುಖ್ಯಪ್ರಾಣನಿಂದ **ವಾಪ್ಯಂ** ಅವಾಪ್ಯಂ ಹೊಂದಲ್ಪಡುವ ವರ್ತ್ಮ ಮಾರ್ಗವುಳ್ಳವನು, ಸ್ವರೂಪ ಉಳ್ಳವನು ಎಂದು ಅರ್ಥ.

ಅನವಃ ಆದ್ಯೋ ಹಿರಣ್ಯಗರ್ಭಃ ನವೀನರಲ್ಲದ ಅರ್ಥಾತ್ ಆದಿಕಾಲೀನರಾದ ಹಿರಣ್ಯಗರ್ಭ ಬ್ರಹ್ಮದೇವರಿಂದ ಆಪ್ಯವರ್ತ್ಮನೇ ಹೊಂದಲ್ಪಡುವ ಸ್ವರೂಪವುಳ್ಳ, ವಾಪ್ಯವರ್ತ್ಮನೇ ವಾಪ್ಯಾಂ ವಾಪೌ ವಾ ವರ್ತ್ಮ ಉಪರಿಪರಿಸರಸರಣಿಃ ಯಸ್ಯ ಸಃ ವಾಪ್ಯವರ್ತ್ಮಾ ಅಂದರೆ ಬಾವಿಯಿಂದ ಮೇಲೆ ಬರಲು ಮಾರ್ಗವಿಲ್ಲದ ಕೃಕಲಾಸ ಓತಿಕಾಟವಾಗಿರುವ ನೃಗರಾಜ ಅವನಿಗೆ ಅನಃ ಹೊರಗೆ ಬರುವ ಚೇಷ್ಟೆಯು ಯಾವನಿಂದ ಬಂದಿತೋ ಅಂಥ ಪರಮಾತ್ಮ ಅನವಾಪ್ಯವರ್ತ್ಮನು. ಇದರಿಂದ ತಿರ್ಯಕ್ ಪ್ರಾಣಿಗಳಲ್ಲಿ ಶ್ರೀಹರಿಗೆ ದಯೆಯು ಕಂಡುಬಂದಿದೆ. ಆದ್ದರಿಂದ ನನ್ನ ಪ್ರಾರ್ಥನೆಗೆ ಚ್ಯುತಿ ಇಲ್ಲ ಎಂದು ಸ್ತುತಿಸಿ ನಮಸ್ಕರಿಸುವನು. ವಾಪ್ಯವರ್ತ್ಮ ಎಂಬಲ್ಲಿ ನಞ ಅನ್ವಯಪ್ರಕಾರವನ್ನೂ ಹಿಂದಿನ ಸ್ಕಂಧದ ವಿವೃತಿಯಲ್ಲಿ ವಿವರಿಸಿದೆ. ।।೨೮।।

ಮೋಕ್ಷಪ್ರದನಾದ ಭಗವಂತನನ್ನು ಎಲ್ಲರೂ ಏಕೆ ಭಜಿಸುವದಿಲ್ಲ ಎಂಬುದಕ್ಕೆ ಕಾರಣವನ್ನು ಹೇಳುತ್ತಾ ಪರಮಾತ್ಮನನ್ನು ಪ್ರಾರ್ಥಿಸುವನು-

**ನಾಯಂ ವೇದ ಸ್ವಮಾತ್ಮಾನಂ ಯಚ್ಛಕ್ತ್ಯಾಽಹಂ ಧಿಯಾ ಹತಃ ।**
**ತಂ ದುರತ್ಯಯಮಾಹಾತ್ಮ್ಯಂ ಭಗವಂತಂ ನತೋಽಸ್ಮ್ಯಹಮ್** ।।೨೭।।

**ಅಯಂ** ಈ ಜೀವನು **ಪೂರ್ವಂ** ಮೊದಲು **ಯಚ್ಛಕ್ತ್ಯಾ** ಯಾವನ ಬಂಧಕಶಕ್ತಿಯಿಂದ ಬಂದ **ಅಹಂ ಧಿಯಾ** ನಾನೇ ಸ್ವತಂತ್ರನೆಂಬ ಜ್ಞಾನದಿಂದ **ಹತಃ** ಪರತಂತ್ರನೆಂಬ ಜ್ಞಾನವಿಲ್ಲದೇ ಹಾಳಾಗಿ **ಸ್ವಂ** ತನ್ನ ಸ್ವರೂಪವನ್ನು **ಆತ್ಮಾನಂ** ತನ್ನ ನಿಯಾಮಕನಾದ ಶ್ರೀಹರಿಯನ್ನೂ **ನ ವೇದ** ತಿಳಿಯಲಿಲ್ಲವೋ **ತಂ** ಅಂತಹ **ದುರತ್ಯಯಮಾಹಾತ್ಮ್ಯಂ** ಉಲ್ಲಂಘಿಸಲಾಗದ ಮಹಿಮೆಯುಳ್ಳ **ಭಗವಂತಂ** ನಾರಾಯಣನನ್ನು **ಅಹಂ** ನಾನು **ನತಃ ಅಸ್ಮಿ** ನಮಿಸುತ್ತೇನೆ.

**ಅಯಂ ಅಹಂ** ಈ ನಾನು **ಯಚ್ಛಕ್ತ್ಯಾ** ಯಾವನ ಮಾಯೆಯಿಂದ **ಧಿಯಾ ಹತಃ** ಬುದ್ಧಿಯಿಲ್ಲದವನಾಗಿ **ಸ್ವಂ** ನನ್ನನ್ನು **ಆತ್ಮಾನಂ** ಪರಮಾತ್ಮನನ್ನು **ನ ವೇದ** ಮೊದಲು ತಿಳಿಯಲಿಲ್ಲ. ''ದಧ್ಯಾವಿಮಾಂ ಬುದ್ಧಿಮಥಾಭ್ಯಪದ್ಯತ'' ಎಂದು ಹೇಳಿರುವದರಿಂದ **ಯಚ್ಛಕ್ತ್ಯಾ** ಯಾವನ ಶಕ್ತಿಯಿಂದ **ಏವಂವಿಧಯಾ ಧಿಯಾ ಅಹತಃ** ಈ ವಿಧವಾದ ಬುದ್ಧಿಯಿಂದ ಈಗ ಸಹಿತನಾಗಿರುವೆನೋ ಅಂಥ **ಅಹಂ** ನಾನು **ದುರತ್ಯಯಮಾಹಾತ್ಮ್ಯಂ** ಮೀರಲಾಗದ ಮಹಾತ್ಮ್ಯವುಳ್ಳ ಪರಮಾತ್ಮನನ್ನು **ನತಃ ಅಸ್ಮಿ** ನಮಸ್ಕರಿಸುವೆನು. ಹೀಗೂ ಅರ್ಥ.

ಇತೋಽಸ್ಮಿ ಎಂಬ ಪಾಠದಲ್ಲಿ ಭಗವಂತನನ್ನು ಆಶ್ರಯಿಸಿರುವೆನೆಂದರ್ಥ. ತಾನೇ ಸ್ವತಂತ್ರ ಎಂದು ತಿಳಿದು ತನ್ನಿಂದ ಭಿನ್ನನಾದ ಪರಮಾತ್ಮನ ಜ್ಞಾನವಿಲ್ಲದ್ದರಿಂದ ಜನರು ಭಗವಂತನನ್ನು ಭಜಿಸುದಿಲ್ಲವೆಂದು ಅನಂತ ಮಾಹಾತ್ಮ್ಯವುಳ್ಳ ಹರಿಯನ್ನು ಸಂಪೂರ್ಣ ಸ್ತುತಿಸಲು ಸಾಮರ್ಥ್ಯವಿಲ್ಲದ್ದರಿಂದ ನಿಲ್ಲಿಸುವೆನೆಂದು ಭಾವ. ॥೨೭॥

ಈ ರೀತಿ ಗಜೇಂದ್ರನು ಸ್ತುತಿಯನ್ನು ಮುಗಿಸಿದಾಗ ಯಾವ ದೇವತೆಯು ಅವನನ್ನು ಮೋಚನ ಮಾಡಲು ಬಂದನು. ಶ್ರೀಹರಿಯು ಬಂದನೆನ್ನುವದು ಸರಿಯಲ್ಲ. ಗಜೇಂದ್ರನು ಮಾಡಿದ ಸ್ತುತಿಯು ಬ್ರಹ್ಮಾದಿಸಾಧಾರಣವಾಗಿದೆ ಎಂಬ ಪರೀಕ್ಷಿತನ ಶಂಕೆಯನ್ನು ಶುಕಾಚಾರ್ಯರು ಪರಿಹರಿಸುವರೆಂದು ಸೂತರು ಶೌನಕರಿಗೆ ಹೇಳುವರು.

**ಶ್ರೀಶುಕ ಉವಾಚ**

**ಏವಂ ಗಜೇಂದ್ರಮುಪವರ್ಣಿತನಿರ್ವಿಶೇಷಂ**
**ಬ್ರಹ್ಮಾದಯೋ ವಿವಿಧಲಿಂಗಭಿದಾಭಿಮಾನಾಃ ।**
**ನೈತೇ ಯದೋಪಸಸೃಪುರ್ನಿಖಿಲಾತ್ಮಕತ್ವಾತ್**
**ತತ್ರಾಖಿಲಾಮರವರೋ ಹರಿರಾವಿರಾಸೀತ್** ॥೨೮॥

**ಏವಂ** ಮೇಲೆ ಹೇಳಿದಂತೆ **ಉಪವರ್ಣಿತನಿರ್ವಿಶೇಷಂ** ಸರ್ವತ್ರ ಸಮನಾದ ಪೃಥಿವ್ಯಾದಿಸಮಸ್ತಪದಾರ್ಥವಿಲಕ್ಷಣನಾದ, ಅವತಾರ-ಮೂಲರೂಪಗಳಿಂದ

ಶಕ್ತ್ಯಾದಿಗಳಲ್ಲಿ ಯಾವ ವ್ಯತ್ಯಾಸವಿಲ್ಲದೇ, ಉಚ್ಚಜಾತಿಯಲ್ಲಿ ದಯೆ, ನೀಚಜಾತಿಯಲ್ಲಿ ದಯೆಯಿಲ್ಲವೆಂಬ ವಿಶೇಷವಿಲ್ಲದ, ತನಗೆ ತಿಳಿದ ಗುಣಗಳಲ್ಲಿ ಒಂದನ್ನೂ ಬಿಡದೇ ಎಲ್ಲಗುಣಗಳಿಂದ ಸ್ತೋತ್ರಮಾಡಿದ **ಗಜೇಂದ್ರಂ** ಗಜೇಂದ್ರನ ಬಳಿಗೆ **ವಿವಿಧಲಿಂಗ** ಪದ್ಮ, ವಜ್ರ, ಮೊದಲಾದ ಆಯುಧ ಚಿಹ್ನೆಗಳು ಹಂಸ, ಎತ್ತು ಮೊದಲಾದ ವಾಹನಗಳು (ಇವು ಬ್ರಹ್ಮ-ರುದ್ರ-ಇಂದ್ರಾದಿಗಳ ಚಿಹ್ನೆಗಳು) ಆದಿಬೀಜತ್ವ, ಪರೇಶತ್ವ, ಚಿದಚಿತ್ಸರ್ವ-ಜಗತ್ಸ್ರಷ್ಟೃತ್ವ, ಪಾಲಕತ್ವ, ಸಂಹರ್ತೃತ್ವ, ಸ್ವತಂತ್ರತ್ವ, ಅವಿಲುಪ್ತಸಾರ್ವಕಾಲಿಕದೃಷ್ಟಿತ್ವ, ಸರ್ವಸಾಕ್ಷಿತ್ವ,ಸರ್ವಚೇತನಪತಿತ್ವ, ಮಹಾ-ಪ್ರಳಯಾವಸ್ಥಿತತ್ವ, ತಮಃಶಬ್ದಿತ-ಪ್ರಕೃತಿಶಕ್ತ್ಯವಿಷಯತ್ವ, ಬ್ರಹ್ಮಾದಿದೇವಾಗಮ್ಯತ್ವ, ಕರ್ಮಪ್ರಾಪ್ತ-ಜನ್ಮಾದಿರಹಿತತ್ವ, ಸಮಸ್ತದೋಷವಿಧುರತ್ವ, ಆಶ್ಚರ್ಯಕರಕರ್ಮಿತ್ವ, ಸ್ವಪ್ರಕಾಶತ್ವ, ಸಾಕಲ್ಯೇನ ಶ್ರುತ್ಯಾದ್ಯಗೋಚರತ್ವ, ಜ್ಞಾನಿಪ್ರಾಪ್ಯತ್ವ, ಮೋಕ್ಷಸ್ವಾಮಿತ್ವ, ಜ್ಞಾನಾನಂದಾತ್ಮಕ ಅಪ್ರಾಕೃತದೇಹವತ್ವ, ಸ್ವೋತ್ತಮರಹಿತತ್ವ, ನಾರಾಯಣಅನಂತಾದಿಶಬ್ದವಾಚ್ಯತ್ವ ಮೊದಲಾದ ಧರ್ಮಗಳಾಗಲಿ ಇವುಗಳ **ಭಿದಾ** ಭೇದದಿಂದ ಉಂಟಾದ ಅಭಿಮಾನವುಳ್ಳ ಅಂದರೆ ನಾನು ಪದ್ಮಪಾಣಿ, ನಾನು ವಜ್ರಪಾಣಿ ಎಂದಾಗಲಿ ಸ್ವತಂತ್ರತ್ವಾದಿ ಧರ್ಮಗಳು ನಮಲ್ಲಿ ಇಲ್ಲವೆಂದಾಗಲಿ ತಿಳಿದಿರುವ **ಏತೇ** ಈ **ಬ್ರಹ್ಮಾದಯಃ** ಬ್ರಹ್ಮಾದಿದೇವತೆಗಳು **ಯದಾ** ಯಾವಾಗ (ಯಾವಕಾರಣ) **ನ ಉಪಸಸೃಪುಃ** ಸಮೀಪಿಸಲಿಲ್ಲವೋ **ತದಾ** ಆಗ **ನಿಖಿಲಾತ್ಮಕತ್ವಾತ್** ಸರ್ವತ್ರ ವ್ಯಾಪ್ತನಾದ್ದರಿಂದ **ತತ್ರ** ಗಜೇಂದ್ರನಿದ್ದಲ್ಲಿ **ಅಖಿಲಾಮರವರಃ** ಎಲ್ಲ ದೇವತೋತ್ತಮನಾದ **ಹರಿಃ** ತಾಪಸಮನುವಾದ ಶ್ರೀಹರಿಯು **ಆವಿರಾಸೀತ್** ಗಜೇಂದ್ರನಿಗೆ ಪ್ರತ್ಯಕ್ಷನಾದನು.

**ನಿಖಿಲ** ಸರ್ವತ್ರ **ಆತ್ಮಕ** ವ್ಯಾಪ್ತನಾದವನು ಹೀಗೆ ನಿಖಿಲವ್ಯಾಪ್ತನೆಂದುದರಿಂದ ದೂರದಿಂದ ಬರಲಿಲ್ಲವೆಂದು ತಿಳಿಸಿರುವರು. ಅಥವಾ **ನಿಖಿಲ** ಬ್ರಹ್ಮಾದಿಗಳಿಗೆ **ಆತ್ಮಕ** ಸ್ವಾಮಿಯಾದ್ದರಿಂದ ಶ್ರೀಹರಿಯು ಬಾರದೇ ತಾವು ಬಂದರೂ ಉಪಯೋಗವಿಲ್ಲವೆಂದು ಬ್ರಹ್ಮಾದಿಗಳು ಬಾರದಿರುವದಕ್ಕೆ ಕಾರಣವನ್ನು ನಿಖಾಲಾತ್ಮಕ ಪದದಿಂದ ತಿಳಿಸಿರುವರು ಎಂದಾದರೂ ಅರ್ಥ ಹೇಳಬಹುದು.

ಗಜೇಂದ್ರನು ಮಾಡಿದ ಸ್ತೋತ್ರದಲ್ಲಿ ಹೇಳಿದ ಗುಣಗಳು ಬ್ರಹ್ಮಾದಿಗಳಲ್ಲಿ ಇಲ್ಲವೆಂದಾದರೆ ವಿಷ್ಣುವಿನಲ್ಲಾದರೂ ಇರಲು ಹೇಗೆ ಸಾಧ್ಯ? ಎಂದು ಶಂಕಿಸಿದರೆ **ಅಖಿಲಾಮರವರಃ** ಬ್ರಹ್ಮಾದಿಗಳಿಗಿಂತ ಉತ್ತಮನಾದುದರಿಂದ ವಿಷ್ಣುವಿನಲ್ಲಿ ಎಲ್ಲ ಗುಣಗಳು ಉಂಟು. ಮತ್ತು ವಿಷ್ಣುವಿಗಿಂತಲೂ ಉತ್ತಮನು ಇನ್ನೊಬ್ಬ ಇದ್ದರೆ ಅವನೇ ಏಕೆ ಗಜೇಂದ್ರನ ಸಮೀಪ ಬರಲಿಲ್ಲ ಎಂಬ ಶಂಕೆಯೂ ಪರಿಹೃತವಾಯಿತು. ವಿಷ್ಣುವಿಗಿಂತಲೂ ಉತ್ತಮ ಮತ್ತೊಬ್ಬ ಯಾರೂ ಇಲ್ಲ. ಇಲ್ಲದವನು ಹೇಗೆ ಬಂದಾನು? ಆದ್ದರಿಂದ ಸರ್ವೋತ್ತಮ

ವಿಷ್ಣುವೇ ಆಗಿದ್ದಾನೆ. ವಿಷ್ಣುವಿಗಿಂತಲೂ ಉತ್ತಮನಾದವನು ಮತ್ತೊಬ್ಬನಿಲ್ಲ ಎಂದು ಸಿದ್ಧವಾಗುತ್ತದೆ.

ನಮ್ಮ ಅಸಾಧಾರಣ ಚಿಹ್ನೆಗಳನ್ನು ಹೇಳಿ ಕರೆದಿಲ್ಲವೆಂದು ಬ್ರಹ್ಮಾದಿಗಳು ಬರಲಿಲ್ಲ. ಶ್ರೀಹರಿಯು ಅವನು ಸ್ತುತಿಸಿದ ಎಲ್ಲ ಗುಣಗಳಿರುವದರಿಂದ ಬಂದನು. ''ಏಕೋ ನಾರಾಯಣ ಆಸೀತ್ ನ ಬ್ರಹ್ಮಾ ನ ಚ ಶಂಕರಃ'' ''ತತ ಏತೇ ವ್ಯಜಾಯಂತ'' ''ತಮುಹಮಜಮನಂತಮಾತ್ಮತಂತ್ರಂ ಜಗದುದರಸ್ಥಿತಿಸಂಯಮಾತ್ಮಶಕ್ತಿಮ್ । ದ್ಯುಪತಿಭಿರಜಶಕ್ರಶಂಕರಾದ್ಯೈರ್ದುರವಸಿತಸ್ತವಮಚ್ಯುತಂ ನತೋಽಸ್ಮಿ'' ''ನ ಹಿ ದ್ರಷ್ಟುರ್ದೃಷ್ಟೇರ್ವಿಪರಿಲೋಪೋ ವಿದ್ಯತೇ'' ಮುಂತಾದ ಪ್ರಸಿದ್ಧವಾದ ಶ್ರುತಿ-ಸ್ಮೃತಿಗಳಂದ ಪ್ರತಿಪಾದ್ಯವಾದ, ಗಜೇಂದ್ರನಿಂದ ಸ್ತುತ್ಯವಾದ ಎಲ್ಲ ಧರ್ಮಗಳು ವಿಷ್ಣುವಿನಲ್ಲಿ ಮಾತ್ರ ಇವೆ ಎಂದು ತಿಳಿದು ಬರುವವು. ಆದ್ದರಿಂದ ಈ ಗುಣವುಳ್ಳವನು ವಿಷ್ಣು ಎಂಬಲ್ಲಿ ಸಂದೇಹವಿಲ್ಲ. ವಿಷ್ಣುವಿಗೇನೇ ಸರ್ವೋತ್ತಮತ್ವಾದಿಗಳು ಎಂಬುದನ್ನೂ ನಾವು ಮಾಡಿದ ವಿರಾಟೋದ್ಯೋಗಪರ್ವಟಿಪ್ಪಣಿ ಮುಂತಾದಲ್ಲಿ ನೋಡಿರಿ ಎನ್ನುತ್ತಾರೆ ಲಿಂಗೇರಿ ಆಚಾರ್ಯರು (ವಿಸ್ತಾರಭಯದಿಂದ ಇಲ್ಲಿ ಹೇಳಿಲ್ಲ) ''ಪೂರ್ಣಮದಃ ಪೂರ್ಣಮಿದಂ'' ಎಂಬ ಶ್ರುತಿಯು ಅವತಾರ ಮತ್ತು ಮೂಲರೂಪಗಳಿಗೆ ವಿಶೇಷವಿಲ್ಲವೆಂದು ತಿಳಿಸುವದು.

**ಹರಿಸ್ತಾಪಸನಾಮಾಽಸೌ ಜಾತಸ್ತಪಸಿ ವೈ ಮನುಃ ।**
**ಗಜೇಂದ್ರಂ ಮೋಚಯಾಮಾಸ ಸಸರ್ಜ ಚ ಜಗತ್ಪ್ರಭುಃ ॥**

ಎಂಬ ಪ್ರಮಾಣವು ತಾಪಸಮನುವಾಗಿ ಅವತರಿಸಿದ ಶ್ರೀಹರಿಯೇ ಗಜೇಂದ್ರನನ್ನೂ ಮೋಚನ ಮಾಡಿದ್ದಾನೆಂದು ತಿಳಿಸುತ್ತದೆ.

ಸತ್ಯ ಃ- **ಉಪವರ್ಣಿತನಿರ್ವಿಶೇಷಂ** ಸ್ವಗತಭೇದಶೂನ್ಯನೆಂದು ಸ್ತುತನಾದ, **ವಿವಿಧಲಿಂಗಭಿದಾಭಿಮಾನಾಃ** ತಮ್ಮ ಹಂಸಾಸನತ್ವ-ವೃಷಭವಾಹನತ್ವ ಮುಂತಾದ ಬೇರೆ ಬೇರೆ ಚಿಹ್ನೆಗಳ ವೈಲಕ್ಷಣ್ಯದಿಂದುಂಟಾದ ಅಭಿಮಾನ ಉಳ್ಳ ಬ್ರಹ್ಮಾದಿಗಳು, ನಮ್ಮ ಹೆಸರನ್ನು ಹಿಡಿದು ಈ ಗಜೇಂದ್ರನು ಆಹ್ವಾನಿಸಿಲ್ಲ ಎಂದು **ನೋಪಸಸೃಪುಃ** ಗಜೇಂದ್ರನ ಹತ್ತಿರ ಬರಲಿಲ್ಲ. ಗಜೇಂದ್ರನಿದ್ದಲ್ಲಿ **ಹರಿಃ** ತಾಪಸನಾಮಕನು **ಆವಿರಾಸೀತ್** ಪ್ರಾದುರ್ಭೂತನಾದನು. ಗಜೇಂದ್ರ ದೇವರನ್ನು ಸ್ತುತಿಸಿದನು ಎಂದು ದೇವರಿಗೆ ಯಾರು ಹೇಳಿದರು ಎಂದರೆ **ನಿಖಿಲಾತ್ಮಕತ್ವಾತ್** ಎಂದು ಹೇಳುತ್ತಿದ್ದಾರೆ. ಭಗವಂತ ಸರ್ವಾಂತರ್ಯಾಮಿಯಾದ್ದರಿಂದ ಗಜೇಂದ್ರನು ತನ್ನನ್ನೇ ಸ್ತುತಿಸಿದ್ದಾನೆಂದು ತಾನೇ ತಿಳಿದು ಆವಿರ್ಭೂತನಾದ ಎಂದು ತಿಳಿಯಬೇಕು.

ಅಂತರಾಲಿಕಸಂಕಲ್ಪಿತ ಏತತ್ಕಂ ಕರಿಣಂ ಇತ್ಯಪಿ ಈರಯತಿ. ಇನ್ನೆಂದೂ ನೀರಲ್ಲಿ ಪ್ರವೇಶಿಸಬೇಕೆಂಬ ಇಚ್ಛೆಯನ್ನು ಕಳೆದುಕೊಂಡ ಆನೆಯನ್ನು ಎಂದೂ ಅರ್ಥವನ್ನು ತಿಳಿಯಬೇಕು. ಉಪವರ್ಣಿತನಿರ್ವಿಶೇಷಂ **ಉಪವರ್ಣಿತಾ** ''ನಮಾಮಿ ಮೇ'' ಮುಂತಾಗಿ ಹೇಳಲ್ಪಟ್ಟ **ವಿಶಾ** ಜಲಾಂತಃಪ್ರವೇಶದ **ಈಷಾ** ಇಚ್ಛೆಯು ನಿರ್ಗತಾ ವಿಶೇಷಾ ಯೇನ ತಂ ಉಪವರ್ಣಿತನಿರ್ವಿಶೇಷಮ್ ।

**ಅಖಿಲಾಮರವರಃ** ಎಂದು ಉಳಿದವರು ಬರದಿರಲು ಇವನು ಪ್ರಾದುರ್ಭವಿಸಲು ಸರ್ವಾಂತರ್ಯಾಮಿತ್ವ ಮುಂತಾದವುಗಳಿಗೆ ಸಂಭಾವಕವನ್ನು ಹೇಳಿರುವರು. ಯದಾ ತದಾ ಎಂಬ ಪದಗಳು ಹೇತ್ವರ್ಥಕವಾಗಿವೆ.

ಪ್ರಾದುರ್ಭೂತನಾದ ಪರಮಾತ್ಮನು ಅಲ್ಲಿಯೇ ನಿಂತು ಗಜೇಂದ್ರನನ್ನು ರಕ್ಷಿಸಿದನೇ ಇಲ್ಲಿ ಬಂದನೇ ಎಂದರೆ ಹೇಳುವರು-

**ತಂ ತದ್ವದಾರ್ತಮುಪಲಭ್ಯ ಜಗನ್ನಿವಾಸಃ**
**ಸ್ತೋತ್ರಂ ನಿಶಮ್ಯ ದಿವಿಜೈಃ ಸಹ ಸಂಸ್ತುವದ್ಭಿಃ ।**
**ಛಂದೋಮಯೇನ ಗರುಡೇನ ಸಮುಹ್ಯಮಾನ-**
**ಶ್ಚಕ್ರಾಯುಧೋ ಹ್ಯಗಮದಾಶು ಯತೋ ಗಜೇಂದ್ರಃ ॥೨೯॥**

**ಜಗನ್ನಿವಾಸಃ** ಸಕಲಜಗತ್ತಿಗೂ ಆಶ್ರಯನಾದ, ಅಥವಾ ಜಗತ್ತೇ ಆಶ್ರಯವಾಗಿವುಳ್ಳ ''ಜಗತ್ ಪ್ರಾಣಃ'' ಎಂದು ಅಮರವಿರುವದರಿಂದ ಪ್ರಾಣಾಶ್ರಯನಾದ ಶ್ರೀಹರಿಯು **ಚಕ್ರಾಯುಧಃ** ಪ್ರಕೃತನಕ್ರವಕ್ತ್ರವಿಪಾಟನಾರ್ಥಂ ಮೊಸಳೆಯ ಮುಖವನ್ನು ಕತ್ತರಿಸಲು ಚಕ್ರವನ್ನು ತೆಗೆದುಕೊಂಡವನಾಗಿ **ತಂ** ಆ ಗಜೇಂದ್ರನನ್ನು **ತದ್ವದಾರ್ತಂ** ಶ್ರೀಹರಿಯು ದಯೆತೋರಿ ಪ್ರಾದುರ್ಭಾವ ವಾಗುವಂತೆ ದುಃಖಿತನಾದ, **ತದ್ವದೇವಾರ್ತಂ** ಅಂದರೆ ಅವನಂತೆಯೇ ದುಃಖಿತನಾದ ಅವನನ್ನು ''ರಾಮರಾವಣಯೋರ್ಯುದ್ಧಂ ರಾಮರಾವಣಯೋರಿವ'' ಎಂಬಂತೆ ಇವನಂತಹ ದುಃಖಿತರು ಮತ್ತೊಬ್ಬರಿಲ್ಲವೆಂದು ಭಾವ. **ಉಪಲಭ್ಯ** ತಿಳಿದು **ಸ್ತೋತ್ರಂ** ಗಜೇಂದ್ರನು ಮಾಡಿದ ಸ್ತುತಿಯನ್ನು **ನಿಶಮ್ಯ** ಕೇಳಿ **ಸಂಸ್ತುವದ್ಭಿಃ** ಸ್ತೋತ್ರಮಾಡುವ **ದಿವಿಜೈಃ ಸಹ** ದೇವತೆಗಳಿಂದ ಕೂಡಿಕೊಂಡು **ಛಂದೋಮಯೇನ** ವೇದಾಭಿಮಾನಿಯಾದ, ವೇದಪ್ರತಿಪಾದ್ಯರಲ್ಲಿ ಇಂದ್ರಾದಿಗಳಿಗಿಂತ ಉತ್ತಮನಾದ **ಗರುಡೇನ** ಗರುಡನಿಂದ **ಸಮುಹ್ಯಮಾನಃ** ಹೊತ್ತುಕೊಳ್ಳಲ್ಪಟ್ಟವನಾಗಿ ಗರುಡಾರೂಢನಾಗಿ **ಗಜೇಂದ್ರಃ ಯತಃ** ಗಜೇಂದ್ರನು ಎಲ್ಲಿದ್ದನೋ ಆ ಸರೋವರಸಮೀಪಕ್ಕೆ **ಆಶು** ಬೇಗನೇ **ಅಗಮತ್** ಬಂದನು **ಹಿ** ಶ್ರೀಹರಿಯು ಕರುಣಾಮಯಿ ಎಂಬುದು ಶಾಸ್ತ್ರಸಿದ್ಧವು.

**ಛಂದೋಮಯೇನ** ಮೇಲೆ ಕುಳಿತ ಶ್ರೀಹರಿಯ ಇಚ್ಛೆಯಂತೆ ಗಮನ ಉಳ್ಳ ಗರುಡನಿಂದ ''ಅಯಪಯಮಯೇತಿ ಮಯಿರ್ಗತ್ಯರ್ಥಃ'' ಮಯ ಎಂಬ ಧಾತು ಗತ್ಯರ್ಥಕವಾಗಿದೆ. ಮಯತೇ ಇತಿ ಮಯಃ ತೇನ ಆದ್ದರಿಂದ ಭಗವಂತನ ಇಚ್ಛೆಗೆ ಅನುಗುಣವಾದ ಗಮನ ಉಳ್ಳ ಎಂದು ಅರ್ಥ ಹೇಳಬಹುದು.

ಅಥವಾ ಛಂದೋಮಯೇನ ಎಂದರೆ ವೇದಾಭಿಮಾನಿಯಾದ್ದರಿಂದ ವೇದಮುಖ್ಯನಾದ ಗರುಡನಿಂದ ಎಂತಲೂ ಅರ್ಥ ಮಾಡಬಹುದು. ''ಸರ್ವವೇದಾಭಿಮಾನ್ಯೇವ ಗರುಡೋ ವೇದಪೂರುಷಃ'' ಎಂದು ಐತರೇಯ ಭಾಷ್ಯದಲ್ಲಿದೆ. ಸಾಮಸ್ತೋಮವನ್ನು ಉಚ್ಚರಿಸುವ ರೆಕ್ಕೆಗಳುಳ್ಳನಾದ್ದರಿಂದಲೂ ಗರುಡನು ಛಂದೋಮಯನಾಗಿದ್ದಾನೆ. ಭಾಗವತ ತೃತೀಯಸ್ಕಂಧದಲ್ಲಿ ''ಆಕರ್ಣಯನ್ ಪತ್ರರಥೇಂದ್ರಪ್ರತ್ರೈರುಚ್ಚಾರಿತಂ ಸ್ತೋಮಮುದೀರ್ಣಸಾಮ'' ಎಂದು ಹೇಳಿದೆ.

ಹಿ ಶಬ್ದವು ''ಯಾ ತ್ವರಾ ದ್ರೌಪದೀತ್ರಾಣೇ ಯಾ ತ್ವರಾ ಗಜರಕ್ಷಣೇ'' ಮುಂತಾದ ತ್ವರಾಪ್ರಸಿದ್ಧಿಯನ್ನು ತಿಳಿಸುವದು. ಗರುದ್ಭಿಃ ಡೀಯತೇ ಇತಿ ಗರುಡಃ, ''ಡೀಙ್ ವಿಹಾಯಸಾ ಗತೌ'' ಎಂಬ ಧಾತುಕೋಶವಿದೆ. ರೆಕ್ಕೆಗಳಿಂದ ಆಕಾಶಮಾರ್ಗದಿಂದ ಹೋಗುವ ಎಂದರ್ಥ. ''ಗರುತ್ಮಾನ್ ಗರುಡಸ್ತಾರ್ಕ್ಷ್ಯಃ'' ಎಂದು ಅಮರಕೋಶವಿದೆ.

**ಸೋಽಂತಃ ಸರಸ್ಯುರುಬಲೇನ ಗೃಹೀತ ಆರ್ತೋ**
**ದೃಷ್ಟ್ವಾ ಗರುತ್ಮತಿ ಹರಿಂ ಖ ಉಪಾತ್ತಚಕ್ರಮ್ ।**
**ಉತ್ಕ್ಷಿಪ್ಯ ಸಾಂಬುಜಕರಂ ಗಿರಮಾಹ ಕೃಚ್ಛ್ರಾತ್**
**ನಾರಾಯಣಾಖಿಲಗುರೋ ಭಗವನ್ನಮಸ್ತೇ ॥೩೦॥**

**ಸರಸಿ ಅಂತಃ** ಸರೋವರದ ಮಧ್ಯದಲ್ಲಿ **ಉರುಬಲೇನ** ದಿನದಿನಕ್ಕೂ ಹೆಚ್ಚುತ್ತಿದ್ದ ಬಹುಬಲವುಳ್ಳ **ಗ್ರಾಹೇಣ** ಮೊಸಳೆಯಿಂದ **ಗೃಹೀತಃ** ಹಿಡಿಯಲ್ಪಟ್ಟು **ಆರ್ತಃ** ದುಃಖಿತನಾದ **ಸಃ** ಗಜೇಂದ್ರನು **ಖೇ** ಆಕಾಶದಲ್ಲಿ **ಗರುತ್ಮತಿ** ಗರುಡನ ಮೇಲೆ ಕುಳಿತ **ಉಪಾತ್ತಚಕ್ರಂ** ಚಕ್ರವನ್ನು ಧರಿಸಿದ್ದ **ಹರಿಂ** ಶ್ರೀಹರಿಯನ್ನು **ದೃಷ್ಟ್ವಾ** ನೋಡಿ **ಸಾಂಬುಜಕರಂ** ಕಮಲವನ್ನು ಹಿಡಿದ ಸೊಂಡಿಲನ್ನು **ಉತ್ಕ್ಷಿಪ್ಯ** ಮೇಲೆ ಎತ್ತಿ **ನಾರಾಯಣ** ಗುಣಪೂರ್ಣನಾದ ಅಪರಿಚ್ಛಿನ್ನಾದ **ಭಗವನ್** ಸಮಗ್ರ ಐಶ್ವರ್ಯಸಂಪನ್ನನಾದ **ಅಖಿಲಗುರೋ** ಎಲ್ಲರಿಗೂ ಗುರುವಾದ ಶ್ರೇಷ್ಠನಾದ **ತೇ** ನಿನಗೆ **ನಮಃ** ನಮಸ್ಕಾರವು **ಇತಿ** ಎಂದು **ಗಿರಂ** ಮಾತನ್ನು **ಕೃಚ್ಛ್ರಾತ್** ಬಹಳ ಪ್ರಯಾಸದಿಂದ **ಆಹ** ಹೇಳಿದನು.

ಸತ್ಯ ಃ- ಆಹಾರವಿಲ್ಲದೇ ಬಹಳ ದಿನ ಇದ್ದದ್ದರಿಂದ ಬಳಲಿದವನಾಗಿ ಅತಿ ಕಷ್ಟದಿಂದ ಗಜೇಂದ್ರ ಮಾತನಾಡಿದ ಎಂದು ತಿಳಿಯಬೇಕು. ಆನೆಯು ಸೊಂಡಿಲಲ್ಲಿ ಕಮಲವನ್ನು

ಹಿಡಿದಿದೆ. ಆ ಕಮಲ ಪರಮಾತ್ಮನ ಪತ್ನಿಯಾದ ಲಕ್ಷ್ಮೀದೇವಿಗೆ ಮನೆಯಾಗಿದೆ. ಹೀಗೆ ರಮಾದೇವಿಗೆ ಮನೆಯಾದ ಕಮಲಕ್ಕೆ ಆಶ್ರಯವಾದುದರಿಂದ ಗಜೇಂದ್ರ ದಯನೀಯ ಎಂಬ ಸೂಚನೆ ಇಲ್ಲಿ ಇದೆ.

♦ ಸೂರ್ಯಶ್ಛಾಯಾಶ್ರಿತಾನಾಂ ನ ಕರೋತಿ ತಾಪಮ್ । ಕ್ರೂರೋಽಪಿ ಮರ್ತ್ಯಃ ಸ್ವಕಲತ್ರಸಾಂದ್ರಸಂಬಂಧಭಾಜಾಂ ನ ಹಿ ತಾಪದಾಯೀ ॥ ಹೆಂಡತಿಯ ಸಂಬಂಧಿಕರಿಗೆ ಎಂಥ ಕ್ರೂರಿಯೂ ತೊಂದರೆ ಕೊಡುವುದಿಲ್ಲ. ಹೀಗೆ ರುಕ್ಮಿಣೀಶವಿಜಯದಲ್ಲಿ ಉಕ್ತವಾಗಿದೆ.

♦ ''ರಿಕ್ತಹಸ್ತೇನ ನೋಪೇಯಾತ್ ರಾಜಾನಂ ದೈವತಂ ಗುರುವ್'' ಎಂದಿರುವದರಿಂದ ಬರಿಗೈಯಿಂದ ದೇವತೆಗಳ ಹತ್ತಿರ, ಗುರುಗಳ ಹತ್ತಿರ ಹೋಗಬಾರದು ಎಂದು ನಿಯಮವಿದೆ. ಆದ್ದರಿಂದ ದೇವೋತ್ತಮನಿಗೆ ಗೌರವಿಸಲು ಕಮಲ ಧರಿಸಿದನೆಂದೂ ಹೇಳಬಹುದು. ॥೩೦॥

ಭಗವಂತ ಬಂದು ಏನು ಮಾಡಿದ ಎಂಬುದನ್ನು ಹೇಳುತ್ತಿದ್ದಾರೆ-

**ತಂ ವೀಕ್ಷ್ಯ ಪೀಡಿತಮಜಃ ಸಹಸಾವತೀರ್ಯ**
**ಸಗ್ರಾಹಮಾಶು ಸರಸಃ ಕೃಪಯೋಜ್ಜಹಾರ ।**
**ಗ್ರಾಹಾದ್ ವಿಪಾಟಿತಮುಖಾದರಿಣಾ ಗಜೇಂದ್ರಂ**
**ಸಂಪಶ್ಯತಾಂ ಹರಿರಮೂಮುಚದುಸ್ರಿಯಾಣಾಮ್ ॥೩೧॥**

**॥ ಇತಿ ಶ್ರೀಮದ್ಭಾಗವತೇ ಅಷ್ಟಮಸ್ಕಂಧೇ ತೃತೀಯೋಽಧ್ಯಾಯಃ ॥**

**ಅಜಃ** ಉತ್ಪತ್ತ್ಯಾದಿದೋಷಗಳಿಲ್ಲದ **ಹರಿಃ** ಹರಿನಾಮಕನಾದ ಪರಮಾತ್ಮನು (ಗ್ರಾಹೇಣ) ಮೊಸಳೆಯಿಂದ **ಪೀಡಿತಂ** ದುಃಖಕ್ಕೆ ಗುರಿಯಾಗಿದ್ದ **ತಂ ಗಜೇಂದ್ರಂ** ಆ ಆನೆಯನ್ನು **ವೀಕ್ಷ್ಯ** ನೋಡಿ (ಸೊಂಡಿಲಲ್ಲಿ ಕಮಲ ಹಿಡಿದು ನಮಸ್ಕರಿಸಿದ್ದನ್ನು ನೋಡಿ) **ಸಹಸಾ** ಕೂಡಲೇ **ಅವತೀರ್ಯ** ಗರುಡನಿಂದಿಳಿದು **ಕೃಪಯಾ** ಕರುಣೆಯಿಂದ **ಆಶು** ಕೂಡಲೇ **ಸಗ್ರಾಹಂ** ಮೊಸಳೆಯಿಂದ ಕೂಡಿದ ಆನೆಯನ್ನು **ಸರಸಃ** ಸರೋವರದಿಂದ **ಉಜ್ಜಹಾರ** ಮೇಲೆತ್ತಿದನು. **ಅಥ** ಅನತಂರ **ಉಸ್ರಿಯಾಣಾಂ** ದೇವತೆಗಳು **ಸಂಪಶ್ಯತಾಂ** ನೋಡುತ್ತಿರಲು **ಅರಿಣಾ** ಚಕ್ರದಿಂದ **ವಿಪಾಟಿತಮುಖಾತ್** ಸೀಳಿ ಹೋದ ಬಾಯಿಯುಳ್ಳ **ಗ್ರಾಹಾತ್** ಮೊಸಳೆಯಿಂದ ಆನೆಯನ್ನು **ಅಮೂಮುಚತ್** ಮುಕ್ತಿಗೊಳಿಸಿದನು. ಮೊಸಳೆಯ ಬಾಯಿಯನ್ನು ಸೀಳಿ ಅದರ ಹಿಡಿತದಿಂದ ಆನೆಯನ್ನು ಬಿಡಿಸಿದನು ಎಂದರ್ಥ.

ಸತ್ಯ :- ಅಜಃ ಸ್ವಯಂ ತಾನು ಕಾಲುಗಳಿಂದ ನಡೆಯುವವನಾಗಿ ಎಂದು ಅರ್ಥವನ್ನು ತಿಳಿಯಬೇಕು. ''ಅಜಗತಿಕ್ಷೇಪಣಯೋಃ'' ಎಂದು ಧಾತು ಇದೆ. ಗರುಡ ದೇವರನ್ನು

ಹೊತ್ತು ಶ್ರಾಂತನಾಗಿದ್ದ. ಹೀಗಾಗಿ ಗರುಡನು ವೇಗದಿಂದ ಹೋಗುತ್ತಿರಲಿಲ್ಲ. ಆದ್ದರಿಂದ ತಾನೇ ನಡೆದು ಹೋದ. ಎಂಬ ಅರ್ಥವನ್ನು ತಿಳಿಯಬೇಕು.

ಈ ಅರ್ಥಕ್ಕೆ ಪೋಷಕವಾಗುವಂತೆ ತಂ ಪೀಡಿತಂ ಎಂಬುದನ್ನು ಗರುಡನಿಗೆ ಅನ್ವಯಮಾಡಿಕೊಳ್ಳಬೇಕು. **ತಂ** ಗರುಡನನ್ನು **ಪೀಡಿತಂ** ಶ್ರಮದಿಂದ ಪೀಡಿನನ್ನಾಗಿ **ವೀಕ್ಷ್ಯ** ನೋಡಿ **ಕೃಪಯಾ** ಗರುಡನ ಮೇಲಿನ ದಯೆಯಿಂದ **ಸಹಸಾ ಅವತೀರ್ಯ** ಕೂಡಲೇ ಗರುಡನಿಂದ ಇಳಿದು **ಅಜಃ** ಸ್ವಯಂ ತಾನು ನಡೆಯುವವನಾಗಿ ಗಜೇಂದ್ರನನ್ನು ಶೀಘ್ರವಾಗಿ ಸೇರಿ ಅವನನ್ನು ಸಂರಕ್ಷಿಸಿದನು ಎಂದು ಮುಂದೆ ಅನ್ವಯ ಹೇಳಬೇಕು.

**ತ್ರಾಹೀತಿ ವ್ಯಾಹರಂತಂ ತ್ರಿದಶರಿಪುಸುತಂ ತ್ರಾತುಕಾಮೋ ರಹಸ್ಯೇ**
**ವಿಸ್ರಸ್ತಂ ಪೀತವಸ್ತ್ರಂ ನಿಜಕಟಿಯುಗಲೇ ಸವ್ಯಹಸ್ತೇನ ಗೃಹ್ಣನ್ ।**
**ವೇಗಶ್ರಾಂತಂ ನಿತಾಂತಂ ಖಗಪತಿಮಮೃತಂ ಪಾಯಯನ್ ಅನ್ಯಪಾಣೌ**
**ಸಿಂಹಾದ್ರೌ ಶೀಘ್ರಪಾತಾ ಕ್ಷಿತಿಪಿಹಿತಪದಃ ಪಾತು ಮಾಂ ನಾರಸಿಂಹಃ ॥**

ಎಂದು ಸಿಂಹಾಚಲಮಾಹಾತ್ಮ್ಯದಲ್ಲಿ ಹೇಳಿದೆ. ಪ್ರಹ್ಲಾದ ತನ್ನನ್ನು ರಕ್ಷಿಸು ಎಂದು ಪ್ರಾರ್ಥಿಸಿದ. ಅವನನ್ನು ರಕ್ಷಿಸಲು ದೇವರು ಧಾವಿಸಿ ಬರುತ್ತಿದ್ದ. ಬರುವಾಗ ಪೀತಾಂಬರವು ಕಳಚಿತು. ಕಳಚಿದ ಪೀತಾಂಬರವನ್ನು ಎಡಗೈಯಿಂದ ತನ್ನ ಟೊಂಕದಲ್ಲಿಯೇ ಇರುವಂತೆ ಮಾಡಿದ. ವೇಗದಿಂದ ಗರುಡ ಶ್ರಾಂತನಾಗಿದ್ದ. ಬಲಗೈಯಿಂದ ನೀರನ್ನು ಕುಡಿಸುತ್ತಾ ಗರುಡನಿಗೆ ಬಲವನ್ನಿತ್ತ. ಶೀಘ್ರದಲ್ಲಿ ಭೂಮಿಯ ಮೇಲೆ ಸಿಂಹಾಚಲದಲ್ಲಿ ಪಾದವನ್ನಿರಿಸದ ನರಸಿಂಹ. ಅಂಥ ನರಸಿಂಹ ನಮ್ಮನ್ನು ರಕ್ಷಿಸಲಿ ಎಂದು ಭಾವ.

ಇಲ್ಲಿ ಗರುಡನಿಗೆ ಶ್ರಮ ಇದೆ ಎಂಬುದಾಗಿ ಹೇಳಿದೆ. ಇಲ್ಲಿ ಅಮೃತಪದದಿಂದ ನೀರು ಅಥವಾ ತುಪ್ಪವನ್ನು ಸ್ವೀಕರಿಸಬೇಕು. ದೇವಲೋಕದ ಅಮೃತವನ್ನಲ್ಲ. ಏಕೆಂದರೆ ಅಮೃತ ಕುಡಿಯದೆ ಅಜರಾಮರನಾಗೆಂದು ಗರುಡನಿಗೆ ವರವನ್ನೂ ಶ್ರೀಹರಿಯು ಕೊಟ್ಟವಿಷಯ ಆದಿಪರ್ವದಲ್ಲಿ ಹೇಳಿದೆ.

**ತಮುವಾಚಾವ್ಯಯೋ ದೇವೋ ವರದೋಽಸ್ಮೀತಿ ಖೇಚರ ।**
**ಸರ್ವವ್ರತಾವತಿಷ್ಠೇಯಮುಪರೀತ್ಯಂತರಿಕ್ಷಗಃ ।**

**ಉವಾಚ ಚೈನಂ ಭೂಯೋಽಪಿ ನಾರಾಯಣಮಿದಂ ವಚಃ ॥**
**ಅಜರಶ್ಚಾಮರಶ್ಚ ಸ್ಯಾಮಮೃತೇನ ವಿನಾಽಪ್ಯಹಮ್ ।**
**ಏವಮಸ್ತ್ವಿತಿ ತಂ ವಿಷ್ಣುರುವಾಚ ವಿನತಾಸುತಮ್ ॥**

ಆದ್ದರಿಂದ ಅಮೃತಪದಕ್ಕೆ ನೀರು ಅಥವಾ ತುಪ್ಪ ಎಂಬ ಅರ್ಥ ಹೇಳುವುದು ಸೂಕ್ತವಾಗಿದೆ. ''ಅಮೃತೇ ಸಲಿಲೇ ಘೃತೇ'' ಎಂದು ವಿಶ್ವವಿದೆ.

ಅಥವಾ ತನ್ನ ಪಾದಸಂಚಾರದಿಂದ ಪಡೆದ ಪಾವಿತ್ರ್ಯ ಉಳ್ಳ ಭೂಮಿಯ ಸಂಬಂಧವಾದಾಗ ಆ ಆನೆ ಮೊಸಳೆಗಳಿಗೆ ದುಷ್ಟದೇಹದಿಂದ ಮುಕ್ತಿಯಾಗುವದು. ಎಂಬ ಅಭಿಪ್ರಾಯದಿಂದ ಭೂಮಿಗೆ ಇಳಿದನು ಎಂದೂ ಹೇಳಬಹುದು. ಪೀಡಿತವಾದ ಆನೆಯನ್ನು ನೋಡಿ ಮೊಸಳೆ ಸಹಿತ ಆನೆಯನ್ನು ಸರೋವರದಿಂದ ಮೇಲೆತ್ತಿದನು ಎಂದು ಹೇಳಿದ್ದು ಫಲಿತಾರ್ಥ.

**ಅರಿಣಾ** ಸಾವಿರ ಹಲ್ಲಿನ ಚಕ್ರದಿಂದ ಸೀಳಿದ ಮೊಸಳೆಯ ಬಾಯಿಂದ ದೇವತೆಗಳು ನೋಡುವಾಗಲೆ ಗಜೇಂದ್ರನನ್ನು ಭಗವಂತ ಮೋಚನ ಮಾಡಿದನು. ''ಉಸ್ರಿಯಾ ವಿಜಯಾ ದೇವಾ ಆದಿತ್ಯಾ ಅಮರಾಃ ಸುರಾಃ'' ಎಂದು ಅಭಿಧಾನವಿದೆ. ''ಉಸ್ರಿಯಾ ಅಮರಾ ದೇವಾಃ'' ಎಂದು ನಾಮಮಹೋದಧಿ.

ಅಥವಾ ಉಸ್ರಾಃ ಕಿರಣಾಃ ಸಂತೀತಿ ಉಸ್ರಿಯಾಃ ಬಹುವಚನಮಾದ್ಯರ್ಥೇ. ಇಲ್ಲಿಯ ಬಹುವಚನ ಆದಿ ಎಂಬ ಅರ್ಥದಲ್ಲಿದೆ ಎಂದು ತಿಳಿಯಬೇಕು. ಕಿರಣಾದಿಗಳಿಂದ ಯುಕ್ತರಾದ ಸೂರ್ಯಾದಿದೇವತೆಗಳು ನೋಡುವಾಗ ಭಗವಂತ ಗಜೇಂದ್ರನನ್ನು ಮೋಚನಗೊಳಿಸಿದ ಎಂದು ಅರ್ಥ. ಅತ್ಯುತ್ತಮರಾದ ಬ್ರಹ್ಮಾದಿದೇವತೆಗಳು ಇರುವಾಗ ಸೂರ್ಯನ ಹೆಸರನ್ನು ಸ್ವೀಕರಿಸಿದ್ದು ಯಾಕೆ ಎಂಬ ಪ್ರಶ್ನೆ ಬರುವುದು ಸಹಜ. ಅದಕ್ಕಾಗಿ ಸಾಂಬುಜಕರಂ ಎಂಬುದರ ಅನುಸಂಧಾನ ಮಾಡಿಕೊಳ್ಳಬೇಕು. ಗಜೇಂದ್ರ ನೀಡಿದ ಕಮಲ ಒಣಗದೇ ಇರಲಿ ಎಂದು ಕಮಲವನ್ನು ಅರಳಿಸುವ ಸೂರ್ಯನನ್ನು ಪರಮಾತ್ಮ ಮುಂದೆ ಮಾಡಿದ ಎಂದು ತಿಳಿಯಬೇಕು. ।।೩೧।।

**ಇಲ್ಲಿಗೆ ಮೂರನೇ ಅಧ್ಯಾಯವು ಮುಗಿಯಿತು.**

★★★

# ಅಥ ಚತುರ್ಥೋಽಧ್ಯಾಯಃ

ಪಾಪವನ್ನು ಕಳೆದುಕೊಂಡವನಿಗೆ ಶ್ರೀಹರಿಯಲ್ಲಿ ನಿರತಿಶಯಭಕ್ತಿಯು ಜನಿಸುವದು. ಆದ್ದರಿಂದ ದುರಿತನಾಶಕ್ಕೆ ಸಾಧನವನ್ನು ಈ ಅಧ್ಯಾಯದಲ್ಲಿ ಹೇಳುತ್ತಾರೆ. ಮೊದಲು ಗಜೇಂದ್ರಮೋಕ್ಷಾನಂತರ ದೇವತೆಗಳು ಮಾಡಿದ ಭಗವತ್ಪ್ರೀತಿಸಾಧನವಾದ ಪುಷ್ಪವೃಷ್ಟಿಯನ್ನು ಹೇಳುತ್ತಾರೆ-

**ಶ್ರೀಶುಕ ಉವಾಚ**

**ತದಾ ದೇವರ್ಷಿಗಂಧರ್ವಾ ಬ್ರಹ್ಮೇಶಾನಪುರೋಗಮಾಃ ।**
**ಮುಮುಚುಃ ಕುಸುಮಾಸಾರಂ ಶಂಸಂತಃ ಕರ್ಮ ತದ್ಧರೇಃ ॥೧॥**

**ತದಾ** ಶ್ರೀಹರಿಯು ಗಜೇಂದ್ರನನ್ನು ಮೊಸಳೆಯ ಹಿಡಿತದಿಂದ ಬಿಡಿಸಿದಾಗ **ಬ್ರಹ್ಮೇಶಾನಪುರೋಗಮಾಃ** ಬ್ರಹ್ಮ-ರುದ್ರರೇ ಮುಂದಾಳುಗಳಾಗಿ ಉಳ್ಳ **ದೇವರ್ಷಿಗಂಧರ್ವಾಃ** ದೇವತೆಗಳು, ವಸಿಷ್ಠ ಮೊದಲಾದ ಋಷಿಗಳು, ನಾರದಾದಿ ದೇವರ್ಷಿಗಳು ಮತ್ತು ಗಂಧರ್ವರು **ಹರೇಃ** ತಾಪಸನಾಮಕ ಶ್ರೀಹರಿಯ **ತತ್ಕರ್ಮ** ಗಜೇಂದ್ರಮೋಚನರೂಪವಾದ ಕರ್ಮವನ್ನು **ಶಂಸಂತಃ** ಹೊಗಳುತ್ತ **ಕುಸುಮಾಸಾರಂ ಮುಮುಚುಃ** ಶ್ರೀಹರಿಯ ಮೇಲೆ ಹೂಗಳ ಧಾರೆಗಳನ್ನು ಸುರಿಸಿದರು. ॥೧॥

**ನೇದುರ್ದುಂದುಭಯೋ ದಿವ್ಯಾ ಗಂಧರ್ವಾ ನನೃತುರ್ಜಗುಃ ।**
**ಋಷಯಶ್ಚಾರಣಾಃ ಸಿದ್ಧಾಸ್ತುಷ್ಟುವುಃ ಪುರುಷೋತ್ತಮಮ್ ॥೨॥**

**ದಿವ್ಯಾಃ** ದೇವಲೋಕದ **ದುಂದುಭಯಃ** ವಾದ್ಯವಿಶೇಷಗಳು **ವಿನೇದುಃ** ತಾವಾಗಿಯೇ ಮೊಳಗಿದವು. **ಗಂಧರ್ವಾಃ** ಗಂಧರ್ವರು **ನನೃತುಃ** ನರ್ತನ ಮಾಡಿದರು. **ಜಗುಃ** ಗಾನ ಮಾಡಿದರು. ಗಂಧರ್ವಸ್ತ್ರೀಯರು ನರ್ತಿಸಿದರು. ಪುರುಷರು ಹಾಡಿದರು ಎಂದೂ ಅರ್ಥ. **ಋಷಯಃ** ಋಷಿಗಳು **ಚಾರಣಾಃ** ಚಾರಣರು **ಸಿದ್ಧಾಃ** ಸಿದ್ಧರು **ಪುರುಷೋತ್ತಮಂ** ಕ್ಷರಾಕ್ಷರಪುರುಷರಿಗಿಂತ ಉತ್ತಮನಾದ ಶ್ರೀಹರಿಯನ್ನು **ತುಷ್ಟುವುಃ** ಸ್ತುತಿಸಿದರು.

''ದೇವವಾದ್ಯಾನ್ಯವಾದ್ಯಂತ ಸ್ವಯಮೇವ'' ಎಂದು ಹರಿವಂಶದಲ್ಲಿ ಹೇಳಿದೆ. ಗಂಧರ್ವ್ಯಶ್ಚ ಗಂಧರ್ವಾಶ್ಚ ಗಂಧರ್ವಾಃ ಪುಮಾಂಸ್ತ್ರಿಯಾ ಎಂದು ಏಕಶೇಷಮಾಡಿಕೊಳ್ಳಬೇಕು. ।।೨।।

ಶ್ರೀಹರಿಯು ಮೊಸಳೆಗೆ ಅನುಗ್ರಹಿಸಿದನೇ ಇಲ್ಲವೆ? ಆ ಗ್ರಾಹವು ಮೊಸಳೆಯ ಜಾತಿಯದೋ ಅಥವಾ ಆನೆಯಂತೆ ಶಾಪದಿಂದ ಮೊಸಳೆ ದೇಹ ಪಡೆದದ್ದೋ? ಶಾಪದಿಂದ ಎಂದಾದರೆ ಆ ಗ್ರಾಹವು ಪೂರ್ವದಲ್ಲಿ ಯಾರು? ಈ ವಿಷಯವನ್ನೆಲ್ಲ ಹೇಳುವರು-

**ಯೋಽಸೌ ಗ್ರಾಹಃ ಸ ವೈ ಸದ್ಯಃ ಪರಮಾಶ್ಚರ್ಯರೂಪಧೃಕ್ ।**
**ಮುಕ್ತೋ ದೇವಲಶಾಪೇನ ಹೂಹೂರ್ಗಂಧರ್ವಸತ್ತಮಃ ।।೩।।**

**ಯಃ ಅಸೌ ಗ್ರಾಹಃ** ಯಾವನು ಶಾಪದಿಂದ ಮೊಸಳೆಯ ದೇಹವನ್ನು ಪಡೆದಿದ್ದನೋ **ಸಃ** ಅವನು **ಗಂಧರ್ವಸತ್ತಮಃ** ಗಂಧರ್ವಶ್ರೇಷ್ಠನಾದ **ಹೂಹೂಃ** ಹೂಹೂ ಎಂಬುವವನು ಶ್ರೀಹರಿಯ ಸ್ಪರ್ಶದಿಂದ ಮತ್ತು ಹಿಂದೆ ಮಾಡಿದ ಪುಣ್ಯಪ್ರಭಾವದಿಂದ ಶ್ರೀಹರಿಯನ್ನು ಜ್ಞಾನಪೂರ್ವಕವಾದ ಸ್ತೋತ್ರದಿಂದ ಪ್ರಸನ್ನೀಕರಿಸಿಕೊಂಡು ಆ ಪ್ರಸಾದದಿಂದ **ದೇವಲಶಾಪೇನ** ದೇವಲ ಋಷಿಗಳ ಶಾಪದಿಂದ **ಮುಕ್ತಃ** ಬಿಡುಗಡೆ ಹೊಂದಿದವನಾಗಿ **ಸದ್ಯಃ** ಶಾಪಮೋಚನ ಕ್ಷಣದಲ್ಲಿಯೇ **ಪರಮಾಶ್ಚರ್ಯರೂಪಧೃಕ್** ಬಹು ಆಶ್ಚರ್ಯಕರವಾದ ಗಂಧರ್ವ ರೂಪವನ್ನು ಧರಿಸಿದವನಾಗಿ. ।।೩।।

ದೇವಲಶಾಪೇನ ಯಃ ಗ್ರಾಹಃ ಅಸೌ ಮುಕ್ತಃ ಎಂದು ಅನ್ವಯಮಾಡಿಕೊಳ್ಳಬೇಕು. ಅಸೌ ಪದದ ನಂತರ ದುರ್ಯೋನೇಃ ಎಂದು ಶೇಷಮಾಡಿ ಅರ್ಥ ಮಾಡಬೇಕು. ದೇವಲರ ಶಾಪದಿಂದ ಯಾವನು ಮೊಸಳೆಯಾಗಿದ್ದನೋ ಆ ಗಂಧರ್ವನು ದುಷ್ಟವಾದ ಮೊಸಳೆಯ ಯೋನಿಯಿಂದ ಮುಕ್ತನಾದನು ಎಂದು ಅರ್ಥವಾಗುತ್ತದೆ. ಇದರಿಂದ ಮುಕ್ತಶಬ್ದಯೋಗವಿದ್ದಾಗ ಅಪಾದಾನೇ ಪಂಚಮೀ ಎಂಬುದರಿಂದ ದೇವಲಶಾಪಾತ್ ಎಂದು ಪಂಚಮೀ ಬರಬೇಕು. ದೇವಲಶಾಪೇನ ಎಂದು ತೃತೀಯಾ ಹೇಗೆ ಎಂಬ ಶಂಕೆ ನಿರಾಕೃತವಾಯಿತು. ಹೂಹೂರ್ಗಂಧರ್ವಸತ್ತಮಃ'' ಎಂಬ ಪಾಠ ಸರಿಯಾದುದು. ''ಹಾಹಾ ಹೂಹೂಶ್ಚೈವಮಾದ್ಯಾ ಗಂಧರ್ವಾಃ'' ಎಂದು ಅಮರವಿದೆ. ಹೂಹೂಗಂಧರ್ವ ಎಂಬ ಪಾಠದಲ್ಲಿ ಹೂಹೂಶ್ಚಾಸೌ ಗಂಧರ್ವಸತ್ತಮಶ್ಚ ಎಂದು ಸಮಸ್ತಪದವೆಂದಿಟ್ಟುಕೊಂಡು ವ್ಯಾಖ್ಯಾನಿಸಬೇಕು.

ಛಲಾರಿ ಆಚಾರ್ಯರು ಈ ಪ್ರಸಂಗದಲ್ಲಿ ಈ ರೀತಿಯಾಗಿ ಕಥೆಯನ್ನು ತಿಳಿಸುತ್ತಾರೆ. ಹೂಹೂ ಗಂಧರ್ವನು ಒಂದು ಸರೋವರದಲ್ಲಿ ಸ್ತ್ರೀಯರೊಡನೆ ಜಲಕ್ರೀಡೆ

ಮಾಡುತ್ತಲಿದ್ದ. ಆ ಸಂದರ್ಭದಲ್ಲಿ ದೇವಲ ಋಷಿಗಳು ಸ್ನಾನ ಮಾಡಲು ಆ ಸರೋವರವನ್ನು ಪ್ರವೇಶಿಸಿದರು. ಆ ಮುನಿಯ ಕಾಲು ಹಿಡಿದು ಎಳೆದನು. ಆಗ ಸಿಟ್ಟಿನಿಂದ ದೇವಲರು ಮೊಸಳೆಯಾಗೆಂದು ಶಾಪವಿತ್ತರು. ಶಾಪದಿಂದ ಭೀತನಾದ ಹೂಹೂಗಂಧರ್ವನು ಋಷಿಗಳನ್ನು ಶಾಪವಿಮೋಚನೆಗಾಗಿ ಬೇಡಿಕೊಂಡ. ಆ ಸಂದರ್ಭದಲ್ಲಿ ದೇವಲರು ಹೇಳಿದರು. ನನ್ನನ್ನು ಹಿಡಿದಂತೆ ಗಜೇಂದ್ರನನ್ನು ಹಿಡಿದುಕೋ. ಆಗ ಗಜೇಂದ್ರನನ್ನು ಉದ್ಧರಿಸುವ ಹರಿಯು ನಿನ್ನನ್ನೂ ಶಾಪದಿಂದ ಬಿಡಿಸುವನು. ಎಂದು ದೇವಲರು ಹೇಳಿದರು.

**ಪ್ರಣಮ್ಯ ಶಿರಸಾಽಧೀಶಮುತ್ತಮಶ್ಲೋಕಮವ್ಯಯಮ್ ।**
**ಅಗಾಯತ ಯಶೋಧಾಮ ಕೀರ್ತನ್ಯಗುಣಸತ್ಕಥಮ್ ॥೪॥**

**ಉತ್ತಮಶ್ಲೋಕಂ** ಬ್ರಹ್ಮಾದಿಗಳಿಂದ ಸ್ತುತ್ಯನಾದ **ಅವ್ಯಯಂ** ನಾಲ್ಕು ವಿಧನಾಶರಹಿತನಾದ **ಯಶೋಧಾಮ** ಕೀರ್ತಿಗೆ ಆಶ್ರಯನಾದ **ಕೀರ್ತನ್ಯಗುಣಸತ್ಕಥಂ** ಕೀರ್ತನೆ ಮಾಡಲು ಯೋಗ್ಯವಾದ ಭಕ್ತಾನುಕಂಪ ಮೊದಲಾದ ಗುಣಗಳಿಂದ ತುಂಬಿದ ನಿರ್ದುಷ್ಟ ಕಥೆಯುಳ್ಳ **ಅಧೀಶಂ** ಸರ್ವನಿಯಾಮಕನಾದ ಶ್ರೀಹರಿಯನ್ನು **ಶಿರಸಾ ಪ್ರಣಮ್ಯ** ತಲೆಬಾಗಿ ಭಕ್ತಿಯಿಂದ ನಮಸ್ಕಾರಮಾಡಿ **ಅಗಾಯತ** ಸ್ತೋತ್ರಮಾಡಿದನು.

ಇದರಿಂದ ಹರಿಗುಣಕೀರ್ತನವೆಂಬ ಗಾನವು ಗಾಯಕರಿಗೆ ಬಂದ ಶಾಪವನ್ನು ಕಳೆಯಲು ಸಮರ್ಥವೆಂದು ಹೇಳಿದಂತಾಯಿತು. ॥೪॥

**ಸೋಽನುಕಂಪಿತ ಈಶೇನ ಪರಿಕ್ರಮ್ಯ ಪ್ರಣಮ್ಯ ತಮ್ ।**
**ಲೋಕಸ್ಯ ಪಶ್ಯತೋ ಲೋಕಂ ಸ್ವಮಗಾನ್ಮುಕ್ತಕಿಲ್ಬಿಷಃ ॥೫॥**

**ಈಶೇನ** ಶ್ರೀಹರಿಯಿಂದ **ಅನುಕಂಪಿತಃ** ದಯೆಯಿಂದ ಅನುಗೃಹೀತನಾದ ಆದ್ದರಿಂದಲೇ **ಮುಕ್ತಕಿಲ್ಬಿಷಃ** ಋಷಿಗಳ ಅಪಚಾರಮಾಡಿದ ಪಾಪದಿಂದ ಮುಕ್ತನಾದ **ಸಃ** ಹೂಹೂಗಂಧರ್ವನು **ತಂ** ಶ್ರೀಹರಿಯನ್ನು **ಪರಿಕ್ರಮ್ಯ** ಪ್ರದಕ್ಷಿಣೆಮಾಡಿ **ಪ್ರಣಮ್ಯ** ಭಕ್ತಿಯಿಂದ ನಮಸ್ಕರಿಸಿ **ಲೋಕಸ್ಯ** ನೆರೆದಿದ್ದ ಜನರು (ದೇವತೆಗಳು) **ಪಶ್ಯತಃ ಸತಃ** ನೋಡುತ್ತಿದ್ದಂತಯೇ **ಸ್ವಂ ಲೋಕಂ** ತನ್ನ ಗಂಧರ್ವಲೋಕಕ್ಕೆ **ಅಗಾತ್** ಹೋದನು. ॥೫॥

ಪ್ರಸಂಗಸಂಗತಿಯಿಂದ ಹೇಳಬೇಕಾದ್ದನ್ನು ಹೇಳಿ ಪ್ರಕೃತವನ್ನು ಅನುಸರಿಸುವರು-

**ಗಜೇಂದ್ರೋ ಭಗವತ್‌ಸ್ಪರ್ಶಾತ್ ವಿಮುಕ್ತೋಽಜ್ಞಾನಬಂಧನಾತ್ ।**
**ಪ್ರಾಪ್ತೋ ಭಗವತೋ ರೂಪಂ ಪೀತವಾಸಾಶ್ಚತುರ್ಭುಜಃ ॥೬॥**

**ಭಗವತ್ಸ್ಪರ್ಶಾತ್** ''ಸ ಗ್ರಾಹಮಾಶು ಸರಸಾ ಕೃಪಯೋಜ್ಜಹಾರ'' ಎಂದು ಹೇಳಿದ ಭಗವಂತನ ಕರಸ್ಪರ್ಶದಿಂದ ಉಪಲಕ್ಷಣಯಾ ''ದೃಷ್ಟ್ವಾ ಗುರುತ್ಮತಿ ಹರಿಂ'' ಎಂಬುದಾಗಿ ಹೇಳಿದ ಭಗವದ್ದರ್ಶನದಿಂದಲೂ **ಅಜ್ಞಾನಬಂಧನಾತ್** ಅಜ್ಞಾನದಿಂದ ಬದ್ಧವಾದ ಗಜಜನ್ಮದಿಂದ **ವಿಮುಕ್ತಃ** ಮೋಚಿತನಾಗಿ **ಪೀತವಾಸಾಃ ಚತುರ್ಭುಜಃ** ಬಂಗಾರಬಣ್ಣದ ವಸ್ತ್ರ ನಾಲ್ಕು ಕೈಗಳು ಎಂಬ **ಭಗವತಃ ರೂಪಂ ಪ್ರಾಪ್ತಃ** ಶ್ರೀಹರಿಯ ಸದೃಶ ಆಕಾರವನ್ನು ಸಾರೂಪ್ಯವನ್ನು ಹೊಂದಿದನು. ।।೬।।

**ಸ ವೈ ಪೂರ್ವಮಭೂದ್ರಾಜಾ ಪಾಂಡ್ಯೋ ದ್ರವಿಡಸತ್ತಮಃ ।**
**ಇಂದ್ರದ್ಯುಮ್ನ ಇತಿ ಖ್ಯಾತೋ ವಿಷ್ಣುವ್ರತಪರಾಯಣಃ ।।೭।।**

**ಸಃ** ಶ್ರೀಹರಿಯ ಅನುಗ್ರಹದಿಂದ ಆನೆಯ ಜನ್ಮದಿಂದ ಮುಕ್ತನಾಗಿ ಸಾರೂಪ್ಯ ಉಳ್ಳ ದೇಹವನ್ನು ಹೊಂದಿದ ಆ ಜೀವನು **ಪೂರ್ವಂ** ಮೊದಲು (ಆನೆಯ ಹಿಂದಿನ ಜನ್ಮದಲ್ಲಿ) **ವಿಷ್ಣುವ್ರತಪರಾಯಣಃ** ವಿಷ್ಣುವಿಗೆ ಪ್ರೀತಿಕರವಾದ ವ್ರತಗಳಲ್ಲಿ ಅತ್ಯಂತ ಆಸಕ್ತಿಯುಳ್ಳ **ಪಾಂಡ್ಯಃ** ಪಾಂಡ್ಯದೇಶಕ್ಕೆ ಸೇರಿದ, **ದ್ರವಿಡಸತ್ತಮಃ** ದ್ರಾವಿಡ ದೇಶದಲ್ಲಿ ವಾಸಿಸುವವರಲ್ಲಿ ಉತ್ತಮನಾದ **ಇಂದ್ರದ್ಯುಮ್ನ ಇತಿ ಖ್ಯಾತಃ** ಇಂದ್ರದ್ಯುಮ್ನನೆಂಬ ಹೆಸರಿನಿಂದ ಪ್ರಸಿದ್ಧನಾದ **ರಾಜಾ** ಪ್ರಜಾರಂಜಕನಾದ ದೊರೆಯು **ಅಭೂತ್** ಆಗಿದ್ದನು. ।।೭।।

ಇಂಥವನಿಗೆ ಈ ಅವಸ್ಥೆ ಏಕೆ ಬಂತು ಎಂದರೆ ಅದಕ್ಕೆ ಕಾರಣ ಹೇಳಲು ಉಪೋದ್ಘಾತವನ್ನು ಹೇಳುವರು-

**ಸ ಏಕದಾಽಽರಾಧನಕಾಲ ಆತ್ಮವಾನ್**
**ಗೃಹೀತಮೌನವ್ರತ ಈಶ್ವರಂ ಹರಿಮ್ ।**
**ಜಟಾಧರಸ್ತಾಪಸ ಆಪ್ಲುತೋಽಚ್ಯುತಂ**
**ಸಮರ್ಚಯಾಮಾಸ ಕುಲಾಚಲಾಶ್ರಯಃ ।।೮।।**

**ಸಃ** ಆ ಇಂದ್ರದ್ಯುಮ್ನನು **ಏಕದಾ** ಒಂದು ಬಾರಿ **ಆರಾಧನಕಾಲೇ** ಪೂಜೆ ಮಾಡುವ ಕಾಲದಲ್ಲಿ **ಆತ್ಮವಾನ್** ಮನೋನಿಗ್ರಹವುಳ್ಳವನಾಗಿ (ಪ್ರಯತ್ನಶೀಲನಾಗಿ) **ಗೃಹೀತಮೌನವ್ರತಃ** ಮೌನವ್ರತ ಧಾರಣ ಮಾಡಿಕೊಂಡು **ಜಟಾಧರಃ** ಜಟೆಗಳನ್ನು ಧರಿಸಿದವನಾಗಿ ಆದ್ದರಿಂದಲೇ **ತಾಪಸಃ** ತಪಸ್ವಿಯಾಗಿ **ಆಪ್ಲುತಃ** ಅಲ್ಲಿರುವ ನದಿಯಲ್ಲಿ ತಲೆಯ ಮೇಲೆ ಸ್ನಾನಮಾಡಿ **ಅಚ್ಯುತಂ** ನಾಶರಹಿತನಾದ ದೇಶಕಾಲಗುಣಗಳಿಂದ ಚ್ಯುತಿ ಇಲ್ಲದ **ಈಶ್ವರಂ** ಸರ್ವಸ್ವಾಮಿಯಾದ **ಹರಿಂ** ಶ್ರೀಹರಿಯನ್ನು **ಕುಲಾಚಲಾಶ್ರಯಃ** ಮಲಯಾದ್ರಿಯನ್ನು ಆಶ್ರಯಿಸಿ **ಸಮರ್ಚಯಾಮಾಸ** ಭಕ್ತಿಯಿಂದ ಪೂಜಿಸಿದನು. ।।೮।।

**ಯದೃಚ್ಛಯಾ ತತ್ರ ಮಹಾಯಶಾ ಮುನಿಃ**
**ಸಮಾಗಮಚ್ಛಿಷ್ಯಗಣೈಃ ಪರಿಶ್ರಿತಃ ।**
**ತಂ ವೀಕ್ಷ್ಯ ತೂಷ್ಣೀಮಕೃತಾರ್ಹಣಾದಿಕಂ**
**ರಹಸ್ಯುಪಾಸೀನಮೃಷಿಶ್ಚುಕೋಪ ಹ ॥೯॥**

**ಕುಲಾಚಲಾಶ್ರಯಃ** ಮಾಹೇಂದ್ರಪರ್ವತನಿವಾಸಿಗಳಾದ **ಮಹಾಯಶಾಃ** ಪ್ರಸಿದ್ಧರಾದ **ಮುನಿಃ** ಅಗಸ್ತ್ಯರು **ಶಿಷ್ಯಗಣೈಃ ಪರಿಶ್ರಿತಃ** ಶಿಷ್ಯರಿಂದ ಸುತ್ತುವರೆಯಲ್ಪಟ್ಟು **ಯದೃಚ್ಛಯಾ** ಅದೃಷ್ಟಪ್ರೇರಕ ಶ್ರೀಹರಿಯ ಇಚ್ಛೆಯಿಂದ **ತತ್ರ** ರಾಜನು ಪೂಜಿಸುತ್ತಿದ್ದ ಸ್ಥಳಕ್ಕೆ **ಸಮಾಗಮತ್** ಬಂದರು. **ಋಷಿಃ** ಜ್ಞಾನಿಗಳಾದ ಆ ಅಗಸ್ತ್ಯರು **ತೂಷ್ಣೀಂ** ಸ್ವಾಗತವನ್ನು ಹೇಳದೇ ಸುಮ್ಮನೇ **ಅಕೃತಾರ್ಹಣಾದಿಕಂ** ಪ್ರತ್ಯುತ್ಥಾನ ಎದುರಾಗಿ ಹೋಗುವುದು, ಸ್ತುತಿಸುವುದು, ನಮಸ್ಕರಿಸುವದು ಮುಂತಾದವುಗಳನ್ನು ಮಾಡದೆ **ರಹಸಿ** ಏಕಾಂತದಲ್ಲಿ **ಉಪಾಸೀನಂ** ಕುಳಿತಿದ್ದ **ತಂ** ರಾಜನನ್ನು **ವೀಕ್ಷ್ಯ** ನೋಡಿ **ತಸ್ಮೈ** ಅವನ ಮೇಲೆ **ಚುಕೋಪ** ಕೋಪಿಸಿಕೊಂಡರು **ಹ** ಖೇದವು.

ಮುಂದಿನ ಶ್ಲೋಕದಲ್ಲಿಯ ತಸ್ಮೈ ಎಂಬುದನ್ನು ಇಲ್ಲಿಯೂ ಇಟ್ಟುಕೊಂಡಿದ್ದರಿಂದ ''ಕ್ರುಧದ್ರುಹೇರ್ಷ್ಯಾಸೂಯಾರ್ಥಾನಾಂ ಯಂ ಪ್ರತಿ ಕೋಪಃ'' ಎಂದು ಹೇಳಿದ್ದರಿಂದ ಉಪಾಸೀನಂ ತಂ ಎಂದು ದ್ವಿತೀಯಾ ಹೇಗೆ? ಎಂಬ ಶಂಕೆ ನಿರಾಕೃತವಾಯಿತು. ಅಥವಾ ಶಬ್ದಶಕ್ತಿಪ್ರಕಾಶಿಕಾದಲ್ಲಿ ''ಶಿಷ್ಯಂ ಈರ್ಷ್ಯತಿ'' ಎಂದು ಹೇಳಿದಂತೆ ಪ್ರಕೃತ ಉಪಾಸೀನಂ ತಂ ಚುಕೋಪ ಎಂದು ದ್ವಿತೀಯಾ ಉಪಪನ್ನವಾಗುತ್ತದೆ. ॥೯॥

**ತಸ್ಮಾ ಇಮಂ ಶಾಪಮದಾದಸಾಧು-**
**ರಯಂ ದುರಾತ್ಮಾಽಕೃತಬುದ್ಧಿರದ್ಯ ।**
**ಮದ್ಧೇಲನಾತ್ ಪ್ರಾವಿಶತಾಂ ತಮಿಸ್ರಂ**
**ಯಥಾ ಗಜಃ ಸ್ತಬ್ಧಮತಿಃ ಸದೋಷಃ ॥೧೦॥**

**ತಸ್ಮೈ** ಆ ರಾಜನಿಗೆ **ಇಮಂ** ಮುಂದೇ ಹೇಳುವ **ಶಾಪಂ** ಶಾಪವನ್ನು **ಅದಾತ್** ಕೊಟ್ಟರು **ದುರಾತ್ಮಾ** ತಾನು ಭಕ್ತನೆಂಬ ದುರಭಿಮಾನವುಳ್ಳ **ಅಕೃತಬುದ್ಧಿಃ** ಅಶಿಕ್ಷಿತಬುದ್ಧಿಯುಳ್ಳ ಅಥವಾ ಅರ್ಘ್ಯಪಾದ್ಯಾದಿಗಳನ್ನು ಕೊಡುವ ಬುದ್ಧಿಯನ್ನು ಮಾಡದ (ಕೃತಾ ಬುದ್ಧಿಃ ಯಸ್ಯ ಸಃ ಕೃತಬುದ್ಧಿಃ ಸಃ ನ ಭವತೀತಿ ಅಕೃತಬುದ್ಧಿಃ) ಇದರಿಂದ ದುರಾತ್ಮಶಬ್ದದಿಂದ ಆರ್ಥಿಕಪುನರುಕ್ತಿಯೂ ಬರುವದಿಲ್ಲ. **ಅಸಾಧುಃ** ಅಸಜ್ಜನನಾದ **ಅಯಂ** ಈ ಇಂದ್ರದ್ಯುಮ್ನನು **ಮದ್ಧೇಲನಾತ್** ನನ್ನ ತಿರಸ್ಕಾರದಿಂದ **ಗಜಃ** ಆನೆಯು **ಯಥಾ** ಹೇಗೆ **ಸ್ತಬ್ಧಮತಿಃ** ಗರ್ವಯುಕ್ತ ಮನಸ್ಸುಳ್ಳದ್ದೋ **ತಥಾ** ಹಾಗೆ ಸ್ತಬ್ಧಮತಿಯಾದ್ದರಿಂದ **ಸದೋಷಃ** ಅಪರಾಧಿಯಾಗಿರುವನು ಕಾರಣ **ತಮಿಸ್ರಂ** ಅಜ್ಞಾನಪ್ರಚುರವಾದ ಗಜದೇಹವನ್ನು

**ಪ್ರಾವಿಶತಾಂ** ಪ್ರವೇಶಿಸಲಿ. ಸೂಚಿತವಾದ ಜನ್ಮವನ್ನು ದೃಷ್ಟಾಂತ ಮುಖಾಂತರ ತೋರಿಸುವರು. ಆನೆಯಂತೆ ಸ್ತಬ್ಧಮತಿಯಾದ್ದರಿಂದ ಅದೇ ಜಾತಿ ಬರಲಿ ಎಂದರ್ಥ.

ದೇವಲರು ಇದೇ ಮಾತಿನಿಂದ ವಿಶಾಪವನ್ನು ಕೂಡಾ ನೀಡಿದರು ಎಂದು ಹೇಳುವರು.

**ಸದಾ ಕೃತಬುದ್ಧಿಃ** ಯಾವಾಗಲೂ ಶಿಕ್ಷಿತಬುದ್ಧಿಯಾದವನು **ಅದ್ಯ** ಇಂದು **ಮದ್ಹೇಲನಾತ್** ನನ್ನ ಅನಾದರದಿಂದ **ಸ್ತಬ್ಧಮತಿಃ** ಗರ್ವಬುದ್ಧಿಯ ಆನೆಯು **ಭವತು** ಆಗಲಿ. ಯದಾ ತದಾ ಎಂದು ಅಧ್ಯಾಹಾರ ಮಾಡಬೇಕು. **ಯದಾ** ಯಾವಾಗ **ಉಷಃ** ಪರಮಾತ್ಮನು **ಕೃತಬುದ್ಧಿಃ ಭವತಿ** ನಿನ್ನನ್ನು ಉದ್ಧರಿಸುವ ಬುದ್ಧಿಯುಳ್ಳವನಾಗುವನೋ **ತದಾ** ಆಗ (ರದೌ ಅಸ್ಯ ಸ್ತಃ ಇತಿ ರದ್ಯಃ) ಹೇ ರದ್ಯ ದಂತಿನ್ ಗಜನೇ **ಅಗಜಃ** ಗಜೇತರನು **ಭವಸಿ** ಆಗುವಿ ಎಂದು ಶೇಷ.

''ನಕ್ತೋಷಸಾ'' ಎಂಬ ಋಗ್ಭಾಷ್ಯದಲ್ಲಿ ''ಉಷಾಃ ಪ್ರಕಾಶರೂಪತ್ವಾತ್'' ಎಂದು ಅದರ ಟೀಕೆಯಲ್ಲಿ ''ನಕ್ತೇತಿ ರಾತ್ರಿದೇವತಾ ಉಷಾ ಇತ್ಯಪರರಾತ್ರಿದೇವತಾ ಇತಿ ಪ್ರಸಿದ್ಧಮ್ । ಶಬ್ದದ್ವಯಂ ವಿಷ್ಣೌ ಯೋಜಯತಿ ನಕ್ತೇತಿ'' ವಶ ಕಾಂತೌ ಇತ್ಯಸ್ಮಾತ್ ಕಸುನ್ ಪ್ರಕಾಶರೂಪತ್ವಾತ್ ಉಷಾಃ'' ಇತ್ಯುಕ್ತೇಃ ಉಷಃ ಬ್ರಹ್ಮ. ||೧೦||

**ಶ್ರೀಶುಕ ಉವಾಚ**

**ಏವಂ ಶಪ್ತ್ವಾ ಗತೋಽಗಸ್ತ್ಯೋ ಭಗವಾನ್ ನೃಪ ಸಾನುಗಃ ।**
**ಇಂದ್ರದ್ಯುಮ್ನೋಽಪಿ ರಾಜರ್ಷಿರ್ದಿಷ್ಟಂ ತದುಪಧಾರಯನ್ ||೧೧||**

**ಹೇ ನೃಪ** ರಾಜನೇ **ಭಗವಾನ್** ಪೂಜ್ಯರಾದ **ಸಾನುಗಃ** ಶಿಷ್ಯಸಹಿತರಾದ **ಅಗಸ್ತ್ಯಃ** ಅಗಸ್ತ್ಯಋಷಿಗಳು **ಏವಂ** ಮೇಲೆ ಹೇಳಿದಂತೆ **ಶಪ್ತ್ವಾ** ಶಾಪ-ವಿಶಾಪಗಳನ್ನು ಇತ್ತು **ಗತಃ** ಹೊರಟು ಹೋದರು. **ರಾಜರ್ಷಿಃ** ರಾಜರ್ಷಿಯಾದ **ಇಂದ್ರದ್ಯುಮ್ನಃ** ಇಂದ್ರದ್ಯುಮ್ನನು **ಅಪಿ** ಕೂಡಾ **ತತ್** ಗಜಜನ್ಮವು **ದಿಷ್ಟಂ** ನನ್ನ ಅದೃಷ್ಟಪ್ರೇರಕನಾದ ಶ್ರೀಹರಿಯಿಂದ ಪ್ರಾಪ್ತವಾದುದು ಎಂದು **ಉಪಧಾರಯನ್** ಅವಶ್ಯವಾಗಿ ಅನುಭವಿಸಬೇಕಾದುದೆಂದು ತಿಳಿದನು. ||೧೧||

ಇದು ಒಬ್ಬನಿಗೇ ಶಾಪಾಂತರ(ಎರಡನೆ ಶಾಪ)ವೆಂದು ತಿಳಿಯಬೇಕು.

**ಆಪನ್ನಃ ಕೌಂಜರೀಂ ಯೋನಿಮಾತ್ಮಸ್ಮೃತಿವಿನಾಶಿನೀಮ್ ।**
**ಹರ್ಯರ್ಚನಾನುಭಾವೇನ ಯದ್ಗಜತ್ವೇಽಪ್ಯನುಸ್ಮೃತಿಃ ||೧೨||**

ಇಂದ್ರದ್ಯುಮ್ನನು **ಆತ್ಮಸ್ಮೃತಿವಿನಾಶಿನೀಂ** ತನ್ನ ಮತ್ತು ಪರಮಾತ್ಮನ ಜ್ಞಾನವನ್ನು ಇಲ್ಲದಂತೆ ಮಾಡುವ **ಕೌಂಜರೀಂ ಯೋನಿಂ** ಆನೆಯ ದೇಹವನ್ನು **ಆಪನ್ನಃ** ಹೊಂದಿದನು (**ನಃ** ನಮಗೆ **ಏವಂ** ಹೀಗೆ **ಆಪತ್ ಇತಿ** ಆಪತ್ತು ಬಂತೆಂದು ಆನೆ ಜನ್ಮ ಹೊಂದಿದನೆಂದು ಆಪನ್ನಃ ಎಂಬುದನ್ನು ಆವೃತ್ತಿಮಾಡಿ ಆಪತ್ ನಃ ಎಂದು ಬಿಡಿಸಿಕೊಂಡು ಅನ್ವಯ ಮಾಡಬಹುದು) **ತಥಾ ಅಪಿ** ಆದರೂ **ಗಜತ್ವೇ** ಆನೆಯಾಗಿದ್ದಾಗ **ಯತ್** ಯಾವ **ಅನುಸ್ಮೃತಿಃ** ಜ್ಞಾನವು **ತತ್** ಅದು **ಹರ್ಯರ್ಚನಾನುಭಾವೇನ** ತನ್ಮಹನಮಾಹಾತ್ಮ್ಯೇನ ಹಿಂದಿನ ಜನ್ಮದಲ್ಲಿ ಶ್ರೀಹರಿಯ ಪೂಜೆಯ ಪ್ರಭಾವದಿಂದ ಬಂದಿದ್ದು.

''ನ ಭಕ್ತ್ಯಾ ನ ಧಿಯಾ ಹತಃ'' ಎಂಬ ಪಾಠದಲ್ಲಿ ಭಕ್ತ್ಯಾ ಧಿಯಾ ಚ ನ ಹತಃ ನನ್ನಲ್ಲಿಯ ಭಕ್ತಿಯು ನನ್ನಲ್ಲಿಯ ಜ್ಞಾನವು ಹತವಾಗಲಿಲ್ಲ ಪರಿತ್ಯಕ್ತವಾಗಲಿಲ್ಲ. ಎಂದು ಅರ್ಥವನ್ನು ತಿಳಿಯಬೇಕು. ॥೧೨॥

ಇಂದ್ರದ್ಯುಮ್ನನಿಗಿಂತಲೂ ಪೂರ್ವಜನ್ಮ ಯಾವುದು? ಎಂಬ ಶಂಕೆಯನ್ನು ಭಾರತದ ಅನುಶಾಸನ-ಶಾಂತಿಪರ್ವದಲ್ಲಿಯ ಭೀಷ್ಮ-ಯುಧಿಷ್ಠಿರಸಂವಾದದಿಂದ ಪರಿಹರಿಸಿಕೊಳ್ಳಬೇಕು.

**ಯುಧಿಷ್ಠಿರ ಉವಾಚ**

**ಕಥಂ ಶಾಪೋದ್ಭವಂ ನಾಗಂ ಗಂಧರ್ವಾಣಾಂ ಮಹಾತ್ಮನಾಮ್ ।**
**ಏತದಿಚ್ಛಾಮ್ಯಹಂ ಶ್ರೋತುಂ ವಿಸ್ತರೇಣ ಪಿತಾಮಹ ॥ ಆದಿ ಪರ್ವ ೬೬**

**ಭೀಷ್ಮ ಉವಾಚ**

**ಹಾಹಾ ಹೂಹೂರಿತಿ ಖ್ಯಾತೌ ಗೀತವಾದ್ಯವಿಶಾರದೌ ।**
**ಇತಿ ತೌ ಶಾಪಿತೌ ತೇನ ದೇವಲೇನ ಮಹಾತ್ಮನಾ ॥**

**ತತೋ ದೃಷ್ಟ್ವಾ ಶಕ್ರೇಣ,**
**ಏಕಸ್ಯ ನೌ ಜಯಂ ದೇಹಿ ಯತ್ತೇ ಮನಸಿ ವರ್ತತೇ ।**
**ಪೃಥಕ್ ಚಿರಂತೌ ಗಾಯಂತೌ ಮೌನಸ್ಯ ಧಾರಣಾತ್ ತದಾ ತೌ ಕುಪಿತೌ ॥**
**ಉಚತುಸ್ತೇ ತದಾ ವಾಕ್ಯಂ ಗಂಧರ್ವೌ ಕಾಲನೋದಿತೌ ।**
**ಮೂಢೋಽಯಂ ನಾಭಿಜಾನಾತಿ ನಿಶ್ಚಯಂ ದ್ವಂದ್ವಗೀತಯೋಃ ॥**

**ನಿಶಮ್ಯ ತದ್ವಚಸ್ತೇಷಾಂ ಕ್ರೋಧಾದುತ್ಥಾಯ ।**
**ಏಷ ಹೂಹೂರ್ದುರಾತ್ಮಾ ತು ಗ್ರಾಹತ್ವಂ ಯಾತು ಮೂಢಧೀಃ ॥**

**ತ್ವಮೇವ ಗಜರಾಜಸ್ತು ಭವಸ್ವ ಗಿರಿಗಹ್ವರೇ ।**
**ತತಸ್ತೌ ಶಾಪಿತೌ ತೇ ಪ್ರಣಮ್ಯ ಶಿರಸಾ ವಿಪ್ರಂ ಗಂಧರ್ವಾವಿದಮೂಚತುಃ ॥**

**ಸರೋವರೇ ರಮ್ಯೇ ನಿತ್ಯಂ ಗ್ರಾಹೋ ವಸಿಷ್ಯತಿ ।**
**ತೃಷಾರ್ತಸ್ತತ್ರ ಮಾತಂಗೋ ಗಮಿಷ್ಯತಿ ನ ಸಂಶಯಃ ॥**

**ತದೈವ ದೇವದೇವೇಶಸ್ತೋಷ್ಯತೇ ನಾತ್ರ ಸಂಶಯಃ ।**
**ತತೋ ನಾರಾಯಣಃ ಪ್ರೀತೋ ಮೋಚಯಿಷ್ಯತಿ ಶಾಪಿತೌ ॥**

**ಶಾಪಾದ್ವಿಮುಕ್ತೌ ಯುಗಪದ್ಗಜೋ ಗಂಧರ್ವ ಏವ ತು ।**
**ಗಜೋಽಪಿ ಯಕ್ಷತಾಂ ಯಾತಃ ಶ್ರೀಕೃಷ್ಣೇನ ವಿಮೋಕ್ಷಿತಃ ॥**
**ಪಸ್ಪರ್ಶ ಪಾಣಿನಾ ತೌ ॥**

*(ಈ ಶ್ಲೋಕಗಳ ಆಕರವು ಉಪಲಬ್ಧವಾಗಿಲ್ಲ ಮುದ್ರಿತವಾದ ಪುಸ್ತಕವನ್ನು ಅನುಸರಿಸಿ ಹಾಕಲಾಗಿದೆ)*

ಮುಂತಾಗಿ ಶ್ಲೋಕಗಳು ಇವೆ. ಆದ್ದರಿಂದ ಆನೆಯು ಹಾಹಾ ಎಂಬ ಗಂಧರ್ವನು. ಅವನಿಗೇ ಈ ಪ್ರಮಾಣ ಪ್ರಕಾರ ದೇವಲರ ಶಾಪವಾದ ಮೇಲೆ ಆನೆಯ ಜನ್ಮ ಬರುವ ಮೊದಲು ರಾಜಜನ್ಮ ಒಂದು ಇತ್ತೆಂದು ಕಲ್ಪಿಸಬೇಕು. ಕಲ್ಪಭೇದವನ್ನಾದರೂ ಕಲ್ಪಿಸಬೇಕು. ಅಥವಾ ''ತ್ವಮೇವ ಗಜರಾಜಸ್ತು'' ಎಂದು ದೇವಲರ ಮಾತಿಗೆ ಗಜಶ್ಚಾಸೌ ರಾಜಾ ಚ ಗಜರಾಜಃ ಎಂದು ವಿಗ್ರಹಮಾಡಿಕೊಳ್ಳಬೇಕು. ಮೊದಲು ರಾಜನಾಗಿ ನಂತರ ಆನೆಯಾಗು ಎಂಬ ಅಭಿಪ್ರಾಯದಿಂದ ಶಾಪವಿತ್ತರು ಎಂದರ್ಥ ಮಾಡಿದರೆ ಭಾಗವತಕ್ಕೆ ಅನುಗುಣವಾಗುವದು. ಮುನಿಯ ಅಭಿಪ್ರಾಯ ಹೀಗೆ ಇದ್ದದ್ದಾದರೆ ಜನ್ಮಕ್ರಮಾನುಸಾರ ರಾಜಗಜ ಎನ್ನ ಬೇಕಿತ್ತು ಎಂದು ಶಂಕಿಸಬಾರದು. ಗಜಜನ್ಮವು ಅತ್ಯಂತಕ್ರೂರ, ಬಹಳ ಅನಿಷ್ಟವಾದ್ದರಿಂದ ಮೊದಲು ಹೇಳಿದರೆಂದು ಹೇಳಲು ಬರುವದು. ದಿಷ್ಟಂ ಎಂಬುದಕ್ಕೆ ಮೊದಲು ದೇವಲರಿಂದ ಕೊಡಲ್ಪಟ್ಟ ಎಂದೂ ಅರ್ಥ. ಗಜಶ್ರೇಷ್ಠನಾಗಬೇಕೆಂದೂ ಅಭಿಪ್ರಾಯದಿಂದಲೂ ಗಜರಾಜ ಎಂದಿರುವದು ಎಂದೂ ಹೇಳಬಹುದು. ।।೧೨।।

**ಏವಂ ವಿಮೋಕ್ಷ್ಯ ಗಜಯೂಥಪಮಬ್ಜನಾಭಃ**
**ತೇನಾಪಿ ಪಾರಿಷದತಾಂ ಗಮಿತೇನ ಯುಕ್ತಃ ।**
**ಗಂಧರ್ವಸಿದ್ಧವಿಬುಧೈರುಪಗೀಯಮಾನ-**
**ಕರ್ಮಾಽದ್ಭುತಂ ಸ್ವಭವನಂ ಗರುಡಾಸನೋಽಗಾತ್ ।।೧೩।।**

**ಅಬ್ಜನಾಭಃ** ಪದ್ಮನಾಭನಾದ ಶ್ರೀಹರಿಯು **ಗಜಯೂಥಪಂ** ಗಜೇಂದ್ರನನ್ನು **ಏವಂ** ಹೀಗೆ **ವಿಮೋಕ್ಷ್ಯ** ಮೊಸಳೆಯಿಂದ ಬಿಡಿಸಿ **ಪಾರಿಷದತಾಂ** ಸಮೀಪದಲ್ಲಿರುವ ಸೇವಕನ ಸ್ಥಿತಿಯನ್ನು **ಗಮಿತೇನ** ಹೊಂದಿಸಲ್ಪಟ್ಟ **ತೇನಾಪಿ** ಅವನಿಂದಲೂ **ಯುಕ್ತಃ ಸನ್** ಕೂಡಿದವನಾಗಿ **ಗಂಧರ್ವಸಿದ್ಧವಿಬುಧೈಃ** ಗಂಧರ್ವರಿಂದಲೂ, ಸಿದ್ಧರಿಂದಲೂ, ದೇವತೆಗಳಿಂದಲೂ **ಉಪಗೀಯಮಾನಕರ್ಮಾ** ಗಾನಮಾಡಲ್ಪಡುವ ಚರಿತ್ರೆಯುಳ್ಳವನಾಗಿ

**ಗರುಡಾಸನಃ** ಗರುಡನ ಮೇಲೆ ಏರಿದವನಾಗಿ **ಅದ್ಭುತಂ** ಆಶ್ಚರ್ಯಕರವಾದ **ಸ್ವಭವನಂ** ತಾನು ವ್ಯಕ್ತವಾಗಿರುವ ವೈಕುಂಠಲೋಕವನ್ನು ಕುರಿತು **ಅಗಾತ್** ಹೋದನು.

ಲೋಕದೃಷ್ಟಿಯಿಂದ ಅಲ್ಲಿಯೇ ಅಂತರ್ಧಾನನಾದನೆಂದರ್ಥ. ಆ ಗಂಧರ್ವನಿಗೆ ಚತುರ್ಭುಜತ್ವಾದಿಗಳು ಬಂದವು ಎಂದು ಹೇಳಿದ್ದಾರೆ. ಮುಕ್ತಿಸಮಯವಲ್ಲವಾದ್ದರಿಂದ ಚತುರ್ಭಜತ್ವ-ಪೀತಾಂಬರತ್ವಾದಿಸಾದೃಶ್ಯವು ಸಾಂಸಾರಿಕವಾದುದು ತಾತ್ಕಾಲಿಕವಾದುದು ಎಂದು ತಿಳಿಯಬೇಕು.

ಗರುಡಧ್ವಜಃ ಎನ್ನದೇ ಗರುಡಾಸನಃ ಎಂದದ್ದರಿಂದ ಅವತೀರ್ಯ ಎಂದು ಹಿಂದೆ ಹೇಳಿದ್ದನ್ನು ಸೂಚಿಸುವರು. ಗರುಡನ ಮೇಲೆ ಕುಳಿತ ಪರಮಾತ್ಮ ಇಳಿದು ಬಂದನು. ಮತ್ತೆ ಗರುಡನ ಮೇಲೆ ಏರಿ ಹೋದನು ಎಂದು ತಿಳಿಸುವ ಮೂಲಕ ಶ್ರೀಹರಿಯ ಕರುಣೆಯನ್ನು ತಿಳಿಯಬೇಕು.

ಮುಂದಿನ ಶ್ಲೋಕದಲ್ಲಿ ''ಪ್ರಾಪ್ತೋ ಭಗವತೋ ರೂಪಮ್'' ಭಗವಂತನ ರೂಪವನ್ನು ಪಡೆದ ಎಂಬುದಾಗಿ ಭಗವದಭೇದವನ್ನು ಹಾಹಾಗಂಧರ್ವನಿಗೆ ಹೇಳುತ್ತಿದ್ದಾರೆ ಎಂದು ತೋರುತ್ತದೆ. ಆದರೆ ಇಲ್ಲಿ ಪ್ರಕೃತ ''ಪಾರಿಷದತಾಂ ಗತೇನ'' ಆ ಹಾಹಾಗಂಧರ್ವನು ಮತ್ತೆ ಪರಮಾತ್ಮನ ಸೇವಕನಾದನು ಎಂದು ಹೇಳುತ್ತಾ ಇದ್ದುದರಿಂದ ''ಪ್ರಾಪ್ತೋ ಭಗವತೋ ರೂಪಮ್'' ಎಂಬಲ್ಲಿಯ ಅಭೇದಭ್ರಮವನ್ನು ನಿರಾಕರಿಸಿದಂತೆ ಆಯಿತು. ||೧೩||

ಗಜೇಂದ್ರಮೋಕ್ಷರೂಪವಾದ ಭಗವಂತನ ಮಾಹಾತ್ಮ್ಯವನ್ನು ಕೇಳಲು ಆದರವನ್ನು ಹುಟ್ಟಿಸಲು ಅದನ್ನು ಸ್ತುತಿಸುವರು-

**ಏವಂ ಮಹಾರಾಜ ತವೇರಿತೋ ಮಯಾ**
**ಕೃಷ್ಣಾನುಭಾವೋ ಗಜರಾಜಮೋಕ್ಷಣಮ್ ।**
**ಸ್ವರ್ಗ್ಯಂ ಯಶಸ್ಯಂ ಕಲಿಕಲ್ಮಷಾಪಹಂ**
**ದುಃಸ್ವಪ್ನನಾಶಂ ಕುರುವರ್ಯ ಶೃಣ್ವತಾಮ್** ||೧೪||

**ಮಹಾರಾಜ ಕುರುವರ್ಯ** ಮಹಾರಾಜನಾದ ಕುರುವಂಶದಲ್ಲಿ ಶ್ರೇಷ್ಠನಾದ ಪರೀಕ್ಷಿತನೇ **ಏವಂ** ಮೇಲೇ ಹೇಳಿದಂತೆ **ಮಯಾ** ನನ್ನಿಂದ **ತವ** ನಿನಗಾಗಿ **ಶೃಣ್ವತಾಂ** ಕೇಳುವವರಿಗೆ ಹೇಳುವವರಿಗೂ **ಸ್ವರ್ಗ್ಯಂ** ಸ್ವರ್ಗಪ್ರದವಾದ **ಯಶಸ್ಯಂ** ಯಶಸ್ಸಿಗೆ ಸಾಧನವಾದ (ಕೀರ್ತಿದಾಯಕವಾದ) **ಕಲಿಕಲ್ಮಷಾಪಹಂ** ಕಲಿಯುಗದಲ್ಲಿ ಕಲ್ಯಾದಿದೈತ್ಯರ ಪ್ರಭಾವದಿಂದ ಬರುವ ಪಾಪಗಳನ್ನು ಪರಿಹರಿಸುವ **ದುಃಸ್ವಪ್ನನಾಶನಂ** ದುಷ್ಟಸ್ವಪ್ನಗಳಿಂದ ಸೂಚಿತವಾಗುವ ಅನಿಷ್ಟಗಳನ್ನು ಪರಿಹರಿಸುವ **ಕೃಷ್ಣಾನುಭಾವಃ** ಪೂರ್ಣಸುಖನಾದ

ಶ್ರೀಹರಿಯ ಮಹಿಮಾರೂಪವಾದ ಗಜೇಂದ್ರಮೋಕ್ಷವು **ಈರಿತಃ** ಹೇಳಲ್ಪಟ್ಟಿತು. ''ಕೃಷಿರ್ಭೂವಾಚಕಃ ಶಬ್ದಃ ಣಶ್ಚ ನಿರ್ವೃತಿವಾಚಕಃ'' ಎಂದಿರುವದರಿಂದ ಕೃಷ್ಣಶಬ್ದಕ್ಕೆ ಪೂರ್ಣಸುಖ ಎಂದರ್ಥ. ।।೧೪।।

**ಅಥಾನುಕೀರ್ತಯಂತ್ಯೇತಚ್ಛ್ರೇಯಸ್ಕಾಮಾ ದ್ವಿಜಾತಯಃ ।**
**ಶುಚಯಃ ಪ್ರಾತರುತ್ಥಾಯ ದುಃಸ್ವಪ್ನಾದ್ಯುಪಶಾಂತಯೇ ।।೧೫।।**

**ಅಥ** ಗಜೇಂದ್ರಮೋಕ್ಷರೂಪವಾದ ಪರಮಾತ್ಮನ ಚರಿತ್ರೆಯು ಸರ್ವಪುರುಷಾರ್ಥ-ಪ್ರದವಾದದ್ದರಿಂದ **ಶ್ರೇಯಸ್ಕಾಮಾಃ** ಪುರುಷಾರ್ಥಾಪೇಕ್ಷಿಗಳಾದ **ದ್ವಿಜಾತಯಃ** ಬ್ರಾಹ್ಮಣ, ಕ್ಷತ್ರಿಯ, ವೈಶ್ಯಜಾತಿಯವರು **ಪ್ರಾತಃ ಉತ್ಥಾಯ** ಬೆಳಿಗ್ಗೆ ನಿದ್ರೆಯಿಂದೆದ್ದು **ಶುಚಯಃ ಸಂತಃ** ಶೌಚ-ಆಚಮನಾದಿಗಳಿಂದ ಶುದ್ಧರಾಗಿ **ದುಃಸ್ವಪ್ನಾದ್ಯುಪಶಾಂತಯೇ** ದುಃಸ್ವಪ್ನಸೂಚಿತವಾದ ಅನಿಷ್ಟಗಳ ಪರಿಹಾರಕ್ಕಾಗಿ **ಏತತ್** ಗಜೇಂದ್ರಮೋಕ್ಷರೂಪವಾದ ಚರಿತ್ರೆಯನ್ನು **ಅನುಕೀರ್ತಯಂತಿ** ಭಕ್ತಿಪೂರ್ವಕವಾಗಿ ಪಠಿಸುತ್ತಾರೆ. ।।೧೫।।

ಈ ಸ್ತೋತ್ರದಿಂದ ಶ್ರೇಯಸ್ಸಾಗುವದೆಂದು ಹೇಗೆ ತಿಳಿಯಿತು ಎಂದರೆ ಸಾಕ್ಷಾತ್ ಶ್ರೀಹರಿಯ ಮಾತಿನಿಂದಲೇ ಎಂದು ಹೇಳುವರು.

**ಇದಮಾಹ ಹರಿಃ ಪ್ರೀತೋ ಗಜೇಂದ್ರಂ ಕುರುಸತ್ತಮ ।**
**ಶೃಣ್ವತಾಂ ಸರ್ವಭೂತಾನಾಂ ಸರ್ವಭೂತಮಯೋ ವಿಭುಃ ।।೧೬।।**

**ಹೇ ಕುರುಸತ್ತಮ** ಕುರುಕುಲ ಶ್ರೇಷ್ಠನಾದ ಪರೀಕ್ಷಿತನೇ **ಪ್ರೀತಃ** ಗಜೇಂದ್ರನ ಭಕ್ತಿಯುಕ್ತವಾದ ಸ್ತೋತ್ರಕ್ಕೆ ಸಂಪ್ರೀತನಾದ **ಸರ್ವಭೂತಮಯಃ** ಎಲ್ಲ ಚೇತನರಲ್ಲಿ ಉತ್ತಮನಾದ (ಪ್ರಧಾನನಾದ) **ವಿಭುಃ** ಸಮರ್ಥನಾದ **ಹರಿಃ** ಶ್ರೀಹರಿಯು **ಸರ್ವಭೂತಾನಾಂ ಶೃಣ್ವತಾಂ(ಸತಾಂ)** ಎಲ್ಲ ಪ್ರಾಣಿಗಳು ಕೇಳುತ್ತಿರಲು **ಗಜೇಂದ್ರಂ** ಗಜೇಂದ್ರನನ್ನು ಕುರಿತು **ಇದಂ** ಮುಂದಿನ ಮಾತನ್ನು **ಆಹ** ಹೇಳಿದನು. ।।೧೬।।

**ಯೇ ಮಾಂ ತ್ವಾಂ ಚ ಸರಶ್ಚೇದಂ ಗಿರಿಕಂದರಕಾನನಮ್ ।**
**ವೇತ್ರಕೀಚಕವೇಣೂನಾಂ ಗುಲ್ಮಾನಿ ಸುರಪಾದಪಾನ್ ।।೧೭।।**

ಮಾಂ ತ್ವಾಂ ಇತ್ಯಾದಿಯಾದ ದ್ವಿತೀಯಾಂತಪದಗಳಿಗೆ ೧೪ನೇ ಶ್ಲೋಕದಲ್ಲಿಯ ಸ್ಮರಂತಿ ಎಂಬುದರಿಂದ ಅನ್ವಯ.

**ಯೇ** ಯಾರು **ಮಾಂ** ನನ್ನನ್ನು **ತ್ವಾಂ ಚ** ನಿನ್ನನ್ನೂ **ಇದಂ ಸರಃ** ಈ ಸರೋವರವನ್ನು **ಗಿರಿಕಂದರಕಾನನಂ** ತ್ರಿಕೂಟಪರ್ವತವನ್ನು ಗುಹೆಯನ್ನು ಮತ್ತು ಅಡವಿಯನ್ನು **ವೇತ್ರಕೀಚಕವೇಣೂನಾಂ** ಬೆತ್ತ, ಟೊಳ್ಳು, ಬಿದಿರು, ಗಟ್ಟಿ ಬಿದಿರುಗಳ **ಗುಲ್ಮಾನಿ** ಪೊದೆಗಳನ್ನು

**ಸುರಪಾದಪಾನ್** ದೇವವೃಕ್ಷಗಳಾದ ಮಂದಾರ, ಪಾರಿಜಾತ, ಸಂತಾನ, ಕಲ್ಪವೃಕ್ಷ, ಹರಿಚಂದನ ಗಿಡಗಳನ್ನು ।।೧೭।।

ವಿಶ್ವಕೋಶದಲ್ಲಿ ''ಗುಲ್ಮಃ ಸ್ತಂಭಃ'' ಮುಂತಾಗಿ ಪುಲ್ಲಿಂಗವೇ ಹೇಳಿದೆ. ಆದರೆ ಲಿಂಗಾನುಶಾಸನದಲ್ಲಿ ''ಮೋಪಧೇರುಗ್ಮಸಿಧ್ಮ್ಯಗ್ಮಗುಲ್ಮಾಧ್ಯಾತ್ಮಕುಂಕುಮಾನಿ ನಪುಂಸಕೇ'' ಎಂದು ಹೇಳಿರುವದರಿಂದ ಗುಲ್ಮಾನಿ ಎಂದಿದ್ದಾರೆ. ಇಲ್ಲಿಯ ವೃಕ್ಷ ಮುಂತಾದವುಗಳಿಗೆ ತನ್ನ ಪಾದದ ಸ್ಪರ್ಶವಾಗಿದೆ. ಆದ್ದರಿಂದ ಅವುಗಳ ಸ್ಮರಣೆ ಮಾಡಬೇಕೆಂದು ಹೇಳಿದ್ದಾರೆ. ಇದನ್ನು ತಿಳಿಸಲೆಂದೇ ಮೊಟ್ಟಮೊದಲು ಮಾಂ ಎಂದು ಹೇಳಿದ್ದಾರೆ. ।।೧೭।।

ಪ್ರಾಸಂಗಿಕವಾಗಿ ಬೇರೆ ವಸ್ತುಗಳ ಸ್ಮರಣೆಯ ಫಲವನ್ನೂ ಹೇಳುತ್ತಿದ್ದಾರೆ-

**ಶೃಂಗಾಣೀಮಾನಿ ಧಿಷ್ಣ್ಯಾನಿ ಬ್ರಹ್ಮಣೋ ಮೇ ಶಿವಸ್ಯ ಚ ।**
**ಕ್ಷೀರೋದಂ ಮೇ ಪ್ರಿಯಂ ಧಾಮ ಶ್ವೇತದ್ವೀಪಂ ಚ ಭಾಸ್ವರಮ್ ।।೧೮।।**

**ಬ್ರಹ್ಮಣಃ** ಬ್ರಹ್ಮದೇವರಿಗೆ **ಮೇ** ನನಗೂ **ಶಿವಸ್ಯ ಚ** ರುದ್ರದೇವರಿಗೂ **ಧಿಷ್ಣ್ಯಾನಿ** ಆವಾಸಸ್ಥಾನಗಳಾದ **ಇಮಾನಿ ಶೃಂಗಾಣಿ** ಈ ಮೂರು ಶಿಖರಗಳನ್ನು ಅಥವಾ ಬ್ರಹ್ಮನ ನನ್ನ ರುದ್ರನ ಸ್ಥಾನಗಳಾದ ಸತ್ಯಲೋಕ-ವೈಕುಂಠ-ಕೈಲಾಸಗಳನ್ನು **ಮೇ ಪ್ರಿಯಂ ಧಾಮ** ನನಗೆ ಪ್ರೀತಿಸ್ಥಾನವಾದ **ಕ್ಷೀರೋದಂ** ಕ್ಷೀರಸಮುದ್ರವನ್ನು **ಭಾಸ್ವರಂ** ಪ್ರಕಾಶಮಾನವಾದ **ಶ್ವೇತದ್ವೀಪಂ** ಶ್ವೇತದ್ವೀಪವನ್ನು.

ಈ ಮೂರು ಶಿಖರಗಳಲ್ಲಿ ಒಂದು ಬಂಗಾರದ್ದು. ಎರಡನೆಯದು ಬೆಳ್ಳಿಯದು. ಮೂರನೆಯದು ಪದ್ಮರಾಗದಂತೆ ಕಾಂತಿಯುಳ್ಳದ್ದು. ಮಹಾಭಾರತದಲ್ಲಿಯೂ ಹೀಗೆಯೇ ಹೇಳಲ್ಪಟ್ಟಿದೆ.

ತಸ್ಯೈಕಂ ಕಾಂಚನಂ ಶೃಂಗಂ ದ್ವಿತೀಯಂ ರಾಜತಂ ಸ್ಮೃತಮ್ ।
ತೃತೀಯಂ ಬ್ರಹ್ಮಸದನಂ ಪ್ರಕೃಷ್ಟಂ ಶೃಂಗಮುತ್ತಮಮ್ ।
ಪದ್ಮರಾಗಸಮಪ್ರಖ್ಯಂ... .... ... ... ... ... ।।೧೮।।

**ಶ್ರೀವತ್ಸಂ ಕೌಸ್ತುಭಂ ಮಾಲಾಂ ಗದಾಂ ಕೌಮೋದಕೀಂ ಮಮ ।**
**ಸುದರ್ಶನಂ ಪಾಂಚಜನ್ಯಂ ಸುಪರ್ಣಂ ಪತಗೇಶ್ವರಮ್ ।।೧೯।।**

ನನ್ನ ಚಿಹ್ನೆಗಳಾದ **ಶ್ರೀವತ್ಸಂ** ಶ್ರೀವತ್ಸವನ್ನು **ಕೌಸ್ತುಭಂ** ಈ ಹೆಸರಿನ ಮಣಿಯನ್ನು **ಮಾಲಾಂ** ವೈಜಯಂತೀಮಾಲೆಯನ್ನು ವನಮಾಲೆಯನ್ನು **ಕೌಮೋದಕೀಂ ಗದಾಂ** ಕೌಮೋದಕಿ ಎಂಬ ಗದೆಯನ್ನು ಮತ್ತು **ಮಮ** ನನ್ನ **ಸುದರ್ಶನಂ** ಚಕ್ರವನ್ನು **ಪಾಂಚಜನ್ಯಂ** ಶಂಖವನ್ನು **ಪತಗೇಶ್ವರಂ** ಪಕ್ಷಿಶ್ರೇಷ್ಠನಾದ **ಸುಪರ್ಣಂ** ಗರುಡನನ್ನು.

ಇಲ್ಲಿ ಮಮ ಎಂಬುದಕ್ಕೆ ಶ್ರೀವತ್ಸಮಾಲಾ ಪದಗಳಿಂದ ಅಥವಾ ಸುದರ್ಶನಪಾಂಚಜನ್ಯಗಳಿಂದ ಅನ್ವಯವೆಂದು ತಿಳಿಯಬೇಕು.

ಕೌಮೋದಕೀ-ಕೌಸ್ತುಭಗಳಿಗೆ ಪ್ರತ್ಯಯಗಳಿಂದಲೇ ಭಗವಂತನ ಸಂಬಂಧವನ್ನು ತಿಳಿಯಬೇಕು.

ಕೌಸ್ತುಭವು ಬ್ರಹ್ಮದೇವರಿಂದ ಅಭಿಮನ್ಯಮಾನವಾದ ಮಣಿ. ''ತತ್ಕಂಠಗಂ ಕೌಸ್ತುಭಮಾಸ ಧಾತಾ'' ಎಂದು ಆಚಾರ್ಯರು ಹೇಳಿರುವರು. ಬ್ರಹ್ಮದೇವರೇ ಶ್ರೀಹರಿಯ ಕುತ್ತಿಗೆಯಲ್ಲಿರುವ ಕೌಸ್ತುಭಮಣಿಯಾಗಿದ್ದಾರೆ. ಎಂದು ಈ ವಚನದ ಅರ್ಥ. (ಅಭಿಮಾನಿ ಅಭಿಮನ್ಯಮಾನಗಳಿಗೆ ಅಭೇದ ಹೇಳಿರುವರು.) ಕೌಸ್ತುಭ ಎಂಬ ಪದಕ್ಕೆ ಹೀಗೆ ಯೋಗ ತಿಳಿಯಬೇಕು. ಕುಂ ಭೂಮಿಯನ್ನು ಸ್ತುಭ್ನಾತಿ ವ್ಯಾಪ್ನೋತಿ ಇತಿ ಕುಸ್ತುಭಃ ಅಬ್ಧಿಃ ತಸ್ಯ ಅಯಂ ಕೌಸ್ತುಭಃ ಭೂಮಿಯನ್ನು ವ್ಯಾಪಿಸಿರುವ ಸಮುದ್ರದಲ್ಲಿ ಜನಿಸಿದ್ದು ಎಂದು ಅರ್ಥ. ಕುಂ ಸ್ತೋಭತೇ ಇತಿ ಕುಸ್ತುಭಃ ಭಗವಾನ್ ತಸ್ಯ ಅಯಂ ಕೌಸ್ತುಭಃ ಭಗವಂತನಿಗೆ ಸಂಬಂಧಿಸಿದ್ದು ಎಂದು ಅರ್ಥ.

ಭಗವಂತನ ಗದೆಗೆ ಕೌಮೋದಕೀ ಎಂದು ಹೆಸರಿದೆ. **ಕೋಃ** ಪೃಥಿವಿಗೆ **ಮೋದಕಃ** ಸಂತೋಷಪಡಿಸುವವನು **ಕುಮೋದಕ** ಎಂದರೆ ಪರಮಾತ್ಮ. ತಸ್ಯ ಇಯಂ **ಕೌಮೋದಕೀ** ಆ ಭಗವಂತನಿಗೆ ಸಂಬಂಧಿಸಿದ್ದು ಆದ್ದರಿಂದ ಈ ಗದೆ ಕೌಮೋದಕೀನಾಮಮಕವಾಗಿದೆ. ''ವಿಷ್ಣುಃ ಕುಮೋದಕಃ ಶೌರೀ'' ಎಂದು ದುರ್ಗಕೋಶವಿದೆ.

ಇದಕ್ಕೆ ಕೌಪೋದಕೀ ಎಂದು ಮತ್ತೊಂದು ಹೆಸರಿದೆ. ಆ ಪಕ್ಷದಲ್ಲಿ ಕೂಪೋದಕಜಾತತ್ವಾತ್ ಕೌಪೋದಕೀ ಕೂಪೋದಕದಲ್ಲಿ ಜನಿಸಿದ್ದಾದ್ದರಿಂದ ಕೌಪೋದಕೀ ಎಂಬುದಾಗಿ ವ್ಯುತ್ಪತ್ತಿಯನ್ನು ತಿಳಿಯಬೇಕು.

ದೇವರ ಚಕ್ರಕ್ಕೆ ಸುದರ್ಶನ ಎಂದು ಹೆಸರಿದೆ. ಶೋಭನಂ ದರ್ಶನಂ ಅಸ್ಯೇತಿ ಸುಖೇನ ದೃಶ್ಯತೇ ಇತಿ ವಾ ಸುದರ್ಶನಃ ತಂ ಸುದರ್ಶನಂ ಎಂದು ವ್ಯುತ್ಪತ್ತಿಯನ್ನು ತಿಳಿಯಬೇಕು. ''ಸುದರ್ಶನೋ ಹರಶ್ಚಕ್ರೇ ಮೇರುವಂಶೇ ದ್ರುಮೇ ಪುಮಾನ್ । ಸುದರ್ಶನೋಽಸ್ತ್ರಿಯಾಂ ಚಕ್ರೇ ಎಂದು ನಾಮನಿಧಾನವು ತಿಳಿಸುತ್ತದೆ.

ದೇವರ ಶಂಖಕ್ಕೆ ಪಾಂಚಜನ್ಯ ಎಂದು ಹೆಸರಿದೆ. ಪಂಚಜನೇ ಭವಃ ಪಾಂಚಜನ್ಯಃ ಪಂಚಜನ ಎಂಬ ಒಬ್ಬ ದೈತ್ಯನಲ್ಲಿ ಹುಟ್ಟಿದ್ದು ಪಾಂಚಜನ್ಯನಾಮಕವಾಗಿದೆ. ಪಂಚಜನೇ ಪಾತಾಲದಲ್ಲಿ ಹುಟ್ಟಿದ್ದು ಪಾಂಚಜನ್ಯ ಎಂದು ಕೆಲವರು ವ್ಯಾಖ್ಯಾನಿಸುವರು. ಸುಪರ್ಣಂ ಶೋಭನೇ ಪರ್ಣೇ ಯಸ್ಯ ಸಃ ತಂ ಸುಪರ್ಣಂ ಒಳ್ಳೆಯ ಎರಡು ರೆಕ್ಕೆಗಳುಳ್ಳದ್ದು ಎಂದು ಅರ್ಥ. ॥೧೯॥

**ಶೇಷಂ ಚ ಮತ್ಕಲಾಂ ಸೂಕ್ಷ್ಮಾಂ ಶ್ರಿಯಂ ದೇವೀಂ ಮದಾಶ್ರಯಾಮ್ ।**
**ಬ್ರಹ್ಮಾಣಂ ನಾರದಮೃಷಿಂ ಭವಂ ಪ್ರಹ್ಲಾದಮೇವ ಚ ॥೨೦॥**

**ಶೇಷಂ** ಶೇಷನನ್ನು **ಮತ್ಕಲಾಂ** ನನ್ನ ಸನ್ನಿಧಾನ ಉಳ್ಳ, ನನ್ನ ಭಿನ್ನಾಂಶಳಾದ ಮಮ ಕಲಾ ಅಂಶೋ ಯಸ್ಯಾಂ ಸಾ ಮತ್ಕಲಾ ತಾಂ ಎಂದು ವಿಗ್ರಹ ಮಾಡಿಕೊಳ್ಳಬೇಕು. **ಸೂಕ್ಷ್ಮಾಂ** ಅತ್ಯಂತ ಅಣುರೂಪಳಾದ **ಮದಾಶ್ರಯಾಂ** ನನ್ನನ್ನು ಆಶ್ರಯಿಸಿದ ಅಹಂ ಆಶ್ರಯೋ ಯಸ್ಯಾಃ ಸಾ ತಾಂ **ದೇವೀಂ** ದ್ಯೋತಮಾನಳಾದ (ಪ್ರಕಾಶಮಾನಳಾದ) ಅಥವಾ ಅಭಿಷಿಕ್ತಳಾದ **ಶ್ರಿಯಂ** ನನ್ನ ವಕ್ಷಸ್ಥಳವನ್ನಾಶ್ರಯಿಸಿದ ಲಕ್ಷ್ಮೀದೇವಿಯನ್ನು **ಬ್ರಹ್ಮಾಣಂ** ಬ್ರಹ್ಮದೇವರನ್ನು **ಭವಂ** ರುದ್ರದೇವರನ್ನು **ಋಷಿಂ ನಾರದಂ** ಜ್ಞಾನಿಯಾದ ನಾರದರನ್ನು **ಚ** ಮತ್ತು **ಪ್ರಹ್ಲಾದಂ** ಪ್ರಹ್ಲಾದನನ್ನು. ॥೨೦॥

**ಮತ್ಸ್ಯಕೂರ್ಮವರಾಹಾದ್ಯೈರವತಾರೈಃ ಕೃತಾನಿ ಮೇ ।**
**ಕರ್ಮಾಣ್ಯನಂತಪುಣ್ಯಾನಿ ಸೂರ್ಯಸೋಮಹುತಾಶನಾನ್ ॥೨೧॥**

**ಮೇ** ನನ್ನ **ಮತ್ಸ್ಯಕೂರ್ಮವರಾಹಾದ್ಯೈಃ** ಮತ್ಸ್ಯ-ಕೂರ್ಮ-ವರಾಹ ಮುಂತಾದ **ಅವತಾರೈಃ** ಸ್ವರೂಪಾವತಾರಗಳಿಂದ **ಕೃತಾನಿ** ಮಾಡಿದ **ಅನಂತಪುಣ್ಯಾನಿ** ಅನಂತ ಪುಣ್ಯಕೊಡುವ **ಕರ್ಮಾಣಿ** ಕಾರ್ಯಗಳನ್ನು (ಚರಿತ್ರೆಗಳನ್ನು) **ಸೂರ್ಯಸೋಮ-ಹುತಾಶನಾನ್** ಸೂರ್ಯ-ಚಂದ್ರ ಮತ್ತು ಅಗ್ನಿಗಳನ್ನು. ॥೨೧॥

**ಪ್ರಣವಂ ಸತ್ಯಮವ್ಯಕ್ತಂ ಗೋವಿಪ್ರಾನ್ ಧರ್ಮಮಕ್ಷಯಮ್ ।**
**ದಾಕ್ಷಾಯಣೀಂ ಧರ್ಮಪತ್ನೀಂ ಸೋಮಕಶ್ಯಪಯೋರಪಿ ॥೨೨॥**

**ಪ್ರಣವಂ** ಮೂರು ಮಾತ್ರೆಗಳಿಂದ ಆರಂಭಿಸಿ ಅನಂತಮಾತ್ರಾಗಳುಳ್ಳ ಓಂಕಾರವನ್ನು **ಸತ್ಯಂ** ಅನಾರೋಪಿತವಾದ ಜಗತ್ತನ್ನು ಅಥವಾ ಬ್ರಹ್ಮನನ್ನು ಯಥಾರ್ಥ ಮಾತನಾಡುವ ದೇವಿಯನ್ನು **ಅವ್ಯಕ್ತಂ** ಜಡಪ್ರಕೃತಿಯನ್ನು **ಅಕ್ಷಯಂ ಧರ್ಮಂ** ನಾಶರಹಿತವಾದ ಫಲವನ್ನು ಕೊಡುವ ಹರಿಭಕ್ತಿ ಎಂಬ ಧರ್ಮವನ್ನು ಅಥವಾ ಯಮಧರ್ಮನನ್ನು **ಧರ್ಮಪತ್ನೀಂ** ಯಮಧರ್ಮನ ಹೆಂಡತಿಯಾದ **ದಾಕ್ಷಾಯಣೀಂ** ದಕ್ಷನ ಮಗಳಾದ ಮೂರ್ತಿ ಎಂಬುವಳನ್ನು **ಸೋಮಕಶ್ಯಪಯೋಃ ಅಪಿ** ಚಂದ್ರನ ಹೆಂಡತಿಯರಾದ ರೋಹಿಣೀಮುಂತಾದವರನ್ನು, ಕಶ್ಯಪನ ಹೆಂಡತಿಯರಾದ ಅದಿತಿ ಮುಂತಾದವರನ್ನು **ಗೋವಿಪ್ರಾನ್** ಆಕಳು ಮತ್ತು ಬ್ರಾಹ್ಮಣರನ್ನು.

''ದದೌ ಸ ದಶ ಧರ್ಮಾಯ'' ಎಂದು ಹಿಂದೆ ಹೇಳಿದ್ದರಿಂದ ದಾಕ್ಷಾಯಣೀಃ ಎಂದು ಬಹುವಚನ ಹೇಳಬೇಕಿತ್ತಲ್ಲ ಎಂದರೆ ನಿಜ. ಆದರೆ ನಾರಾಯಣನನ್ನು ಪ್ರಸವಿಸಿದವಳು ಮುಖ್ಯಳಾದುದರಿಂದ ಒಬ್ಬಳನ್ನೇ ಇಲ್ಲಿ ಪರಿಗ್ರಹಿಸಿದ್ದಾರೆ ಎಂದು ತಿಳಿಯಬೇಕು.

''ಧರ್ಮಸ್ಯ ದಕ್ಷದುಹತರ್ಯಜನಿಷ್ಟ ಮೂರ್ತ್ಯಾಂ'' ಎಂದಿದೆ ಕಾರಣ ಏಕವಚನ ಇಟ್ಟಿರುವರು.

**ಗಂಗಾಂ ಸರಸ್ವತೀಂ ನಂದಾಂ ಕಾಲಿಂದೀಂ ಸಿತವಾರಣಮ್ ।**
**ಧ್ರುವಂ ಬ್ರಹ್ಮಋಷೀನ್ ಸಪ್ತ ಪುಣ್ಯಶ್ಲೋಕಾಂಶ್ಚ ಮಾನವಾನ್ ॥೨೩॥**

**ಗಂಗಾಂ** ಗಂಗಾನದಿಯನ್ನು, **ಸರಸ್ವತೀಂ** ಸರಸ್ವತೀನದಿಯನ್ನು, **ನಂದಾಂ** ನಂದಾ ಎಂಬ ನದಿಯನ್ನು **ಕಾಲಿಂದೀಂ** ಯಮುನಾನದಿಯನ್ನು ಕೆಲವರು ನಂದಾ ಎಂದರೆ ಅಲಕನಂದಾ ಎಂದರ್ಥ ಮಾಡಿರುವರು. ''ಕಾಲಿಂದೀ ಸೂರ್ಯತನಯಾ ಯಮುನಾ'' ಎಂದು ಅಮರವಿದೆ. **ಸಿತವಾರಣಂ** ಬಿಳಿಯ ಆನೆ ಅಂದರೆ ಐರಾವತವನ್ನು **ಧ್ರುವಂ** ಧ್ರುವರಾಜನನ್ನು **ಸಪ್ತ ಬ್ರಹ್ಮಋಷೀನ್** ಮರೀಚಿ ಮುಂತಾದ ಏಳು ಬ್ರಹ್ಮಋಷಿಗಳನ್ನು **ಪುಣ್ಯಶ್ಲೋಕಾನ್** ಪುಣ್ಯಕೀರ್ತಿಗಳಾದ ನಲ-ಗಯಾದಿಗಳನ್ನು ಪ್ರಿಯವ್ರತ ಮುಂತಾದ ಚಕ್ರವರ್ತಿಗಳನ್ನು **ಮಾನವಾನ್** ಮನುಪುತ್ರರನ್ನು. ॥೨೩॥

ಕೆಲವರು ನಂದಾಂ ಎಂದರೆ ಅಲಕನಂದಾ ಎಂದು ವ್ಯಾಖ್ಯಾನಿಸಿದ್ದಾರೆ. ಹಾಗೆ ಮಾಡಿದರೆ ಗಂಗಾಂ ಎಂಬುದರಿಂದ ಪುನರುಕ್ತವಾಗುತ್ತದೆ. ಆದ್ದರಿಂದ ಶ್ರೀಸತ್ಯಧರ್ಮರು ನಂದಾಂ ಎಂದರೆ ನಂದಾ ಎಂಬ ಹೆಸರಿನ ನದಿ ಎಂದು ಅರ್ಥೈಸಿದ್ದಾರೆ.

**ಉತ್ಥಾಯಾಪರರಾತ್ರಾಂತೇ ಪ್ರಯತಾಃ ಸುಸಮಾಹಿತಾಃ ।**
**ಸ್ಮರಂತಿ ಮಮ ರೂಪಾಣಿ ಮುಚ್ಯಂತೇ ತೇಽಂಹಸೋಽಖಿಲಾತ್ ॥೨೪॥**

**ಯೇ** ಯಾರು **ಅಪರರಾತ್ರಾಂತೇ** ಬ್ರಾಹ್ಮಮುಹೂರ್ತದಲ್ಲಿ ಅರುಣೋದಯ ಪ್ರಾರಂಭದಲ್ಲಿ ಉಷಃಕಾಲದಲ್ಲಿ **ಉತ್ಥಾಯ** ಎದ್ದು **ಪ್ರಯತಾಃ** ವಾಙ್ನಿಯಮವುಳ್ಳವರಾಗಿ (ಬೇರೆ ಮಾತನಾಡದೇ) ಇಂದ್ರಿಯಗಳನ್ನು ಹಿಡಿತದಲ್ಲಿಟ್ಟುಕೊಂಡು ಶುದ್ಧರಾಗಿ **ಸುಸಮಾಹಿತಾಃ** ಏಕಾಗ್ರಮನಸ್ಕರಾಗಿ **ಮಮ ರೂಪಾಣಿ** ಮಾಂ ಚ ಎಂದಾರಂಭಿಸಿ ಮಾನವಾನ್ ಎಂಬಲ್ಲಿಯ ವರೆಗೆ ಹೇಳಿದ ಸ್ವರೂಪಭೂತವಾದ ರೂಪಗಳನ್ನು ಮತ್ತು ಆವಿಷ್ಟರೂಪಗಳನ್ನು **ಸ್ಮರಂತಿ** ಸ್ಮರಿಸುವರೋ **ತೇ** ಅವರು **ಅಖಿಲಾತ್** ಎಲ್ಲ **ಅಂಹಸಃ** ಪಾಪಗಳಿಂದ **ಮುಚ್ಯಂತೇ** ಮುಕ್ತರಾಗುವರು. ಅಥವಾ **ಅಂಹಸಃ ಖಿಲಾತ್** ಎಂದು ವಿಭಾಗ ಮಾಡಿಕೊಳ್ಳಬೇಕು. **ಖಿಲಾತ್** ಇತರರಿಂದ ಅಪರಿಹಾರ್ಯವಾದದ್ದರಿಂದ ಭಿನ್ನವಾದ **ಅಂಹಸಃ** ಪಾಪಗಳಿಂದ **ಮುಚ್ಯಂತೇ** ಮುಕ್ತರಾಗುತ್ತಾರೆ ಎಂದು ಅನ್ವಯ ಮಾಡಿಕೊಳ್ಳಬೇಕೆಂದು ಶ್ರೀಸತ್ಯಧರ್ಮತೀರ್ಥರು ತಿಳಿಸುತ್ತಾರೆ. ॥೨೪॥

**ಯೇ ಮಾಂ ಸ್ತುವಂತ್ಯನೇನಾಂಗ ಪ್ರತಿಬುದ್ಧ್ಯ ನಿಶಾತ್ಯಯೇ ।**
**ತೇಷಾಂ ಪ್ರಾಣಾತ್ಯಯೇ ಚಾಹಂ ದದಾಮಿ ವಿಮಲಾಂ ಮತಿಮ್ ॥೨೫॥**

**ಹೇ ಅಂಗ** ಪ್ರಿಯನಾದ ಗಜೇಂದ್ರನೇ **ಯೇ** ಯಾರು **ನಿಶಾತ್ಯಯೇ** ಉಷಃ ಕಾಲದಲ್ಲಿ **ಪ್ರತಿಬುದ್ಧ್ಯ** ಎಚ್ಚತ್ತು **ಅನೇನ** ಗಜೇಂದ್ರಮೋಕ್ಷಸ್ತೋತ್ರದಿಂದ **ಮಾಂ** ನನ್ನನ್ನು **ಸ್ತುವಂತಿ** ಸ್ತೋತ್ರಮಾಡುವರೋ **ತೇಷಾಂ** ಅವರಿಗೆ **ಪ್ರಾಣಾತ್ಯಯೇ** ಪ್ರಾಣೋತ್ಕ್ರಮಣ ಕಾಲದಲ್ಲಿ **ಅಹಂ** ನಾನು **ಚ** ಉಳಿದ ಕಾಲದಲ್ಲಿಯೂ **ವಿಮಲಾಂ ಮತಿಂ** ಶುದ್ಧವಾದ ನನ್ನ ಜ್ಞಾನವನ್ನು **ದದಾಮಿ** ಕೊಡುವೆನು.

**ಗತಿಂ** ಎಂದೂ ಪಾಠವಿದೆ. ಆ ಪಾಠದಲ್ಲಿ ಮುಕ್ತಿ ಮತ್ತು ಜ್ಞಾನ ಎಂದು ಎರಡೂ ಅರ್ಥವನ್ನು ಮಾಡಲು ಬರುತ್ತದೆ. ಭಾರತದಲ್ಲಿ ''ತೃಣಬಿಂದುಂ ಕುರುಕ್ಷೇತ್ರಂ'' ಎಂದಾರಂಭಿಸಿ ಗಜೇಂದ್ರಮೋಕ್ಷದಲ್ಲಿ ಹೇಳಿದ ಇಲ್ಲಿ ಹೇಳದಿರುವವರನ್ನು ಕೂಡಾ ಸ್ಮರಿಸಬೇಕೆಂದು ತಿಳಿಯಬೇಕು. ।।೨೫।।

**ಶ್ರೀಶುಕ ಉವಾಚ**

**ಇತ್ಯಾದಿಶ್ಯ ಹೃಷೀಕೇಶಃ ಪ್ರಾಧ್ಮಾಯ ಜಲಜೋತ್ತಮಮ್ ।**
**ಹರ್ಷಯನ್ ವಿಬುಧಾನೀಕಮಾರುರೋಹ ಖಗಾಧಿಪಮ್ ।।೨೬।।**

**।। ಇತಿ ಶ್ರೀಮದ್ಭಾಗವತೇ ಅಷ್ಟಮಸ್ಕಂಧೇ ಚತುರ್ಥೋಽಧ್ಯಾಯಃ ।।**

**ಇತಿ** ಈ ರೀತಿಯಾಗಿ **ಆದಿಶ್ಯ** ಉಪದೇಶಿಸಿ ಆಜ್ಞಾಪಿಸಿ **ಹೃಷೀಕೇಶಃ** ಇಂದ್ರಿಯ ಪ್ರೇರಕನಾದ ಶ್ರೀಹರಿಯು **ಜಲಜೋತ್ತಮಂ** ಶಂಖಶ್ರೇಷ್ಠವನ್ನು **ಪ್ರಾಧ್ಮಾಯ** ಧ್ವನಿಗೈದು **ವಿಬುಧಾನೀಕಂ** ಎಲ್ಲ ದೇವತೆಗಳ ಸಮೂಹವನ್ನು **ಹರ್ಷಯನ್** ಸಂತೋಷ ಪಡಿಸುತ್ತ **ಖಗಾಧಿಪಂ ಆರುರೋಹ** ಪಕ್ಷಿಶ್ರೇಷ್ಠನಾದ ಗರುಡನನ್ನು ಏರಿದನು. ।।೨೬।।

**ಇಲ್ಲಿಗೆ ನಾಲ್ಕನೇ ಅಧ್ಯಾಯವು ಮುಗಿಯಿತು.**

★ ★ ★

# ಅಥ ಪಂಚಮೋಽಧ್ಯಾಯಃ

ಭಕ್ತಿಯಿಂದ ಸ್ತುತಿಸುವವನಿಗೆ ಪರಮಾತ್ಮ ಪ್ರಸನ್ನನಾಗುತ್ತಾನೆ ಎಂದು ಈ ಅಧ್ಯಾಯದಲ್ಲಿ ಪ್ರತಿಪಾದಿಸುವರು. ಮುಖ್ಯವಾಗಿ ಮೊದಲಿಗೆ ಕ್ರಮಪ್ರಾಪ್ತವಾದ ಮನ್ವಂತರಕಥಾವನ್ನು ಹೇಳುವರು.

**ಶ್ರೀಶುಕ ಉವಾಚ**

**ರಾಜನ್ನುದಿತಮೇತತ್ತೇ ಹರೇಃ ಕರ್ಮಾಘನಾಶನಮ್ ।**
**ಗಜೇಂದ್ರಮೋಕ್ಷಣಂ ಪುಣ್ಯಂ ರೈವತಂ ತ್ವಂತರಂ ಶೃಣು ॥೧॥**

**ಹೇ ರಾಜನ್** ಪರೀಕ್ಷಿದ್ರಾಜನೇ **ಏತತ್** ತಾಪಸಮನ್ವಂತರದಲ್ಲಿ ಮಾಡಿದ **ಅಘನಾಶನಂ** ಹೇಳುವವರ ಕೇಳುವರ ಪಾಪಗಳನ್ನು ಕಳೆಯುವ **ಗಜೇಂದ್ರಮೋಕ್ಷಣಂ** ಗಜೇಂದ್ರಮೋಕ್ಷವೆಂಬ **ಹರೇಃ** ತಾಪಸಮನ್ವಂತರಾಧಿಪತಿಯಾದ ಶ್ರೀಹರಿಯ **ಪುಣ್ಯಂ** ಪುಣ್ಯಕರವಾದ **ಕರ್ಮ** ಚರಿತ್ರೆಯು **ತೇ** ನಿನಗೆ **ಉದಿತಂ** ನನ್ನಿಂದ ಹೇಳಲ್ಪಟ್ಟಿತು. **ತು** ಇನ್ನು ಮುಂದೆ **ರೈವತಂ ಅಂತರಂ** ಐದನೆಯ ರೇವತಸಂಬಂಧಿಯಾದ ಮನ್ವಂತರದ ಪರಿಸ್ಥಿತಿಯನ್ನು **ಶೃಣು** ಕೇಳು. ॥೧॥

ಮೊದಲಿಗೆ ರಾಜನ್ ಎಂದು ಸಂಬೋಧಿಸಿ ಇಂದ್ರದ್ಯುಮ್ನರಾಜನಂತಾಗ ಬೇಡ ಜಾಗ್ರತನಾಗು ಎಂದು ತಿಳಿಸುವರು.

**ಪಂಚಮೋ ರೈವತೋ ನಾಮ ಮನುಸ್ತಾಪಸಸೋದರಃ ।**
**ಬಲವಿಂಧ್ಯಾದಯಸ್ತಸ್ಯ ಸುತಾ ಅರ್ಜುನಪೂರ್ವಕಾಃ ॥೨॥**

**ತಾಪಸಸೋದರಃ** ತಾಪಸಮನುವಿನ ತಮ್ಮನಾದ **ರೈವತೋ ನಾಮ** ರೈವತನೆಂಬುವವನು **ಪಂಚಮಃ ಮನುಃ** ಐದನೇ ಮನುವು **ತಸ್ಯ** ಆ ರೈವತನಿಗೆ **ಅರ್ಜುನಪೂರ್ವಕಾಃ** ಅರ್ಜುನನೇ ಅಣ್ಣನಾಗಿ ಉಳ್ಳ, ಅಥವಾ ಅರ್ಜುನನೇ ಪ್ರಧಾನನಾಗಿ ಉಳ್ಳ **ಬಲವಿಂಧ್ಯಾದಯಃ** ಬಲವಿಂಧ್ಯ ಮುಂತಾದವರು **ಸುತಾಃ** ಮಕ್ಕಳು.

**ತಾಪಸಸೋದರಃ** ಎಂಬಲ್ಲಿ ತಾಪಸೇನ ಸಹ ಸದೃಶಂ ತುಲ್ಯಂ ಉದರಂ ಯಸ್ಯ ಸಃ ಎಂದು ವಿಗ್ರಹ ಮಾಡಿಕೊಳ್ಳಬೇಕು. ''ವೋಪಸರ್ಜನಸ್ಯ'' ಎಂಬುದರಿಂದ ಸಭಾವವಾಗಿ ಸೋದರ ಎಂದಾಗಿದೆ. ಕೆಲವರು ''ಸಹಸ್ಯ ಸೋಽನ್ಯತರಸ್ಯಾಮ್'' ಇತಿ ಪಾಕ್ಷಿಕೇ ಸಭಾವೇ ಸೋದರಃ ಎಂದಾಗುತ್ತದೆ ಎಂದು ಹೇಳುತ್ತಾರೆ. ಆದರೆ ಈ ವಿಧವಾದ ಸೂತ್ರವೇ ಇಲ್ಲದಿದ್ದುದರಿಂದ ಹೀಗೆ ಉಪಪಾದಿಸುವುದು ಸರಿಯಲ್ಲ. ।।೨।।

**ವಿಭುರಿಂದ್ರಃ ಸುರಗಣಾ ರಾಜನ್ ಭೂತರಯಾದಯಃ ।**
**ಹಿರಣ್ಯರೋಮಾ ವೇದಶಿರಾ ಊರ್ಧ್ವಬಾಹ್ವಾದಯೋ ದ್ವಿಜಾಃ ।।೩।।**

**ರಾಜನ್** ಪರೀಕ್ಷಿತನೇ (ರೈವತಮನ್ವಂತರದಲ್ಲಿ) **ವಿಭುಃ** ವಿಭು ಎಂಬ ಹೆಸರಿನವನು **ಇಂದ್ರಃ** ಇಂದ್ರನಾಗಿದ್ದಾನೆ. **ಭೂತರಯಾದಯಃ** ಭೂತರಯ ಮೊದಲಾದವರು **ಸುರಗಣಾಃ** ದೇವತೆಗಳಾಗಿದ್ದಾರೆ. **ಹಿರಣ್ಯರೋಮಾಃ ವೇದಶಿರಾಃ ಊರ್ಧ್ವಬಾಹ್ವಾದಯಃ** ಹಿರಣ್ಯರೋಮ, ವೇದಶಿರ ಊರ್ಧ್ವಬಾಹು ಮೊದಲಾದವರು **ದ್ವಿಜಾಃ** ಸಪ್ತಋಷಿಗಳಾಗಿದ್ದಾರೆ. ।।೩।।

ಮತ್ಸ್ಯಪುರಾಣದಲ್ಲಿ ''ಹಿರಣ್ಯರೋಮಾ ವೇದಶ್ರೀರೂರ್ಧ್ವಜಾನುಸ್ತಥಾ ಪರಃ ಎಂದು ಹೇಳಿದ್ದಾರೆ. ಆದ್ದರಿಂದ ಇಲ್ಲಿ ಹೇಳಿದ ವೇದಶಿರನಿಗೆ ವೇದಶ್ರೀ ಎಂದೂ ಊರ್ಧ್ವಬಾಹುವಿಗೆ ಊರ್ಧ್ವಜಾನು ಎಂದೂ ಹೆಸರಿದೆ ಎಂದು ತಿಳಿಯಬೇಕು.

ರೈವತಮನ್ವಂತರದಲ್ಲಿ ವಿಭು ಎಂಬ ಹೆಸರಿನ ವಿಷ್ಣುವೇ ಇಂದ್ರನಾಗಿದ್ದನೆಂದು ಲಿಂಗೇರೀ ಆಚಾರ್ಯರು ವ್ಯಾಖ್ಯಾನಿಸಿದ್ದಾರೆ. ಅಶ್ವಿನೀದೇವತೆಗಳಲ್ಲಿ ದಸ್ರ ಎಂಬ ಹೆಸರಿನವನು ವಿಭು ಎಂಬ ಹೆಸರಿನಿಂದ ಈ ರೈವತ ಮನ್ವಂತರದಲ್ಲಿ ಇಂದ್ರನಾಗಿದ್ದನೆಂದು ಛಲಾರೀ ಆಚಾರ್ಯರು ತಮ್ಮ ವ್ಯಾಖ್ಯಾನದಲ್ಲಿ ತಿಳಿಸಿದ್ದಾರೆ.

**ಪತ್ನೀ ವಿಕುಂಠಾ ಶುಭ್ರಸ್ಯ ವೈಕುಂಠೈಃ ಸುರಸತ್ತಮೈಃ ।**
**ತಯೋಃ ಸ್ವಕಲಯಾ ಜಜ್ಞೇ ವೈಕುಂಠೋ ಭಗವಾನ್ ಸ್ವಯಮ್ ।।೪।।**

**ಶುಭ್ರಸ್ಯ** ಶುಭ್ರನೆಂಬ ಋಷಿಗೆ (ಇವನು ಈ ಮನ್ವಂತರದ ಸಪ್ತಋಷಿಗಳಲ್ಲಿ ಒಬ್ಬನೋ ಬೇರೆಯೋ ಅಂತು ಈ ಮನ್ವಂತರದಲ್ಲಿದ್ದ ಋಷಿಯು) **ವಿಕುಂಠಾ** ವಿಕುಂಠಾ ಎಂಬುವವಳು **ಪತ್ನೀ** ಹೆಂಡತಿಯು **ಅಭೂತ್** ಇದ್ದಳು. **ತಯೋಃ** ಆ ಶುಭ್ರ-ವಿಕುಂಠೆಯರಿಗೆ **ವೈಕುಂಠೈಃ ಸುರಸತ್ತಮೈಃ ಸಹ** ವಿಕುಂಠಾಪುತ್ರರಾದ್ದರಿಂದ ವೈಕುಂಠರೆನಿಸುವ ದೇವಶ್ರೇಷ್ಠರಿಂದ ಕೂಡಿಕೊಂಡು **ಸ್ವಕಲಯಾ** ತನ್ನ ಸ್ವರೂಪಾಂಶದಿಂದ **ಸ್ವಯಂ ಭಗವಾನ್** ಸಾಕ್ಷಾತ್ ವಿಷ್ಣುವೇ **ವೈಕುಂಠಃ** ವೈಕುಂಠನೆಂಬ ಹೆಸರಿನಿಂದ **ಜಜ್ಞೇ** ಅವತರಿಸಿದನು.

ಭಗವಂತ ವೈಕುಂಠನಾಗಿ ಅವತರಿಸಿದ ಎಂದು ಸ್ಪಷ್ಟವಾಗಿ ಹೇಳುವುದರಿಂದ ಆಶ್ವಿನೀದೇವತೆಗಳಲ್ಲಿ ಒಬ್ಬನಾದ ದಸ್ರನೇ ವಿಭು ಎಂಬ ಹೆಸರಿನಿಂದ ಇಂದ್ರನಾಗಿದ್ದ ಎಂದು ಹೇಳುವುದು ಸೂಕ್ತವೆನಿಸುತ್ತದೆ. ಶ್ರೀಹರಿಯೇ ಇಂದ್ರನಾದಾಗ ಬೇರೇ ಹರಿಯ ಅವತಾರದ ಆವಶ್ಯಕತೆ ಇರುವದಿಲ್ಲವೆಂದು ಅನ್ಯತ್ರ ಹೇಳಿದೆ. ।।೪।।

**ವೈಕುಂಠಃ ಕಲ್ಪಿತೋ ಯೇನ ಲೋಕೋ ಲೋಕನಮಸ್ಕೃತಃ ।**
**ರಮಯಾ ಪ್ರಾರ್ಥ್ಯಮಾನೇನ ದೇವ್ಯಾ ತತ್ಪ್ರಿಯಕಾಮ್ಯಯಾ ।।೫।।**

**ದೇವ್ಯಾ ರಮಯಾ** ಲಕ್ಷ್ಮೀದೇವಿಯಿಂದ **ಪ್ರಾರ್ಥ್ಯಮಾನೇನ** ಪ್ರಾರ್ಥಿತನಾದ **ಯೇನ** ಯಾವನಿಂದ **ತತ್ಪ್ರಿಯಕಾಮ್ಯಯಾ** ಲಕ್ಷ್ಮೀದೇವಿಗೆ ಪ್ರಿಯಮಾಡುವ ಇಚ್ಛೆಯಿಂದ **ಲೋಕನಮಸ್ಕೃತಃ** ಜನರಿಂದ ವಂದಿತವಾದ **ವೈಕುಂಠಃ ಲೋಕಃ** ವೈಕುಂಠಲೋಕವು **ಕಲ್ಪಿತಃ** ನಿರ್ಮಿತವಾಯಿತು.

ವೈಕುಂಠಲೋಕ ನಿತ್ಯವಾಗಿದೆ. ಅದರ ನಿರ್ಮಾಣ ಸಾಧ್ಯವಿಲ್ಲ. ಆದ್ದರಿಂದ ವೈಕುಂಠನಾಮಕ ಪರಮಾತ್ಮ ಆ ಲೋಕವನ್ನು ಅಭಿವ್ಯಕ್ತಿಗೊಳಿಸಿದ ಎಂದು ತಿಳಿಯಬೇಕು.

**ತಸ್ಯಾನುಭಾವಃ ಕಥಿತೋ ಗುಣಾಶ್ಚ ಪರಮೋದಯಾಃ ।**
**ಭೌಮಾನ್ ರೇಣೂನ್ ಸ ವಿಮಮೇ ಯೋ ವಿಷ್ಣೋರ್ವರ್ಣಯೇದ್ಗುಣಾನ್ ।।**

**ತಸ್ಯ** ಆ ವೈಕುಂಠನಾಮಕನಾದ ಶ್ರೀಹರಿಯ **ಅನುಭಾವಃ** ಮಾಹಾತ್ಮ್ಯವು ಸಾಮರ್ಥ್ಯವು **ಕಥಿತಃ** ''ಏಷ ನಿತ್ಯೋ ಮಹಿಮಾ ಬ್ರಾಹ್ಮಣಸ್ಯ'' ''ಮನ್ಮನಾ ಭವ ಮದ್ಭಕ್ತೋ'' ''ಅಥ ತೇ ಮುನಯೋ ದೃಷ್ಟ್ವಾ ನಯನಾನಂದಭಾಜನಮ್ । ವೈಕುಂಠಂ ತದಧಿಷ್ಠಾನಂ ವೈಕುಂಠಂ ಚ ಸ್ವಯಂ ಪ್ರಭುಮ್ ।। ಇತ್ಯಾದಿಯಾಗಿ ಶ್ರುತಿ-ಸ್ಮೃತಿಗಳಲ್ಲಿ ಹೇಳಲ್ಪಟ್ಟಿದೆ. **ಪರಮೋದಯಾಃ** ಗುಣೋಪಸಂಹಾರ (ಧ್ಯಾನ) ಮಾಡುವವರಿಗೆ ಐಶ್ವರ್ಯಾಭಿವೃದ್ಧಿಯನ್ನು ಕೊಡುವ **ಗುಣಾಶ್ಚ** ಅನಂತಕಲ್ಯಾಣಗುಣಗಳೂ **ಕಥಿತಾಃ** ಶ್ರುತಿ-ಸ್ಮೃತಿಗಳಲ್ಲಿ ಹೇಳಲ್ಪಟ್ಟಿವೆ. ಹಾಗಿದ್ದರೆ ಅವುಗಳನ್ನೆಲ್ಲ ನನಗೆ ಹೇಳಿರಿ ಎಂದರೆ ಹೇಳುತ್ತಾರೆ. **ಯಃ** ಯಾವ ಜ್ಞಾನಿಯು **ಭೌಮಾನ್** ಭೂಮಿಯ **ರೇಣೂನ್** ಕಣಗಳನ್ನು **ವಿಮಮೇ** ಇಷ್ಟೇ ಎಂದು ಲೆಕ್ಕಮಾಡಿ ಹೇಳುವನೋ **ಸಃ** ಅವನು **ವಿಷ್ಣೋಃ** ವಿಷ್ಣುವಿನ **ಗುಣಾನ್** ಗುಣಗಳನ್ನು **ವರ್ಣಯೇತ್** ಹೇಳುವನು.

ಭೂಕಣಗಳನ್ನೇ ಎಣಿಸುವವರಿಲ್ಲ ಅಂದ ಮೇಲೆ ವಿಷ್ಣುವಿನ ಗುಣಗಳನ್ನು ಸಮಗ್ರವಾಗಿ ಹೇಳುವವನು ಇಲ್ಲವೆಂದೇನು ಹೇಳುವದು ಎಂದರ್ಥ. ''ವಿಷ್ಣೋರ್ನುಕಂ ವೀರ್ಯಾಣಿ ಪ್ರವೋಚಂ ಯಃ ಪಾರ್ಥಿವಾನಿ ವಿಮಮೇ ರಜಾಂಸಿ'' ''ವಿಷ್ಣೋರ್ನು ವೀರ್ಯಗಣನಾಂ ಕತಮೋಽರ್ಹತೀಹ ಯಃ ಪಾರ್ಥಿವಾನ್ಯಪಿ ಕವಿರ್ವಿಮಮೇ ರಜಾಂಸಿ'' ''ಮಯ್ಯನಂತಗುಣೇಽನಂತೇ'' ಇತ್ಯಾದಿ ಶ್ರುತಿ-ಸ್ಮೃತಿಗಳಿವೆ. ।।೬।।

ಯಃ ವರ್ಣಯೇತ್ ಕಃ ವರ್ಣಯೇತ್? ನ ಕೋऽಪಿ ವರ್ಣಯೇತ್. ಭಗವಂತನ ಗುಣಗಳನ್ನು ಯಾರು ವರ್ಣಿಸಲು ಸಾಧ್ಯ ? ಭಗವಂತನ ಗುಣಗಳು ಅನಂತವಾದದ್ದರಿಂದ ಯಾರೂ ವರ್ಣಿಸಲು ಸಾಧ್ಯವಿಲ್ಲ ಎಂದು ಅರ್ಥ.

ಸತ್ಯ ಃ- **ಯಃ** ಜ್ಞಾನಿಗಳಾದ ಯಾವ ಬ್ರಹ್ಮದೇವರೋ **ಸಃ** ಆ ಬ್ರಹ್ಮದೇವರು **ಭೌಮಾನ್** ಭೂಮಿಸಂಬಂಧಿಯಾದ **ರೇಣೂನ್** ಧೂಲಿಗಳನ್ನು **ವಿಮಮೇ** ಎಣಿಸುತ್ತಾರೆ. **ವಿಷ್ಣೋಃ ಗುಣಾನ್** ಭಗವಂತನ ಗುಣಗಳನ್ನು **ಯಃ ವರ್ಣಯೇತ್** ಯಾರು ವರ್ಣಿಸಲು ಸಾಧ್ಯ. ಭಗವಂತನ ಗುಣಗಳು ಅನಂತವಾದದ್ದರಿಂದ ಅವುಗಳನ್ನು ಸಾಕಲ್ಯೇನ ವರ್ಣಿಸಲು ಯಾರಿಗೂ ಸಾಧ್ಯವಿಲ್ಲ ಎಂದು ಅಭಿಪ್ರಾಯ.

ಛಲಾರೀ ಃ- ಭೂಮಿಯ ಕಣಗಳು ಪರಿಚ್ಛಿನ್ನವಾಗಿವೆ. ಆದ್ದರಿಂದ ಅವುಗಳನ್ನು ಬ್ರಹ್ಮದೇವರು ಎಣಿಸುತ್ತಾರೆ. ಭಗವಂತನ ಗುಣಗಳು ಅಪರಿಚ್ಛಿನ್ನವಾಗಿವೆ. ಆದ್ದರಿಂದ ಅವುಗಳನ್ನು ಬ್ರಹ್ಮದೇವರು ಕೂಡಾ ಎಣಿಸಲಾರರು. ರಮಾದೇವಿಯು ಕೂಡಾ ಎಣಿಸಲಾರಳು ಎಂದು ತಿಳಿಯಬೇಕು.

**ಷಷ್ಠಶ್ಚ ಚಕ್ಷುಷಃ ಪುತ್ರಶ್ಚಾಕ್ಷುಷೋ ನಾಮ ವೈ ಮನುಃ ।**
**ಪುರುಃ ಪುರುಷಸುದ್ಯುಮ್ನಪ್ರಮುಖಾಶ್ಚಾಕ್ಷುಷಾತ್ಮಜಾಃ ॥೭॥**

**ಚಕ್ಷುಷಃ** ಚಕ್ಷುಸ್ಸೆಂಬ ಮುನಿಯ **ಪುತ್ರಃ** ಮಗನಾದ ಆದ್ದರಿಂದಲೇ **ಚಾಕ್ಷುಷಃ ನಾಮ** ಚಾಕ್ಷುಷನೆಂಬುವವನು **ಷಷ್ಠಃ** ಆರನೆಯ **ಮನುಃ** ಮನುವು **ವೈ** ಶಾಸ್ತ್ರಸಿದ್ಧವು. **ಪುರುಃ ಪುರುಷಸುದ್ಯುಮ್ನಪ್ರಮುಖಾಃ** ಪುರು-ಪುರುಷ- ಸುದ್ಯುಮ್ನರೇ ಮೊದಲಾದವರು **ಚಾಕ್ಷುಷಾತ್ಮಜಾಃ** ಚಾಕ್ಷುಷ ಮನುವಿನ ಮಕ್ಕಳು. ॥೭॥

**ಇಂದ್ರೋ ಮಂದ್ರದ್ರುಮಸ್ತತ್ರ ದೇವಾ ಆಪ್ಯಾದಯೋ ಗಣಾಃ ।**
**ಮುನಯಸ್ತತ್ರ ವೈರಾಜಹವಿಷ್ಮದ್ವೀರಕಾದಯಃ ॥೮॥**

**ತತ್ರ** ಚಾಕ್ಷುಷಮನ್ವಂತರದಲ್ಲಿ **ಮಂದ್ರದ್ರುಮಃ(ತ)** ಮಂದ್ರದ್ರುಮನು **ಇಂದ್ರಃ** ಇಂದ್ರನು **ಅಪ್ಯಾದಯೋ ಗಣಾಃ ದೇವಾಃ** ಆಪ್ಯ ಮೊದಲಾದ ಗಣಗಳು ದೇವತೆಗಳು **ರಾಜನ್** ರಾಜನೇ **ತತ್ರ** ಆ ಮನ್ವಂತರದಲ್ಲಿ **ವೈರಾಜಹವಿಷ್ಮದ್ವೀರಕಾದಯಃ** ವೈರಾಜ ಹವಿಷ್ಮತ್ ವೀರಕ ಮೊದಲಾದವರು **ಮುನಯಃ** ಸಪ್ತಋಷಿಗಳು **ವೈ** ಶಾಸ್ತ್ರಸಿದ್ಧ.

''ಚಾಕ್ಷುಷಸ್ಯಾಂತರೇ ದೇವಾ ಲೇಖಾನಾಮಪರಿಶ್ರುತಾಃ । ಋಜವೋऽಥ ಋಭಾದ್ಯಾಶ್ಚ ಪರಿಸೂತಾ ದಿವೌಕಸಃ । ಚಾಕ್ಷುಷಸ್ಯಾಂತರೇ ಪ್ರೋಕ್ತಾ ದೇವಾನಾಂ ಪಂಚ ಯೋನಯಃ ॥ ಎಂದು ಮತ್ಸ್ಯಪುರಾಣದಲ್ಲಿ ಹೇಳಿರುವದರಿಂದ ಆಪ್ಯನೂ ಇವರಲ್ಲಿ ಸೇರಿದ ಋಭ್ವಾದಿಗಳಲ್ಲಿ ಒಬ್ಬನು ಎಂದು ತಿಳಿಯಬೇಕು. ಆದ್ದರಿಂದಲೇ ಗಣಾಃ ಎಂಬುದು

ಶೋಭಿಸುವದು. ಮಂದದ್ಯುಮ್ನ ಎಂಬ ಪಾಠ ಸ್ವರಸವಲ್ಲ. ಛಂದಸ್ಸಿನ ಭೇದವಾಗುವದು. ಮೂಲಕೋಶಗಳಲ್ಲಿ ಕಾಣಿಸುವದೂ ಇಲ್ಲ. ವೈರಾನ್ ಎಂದು ಹಲವು ಕಡೆ ಪಾಠ ಇದೆ. ಆದರೆ ಮುಂದಿನ ಶ್ಲೋಕದಲ್ಲಿಯೇ ವೈರಾಜಸ್ಯ ಎಂದು ಅನುವಾದ ಮಾಡಿರುವುದರಿಂದ ವೈರಾನ್ ಎಂಬ ಪಾಠವು ಲೇಖಕಪ್ರಮಾದ ಮೂಲಕ ಎಂದು ತಿಳಿಯಬೇಕು. ।।೮।।

**ತತ್ರಾಪಿ ದೇವಃ ಸಂಭೂತ್ಯಾಂ ವೈರಾಜಸ್ಯಾಭವತ್ ಸುತಃ ।**
**ಅಜಿತೋ ನಾಮ ಭಗವಾನಂಶೇನ ಜಗತಃ ಪತಿಃ ।।೯।।**

**ತತ್ರಾಪಿ** ಆ ಚಾಕ್ಷುಷಮನ್ವಂತರದಲ್ಲಿಯೂ **ಜಗತಃ ಪತಿಃ** ಜಗತ್ತಿನ ಪಾಲಕನಾದ **ದೇವಃ** ಕ್ರೀಡಾದಿಗುಣವಿಶಿಷ್ಟನಾದ **ಭಗವಾನ್** ಶ್ರೀಹರಿಯು **ವೈರಾಜಸ್ಯ** ವೈರಾಜನೆಂಬ ಮುನಿಗೆ **ಸಂಭೂತ್ಯಾಂ** ಸಂಭೂತಿ ಎಂಬ ಹೆಂಡತಿಯಲ್ಲಿ **ಅಂಶೇನ** ತನ್ನ ಸ್ವರೂಪಾಂಶದಿಂದ **ಅಜಿತೋ ನಾಮ ಸುತಃ ಅಭವತ್** ಅಜಿತನೆಂಬ ಹೆಸರಿನ ಮಗನಾದನು. (ಅವತರಿಸಿದನು) ।।೯।।

**ಪಯೋಬ್ಧಿಂ ಯೇನ ನಿರ್ಮಥ್ಯ ಸುರಾಣಾಂ ಸಾಧಿತಾ ಸುಧಾ ।**
**ಭ್ರಮಮಾಣೋಽಂಭಸಿ ಧೃತಃ ಕೂರ್ಮರೂಪೇಣ ಮಂದರಃ ।।೧೦।।**

**ಯೇನ** ಯಾವ ಈ ಅಜಿತನಿಂದ **ಪಯೋಬ್ಧಿಂ** ಕ್ಷೀರಸಮುದ್ರವನ್ನು **ನಿರ್ಮಥ್ಯ** ಕಡೆದು **ದೇವಾನಾಂ** ದೇವತೆಗಳಿಗೆ **ಸುಧಾ** ಅಮೃತವು **ಸಾಧಿತಾ** ಸಂಪಾದಿಸಲ್ಪಟ್ಟಿತು. **ಅಂಭಸಿ** ನೀರಿನಲ್ಲಿ (ಕ್ಷೀರೋದಕದಲ್ಲಿ) **ಭ್ರಮಮಾಣಃ** ತಿರುಗಾಡುವ, ವಿಶೇಷವಾಗಿ ಕೆಳಗೆ ಹೋಗುತ್ತಿದ್ದ **ಮಂದರಃ** ಮಂದರಪರ್ವತವು **ಕೂರ್ಮರೂಪೇಣ ಧೃತಃ** ಕೂರ್ಮರೂಪದಿಂದ ಧರಿಸಲ್ಪಟ್ಟಿತು. ಅಂದರೆ ಅಜಿತನೇ ಸಮುದ್ರವನ್ನು ಕಡೆದು ದೇವತೆಗಳಿಗೆ ಅಮೃತ ದೊರಕುವಂತೆ ಮಾಡಿದನು. ಕೂರ್ಮನಾಗಿ ಮಂದರವು ಮುಳುಗದಂತೆ ಮಾಡಿದನೆಂದರ್ಥ. ಅಂಥ ಅಜಿತನು ಮಗನಾದನೆಂದು ಹಿಂದಕ್ಕೆ ಅನ್ವಯ.

ಶ್ರೀಸತ್ಯಧರ್ಮರು ಈ ಶ್ಲೋಕಕ್ಕೆ ಮತ್ತೊಂದು ರೀತಿಯಾಗಿ ಅನ್ವಯವನ್ನು ಹೇಳಿರುವರು. **ಹೇ ಗಿರೇ** ಎಲೋ ಪರ್ವತವೇ **ತ್ವಂ ಯಥೇಚ್ಛಂ ಭ್ರಮ ಚಲ** ನಿನ್ನಿಚ್ಛೆಯಂತೆ ಭ್ರಮಿಸು ಚಲಿಸು. *ಅಂತರ್ಗಚ್ಛಾಮಿ ಕಿಲ ಕಥಮಿದಂ ಭ್ರಮಣಂ ಮಮೇತಿ ನ ವದೇತ್ಯಾಹ* ಒಳಗೆ ಹೋಗುತ್ತಿದ್ದೇನಷ್ಟೇ ಇದು ಭ್ರಮಣ ಹೇಗೆ ಎನ್ನಬೇಡ ಎಂದು ಹೇಳುವನು **ಮಾ ಅಣ** ಎಂದು. **ನಾಂತರಾಣ ಗಚ್ಛೇತಿ** ಒಳಗೆ ಹೋಗಬೇಡ ಎಂದರ್ಥ. ಒಳಗೆ ಹೋಗದಿರಲು ಉಪಾಯವೇನು ಎಂದರೆ ಹೇಳುವನು **ಕೂರ್ಮರೂಪೇಣ ಧೃತಃ ಮಯಾ** ಕೂರ್ಮರೂಪಿಯಾದ ನನ್ನಿಂದ ಧರಿಸಲ್ಪಟ್ಟವನಾಗಿ ಕೆಳಗೆ ಹೋಗಬೇಡ. **ಪೃಷ್ಠೇ ಧೃತಃ ಮಂದರಃ ತ್ವಂ** ಬೆನ್ನ ಮೇಲೆ ಧರಿಸಲ್ಪಟ್ಟ ಮಂದರನೇ ನೀನು **ಉಂಭಸಿ ಪೂರಯಸಿ** ಕಾರ್ಯವನ್ನು ಪೂರ್ಣಗೊಳಿಸು (ಕೊನೆಗಾಣಿಸುವಿ ಎಂದರ್ಥ) **ಇತಿ ನಿರ್ಮಥ್ಯ** ಹೀಗೆ ಆಲೋಚಿಸಿ **ಸುಧಾ ಸಾಧಿತಾ** ಸುಧೆಯು ಸಾಧಿಸಲ್ಪಟ್ಟಿತು ಹೀಗೂ ಅನ್ವಯ. ।।೧೦।।

ಸಮುದ್ರಮಥನ ಏಕೆ ಮಾಡಿದರು? ಹೇಗೆ ಮಾಡಿದರು? ಕಡೆದಂತೆ ಕಡೆದಂತೆ ದೇವತೆಗಳು ಏನೇನು ಪಡೆದರು? ಎಲ್ಲವನ್ನು ತಿಳಿದ ನೀವು ಎಲ್ಲವನ್ನು ಹೇಳಿರಿ ಎಂದು ರಾಜನು ಪ್ರಶ್ನಿಸುವನು.

**ರಾಜೋವಾಚ**

**ಯಥಾ ಭಗವತಾ ಬ್ರಹ್ಮನ್ ಮಥಿತಃ ಕ್ಷೀರಸಾಗರಃ ।**
**ಯದರ್ಥಂ ವಾ ಯತಶ್ಚಾದ್ರಿಂ ದಧಾರಾಂಬುಚರಾತ್ಮನಾ ॥೧೧॥**

**ಹೇ ಬ್ರಹ್ಮನ್** ಬ್ರಹ್ಮಜ್ಞಾನಿಗಳಾದ ಶುಕಾಚಾರ್ಯರೇ **ಭಗವತಾ** ಅಜಿತನಿಂದ **ಯಥಾ** ಹೇಗೆ **ಕ್ಷೀರಸಾಗರಃ** ಹಾಲಿನ ಕಡಲು **ಮಥಿತಃ** ಕಡೆಯಲ್ಪಟ್ಟಿತು **ಭಗವತಾ** ಅಜಿತನಿಂದ **ಅಂಬುಚರಾತ್ಮನಾ** ಜಲಚರವಾದ ಕೂರ್ಮರೂಪದಿಂದ **ಯದರ್ಥಂ** ಯಾವ ಪ್ರಯೋಜನಕ್ಕಾಗಿ **ಯತಃ** ಯಾವ ಕಾರಣದಿಂದ **ಅದ್ರಿಂ** ಮಂದರ ಪರ್ವತವನ್ನು **ದಧಾರ** ಧರಿಸಿದನು. ॥೧೧॥

**ಯಥಾಮೃತಂ ಸುರೈಃ ಪ್ರಾಪ್ತಂ ಕಿಮನ್ಯದಭವತ್ ತತಃ ।**
**ಏತದ್ ಭಗವತಃ ಕರ್ಮ ವದಸ್ವ ಪರಮಾದ್ಭುತಮ್ ॥೧೨॥**

**ಸುರೈಃ** ದೇವತೆಗಳಿಂದ **ಯಥಾ** ಹೇಗೆ **ಅಮೃತಂ** ಅಮೃತವು **ಪ್ರಾಪ್ತಂ** ಹೊಂದಲ್ಪಟ್ಟಿತು **ತತಃ** ಆ ಸಮುದ್ರದಿಂದ **ಅನ್ಯತ್ ಕಿಂ** ಅಮೃತವಲ್ಲದೇ ಬೇರೇನು ಪದಾರ್ಥಗಳು **ಅಭವತ್** ಹುಟ್ಟಿದವು ಅಮೃತ ಪ್ರಾಪ್ತಿಯಾದ ನಂತರ ಬೇರೇನಾಯಿತು **ಭಗವತಃ** ಅಜಿತಾವತಾರಿಯಾದ ಶ್ರೀಹರಿಯ **ಪರಮಾದ್ಭುತಂ** ಅತ್ಯಾಶ್ಚರ್ಯಕರವಾದ **ಏತತ್ ಕರ್ಮ** ಈ ಕಾರ್ಯವನ್ನು **ವದಸ್ವ** ಹೇಳಿರಿ.

ಸತ್ಯ ಃ- ಅಥವಾ ವದ ಸ್ವಪರಮಾದ್ಭುತಂ ಎಂದು ಪದಗಳನ್ನು ಬಿಡಿಸಿಕೊಂಡು ಸತ್ಯಧರ್ಮರು ಹೀಗೆ ಅರ್ಥವನ್ನು ತಿಳಿಸುತ್ತಾರೆ. **ಸ್ವಪರಮಾದ್ಭುತಂ ಸ್ವ** ಸ್ವಕೀಯರ **ಪರ** ಪರಕೀಯರ **ಮಾಯಾಃ** ಜ್ಞಾನಕ್ಕೆ **ಅದ್ಭುತಂ** ಆಶ್ಚರ್ಯಕರವಾದ ಅಂದರೆ ಅವಿಷಯವಾದ ಯಾರಿಗೂ ತಿಳಿಯದ ಸ್ವರೂಪವುಳ್ಳ ಭಗವಂತನ ಕರ್ಮವನ್ನು **ವದ** ಹೇಳಿರಿ ಎಂದು ಅರ್ಥ.

**ತ್ವಯೇತ್ಥಂ ಕಥ್ಯಮಾನೇನ ಮಹಿಮ್ನಾ ಸಾತ್ವತಾಂ ಪತೇಃ ।**
**ನಾತಿತೃಪ್ಯತಿ ಮೇ ಚಿತ್ರಂ ಸುಚಿರಂ ತಾಪತಾಪಿತಮ್ ॥೧೩॥**

**ಇತ್ಥಂ** ಈ ರೀತಿಯಾಗಿ **ತ್ವಯಾ** ತಮ್ಮಿಂದ **ಕಥ್ಯಮಾನೇನ** ಹೇಳಲ್ಪಡುತ್ತಿರುವ **ಸಾತ್ವತಾಂಪತೇಃ** ಬ್ರಹ್ಮಾದಿಭಕ್ತರಿಗೆ ಸ್ವಾಮಿಯಾದ ಅಥವಾ ಪಂಚರಾತ್ರಗಳೆಂಬ ಸಾತ್ವತಸಂಹಿತೆಗಳಿಗೆ ಪಾಲಕನಾದ ಶ್ರೀಹರಿಯ **ಮಹಿಮ್ನಾ** ಮಹಿಮೆಯಿಂದ **ಸುಚಿರಂ** ಇದುವರೆಗೂ ಬಹುಕಾಲ **ತಾಪತಾಪಿತಂ** ಆಧ್ಯಾತ್ಮಿಕ-ಆಧಿಭೌತಿಕ-ಆಧಿದೈವಿಕ

ಪಾಪಗಳಿಂದ ನೊಂದಿರುವ **ಮೇ** ನನ್ನ **ಚಿತ್ತಂ** ಮನಸ್ಸು **ನಾತಿತೃಪ್ಯತಿ** ಬಹಳ ತೃಪ್ತಿಪಡುತ್ತಿಲ್ಲ. ಭಗವಂತನ ಮಹಿಮೆ ಕೇಳುವ ವಿಷಯದಲ್ಲಿ ಅಲಂಬುದ್ಧಿಯುಳ್ಳದ್ದಾಗುವದಿಲ್ಲ. ಇನ್ನೂ ಕೇಳಬೇಕೆಂದಪೇಕ್ಷಿಸುತ್ತದೆ ಎಂದರ್ಥ.

ಸತ್ಯ :- ಅಂ ಚಾಸೌ ಪತಿಶ್ಚ ಅಂಪತಿಃ ಸಾತ್ವತಾನಾಂ ಅಂಪತಿಃ ಸಾತ್ವತಾಂಪತಿಃ ತಸ್ಮೈ ಎಂದಾದರೂ ವಿಗ್ರಹ ಮಾಡಿಕೊಂಡು ಅರ್ಥವನ್ನು ಹೇಳಬೇಕು. ಹೀಗೆ ವಿಗ್ರಹ ಮಾಡಿದಾಗ ಸಾತ್ವತಾಂಪತಿಃ ಎಂಬುದಕ್ಕೆ ವ್ಯಾಸಾತ್ಮಕನಾದ ಪತಿ ಎಂದರ್ಥ ''ಅಮ್, ಆ, ಅಃ ಪುರಾಣರ್ಷಿಃ ವ್ಯಾಸಃ'' ಎಂದು ಗೀತಾಭಾಷ್ಯಪ್ರಮೇಯದೀಪಿಕಾದಲ್ಲಿ ಹೇಳಿದೆ.

ಸೂತ-ಶೌನಕರ ಸಂವಾದವೆಂಬುದನ್ನು ಮರೆಯದಿರಲು ಪರೀಕ್ಷಿದ್ರಾಜರಿಂದ ಪ್ರಶ್ನೆಮಾಡಿಸಿಕೊಂಡ ಶುಕಾಚಾರ್ಯರು ಪ್ರಶ್ನೆಗೆ ಉತ್ತರ ಕೊಡಲು ಪ್ರಾರಂಭಿಸಿದರೆಂದು ಸೂತರು ಶೌನಕರಿಗೆ ಹೇಳುತ್ತಾರೆಂದು ಭಾಗವತಕರ್ತೃಗಳು ಹೇಳುತ್ತಾರೆ.

**ಸೂತ ಉವಾಚ**

**ಸಂಪೃಷ್ಟೋ ಭಗವಾನೇವಂ ದ್ವೈಪಾಯನಸುತೋ ದ್ವಿಜಾಃ ।**
**ಅಭಿನಂದ್ಯ ಹರೇರ್ವೀರ್ಯಮಭ್ಯಾಚಷ್ಟುಂ ಪ್ರಚಕ್ರಮೇ ।।೧೪।।**

**ಹೇ ದ್ವಿಜಾಃ** ಶೌನಕಾದಿಗಳೇ **ಏವಂ** ಮೇಲೆ ಹೇಳಿದಂತೆ (ರಾಜ್ಞಾ) ಪರೀಕ್ಷಿತರಾಜನಿಂದ **ಸಂಪೃಷ್ಟಃ** ಭಕ್ತಿಯಿಂದ ಪ್ರಶ್ನಿಸಲ್ಪಟ್ಟ **ಭಗವಾನ್** ಪೂಜ್ಯರಾದ ತಮಗೆ ಉಚಿತವಾದ ಐಶ್ವರ್ಯಾದಿಗುಣವುಳ್ಳ **ದ್ವೈಪಾಯನಸುತಃ** ವೇದವ್ಯಾಸಪುತ್ರರಾದ ಶುಕಾಚಾರ್ಯರು (ರಾಜಾನಂ) **ಅಭಿನಂದ್ಯ** ಪರೀಕ್ಷಿತನನ್ನು ಪ್ರಶಂಸಿಸಿ ಸಂತೋಷಪಡಿಸಿ ತಾವೂ ಸಂತೋಷಪಟ್ಟು **ಹರೇಃ** ಅಜಿತರೂಪಿಯಾದ ಶ್ರೀಹರಿಯ **ವೀರ್ಯಂ** ಪರಾಕ್ರಮವನ್ನು **ಅಭ್ಯಾಚಷ್ಟುಂ** ಭಕ್ತಿ ಉಂಟಾಗುವಂತೆ ಸ್ಪಷ್ಟವಾಗಿ ಹೇಳಲು **ಪ್ರಚಕ್ರಮೇ** ಪ್ರಾರಂಭಿಸಿದರು.

**ಶ್ರೀಶುಕ ಉವಾಚ**

**ಯದಾ ಯುದ್ಧೇಽಸುರೈರ್ದೇವಾ ಬಾಧ್ಯಮಾನಾಃ ಶಿತಾಯುಧೈಃ ।**
**ಗತಾಸವೋ ನಿಪತಿತಾ ನೋತ್ತಿಷ್ಠೇರನ್ ಸ್ಮ ಭೂರಿ(ಯ)ಶಃ ।।೧೫।।**

**ಯದಾ** ಯಾವಾಗ **ಯುದ್ಧೇ** ದೇವಾಸುರಯುದ್ಧದಲ್ಲಿ **ಶಿತಾಯುಧೈಃ** ಚೂಪಾದ ಆಯುಧಗಳುಳ್ಳ **ಅಸುರೈಃ** ದೈತ್ಯರಿಂದ **ಬಾಧ್ಯಮಾನಾಃ** ಪೀಡಿತರಾದ **ದೇವಾಃ** ದೇವತೆಗಳು **ಗತಾಸವಃ** ಇಂದ್ರಿಯಶಕ್ತಿ ಇಲ್ಲದವರಾಗಿ **ನಿಪತಿತಾಃ** ಬಿದ್ದವರಾಗಿ **ಭೂರಿಶಃ** ಬಹಳವಾಗಿ **ನ ಉತ್ತಿಷ್ಠೇರನ್** ಮೇಲಕ್ಕೆ ಏಳದವರಾದರೋ.

ಭೂಯಶಃ ಎಂಬ ಪಾಠವೂ ಇದೆ. ಅತಿಶಯೇನ ಬಹು ಭೂರಿಶಃ. ಅಂದರೆ ಬಹಳ ಹೆಚ್ಚಾಗಿ ಎಂದು ಅರ್ಥ. ಬಹಳ ಸಲ ಎಂದು ಅರ್ಥ. ।।೧೫।।

ಪರಾಜಯಕ್ಕೆ ಕಾರಣವೇನೆಂದು ಹೇಳುವರು-

**ಯದಾ ದುರ್ವಾಸಶಾಪೇನ ಸೇಂದ್ರಾ ಲೋಕಾಸ್ತ್ರಯೋ ನೃಪ ।**
**ನಿಃಶ್ರೀಕಾಶ್ಚಾಭವಂಸ್ತತ್ರ ನೇಶುರಿಜ್ಯಾದಿಕಾಃ ಕ್ರಿಯಾಃ ॥೧೬॥**

**ನೃಪ** ರಾಜನೇ **ಯದಾ** ಯಾವಾಗ **ದುರ್ವಾಸಶಾಪೇನ** ದುರ್ವಾಸಋಷಿಗಳ ಶಾಪದಿಂದ **ಸೇಂದ್ರಾಃ** ಇಂದ್ರಸಹಿತವಾದ **ತ್ರಯೋ ಲೋಕಾಃ** ಮೂರುಲೋಕದ ಜನರು **ನಿಃಶ್ರೀಕಾಃ** ಸಂಪದ್ರಹಿತರಾಗಿ ಕಳೆಗುಂದಿದವರಾಗಿ **ಅಭವನ್** ಆದರೋ **ತತ್ರ** ಆಗ **ಇಜ್ಯಾದಯಃ** ಯಾಗ ಮೊದಲಾದ **ಕ್ರಿಯಾಃ** ಕರ್ಮಗಳು **ನೇಶುಃ** ನಷ್ಟವಾದವು. ಕಾಣದಾದವು ಮಾಡುವವರೇ ಇಲ್ಲವಾದರು ಎಂದು ಅರ್ಥ.

ಸತ್ಯಃ- ''ಸುದುಃಖವಾಸನಾಮಕಂ''(ತಾ.ನಿ.೧೭.೨೩೭)ಎಂದು ಆಚಾರ್ಯವರ್ಯರು ತೋರಿಸಿದ ವ್ಯುತ್ಪತ್ತಿಯಿಂದ ಹ್ರಸ್ವಾದಿಯಾದ ದುರ್ವಾಸಶಬ್ದ ಇದು ಎಂದು ತಿಳಿಯಬೇಕು. ''ಸ್ವದತ್ತಮಾಲಾಭುವಿಪಾತಕೋಪತೋ ದುರ್ವಾಸಸಃ ಶಾಪತ ಆಶು ಹಿ ಶ್ರಿಯಾ । ಶಕ್ರೇ ವಿಹೀನೇ ದಿತಿಜೈಃ ಪರಾಜಿತೇ...'' (ತಾ.ನಿ.೧೦.೪) ಮುಂತಾಗಿ ಆಚಾರ್ಯರು ಹ್ರಸ್ವಾದಿಯಾದ ದುರ್ವಾಸಶಬ್ದದ ಪ್ರಯೋಗವನ್ನೂ ಮಾಡಿದ್ದಾರೆ. ಆದ್ದರಿಂದಲೂ ಹ್ರಸ್ವಾದಿಯಾದ ದುರ್ವಾಸಶಬ್ದ ಇದೆಂದು ತಿಳಿಯಬೇಕು.

ನೀತಿಯೂ ಹೀಗಿಯೇ ಇದೆ.

**ತೃಣೇನಾಪಿ ಸಮಂ ಸಖ್ಯಂ ಕರ್ತವ್ಯಂ ಭೂತಿಮಿಚ್ಛತಾ ।**
**ಅರ್ಕಪುಷ್ಪಾವಮಾನೇನ ಮಹೇಂದ್ರೋಽಭೂತ್ ಪದಚ್ಯುತಃ ॥**

ಶ್ರೇಯೋಽಭಿಲಾಷಿಯಾದವನು ಹುಲ್ಲುಕಡ್ಡಿಯೊಡನೆಯೂ ಸ್ನೇಹ ಮಾಡಬೇಕು. ಎಕ್ಕೆ ಹೂವಿನ ಅವಮಾನ ಮಾಡಿದ್ದರಿಂದ ಮಹೇಂದ್ರನು ತನ್ನ ಪದವಿಯನ್ನು ಕಳೆದುಕೊಂಡನು. ಇಷ್ಟು ಈ ಶ್ಲೋಕದ ಭಾವ.

ಒಂದು ಸಲ ದುರ್ವಾಸರು ಹಾದಿಯಲ್ಲಿ ಹೋಗುತ್ತಿದ್ದರು. ಐರಾವತವನ್ನೇರಿ ಹೋಗುತ್ತಿರುವ ಇಂದ್ರನನ್ನು ನೋಡಿದರು. ದುರ್ವಾಸರು ಸ್ವಯಂ ರುದ್ರದೇವರು. ಹೀಗಾಗಿ ಅವರಿಗೆ ಯೋಗ್ಯವಾದ ಎಕ್ಕೆ ಹೂವಿನ ಮಾಲೆಯನ್ನು ಕೊರಳಲ್ಲಿ ಧರಿಸಿದ್ದರು. ತಾವು ಧರಿಸಿರುವ ಮಾಲೆಯನ್ನು ತೆಗೆದು ಇಂದ್ರನಿಗೆ ಕೊಟ್ಟರು. ಅವನಾದರೂ ಆ ಹೂವಿನಲ್ಲಿ ಉದಾಸೀನತೆಯನ್ನು ತಾಳಿದನು. ಆನೆಯ ಕುಂಭಸ್ಥಳದಲ್ಲಿ ಆ ಹೂವಿನ ಮಾಲೆಯನ್ನು ಹಾಕಿದನು. ಆನೆಯು ಸುಮ್ಮನೇ ಕೂಡದೇ ಆ ಮಾಲೆಯನ್ನು ನೆಲದ ಮೇಲೆ ಕೆಡವಿತು. ಇದರಿಂದ ದುರ್ವಾಸರು ಕ್ರುದ್ಧರಾದರು. ಯಾವ ಸಂಪತ್ತಿನ ಮದದಿಂದ ಮದವಮತಿಃ ನನ್ನ ಅವಮಾನ ಮಾಡಿರುವೆಯೋ ಆ ಸಂಪತ್ತು ಮೂರುಲೋಕ

ಸಹಿತವಾಗಿ ನಿನ್ನನ್ನು ಸದ್ಯದಲ್ಲಿಯೇ ತ್ಯಜಿಸಲಿ ಎಂದು ಶಾಪವಿತ್ತರು. ಈ ಕಥಾವನ್ನು ಇಲ್ಲಿ ತಿಳಿಯಬೇಕು.

ನಿಃಶ್ರೀಕ ಎಂಬಲ್ಲಿ ''ನ ಕಪಿ'' (ಸಿ.ಕೌ.೮೩೫) ಕಪಿ ಪರೇ ಹ್ರಸ್ವೋ ನ ಸ್ಯಾತ್ ಕಪ್ ಪ್ರತ್ಯಯವು ಇಲ್ಲಿ ಮುಂದೆ ಇರುವುದರಿಂದ ಶ್ರೀ ಎಂಬಲ್ಲಿ ಹ್ರಸ್ವವಾಗಿಲ್ಲ ಎಂಬುದಾಗಿ ತಿಳಿಯಬೇಕು. ।।೧೬।।

**ನಿಶಾಮ್ಯೈತತ್ ಸುರಗಣಾ ಮಹೇಂದ್ರವರುಣಾದಯಃ ।**
**ನಾಧ್ಯಗಚ್ಛನ್ ಸ್ವಯಂ ಮಂತ್ರೈರ್ಮಂತ್ರಯಂತೋ ವಿನಿಶ್ಚಯಮ್ ।।೧೭।।**

**ತತೋ ಬ್ರಹ್ಮಸಭಾಂ ಜಗ್ಮುರ್ಮೇರೋರ್ಮೂರ್ಧನಿ ಸರ್ವಶಃ ।**
**ಸರ್ವಂ ವಿಜ್ಞಾಪಯಾಂಚಕ್ರುಃ ಪ್ರಣತಾಃ ಪರಮೇಷ್ಠಿನೇ ।।೧೮।।**

**ಮಹೇಂದ್ರವರುಣಾದಯಃ ಸುರಗಣಾಃ** ಇಂದ್ರ-ವರುಣ ಮೊದಲಾದ ದೇವತೆಗಳು **ಏತತ್** ಈ ತಮ್ಮ ಐಶ್ವರ್ಯನಾಶವನ್ನು **ನಿಶಾಮ್ಯ** ನೋಡಿ **ಸ್ವಯಂ** ತಾವೇ ಪರಸ್ಪರವಾಗಿ **ಮಂತ್ರೈಃ** ವಿಚಾರಕಾರಣವಾದ ವಾಕ್ಯಗಳಿಂದ **ಮಂತ್ರಯಂತಃ** ವಿಚಾರಮಾಡಿದರೂ **ವಿನಿಶ್ಚಯಂ ನಾಧ್ಯಗಚ್ಛನ್** ಹೀಗೆ ಮಾಡಬೇಕೆಂಬ ನಿರ್ಣಯ ಪಡೆಯಲಿಲ್ಲ. **ತತಃ** ಅನಂತರ **ಸರ್ವಶಃ** ಎಲ್ಲರೂ ಸೇರಿ **ಮೇರೋಃ ಮೂರ್ಧನಿ** ಮೇರುಪರ್ವತದ ಶಿಖರದಲ್ಲಿರುವ ಬ್ರಹ್ಮದೇವರ ಸಭಾಸ್ಥಾನಕ್ಕೆ **ಜಗ್ಮುಃ** ಹೋದರು. **ಪರಮೇಷ್ಠಿನೇ** ಬ್ರಹ್ಮದೇವರಿಗೆ **ಪ್ರಣತಾಃ** ನಮಸ್ಕಾರ ಮಾಡಿದವರಾಗಿ **ಸರ್ವಂ ವಿಜ್ಞಾಪಯಾಂಚಕ್ರುಃ** ತಮ್ಮ ಸೋಲು ಮತ್ತು ಶಾಪದಿಂದ ಸಂಪತ್ತಿನ ನಾಶ ಈ ಎಲ್ಲವನ್ನು ನಿವೇದಿಸಿದರು.

ಪಂಚಮಸ್ಕಂಧದಲ್ಲಿ ''ಮೇರುಮೂರ್ಧ್ನಿ ಭಗವತ ಆತ್ಮಯೋನೇಃ ಉಪಕ್ಲೃಪ್ತಾಂ ಅಯುತಯೋಜನಸಾಹಸ್ರೀಂ ಸಮಚತುರಸ್ರಾಂ ಶಾತಕೌಂಭೀಂ ಶತಕೋಟಿಂ ವದಂತಿ । ಎಂದು ಬ್ರಹ್ಮಸಭೆಯ ವರ್ಣನೆ ಇದೆ. ಆ ಶತಕೋಟಿ ಎಂಬ ಸಭೆಗೆ ಹೋದರು. ಇಂದ್ರ -ವರುಣ ಮುಂತಾದ ಎಲ್ಲ ದೇವತೆಗಳೂ ಹೋದರು. ಈ ಎಲ್ಲ ದೇವತೆಗಳಲ್ಲಿ ಇಂದ್ರನು ಶ್ರೇಷ್ಠನಾದದ್ದರಿಂದ ಮತ್ತು ಅಪರಾಧ ಮಾಡಿದವನು ಇಂದ್ರನೇ ಆದುದರಿಂದಲೂ ಇಂದ್ರನನ್ನು ಮೊದಲು ಹೇಳಿದ್ದಾರೆ. ಇಂದ್ರ-ವರುಣರ ಮಧ್ಯದಲ್ಲಿ ಅನೇಕ ದೇವತೆಗಳು ಇದ್ದಾರೆ. ಅವರನ್ನೆಲ್ಲ ಬಿಟ್ಟು ಇಂದ್ರನ ನಂತರ ವರುಣನನ್ನು ಯಾಕೆ ಹೇಳಿದ್ದಾರೆ. ಎಂಬ ಸಮಸ್ಯೆ ಬರುತ್ತದೆ. ಆದರೆ, ಇದು ಸಮುದ್ರಮಥನದ ಪ್ರಸಂಗ. ಹೀಗಾಗಿ ಸಮುದ್ರದ ಅಭಿಮಾನಿಯಾದ ವರುಣನ ಸೌಮನಸ್ಯವನ್ನು ಸಂಪಾದಿಸಲು ವರುಣನ ಹೆಸರನ್ನು ತೆಗೆದುಕೊಂಡಿದ್ದಾರೆ ಎಂದು ತಿಳಿಯಬೇಕು. ಈ ವಿಷಯವನ್ನು ದೊಡ್ಡದು ಮಾಡಬಾರದು. ।।೧೭,೧೮।।

**ಸ ವಿಲೋಕ್ಯೇಂದ್ರವಾಯ್ವಾದೀನ್ ನಿಃಸತ್ವಾನ್ ವಿಗತಪ್ರಭಾನ್ ।**
**ಲೋಕಾನಮಂಗಲಪ್ರಾಯಾನ್ ಸುರಾಂಶ್ಚೈವ ಯಥಾ ವಿಭುಃ ।।೧೯।।**

**ವಿಭುಃ** ಸಮರ್ಥರಾದ **ಸಃ** ಬ್ರಹ್ಮದೇವರು **ನಿಃಸತ್ವಾನ್** ಬಲಹೀನರಾದ **ವಿಗತಪ್ರಭಾನ್** ಕಾಂತಿಯನ್ನು ಕಳೆದುಕೊಂಡ **ಇಂದ್ರವಾಯ್ವಾದೀನ್** ಇಂದ್ರ-ವಾಯು ಮೊದಲಾದವರನ್ನು **ಅಮಂಗಳಪ್ರಾಯಾನ್ ಲೋಕಾನ್** ಅಮಂಗಳವೇ ಬಹಳವಾಗಿದ್ದ ಜನರನ್ನು **ಸುರಾಂಶ್ಚ** ದೇವತೆಗಳನ್ನು **ಯಥಾ ಏವ** ಇದ್ದಂತೆಯೇ **ವಿಲೋಕ್ಯ** ತಿಳಿದು ನೋಡಿ,

''ಪ್ರಾಯಾನಸುರಾಂಶ್ಚಾಯಥಾ ವಿಭುಃ'' ಎಂದು ಸತ್ಯಧರ್ಮೀಯ ಪಾಠ. ಆವಾಗ **ಅಸುರಾನ್** ದೈತ್ಯರನ್ನು **ಅಯಥಾ** ಅನ್ಯಥಾ ಎಂದರೆ ದೇವತೆಗಳಂತಲ್ಲದೇ ಅಂದರೆ ಸತ್ವಶಾಲಿಗಳನ್ನಾಗಿ ಕಾಂತಿಯುತರನ್ನಾಗಿ ವಿಲೋಕ್ಯ ಕಂಡು. ಎಂದು ಅರ್ಥ. ಇನ್ನು ಪ್ರಾಯಾನಸುರಾಂಶ್ಚಾನ್ಯಥಾ ಎಂದು ಛಲಾರಿಯವರು ಅನ್ಯಥಾ ಎಂಬ ಪಾಠವನ್ನು ಗ್ರಹಣ ಮಾಡಿದ್ದಾರೆ. ಆವಾಗ **ಅಸುರಾನ್** ದೈತ್ಯರನ್ನು **ಅನ್ಯಥಾ** ದೇವತೆಗಳಂತೆ ದುರ್ಬಲರಲ್ಲದೇ ಬಲವಂತರಾದವರನ್ನಾಗಿ **ವಿಲೋಕ್ಯ** ಕಂಡು ಎಂದು ಅರ್ಥವು. ಸಮರ್ಥ ಎಂಬ ಅರ್ಥವಿರುವ ವಿಭುಃ ಎಂಬ ಶಬ್ದವನ್ನು ಪ್ರಯೋಗಿಸುವ ಮೂಲಕ ''ದುರ್ಬಲಕೋಪಃ ಸ್ವದಂಷ್ಟ್ರಾಪೀಡಾಮೂಲಃ'' ಬಡವನ ಸಿಟ್ಟು ದವಡೆಗೆ ಮೂಲ ಎಂಬಂತೆ ಅಲ್ಲವೆಂದು ಹೇಳುತ್ತಿದ್ದಾರೆ. ಇಂದ್ರವಾಯ್ವಾದೀನ್ ಇಂದ್ರನು ಅಪರಾಧಿಯಾದುದರಿಂದ, ಆಧಿ ಕಾರಿಕನಾದುದರಿಂದ ಮೊದಲು ಇಂದ್ರನನ್ನು ಹೇಳಿದ್ದಾರೆ.

ಹೇಳುವದಕ್ಕೆ ತರತಮಭಾವವಿವಕ್ಷಾ ಇಲ್ಲವಾದರೆ ರುದ್ರನ ನಂತರ ವಾಯುವನ್ನೇಕೆ ಹೇಳಲಿಲ್ಲ. ಎಂದರೆ ಮುಂದೆ ಬರುವ ಅನಿತರಸಾಧ್ಯವಾದ ವಿಷಪಾನ ವಾಯುದೇವರಿಗೆ ಮಾತ್ರ ಸಾಧ್ಯ . ಅನಂತರ ಶಿವನೂ ಸ್ವಲ್ಪ ಕುಡಿದನು ಎಂಬ ವಿಶೇಷ ತಿಳಿಸಲು ವಾಯ್ವಾದಿಗಳನ್ನು ಮೊದಲು ಹೇಳಿದ್ದೆಂದು ತಿಳಿಯಬೇಕು. ಇದಕ್ಕೆ ಪ್ರಮಾಣ ಆ ಕಾಲದಲ್ಲಿಯೇ ಹೇಳುವೆವು. ।।೧೯।।

**ಸಮಾಪಿತೇನ ಮನಸಾ ಸಂಸ್ಮರನ್ ಪುರುಷಂ ಪರಮ್ ।**
**ಉವಾಚೋತ್ಫುಲ್ಲವದನೋ ದೇವಾನ್ ಸ ಭಗವಾನ್ ಪರಃ ।।೨೦।।**

**ಪರಂ** ಕಾಮಿತವಾದ ಅಪೇಕ್ಷೆಗಳನ್ನು ಪೂರ್ಣಮಾಡುವ, ರುದ್ರಾದಿಗಳಿಗಿಂತಲೂ ಉತ್ತಮನಾದ **ಪುರುಷಂ** ಪುರುಷನಾಮಕ ಶ್ರೀಹರಿಯನ್ನು **ಸಮಾಹಿತೇನ ಮನಸಾ** ಏಕಾಗ್ರಚಿತ್ತದಿಂದ **ಸಂಸ್ಮರನ್** ಭಕ್ತಿಯಿಂದ ಸ್ಮರಿಸುತ್ತ ಅವನ ಇಚ್ಛೆಯನ್ನರಿತು **ಪರಃ** ರುದ್ರಾದಿಜೀವೋತ್ತಮರಾದ **ಭಗವಾನ್** ಪೂಜ್ಯರಾದ ಆ ಬ್ರಹ್ಮದೇವರು **ಉತ್ಫುಲ್ಲವದನಃ** ಸಂತೋಷದಿಂದ ವಿಕಾಸಗೊಂಡ ಮುಖಗಳುಳ್ಳವರಾಗಿ **ದೇವಾನ್** ದೇವತೆಗಳನ್ನು ಕುರಿತು **ಉವಾಚ** ಹೇಳಿದರು.

ದೇವತೆಗಳ ಸಂಪತ್ತನ್ನು ಸಂಪಾದಿಸುವ ಉಪಾಯವನ್ನು ತಿಳಿದಿದ್ದರಿಂದ ಬ್ರಹ್ಮದೇವರು ವಿಕಸಿತವದನರು ಎಂದು ತಿಳಿಯಬೇಕು. ।।೨೦।।

ಈಗ ಬ್ರಹ್ಮದೇವರು ತಮ್ಮನ್ನಾರಂಭಮಾಡಿ ದೇವತೆಗಳಿಗೆ ಪಾರತಂತ್ರ್ಯವನ್ನು ತಿಳಿಸುತ್ತ ಶ್ರೀಹರಿಯೇ ನಮಗೆ ಶರಣೆಂದು ಹೇಳುವರು.

**ಅಹಂ ಭವೋ ಯೂಯಮಥೋ ಸುರಾದಯೋ**
**ಮನುಷ್ಯತಿರ್ಯಗ್‌ದ್ರುಮಘರ್ಮಜಾತಯಃ ।**
**ಯಸ್ಯಾವತಾರಾಂಶಕಲಾ ವಿಸರ್ಜಿತಾ**
**ವ್ರಜಾಮ ಸರ್ವೇ ಶರಣಂ ತಮವ್ಯಯಮ್ ।।೨೧।।**

**ಅಹಂ** ನಾನು (ಚತುರ್ಮುಖನು) **ಭವಃ** ರುದ್ರದೇವರು **ಯೂಯಂ** ನೀವು (ಇಂದ್ರಾದಿಗಳು) **ಸುರಾದಯಃ** ದೇವತೆಗಳು ದೈತ್ಯರು ಮುಂತಾದವರು **ಮನುಷ್ಯಾಃ** ಜರಾಯುಜರಾದ ಮನುಷ್ಯ-ಆನೆ-ಕುದುರೆ-ಆಕಳು ಮುಂತಾದವುಗಳು **ತಿರ್ಯಕ್** ಅಂಡಜಗಳು(ಪಕ್ಷಿಗಳು) ಮುಂತಾದವು **ದ್ರುಮ** ಉದ್ಭಿಜಗಳು ಗಿಡ-ಮರಗಳು **ಘರ್ಮಜಾದಯಃ** ಬೆವರಿನಿಂದ ಹುಟ್ಟುವ ತಗಣಿ-ಹೇನು ಮುಂತಾದವುಗಳು **ಯಸ್ಯ** ಯಾವ ನಾರಾಯಣನ **ಅವತಾರ** ಪುರುಷನಾಮಕನ **ಅಂಶ** ಭಿನ್ನಾಂಶರಾದ ಬ್ರಹ್ಮದೇವರ **ಕಲಾ** ಮಕ್ಕಳಾದ ಮರೀಚ್ಯಾದಿಗಳಿಂದ **ವಿಸರ್ಜಿತಾಃ** ಮಕ್ಕಳು ಮೊಮ್ಮಕ್ಕಳಾಗಿ ಜನಿಸಿರುವೆವೋ ಅಥವಾ ನಾರಾಯಣನ ಅವತಾರನಾದ ಪುರುಷ ಅಥವಾ ಪದ್ಮನಾಭನ **ಅಂಶ** ಸಾಮರ್ಥ್ಯದ **ಕಲಯಾ** ಒಂದಂಶದಿಂದ **ವಿಸರ್ಜಿತಾಃ** ಉತ್ಪನ್ನರಾದೆವೋ. (ಮಚ್ಛಕ್ತ್ಯೈಕಾಂಶಸಂಭೂತಂ ಜಗದೇತತ್ ಚರಾಚರಂ) ಎಂದು ವಚನವಿದೆ. **ತಂ** ಆ **ಅವ್ಯಯಂ** ಚತುರ್ವಿಧ ನಾಶರಹಿತನಾದ ಶ್ರೀಹರಿಯನ್ನು **ಸರ್ವೇ** ನಾವೆಲ್ಲರೂ **ಶರಣಂ ವ್ರಜೇಮ** ಮೊರೆ ಹೋಗೋಣ.

ಸತ್ಯ ಃ- ಅಹಂಭವಃ ಎಂಬುದು ಒಂದೇ ಪದವೆಂದಾದರೂ ಇಟ್ಟುಕೊಳ್ಳಬಹುದು. ಅಹಂಭವಃ ಎಂದರೆ ರುದ್ರದೇವರು ಎಂದು ಅರ್ಥ. ಅಹಂಭವಃ ಎಂದು ಹೇಳುವ ಮೂಲಕ ರುದ್ರದೇವರು ಅಹಂತತ್ವವೇ ದೇಹವಾಗಿವುಳ್ಳವರೆಂದು ಸೂಚಿಸಿರುವರು.

ತಮವ್ಯಯಂ ತಮಸ್ಯ ತಮಸಃ ಏತದಾದ್ಯಾಪದಾಪಾದಕಸ್ಯ ಅಜ್ಞಾನಸ್ಯ ವ್ಯಯಃ ನಾಶೋ ಯಸ್ಮಾತ್ ಸಃ ತಂ ಇದೇ ಮೊದಲಾದ ಆಪತ್ತಿಗೆ ಕಾರಣವಾದ ಅಜ್ಞಾನನಾಶಕನಾದ **ತಂ** ಶ್ರೀಹರಿಯನ್ನು ಎಂದರ್ಥ. ''ತಮಂ ತು ತಮಸಾ ಸಾರ್ಧಂ'' ಎಂದು ದ್ವಿರೂಪಕೋಶವಿದೆ. ।।೨೧।।

**ನ ಯಸ್ಯ ವಧ್ಯೋ ನ ಚ ರಕ್ಷಣೀಯೋ ನೋಪೇಕ್ಷಣೀಯಾದರಣೀಯಪಕ್ಷಃ ।**
**ಅಥಾಽಪಿ ಸರ್ಗಸ್ಥಿತಿಸಂಯಮಾರ್ಥಂ ಧತ್ತೇ ರಜಃಸತ್ವತಮಾಂಸಿ ಕಾಲೇ ।।೨೨।।**

**ಯಸ್ಯ** ಯಾವ ಶ್ರೀಹರಿಗೆ ತನ್ನ ಪ್ರಯೋಜನಕ್ಕಾಗಿ ಯೋಗ್ಯತೆ ಇಲ್ಲದೇ **ವಧ್ಯಃ ನ** ವಧೆಗೆ ಅರ್ಹನಿಲ್ಲವೋ **ನ ಚ ರಕ್ಷಣೀಯಃ** ರಕ್ಷಣೆಗೆ ಅರ್ಹನೂ ಇಲ್ಲವೋ **ಉಪೇಕ್ಷಣೀಯಾದರಣೀಯಪಕ್ಷಃ ನ** ಉದಾಸೀನ ಮಾಡುವ ಆದರಿಸುವ ಪಕ್ಷಕ್ಕೆ ಸೇರಿದವನೂ ಇಲ್ಲವೋ **ಅಥಾಽಪಿ** ಆದರೂ **ಯಃ** ಯಾವನು **ಕಾಲೇ** ಆಯಾ ಕಾಲದಲ್ಲಿ **ಸರ್ಗಸ್ಥಿತಿಸಂಯಮಾರ್ಥಂ** ಸೃಷ್ಟಿ-ಸ್ಥಿತಿ-ಸಂಹಾರಗಳಿಗಾಗಿ **ರಜಃಸತ್ವತಮಾಂಸಿ** ರಜೋಗುಣ -ಸತ್ವಗುಣ-ತಮೋಗುಣಗಳನ್ನು **ಧತ್ತೇ** ಸ್ವೀಕರಿಸುವನೋ ಅವುಗಳನ್ನು ಉಪಯೋಗಿಸಿ ಆಯಾ ಕಾರ್ಯ ಮಾಡುವನೆಂದರ್ಥ.

ಮೇಲಿನ ಶ್ಲೋಕದಲ್ಲಿ ಉಪೇಕ್ಷಣೀಯಾದರಣೀಯಪಕ್ಷನಿಷೇಧ ಮಾಡಿದಂತೆ ತೋರುವದು. ಅದು ಉಪೇಕ್ಷಣೀಯರಾದ ದೈತೇಯರು, ಆದರಣೀಯರಾದ ಆದಿತೇಯರು ಇರುವದರಿಂದ ಬಾಧಿತವಾದುದು. ಕಾರಣ ಪ್ರಮಾಣದಿಂದ ನಿಷೇಧದ ತಾತ್ಪರ್ಯ ಹೇಳುವರು.

**ತಾತ್ಪರ್ಯ :- ಅನುಗ್ರಾಹ್ಯತಯಾ ಪಕ್ಷಾ ದೇವಾ ನಾತ್ಮಾರ್ಥತೋ ಹರೇಃ ॥ ಇತಿ ಚ ॥**

ದೇವತೆಗಳಿಗೆ ಹರಿಭಕ್ತ್ಯಾದಿ ಗುಣಗಳು ಹೆಚ್ಚಿರುವದರಿಂದ ಅನುಗ್ರಾಹ್ಯರಾದ್ದರಿಂದ ಆದರಣೀಯರೇ ಹೊರತು ತನ್ನ ಪ್ರಯೋಜನಕ್ಕಾಗಿ ಆದರಣೀಯರಲ್ಲ. ನಿಗ್ರಾಹ್ಯರಾದ್ದರಿಂದ ದೈತ್ಯರು ಉಪೇಕ್ಷಣೀಯರು. ಸ್ವಾಭಾವಿಕವಾಗಿ ಭಗವಂತ ವಿಷಮನಾಗಿ ಅವರನ್ನು ಉಪೇಕ್ಷಿಸುವದಿಲ್ಲ.

''ಭಕ್ತಿವಶಃ'' ''ಭಕ್ತ್ಯೈವ ತುಷ್ಟಿಮಭ್ಯೇತಿ'' ''ಯಮೇವೈಷ ವೃಣುತೇ ತೇನ ಲಭ್ಯಃ'' ಮುಂತಾದ ಪ್ರಮಾಣಗಳು ಭಕ್ತಿಮಾಡುವದರಿಂದ ಅನುಗ್ರಾಹ್ಯರಾದ್ದರಿಂದ ದೇವತೆಗಳ ಪಕ್ಷ ಎನ್ನುತ್ತಾರಷ್ಟೇ. ''ಪ್ರತಿಹನ್ಮಿ ಭೂರಿ ಕಿಂ ಮಾಂ ನಿಂದಂತಿ ಶತ್ರವೋ ಅನಿಂದ್ರಾಃ'' ''ಖಲೇನ ಪರ್ಷಾನ್'' ''ಅನನ್ಯಾಶ್ಚಿಂತಯಂತೋ ಮಾಂ... ಯೋಗಕ್ಷೇಮಂ ವಹಾಮ್ಯಹಮ್'' ''ತಾನಹಂ ದ್ವಿಷತಃ ಕ್ರೂರಾನ್'' ''ಸುರಪ್ರಿಯಃ'' ''ಅಸುರಾಣಾಂ ಸುಧಾದಾನಂ ಸರ್ಪಾಣಮಿವ ದುರ್ನಯಮ್'' ಮುಂತಾದ ಶ್ರುತಿ-ಸ್ಮೃತಿಗಳ ವಿರೋಧ ಬರುವದರಿಂದ ಸರ್ವಥಾ ವಧ್ಯರಕ್ಷ್ಯ ಇಲ್ಲವೆಂದಲ್ಲ. ಯೋಗ್ಯತೆ ಮೀರಿ ಸ್ವಾರ್ಥಕ್ಕಾಗಿ ಇಲ್ಲವೆಂದೇ ಅರ್ಥ ಹೇಳಬೇಕು. ॥೨೨॥

**ಅಯಂ ತು ತಸ್ಯ ಸ್ಥಿತಿಪಾಲನಕ್ಷಣಃ**
**ಸತ್ವಂ ಜುಷಾಣಸ್ಯ ಭವಾಯ ದೇಹಿನಾಮ್ ।**
**ತಸ್ಮಾದ್ ವ್ರಜಾಮಃ ಶರಣಂ ಜಗದ್ಗುರುಂ**
**ಸ್ವಾನಾಂ ಸ ನೋ ಧಾಸ್ಯತಿ ಶಂ ಸುರಪ್ರಿಯಃ** ॥೨೩॥

**ದೇಹಿನಾಂ** ಜೀವರ **ಭವಾಯ** ಶ್ರೇಯಸ್ಸಿಗಾಗಿ **ಸತ್ತ್ವಂ ಜುಷಾಣಸ್ಯ** ಸತ್ತ್ವಗುಣವನ್ನು ಸ್ವೀಕರಿಸಿರುವ **ತಸ್ಯ** ಆ ಶ್ರೀಹರಿಗೆ **ಅಯಂ ತು** ಈ ಕಾಲವಾದರೂ **ಸ್ಥಿತಿಪಾಲನಕ್ಷಣಃ** ಸ್ಥಿತಿಯನ್ನು ಕಾಪಾಡಿಕೊಂಡು ಬರುವ ಕಾಲವು **ತಸ್ಮಾತ್** ಕಾಪಾಡುವ ಕಾಲವಾದ್ದರಿಂದ **ಜಗದ್ಗುರುಂ** ಜಗತ್ತಿಗೆ ಗುರುವಾದ ಹಿರಿಯನಾದ **ತಂ** ಅವನನ್ನು **ಶರಣಂ ವ್ರಜಾಮಃ** ಶರಣು ಹೋಗೋಣ **ಸುರಪ್ರಿಯಃ** ಭಕ್ತರಾದ ದೇವತೆಗಳನ್ನು ಪ್ರೀತಿಸುವ **ಸಃ** ಶ್ರೀಹರಿಯು **ಸ್ವಾನಾಂ** ಅವನ ಪ್ರೀತಿಪಾತ್ರರಾದ **ನಃ** ನಮಗೆ **ಶಂ** ಸುಖವನ್ನು **ಧಾಸ್ಯತಿ** ಕೊಡುವನು. ಎಂದು ಬ್ರಹ್ಮದೇವರು ದೇವತೆಗಳಿಗೆ ಹೇಳಿದರು. ।।೨೩।।

**ಶ್ರೀಶುಕ ಉವಾಚ**

**ಇತ್ಯಾಭಾಷ್ಯ ಸುರಾನ್ ವೇಧಾಃ ಸಹ ದೇವೈರರಿಂದಮ ।**
**ಅಜಿತಸ್ಯ ಪದಂ ಸಾಕ್ಷಾಜ್ಜಗಾಮ ತಮಸಃ ಪರಮ್ ।।೨೪।।**

**ಹೇ ಅರಿಂದಮ** ಬಾಹ್ಯಾಂತರ ಶತ್ರುಗಳನ್ನು ಗೆಲ್ಲುವ ಪರೀಕ್ಷಿದ್ರಾಜನೇ **ವೇಧಾಃ** ಬ್ರಹ್ಮದೇವರು **ಇತಿ** ಈ ರೀತಿಯಾಗಿ **ಸುರಾನ್** ದೇವತೆಗಳನ್ನು ಕುರಿತು **ಆಭಾಷ್ಯ** ಹೇಳಿ **ತಮಸಃ ಪರಂ** ಕತ್ತಲೆಯನ್ನು ಮೀರಿರುವ ಪ್ರಕಾಶಾತ್ಮಕವಾದ (ಅಜ್ಞಾನದ ಆಚೆ ಇರುವ) **ಅಜಿತಸ್ಯ** ಅಜಿತನಾಮಕನಾದ ಶ್ರೀಹರಿಯ **ಸಾಕ್ಷಾತ್ ಪದಂ** ವ್ಯಕ್ತಸ್ಥಾನವಾದ ಮುಂದೆ ಮಾಡುವ ಮಥನಕ್ಕೆ ಸಾಕ್ಷಾತ್ ಸ್ಥಾನವಾದ) (ಶ್ವೇತದ್ವೀಪಕ್ಕೆ) ಕ್ಷೀರಸಮುದ್ರಕ್ಕೆ **ಜಗಾಮ** ಹೋದರು. ।।೨೪।।

**ತತ್ರಾದೃಷ್ಟಸ್ವರೂಪಾಯ ಶ್ರುತಪೂರ್ವಾಯ ಚಾಽಭ್ಯಧಾತ್ ।**
**ಸ್ತುತಿಮದ್ಭುತದೈವೀಭಿರ್ಗೀರ್ಭಿಸ್ತ್ವವಹಿತೇಂದ್ರಿಯಃ ।।೨೫।।**

**ತತ್ರ** ಕ್ಷೀರಸಮುದ್ರದಲ್ಲಿ **ಅವಹಿತೇಂದ್ರಿಯಃ** ಏಕಾಗ್ರಮನಸ್ಕರಾಗಿ **ಅದ್ಭುತದೈವೀಭಿಃ** ನಿತ್ಯವೂ ಅಪೌರುಷೇಯವೂ ಆದ್ದರಿಂದ ಆಶ್ಚರ್ಯಕರಗಳಾದ ಲೋಕದಲ್ಲಿ ಅಪ್ರಸಿದ್ಧಗಳಾದ ದೇವತಾಸಂಬಂಧಿಗಳಾದ ಕ್ರೀಡಾದಿಗುಣವಿಶಿಷ್ಟ ಹರಿಯ ಗುಣಪ್ರತಿಪಾದಕಗಳಾದ ವೇದವಾಣಿಗಳಿಂದ **ಅದೃಷ್ಟಸ್ವರೂಪಾಯ** ಈಗ ಕಣ್ಣಿಗೆ ಕಾಣದಿರುವ ಅನುಗ್ರಹವಿಲ್ಲದೇ ಕಾಣಲಾಗದ ಸ್ವರೂಪವುಳ್ಳ **ಶ್ರುತಪೂರ್ವಾಯ** ಹಿಂದೇ ಕೇಳಿದ, ಸ್ತೋತ್ತಮರ ವಾಣಿಯಿಂದ ಪೂರ್ವದಲ್ಲಿ ಶ್ರುತನಾದ ಪರಮಾತ್ಮನಿಗಾಗಿ (ವೇದಗಳಿಂದ ತಿಳಿದವನಾದ ಶ್ರೀಹರಿಯನ್ನು) **ಸ್ತುತಿಂ** ಭಗವಂತನ ಗುಣಗಳನ್ನು ವರ್ಣಿಸುವ ಶಬ್ದರೂಪವಾದ ಸ್ತುತಿಯನ್ನು **ಅಭ್ಯಧಾತ್** ಪಠಿಸಿದರು. ।।೨೫।।

**ಬ್ರಹ್ಮೋವಾಚ**

**ಅವಿಕ್ರಿಯಂ ಸತ್ಯಮನಂತಮಾದ್ಯಂ ಗುಹಾಶಯಂ ನಿಷ್ಕಲಮಪ್ರತರ್ಕ್ಯಮ್ ।**
**ಮನೋಽಗ್ರಯಾಣಂ ವಚಸಾಽನಿರುಕ್ತಂ ನಮಾಮಹೇ ದೇವವರಂ ವರೇಣ್ಯಮ್ ।।**

**ಅವಿಕ್ರಿಯಂ** ವಿಕಾರರಹಿತನಾದ **ಸತ್ಯಂ** ಸಾಧುಗುಣವುಳ್ಳ ಸರ್ವಭೂತಗಳಿಗೆ ಹಿತನಾದ ಸೃಷ್ಟ್ಯಾದಿಕರ್ತೃವಾದ **ಅನಂತಂ** ದೇಶ-ಕಾಲ-ಗುಣಗಳಿಂದ ಅಪರಿಚ್ಛಿನ್ನನಾದ ಬದ್ಧನಲ್ಲದ **ಆದ್ಯಂ** ಪುರಾಣಪುರುಷನಾದ ಪ್ರಲಯಕಾಲದಲ್ಲಿಯೂ ಇರುವ, ಸರ್ವರಿಗೂ ಉಪಜೀವ್ಯನಾದ **ಗುಹಾಶಯಂ** ಎಲ್ಲರ ಹೃದಯ ಗುಹೆಯಲ್ಲಿ ವಾಸಿಸುವ, **ನಿಷ್ಕಲಂ** ದೋಷರಹಿತನಾದ, ಭಿನ್ನವಾದ ಅವಯವಾದಿಗಳಿಲ್ಲದ **ಅಪ್ರತರ್ಕ್ಯಂ** ಕೇವಲ ಅನುಮಾನಕ್ಕೆ ಅಗೋಚರನಾದ, ಊಹೆಗೆ ನಿಲುಕದ, ಸಂಪೂರ್ಣವಾಗಿ ತಿಳಿಯಲಾಗದ **ಮನೋಽಗ್ರಯಾಣಂ** ಮನಸಿಗಿಂತ ಮುಂದೆ ಓಡುವ, ಮನಸ್ಸನ್ನು ಮೀರಿದ **ವಚಸಾ ಅನಿರುಕ್ತಂ** ವೇದಾದಿವಾಕ್ಯಗಳಿಂದ ಸಂಪೂರ್ಣವಾಗಿ ಹೇಳಲಾಗದ **ದೇವವರಂ** ಎಲ್ಲ ದೇವತೆಗಳಿಗೂ ಶ್ರೇಷ್ಠನಾದ **ವರೇಣ್ಯಂ** ಭಜನೀಯನಾದ ಪರಮಾತ್ಮನನ್ನು **ನಮಾಮಹೇ** ನಮಸ್ಕರಿಸುತ್ತೇವೆ.

ಸತ್ಯ ಃ- **ಹೇ ದೇವ ವರಂ ನಮಾಮಿ** ಎಂದು ಸತ್ಯಧರ್ಮರು ಅನ್ವಯಿಸಿದ್ದಾರೆ. **ಹೇ ದೇವ** ಕ್ರೀಡಾದಿಗುಣಸಂಪನ್ನನಾದ ಪರಮಾತ್ಮನೇ **ವರಂ** ಶ್ರೇಷ್ಠನಾದ ನಿನ್ನನ್ನು **ನಮಾಮಿ** ನಮಸ್ಕರಿಸುತ್ತೇವೆ.

ವಚಸಾಂ ನಿರುಕ್ತಂ ಎಂಬ ಪಾಠದಲ್ಲಿ ವೇದಗಳ ಪ್ರಥಮೋಚ್ಚಾರಕನಾದ ಎಂದರ್ಥ ತಿಳಿಯಬೇಕು. ನಮಾಮಹೇ ಎಂಬ ಪಾಠವನ್ನು ಹಲವರು ಗ್ರಹಿಸಿದ್ದಾರೆ.

ಈ ಶ್ಲೋಕದಲ್ಲಿಯ ವಿಶೇಷಣಗಳನ್ನು ತಿಳಿಸುವ ಉಪನಿಷತ್ತುಗಳು ಹೀಗಿವೆ. ''ನಿರ್ವಿಕಾರೋಽಕ್ಷರಃ'' ''ಸತ್ಯಂ ಜ್ಞಾನಮನಂತಮ್'' ''ಅಸದ್ವಾ ಇದಮೇಕ ಏವಾಗ್ರ ಆಸೀತ್'' ''ಹೃದಯ ಆಹಿತಂ ಯತ್'' ''ನಿಷ್ಕಲಂ ನಿಷ್ಕ್ರಿಯಂ ಶಾಂತಮ್'' ''ನೈಷಾ ತರ್ಕೇಣ ಮತಿರಾಪನೇಯಾ'' ''ಮನಸೋ ಜವೀಯಃ'' ''ಯದ್ವಾಚಾನಭ್ಯುದಿತಮ್'' ''ಯತೋ ವಾಚೋ ನಿವರ್ತಂತೇ'' ''ತತ್ಸವಿತುರ್ವರೇಣ್ಯಮ್'' ''ಅಗ್ನಿರ್ವೈ ದೇವಾನಾಮವಮಃ ವಿಷ್ಣುಃ ಪರಮಃ'' ''ನ ಕರ್ಮಣಾ ವರ್ಧತೇ ನೋ ಕನೀಯಾನ್'' (ವೃದ್ಧ್ಯಾದಿವಿಕಾರಶೂನ್ಯನೆಂದರ್ಥ.)

**ಸಚ್ಛಬ್ದ ಉತ್ತಮಂ ಬ್ರೂಯಾದಾನಂದಂ ತೀತಿ ವೈ ವದೇತ್ ।**
**ಯೇತಿ ಜ್ಞಾನಂ ಸಮುದ್ದಿಷ್ಟಂ ಪೂರ್ಣಾನಂದಸ್ಯ ದರ್ಶಿತಮ್ ॥**

ಎಂದಿರುವದರಿಂದ ಸತ್ಯಶಬ್ದಕ್ಕೆ ಪೂರ್ಣಾನಂದಜ್ಞಾನರೂಪನೆಂದೂ ಅರ್ಥ. ಅನೇಕ ಶ್ರುತಿಗಳ ಸಂಗ್ರಹರೂಪವಾದ್ದರಿಂದ ಹಿಂದಿನ ಮುಂದಿನ ಪದಗಳ ಸಂಬಂಧವನ್ನು ಹುಡಕಬೇಕಿಲ್ಲ.

ಲಿಂಗೇರೀ :- ಬ್ರಹ್ಮದೇವರು ಈ ರೀತಿ ಸ್ತುತಿಮಾಡಿ ಶಬಲಬ್ರಹ್ಮನಿಂದ ಭಿನ್ನನಾದ **ಅವಿಕ್ರಿಯಾದಿರೂಪನಾದ** ನಿರ್ಗುಣಬ್ರಹ್ಮ ಇದ್ದಾನೆ ಎಂಬುದನ್ನು ನಿವಾರಿಸಿರುವರು. ಇಲ್ಲವಾದರೆ ಶಬಲನ ಗುಣವಾಗದ ಅವಿಕ್ರಿಯಾದಿಗಳಿಂದ ಅಯಥಾಭೂತವಾದ ಹರಿಸ್ತವನ ಅನುಪಪನ್ನವಾದುದು. ಮಾಯಾಶಬಲನಲ್ಲಿಯೂ ಚಿದ್ಭಾಗದೃಷ್ಟಿಯಿಂದ ಈ ಸ್ತುತಿ ಎಂಬುದು ದೇವವರತ್ವವನ್ನು ಹೇಳುವದರಿಂದ ಪರಿಹೃತವಾಗುತ್ತದೆ. ಚಿನ್ಮಾತ್ರನಲ್ಲಿ ದೇವವರತ್ವಾದಿವಿಕಾರವನ್ನು ಪರಮತದಲ್ಲಿ ಅಂಗೀಕರಿಸಲಾಗದು. ವಿಷ್ಣುಭಿನ್ನನಾದ ಅವಿಕ್ರಿಯಾದಿರೂಪನಾದ ಪರಾಭಿಮತ ಚಿತ್ ಪ್ರಮಾಣಸಿದ್ಧವಾಗಿಲ್ಲ. ಈ ವಿಷಯದಲ್ಲಿ ವಿಸ್ತಾರವನ್ನು ನಾವು ಮಾಡಿದ ಮಧ್ವತಂತ್ರಮುಖಮರ್ದನವೆಂದು ಹೆಸರಿಟ್ಟಿರುವ ಪರಗ್ರಂಥಮರ್ದನದಲ್ಲಿ ನೋಡಿರಿ. ।।೨೬।।

**ವಿಪಶ್ಚಿತಂ ಪ್ರಾಣಮನೋಧಿಯಾತ್ಮನಾ-**
**ಮರ್ಥೇಂದ್ರಿಯಾಭಾಸಮನಿದ್ರಮವ್ರಣಮ್ ।**
**ಛಾಯಾತಪೌ ಯತ್ರ ನ ಗೃಧ್ರಪಕ್ಷೌ**
**ತಮಕ್ಷರಂ ಖಂ ತ್ರಿಯುಗಂ ವ್ರಜಾಮಹೇ** ।।೨೭।।

**ಪ್ರಾಣ** ಪ್ರಾಣಗಳು ಅಥವಾ ಮುಖ್ಯಪ್ರಾಣನು, **ಮನಃ** ಮನಸ್ಸು **ಧೀ** ಬುದ್ಧಿ **ಆತ್ಮನಾಂ** ದೇಹಗಳ **ವಿಪಶ್ಚಿತಂ** ಜ್ಞಾನಿಯಾದ **ಅರ್ಥೇಂದ್ರಿಯಾಭಾಸಂ** ಇಂದ್ರಿಯೈಃ ಆಭಾಸಃ ಇಂದ್ರಿಯಾಭಾಸಃ ಅರ್ಥಾನಾಂ ಇಂದ್ರಿಯಾಭಾಸಃ ಯೇನ ಸಃ ತಂ ಎಂದು ವಿಗ್ರಹ ವಿಷಯಗಳಿಗೆ ಇಂದ್ರಿಯ ಸನ್ನಿಕರ್ಷ ಮಾಡಿಸಿ ಅವುಗಳ ಜ್ಞಾನ ಮಾಡಿಕೊಂಡು (ಇಂದ್ರಿಯಗಳಿಂದ ವಿಷಯಜ್ಞಾನವನ್ನು ಹುಟ್ಟಿಸುವ) **ಅನಿದ್ರಂ** ನಿದ್ರೆಯಿಲ್ಲದ **ಅವ್ರಣಂ** ಗಾಯವಿಲ್ಲದ (ದೋಷರಹಿತನಾದ) **ಯತ್ರ** ಯಾವನಲ್ಲಿ **ಗೃಧ್ರಪಕ್ಷೌ** ಕಂಡದ್ದನ್ನೆಲ್ಲ ಅಪೇಕ್ಷಿಸುವದರಿಂದ ಹದ್ದಿನಂತಿರುವ ಜೀವ, ಊರ್ಧ್ವ ಮತ್ತು ಅಧೋಗತಿಗೆ ಪ್ರತ್ಯೇಕವಾಗಿ ಕಾರಣವಾಗಿರುವ ರೆಕ್ಕೆಗಳಂತಿರುವ **ಛಾಯಾತಪೌ** ಅವಿದ್ಯೇ ಮತ್ತು ಶಾಸ್ತ್ರಜನ್ಯಜ್ಞಾನಗಳು **ನ ಸ್ತಃ** ಇಲ್ಲವೋ **ತಂ** ಅಂತಹ **ಅಕ್ಷರಂ** ನಾಶರಹಿತನಾದ **ತ್ರಿಯುಗಂ** ಮೂರು ಯುಗಗಳಲ್ಲಿ ಮಾತ್ರ ಅವತರಿಸುವ **ಕಂ** ಸುಖಸ್ವರೂಪನಾದ ಭಗವಂತನನ್ನು **ವ್ರಜಾಮಹೇ** ಮೊರೆ ಹೋಗುವೆವು. ।।೨೭।।

ಸತ್ಯ :- ಛಾಯಾತಪೌ ಎಂಬ ಈ ಶ್ಲೋಕದಲ್ಲಿ ಗೃಧ್ರ ಎಂದರೆ ಒಂದು ಪಕ್ಷಿ (ಹದ್ದು) ''ಗೃಧ್ರಃ ಖಗಾಂತರೇ ಗೃಧ್ನೋ ವಾಚ್ಯವಾಚ್ಯಾರ್ಥಲುಬ್ಧಕೇ'' ಎಂದು ವಿಶ್ವವಿದೆ. ತಸ್ಯ ಪಕ್ಷೌ ಅಂದರೆ ರೆಕ್ಕೆಗಳು. ಛಾಯಾ ನೆರಳು ಆತಪ ಎಂದರೆ ಬಿಸಲು ಎಂದು ಹೇಳಬೇಕು.

ಯಾವುದು ಯಾವುದರಿಂದ ಸಂಗತ (ಕಿಂ ಕೇನ ಸಂಗತಂ) ಎಂದರ್ಥವಾಗುವದಿಲ್ಲ. ಆದ್ದರಿಂದ ಅದರ ಅರ್ಥವನ್ನು ಪ್ರಮಾಣದಿಂದ ಶ್ರೀಮದಾಚಾರ್ಯರು ಹೇಳುವರು.

**...ತಾತ್ಪರ್ಯ...**

**ಛಾಯಾ ತ್ವವಿದ್ಯಾ ಸಂಪ್ರೋಕ್ತಾ ಜನ್ಯವಿದ್ಯಾऽತಪಃ ಸ್ಮೃತಃ ।**
**ಜೀವಗೃಧ್ರಸ್ಯ ತೌ ಪಕ್ಷಾವಧ ಊರ್ಧ್ವಪಥೋಃ ಪೃಥಕ್ ॥**
**ತೌ ವಿಷ್ಣೋಸ್ತು ನ ವಿದ್ಯೇತೇ ನಿತ್ಯಂ ವಿದ್ಯಾಸ್ವರೂಪಿಣಃ' ಇತಿ ಚ ॥೨೭॥**

ತಾತ್ಪರ್ಯದ ಸಾರಾಂಶ :- ಇಲ್ಲಿ ಬಿಸಿಲು-ನೆರಳುಗಳಿಲ್ಲವೆಂದು ಹೇಳುತ್ತಿಲ್ಲ. ಕಿಂತು ಛಾಯಾಶಬ್ದದಿಂದ ವಿದ್ಯಾವಿರೋಧಿಯಾದ್ದರಿಂದ ಅವಿದ್ಯೆಯು, ಆತಪಶಬ್ದದಿಂದ ಶಾಸ್ತ್ರಜನ್ಯಜ್ಞಾನವು ಹೇಳಲ್ಪಡುತ್ತಿದೆ. ಜೀವನೆಂಬ ಆಸೆಬುರುಕ ಪಕ್ಷಿಗೆ ಛಾಯಾತಪಗಳು ರೆಕ್ಕೆಗಳಿದ್ದಂತೆ. ಹೇಗೆ ಹಕ್ಕಿಯು ರೆಕ್ಕೆಗಳಿಂದ ಮೇಲೆ ಕೆಳಗೆ ಹೋಗುತ್ತದೋ ಹಾಗೆಯೇ ಜೀವನು ಛಾಯಾತಪಗಳಿಂದ ಕೆಳಗೆ ಮತ್ತು ಮೇಲಿನ ಲೋಕಗಳಿಗೆ ಹೋಗುತ್ತಾನೆ. ಇಷ್ಟೇ ವ್ಯತ್ಯಾಸ. ಪಕ್ಷಿಯು ಎರಡು ರೆಕ್ಕೆಗಳಿಂದಲೂ ಮೇಲೆಯೂ ಕೆಳಗೂ ಹೋಗುತ್ತದೆ. ಜೀವನು ಅವಿದ್ಯೆಯಿಂದ ಕೆಳಗಿನ ಲೋಕಕ್ಕೆ, ವಿದ್ಯೆಯಿಂದ ಮೇಲಿನ ಲೋಕಕ್ಕೆ ಹೋಗುತ್ತಾನೆ. ನಿತ್ಯವಿದ್ಯಾಸ್ವರೂಪಿಯಾದ ಪರಮಾತ್ಮನಿಗೆ ಅವಿದ್ಯೆ, ಜನ್ಯಜ್ಞಾನ ಎರಡೂ ಇಲ್ಲವೆಂದು ಭಾವ.

ತಾತ್ಪರ್ಯದ ''ಜನ್ಯವಿದ್ಯಾऽऽತಪಃ ಸ್ಮೃತಃ'' ಎಂಬಲ್ಲಿ ಆತಪಪದವಿವಕ್ಷೆಯಿಂದ ಸ್ಮೃತಃ ಎಂದು ಪುಲ್ಲಿಂಗಪ್ರಯೋಗ ಮಾಡಿದ್ದಾರೆ. ''ಗೃಧು ಅಭಿಕಾಂಕ್ಷಾಯಾಂ'' ಎಂದಿರುವದರಿಂದ ವಿಷಯಾದಿಗಳನ್ನು ಸದಾ ಅಪೇಕ್ಷಿಸುವದರಿಂದ ಜೀವನಿಗೆ ಗೃಧ್ರ ಎಂದು ಹೆಸರು.

ಸತ್ಯ :- ''ಅಧಊರ್ಧ್ವಪಥೋಃ'' ಎಂಬಲ್ಲಿ ಪಂಥಾ ಎಂಬ ಶಬ್ದಕ್ಕೆ ಅಪ್ರತ್ಯಯವು ಬಂದು ಪಥಃ ಎಂದು ಅಕಾರಾಂತವಾಗಬೇಕು. ಆದರೂ ಪಥೋಃ ಎಂದು ಪಂಥಾ ಎಂಬ ಶಬ್ದವನ್ನೇ ಪ್ರಯೋಗಿಸಿದ್ದಾರೆ. ಇದು ಹೇಗೆ ಉಪಪನ್ನ ಎಂಬ ಪ್ರಶ್ನೆಯು ಬರುತ್ತದೆ. ಈ ಪ್ರಶ್ನೆಗೆ ಉತ್ತರ ಪಾಣಿನಿಯ ಸೂತ್ರದಲ್ಲಿಯೇ ಇದೆ.

''**ಋಕ್‌ಪೂರಬ್ಧೂಃಪಥಾಮಾನಕ್ಷೇ**'' (ಸಿ.ಕೌ.೯೪೦) ಎಂಬಲ್ಲಿಯೂ ಪಂಥ ಶಬ್ದಕ್ಕೆ ಅ ಎಂಬ ಪ್ರತ್ಯಯ ಬಂದು ಪಥಾನಾಂ ಎಂದಾಗಬೇಕಾಗಿತ್ತು. ಆದರೆ ಅಲ್ಲಿಯೂ ಪಥಾಂ ಎಂದೇ ಅಪ್ರತ್ಯಯರಹಿತವಾಗಿಯೇ ಪ್ರಯೋಗಿಸಿದ್ದಾರೆ. ಈ ಪ್ರಯೋಗದಿಂದಲೇ ಅ ಎಂಬ ಪ್ರತ್ಯಯಕ್ಕೆ ಅನಿತ್ಯತೆಯನ್ನು ಸೂತ್ರಕಾರರೇ ತಿಳಿಸಿದ್ದಾರೆ. ಆದ್ದರಿಂದ ಪ್ರಕೃತವೂ ಅಧಊರ್ಧ್ವಪಥೋಃ ಎಂಬಲ್ಲಿಯೂ ಅ ಪ್ರತ್ಯಯವು ಬಂದಿಲ್ಲ ಎಂದು ತಿಳಿಯಬೇಕು. ಹೀಗೆ ''ಋಕ್ಪೂರಬ್ಧೂಃಪಥಾಮಾನಕ್ಷೇ'' ಎಂದು ಸೂತ್ರದಲ್ಲಿಯೇ ಪಥಾಂ ಎಂದು ಪ್ರಯೋಗಿಸುವ ಮೂಲಕ ಅಪ್ರತ್ಯಯಕ್ಕೆ ಅನಿತ್ಯತೆಯನ್ನು ತಿಳಿಸಿದ್ದಾರೆ ಎಂದು ಪ್ರಾಚೀನರು ಹೇಳುತ್ತಾರೆ. ಅಂಶ್ಯಾದಿಗಣದಲ್ಲಿ ರಾಜನ್ ಶಬ್ದದ ಪಾಠ ಮಾಡಿದ್ದರಿಂದ ಅಪ್ರತ್ಯಯ

ಅನಿತ್ಯ ಎಂದು ನವೀನರು ಹೇಳುವರು. ''ಅಥ ಊರ್ಧ್ವಂ ಪಥೋಃ'' ಎಂಬ ಸಮಾಸರಹಿತವಾದ ಪಾಠದಲ್ಲಿ ಈ ಪ್ರಶ್ನೆಗೆ ಅವಕಾಶವಿಲ್ಲ.

ಮೂಲದಲ್ಲಿ ಹೇಳಿದ ವಿಷಯಗಳಿಗೆ ಆಧಾರ ಪ್ರಮಾಣಗಳು ಹೀಗಿವೆ. ''ಯಃ ಪ್ರಾಣೇ ತಿಷ್ಠನ್'' ''ಯೋ ಮನಸಿ ತಿಷ್ಠನ್'' ''ಯ ಆತ್ಮನಿ ತಿಷ್ಠನ್'' ''ತ್ವಂ ಜ್ಞಾನದೋ ಅಜ್ಞಾನದಶ್ಚಾಸಿ ವಿಷ್ಣೋ'' ''ಯಸ್ಯ ಭಾಸಾ'' ''ನ ನಿದ್ರಾಮ್'' ''ಅಜಮನಿದ್ರಮ-ಸ್ವಪ್ನಮ್'' ''ಅವ್ರಣಂ ನಿತ್ಯಪೂರ್ಣತಾ'' ''ಅಕಾಯಂ ಅವ್ರಣಮ್'' ''ಏತದ್ಧ್ಯೇವಾಕ್ಷರಮ್''

**ಯುಗತ್ರಯಾವತಾರತ್ವಾತ್ ತ್ರಿಯುಗೋ ವಿಷ್ಣುರುಚ್ಯತೇ ।**
**ಸ್ವಯಂಭೂಸ್ತ್ರಿಯುಗಃ ಕೃಷ್ಣಃ ಶಾರ್ಙ್ಗೀ ದಾಮೋದರಸ್ತಥಾ ॥**

ಎಂದು ಅಭಿದಾನವಿದೆ. ''ಖಂ ಬ್ರಹ್ಮ'' ಎಂದು ಶ್ರುತಿ. ॥೨೭॥

ಜಗಚ್ಚಕ್ರಾಧಾರನೆಂದು ಶ್ರೀಹರಿಯನ್ನು ಸ್ತುತಿಸುವರು-

**ಅಜಸ್ಯ ಚಕ್ರಂ ತ್ವಜಯೇರ್ಯಮಾಣಂ**
**ಮನೋಮಯಂ ಪಂಚದಶಾರಮಾಶು ।**
**ತ್ರಿನಾಭಿ ವಿದ್ಯುಚ್ಚಲಮಷ್ಟನೇಮಿ**
**ಯದಕ್ಷಮಾಹುಸ್ತಮೃತಂ ಪ್ರಪದ್ಯೇ** ॥೨೮॥

**ಅಜಯಾ** ಶ್ರೀಹರಿಯ ಅಧೀನವಾದ ಚಿತ್‌ಪ್ರಕೃತಿ-ಜಡಪ್ರಕೃತಿ- ಸತ್ವಾದಿಗುಣಗಳು ಇವುಗಳಿಂದಲೂ **ಈರ್ಯಮಾಣಂ** ಪ್ರೇರಿತವಾದ (ಕಾರ್ಯತೇ ಹ್ಯವಶಃ ಕರ್ಮ ಸರ್ವಃ ಪ್ರಕೃತಿಜೈರ್ಗುಣೈಃ ಎಂದು ಸ್ಮೃತಿ ಇದೆ) **ಮನೋಮಯಂ** ಮನಸ್ಸೇ ಪ್ರಧಾನವಾಗಿರುವ (ಮನ ಏವ ಮನುಷ್ಯಾಣಾಂ ಕಾರಣಂ ಬಂಧಮೋಕ್ಷಯೋಃ ಎಂದಿದೆ) **ಪಂಚದಶಾರಂ** ಹತ್ತು ಇಂದ್ರಿಯಗಳು, ಶಬ್ದಾದಿತನ್ಮಾತ್ರಾಗಳು ಹೀಗೆ ಹದಿನೈದು ಅಥವಾ ಪೃಥಿವ್ಯಾದಿ ಪಂಚಭೂತಗಳು, ಪ್ರಾಣಾಪಾನವ್ಯಾನೋದಾನಸಮಾನಗಳೆಂಬ ಪಂಚಪ್ರಾಣಗಳು, ಪಂಚೇಂದ್ರಿಯಗಳು ಹೀಗೆ ಹದಿನೈದು ಅರಗಳುಳ್ಳ (ದಲಗಳುಳ್ಳ) **ಆಶು** ಶೀಘ್ರದಲ್ಲಿ ಸುತ್ತುವ (ವ್ಯಾಪ್ತವಾದ) **ತ್ರಿನಾಭಿ** ಸತ್ತ್ವ-ರಜಸ್ಸು-ತಮಸ್ಸು ಈ ಮೂರು ಗುಣಗಳೇ ನಾಭಿಯಾಗಿ ಉಳ್ಳ, **ವಿದ್ಯುಚ್ಚಲಂ** ವಿಶೇಷವಾಗಿ ಪ್ರಕಾಶಿಸುವ ಶ್ರೀಹರಿಯೇ ಆಧಾರವಾಗಿರುವ **ಅಷ್ಟನೇಮಿಂ** ದೇವ-ದಾನವ-ಮಾನವ-ಗಂಧರ್ವ-ರಾಕ್ಷಸ-ಪಿಶಾಚ-ತಿರ್ಯಕ್-ಸ್ಥಾವರಗಳೆಂಬ ಎಂಟು ಸುತ್ತುಪಟ್ಟಿಗಳಿರುವ **ಅಜಸ್ಯ** ಶ್ರೀಹರಿಯ ಅಧೀನವಾದ **ಚಕ್ರಂ** ಮತ್ತೆ ಮತ್ತೆ ಪ್ರವಾಹರೂಪದಿಂದ ಸೃಷ್ಟ್ಯಾದಿಗಳಿಗೆ ಒಳಪಡುವ ಕಾರಣ ಚಕ್ರವೆನಿಸುವ ಜಗತ್ತನ್ನು **ಯದಕ್ಷಂ** ಯಾವ ಕೇಶವನನ್ನೇ ಅಚ್ಚಿನ ಸ್ಥಾನದಲ್ಲಿ

ಉಳ್ಳದ್ದೆಂದು **ಆಹುಃ** ಜ್ಞಾನಿಗಳು ಹೇಳುವರೋ **ತಂ** ಆ ಜಗದ್ಧಾರಕನಾದ **ಋತಂ** ಜ್ಞಾನರೂಪನಾದ ಶ್ರೀಹರಿಯನ್ನು **ಪ್ರಪದ್ಯೇ** ಶರಣು ಹೊಂದುವೆನು.

ಚಕ್ರಂ ಎಂಬುದು ದ್ವಿತೀಯಾ ಏಕವಚನ ''ಚಕ್ರವಜ್ರಾಂಧಕಾರ...'' ಮುಂತಾಗಿ ಲಿಂಗಾನುಶಾಸನದಲ್ಲಿ ಪುಲ್ಲಿಂಗವೆಂದು ಹೇಳಿದೆ.

**...ತಾತ್ಪರ್ಯ...**

**ಗುಣತ್ರಯನಾಭಿ । ವಿದ್ಯುದ್ಬ್ರಹ್ಮ । 'ವಿದ್ಯುದ್ಬ್ರಹ್ಮೇತ್ಯುಪಾಸೀತೇ'ತಿ ಶ್ರುತೇಃ । 'ಜಗಚ್ಚಕ್ರಸ್ಯಾಕ್ಷಭೂತೋ ಬಲರೂಪಶ್ಚ ಕೇಶವ' ಇತಿ ಚ ॥೨೮॥**

ಅಜಸ್ಯ ಚಕ್ರಂ ಎಂಬ ಶ್ಲೋಕದಲ್ಲಿ ತ್ರಿನಾಭಿ ಎಂದರೆ ನಾಭಿತ್ರಯೋಪೇತಂ ಎಂದು ಅಸಂಗತವಾಗಿ ತೋರುತ್ತದೆ. ಆದ್ದರಿಂದ ತ್ರಿನಾಭಿ ಎಂದರೆ ಗುಣತ್ರಯನಾಭಿ ಎಂದು ಶ್ರೀಮದಾಚಾರ್ಯರು ವಿವಕ್ಷಿತವಾದ ಅರ್ಥವನ್ನು ಹೇಳಿದ್ದಾರೆ.

ವಿದ್ಯುದ್ಬಲಂ ಎಂಬ ಪದಕ್ಕೆ ಅರ್ಥವು ತೋರುವುದಿಲ್ಲ. ವಿಪರೀತವಾದ ಅರ್ಥಗಳು ತೋರುತ್ತವೆ. ಆದ್ದರಿಂದ ಶ್ರೀಮದಾಚಾರ್ಯರು ವಿದ್ಯುತ್ ಬ್ರಹ್ಮಾ ಎಂದು ಅರ್ಥವನ್ನು ಹೇಳುತ್ತಾರೆ. ಇಲ್ಲಿ ವಿದ್ಯುತ್ ಎಂದರೆ ಪರಬ್ರಹ್ಮ ಎಂದು ಅರ್ಥ. ''ವಿದ್ಯುದ್ ಬ್ರಹ್ಮೇತ್ಯುಪಾಸೀತ'' ಎಂಬ ಶ್ರುತಿಯು ಈ ಅರ್ಥವನ್ನು ತಿಳಿಸುತ್ತದೆ. ವಿದ್ಯೋತತೇ ಸ್ವಾತಂತ್ರ್ಯೇಣ ಸ್ವತಂತ್ರವಾಗಿ ಪ್ರಕಾಶಿಸುತ್ತಾನೆ ಆದ್ದರಿಂದ ಪರಮಾತ್ಮ ವಿದ್ಯುತ್ ನಾಮಕನಾಗಿದ್ದಾನೆ.

ಯದಕ್ಷಮಾಹುಃ ಎಂಬುದರಿಂದ ಪರಬ್ರಹ್ಮನಿಗೆ ಅಕ್ಷತ್ವವು ಉಕ್ತವಾಗಿದೆ. ವಿದ್ಯುದ್ಬಲಂ ಎಂಬುದರಿಂದ ಬಲರೂಪತ್ವವು ಉಕ್ತವಾಗಿದೆ. ಈ ಎರಡೂ ಒಬ್ಬನಿಗೇ ಹೇಗೆ ಯುಕ್ತ ಎಂಬ ಶಂಕೆಯನ್ನು ಪ್ರಮಾಣಪೂರ್ವಕವಾಗಿ ತಿಳಿಸುತ್ತಿದ್ದಾರೆ. ''ಜಗಚ್ಚಕ್ರಸ್ಯಾಕ್ಷಭೂತೋ ಬಲರೂಪಶ್ಚ ಕೇಶವಃ'' ಎಂದು. ॥೨೮॥

ತಮ್ಮಿಂದ ಅಪೇಕ್ಷಿತವಾದ ಅಪರೋಕ್ಷಜ್ಞಾನಕ್ಕಾಗಿ ಶ್ರೀಹರಿಯನ್ನು ನಮಿಸುವರು-

ಜಗಚ್ಚಕ್ರಾಧಾರನೆಂದು ಸ್ತುತಿಸಿ ಈಗ ಸರ್ವಜೀವನಿಯಾಮಕನೆಂದು ಸ್ತುತಿಸುವರು-

**ಯದೇಕವರ್ಣಂ ತಮಸಃ ಪರಂ ಸದ-**
**ಲೋಕಮವ್ಯಕ್ತಮನಂತಪಾರಮ್ ।**
**ಆಸಾಂಚಕಾರೋಪಸುಪರ್ಣಪತ್ರ-**
**ಮುಪಾಸತೇ ಯೋಗರಥೇನ ಧೀರಾಃ ॥೨೯॥**

**ಯತ್** ನಾರಾಯಣನೆಂಬ ಪರಬ್ರಹ್ಮನು **ಏಕವರ್ಣಂ** ಓಂ ಎಂಬ ಒಂದೇ ಅಕ್ಷರದಿಂದ ಪ್ರತಿಪಾದ್ಯವಾದ (ಅನವಾಂತರಭೇದೇ ಏಕೋ ವರ್ಣಃ) ಅವಾಂತರಭೇದವಿಲ್ಲದ ಕಾರಣ ಒಂದು ವರ್ಣ ಎಂದು ಹೇಳಿದ್ದಾರೆ. ಸ್ವರ-ವ್ಯಂಜನರೂಪವಾದ ವಿಭಾಗ ವಿವಕ್ಷೆ ಇಲ್ಲದೆಯೇ ವ್ಯಕ್ತವಾಗುವದರಿಂದ ಒಂದು ಅಕ್ಷರವೆಂದು ಹೇಳಿದ್ದು. (ಇಲ್ಲವಾದರೆ ೧೬ ಸ್ವರಗಳು ಎಂದು ಹೇಳುವ ಸಂಖ್ಯೆಯು ಕೂಡುವದಿಲ್ಲ. ''ಪ್ರಣವಂ ಹೀಶ್ವರಂ ವಿದ್ಯಾತ್ ಸರ್ವಸ್ಯ ಹೃದಯೇ ಸ್ಥಿತಮ್'' ಎಂದು ಶ್ರುತಿಯಿದೆ. ''ಓಮಿತ್ಯೇಕಾಕ್ಷರಂ ಬ್ರಹ್ಮ'' ''ಸರ್ವವ್ಯಾಪಿನಮೋಂಕಾರಮ್'' ಮುಂತಾಗಿ ಪ್ರಮಾಣಗಳಿವೆ. **ಯತ್** ಯಾವುದು **ತಮಸಃ ಪರಂ** ಅಜ್ಞಾನವನ್ನು ಮೀರಿದ್ದೋ ಅಜ್ಞಾನವೇ ಇಲ್ಲದ್ದೋ ಎಂದರ್ಥ. ಅಥವಾ **ತಮಸಃ** ಪ್ರಕೃತಿಗೆ ಅಭಿಮಾನಿನಿಯಾದ ಅಕ್ಷರನಾಮಕಳಾದ ಲಕ್ಷ್ಮೀದೇವಿಗಿಂತಲೂ **ಪರಂ** ಉತ್ತಮವಾದುದೋ ''ತುರ್ಯಂ ತತ್ಸರ್ವದೃಕ್ ಸದಾ'' ''ಅಕ್ಷರಾತ್ ಪರತಃ ಪರಃ'' ''ಕೂಟಸ್ಥೋಽಕ್ಷರ ಉಚ್ಯತೇ ಉತ್ತಮಃ ಪುರುಷಸ್ತ್ವನ್ಯಃ'' ಇತ್ಯಾದಿ ಶ್ರುತಿ-ಸ್ಮೃತಿಗಳು ಪ್ರಮಾಣ. **ಯತ್** ಯಾವುದು **ಸತ್** ಸತ್ಯವೋ ಜ್ಞಾನವೋ ಅಜ್ಞಾನ ಕಳೆವುದೋ ''ನ ನಿದ್ರಾಂ ನೈವ ಚ ಸ್ವಪ್ನಂ ತುರ್ಯೇ ಪಶ್ಯಂತಿ ನಿಶ್ಚಿತಾಃ'' ಯಾವದು ನಿರ್ದೋಷಜ್ಞಾನರೂಪವೋ ''ಏಕಾತ್ಮ್ಯಪ್ರತ್ಯಯಸಾರಮ್'' ಈ ಅರ್ಥದಲ್ಲಿ ಸತ್ ಪದವು ''ಷದಲ್ಯವಿಶರಣಗತ್ಯವಸಾದನೇಷು'' ಎಂಬ ಧಾತುವಿನಿಂದ ಆದದ್ದು. **ಅಲೋಕಂ** ಲೋಕವ್ಯವಹಾರಕ್ಕೆ ವಿಷಯವಲ್ಲವೋ ''ಅದೃಷ್ಟಮವ್ಯವಹಾರ್ಯಮ-ಲಕ್ಷಣಚಿಂತ್ಯಮವ್ಯಪದೇಶ್ಯಮ್'' ಎಂದು ಪ್ರಮಾಣ. ಆದ್ದರಿಂದ **ಅವ್ಯಕ್ತಂ** ಅನುಗ್ರಹವಿಲ್ಲದೇ ಇಂದ್ರಿಯಗೋಚರವಲ್ಲದ **ಅನಂತಪಾರಂ** ಅಂತ ನಾಶ ಪಾರ ಗುಣೇಯತ್ತಾ (ಗುಣಪರಿಚ್ಛೇದ) ಇವೆರಡೂ ಇಲ್ಲದ್ದೋ ಪಾರಂ ಪೂರಣಂ ಸಮುದಾಯಃ ಮಾತ್ರಾಣಾಂ ಎಂದು ಶೇಷ ಅನಂತಮಾತ್ರಂ ಎಂದಾದರೂ ಅರ್ಥ. ''ಅಮಾತ್ರೋಽನಂತಮಾತ್ರಶ್ಚ'' ಎಂದು ಪ್ರಮಾಣವಿದೆ. **ಯತ್** ಯಾವುದನ್ನು **ಧೀರಾಃ** ಜ್ಞಾನಿಗಳಾದ ಬ್ರಹ್ಮಾದಿಗಳು **ಯೋಗರಥೇನ** ಭಕ್ತಿಪೂರ್ವಕ ಧ್ಯಾನವೆಂಬ ರಥದಿಂದ **ಉಪಾಸತೇ** ಉಪಾಸಿಸುವರೋ ಹೊಂದುವರೋ ''ಓಂಕಾರಂ ಆತ್ಮೈವ ಸಂವಿಶ್ಯತ್ಯಾತ್ಮನಾ ಆತ್ಮಾನಂ ಯ ಏವಂ ವೇದ'' ಎಂದು ಪ್ರಮಾಣ, ಮತ್ತು **ಉಪಸುಪರ್ಣಪತ್ರಂ** ಗರುಡನ ರೆಕ್ಕೆಯ ಸಮೀಪದಲ್ಲಿ ಜೀವನೆಂಬ ವಾಹನದ ಮೇಲೆ **ಆಸಾಂಚಕಾರ** ಕುಳಿತಿದೆಯೋ ''ಸರ್ವಸ್ಯ ಹೃದಯೇ ಸ್ಥಿತಃ'' ''ಯ ಆತ್ಮನಿ ತಿಷ್ಠನ್'' ''ದ್ವಾಸುಪರ್ಣಾ ಸಯುಜಾ'' ಮುಂತಾದ ಶ್ರುತಿಗಳು ಪ್ರಮಾಣ. **ತತ್** ಆ ವಾಸುದೇವನೆಂಬ ತುರೀಯರೂಪವನ್ನು **ನಮಾಮಿ** ಎಂದು ಮುಂದಿನ ಶ್ಲೋಕದಲ್ಲಿಯ ಪದದಿಂದ ಅನ್ವಯ ಮಾಡಿಕೊಳ್ಳಬೇಕು.

**ಅಲೋಕಂ** ಲೋಕವಿಲಕ್ಷಣವಾದ **ಅವ್ಯಕ್ತಂ** ವಿವಿಧ ಸಂಗದಿಂದ ಕೂಡದಿರುವ **ಅನಂತಪಾರಂ** ಅನಂತಜೀವರನ್ನು ಸಂಸಾರದಿಂದ ದಾಟಿಸುವ ಅನಂತಾನ್ ಪಾರಯತೀತಿ

ಅನಂತಪಾರಃ. ಉಪಸುಪರ್ಣಪತ್ರಂ ಸುಪರ್ಣಾಃ ಜೀವರು ಅವರೇ ಪತ್ರಂ ವಾಹನ ಉಪ ಸಮೀಪದಲ್ಲಿ ಉಪಸುಪರ್ಣಪತ್ರಂ ಆಸಾಂಚಕಾರ ಕುಳಿತಿರುವನು. ಜೀವನೆಂಬ ವಾಹನದಲ್ಲಿ ಕುಳಿತವನು. ''ಪತ್ರಂ ತು ವಾಹನೇ ಪರ್ಣೇ ಪಕ್ಷೇ'' ಇತಿ ವಿಶ್ವಃ.

ಯದೇಕವರ್ಣಂ ಮುಂತಾಗಿ ಹೇಳಿದ್ದು ಬೇರೆ ದೇವತೆಗಳಿಗಲ್ಲ ಶ್ರೀಹರಿವಿಷಯಕವೇ ಎಂದು ಈ ವಿಶೇಷಣದಿಂದ ಸೂಚಿಸಿರುವರು. ಗರುಡಾರೂಢತ್ವ ಅವನಿಗೆ ಮುಖ್ಯವೆಂದು ವಿಖ್ಯಾತಿ ಇದೆ. **ಯೋಗಃ** ಯೋಗಿಯು ಉಪಾಯವಂತನು ರಥಃ ಕಾಯಃ ತೇನ **ರಥೇನ** ದೇಹದಿಂದ **ಉಪಾಸತೇ** ಉಪಾಸಿಸುವನು ಎಂದೂ ಅರ್ಥ ಮಾಡಿರುವರು. ''ರಥಃ ಸ್ಯಾತ್ ಸ್ಯಂದನೇ ಕಾಯೇ'' ಎಂದು ವಿಶ್ವವಿದೆ. ||೨೯||

ಮಾಯಾನಿಯಂತೃತ್ವೇನ ಸ್ತೋತ್ರ ಮಾಡುವರು-

**ನ ಯಸ್ಯ ಕಶ್ಚಾತಿಪಿಪರ್ತಿ ಮಾಯಾಂ**
**ಯಯಾ ಜನೋ ಮುಹ್ಯತಿ ವೇದನಾರ್ಥಮ್ ।**
**ತ ನಿರ್ಜಿತಾತ್ಮಾತ್ಮಗುಣಂ ಪರೇಶಂ**
**ನಮಾಮಿ ಭೂತೇಷು ಸಮಂ ಚರಂತಮ್** ||೩೦||

**ಯಸ್ಯ** ಯಾವ ಶ್ರೀಹರಿಯ **ಯಯಾ** ಬಂಧಕವಾದ ಇಚ್ಛೆಯಿಂದ **ಜನಃ** ಜೀವಸಮೂಹವು **ವೇದನಾರ್ಥಂ** ಜ್ಞಾನಕ್ಕೆ ಮುಖ್ಯವಿಷಯನಾದ ಶ್ರೀಹರಿಯನ್ನು ಕುರಿತು **ಮುಹ್ಯತಿ** ಮೋಹಗೊಳ್ಳುವರು ಅಥವಾ ಜ್ಞಾನವೆಂಬ ಪುರುಷಾರ್ಥದ ವಿಷಯದಲ್ಲಿ ಮೋಹಗೊಂಡಿರುವರು. (ಸರಿಯಾಗಿ ತಿಳಿದಿಲ್ಲವೆಂದರ್ಥ) (''ಅನೀಶಯಾ ಶೋಚತಿ ಮುಹ್ಯಮಾನಃ'' ಎಂಬ ಶ್ರುತಿಯು ಈ ವಿಷಯವನ್ನು ತಿಳಿಸುವದು.) ಆ ಜೀವಸಮೂಹದಲ್ಲಿಯೂ **ಕಶ್ಚನ** ತಮೋಯೋಗ್ಯನಾದ ಜೀವನು **ಯಸ್ಯ** ಯಾವ ಹರಿಯ **ತಾಂ ಮಾಯಾಂ** ಆ ಬಂಧಕಶಕ್ತಿಯನ್ನು (ಇಚ್ಛೆಯನ್ನು) **ನ ಅತಿಪಿಪರ್ತಿ** ಶ್ರೀಹರಿಯ ಅನುಗ್ರಹವಿಲ್ಲದ್ದರಿಂದ ದಾಟಲಾರನು, ಆದರೇ ಮುಕ್ತಿಯೋಗ್ಯನಾದ ಸಾತ್ವಿಕಸ್ವಭಾವದ ಜೀವನು ಶ್ರೀಹರಿಯ ಅನುಗ್ರಹದಿಂದ ಅದನ್ನು ಪರಿಹರಿಸಿಕೊಳ್ಳುವನು. (''ಅನಾದಿಮಾಯಯಾ ಸುಪ್ತೋ ಯದಾ ಜೀವಃ ಪ್ರಬುಧ್ಯತೇ'' ''ಯಮೇವೈಷ ವೃಣುತೇ ತೇನ ಲಭ್ಯಃ'' ಇತ್ಯಾದಿ ಶ್ರುತಿಗಳು ಇದನ್ನು ತಿಳಿಸುತ್ತವೆ. **ತಂ** ಸರ್ವಬಂಧಕೇಚ್ಛಾಸ್ವರೂಪನಾದ **ನಿರ್ಜಿತಾತ್ಮಾತ್ಮಗುಣಂ** ಎಲ್ಲ ಜೀವರನ್ನೂ, ಎಲ್ಲ ಜೀವರ ಪಾರತಂತ್ರ್ಯಾದಿ ಧರ್ಮಗಳನ್ನೂ ಸಂಪೂರ್ಣವಾಗಿ ಜಯಿಸಿರುವ ಅಂದರೆ ಪುರುಷೋತ್ತಮನೂ ನಿರ್ದೋಷನೂ ಆದ ''ನಿವೃತ್ತೇಃ ಸರ್ವದುಃಖಾನಾಂ ಈಶಾನಃ ಪ್ರಭುರವ್ಯಯಃ'' ಎಂದಿದೆ. **ಭೂತೇಷು** ಎಲ್ಲ ಜೀವರಲ್ಲಿಯೂ **ಸಮಂ** ನಿರ್ದೋಷನಾಗಿ ಒಂದೇ ರೀತಿಯಲ್ಲಿ **ಚರಂತಂ** ವಾಸಿಸುವ ''ಏಕೋ ದೇವಃ ಸರ್ವಭೂತೇಷು ಗೂಢಃ''

''ಸ ಏಷ ಸರ್ವೇಶ್ವರ ಏಷ ಸರ್ವ ಏಷೋಽಂತರ್ಯಾಮೀ ಏಷ ಯೋನಿಃ ಸರ್ವಸ್ಯ'' ಇತ್ಯಾದಿ ಶ್ರುತಿಗಳು ಹೇಳಿರುವಂತೆ **ಪರೇಶಂ** ಸರ್ವೋತ್ತಮ ನಿಯಾಮಕನಾದ ಶ್ರೀಹರಿಯನ್ನು **ನಮಾಮಿ** ನಮಸ್ಕರಿಸುತ್ತೇನೆ.

**ಕಶ್ಚ** ಯಾವ ಅಧಿಕಾರಿಯೂ **ಯಸ್ಯ ಮಾಯಾಂ** ಯಾವ ಹರಿಯ ಬಂಧಕಾದಿಶಕ್ತಿಯನ್ನು ಜಡಪ್ರಕೃತಿಯನ್ನೂ **ನಾತಿಪಿಪರ್ತಿ** ಅವನ ಪ್ರಸಾದವಿಲ್ಲದೇ ದಾಟುವದಿಲ್ಲ ದಾಟಲು ಸಮರ್ಥರಲ್ಲ. ''ದೈವೀ ಹ್ಯೇಷಾ ಗುಣಮಯೀ ಮಮ ಮಾಯಾ ದುರತ್ಯಯಾ । ಮಾಮೇವ ಯೇ ಪ್ರಪದ್ಯಂತೇ ಮಾಯಾಮೇತಾಂ ತರಂತಿ ತೇ'' ಎಂದು ಸ್ಮೃತಿ ಇದೆ. (ಗೀತಾ) ಮಾಯೆಯ ಕಾರ್ಯವನ್ನು ತಿಳಿಸುವರು. **ಯಯಾ** ಯಾವ ಮಾಯೆಯಿಂದ ಪ್ರಕೃತಿಯಿಂದ **ಜನಃ ಮುಹ್ಯತಿ** ಅಸುರ ಸ್ವಭಾವದವರು ವಿಪರೀತ ಜ್ಞಾನವುಳ್ಳವರಾಗುವರು ಎಲ್ಲರೂ ಪ್ರಕೃತಿಯಿಂದ ಬದ್ಧರಾಗುವರು. **ತೇನ** ಆದ್ದರಿಂದ **ಅರ್ಥಂ** ಭಗವಂತನ ಸ್ವರೂಪವನ್ನು ತಮ್ಮ ಸ್ವರೂಪವನ್ನು **ನ ವೇದ** ತಿಳಿಯಲಾರರು. (ವೇದ ನ ಅರ್ಥಂ ಎಂದು ಪದಚ್ಛೇದ ಮಾಡಿಕೊಳ್ಳಬೇಕು.) ಆದ್ದರಿಂದ ಅನಿಷ್ಟವನ್ನು ಹೊಂದುವರು. ''ಅನೀಶಯಾ ಶೋಚತಿ ಮುಹ್ಯಮಾನಃ'' ''ಸರ್ವಾರ್ಥಾನ್ ವಿಪರೀತಾಂಶ್ಚ ಬುದ್ಧಿಃ ಸಾ ಪಾರ್ಥ ತಾಮಸೀ'' ಎಂದಿದೆ. **ನಿರ್ಜಿತಾತ್ಮಾತ್ಮಗುಣಂ** ನಿತರಾಂ ಜಿತಾಃ ಆತ್ಮಾ ಪ್ರಕೃತಿಃ ಆತ್ಮಗುಣಾಃ ದುಃಖಾಜ್ಞಾನಾದಿದೋಷಾಃ ಯೇನ ತಂ ಅಂದರೆ ಪ್ರಕೃತಿ ಮತ್ತು ದುಃಖ ಅಜ್ಞಾನಾದಿಗಳನ್ನು ಗೆದ್ದವನು ಎಂದರ್ಥ. ''ನಿರನಿಷ್ಟೋ ನಿರವದ್ಯಃ'' ಎಂದು ಶ್ರುತಿ ಇದೆ. ನಿರ್ಜಿತಾಃ ರಮಾದಿಚೇತನಾಃ ತದ್ಗುಣಾಶ್ಚ ಯೇನ ಸಃ. ಸರ್ವಚೇತನೋತ್ತಮತ್ವ, ತನ್ನಿಯಾಮಕತ್ವ ಇರುವದರಿಂದ ಸ್ವಾಮಿ ಎಂದರ್ಥ. ''ಶಾಶ್ವತಂ ಶಿವಮಚ್ಯುತಂ ನಾರಾಯಣಂ ಮಹಾಜ್ಞೇಯಂ'' ''ಯ ಆತ್ಮಾನಮಂತರೋ ಯಮಯತಿ'' ಮುಂತಾದ ಪ್ರಮಾಣಗಳಿವೆ. **ಪರೇಶಂ** ಮುಕ್ತರಿಗೆ ಸ್ವಾಮಿಯಾದ ''ಉತಾಮೃತತ್ವಸ್ಯೇಶಾನಃ'' ಎಂದು ಶ್ರುತಿ. **ಭೂತೇಷು ಸಮಂ ಚರಂತಂ** ಎಲ್ಲ ಪ್ರಾಣಿಗಳಲ್ಲಿ ಅವರವರ ಯೋಗ್ಯತಾನುಸಾರವಾಗಿ ನಡೆಯುವ ಪ್ರವರ್ತಕನಾದ ಅಥವಾ ಜ್ಞಾನಾನಂದಾದಿಗಳಿಂದ ನಿಯಾಮಕನಾಗಿ **ಚರಂತಂ** ಸಂಚರಿಸುವ ''ಸರ್ವೇಷಾಂ ಭೂತಾನಾಂ ಅಂತರಪುರುಷಃ ಸ ಉ ಆತ್ಮೇತಿ ವಿದ್ಯಾತ್'' ''ಬ್ರಾಹ್ಮಣೇ ಗವಿ ಹಸ್ತಿನಿ ಶುನಿ ಚೈವ ಶ್ವಪಾಕೇ ಚ ಪಂಡಿತಾಃ ಸಮದರ್ಶಿನಃ'' ಮುಂತಾದ ಪ್ರಮಾಣ ಇವೆ. ಜ್ಞಾನೀ ಚೇತ್ ಅರ್ಥಂ ವೇದ ನ ಮುಹ್ಯತಿ ಜ್ಞಾನಿಯಾದರೆ ಭಗವಂತನನ್ನು ತಿಳಿಯುವನು. ಮೋಹಗೊಳ್ಳುವದಿಲ್ಲ ಹೀಗೂ ಅನ್ವಯಾರ್ಥ. ಯಯಾ ಜನಃ ಇತರಃ ಮುಹ್ಯತಿ ಅಜ್ಞಾನಿಗಳು ಮೋಹಿತರಾಗುವರು ಪಾರಾ ಚ ಈ ತಸ್ಯಾಃ ಶಂ ಯೇನ ತಂ ಪರೇಶಂ ಉತ್ತಮಳಾದ ರಮೆಗೆ ಸುಖಕೊಡುವವನು. ಮಯಾ ಸಹಿತಂ ಸಮಂ ರಮಾಪತಿಯಾದ ಶ್ರೀಹರಿಯನ್ನು ನಮಿಸುವೆನು ಎಂದೂ ಅರ್ಥವನ್ನು ತಿಳಿಯಬೇಕು. ।।೩೦।।

ಈ ಶ್ಲೋಕದಲ್ಲಿ ನಿರ್ಜಿತಾತ್ಮಾತ್ಮಗುಣಂ ಎಂಬುದರ ಅರ್ಥವಾಗದಿರುವದರಿಂದ ತಾತ್ಪರ್ಯ ವ್ಯಾಖ್ಯಾನಿಸುವರು.

**...ತಾತ್ಪರ್ಯ...**

**ಆತ್ಮಾ ಚ ಆತ್ಮಗುಣಾಶ್ಚ ನಿರ್ಜಿತಾ ಯೇನ ।**

ಮನಸ್ಸು ಮತ್ತು ಮನಸ್ಸಿನ ಗುಣಗಳಾದ ರಾಗಾದಿಗಳನ್ನು ಗೆದ್ದಿರುವವನು ನಿರ್ಜಿತಾತ್ಮಾತ್ಮಗುಣ ಎಂದು ಕರೆಯಲ್ಪಡುತ್ತಾನೆ. ಅಥವಾ ಆತ್ಮಾ ಎಂದರೆ ಜೀವ, ಆತ್ಮಗುಣ ಎಂದರೆ ಜೀವರ ಸ್ವರೂಪಭೂತವಾದ ಗುಣಗಳನ್ನು ಸ್ವಾಧೀನ-ಮಾಡಿಕೊಂಡವನು ಎಂದರ್ಥ.

ಆತ್ಮಾ ಎಂದರೆ ಸ್ವರೂಪ ಆತ್ಮಗುಣ ಎಂದರೆ ಸ್ವರೂಪಭೂತ ಗುಣಗಳು ನಿತರಾಂ ಜಿತಾಃ ಆತ್ಮಾ ಅತ್ಮಗುಣಾಃ ಯಸ್ಯ ಪರೇಶಸ್ಯ ಸಃ ನಿರ್ಜಿತಾತ್ಮಗುಣಃ ಎಂದು ಶ್ರೀಹರಿಯ ಸ್ವರೂಪವೂ ಸ್ವರೂಪಗುಣಗಳು ಬೇರೊಬ್ಬರಿಂದ ಸೋಲಲ್ಪಟ್ಟಿವೆ, ಎಂದು ಅನ್ಯರಿಂದ ಸೋಲಲ್ಪಟ್ಟ ಗುಣವುಳ್ಳ ಪರಮಾತ್ಮ ಎಂದು ಅನ್ಯಥಾಜ್ಞಾನ ಬರುವದು. ಆದ್ದರಿಂದ ನಿರ್ಜಿತಾತ್ಮಾತ್ಮಗುಣ ಎಂಬ ಪದದ ವಿಗ್ರಹವನ್ನು ಶ್ರೀಮದಾಚಾರ್ಯರು ತೋರಿಸಿದ್ದಾರೆ. ಆತ್ಮ ಎಂದರೆ ಜೀವ. ಆತ್ಮಗುಣ ಎಂದರೆ ಜೀವನ ಸ್ವರೂಪಗುಣಗಳು. ಅವುಗಳನ್ನು ಗೆದ್ದ ಪರಮಾತ್ಮ ಎಂದು ಅರ್ಥ. ಜೀವನನ್ನು, ಜೀವರ ಸ್ವರೂಪಭೂತವಾದ ಗುಣಗಳನ್ನು ತನ್ನ ಅಧೀನವಾಗಿಟ್ಟುಕೊಂಡವನೆಂದರ್ಥ. ಎಂದು ವ್ಯಾಖ್ಯಾನಿಸುವರು. ।।೩೦।।

ಸತ್ಯ - ಸಾತ್ವಿಕಾ ಅಪಿ ತಾತ್ವಿಕೀಂ ಯತ್ಕೃಪಾಂ ಅಪಹಾಯ ನ ಶಕ್ತಾ ಜ್ಞಾತುಂ ಇತರೇ ತಾಮಸರಾಜಸಾ ನ ಸಮರ್ಥಾ ಇತಿ ಕಿಂ ವಕ್ತವ್ಯಂ ಇತಿ ಸ್ಪಷ್ಟಮಾಚಷ್ಟೇ ।

ಸಾತ್ವಿಕರು ಕೂಡಾ ತಾತ್ವಿಕವಾದ ಪರಮಾತ್ಮನ ಕೃಪೆಯನ್ನು ಬಿಟ್ಟು ಪರಮಾತ್ಮನನ್ನು ತಿಳಿಯಲು ಸಾಧ್ಯವಿಲ್ಲ. ಅಂದಮೇಲೆ ರಾಜಸರಾಗಲೀ, ತಾಮಸರಾಗಲೀ ಆ ಪರಮಾತ್ಮನನ್ನು ತಿಳಿಯುವುದು ಅಸಾಧ್ಯ ಎಂದು ಪ್ರತ್ಯೇಕವಾಗಿ ಹೇಳುವುದೇನು? ರಾಜಸ-ತಾಮಸರೂ ಪರಮಾತ್ಮನನ್ನು ತಿಳಿಯಲು ಸಾಧ್ಯವಿಲ್ಲ. ಈ ವಿಷಯವನ್ನು ಸ್ಪಷ್ಟವಾಗಿ ಈ ಶ್ಲೋಕದಲ್ಲಿ ತಿಳಿಸುತ್ತಿದ್ದಾರೆ-

**ಇಮೇ ವಯಂ (ತತ್ಕೃಪಯೈವ) ಯತ್ಪ್ರಿಯಯೈವ ಸೃಷ್ಟಾಃ**
**ಸತ್ವೇನ ತನ್ವಾ ಬಹಿರಂತರಂ ವಿಭೋ ।**
**ಗತಿಂ ನ ಸೂಕ್ಷ್ಮಾಮೃಷಯಶ್ಚ ವಿದ್ಮಹೇ**
**ಕುತೋಽಸುರಾದ್ಯಾ ಇತರಪ್ರಧಾನಾಃ ।।೩೦।।**

**ವಿಭೋ** ವಿವಿಧಸೃಷ್ಟಿ ಮಾಡುವ ಸಾಮರ್ಥ್ಯವುಳ್ಳ ಶ್ರೀಹರಿಯೇ **ಯತ್ಕೃಪಯೈವ** ಯಾವನ ದಯೆಯಿಂದಲೇ **ಸತ್ತ್ವೇನ** ಸತ್ವಗುಣದಿಂದ **ಬಹಿಃ ಅಂತರಂ ಚ** ಬ್ರಹ್ಮಾಂಡದ ಹೊರಗೂ ಒಳಗೂ **ಸೃಷ್ಟಾಃ** ಸೃಷ್ಟಿಸಲ್ಪಟ್ಟಿರುವೆವೋ **ಇಮೇ ವಯಂ** ಸಾತ್ವಿಕಸ್ವಭಾವದ ಈ ನಾವು **ಋಷಯಃ ಚ** ಸ್ವಾಭಾವಿಕಜ್ಞಾನಿಗಳೇ ಆಗಿದ್ದರೂ **ತವ** ನಿನ್ನ **ಸೂಕ್ಷ್ಮಾಂ** ಅತೀಂದ್ರಿಯವಾಗಿ ಸರ್ವತ್ರ ವ್ಯಾಪಿಸಿರುವ **ಗತಿಂ** ಸಚ್ಚಿದಾನಂದಸ್ವರೂಪವನ್ನು **ನ ವಿದ್ಮಹೇ** ನಿನ್ನ ಅನುಗ್ರಹವಿಲ್ಲದೇ ತಿಳಿಯಲಾರೆವು. ಇನ್ನು **ಇತರಪ್ರಧಾನಾಃ** ತಮೋಗುಣ-ರಜೋಗುಣಪ್ರಧಾನರಾದ **ಅಸುರಾದ್ಯಾಃ** ತಮೋಯೋಗ್ಯರಾದ ದೈತ್ಯರು ಮತ್ತು ನಿತ್ಯಸಂಸಾರಿಗಳು **ಕುತಃ ಜಾನೀಯುಃ** ಯಾವ ಕಾರಣದಿಂದ ತಿಳಿದಾರು? ಸರ್ವಥಾ ತಿಳಿಯಲಾರರು. ಅಂಥ ಪರಮಾತ್ಮನನ್ನು ನಮಿಸುವೆನು. ।।೩೧।।

ಸತ್ಯ :- **ಯತ್ಕ್ರಿಯಯಾ ಸೃಷ್ಟಾಃ** ಎಂಬ ಪಾಠದಲ್ಲಿ ಸನ್ನಿಧಾನಪಾತ್ರವಾದ್ದರಿಂದ ಪ್ರಿಯವಾದ **ತನ್ವಾ** ಪ್ರತಿಮಾಸ್ಥಾನೀಯವಾದ **ಸತ್ತ್ವೇನ** ಸತ್ವಗುಣದಿಂದ ಎಂದನ್ವಯ. ಇದರಿಂದ ಜ್ಞಾನಸಂಪತ್ತಿಗೆ ಸಂಬಂಧವನ್ನು ಸೂಚಿಸಿದಂತಾಯಿತು. **ವಿಭೋ** ವ್ಯಾಪ್ತನೇ ಎಂದರ್ಥ. ಇದರಿಂದ ಶ್ರೀಹರಿಯೂ ದೂರದಲ್ಲಿರುವದರಿಂದ ನಿಷ್ಕರ್ಷಮಾಡಿ ತಿಳಿಯವದು ಅಸಂಭಾವಿತವೆಂಬ ಶಂಕೆಯ ಪರಿಹಾರವಾಯಿತು. **ಸೂಕ್ಷ್ಮಾಂ** ಎಂಬುದು ಋಷಿಗಳಿಗೆ ಭಗವಂತನ ಕೃಪೆಯಿಲ್ಲದೇ ಪದಪ್ರಾಪ್ತಿ ಇಲ್ಲ. ಇತರರಿಗೆ ತಾಮಸ- ರಾಜಸರಿಗೆ ತಮೋಗುಣ-ರಜೋಗುಣಪ್ರಧಾನರಾದ್ದರಿಂದ ಸೃಷ್ಟಿ-ನಷ್ಟಗಳಿಗೆ ಕಾರಣಗಳಾದವು ಇರುವದರಿಂದ ಭಗವತ್ಪ್ರಾಪ್ತಿಯಾಗಲಾರದು. ।।೩೧।।

ಬೇರಾವ ದೇವತೆಗೆ ಈ ರೀತಿ ವಿವಿಧಭವನವಿಲ್ಲ ಆದ್ದರಿಂದ ಇವನೇ ವಂದನೀಯನೆಂದು ತಿಳಿಸಲು ವಿರಾಟ್ ರೂಪಿಯ ಪ್ರಸಾದವನ್ನು ಅಪೇಕ್ಷಿಸುವರು.

**ಪಾದೌ ಮಹೀಯಂ ಸ್ವಕೃತೈವ ಯಸ್ಯ**
**ಚತುರ್ವಿಧೋ ಯತ್ರ ಹಿ ಭೂತಸರ್ಗಃ ।**
**ಸ ವೈ ಮಹಾಪೂರುಷ ಆತ್ಮತಂತ್ರಃ**
**ಪ್ರಸೀದತಾಂ ಬ್ರಹ್ಮಮಹಾವಿಭೂತಿಃ** ।।೩೨।।

**ಯತ್ರ** ಯಾವ ಭೂಮಿಯ ಮೇಲೆ **ಚತುರ್ವಿಧಃ** ಜರಾಯುಜ, ಅಂಡಜ, ಸ್ವೇದಜ, ಉದ್ಭಿಜ್ಜ ಎಂಬ ನಾಲ್ಕು ರೀತಿಯ **ಭೂತಸರ್ಗಃ** ಪ್ರಾಣಿಗಳ ಸೃಷ್ಟಿಯಾಗುವದೋ **ಇಯಂ** ಈ **ಸ್ವಕೃತಾ** ಶ್ರೀಹರಿಯ ಪಾದದಿಂದಲೇ ಸೃಷ್ಟವಾದ **ಮಹೀ ಏವ** ಭೂಮಿಯೇ **ಯಸ್ಯ** ಯಾವ ವಿಷ್ಣುವಿಗೆ **ಪಾದೌ** ಪಾದವೆಂದು ಕರೆಸಿಕೊಳ್ಳಲ್ಪಡುವದು ಪಾದದಿಂದ ಹುಟ್ಟಿ ಪಾದವನ್ನು ಆಶ್ರಯಿಸಿಕೊಂಡಿರುವದರಿಂದ ಪಾದಶಬ್ದವಾಚ್ಯವೇ ಹೊರತು ಪಾದಗಳಿಂದ ಅಭಿನ್ನವಾದ್ದರಿಂದಲ್ಲ. ''ಪದ್ಭ್ಯಾಂ ಭೂಮಿರಜಾಯತ'' ಎಂದು ಶ್ರುತಿಯಿದೆ. **ಸಃ** ಆ

ಭೂಮಿಯನ್ನು ಸೃಷ್ಟಿ ಮಾಡಿದ **ಆತ್ಮತಂತ್ರಃ** ಸ್ವತಂತ್ರನಾದ ಆದ್ದರಿಂದಲೇ **ಮಹಾಪೂರುಷಃ** ಪುರುಷೋತ್ತಮನಾದ **ಮಹಾವಿಭೂತಿಃ** ಮಹತ್ತಾದ ವಿವಿಧ ಪದಾರ್ಥಗಳನ್ನು ಸೃಷ್ಟಿಸಿ ಅವುಗಳಲ್ಲಿ ಆಯಾ ರೂಪಗಳಿಂದ ಪ್ರವೇಶಿಸಿ ಆಯಾ ಆಕಾರದಿಂದ ಇರುವ ಅಥವಾ ಮಹತೀ ಮೇದಿನೀಪಾದತ್ವಾದಿಕಾ ಅತ್ರೋಕ್ತಾ ವಿಭೂತಿಃ ವಿವಿಧಮೈಶ್ವರ್ಯಂ ಯಸ್ಯ ಸಃ ಮಹಾವಿಭೂತಿಃ ಅಂದರೆ ಭೂಮಿಯೇ ಪಾದಾಶ್ರಿತವಾಗಿರುವದೇ ಮುಂತಾದ ವಿವಿಧಭವನ ಐಶ್ವರ್ಯ ಉಳ್ಳ ಎಂದರ್ಥ. ಅಥವಾ ಮಹತೀ ವಿಭೂತಿಃ ಮಹಾಲಕ್ಷ್ಮೀಃ ಯಸ್ಯ ಸಃ ವಾ ಅಂದರೆ ಮಹಾಲಕ್ಷ್ಮಿಯೇ ಹೆಂಡತಿಯಾಗಿವುಳ್ಳ ಬ್ರಹ್ಮ ಗುಣಪೂರ್ಣನಾದ ಶ್ರೀಹರಿಯು **ಪ್ರಸೀದತಾಂ** ಪ್ರಸನ್ನನಾಗಲಿ ಗುಣಪೂರ್ಣನಾದ್ದರಿಂದ ಈ ವಿವಿಧಭವನವು ಅಸಂಭಾವಿತವಲ್ಲವೆಂದು ಸೂಚಿಸುವರು. ''ಅಥ ಕಸ್ಮಾದುಚ್ಯತೇ ಬ್ರಹ್ಮೇತಿ ಬೃಹಂತೋ ಹ್ಯಸ್ಮಿನ್ ಗುಣಾ ಇತಿ'' ''ವಿಶ್ವತಃ ಪರಮಾ ನಿತ್ಯಮ್'' ಮುಂತಾದ ಶ್ರುತಿಪ್ರಸಿದ್ಧಿಯನ್ನು ಮಹಾಪುರುಷತ್ವಾದಿಗಳಿಗೆ ವೈ ಶಬ್ದ ಹಿ ಶಬ್ದಗಳು ತಿಳಿಸುವವು.

ಸತ್ಯ ಃ- **ಆತ್ಮತಂತ್ರಃ ಆತ್ಮಾನಃ** ನಾನೇ ಮೊದಲಾದ ಜೀವರು **ತಂತ್ರಂ** ಕುಟುಂಬ ವ್ಯಾಪಾರದಲ್ಲಿ ಸೇವಕರಾಗಿವುಳ್ಳವನು ''ತಂತ್ರಂ ಕುಟುಂಬವ್ಯಾಪಾರೇ'' ಎಂದು ವಿಶ್ವವಿದೆ. ಆತ್ಮನಾಂ ತಂತ್ರಂ ಕುಟುಂಬವ್ಯಾಪಾರಃ ಯೇನ ಸಃ ಜೀವರ ಕುಟುಂಬವ್ಯಾಪಾರ ಯಾವನಿಂದ ನಡೆಯುವದೋ ಅವನು ಎಂದೂ ಅರ್ಥ ಮಾಡಿರುವರು. ।।೩೨।।

**ಅಂಭಸ್ತು ಯದ್ರೇತ ಉದಾರವೀರ್ಯಂ**
**ಸಿಧ್ಯಂತಿ ಜೀವಂತ್ಯುತ ವರ್ತಮಾನಾಃ ।**
**ಲೋಕಾಸ್ತ್ರಯೋಽಥಾಖಿಲಲೋಕಪಾಲಾಃ**
**ಪ್ರಸೀದತಾಂ ಬ್ರಹ್ಮ ಮಹಾವಿಭೂತಿಃ ।।೩೩।।**

**ಉದಾರವೀರ್ಯಂ** ಉತ್ಕೃಷ್ಟಬಲಪ್ರದವಾದ **ಅಂಭಃ** ನೀರು **ಯದ್ರೇತಃ** ಯಾವನ ರೇತಸ್ಥಾನೀಯವಾದದ್ದು ಸ್ವರೂಪರೇತಸ್ಸಲ್ಲ ''ಶಿಶ್ನಾದ್ರೇತಃ ರೇತಸ ಆಪಃ'' ಎಂದು ಶ್ರುತಿಯಿದ್ದ ಕಾರಣ ರೇತಸ್ಸಿನಿಂದ ಜನಿಸಿ ರೇತಸ್ಸನ್ನಾಶ್ರಯಸಿದ್ದರಿಂದ ರೇತಸ್ಸೆಂದು ಕರೆಯಲ್ಪಡುವದು. ಯತೋ ರೇತಸಃ ಯಾವ ನೀರಿನಿಂದ **ತ್ರಯಃ ಲೋಕಾಃ** ಈ ಮೂರು ಲೋಕಗಳು **ಅಖಿಲಲೋಕಪಾಲಾಃ** ಸೂರ್ಯ-ಸೋಮ- ಯಮ-ಇಂದ್ರ ಮುಂತಾದ ವರುಣನಿಗಿಂತ ಉತ್ತಮರನ್ನು ಬಿಟ್ಟು ವರುಣನಿಗಿಂತ ಅವರರಾದ (ಕಡಿಮೆಯವರಾದ) ಎಲ್ಲ ಲೋಕಪಾಲಕರು **ವರ್ಧಮಾನಾಃ** ಬೆಳೆಯುವವರಾಗಿ **ಸಿದ್ಧ್ಯಂತಿ** ಸಿದ್ಧರಾಗುವರೋ ತಮ್ಮ ಪ್ರಯೋಜನವನ್ನು ಹೊಂದುವರೋ **ಉತ** ಮತ್ತು **ಜೀವಂತಿ** ಜೀವಿಸುವರೋ ಯದ್ರೇತಃ ಎಂಬಲ್ಲಿಯ ಯತ್ ಪದವು ಬೇರೆಯಾಗಿ ಆವರ್ತಿತವಾಗುವದು. ಯತಃ ಎಂದು ವಿಪರಿಣತವಾಗಿ ಅನ್ವಯಿಸುವದು. ರೇತಸಃ ಎಂಬುವದು ಪಂಚಮೀ ಯತಃ

ರೇತಸಃ ಯಾವ ಕಾರಣ ಯಾವ ರೇತಸ್ಸಿನಿಂದ **ತ್ರಯಃ ಲೋಕಾಃ** ಮೂರು ಲೋಕದಲ್ಲಿರುವ ಜನರು **ಸಿದ್ಧ್ಯಂತಿ** ಹುಟ್ಟುವರು **ಜೀವಂತಿ** ಪ್ರಾಣಧಾರಣೆ ಮಾಡುವರು **ಉತ ವರ್ಧಮಾನಾಃ** ಬಲಾದಿಗಳುಳ್ಳವರಾಗುವರೋ **ಸಃ** ಇಂತಹ ನೀರನ್ನು ಸೃಷ್ಟಿಸಿದ **ಮಹಾವಿಭೂತಿಃ** ಸೂರ್ಯ-ಸೋಮ-ವಿಧಿ-ಶೇಷರನ್ನು ಮಾಡುವ ಮಹೈಶ್ವರ್ಯರೂಪ ವಿಭೂತಿಯುಳ್ಳ **ಬ್ರಹ್ಮ** ಗುಣಪೂರ್ಣನಾದ ನಾರಾಯಣನು **ಪ್ರಸೀದತಾಂ** ಪ್ರಸನ್ನನಾಗಲಿ. ''ಸೋಽರ್ಚನ್ನಚರತ್ ತಸ್ಯಾರ್ಚತ ಆಪೋ ಅಜಾಯಂತ'' ''ಆಪೋ ನಾರಾ ಇತಿ ಪ್ರೋಕ್ತಾ ಆಪೋ ವೈ ನರಸೂನವಃ'' ತದ್ಯತ್ ಪ್ರಥಮಮಮೃತಂ ತದ್ವಸವ ಉಪಜೀವಂತಿ'' ಮುಂತಾದ ಪೂರ್ವಾಚಾರ್ಯರಾದ ವಿಜಯಧ್ವಜರ ಉದಾಹರಣವು ಹರಿಯಿಂದ ಹುಟ್ಟಿದ್ದು ಎಂದರ್ಥದಲ್ಲಿ ಎಂದು ತಿಳಿಯಬೇಕು.

**ತುಶ್ಚ ತ್ಯಾಜ್ಯತ್ಯಾಗಗ್ರಾಹ್ಯಗ್ರಹಣರೂಪಮಾನಿಕವಿಶೇಷದ್ಯೋತಕಃ ।।ಸತ್ಯಧರ್ಮೀಯ**

ಅಂದರೆ ಬಿಡಬೇಕಾದ ಸೂರ್ಯ ಸೋಮ ಮಹೇಂದ್ರ ಮೊದಲಾದವರನ್ನು ಬಿಡುವದು ಉಳಿದ ಲೋಕಪಾಲರನ್ನು ಸ್ವೀಕರಿಸುವದೆಂಬ ವಿಶೇಷವನ್ನು ತುಶಬ್ದ ತಿಳಿಸುವದು ಎಂದು ಭಾವ. ।।೩೩।।

''ಅಂಭಸ್ತು ಯದ್ರೇತಃ'' ಎಂಬ ಶ್ಲೋಕದಲ್ಲಿ ಎಲ್ಲ ಲೋಕಪಾಲಕರಿಗೆ ನೀರಿನಿಂದ ಜೀವನ ಹೇಳುತ್ತದೆ. ಅದರಂತೆ ಮುಂದಿನ ''ಸೋಮೋ ಮನೋ ಯಸ್ಯ'' ಎಂಬಲ್ಲಿ ಆ ದೇವತೆಗಳಿಗೇ ಸೋಮನು ಬಲಪ್ರದ ಎಂದು ಹೇಳುತ್ತದೆ ಎಂದು ತೋರುವದು. ಮತ್ತು ಕೇವಲ ಜಡವಾದ ನೀರಿಗೆ ಇಂದ್ರಾದಿಗಳಿಗೆ ಜೀವಪ್ರದಾನ ಮಾಡುವ ಸಾಮರ್ಥ್ಯ ಸರ್ವಥಾ ಇಲ್ಲ. ಕಾರಣ ಅಭಿಮಾನಿಯಾದ ವರುಣನನ್ನು ಅಂಭಃಶಬ್ದದಿಂದ ಸ್ವೀಕರಿಸಲೇಬೇಕು. ಅವನೂ ಸಹ ಇಂದ್ರಾದಿಗಳಿಗಿಂತ ಅಧಮನಾದ್ದರಿಂದ ಇಂದ್ರಾದಿಗಳಿಗೆ ಜೀವನಪ್ರದಸಾಮರ್ಥ್ಯವಿಲ್ಲದವನು ಎಂಬ ಶಂಕಾಪರಿಹಾರಕ್ಕಾಗಿ ಪ್ರಮಾಣದಿಂದ ತಾತ್ಪರ್ಯ ಹೇಳುವರು.

**...ತಾತ್ಪರ್ಯ...**

**ಸೂರ್ಯಸೋಮಯಮೇಂದ್ರಾದೀನ್ಯತೇಽನ್ಯೇ ಲೋಕಪಾ ಅಪಿ ।**
**ಅದ್ಭಿರ್ಜೀವಂತಿ ಸೋಮಾಚ್ಚ ಮಹೇಂದ್ರಾದೀನ್ಯತೇಽಖಿಲಾಃ ।।**
**ಅಪಾಂ ಸೋಮಸ್ಯ ಚೇಂದ್ರಾದ್ಯಾ: ಸರ್ವೇ ವೈ ಜೀವನಪ್ರದಾಃ ।।ಇತಿ ಚ।।**

ಸೂರ್ಯ-ಚಂದ್ರ-ಯಮ-ಇಂದ್ರ ಮುಂತಾದ ತನಗಿಂತ ಉತ್ತಮರನ್ನು ಬಿಟ್ಟು ಲೋಕಪಾಲಕರೆಲ್ಲರೂ ಜಲಾಭಿಮಾನಿ ವರುಣನಿಂದ ಜೀವಿಸುವರು. ಅದರಂತೆ ದೇವೇಂದ್ರ ಮೊದಲಾದ ಉತ್ತಮರನ್ನು ಬಿಟ್ಟು ಮತ್ತು ತನ್ನ ಸಮಾನರಾದ ದೇವತೆಗಳನ್ನು ಬಿಟ್ಟು ತನಗಿಂತ ಕೆಳಗಿನ ವರುಣಾದಿದೇವತೆಗಳು ಚಂದ್ರನಿಂದ ಜೀವಿಸುವರು.

ಇಂದ್ರಾದಿದೇವತೆಗಳು ಜಲಾಭಿಮಾನಿ ವರುಣನಿಗೂ, ಚಂದ್ರನಿಗೂ ಜೀವನಾದಿಗಳನ್ನು ಕೊಡುವರು. ಅಂಭಃಶಬ್ದದಿಂದ ಅಭಿಮಾನಿಯನ್ನು ಸ್ವೀಕರಿಸಿದ್ದರಿಂದ ಜಡವಾದ ನೀರಿಗೆ, ದೇವತೆಗಳಿಗೆ ಜೀವನಪ್ರದಸಾಮರ್ಥ್ಯ ಹೇಗೆಂಬ ಶಂಕೆ ಮತ್ತು ಲೋಕಪಾಲಶಬ್ದದಿಂದ ಕೆಳಗಿನವರನ್ನು ಸ್ವೀಕರಿಸಿದ್ದರಿಂದ ಉತ್ತಮರಿಗೆ ಅಧಮರು ಹೇಗೆ ಜೀವನಪ್ರದರೆಂಬ ಶಂಕೆ ಪರಿಹೃತವಾಯಿತು. ಮತ್ತು ವರುಣ-ಚಂದ್ರರಿಗೆ ಅವರಿಗಿಂತ ಉತ್ತಮರು ಜೀವನಪ್ರದರೆಂದೂ ಪ್ರಮಾಣದಲ್ಲಿ ಹೇಳಿದೆ. ಆದ್ದರಿಂದ ಅವರೇ ಉತ್ತಮರಲ್ಲವೆಂದೂ ಸೂಚಿತವಾಗಿದೆ. ।।೩೩।।

**ಸೋಮಂ ಮನೋ ಯಸ್ಯ ಸಮಾಮನಂತಿ**
**ದಿವೌಕಸಾಂ ವೈ ಬಲಮಂಧ ಆಯುಃ ।**
**ಈಶೋ ನಗಾನಾಂ ಪ್ರಜನಃ ಪ್ರಜಾನಾಂ**
**ಪ್ರಸೀದತಾಂ ನಃ ಸ ಮಹಾವಿಭೂತಿಃ ।।೩೪।।**

**ಯಃ** ಯಾವ ಚಂದ್ರನು **ದಿವೌಕಸಾಂ** ತನಗಿಂತ ಕೆಳಗಿನ ದೇವತೆಗಳಿಗೆ **ಬಲಂ** ಬಲದ ಅಭಿವೃದ್ಧಿಕಾರಣನೋ **ಅಂಧಃ** ಅನ್ನವೋ **ಆಯುಃ** ಆಯುಷ್ಯಕ್ಕೆ ಕಾರಣನೋ **ನಗಾನಾಂ** ಗಿಡಗಳಿಗೆ **ಈಶಃ** ಅಂಕುರಜನನ ಸಾಮರ್ಥ್ಯವನ್ನು ಕೊಡುವವನೋ ನಿಯಾಮಕನೋ **ಪ್ರಜಾನಾಂ** ಪ್ರಜೆಗಳಿಗೆ **ಪ್ರಜನಃ** ಸುರತಾನಂದ-ಗರ್ಭಗಳಿಗೆ ಕಾರಣನೋ **ತಂ ಸೋಮಂ** ಆ ಚಂದ್ರನನ್ನು **ಯಸ್ಯ** ಯಾವ ವಿಷ್ಣುವಿನ **ಮನಃ** ಮನಸ್ಸಿನಿಂದ ಜನಿಸಿ ಮನಸ್ಸನ್ನಾಶ್ರಯಿಸಿರುವದರಿಂದ ಮನಸ್ಸೆಂದು **ಸಮಾಮನಂತಿ** ಜ್ಞಾನಿಗಳು ತಿಳಿಯುವರೋ, ಕರೆಯುವರೋ **ಸಃ ಮಹಾವಿಭೂತಿಃ** ಆ ಮಹಾವಿಭೂತಿಯು **ಪ್ರಸೀದತಾಂ** ಪ್ರಸನ್ನನಾಗಲಿ.

ಛಲಾರೀ ಃ- **ಪ್ರಜನನಃ** ತನ್ನ ದರ್ಶನದಿಂದ ಸ್ತ್ರೀ-ಪುರುಷರಿಗೆ ಸುರತೋದ್ಯೋಗ-ಕಾರಣನಾದ್ದರಿಂದ ಸಂತಾನಕಾರಣನು ಎಂದರ್ಥ. ''ಪ್ರಜಾ ಸ್ಯಾತ್ ಸಂತತೌ ಜನೇ'' ಎಂದು ಅಭಿಧಾನವಿದೆ.

''ಚಂದ್ರಮಾ ಮನಸೋ ಜಾತಃ'' ''ಸೋಮೋ ದದದ್ಗಂಧರ್ವಾಯ'' ''ಸೋಮೋ ವೈ ರಾಜಾ ವನಸ್ಪತೀನಾಂ'' ''ಸೋಮಃ ಪ್ರಥಮೋ ವಿವಿದೇ'' ಮುಂತಾದ ಪ್ರಮಾಣಗಳು ಮೇಲಿನ ವಿಷಯವನ್ನು ತಿಳಿಸುತ್ತವೆ. ದಿವಂ ಓಕಃ ಯೇಷಾಂ ತೇ ದಿವೌಕಾಃ ತೇಷಾಂ ಎಂದು ವಿಗ್ರಹ. ಅದಂತವಾದ ನಪುಂಸಕವಾದದ್ದು ಈ ದಿವ ಎಂಬ ಶಬ್ದ. ''ಮಂದರಃ ಸೌರಭಃ ಶಕ್ರಭವನಂ ಖಂ ದಿವಂ ನಭಃ'' ಎಂದು ತ್ರಿಕಾಂಡಶೇಷದಲ್ಲಿದೆ. ''ಸ್ಯಾದ್ದಿವೋಕಾ ದಿವೌಕಾಶ್ಚ ದೇವೇ ವಾಽಪೀಹ ಪಕ್ಷಿಣಿ'' ಎಂದು ರಂತಿದೇವ. ''ದಿವೋಕಾಶ್ಚ ದಿವೌಕಾಶ್ಚ ಪುಂಸಿ ದೇವೇ ಚ ಚಾತಕೇ'' ಎಂದೂ ಕೋಶವಿದೆ. ।।೩೪।।

**ಅಗ್ನಿರ್ಮುಖಂ ಯಸ್ಯ ತು ಜಾತವೇದಾ**
**ಜಾತಃ ಕ್ರಿಯಾಕಾಂಡನಿಮಿತ್ತಜನ್ಮಾ ।**
**ಅಂತಃ ಸಮುದ್ರೇಽನುಪಚನ್ ಸ್ವಧಾತೂನ್**
**ಪ್ರಸೀದತಾಂ ನಃ ಸ ಮಹಾವಿಭೂತಿಃ** ॥೩೫॥

**ಕ್ರಿಯಾಕಾಂಡನಿಮಿತ್ತಜನ್ಮಾ** ಅಗ್ನಿಹೋತ್ರಾದಿ ಕರ್ಮಕಾಂಡದಲ್ಲಿ ಅಮುಖ್ಯವಾಗಿ ಹೇಳಿದ ಕರ್ಮಗಳಲ್ಲಿ ಅಗ್ನಿಯ ಮೂಲಕ ಇಂದ್ರಾದಿದೇವತೆಗಳಿಗೆ ಅವರವರ ಹವಿರ್ಭಾಗವನ್ನು ಹೊಂದಿಸುವದಕ್ಕಾಗಿ ಅರಣಿಮಥನ ಮಾಡಿ ಅಗ್ನಿಯನ್ನು ವ್ಯಕ್ತಪಡಿಸುವದರಿಂದ ಉತ್ಪತ್ತಿಯುಳ್ಳ **ಜಾತವೇದಾಃ** ಹುಟ್ಟಿದ್ದನ್ನೆಲ್ಲ ತಿಳಿಯುವ **ಅಗ್ನಿಃ** ಜಡ ಅಗ್ನಿಗೆ ಅಭಿಮಾನಿದೇವತೆಯು **ಯಸ್ಯ** ಯಾವ ವಿಷ್ಣುವಿನ **ಮುಖಂ** ಮುಖಾತ್ ಮುಖದಿಂದ **ಜಾತಃ** ಹುಟ್ಟಿದನೋ (ಸಪ್ತಸು ಪ್ರಥಮಾ ಎಂದಿರುವದರಿಂದ ಮುಖಾತ್ ಎಂಬ ಪಂಚಮೀ ಅರ್ಥದಲ್ಲಿ ಮುಖಂ ಎಂದು ಪ್ರಥಮಾ ಇದೆ ಎಂದು ತಿಳಿಯಬೇಕು.) **ಸಮುದ್ರೇ** ಪ್ರಾಣಿಗಳ ಉದರದಲ್ಲಿ **ಅಂತಃ** ಒಳಗೆ ಇದ್ದುಕೊಂಡು **ಸ್ವಧಾತೂನ್** ಪಚನಕ್ಕಾಗಿ ಒದಗಿಸಿದ ಲೇಹ್ಯ-ಚೋಷ್ಯ-ಪೇಯ-ಭಕ್ಷ್ಯಗಳೆಂಬ ನಾಲ್ಕುವಿಧ ಆಹಾರಪದಾರ್ಥಗಳನ್ನು **ಪಚತಃ** ಜೀರ್ಣಮಾಡುತ್ತಿರುವ ಅಗ್ನಿಯನ್ನು ಸೃಷ್ಟಿಸಿದ **ಸಃ ಮಹಾವಿಭೂತಿಃ** ಶ್ರೀಹರಿಯು **ನಃ ಪ್ರಸೀದತಾಂ** ನಮಗೆ ಪ್ರಸನ್ನನಾಗಲಿ. ಇದರಿಂದ ಅಗ್ನಿಗೆ ಈ ಶಕ್ತಿಕೊಟ್ಟವನು ಶ್ರೀಹರಿಯೇ ಎಂದು ತಿಳಿಯಬೇಕು.

ಸತ್ಯ ಃ- ಅಗ್ನಿಯು ಶ್ರೀಹರಿಯ ಮುಖದಿಂದ ಜನಿಸಿ ಮುಖವನ್ನಾಶ್ರಯಿಸಿಕೊಂಡು ಇರುವನು. ''ಮುಖಾದಿಂದ್ರಾಶ್ಚಾಗ್ನಿಶ್ಚ'' ''ಯಸ್ಮಾದ್ಯಜ್ಜಾಯತೇ ಚಾಂಗಾತ್ ಲೋಕವೇದಾದಿಕಂ ಹರೇಃ ತನ್ನಾಮವಾಚ್ಯಮಂಗಂ ತತ್'' ಎಂದಿರುವದರಿಂದ ಶ್ರೀಹರಿಯ ಯಾವ ಅಂಗದಿಂದ ಯಾವುದು ಹುಟ್ಟುವದೋ ಆ ನಾಮದಿಂದ ಆ ಅಂಗವನ್ನು ಕರೆಯುವರು. ಆದ್ದರಿಂದ ''ಅಗ್ನಿಃ ಮುಖಂ'' ಎಂದಿದ್ದಾರೆ.

ಅಗ್ರಣಿ ಎಂಬರ್ಥದಲ್ಲಿ ಅಗ್ನಿಶಬ್ದವಿರುವದರಿಂದ ಜಾತವೇದನೆಂದು ವಿಶೇಷಣ ಕೊಟ್ಟಿರುವರು. ''ಅಗ್ನಿರ್ವಾಽಹಮಸ್ಮೀತ್ಯಬ್ರವೀತ್ ಜಾತವೇದಾ ವಾ ಅಹಮಸ್ಮೀತಿ'' ಈ ವಿಶೇಷಣವೂ ಎಲ್ಲವನ್ನೂ ತಿಳಿಯುವವನಿಗೆ ಬರುವದರಿಂದ ''ಕ್ರಿಯಾಕಾಂಡನಿಮಿತ್ತ-ಜನ್ಮಾ'' ಎಂದಿರುವರು. ''ಅಗ್ನಿರ್ವೈದೇವಾನಾಂ ಮುಖಂ ಹೃದಯತಮಃ । ತದ್ವಸವ ಉಪಜೀವಂತಿ ಅಗ್ನಿನೈವ ಮುಖೇನ'' ''ಅನ್ನಮಶಿತಂ ತ್ರೇಧಾ ವಿಧೀಯತೇ ತಸ್ಯ ಯಃ ಸ್ಥವಿಷ್ಠೋ ಧಾತುಃ ತತ್ಪುರೀಷಂ ಭವತಿ ಯೋ ಮಧ್ಯಮಃ ತನ್ಮಾಂಸಂ ಯೋ ಅಣು ತನ್ಮನಃ । (ತಿಂದ ಆಹಾರಹವು ಮೂರು ರೀತಿಯಾಗಿ ಪಚನವಾಗುವದು ಅತಿಸ್ಥೂಲವಾದ ಆಹಾರ ಮಲವಾಗುವದು ಸ್ಥೂಲವಾದುದು ಮಾಂಸವಾಗುವದು, ಸೂಕ್ಷ್ಮಭಾಗವು ಮನಸ್ಸಾಗುವದು.)

''ಅಹಂ ವೈಶ್ವಾನರೋ ಭೂತ್ವಾ'' ''ಪಚಾಮ್ಯನ್ನಂ ಚತುರ್ವಿಧಮ್'' ಇಂತಹ ಎಲ್ಲ ಪ್ರಾಣಿಗಳಿಗೆ ಉಪಕಾರಕವಾದ ಅಗ್ನಿಜನಕತ್ವರೂಪ ಐಶ್ವರ್ಯವುಳ್ಳವನು ಪರಮಾತ್ಮ ಎಂಬುದರಿಂದ ಅಗ್ನಿಯಿಂದ ಅಭಿಮನ್ಯಮಾನವಾದ ವಾಕ್ ಪದಾರ್ಥಕ್ಕೂ ಶ್ರೀಹರಿಯ ಮುಖವೇ ಉತ್ಪತ್ತಿಸ್ಥಾನವೆಂದು ತಿಳಿಸಿರುವರು. ''ವಾಚೋ ವಹ್ನೇಃ ಮುಖಂ ಕ್ಷೇತ್ರಮ್'' ಎಂದು ದ್ವಿತೀಯಸ್ಕಂಧ ಭಾಗವತದಲ್ಲಿಯೇ ಹೇಳಿದೆ.

ಈ ಶ್ಲೋಕದಲ್ಲಿ ಸಮುದ್ರಶಬ್ದಕ್ಕೆ ಪ್ರಸಿದ್ಧ ಸಮುದ್ರವೆಂದರ್ಥವಲ್ಲ ಎಂದು ಹೇಳುವರು.

**...ತಾತ್ಪರ್ಯ...**

**ಸಮುದ್ರೇ ಉದರೇ ।**

''ಕುಕ್ಷ್ಯಃ ಸಮುದ್ರಾ ಗಿರಯೋಽಸ್ಥಿಸಂಘಾಃ'' ಎಂದಿದೆ. ಆದ್ದರಿಂದ ಜನ್ಯವಾದ ಸಮುದ್ರವಾಚಕ ಸಮುದ್ರಶಬ್ದದಿಂದ ಜನಕವಾದ ಕುಕ್ಷಿಯನ್ನು ಸ್ವೀಕರಿಸಿದೆ. ಜಾತಂ ವೇತ್ತೀತಿ ಜಾತವೇದಾಃ । ಅಥವಾ ಜಾತಂ ವೇದೋ ಧನಂ ಯಸ್ಮಾತ್ ಸಃ ಜಾತವೇದಾಃ । ಎರಡು ಪಕ್ಷಗಳಲ್ಲಿಯೂ ''ವಿದಲೃ ಲಾಭೇ'' ''ವಿದ ಜ್ಞಾನೇ'' ಎಂಬ ಧಾತುವಿನ ಮೇಲೆ ಅಸುನ್ ಪ್ರತ್ಯಯ. ''ಸಮುದ್ರೇಽನುಪಚನ್'' ಎಂಬ ಪಾಠ ಸರಳವಾದುದು. ''ಅಹಂ ವೈಶ್ವಾನರೋ'' ಎಂಬ ವಾಕ್ಯದ ಪ್ರಕಾರ ಮುಖ್ಯಪಾಚಕತ್ವ ಭಗವಂತನಿಗೆ, ಅನುಪದದಿಂದ ಅಗ್ನಿಗೆ ಅಮುಖ್ಯಪಾಚಕತ್ವ ಇದೆ ಎಂದು ತಿಳಿಯುವದು. ।।೩೫।।

**ಯಚ್ಚಕ್ಷುರಾಸೀತ್ ತರಣೇರ್ದೇವಯಾನಂ**
**ತ್ರಯೀಮಯೋ ಬ್ರಹ್ಮಣ ಏಷ ಧಿಷ್ಣ್ಯಮ್ ।**
**ದ್ವಾರಂ ಚ ಮುಕ್ತೇರಮೃತಸ್ಯ ಮೃತ್ಯೋಃ**
**ಪ್ರಸೀದತಾಂ ನಃ ಸ ಮಹಾವಿಭೂತಿಃ ।।೩೬।।**

**ದೇವಯಾನಂ** ಸಂಸಾರವನ್ನು ಬಿಟ್ಟು ಹೋದ ದೇವತೆಗಳಿಗೆ ಮಾರ್ಗನಾದ ಉತ್ತರಾಯಣ ಮಾರ್ಗದೇವತೆಯಾದ ''ಅಥೋತ್ತರೇಣ ತಪಸಾ ಬ್ರಹ್ಮಚರ್ಯೇಣ ಶ್ರದ್ಧಯಾ ವಿದ್ಯಯಾ ಆತ್ಮಾನಮನ್ವಿಷ್ಯ ಆದಿತ್ಯಮಭಿಜಯಂತೇ'' ಎಂಬ ಶ್ರುತಿಯಲ್ಲಿ ಈ ವಿಷಯವನ್ನು ಹೇಳಿದೆ. **ತ್ರಯೀಮಯಃ** ತ್ರಯ್ಯಾ ಮೀಯತೇ ಇತಿ **ತ್ರಯೀಮಯಃ** ಅಂದರೇ ಮೂರು ವೇದಗಳಿಂದ ತಿಳಿಯುವ ವೇದಪ್ರತಿಪಾದ್ಯಪ್ರಧಾನನಾದ **ಬ್ರಹ್ಮಣಃ** ನಾರಾಯಣನ **ಧಿಷ್ಣ್ಯಂ** ಅಭಿವ್ಯಕ್ತಿಸ್ಥಾನನಾದ ''ಯಶ್ಚಾಸಾವಾದಿತ್ಯೇ'' ''ಧ್ಯೇಯಸ್ಸದಾ ಸವಿತೃಮಂಡಲಮಧ್ಯವರ್ತೀ'' **ಅಮೃತಸ್ಯ** ಜ್ಞಾನಿಗಳಿಗೆ ದೊರೆಯುವ ಸುಖರೂಪವಾದ **ಮೃತ್ಯೋಃ** ಸಂಸಾರದಿಂದ **ಮುಕ್ತೇಃ** ಮೋಚನೆಗೆ **ದ್ವಾರಂ** ಮಾರ್ಗನಾದ ಅಥವಾ ಜ್ಞಾನಿಗಳ ಮುಕ್ತಿಗೂ ಅಜ್ಞಾನಿಗಳ ಸಂಸಾರಕ್ಕೂ ಕಾರಣನಾದ **ಏಷ ತರಣಿಃ** ಈ ಸೂರ್ಯನು **ಯಚ್ಚಕ್ಷುಃ**

**ಆಸೀತ್** ಯಾವನ ಕಣ್ಣಿನಿಂದ ಸೃಷ್ಟನಾದನೋ **ಸಃ** ಆ **ಮಹಾವಿಭೂತಿಃ** ಮಹಾವಿಭೂತಿಯಾದ ವಿಷ್ಣುವು **ನಃ** ನಮ್ಮ ಮೇಲೆ **ಪ್ರಸೀದತಾಂ** ಪ್ರಸನ್ನನಾಗಲಿ.

**ದೇವಸ್ಯ** ಕಾಂತ್ಯಾದಿಗುಣವುಳ್ಳ ಉತ್ತರಾಯಣದಲ್ಲಿ ಮುಕ್ತರಾಗುವ ಚೇತನವರ್ಗಕ್ಕೆ **ಯಾನಂ** ಮುಕ್ತಿಗೆ ಮಾರ್ಗನಾದ ಎಂದು ಲಿಂಗೇರೀ ಆಚಾರ್ಯರು ಅರ್ಥ ಮಾಡಿರುವರು.

ಸತ್ಯ ಃ- ಸನ್ಮುಕ್ತಿ ಅಸನ್ಮುಕ್ತಿ ಎಂದು ಮುಕ್ತಿಯು ಎರಡು ವಿಧವಾಗಿದೆ. ಇಲ್ಲಿ ಯಾವ ಮುಕ್ತಿಯನ್ನು ಸ್ವೀಕರಿಸಬೇಕೆಂಬ ಪ್ರಶ್ನೆಗೆ ಅಮೃತಸ್ಯ ಎಂಬುದು ಉತ್ತರ. **ಅಮೃತಸ್ಯ ನ ವಿದ್ಯತೇ ಮೃತಂ ಮೃತಿಃ ಯಾಚನಂ ತದುಪಲಕ್ಷಿತದೈನ್ಯಂ ಯತ್ರ ತದಮೃತಮ್** ಅಂದರೆ ಮರಣ-ದೈನ್ಯದಿಂದ ಬೇಡುವದು ಎಲ್ಲಿ ಇಲ್ಲವೋ ಅಂಥ ಸನ್ಮುಕ್ತಿಗೆ ಎಂದರ್ಥ. ''ಮೃತಂ ಸ್ಯಾದ್ಯಾಚಿತೇ ಮೃತ್ಯೌ'' ಎಂದು ವಿಶ್ವವಿದೆ.

ಮಹಾವಿಭೂತ್ಯಾ ಸಹಿತಃ **ಸಮಹಾವಿಭೂತಿಃ** ಎಂದು ಒಂದೇ ಪದ. ಮಹಾಲಕ್ಷ್ಮೀ-ಸಹಿತನೆಂದರ್ಥ. ತರಂತಿ ಅನೇನ ಸಂಸಾರಂ ಪುರುಷಾ ಇತಿ ತರಣಿಃ ಎಂಬ ಅವನ ಹೆಸರಿನಿಂದ ಸೂಚಿತವಾದ ಅರ್ಥವನ್ನೇ ದೇವಯಾನಂ ಮುಂತಾಗಿ ಹೇಳಿರುವರು.

ಮುಕ್ತೇಃ ಎಂಬುದಕ್ಕೆ ಅಮೃತಸ್ಯ ಎಂದು ವಿಶೇಷಣ ಕೊಟ್ಟದ್ದರಿಂದ ಸುಖಪ್ರಾಪ್ತಿ-ತಮಃಪ್ರಾಪ್ತಿರೂಪವಾದ ಎರಡು ಬಗೆಯ ಸಂಸಾರಮುಕ್ತಿಗಳಲ್ಲಿ ಯಾವ ಮುಕ್ತಿಯನ್ನು ಇಲ್ಲಿ ಸ್ವೀಕರಿಸಬೇಕೆಂಬುದನ್ನು ಬಿಡಿಸಿ ಹೇಳಿದಂತಾಯಿತು. ಈ ಶ್ಲೋಕದಲ್ಲಿ ಮುಕ್ತೇಃ ಅಮೃತಸ್ಯ ಎಂದು ಒಂದೇ ಅರ್ಥದ ಎರಡು ಪದಗಳಿವೆ. ಆದ್ದರಿಂದ ಯಾವುದಾದರೂ ಒಂದು ಪದ ವ್ಯರ್ಥ ಎಂದರೆ ವಿವಕ್ಷಿತ ಅರ್ಥಪರವಾದ ಯೋಜನೆ ತಿಳಿಸುವರು.

**...ತಾತ್ಪರ್ಯ...**

**ಅಮೃತಸ್ಯೇತಿ ಮುಕ್ತೇರಿತ್ಯಸ್ಯ ವಿಶೇಷಣಮ್ ।**

ಅಮೃತಸ್ಯ ಎಂಬುದು ಮುಕ್ತಿಪದಕ್ಕೆ ವಿಶೇಷಣವಾಗಿದೆ. ಸ್ವತಂತ್ರವಾಗಿ ಮುಕ್ತಿವಾಚಕವಲ್ಲ. ಆದ್ದರಿಂದ ಪೌನರುಕ್ತ್ಯಪ್ರಯುಕ್ತವಾದ ವೈಯರ್ಥ್ಯವು ಇರುವುದಿಲ್ಲ. ಸುಖಾನುಭವರೂಪಮುಕ್ತಿಗೆ ದ್ವಾರನೆಂದರ್ಥ.

ಮತ್ತು ''ದ್ವಾರಂ ಚ ಮುಕ್ತೇರಮೃತಸ್ಯ'' ಎಂದು ಉತ್ತರಾರ್ಧದಲ್ಲಿ ಚಶಬ್ದ ಇರುವದರಿಂದ ಮುಕ್ತಿಗೆ ದ್ವಾರ ಮತ್ತು ಸಮುದ್ರಮಥನದಿಂದ ಜನಿಸಿದ ಪ್ರಸಿದ್ಧ ಅಮೃತಕ್ಕೂ ದ್ವಾರ ಎಂದು ಅರ್ಥ ತೋರುತ್ತದೆ. ಅದರಲ್ಲಿ ಸೂರ್ಯನಿಗೆ ಮುಕ್ತಿದ್ವಾರತ್ವವು,

**ತತೋಽಹಃ ಪೂರ್ವಪಕ್ಷಂ ಚಾಪ್ಯುದಕ್ ಸಂವತ್ಸರಂ ತಥಾ ।**
**ತಟಿತಂ ವರುಣಂ ಚೈವ ಪ್ರಜಾಪಂ ಸೂರ್ಯಮೇವ ಚ ॥**

ಮುಂತಾಗಿ ಫಲಾಧ್ಯಾಯ ಮೂರನೇ ಪಾದದಲ್ಲಿ ಉದಾಹರಿಸಿದ ಬ್ರಹ್ಮತರ್ಕ ಪ್ರಮಾಣದಿಂದ ಸಿದ್ಧವಾಗಿದೆ. ಆದರೆ ಪ್ರಸಿದ್ಧ ಅಮೃತದ್ವಾರತ್ವವು ಕೂಡಲಾರದು. ಆ ವಿಷಯದಲ್ಲಿ ಪ್ರಮಾಣವಿಲ್ಲ. ಆದ್ದರಿಂದ ಸೂರ್ಯನು ಪ್ರಸಿದ್ಧ ಅಮೃತಮಾರ್ಗನಾಗಲಾರ ಎಂಬ ಶಂಕೆಯು ಪರಿಹೃತವಾಯಿತು. ಇಲ್ಲಿ ಹೇಳಿದ ಮುಕ್ತಿಯು ''ಅಪಾಮ ಸೋಮಂ ಅಮೃತಾ ಅಭೂಮ'' ಎಂದು ಹೇಳಿದ ಅಮುಖ್ಯ ಮುಕ್ತಿಯಲ್ಲ. ಕಿಂತು ಉತ್ಪತ್ತಿ-ಮರಣಗಳಿಲ್ಲದ ಮುಖ್ಯಮುಕ್ತಿ ಎಂದು ''ಅಮೃತಸ್ಯ'' ಎಂಬ ವಿಶೇಷಣದಿಂದ ತಿಳಿಸಿದಂತಾಯಿತು. ಮೃತಂ ಮೃತಿಃ ನಾಸ್ತಿ ಯತ್ರ ತತ್ ಅಮೃತಂ ಎಂದು ವಿಗ್ರಹ. ॥೩೬॥

**ಪ್ರಾಣಾದಭೂದ್ಯಸ್ಯ ಚರಾಚರಾಣಾಂ**
**ಪ್ರಾಣಃ ಸಹೋ ವೈ ಬಲಮೋಜಶ್ಚ ವಾಯುಃ ।**
**ಅನ್ವಾಸ್ಮ ಸಮ್ರಾಜಮಿವಾನುಗಾ ವಯಂ**
**ಪ್ರಸೀದತಾಂ ನಃ ಸ ಮಹಾವಿಭೂತಿಃ** ॥೩೭॥

**ಚರಾಚರಾಣಾಂ** ಜಂಗಮ-ಸ್ಥಾವರಪ್ರಾಣಿಗಳ **ಪ್ರಾಣಃ** ಪ್ರಾಣಕ್ಕೆ **ಸಹಃ** ಸಹನಶಕ್ತಿಗೆ **ಬಲಂ** ಶರೀರಬಲಕ್ಕೆ **ಓಜಃ** ಪರಪ್ರಹಾರನಿರೋಧಶಕ್ತಿ ಶತ್ರುಗಳ ಹೊಡೆತಗಳನ್ನು ತಡೆದುಕೊಳ್ಳುವ ಶಕ್ತಿಗೆ ಕಾರಣರಾದ ಸ್ವಯಂ ಸಹೋಬಲ ಓಜೋಬಲವಿಶಿಷ್ಟರಾದ **ವಾಯುಃ** ಭೂತವಾಯುವು ಅದಕ್ಕೆ ನಿಯಾಮಕರಾದ **ಪ್ರಾಣಃ** ಪ್ರಾಣದೇವರು **ಯಸ್ಯ** ಯಾವ ಶ್ರೀಹರಿಯ **ಪ್ರಾಣಾತ್** ಸಹಸ್ಸು-ಓಜಸ್ಸು- ಬಲಗಳೆಂಬ ಗುಣಗಳಿಂದ ಕೂಡಿದ ಸ್ವರೂಪದಿಂದ ಪ್ರಾಣದಿಂದ **ಅಭೂತ್** ಹುಟ್ಟಿದರೋ **ವೈ** ಇದು ಶ್ರುತಿಪ್ರಸಿದ್ಧವಾಗಿದೆ. ಮತ್ತು **ವಯಂ** ನಾವು ಬ್ರಹ್ಮಾದಿದೇವತೆಗಳು **ಯಂ** ಯಾವ ಪ್ರಾಣದೇವರನ್ನು **ಅನುಗಾಃ ಸಂತಃ** ಅನುಚರರಾಗಿ **ಸಮ್ರಾಜಂ ಇವ** ಚಕ್ರವರ್ತಿಯಂತೆ **ಅನ್ವಾಸ್ಮ** ಅನುಸರಿಸಿ ಇರುವೆವೋ (ಬ್ರಹ್ಮದೇವರು ವಾಯುದೇವರು) ಒಂದೇ ಕಕ್ಷೆಯವರಾದ್ದರಿಂದ ಅವರ ವಿಷಯದಲ್ಲಿ ಚಕ್ರವರ್ತಿಯೋ ಎಂಬಂತೆ ಎಂದರ್ಥ. ಮಿಕ್ಕ ದೇವತೆಗಳಾದ ರುದ್ರಾದಿಗಳ ವಿಷಯದಲ್ಲಿ ಚಕ್ರವರ್ತಿಯನ್ನೇ ಅನುಸರಿಸಿ ಎಂದರ್ಥ. ಅಂತಹ ಪ್ರಾಣದೇವರು ಯಾವನ ಪ್ರಾಣದಿಂದ ಹುಟ್ಟಿದರೋ **ಸಃ** ಆ **ಮಹಾವಿಭೂತಿಃ** ಮಹಾವಿಭೂತಿಯಾದ ವಿಷ್ಣುವು **ನಃ** ನಮ್ಮ ಮೇಲೆ **ಪ್ರಸೀದತಾಂ** ಪ್ರಸನ್ನನಾಗಲಿ. ಎಂದು ಅನ್ವಯ.

ಪರಮಾತ್ಮನಿಂದ ಪ್ರಾಣದೇವರು ಜನಿಸಿದ್ದಾರೆ ಎಂಬ ವಿಷಯವು ಷಟ್ಪ್ರಶ್ನದ ಈ ವಾಕ್ಯಗಳಿಂದ ಪ್ರಸಿದ್ಧವಾಗಿದೆ. ''ಆತ್ಮತ ಏಷ ಪ್ರಾಣೋ ಜಾಯತೇ ತಾನ್ ವರಿಷ್ಠಃ ಪ್ರಾಣ ಉವಾಚ ಮಾ ಮೋಹಮಾಪದ್ಯತ ಅಹಮೇವೈತತ್ಪಂಚಧಾ ಆತ್ಮಾನಂ ವಿಭಜ್ಯ ಏತದ್ಬಾಣಮವಷ್ಟಭ್ಯ ವಿಧಾರಯಾಮೀತಿ । ತೇ ಪ್ರೀತಾಃ ಪ್ರಾಣಂ ಸ್ತುವಂತಿ ಏಷೋಽಗ್ನಿಸ್ತಪತಿ ಏಷ ಸೂರ್ಯಃ ಪ್ರಾಣೈಕಋಷಿರತ್ತಾ ವಿಶ್ವಸ್ಯ ಸತ್ಪತಿಃ ವಯಮದ್ಯಸ್ಯ ದಾತಾರಃ ಪಿತಾ ತ್ವಂ ಮಾತರಿಶ್ವನಃ''.

''ಯಥಾ ಸಮ್ರಾಡೇವಾಧಿಕೃತೋ ನಿಯುಂಕ್ತೇ ಏತಾನ್ ಗ್ರಾಮಾನ್ ಅಧಿತಿಷ್ಠಸ್ವ ಏತಾನ್ ಗ್ರಾಮಾನ್ ಅಧಿತಿಷ್ಠಸ್ವ ಇತ್ಯೇವ ಮೇ ಏಷ ಪ್ರಾಣ ಇತರಾನ್ ಪ್ರಾಣಾನ್ ಪೃಥಕ್ ಪೃಥಗೇವ ಸನ್ನಿಧತ್ತೇ'' ಮುಂತಾದ ಶ್ರುತಿಪ್ರಸಿದ್ಧದ್ಯೋತಕವಾಗಿದೆ ವೈ ಶಬ್ದ. ''ಪಾಯೂಪಸ್ಥೇ ಅಪಾನಂ ಚಕ್ಷುಃಶ್ರೋತ್ರೇ ಮುಖನಾಸಿಕಾಭ್ಯಾಂ ಪ್ರಾಣಃ ಸ್ವಯಂ ಪ್ರತಿಷ್ಠತೇ'' ಎಂಬ ಷಟ್ಪ್ರಶ್ನಶ್ರುತಿಶೇಷವನ್ನು ಇಲ್ಲಿ ತಿಳಿಯಬೇಕು. ಅಥವಾ ಅನುಚರರಾದ ನಾವು ಚಕ್ರವರ್ತಿಯಾದ ಯಾವ ಶ್ರೀಹರಿಯನ್ನು ಅನ್ವಾಸ್ಮ ಏವ ಅನುಸರಿಸಿಕೊಂಡಿರುವವರೇ ಆಗಿದ್ದೇವೆಯೋ ಅಂಥ ಪರಮಾತ್ಮನು ಪ್ರಸನ್ನನಾಗಲಿ. ಜೀವರಲ್ಲಿ ಸರ್ವೋತ್ತಮರಾದ ವಾಯುದೇವರನ್ನು ಸೃಷ್ಟಿಸುವ ಮಹಾವಿಭೂತಿಯುಳ್ಳವನು ಶ್ರೀಹರಿ. ''ಪ್ರಾಣಸ್ಯ ಪ್ರಾಣಮುತ ಚಕ್ಷುಷಃ ಚಕ್ಷುಃ'' ಎಂಬ ಶ್ರುತಿ ಈ ಪ್ರಮೇಯವನ್ನು ತಿಳಿಸುತ್ತದೆ. ।।೩೭।।

**ಶ್ರೋತ್ರಾದ್ ದಿಶೋ ಯಸ್ಯ ಹೃದಶ್ಚ ಖಾನಿ**
**ಪ್ರಜಜ್ಞಿರೇ ಖಂ ಪುರುಷಸ್ಯ ನಾಭೇಃ ।**
**ಪ್ರಾಣೇಂದ್ರಿಯಾತ್ಮಾ ಸ್ವಶರೀರಬಂಧುಃ**
**ಪ್ರಸೀದತಾಂ ನಃ ಸ ಮಹಾವಿಭೂತಿಃ ।।೩೮।।**

**ಯಸ್ಯ ಪುರುಷಸ್ಯ** ಯಾವ ಪುರುಷನಾಮಕ ಶ್ರೀಹರಿಯ **ಶ್ರೋತ್ರಾತ್** ಕಿವಿಯಿಂದ **ದಿಶಃ** ದಿಕ್ಕುಗಳು ದಿಗಭಿಮಾನಿಗಳಾದ ಚಂದ್ರಾದಿದೇವತೆಗಳು **ಹೃದಃ** ಹೃದಯದಿಂದ **ಖಾನಿ** ಮನಸ್ಸು ಮೊದಲಾದ ಇಂದ್ರಿಯಗಳು **ನಾಭೇಃ** ನಾಭ್ಯಾಃ ಹೊಕ್ಕಳಿನಿಂದ **ಖಂ** ಆಕಾಶವೂ ತದಭಿಮಾನಿದೇವತೆಯೂ **ಪ್ರಜಜ್ಞಿರೇ** ಹುಟ್ಟಿದವೋ **ಸಃ** ಆ **ಪ್ರಾಣೇಂದ್ರಿಯಾತ್ಮಾ ಪ್ರಾಣಾನಾಂ** ಮುಖ್ಯಪ್ರಾಣಗಳಿಗೆ **ಇಂದ್ರಿಯಾಣಾಂ** ಶ್ರೋತ್ರಾದಿ ಇಂದ್ರಿಯಗಳಿಗೆ **ಆತ್ಮಾ** ನಿಯಾಮಕನಾಗಿರುವ ಸ್ವಾಮಿಯಾದ ಪ್ರಾಣಾಪಾನಾದಿಗಳನ್ನು ಇಂದ್ರಿಯಗಳನ್ನು ವ್ಯಾಪಿಸಿರುವ **ಸ್ವಶರೀರಬಂಧುಃ** ತನ್ನ ಶರೀರಸ್ಥಾನೀಯವಾದ ಪೃಥಿವೀದೇವತೆಗೆ ಬಂಧುವಾದ **ಸಃ** ಆ **ಮಹಾವಿಭೂತಿಃ** ಮಹಾವಿಭೂತಿಯಾದ ವಿಷ್ಣುವು **ನಃ** ನಮ್ಮ ಮೇಲೆ **ಪ್ರಸೀದತಾಂ** ಪ್ರಸನ್ನನಾಗಲಿ.

ಸತ್ಯ ಃ- ''ಬ್ರಹ್ಮಣೋ ವಾ ಏತಾನಿ ಕರಣಾನಿ ಏತತ್ಸರ್ವಂ ಪರೇ ಆತ್ಮನಿ ಸಂಪ್ರತಿಷ್ಠತೇ ಪೃಥಿವೀ ಚ'' ಎಂದಾರಭಿಸಿ ''ಪ್ರಾಣಶ್ಚ ವಿಧಾರಯಿತವ್ಯಂ ಚ'' ಎಂಬಲ್ಲಿ ವರೆಗಿನ ಷಟ್ಪ್ರಶ್ನೋಪನಿಷತ್ ವಾಕ್ಯಗಳಿಂದ ಈ ಪ್ರಮೇಯವು ವಿಸ್ತಾರವಾಗಿ ಪ್ರತಿಪಾದಿತವಾಗಿದೆ. ತೈಜಸಾಹಂಕಾರಕಾರ್ಯವ್ಯಂಜಕವಾದ್ದರಿಂದ ಹೃದಯ- ಮನಸ್ಸು-ಇಂದ್ರಿಯಗಳು ಅಹಂಕಾರಜನ್ಯವೆಂದು ತಿಳಿಯಬೇಕು. (ಪೂರ್ವ ಟಿಪ್ಪಣಿಯಲ್ಲಿ ಕಾಠಕೋಪನಿಷದ್ ಎಂದು ಉಲ್ಲೇಖಿಸಿದ್ದು ಲೇಖಕ ಪ್ರಮಾದದಿಂದಾಗಿ ಎಂದು ತಿಳಿಯಬೇಕು.) ಇಲ್ಲಿ ನಾಭೇಃ ಎಂದರೂ ಛಂದಸ್ಸು ಭೇದವಾಗದಿದ್ದರೂ ''ನಾಭ್ಯಾ ಆಸೀದಂತರಿಕ್ಷಂ'' ಎಂಬ

ಶ್ರುತಿಯನ್ನು ಸ್ಮರಿಸುವದಕ್ಕಾಗಿ ನಾಭ್ಯಾಃ ಎಂದಿರುವರು ಎಂದು ತಿಳಿಯಬೇಕು. ಅಥವಾ ಈಕಾರಾಂತವಾದ ನಾಭೀ ಶಬ್ದ ಇದೆಂದು ತಿಳಿಯಬೇಕು. ''ಮುರಜಿನ್ನಾಭೀಸರೋಜೇ'' ಮುಂತಾಗಿ ಪ್ರಾಚೀನಪ್ರಯೋಗವೂ ಇದೆ. ''ದಿಶಃ ಶ್ರೋತಾತ್'' ''ನಾಭ್ಯಾ ಆಸೀದಂತರಿಕ್ಷಮ್'' ''ಯಃ ಪ್ರಾಣೇ ತಿಷ್ಠನ್'' ''ಯಃ ಪ್ರಾಣಃ ಅಂತರೋ ಯಮಯತಿ'' ''ಪ್ರಾಣಸ್ಯ ಪ್ರಾಣಮುತ ಚಕ್ಷುಷಶ್ಚಕ್ಷುಃ ಶ್ರೋತ್ರಸ್ಯ ಶ್ರೋತ್ರಮ್'' ಎಂದು ತತ್ತಚ್ಛಕ್ತಿಪ್ರದನಾಗಿ ಅವುಗಳಲ್ಲಿದ್ದಾನೆ ಎಂದು ಹೇಳಿದೆ. ''ದಿಶಾಂ ವತ್ಸಂ ವೇದ'' ಮುಂತಾಗಿ ಇರುವದರಿಂದ ದಿಙ್ನಾಮಕದೇವತಾ, ರಮಾ ಮತ್ತು ತದಿತರಆವಿರ್ಭಾವ ಅಭಿಮತ್ಯುತ್ಪಾದನ ಮುಂತಾದ ಮಹಾ ಐಶ್ವರ್ಯ ಇರುವ ಆ ಮಹಾವಿಭೂತಿಯು ಪ್ರಸನ್ನನಾಗಲಿ. ।।೩೮।।

''ಏವಂ ಧರ್ಮಾನ್ ಪೃಥಕ್ ಪಶ್ಯನ್ ತಾನೇವಾನುವಿಧಾವತಿ'' ಎಂದಿರುವದರಿಂದ ಗುಣಗಳು ಭಗವಂತನಿಂದ ಅಭಿನ್ನಗಳಾದುದರಿಂದ ಗುಣಗಳಿಂದಲೂ ಉತ್ಪತ್ತಿಯನ್ನು ಹೇಳುವರು-

**ಬಲಾನ್ಮಹೇಂದ್ರಸ್ತ್ರಿದಶಾಃ ಪ್ರಸಾದಾತ್**
**ಮನ್ಯೋರ್ಗಿರೀಶೋಽಶರಣಾದ್ವಿರಿಂಚಃ ।**
**ಖೇಭ್ಯಶ್ಚ ಛಂದಾಂಸ್ಯೃಷಯಸ್ತು ಮೇಢ್ರತಃ**
**ಪ್ರಸೀದತಾಂ ನಃ ಸ ಮಹಾವಿಭೂತಿಃ ।।೩೯।।**

**ಯಸ್ಯ** ಯಾವ ಶ್ರೀಹರಿಯ **ಬಲಾತ್** ಬಲದಿಂದ **ಮಹೇಂದ್ರಃ** ಶಚೀಪತಿಯಾದ ಪುರಂದರನೆಂಬ ಇಂದ್ರನು **ಪ್ರಸಾದಾತ್** ಅನುಗ್ರಹದಿಂದ ''ಪ್ರಸಾದೋಽನುಗ್ರಹಃ'' ಎಂದು ವಿಶ್ವವಿದೆ. ಅಥವಾ **ಏನಂ ಮೋಚಯಾಮಿ ಸೃಜಾಮಿ** ಎಂಬ ಇಚ್ಛಾವಿಶೇಷದಿಂದ ಎಂದಾದರೂ ಅರ್ಥ. ''ಪ್ರಸಾದೋ ನಾಮ ಇಚ್ಛಾವಿಶೇಷೋ ವಾ ಗುಣಾಂತರಂ ವಾ ನ ನಃ ಕಾಚಿತ್ಕ್ಷತಿಃ'' ಎಂದು ಶ್ರೀಮನ್ನ್ಯಾಯಸುಧೆಯಲ್ಲಿ ಹೇಳಿದೆ. ಆ ಗುಣಾಂತರ ಎಂದರೆ ಅನುಗ್ರಹವೇ. **ತ್ರಿದಶಾಃ** ಮೂರನೆಯ ದಶೆಯಾದ ನಿತ್ಯ ಯೌವ್ವನವೇ ಇರುವ ದೇವತೆಗಳೂ **ಮನ್ಯೋಃ** ಕೋಪದಿಂದ **ಗಿರೀಶಃ** ರುದ್ರದೇವರು **ಅಶರಣಾತ್** ತನ್ನಿಂದ ಭಿನ್ನವಾದ ಆಧಾರವಿಲ್ಲದ ಅಂದರೆ ತನಗೆ ತಾನೇ ಆಧಾರನಾದ ಶ್ರೀಹರಿಯಿಂದ **ವಿರಿಂಚಃ** ಬ್ರಹ್ಮದೇವರು ''ಕಿಂಸ್ವಿದಾಸೀದಧಿಷ್ಠಾನಮಾರಂಭಣಮ್'' ಮುಂತಾದ ಶ್ರುತಿವ್ಯಾಖ್ಯಾನವಾದ ಭಾಷ್ಯದಲ್ಲಿ ''ತಮಸ್ವಿತ್ ಕಥಾಸೀದಿತಿ ಹ್ಯಾಕ್ಷೇಪಃ, ಅಧಿಷ್ಠಾನಾದ್ಯನುಕ್ತೇಃ'' ಎಂದಿದ್ದಾರೆ. ಮತ್ತು ''ಸ್ವೇ ಮಹಿಮ್ನಿ ಸ್ಥಿತಃ'' ಎಂದು ಇದೆ. ಮುಂದೆ ಅಧಿಷ್ಠಾನಾದಿಗಳನ್ನು ಹೇಳದಿರುವದರಿಂದ ಇದು ಪ್ರಶ್ನೆಯಲ್ಲ. ಆಕ್ಷೇಪ. ಅಂದರೆ ಯಾವುದಿತ್ತು? ಯಾವುದೂ ಇರಲಿಲ್ಲವೆಂದರ್ಥ.

''ಯಥಾ ಸಮ್ರಾಡೇವಾಧಿಕೃತೋ ನಿಯುಂಕ್ತೇ ಏತಾನ್ ಗ್ರಾಮಾನ್ ಅಧಿತಿಷ್ಠಸ್ವ ಏತಾನ್ ಗ್ರಾಮಾನ್ ಅಧಿತಿಷ್ಠಸ್ವ ಇತ್ಯೇವ ಮೇ ಏಷ ಪ್ರಾಣ ಇತರಾನ್ ಪ್ರಾಣಾನ್ ಪೃಥಕ್ ಪೃಥಗೇವ ಸನ್ನಿಧತ್ತೇ'' ಮುಂತಾದ ಶ್ರುತಿಪ್ರಸಿದ್ಧದ್ಯೋತಕವಾಗಿದೆ ವೈ ಶಬ್ದ. ''ಪಾಯೂಪಸ್ಥೇ ಅಪಾನಂ ಚಕ್ಷುಃಶ್ರೋತ್ರೇ ಮುಖನಾಸಿಕಾಭ್ಯಾಂ ಪ್ರಾಣಃ ಸ್ವಯಂ ಪ್ರತಿಷ್ಠತೇ'' ಎಂಬ ಷಟ್ಪ್ರಶ್ನಶ್ರುತಿಶೇಷವನ್ನು ಇಲ್ಲಿ ತಿಳಿಯಬೇಕು. ಅಥವಾ ಅನುಚರರಾದ ನಾವು ಚಕ್ರವರ್ತಿಯಾದ ಯಾವ ಶ್ರೀಹರಿಯನ್ನು ಅನ್ವಾಸ್ತ್ರ ಏವ ಅನುಸರಿಸಿಕೊಂಡಿರುವವರೇ ಆಗಿದ್ದೇವೆಯೋ ಅಂಥ ಪರಮಾತ್ಮನು ಪ್ರಸನ್ನನಾಗಲಿ. ಜೀವರಲ್ಲಿ ಸರ್ವೋತ್ತಮರಾದ ವಾಯುದೇವರನ್ನು ಸೃಷ್ಟಿಸುವ ಮಹಾವಿಭೂತಿಯುಳ್ಳವನು ಶ್ರೀಹರಿ. ''ಪ್ರಾಣಸ್ಯ ಪ್ರಾಣಮುತ ಚಕ್ಷುಷಃ ಚಕ್ಷುಃ'' ಎಂಬ ಶ್ರುತಿ ಈ ಪ್ರಮೇಯವನ್ನು ತಿಳಿಸುತ್ತದೆ. ।।೩೭।।

**ಶ್ರೋತ್ರಾದ್ ದಿಶೋ ಯಸ್ಯ ಹೃದಶ್ಚ ಖಾನಿ**
**ಪ್ರಜಜ್ಞಿರೇ ಖಂ ಪುರುಷಸ್ಯ ನಾಭೇಃ ।**
**ಪ್ರಾಣೇಂದ್ರಿಯಾತ್ಮಾ ಸ್ವಶರೀರಬಂಧುಃ**
**ಪ್ರಸೀದತಾಂ ನಃ ಸ ಮಹಾವಿಭೂತಿಃ ।।೩೮।।**

**ಯಸ್ಯ ಪುರುಷಸ್ಯ** ಯಾವ ಪುರುಷನಾಮಕ ಶ್ರೀಹರಿಯ **ಶ್ರೋತ್ರಾತ್** ಕಿವಿಯಿಂದ **ದಿಶಃ** ದಿಕ್ಕುಗಳು ದಿಗಭಿಮಾನಿಗಳಾದ ಚಂದ್ರಾದಿದೇವತೆಗಳು **ಹೃದಃ** ಹೃದಯದಿಂದ **ಖಾನಿ** ಮನಸ್ಸು ಮೊದಲಾದ ಇಂದ್ರಿಯಗಳು **ನಾಭೇಃ** ನಾಭ್ಯಾಃ ಹೊಕ್ಕಳಿನಿಂದ **ಖಂ** ಆಕಾಶವೂ ತದಭಿಮಾನಿದೇವತೆಯೂ **ಪ್ರಜಜ್ಞಿರೇ** ಹುಟ್ಟಿದವೋ **ಸಃ** ಆ **ಪ್ರಾಣೇಂದ್ರಿಯಾತ್ಮಾ ಪ್ರಾಣಾನಾಂ** ಮುಖ್ಯಪ್ರಾಣಗಳಿಗೆ **ಇಂದ್ರಿಯಾಣಾಂ** ಶ್ರೋತ್ರಾದಿ ಇಂದ್ರಿಯಗಳಿಗೆ **ಆತ್ಮಾ** ನಿಯಾಮಕನಾಗಿರುವ ಸ್ವಾಮಿಯಾದ ಪ್ರಾಣಾಪಾನಾದಿಗಳನ್ನು ಇಂದ್ರಿಯಗಳನ್ನು ವ್ಯಾಪಿಸಿರುವ **ಸ್ವಶರೀರಬಂಧುಃ** ತನ್ನ ಶರೀರಸ್ಥಾನೀಯವಾದ ಪೃಥಿವೀದೇವತೆಗೆ ಬಂಧುವಾದ **ಸಃ** ಆ **ಮಹಾವಿಭೂತಿಃ** ಮಹಾವಿಭೂತಿಯಾದ ವಿಷ್ಣುವು **ನಃ** ನಮ್ಮ ಮೇಲೆ **ಪ್ರಸೀದತಾಂ** ಪ್ರಸನ್ನನಾಗಲಿ.

ಸತ್ಯ :- ''ಬ್ರಹ್ಮಣೋ ವಾ ಏತಾನಿ ಕರಣಾನಿ ಏತತ್ಸರ್ವಂ ಪರೇ ಆತ್ಮನಿ ಸಂಪ್ರತಿಷ್ಠತೇ ಪೃಥಿವೀ ಚ'' ಎಂದಾರಭಿಸಿ ''ಪ್ರಾಣಶ್ಚ ವಿಧಾರಯಿತವ್ಯಂ ಚ'' ಎಂಬಲ್ಲಿ ವರೆಗಿನ ಷಟ್ಪ್ರಶ್ನೋಪನಿಷತ್ ವಾಕ್ಯಗಳಿಂದ ಈ ಪ್ರಮೇಯವು ವಿಸ್ತಾರವಾಗಿ ಪ್ರತಿಪಾದಿತವಾಗಿದೆ. ತೈಜಸಾಹಂಕಾರಕಾರ್ಯವ್ಯಂಜಕವಾದ್ದರಿಂದ ಹೃದಯ- ಮನಸ್ಸು-ಇಂದ್ರಿಯಗಳು ಅಹಂಕಾರಜನ್ಯವೆಂದು ತಿಳಿಯಬೇಕು. (ಪೂರ್ವ ಟಿಪ್ಪಣಿಯಲ್ಲಿ ಕಾಠಕೋಪನಿಷದ್ ಎಂದು ಉಲ್ಲೇಖಿಸಿದ್ದು ಲೇಖಕ ಪ್ರಮಾದದಿಂದಾಗಿ ಎಂದು ತಿಳಿಯಬೇಕು.) ಇಲ್ಲಿ ನಾಭೇಃ ಎಂದರೂ ಛಂದಸ್ಸು ಭೇದವಾಗದಿದ್ದರೂ ''ನಾಭ್ಯಾ ಆಸೀದಂತರಿಕ್ಷಂ'' ಎಂಬ

ಶ್ರುತಿಯನ್ನು ಸ್ಮರಿಸುವದಕ್ಕಾಗಿ ನಾಭ್ಯಾಃ ಎಂದಿರುವರು ಎಂದು ತಿಳಿಯಬೇಕು. ಅಥವಾ ಈಕಾರಾಂತವಾದ ನಾಭೀ ಶಬ್ದ ಇದೆಂದು ತಿಳಿಯಬೇಕು. ''ಮುರಜಿನ್ನಾಭೀಸರೋಜೇ'' ಮುಂತಾಗಿ ಪ್ರಾಚೀನಪ್ರಯೋಗವೂ ಇದೆ. ''ದಿಶಃ ಶ್ರೋತಾತ್'' ''ನಾಭ್ಯಾ ಆಸೀದಂತರಿಕ್ಷಮ್'' ''ಯಃ ಪ್ರಾಣೇ ತಿಷ್ಠನ್'' ''ಯಃ ಪ್ರಾಣಃ ಅಂತರೋ ಯಮಯತಿ'' ''ಪ್ರಾಣಸ್ಯ ಪ್ರಾಣಮುತ ಚಕ್ಷುಷಶ್ಚಕ್ಷುಃ ಶ್ರೋತ್ರಸ್ಯ ಶ್ರೋತ್ರಮ್'' ಎಂದು ತತ್ತಚ್ಛಕ್ತಿಪ್ರದನಾಗಿ ಅವುಗಳಲ್ಲಿದ್ದಾನೆ ಎಂದು ಹೇಳಿದೆ. ''ದಿಶಾಂ ವತ್ಸಂ ವೇದ'' ಮುಂತಾಗಿ ಇರುವದರಿಂದ ದಿಙ್ನಾಮಕದೇವತಾ, ರಮಾ ಮತ್ತು ತದಿತರಆವಿರ್ಭಾವ ಅಭಿಮತ್ಯುತ್ಪಾದನ ಮುಂತಾದ ಮಹಾ ಐಶ್ವರ್ಯ ಇರುವ ಆ ಮಹಾವಿಭೂತಿಯು ಪ್ರಸನ್ನನಾಗಲಿ. ।।೩೮।।

''ಏವಂ ಧರ್ಮಾನ್ ಪೃಥಕ್ ಪಶ್ಯನ್ ತಾನೇವಾನುವಿಧಾವತಿ'' ಎಂದಿರುವದರಿಂದ ಗುಣಗಳು ಭಗವಂತನಿಂದ ಅಭಿನ್ನಗಳಾದುದರಿಂದ ಗುಣಗಳಿಂದಲೂ ಉತ್ಪತ್ತಿಯನ್ನು ಹೇಳುವರು-

**ಬಲಾನ್ಮಹೇಂದ್ರಸ್ತ್ರಿದಶಾಃ ಪ್ರಸಾದಾತ್**
**ಮನ್ಯೋರ್ಗಿರೀಶೋಽಶರಣಾದ್ವಿರಿಂಚಃ ।**
**ಖೇಭ್ಯಶ್ಚ ಛಂದಾಂಸ್ಯೃಷಯಸ್ತು ಮೇಢ್ರತಃ**
**ಪ್ರಸೀದತಾಂ ನಃ ಸ ಮಹಾವಿಭೂತಿಃ ।।೩೯।।**

**ಯಸ್ಯ** ಯಾವ ಶ್ರೀಹರಿಯ **ಬಲಾತ್** ಬಲದಿಂದ **ಮಹೇಂದ್ರಃ** ಶಚೀಪತಿಯಾದ ಪುರಂದರನೆಂಬ ಇಂದ್ರನು **ಪ್ರಸಾದಾತ್** ಅನುಗ್ರಹದಿಂದ ''ಪ್ರಸಾದೋಽನುಗ್ರಹಃ'' ಎಂದು ವಿಶ್ವವಿದೆ. ಅಥವಾ **ಏನಂ ಮೋಚಯಾಮಿ ಸೃಜಾಮಿ** ಎಂಬ ಇಚ್ಛಾವಿಶೇಷದಿಂದ ಎಂದಾದರೂ ಅರ್ಥ. ''ಪ್ರಸಾದೋ ನಾಮ ಇಚ್ಛಾವಿಶೇಷೋ ವಾ ಗುಣಾಂತರಂ ವಾ ನ ನಃ ಕಾಚಿತ್ಕ್ಷತಿಃ'' ಎಂದು ಶ್ರೀಮನ್ನ್ಯಾಯಸುಧೆಯಲ್ಲಿ ಹೇಳಿದೆ. ಆ ಗುಣಾಂತರ ಎಂದರೆ ಅನುಗ್ರಹವೇ. **ತ್ರಿದಶಾಃ** ಮೂರನೆಯ ದಶೆಯಾದ ನಿತ್ಯ ಯೌವ್ವನವೇ ಇರುವ ದೇವತೆಗಳೂ **ಮನ್ಯೋಃ** ಕೋಪದಿಂದ **ಗಿರೀಶಃ** ರುದ್ರದೇವರು **ಅಶರಣಾತ್** ತನ್ನಿಂದ ಭಿನ್ನವಾದ ಆಧಾರವಿಲ್ಲದ ಅಂದರೆ ತನಗೆ ತಾನೇ ಆಧಾರನಾದ ಶ್ರೀಹರಿಯಿಂದ **ವಿರಿಂಚಃ** ಬ್ರಹ್ಮದೇವರು ''ಕಿಂಸ್ವಿದಾಸೀದಧಿಷ್ಠಾನಮಾರಂಭಣಮ್'' ಮುಂತಾದ ಶ್ರುತಿವ್ಯಾಖ್ಯಾನವಾದ ಭಾಷ್ಯದಲ್ಲಿ ''ತಮಸ್ವಿತ್ ಕಥಾಸೀದಿತಿ ಹ್ಯಾಕ್ಷೇಪಃ, ಅಧಿಷ್ಠಾನಾದ್ಯನುಕ್ತೇಃ'' ಎಂದಿದ್ದಾರೆ. ಮತ್ತು ''ಸ್ವೇ ಮಹಿಮ್ನಿ ಸ್ಥಿತಃ'' ಎಂದು ಇದೆ. ಮುಂದೆ ಅಧಿಷ್ಠಾನಾದಿಗಳನ್ನು ಹೇಳದಿರುವದರಿಂದ ಇದು ಪ್ರಶ್ನೆಯಲ್ಲ. ಆಕ್ಷೇಪ. ಅಂದರೆ ಯಾವುದಿತ್ತು? ಯಾವುದೂ ಇರಲಿಲ್ಲವೆಂದರ್ಥ.

ಇಲ್ಲಿ ಮನ್ಯು ಎಂದರೆ ''ಕ್ರೋಧಃ ಕ್ಷಮಾತ್ಮಕಸ್ತಸ್ಯ ಚಿದಾನಂದಾತ್ಮಕಸ್ತಥಾ'' ಎಂದಿರುವದರಿಂದ ಕ್ಷಮಾರೂಪವಾದ ಜ್ಞಾನಾನಂದಾತ್ಮಕವಾದ ಕ್ರೋಧವನ್ನು ಸ್ವೀಕರಿಸಬೇಕು. ಅಥವಾ ಕೋಪಸದೃಶವಾದ ಶತ್ರುನಿಗ್ರಹೇಚ್ಛೆಯಿಂದ ಎಂದೂ ಅರ್ಥ ಮಾಡಿರುವರು. ನಿರ್ದೋಷನಾದ ಶ್ರೀಹರಿಗೆ ಯಾವ ಕೋಪವಿಲ್ಲವಾದರೂ ಸೃಷ್ಟರಾದ ರುದ್ರದೇವರಲ್ಲಿ ಕೋಪವಿದೆ ಎಂಬುದನ್ನು ತೋರಿಸಲು ಹಾಗೆ ಹೇಳಿದ್ದು. ಇದರಿಂದ ಕಾರಣದಲ್ಲಿರುವ ಗುಣಗಳು ಕಾರ್ಯದಲ್ಲಿ ಸಂಕ್ರಾಂತವಾಗುವವು ಎಂಬ ನಿಯಮವನ್ನು ಉಳಿಸಿಕೊಂಡು ಬಂದಿರುವನೆಂದು ತಿಳಿಯಬೇಕು ಎನ್ನುತ್ತಾರೆ ವಿಜಯಧ್ವಜತೀರ್ಥರು.

ಸತ್ಯ :- ಧಿಷಣಾತ್ ಎಂಬ ಪಾಠದಲ್ಲಿ ಬುದ್ಧಿಯಿಂದ ಬ್ರಹ್ಮದೇವರು ಜನಿಸಿದರು ಎಂದರ್ಥ. ಲಿಂಗಮಶಿಷ್ಯಂ ಲೋಕಾಶ್ರಯತ್ವಾತ್ ಎಂದ ಮಹಾಭಾಷ್ಯದಲ್ಲಿ ಹೇಳಿರುವದರಿಂದ ಲಿಂಗವು ಅತಂತ್ರ(ಅಸಾಧಕಂ) ಅಸಾಧಕವಾಗಿದೆ ಎಂದು ತಿಳಿಯಬೇಕು. ಧಿಷಾಣಾಶಬ್ದ ಸ್ತ್ರೀಲಿಂಗದ ಪಂಚಮಿಯು ಧಿಷಣಾಯಾಃ ಎಂದಾಗ ಬೇಕೆಂಬ ಶಂಕೆಗೆ ಉತ್ತರವಿದು.

''ಖೇಭ್ಯಶ್ಚ ಛಂದಾಂಸ್ಯೃಷಯೋ ಮೇಢ್ರತಃ ಕಃ'' ಎಂದೂ ಪಾಠಾಂತರವಿದೆ ಆಗ ಮೇಢ್ರತಃ ಕಃ ದಕ್ಷಪ್ರಜಾಪತಿಯು ಜನಿಸಿದ ಎಂದನ್ವಯ. ಅಂಥ ದೇವಾದಿಜನಕತ್ವ-ರೂಪವಾದ ಅದ್ಭುತಸಾಮರ್ಥ್ಯವುಳ್ಳ ಶ್ರೀಹರಿ ಪ್ರಸನ್ನನಾಗಲಿ. ಎಂದು ಅನ್ವಯವನ್ನು ಶ್ರೀಸತ್ಯಧರ್ಮರು ಹೇಳುತ್ತಾರೆ.

ಛಲಾರೀ :- ಅಥವಾ ಧಿಷಣಾಯಾಃ ಅತತಿ ಆಗಚ್ಛತಿ ಇತಿ ಧಿಷಣಾತ್ ಎಂದು ಪ್ರಥಮಾಂತವಾಗಿ ವಿರಿಂಚಪದದಿಂದ ಅನ್ವಯಿಸುವದು. **ಖೇಭ್ಯಃ** ಏಳು ಜ್ಞಾನೇಂದ್ರಿಯಗಳಿಂದ **ಛಂದಾಂಸಿ** ಏಳು ಛಂದಸ್ಸುಗಳು ಅವುಗಳನ್ನು ಅಧ್ಯಯನ ಮಾಡುವ **ಋಷಯಃ** ಮರೀಚ್ಯಾದಿಗಳು ಕರ್ದಮಾದಿಗಳು ಕೂಡ ಜ್ಞಾನೇಂದ್ರಿಯಗಳಿಂದ ಜನಿಸಿದರು.

ಲಿಂಗೇರೀ :- **ಮೇಢ್ರತಃ ತು** ಶಿಶ್ನದಿಂದಾದರೂ **ಕಃ** ದಕ್ಷಪ್ರಜಾಪತಿಯು ಜನಿಸಿದನು. ಕರ್ದಮಾದಿ ಋಷಿಗಳು ಮೇಢ್ರದಿಂದ ಜನಿಸಿದರು. ॥೩೯॥

**ಶ್ರೀರ್ವಕ್ಷಸಃ ಪಿತರಶ್ಛಾಯಯಾಽಽಸನ್**
**ಧರ್ಮಃ ಸ್ತನಾದಿತರಃ ಪೃಷ್ಠತೋಽಭೂತ್ ।**
**ದ್ಯೌರ್ಯಸ್ಯ ಶೀರ್ಷ್ಣೋಽಪ್ಸರಸೋ ವಿಹಾರಾತ್**
**ಪ್ರಸೀದತಾಂ ನಃ ಸ ಮಹಾವಿಭೂತಿಃ ॥೪೦॥**

**ವಕ್ಷಸಃ** ಯಾವ ಶ್ರೀಹರಿಯ ವಕ್ಷಸ್ಥಳದಿಂದ **ಶ್ರೀಃ** ಸಂಪತ್ತು, ಶೋಭೆಯು ಅಥವಾ ಲಕ್ಷ್ಮೀದೇವಿಯು ಬಂದಳೋ **ಛಾಯಯಾ** ಅವರಿಗಾಗಿಯೇ ಸೃಷ್ಟಿಸಿದ ನೆರಳಿನಿಂದ **ಪಿತರಃ**

ಪಿತೃಗಳು **ಆಸನ್** ಹುಟ್ಟಿದರೋ **ಸ್ತನಾತ್** ಸ್ತನದಿಂದ **ಧರ್ಮಃ** ಧರ್ಮಾಭಿಮಾನಿಯಾದ ಯಮನು **ಇತರಃ** ಅಧರ್ಮಾಭಿಮಾನಿಯಾದ ನಿರ್ಋತಿಯು **ಅಭೂತ್** ಜನಿಸಿದರೋ **ಯಸ್ಯ ಶೀರ್ಷ್ಣಃ** ಯಾವನ ತಲೆಯಿಂದ **ದ್ಯೌಃ** ಸ್ವರ್ಗಲೋಕವು **ಅಭೂತ್** ಜನಿಸಿತೋ **ವಿಹಾರಾತ್** ಕ್ರೀಡೆಯಿಂದ **ಅಪ್ಸರಸಃ** ಅಪ್ಸರಾಸ್ತ್ರೀಯರು ಜನಿಸಿದರೋ **ಸಃ** ಅಂಥ **ಮಹಾವಿಭೂತಿಃ** ಮಹಾವಿಭೂತಿಯು **ನಃ** ನಮಗೆ **ಪ್ರಸೀದತಾಂ** ಪ್ರಸನ್ನನಾಗಲಿ.

ಸತ್ಯ ಃ- ಹಿಂದೆ ಹೇಳಿದ, ಇಲ್ಲಿ ಹೇಳುತ್ತಿರುವ ಮುಂದೆ ಹೇಳುವ ಈ ಎಲ್ಲ ವಿಷಯಗಳಿಗೆ ''ಸಹಸ್ರಶೀರ್ಷಾ ಪುರುಷಃ'' ಎಂಬ ಪುರುಷಸೂಕ್ತವೇ ಮೂಲವೆಂದು ತಿಳಿಯಬೇಕು. ।।೪೦।।

**ವಿಪ್ರೋ ಮುಖಾದ್ ಬ್ರಹ್ಮ ಚ ಯಸ್ಯ ಗುಹ್ಯಂ**
**ರಾಜನ್ಯ ಆಸೀದ್ ಭುಜಯೋರ್ಬಲಂ ಚ ।**
**ಉರ್ವೋರ್ವಿಶೋಽಂಘ್ರೇರಭವಂಶ್ಚ ಶೂದ್ರಾಃ**
**ಪ್ರಸೀದತಾಂ ನಃ ಸ ಮಹಾವಿಭೂತಿಃ ।।೪೧।।**

**ಯಸ್ಯ ಮುಖಾತ್** ಯಾವನ ಮುಖದಿಂದ **ವಿಪ್ರಃ** ಬ್ರಾಹ್ಮಣನು **ಬ್ರಹ್ಮ ಚ** ವೇದಗಳೂ ಶಾಸ್ತ್ರಗಳೂ **ಭುಜಯೋಃ** ಭುಜಗಳಿಂದ **ಗುಹ್ಯಂ** ರಹಸ್ಯವಾಗಿ ಶ್ರೀಹರಿಯನ್ನು ತಿಳಿಸುವ **ರಾಜನ್ಯಃ** ಕ್ಷತ್ರಿಯರು (ರಾಜರು) **ಬಲಂ ಚ** ಬಲವೂ **ಊರ್ವೋಃ** ತೊಡೆಗಳಿಂದ **ವಿಶಃ** ವೈಶ್ಯರು **ಅಂಘ್ರೇಃ** ಪಾದಗಳಿಂದ **ಶೂದ್ರಾಃ** ಶೂದ್ರರು **ಅಭವನ್** ಜನಿಸಿದರೋ **ಸಃ** ಆ **ಮಹಾವಿಭೂತಿಃ** ಮಹಾವಿಭೂತಿಯು **ನಃ ಪ್ರಸೀದತಾಂ** ನಮ್ಮ ಮೇಲೆ ಪ್ರಸನ್ನನಾಗಲಿ.

ಸತ್ಯ ಃ- ವಿಶಃ ಎಂಬ ಬಹುವಚನ ಆದ್ಯರ್ಥಕವಾಗಿದೆ. ಆದಿಪದದಿಂದ ವೈಶ್ಯರೊಡನೆ ಅವರ ವ್ಯಾಪಾರವಾದ ಕೃಷ್ಯಾದಿಗಳು ಜನಿಸಿದವು ಎಂದು ತಿಳಿಯಬೇಕು. ಇದರಂತೆ ಶೂದ್ರಾಃ ಎಂಬುದರಿಂದ ಅವರ ವ್ಯಾಪರವನ್ನು ಸ್ವೀಕರಿಸಬೇಕು.

''ಊರ್ವೋರ್ವಿಡೋಜೋಽಂಘ್ರಿರವೇದಶೂದ್ರೌ'' ಎಂಬ ಪಾಠದಲ್ಲಿ ತೊಡೆಗಳಿಂದ ವಿಟ್ ವೈಶ್ಯ ಓಜಃ ಕೃಷ್ಯಾದಿಕೌಶಲ ಅವೇದಶೂದ್ರೌ ವೇದಾಧ್ಯಯನ ರಹಿತವಾದ ತ್ರೈವರ್ಣಿಕಪರಿಚರ್ಯಾ ಮತ್ತು ಶೂದ್ರರು ಜನಿಸಿದರೆಂದರ್ಥ. ''ಪರಿಚರ್ಯಾತ್ಮಕಂ ಕರ್ಮ ಶೂದ್ರಸ್ಯಾಽಪಿ ಸ್ವಭಾವಜಮ್'' ಎಂದಿದೆ. ಹೀಗೆ ಯಾರ ಮುಖಾದಿಗಳಿಂದ ಬ್ರಾಹ್ಮಣಾದಿಗಳು ಅವರ ಕರ್ಮಗಳು ಜನಿಸಿದವೋ ಆ ಮಹಾವಿಭೂತಿಯು ಪ್ರಸನ್ನನಾಗಲಿ ಎಂದು ಅನ್ವಯ. ।।೪೧।।

**ಲೋಭೋಽಧರಾತ್ ಪ್ರೀತಿರುಪರ್ಯಭೂದ್ ದ್ಯುತಿಃ**
**ನಸ್ತಃ ಪಶವ್ಯಂ ಸ್ಪರ್ಶೇನ ಕಾಮಃ ।**

**ಭ್ರುವೋರ್ಯಮಃ ಪಕ್ಷ್ಮಭವಸ್ತು ಕಾಲಃ**
**ಪ್ರಸೀದತಾಂ ನಃ ಸ ಮಹಾವಿಭೂತಿಃ** ॥೪೨॥

**ಯಸ್ಯ** ಯಾವನ **ಅಧರಾತ್** ಕೆಳ ತುಟಿಯಿಂದ **ಲೋಭಃ** ಲೋಭವು ಮತ್ತು ಲೋಭಾಭಿಮಾನಿಯು **ಉಪರಿ (ಅಧರಾತ್)** ಮೇಲ್ತುಟಿಯಿಂದ ಇಲ್ಲಿಯೂ ಅಧರಾತ್ ಎಂಬ ಪದವನ್ನು ಆವೃತ್ತಿ ಮಾಡಿಕೊಂಡು ಅನ್ವಯ ಮಾಡಿಕೊಳ್ಳಬೇಕು. ''ಅಧರೋ ದಂತವಸನೇ'' ಎಂದು ವಿಶ್ವಕೋಶವಿದೆ. **ಪ್ರೀತಿಃ** ಪ್ರೀತಿಯು, ಅದರ ಅಭಿಮಾನಿಯೂ **ದ್ಯುತಿಃ** ಕಾಂತಿಯು ಅದರ ಅಭಿಮಾನಿಯು **ನಸ್ತಃ** ಮೂಗಿನಿಂದ **ಪಶವ್ಯಂ** ಪಶುಗಳಿಗೆ ಹಿತವಾದ ಹುಲ್ಲು ಮುಂತಾದವು **ಸ್ಪರ್ಶೇನ** ಸ್ಪರ್ಶವೆಂಬ ಗುಣದಿಂದ **ಕಾಮಃ** ಸ್ತ್ರೀ ಅಭಿಲಾಷೆಯು **ಭ್ರುವೋಃ** ಹುಬ್ಬುಗಳಿಂದ **ಯಮಃ** ಯಮದೇವರು ಜನಿಸಿದರೋ **ಕಾಲಃ** ಮೃತ್ಯುವು **ಪಕ್ಷ್ಮಭವಃ** ರೆಪ್ಪೆಗಳಿಂದ ಜನಿಸಿದವನೋ **ಸಃ ಮಹಾವಿಭೂತಿಃ** ಆ ಮಹಾವಿಭೂತಿಯು **ನಃ** ನಮಗೆ **ಪ್ರಸೀದತಾಂ** ಪ್ರಸನ್ನನಾಗಲಿ. ॥೪೨॥

ಹುಟ್ಟಿದ ವಸ್ತುಗಳ ಅಸ್ತಿತ್ವವೂ ಇವನ ಅಧೀನವೆಂದು ಹೇಳುವರು-

**ದ್ರವ್ಯಂ ವಯಃ ಕರ್ಮ ಗುಣಾಶ್ಚ ಶೇಷಂ**
**ಯದ್ಯೋಗಮಾಯಾಪಹಿತಾಃ ಪತಂತಿ ।**
**ಯದ್ದುರ್ವಿಭಾವ್ಯಂ ಪ್ರಬುಧಾವಬೋಧಂ**
**ಪ್ರಸೀದತಾಂ ನಃ ಸ ಮಹಾವಿಭೂತಿಃ** ॥೪೩॥

**ದ್ರವ್ಯಂ** ಪಂಚಭೂತಗಳು **ವಯಃ** ಆಯುಷ್ಯಕಾಲವು **ಕರ್ಮ** ಪುಣ್ಯ-ಪಾಪಗಳು ಸಂಚಿತ-ಆಗಾಮಿ-ಪ್ರಾರಬ್ಧಗಳೆಂಬ ಮೂರು ವಿಧವಾದ ಕರ್ಮಗಳು ಅಥವಾ ಧರ್ಮಾಧರ್ಮಸಾಧನಗಳಾದ ಪ್ರವೃತ್ತಿ-ನಿವೃತ್ತಿಕರ್ಮಗಳು **ಗುಣಾಃ** ಭಕ್ತಿಮುಂತಾದ ಸದ್ಗುಣಗಳು ಸತ್ವಾದಿಗಳು ಶುಕ್ಲಾದಿಗಳು ಶಬ್ದಾದಿಗಳು **ಶೇಷಂ** ಉಳಿದ ಸ್ವಭಾವ-ಜೀವ-ಕಾಲಾದಿಗಳು **ಯದ್ಯೋಗಮಾಯಾಪಹಿತಾಃ** ಯಾವ ಶ್ರೀಹರಿಯ ಸ್ವರೂಪೇಚ್ಛೆಯಿಂದ ಉಪೇಕ್ಷಿತವಾಗಿ **ಪತಂತಿ** ತಮ್ಮ ಅಸ್ತಿತ್ವವನ್ನು ಕಳೆದುಕೊಳ್ಳುವವೋ ''ದ್ರವ್ಯಂ ಕರ್ಮ ಚ ಕಾಲಶ್ಚ ಸ್ವಭಾವೋ ಜೀವ ಏವ ಚ ಯದನುಗ್ರಹತಃ ಸಂತಿ ನ ಸಂತಿ ಯದುಪೇಕ್ಷಯಾ'' ಎಂಬ ಶ್ರುತಿಯು ಈ ವಿಷಯವನ್ನು ತಿಳಿಸುತ್ತದೆ. **ಯತ್** ಯಾವ ಶ್ರೀಹರಿ ಎಂಬ ವಸ್ತುವು **ದುರ್ವಿಭಾವ್ಯಂ** ಸಂಪೂರ್ಣವಾಗಿ ಇದು ಹೀಗೆಯೇ ಇದೆಯೆಂದು ತಿಳಿಯಲಾಗದ್ದೋ ''ಸ ವಾ ಏಷ ನೇತಿ ನೇತಿ'' ಎಂದಿದೆ. ಮತ್ತು **ಪ್ರಬುಧಾವಬೋಧಂ** ತತ್ತ್ವಜ್ಞಾನಯೋಗ್ಯರಿಗೆ ಜ್ಞಾನವು ಯಾರಿಂದ ಬರುವದೋ ಪ್ರಬುಧಾನಾಂ ಅವಬೋಧಃ ಯಸ್ಮಾತ್ ಸಃ ಇದರಿಂದ ಶ್ರೀಹರಿಯ ಅನುಗ್ರಹದಿಂದ ಅವನ ಜ್ಞಾನವು ಸುಖವಾಗಿ ಆಗುವದು ಎಂದು ತಿಳಿಸಿದಂತಾಯಿತು. ''ಅಜ್ಞಾನಾಂ

ಜ್ಞಾನದೋ ವಿಷ್ಣುಃ'' ''ಯಮೇವೈಷ ವೃಣುತೇ ತೇನ ಲಭ್ಯಃ'' ಎಂಬ ಶ್ರುತಿಗಳು ಈ ವಿಷಯವನ್ನು ತಿಳಿಸುತ್ತವೆ. ದ್ರವ್ಯ ಮೊದಲಾದವುಗಳಿಗೆ ಸತ್ತಾಪ್ರದನು ಬ್ರಹ್ಮಾದಿಗಳಿಗೂ ಸಾಕಲ್ಯೇನ ತಿಳಿಯಲಾಗದ ಮಹಿಮೆಯುಳ್ಳವನು ಜ್ಞಾನದಾತನೂ ಆದ್ದರಿಂದ ಪೂರ್ಣೈಶ್ವರ್ಯವನ್ನು ಪಡೆದವನು ಆದ **ಸಃ** ಆ **ಮಹಾವಿಭೂತಿಃ** ಮಹಾವಿಭೂತಿಯು **ನಃ** ನಮಗೆ **ಪ್ರಸೀದತಾಂ** ಪ್ರಸನ್ನನಾಗಲಿ.

ಲಿಂಗೇರಿಆಚಾರ್ಯರು ಈ ಶ್ಲೋಕಕ್ಕೆ ಈ ರೀತಿಯಾಗಿ ವ್ಯಾಖ್ಯಾನ ಮಾಡಿದ್ದಾರೆ. **ದ್ರವ್ಯಂ** ಪೃಥಿವೀ ಮೊದಲಾದ ಒಂಭತ್ತು ದ್ರವ್ಯಗಳು **ವಯಃ** ತರಣಿಪರಿಸ್ಪಂದ ಜ್ಞಾಪ್ಯಪರತ್ವಾಪರತ್ವ ಮುಂತಾದವು (ಸೂರ್ಯನ ಕ್ರಿಯೆಗಳಿಂದ ಅನುಮೇಯವಾದ ಇವನು ಹಿರಿಯ ಇವನು ಕಿರಿಯ ಎಂಬ ವ್ಯವಹಾರ ವಿಷಯವಾದುದು.) **ಕರ್ಮ** ಉತ್ಕ್ಷೇಪಣಾದಿ ಐದು ಕರ್ಮಗಳು **ಗುಣಾಃ** ರೂಪ, ರಸ ಮುಂತಾದ ಇಪತ್ನಾಲ್ಕು ಗುಣಗಳು **ಶೇಷಂ** ಉಳಿದ ಸಮವಾಯಾದಿಗಳು (ಗುಣಗುಣಿಗಳಿಗೆ ಇರುವ ಸಂಬಂಧವೆಂಬ ಪದಾರ್ಥ) **ಚ** ಸಾಮಾನ್ಯ-ವಿಶೇಷಗಳು ಗೌತಮ-ಕಣಾದಾದಿಗಳ ಬುದ್ಧಿಯಲ್ಲಿ **ಯದ್ಯೋಗಮಾಯಾಪಹಿತಾಃ** ಯಾವನ ಇಚ್ಛೆಯಿಂದ ನರಕಾದಿಗಳಿಗೆ ಕಾರಣವಾದುದರಿಂದ ಅನಿಷ್ಟಗಳಾದ ನಿರ್ಥಕಗಳಾದವೂ **ಪತಂತಿ** ವಕ್ತವ್ಯಗಳಾಗಿ ಬೀಳುವವು. ''ಆನ್ವೀಕ್ಷಕೀಂ ತರ್ಕವಿದ್ಯಾಮನುರಕ್ತೋ ನಿರ್ಥಕಃ'' ಎಂದು ಸೃಗಾಲೋಕ್ತೇಃ (ನರಿರೂಪದ ಇಂದ್ರನ ಮಾತು ಇದು.) ''ವಿಷಕಂಠ ಕಣಭಕ್ಷಸಂಕರೋತ್ರಿದಶಬಲ-ಪಂಚಶಿಖಾऽಕ್ಷಪಾದವಾದಾನ್'' ''ಮಹದಪಿ ಸುವಿಚಾರ್ಯ ಲೋಕತಂತ್ರಂ ಭಗವದುಪಾಸ್ತಿಮೃತೇ ನ ಸಿದ್ಧಿರಸ್ತಿ'' ಇತ್ಯಾದೇಃ. ಅಂದರೆ ವಿಷಕಂಠ=ರುದ್ರ, ಕಣಾದ, ಸಂಕರ, ಅತ್ರಿ, ದಶಬಲ, ಬುದ್ಧ, ಪಂಚಶಿಖ ಅಕ್ಷಪಾದ (ಗೌತಮ) ಮೊದಲಾದವರು ಈ ಮತಪ್ರವರ್ತಕರು ಇವರ ಮತಗಳು ಉಪಾಸನೆಗೆ ಯೋಗ್ಯವಲ್ಲವೆಂದರ್ಥ. ಅವುಗಳಿಂದ ಬೇಡ ಅದ್ವೈತಮತ ಹೇಳಿದಂತೆ ಉಪಾಸಿಸಿದರೇ ಮೋಕ್ಷವಾಗುವದೇ ಎಂದರೆ ಹೇಳುತ್ತಾರೆ. **ಯತ್** ಯಾವ ಪರಮಾತ್ಮತತ್ವವು **ದುರ್ವಿಭಾವ್ಯಂ** ಗೌತಮಾದಿ ಅಯೋಗ್ಯಜನರು ಹೇಳಿದ ಅಷ್ಟಗುಣತ್ವಾದಿಗಳಿಂದ ತಿಳಿಯಲಾಗದವನೆಂದರ್ಥ. ಮೀಮಾಂಸಕರು ಹೇಳುವಂತೆ ಕರ್ಮವು ಮೋಕ್ಷಕಾರಣವಾಗಲಿ ಎಂದರೇ ಅಲ್ಲವೆನ್ನುತ್ತಾರೆ **ಪ್ರಬುಧಾವಬೋಧಂ** ಎಂದು. ಜ್ಞಾನಿಗಳ ಜ್ಞಾನಕ್ಕೆ ವಿಷಯನೇ ಹೊರತು ಕರ್ಮಗಳಿಗಲ್ಲವೆಂದು ಹೇಳಿದಂತಾಗುತ್ತದೆ. ಕರ್ಮದಿಂದ ಪ್ರಸನ್ನನಾಗಿ ಮೋಕ್ಷವನ್ನು ಕೊಡಲಾರನೆಂದರ್ಥ. ಇದರಿಂದ ಭಾಟ್ಟಮತ ನಿರಾಕೃತವಾಯಿತು.

ಹೀಗೆ ಸ್ವರೂಪತಃ ಪರಮಾತ್ಮ ದುರ್ವಿಭಾವ್ಯ ಎಂದಾದರೆ ಮುಕ್ತಿಯೋಗ್ಯರಿಗೆ ಭಗವಂತನ ಜ್ಞಾನ ಹೇಗಾಗುತ್ತದೆ ಎಂಬ ಶಂಕೆಗೆ ಪ್ರಬುಧಾವಬೋಧಂ ಎಂದು ಉತ್ತರಿಸುತ್ತಿದ್ದಾರೆ. ಪ್ರಬುಧಾನಾಂ ಅವಬೋಧಃ ಯಸ್ಮಾತ್ ಪ್ರಬುಧರಿಗೆ

ಪ್ರಕೃಷ್ಟಜ್ಞಾನಯೋಗ್ಯರಿಗೆ ಅವಬೋಧ ಯಥಾರ್ಥಜ್ಞಾನವು ಯಾವ ಪರಮಾತ್ಮನಿಂದ ಆಗುವುದೋ ಅಂಥ ಪರಮಾತ್ಮ ಎಂದರ್ಥ. ''ಅಜ್ಞಾನಾಂ ಜ್ಞಾನದೋ ವಿಷ್ಣುಃ'' ಎಂಬ ವಚನವು ಈ ವಿಷಯದಲ್ಲಿ ಪ್ರಮಾಣವಾಗಿದೆ. **ಸಃ** ಇಂಥ **ಮಹಾವಿಭೂತಿಃ** ಈ ರೀತಿಯಾಗಿ ಆಕಾಶಾದಿಸತ್ತ್ವಪ್ರದತ್ವ, ಅಯೋಗ್ಯಮೋಹತ್ವ, ಅಜ್ಞೇಯತ್ವ, ಜ್ಞಾನಯೋಗ್ಯದೇಯತ್ವ ಮುಂತಾದ ಅಪರಿಚ್ಛಿನ್ನವಾದ ಐಶ್ವರ್ಯ ಉಳ್ಳ ಆ ಪರಮಾತ್ಮನು **ನಃ** ನಮಗೆ **ಪ್ರಸೀದತಾಂ** ಪ್ರಸನ್ನನಾಗಲಿ. ।।೪೩।।

**ನಮೋಽಸ್ತು ತಸ್ಮಾ ಉಪಶಾಂತಶಕ್ತಯೇ**
**ಸ್ವಾರಾಜ್ಯಲಾಭಪರಿಪೂರಿತಾತ್ಮನೇ ।**
**ಗುಣೇಷು ಮಾಯಾರಚಿತೇಷು ವೃತ್ತಿಭಿಃ**
**ನ ಸಜ್ಜಮಾನಾಯ ನಮಃ ಸ್ವಭೂತಯೇ** ।।೪೪।।

**ಉಪಶಾಂತಶಕ್ತಯೇ** ಅಕಾರ್ಯಕಾಲದಲ್ಲಿ ಅವ್ಯಕ್ತವಾದ ಸೃಷ್ಟ್ಯಾದಿಸಾಮರ್ಥ್ಯ-ಗಳುಳ್ಳ **ಸ್ವಾರಾಜ್ಯಲಾಭಪರಿಪೂರಿತಾತ್ಮನೇ** ಸ್ವಯಂ ಪ್ರಕಾಶಮಾನವಾದ ಆನಂದದಿಂದ ಪೂರ್ಣವಾದ ಮನಸ್ಸುಳ್ಳ (ಸ್ವರೂಪವುಳ್ಳ) ನಿತ್ಯಾನಂದಸ್ವರೂಪನಾದ ಎಂದರ್ಥ. ಇಲ್ಲಿ ಸ್ವಾರಾಜ್ಯಶಬ್ದವು ಅಖಂಡವಾದುದು ಸ್ವಯಂ ಪ್ರಕಾಶಮಾನವಾದ ಆನಂದಾದಿಗಳ ಲಾಭದಿಂದ ಪರಿಪೂರಿತವಾದ ಆತ್ಮಾ ದೇಹವುಳ್ಳ ಎಂದು ಅರ್ಥ. **ಪ್ರತಿಪೂರಿತಾತ್ಮನೇ** ಎಂಬ ಪಾಠವು ವೃತ್ತವಿಚ್ಛಿತ್ತಿಯದಿಂದ ಕಲ್ಪಿತವಾದುದು ಎಂದು ತಿಳಿಯಬೇಕು. ಅನೇಕ ಮೂಲಕೋಶಗಳಲ್ಲಿ ಪ್ರತಿಪೂರಿತಾತ್ಮನೇ ಎಂಬ ಪಾಠವಿಲ್ಲ. ''ಸ್ವಿತ್ಯಾನಂದಃ ಸಮುದ್ದಿಷ್ಟಃ'' ಎಂದಿರುವದರಿಂದ **ಸುನಾ** ಆನಂದದಿಂದ **ರಾಜ್ಯಃ** ಪ್ರಕಾಶ್ಯವು **ಪರಿಪೂರಿತಃ** ವ್ಯಾಪ್ತವಾದ **ಆತ್ಮಾ** ದೇಹವುಳ್ಳವನಿಗೆ **ಮಾಯಾರಚಿತೇಷು** ಮುಖ್ಯವಾಗಿ ತನ್ನ ಇಚ್ಛೆಯಿಂದ ಮತ್ತು ತನ್ನ ಅಧೀನವಾದ ಪ್ರಕೃತಿಯಿಂದ ನಿರ್ಮಿತಗಳಾದ **ಗುಣೇಷು** ಸತ್ವಾದಿಗಳಲ್ಲಿ ದೇಹಗಳಲ್ಲಿ ವಿಷಯಗಳಲ್ಲಿ **ವೃತ್ತಿಭಿಃ** ಪ್ರವರ್ತಕನಾಗಿ ಇದ್ದರೂ ಅದರಿಂದ ಬರುವ ದುಃಖಾದಿಗಳಿಂದ **ನ ಸಜ್ಜಮಾನಾಯ** ಆಲಿಪ್ತನಾಗದಿರುವ **ಸ್ವಭೂತಯೇ** ತನಗೆ ತಾನೇ ಇರುವ (ಸ್ವಯಂಭೂವಾದ) ಸ್ವರೂಪಭೂತಪೂರ್ಣೈಶ್ವರ್ಯವಂತನಾದ **ತಸ್ಮೈ** ಶ್ರೀಹರಿಗೆ **ನಮಃ ನಮಃ ಅಸ್ತು** ಮತ್ತೆ ಮತ್ತೆ ನಮಸ್ಕಾರ.

ಸತ್ಯ ಃ- ಶಸ್ಯ ಸುಖಸ್ಯ ಅಂತಃ ಅವಧಿಃ ಯಾಸಾಂ ತಾಃ ಶಾಂತಾಃ ಶಕ್ತಯಃ ಭಾರ್ಯಾಃ ಯಸ್ಯ ತಸ್ಮೈ ಸುಖಾಶ್ರಯರಾದ ಪತ್ನಿಯರನ್ನು ಹೊಂದಿದ ''ಶಕ್ಯತ್ವಾತ್ ಶಕ್ತಯೋ ಭಾರ್ಯಾಃ'' ಉಂ ಪಾತೀತಿ ಉಪಃ, ಶಸ್ಯ ಅಂತಃ ನಿರ್ಣಯಃ ಯಯಾ ಸಾ ಶಾಂತಾ, ಶಾಂತಾ ಶಕ್ತಿಃ ಯಸ್ಯ ಸಃ ಶಾಂತಶಕ್ತಿಃ ಉಪಶ್ಚಾಸೌ ಶಾಂತಶಕ್ತಿಶ್ಚ ಉಪಶಾಂತಶಕ್ತಿಃ ತಸ್ಮೈ ಉಪಶಾಂತಶಕ್ತಯೇ ರುದ್ರನನ್ನು ಪಾಲಿಸುವ ಸುಖನಿರ್ಣಾಯಕವಾದ ಶಕ್ತಿಯುಳ್ಳ ಅಥವಾ

''ಉಪೋಽಧಿಕೇ ಸಮೀಪೇ ಚ'' ಎಂದಿರುವದರಿಂದ ಪ್ರಕೃತ ಉಪ ಎಂಬ ಪದಕ್ಕೆ ಸರ್ವಾಧಿಕ ಎಂದು ಅರ್ಥವನ್ನಿಟ್ಟುಕೊಳ್ಳಬೇಕು. **ಉಪಶಾಂತಶಕ್ತಯೇ** ಸರ್ವಾಧಿಕವಾದ ಅಘಟಿತಘಟಕಗಳಾದ ಸುಖಸ್ವರೂಪವಾದ ಶಕ್ತಿಯುಳ್ಳವನಿಗೆ ''ಪರಾಸ್ಯ ಶಕ್ತಿರ್ವಿವಿಧೈವ ಶ್ರೂಯತೇ'' ಎಂದು ಶ್ರುತಿ ಇದೆ. ಅಥವಾ **ಉಪಶಾಂತಾಃ ಶಕ್ತಯಃ ಯಸ್ಯ ತಸ್ಮೈ ಉಪಶಾಂತಶಕ್ತಯೇ** ಅಧಿಕಾನಂದಪೂರ್ಣವಾದ ಶಕ್ತಿ-ಪ್ರತಿಷ್ಠಾ ಮುಂತಾದ ರೂಪಗಳುಳ್ಳ ಅಥವಾ ಅಧಿಕನಾದ ಶ್ರೀಹರಿಯಿಂದ ಆನಂದಮೂರ್ತಿಗಳಾದ ಪತ್ನಿಯರನ್ನು ಪಡೆದಿರುವ ಇತ್ಯಾದಿಯಾಗಿ ಅರ್ಥವನ್ನು ತಿಳಿಯಬೇಕು.

ಮಾಯಾರಚಿತೇಷು ಗುಣೇಷು ವೃತ್ತಿಭಿಃ ನ ಸಜ್ಜಮಾನಾಯ ಪ್ರಕೃತಿಗುಣಗಳಲ್ಲಿದ್ದರೂ ಅವುಗಳಿಂದ ಬಾಧಿತವಾಗದ ತನ್ನ ಪ್ರವೃತ್ತಿಯುಳ್ಳ ಎಂದು ಅರ್ಥ ಮಾಡಬೇಕು.

ಅಥವಾ ಮಾ ಯಾ ಆರ ಚಿತೇಷು ಎಂಬುದಾಗಿ ವಿಭಾಗ ಮಾಡಿಕೊಂಡು ಹೀಗೆ ಅರ್ಥ ತಿಳಿಯಬೇಕು. ಮಾ ಎಂದರೆ ರಮಾ ಎಂದು ಅರ್ಥ. ಯಾ ಮಾ ಯಾವ ರಮಾದೇವಿ ಇರುವಳೋ ಆ ರಮಾದೇವಿಯು ಚಿತೇಷು ಸದಾ ಸಂಬಂಧೇಷು ಗುಣೇಷು ಅಂದರೆ ಸೇವಿಸಲು ಕಾರಣಗಳಾದ ಗುಣಗಳು ಯಾವಾಗಲೂ ಇರುವುದರಿಂದ (ಯಂ ಯಾವ ಪರಮಾತ್ಮನನ್ನು ವೃತ್ತಿಭಿಃ ಅನುವೃತ್ತಿಭಿಃ ಸೇವೆಗಳಿಂದ ಆರ ಎಲ್ಲರನ್ನೂ ಬಿಟ್ಟು ಹೊಂದಿದಳೋ ಮಾ ಲಕ್ಷ್ಮೀಯು ಸ್ವಾ ಯದ್ಯಪಿ ತಥಾಪಿ ತನ್ನ ಹೆಂಡತಿಯಾಗಿದ್ದರೂ ಕೂಡಾ ತಸ್ಯಾಂ ಅವಳಲ್ಲಿ ನ ಸಜ್ಜಮಾನಾಯ ಸ್ವರಮಣನಾದದ್ದರಿಂದ ಅವಳಲ್ಲಿ ಅನಾಸಕ್ತನು ಆದರೂ **ಸಜ್ಜಮಾನಾಯ ನ ಇವ** ನ ಎಂಬ ಶಬ್ದಕ್ಕೆ ಇವ ಎಂದು ಅರ್ಥ ಆಸಕ್ತನಾದವನಂತೆ ಇರುವವನಿಗೆ **ಸ್ವಭೂತಯೇ** ಸ್ವರೂಪಭೂತವಾದ ಮಂಗಲ ರೂಪ ಉಳ್ಳ ಪರಮಾತ್ಮನಿಗೆ ಎಂದು ಅರ್ಥ. ಅಥವಾ **ಸ್ವಾ** ತನ್ನವಳಾದ **ಭೂತಿಃ** ಲಕ್ಷ್ಮೀದೇವಿಯುಳ್ಳ ''ದಕ್ಷಿಣಾಭಿಃ ಸಾಕಮ್'' ಎಂದು ಹೇಳಿದೆ.

ಭಗವಂತ ಮಹಾವಿಭೂತಿಯಾಗಿದ್ದಾನೆ. ಸ್ವಭೂತಿಯಾಗಿದ್ದಾನೆ ಎಂದು ಉಪಾಸನೆ ಮಾಡುವುದರಿಂದ ಮಹಾಫಲವಿದೆ ಎಂದು ತಿಳಿಸುವುದಕ್ಕಾಗಿ ಮಹಾವಿಭೂತಿ ಸ್ವಭೂತಿ ಎಂದು ಅನೇಕ ಬಾರಿ ಹೇಳಿದ್ದಾರೆ ಎಂದು ತಿಳಿಯಬೇಕು. ಭಾಗವತಕ್ಕೆ ವ್ಯಾಖ್ಯಾನ ಬರೆದ ಅನೇಕರು ''ನಭಸ್ವದೂತಯೇ'' ಎಂಬ ಪಾಠವನ್ನು ಗ್ರಹಣ ಮಾಡಿದ್ದಾರೆ. ಅದು ಅಪಪಾಠವು. ಕ್ರಮವನ್ನು ಅತಿಕ್ರಮಿಸದಂತಾಗುವದು. ನಭಸ್ವಾನ್ ಅಂದರೆ ವಾಯು ತಸ್ಯ ಆ ವಾಯುವಿನ ಊತಿ ಲೀಲೆಯಂತೆ ಲೀಲೆಯುಳ್ಳ ಎಂದು ವ್ಯಾಖ್ಯಾನಿಸುವದು ಸಹ ಅನುಪಪನ್ನವಾಗಿದೆ. ಯಾಕೆಂದರೆ ''ಊತಿ ಜೂತಿ...'' ಇತ್ಯಾದಿಯಾಗಿ ನಿಪಾತಿತವಾದ ಊತಿಶಬ್ದವು ಅಭಿಪ್ರಾಯಾರ್ಥಕವೆಂದು ವೈಯ್ಯಾಕರಣರು ವಿವರಿಸಿರುತ್ತಾರೆ. ಆದ್ದರಿಂದ ಲೀಲಾ ಎಂಬ ಅರ್ಥ ಊತಿಪದಕ್ಕೆ ಹೇಳಲು ಬರುವದಿಲ್ಲ. ಆದ್ದರಿಂದ ಈ ಪಾಠವು ಉಪೇಕ್ಷಣೆಯವಾಗಿದೆ.

ಪ್ರಸೀದತಾಂ ಎಂದು ಹೇಳಿ ಈಗ ಆ ಪ್ರಸಾದದಿಂದ ಸಾಧಿಸಬೇಕಾದದ್ದನ್ನು ಅಂದರೆ ಫಲವನ್ನು ಬ್ರಹ್ಮದೇವರು ಹೇಳುತ್ತಾರೆ-

**ಸ ತ್ವಂ ನೋ ದರ್ಶಯಾತ್ಮಾನಮಸ್ಮತ್ಕರಣಗೋಚರಃ ।**
**ಪ್ರಯತಾನಾಂ ದಿದೃಕ್ಷೂಣಾಂ ಸಸ್ಮಿತಂ ತೇ ಮುಖಾಂಬುಜಮ್ ॥೪೫॥**

**ಸಃ ತ್ವಂ** ಆ ಮಹದೈಶ್ವರ್ಯವಂತನಾದ ಈ ರೀತಿ ಪ್ರಸನ್ನೀಕರಿಸಿಕೊಂಡ ನೀನು **ಅಸ್ಮತ್ಕರಣಗೋಚರಃ** ನಮ್ಮ ಇಂದ್ರಿಯಗಳಿಗೆ ವಿಷಯನಾಗಿ **ಪ್ರಯತಾನಾಂ** ನಮ್ರರಾದ **ದಿದೃಕ್ಷೂಣಾಂ** ನೋಡಬೇಕೆಂಬ ಇಚ್ಛೆಯುಳ್ಳ **ನಃ** ನಮಗೆ **ಆತ್ಮಾನಂ** ನಿನ್ನ ಸ್ವರೂಪವನ್ನು **ಸಸ್ಮಿತಂ** ಮುಗುಳುನಗೆಯಿಂದ ಕೂಡಿದ **ತೇ** ನಿನ್ನ **ಮುಖಾಂಬುಜಂ** ಮುಖಕಮಲವನ್ನು **ದರ್ಶಯ** ತೋರಿಸು. ನೀನು ವ್ಯಕ್ತನಾಗು ಎಂದರ್ಥ.

ಸತ್ಯ ಃ- ಪೂರ್ವೋಕ್ತಮಹಾಮಹಿಮೋಪೇತನಾದ ನೀನು ನಮ್ಮ ಇಂದ್ರಿಯಗಳಿಗೆ ಗೋಚರನಾಗು. ನಿನಗೆ ನಾವು ಶರಣಾಗತರಾಗಿದ್ದೇವೆ. ನಿನ್ನ ಸಾಕ್ಷಾತ್ಕಾರವನ್ನು ಬಯಸುತ್ತಿದ್ದೇವೆ. ಅಂಥ ನಮಗೆ ನಿನ್ನ ದೇಹವನ್ನು, ಮಂದಹಾಸಸಹಿತವಾದ ಮುಖವನ್ನು ತೋರಿಸು. ನೀನು ನಮ್ಮ ಮೇಲೆ ಪ್ರಸನ್ನನಾಗು ಎಂದು ತಾತ್ಪರ್ಯ. **ಪ್ರಪನ್ನಾನಾಂ** ಎಂಬುದರಿಂದ ನಾವು ಉನ್ಮತ್ತರಲ್ಲ ಎಂದು ತಿಳಿಸಿರುವರು. ನನ್ನ ರೂಪವು ಯಾವಾಗಲೂ ಪ್ರತ್ಯಕ್ಷವಿಷಯವಲ್ಲ ಎಂದರೆ ಹಾಗೇನಿಲ್ಲ ಎಂದೂ ಹೇಳುವರು. ಕರಣಗಃ ಎಂದು.

''ಕರಣಗೋಽಚರಃ'' ಕರಣಗಃ ಅಚರಃ ಎಂದು ಪದವಿಭಾಗ ಮಾಡಿಕೊಂಡು ಹೀಗೆ ಅರ್ಥ ತಿಳಿಯಬೇಕು. ಹಿಂದೆ ಪ್ರತ್ಯಕ್ಷವಿಷಯನಾಗಿ ತ್ವಂ ಅಚರಃ ಸಂಚರಿಸಿದ್ದಿ. ಕಾರಣ ನಿನ್ನನ್ನು ತೋರಿಸು. ಮುಂದೆ ನಡೆಯುವ ಮಾತು ಮುಂತಾದವು ಮುಖದಿಂದ ಆದ ಕಾರಣ ಮುಖವನ್ನು ನೋಡಲಿಚ್ಛಿಸುವೆನು ಎಂದಿರುವರು. ಇಷ್ಟವಾದ ಎಲ್ಲ ಸಂಪತ್ತಿಗಾಗಿ ಆತ್ಮಾನಂ ಎಂದಿರುವರು. ನಾವು ದುರ್ಬಲರು ಇನ್ನು ಮುಂದೆ ನಮ್ಮ ಪರಿಕ್ಷೆಗಾಗಿ **ಸತ್ವಂ** ನಿನ್ನ ಬಲವನ್ನು **ನ ದರ್ಶಯ** ತೋರಿಸಬೇಡ. ಇದು ಪರೀಕ್ಷಾಕಾಲವಲ್ಲ ಎಂದು ಭಾವ. ॥೪೫॥

ಅವತಾರ ಮಾಡದೇ ನಮ್ಮ ಕಾರ್ಯಸಿದ್ಧಿ ಆಗಲಾರದು. ಎಂದು ಸೂಚಿಸಲು ಹಿಂದೆ ಹಾಗೆ ಮಾಡಿದ್ದನ್ನು ನೆನಪಿಸುವರು-

**ತೈಸ್ತೈಃ ಸ್ವೇಚ್ಛಾಕೃತೈ ರೂಪೈಃ ಕಾಲೇ ಕಾಲೇ ಸ್ವಯಂ ವಿಭೋ ।**
**ಕರ್ಮ ದುರ್ವಿಷಹಂ ಯನ್ನೋ ಭಗವಾನ್ ವೈ ಕರೋತಿ ಹಿ ॥೪೬॥**

**ಹೇ ವಿಭೋ** ಸಮರ್ಥನಾದ ಶ್ರೀಹರಿಯೇ **ಯತ್** ಯಾವಾಗ **ನಃ** ನಿನ್ನ ಭಕ್ತರಾದ ನಮಗೆ **ತೈಃ** ಬಂದಿರುವ **ತೈಃ** ಕಳ್ಳರಾದ ಅಸುರರಿಂದ **ಸ್ವೇಚ್ಛಾಕೃತೈಃ** ತಮ್ಮ ಮಾಯಾರೂಪಗಳಿಂದ **ಅಕಾಲೇ** ಅಕಾಲದಲ್ಲಿ **ಕಾಲೇ** ನಾಶವು ಪ್ರಸಕ್ತವಾದಾಗ

**ದುರ್ವಿಷಹಂ** ಸಹನಮಾಡಲಾಗದ **ಕರ್ಮ** ಅವರ ವ್ಯಾಪಾರವನ್ನು **ನಃ** ನಮಗಾಗಿ **ಕಾಲೇ ಕಾಲೇ** ನಮಗೆ ಬಂದ ಪ್ರತಿಯೊಂದು ಆಪತ್ಕಾಲದಲ್ಲಿ **ಹೇ ವಿಭೋ** ಸ್ವಾಮಿಯೇ **ಸ್ವೇಚ್ಛಾಕೃತೈಃ** ನಿನ್ನ ಇಚ್ಛೆಯಿಂದಲೇ ಸ್ವೀಕರಿಸಿದ **ತೈಃ ತೈಃ** ಆ ಆ ರಾಮ-ಕೃಷ್ಣ-ಮತ್ಸ್ಯ-ವರಾಹಾದಿರೂಪಗಳಿಂದ **ದುರ್ವಿಷಹಂ** ಇತರಾಸಹ್ಯವಾದ **ಕರ್ಮ** ರಾವಣಸಂಹಾರಾದಿಗಳನ್ನು **ಭಗವಾನ್ ಕರೋತಿ** ಶ್ರೀಹರಿಯು ಮಾಡುವನು. ।।೪೬।।

ಸತ್ಯ ಃ- ''ತಕಾರಶ್ಚಾಗತೇ ಚೋರೇ'' ಎಂದು ಏಕಾಕ್ಷರಕೋಶವಿದೆ. ವಿಶ್ವಕೋಶವೂ ಹೀಗೆಯೇ ಇದೆ. ಈ ಕೋಶಗಳಿಗೆ ಅನುಗುಣವಾಗಿ ಎರಡನೆಯ ತೈಃ ಎಂಬ ಪದಕ್ಕೆ ಕಳ್ಳರಾದ ಎಂಬ ಅರ್ಥವನ್ನು ಶ್ರೀಸತ್ಯಧರ್ಮರು ಮಾಡಿರುತ್ತಾರೆ. ।।೪೬।।

ಕರ್ಮವೇ ಮೋಕ್ಷಸಾಧನವೆಂಬ ಮತವನ್ನು ದೂಷಣ ಮಾಡಿದ್ದರಿಂದ ಜ್ಞಾನವೇ ಮೋಕ್ಷಸಾಧನವೆಂದು ಸಿದ್ಧವಾಯಿತು. ಹಾಗಾದರೆ ಕರ್ಮ ಮಾಡುವುದು ವ್ಯರ್ಥವೇ ಎಂದರೇ ನಿಜ. ಭಗವಂತನಿಗೆ ಅರ್ಪಣ ಮಾಡದಿದ್ದರೆ ಕರ್ಮವು ವ್ಯರ್ಥವೇ. ಅರ್ಪಣ ಮಾಡಿದರೆ ಸಾರ್ಥಕವೆಂದು ಹೇಳುವರು. ನಾವು ಮಾಡಿದ ಕರ್ಮಗಳು ನಿನಗೆ ಸಮರ್ಪಿತವಾದ್ದರಿಂದ ಸಕಾಮಗಳಂತೆ ನಿಷ್ಫಲವಾಗಬಾರದು ಎಂದು ವಿಜ್ಞಾಪಿಸುವರು. ಅದಕ್ಕಾಗಿ ಪ್ರತ್ಯಕ್ಷನಾಗು ಎಂಬ ಅಭಿಪ್ರಾಯದಿಂದ ಹೇಳುವರು-

**ಕ್ಲೇಶಭೂರ್ಯಲ್ಪಸಾರಾಣಿ ಕರ್ಮಾಣಿ ವಿಫಲಾನಿ ಚ ।**
**ದೇಹಿನಾಂ ವಿಷಯಾರ್ತಾನಾಂ ನ ತಥೈವಾರ್ಪಿತಂ ತ್ವಯಿ ।।೪೭।।**

**ವಿಷಯಾರ್ತಾನಾಂ** ಶಬ್ದಾದಿವಿಷಯಸುಖಗಳಿಗಾಗಿ ಬಾಯಿಬಿಡುವ **ದೇಹಿನಾಂ** ಜೀವರಿಗೆ **ಕರ್ಮಾಣಿ** ಅವರು ಮಾಡುವ ಕಾಮ್ಯಕರ್ಮಗಳು ವಿಷಯಗಳ ಪ್ರಾಪ್ತಿಗಾಗಿ ಮಾಡುವ ಕರ್ಮಗಳು **ಕ್ಲೇಶಭೂರಿ ಅಲ್ಪಸಾರಾಣಿ** ದೇಹಾಯಾಸ ದ್ರವ್ಯನಾಶ ಮುಂತಾಗಿ ಬಹಳ ಕಷ್ಟದಿಂದ ಕೂಡಿದವು ಅಲ್ಪ-ಅಸ್ಥಿರ ಫಲಕೊಡುವವು **ಚ** ಮತ್ತು **ವಿಫಲಾನಿ** ಅನೇಕ ಬಾರಿ ವಿರುದ್ಧಫಲ ಕೊಡುವವು **ತ್ವಯಿ** ನಿನ್ನಲ್ಲಿ **ಅರ್ಪಿತಂ** ನಾನು ಸ್ವತಂತ್ರನಾಗಿ ಮಾಡುತ್ತಿಲ್ಲ ಅವನೇ ನನ್ನಲ್ಲಿದ್ದು ಮಾಡಿಸುತ್ತಿರುವನು ಎಂಬ ಅನುಸಂಧಾನದಿಂದ ಸಮರ್ಪಿಸಿದ ಕರ್ಮವು **ತಥಾ** ಅನರ್ಪಿತಕರ್ಮದಂತೆ **ನೈವ ಸ್ಯಾತ್** ಕ್ಲೇಶ ಬಹಳ ಅಲ್ಪಫಲ ವಿರುದ್ಧಫಲ ಕೊಡುವವುಗಳಲ್ಲ. ಅಲ್ಪಕ್ಲೇಶ ಬಹುಫಲ ಕೊಡುವವೇ ಆಗಿವೆ ಎಂದರ್ಥ.

ಸತ್ಯ ಃ- ಏಕವಚನದಿಂದ ನಿನಗೆ ಅರ್ಪಿತವಾದ ಒಂದು ಕರ್ಮವೂ ವಿಫಲವಲ್ಲವೆಂದ ಮೇಲೆ ನಾವು ಬಹುಕರ್ಮಗಳನ್ನು ನಿನಗೆ ಸಮರ್ಪಿಸಿರುವೆವು. ಅವು ಎಂದಿಗೂ ವಿಫಲವಾಗಲಾರವು. ಆದ್ದರಿಂದ ನಮಗೆ ನಿನ್ನನ್ನು ತೋರಿಸುವೆ ಎಂದೇ ನಮ್ಮ ನಂಬಿಕೆ ಎಂದು ಭಾವ. ।।೪೭।।

ಶ್ರೀಹರಿಗೆ ಅರ್ಪಿತವಾದ ಸಾಂಗವಾದ ಕರ್ಮವು ಸುಖ ಕೊಡುವದು. ಅಂಗವಿಕಲವಾದರೆ ವಿಫಲವಾಗುವದು. ಎಂದಾಶಂಕಿಸಿ ''ಮಂತ್ರತಸ್ತಂತ್ರತಶ್ಛಿದ್ರಂ ದೇಶಕಾಲಾರ್ಹವಸ್ತುತಃ । ಸರ್ವಂ ಕರೋತಿ ನಿಶ್ಛಿದ್ರಮನುಸಂಕೀರ್ತನಂ ತವ'' ಎಂದಿರುವದರಿಂದ ವಿಕಲಾಂಗವಾದ ಕರ್ಮವೂ ಅರ್ಪಿತವಾದರೇ ಪುರುಷಾರ್ಥಪ್ರಾಪಕವಾಗುವದು ಎಂದು ಹೇಳುವರು-

**ನಾಧಮಃ ಕರ್ಮಕಲ್ಪೋऽಪಿ ವಿಫಲಾಯೇಶ್ವರಾರ್ಪಿತಃ ।**
**ಕಲ್ಪತೇ ಪುರುಷಸ್ಯೈವ ಸ ಹ್ಯಾತ್ಮಾ ದಯಿತೋ ಹಿತಃ ॥೪೮॥**

**ಪುರುಷಸ್ಯ** ಜೀವನು ಮಾಡುವ **ಕರ್ಮಕಲ್ಪಃ** ಅಂಗರಹಿತವಾದ್ದರಿಂದ ಕರ್ಮಾಭಾಸವು (ನ್ಯೂನವಾದ ಕರ್ಮವು) ಆದ್ದರಿಂದಲೇ **ಅಧಮಃ ಅಪಿ** ನೀಚವಾದರೂ ಕೂಡಾ ಉತ್ತಮವಲ್ಲದಿದ್ದರೂ ಕೂಡಾ **ಈಶ್ವರಾರ್ಪಿತಃ ಚೇತ್** ಶ್ರೀಹರಿಗೆ ಸಮರ್ಪಿಸಲ್ಪಟ್ಟರೇ **ವಿಫಲಾಯ** ಫಲ ಬರದಿರಲು ವಿರುದ್ಧ ಫಲ ಕೊಡಲು **ನ ಕಲ್ಪತೇ** ಸಮರ್ಥವಾಗಲಾರದು. ಏಕೆಂದರೆ **ಹಿ** ಯಾವ ಕಾರಣ **ಸಃ** ಯಾವನ ಉದ್ದೇಶದಿಂದ ಕರ್ಮ ಮಾಡುವಿರೋ **ಆತ್ಮಾ** ಅಂಥ ಆದಾನಾದಿಕರ್ತೃವಾದ ಸ್ವಾಮಿಯಾದ ಶ್ರೀಹರಿಯು **ದಯಿತಃ** ಅನಿಮಿತ್ತಬಂಧುವು **ಹಿತಃ** ಪ್ರಿಯ ಮಾಡುವವನು **ತಸ್ಮಾತ್** ಆದ್ದರಿಂದ ನಿರಪೇಕ್ಷನಾದುದರಿಂದ ನ್ಯೂನತೆಯನ್ನು ಉಪೇಕ್ಷಿಸಿ ದಯಮಾಡುವನೆಂದರ್ಥ.

ಸತ್ಯ ಃ- ನಾಧರ್ಮಃ ಎಂಬ ಪಾಠದಲ್ಲಿ ಪಾಪಸದೃಶವಾದರೂ ಎಂದರ್ಥ. ''ಅಲ್ಪಮಾತ್ರಕೃತೋ ಧರ್ಮೋ ಭವೇತ್ ಜ್ಞಾನವತೋ ಮಹಾನ್'' ಎಂದಿದೆ. ಅಂಗರಹಿತಕರ್ಮ ಮಾಡಿದವನೂ ಕೂಡಾ ಸಹ್ಯಃ ಏನೂ ಮಾಡದಿದ್ದರೂ ಸಹನೀಯ.

''ಜ್ಞಾತ್ವಾ ಶಿವಂ ಶಾಂತಿಮತ್ಯಂತಮೇತಿ'' ''ಕಸ್ಮೈ ದೇವಾಯ ಹವಿಷಾ ವಿಧೇಮ'' ''ವಾಯವ್ಯಂ ಶ್ವೇತಮಾಲಭೇತ'' ಮುಂತಾದ ಮಾತುಗಳಿಗೆ ಮೇಲೆ ಹೇಳಿದ ಶ್ರುತಿ ವಿಹಿತ ರುದ್ರ-ಬ್ರಹ್ಮ-ವಾಯು ಸೇವೆಯನ್ನು ಬಿಟ್ಟು ವಿಷ್ಣು ವಿಷಯಕವಾಗಿ ಮಾತ್ರ ಮಾಡಿದ ಕರ್ಮವು ಧರ್ಮವಾಗುವದಾದರೆ ರುದ್ರಾದಿಗಳ ಸೇವೆ ಅವರ ಪ್ರಸಾದ ಅಧಿಕಾರಿಗಳಿಗೆ ಬರಲಾರದು. ಇತರ ದೇವತೆಗಳ ಪ್ರೀತಿಯಿಲ್ಲವಾದರೆ ಫಲವಾಗಲಾರದು ಎಂದರೆ ಎಲ್ಲ ಕರ್ಮಗಳು ಸರ್ವೇಶ್ವರನಿಗೆ ಅರ್ಪಿತವಾದಾಗ ಸರ್ವಶಬ್ದವಾಚ್ಯನಾದ ಶ್ರೀಹರಿಯ ಪ್ರಸಾದದಿಂದ ಅವನ ಅಂಗದೇವತೆಗಳೆಲ್ಲರ ಪ್ರಸಾದವಾಗುತ್ತದೆ ಎಂಬುದನ್ನು ದೃಷ್ಟಾಂತಪೂರ್ವಕ ತಿಳಿಸುವರು-

**ಯಥಾ ಹಿ ಸ್ಕಂಧಶಾಖಾನಾಂ ತರೋರ್ಮೂಲಾವಸೇಚನಮ್ ।**
**ಏವಮಾರಾಧನಂ ವಿಷ್ಣೋಃ ಸರ್ವೇಷಾಮಾತ್ಮನಶ್ಚ ಹಿ ॥೪೯॥**

**ಯಥಾ** ಹೇಗೆ **ತರೋಃ** ಗಿಡದ **ಮೂಲಾವಸೇಚನಂ** ಬೇರಿಗೆ ನಿರೆರೆಯುವುದು **ಸ್ಕಂಧಶಾಖಾನಾಂ** ಶಾಖೋಪಶಾಖೆಗಳಿಗೆ **ತೃಪ್ತಿಂ ಜನಯತಿ** ತೃಪ್ತಿಯುಂಟುಮಾಡುವುದೋ **ಏವಂ** ಹಾಗೆಯೇ **ವಿಷ್ಣೋಃ ಆರಾಧನಂ** ವ್ಯಾಪ್ತನಾದ ಶ್ರೀಹರಿಯ ಆರಾಧನೆಯು **ಸರ್ವೇಷಾಂ** ಅವನ ಅಂಗಗಳನ್ನು ಆಶ್ರಯಿಸಿರುವ ವಾಯ್ವಾದಿದೇವತೆಗಳಿಗೆ **ಆತ್ಮನಃ** ಕರ್ಮ ಮಾಡುವ ತನಗೂ ತೃಪ್ತಿಜನಕವಾಗುವದು. ವಿಷ್ಣುವು ವೃಕ್ಷಸ್ಥಾನೀಯ. ದೇವತೆಗಳು ಶಾಖಾಸ್ಥಾನೀಯರು. ವೃಕ್ಷಸ್ಥಾನೀಯನಾದ ಪರಮಾತ್ಮ ತೃಪ್ತನಾದರೆ ಶಾಖಾಸ್ಥಾನೀಯರಾದ ದೇವತೆಗಳು ಕೂಡಾ ತೃಪ್ತವಾಗುತ್ತಾರೆ. ಇವರ ಪ್ರೀತಿಯಿಂದ ಸ್ವಯಂ ತಾನೂ ಆನಂದದಿಂದ ಯುಕ್ತನಾಗುತ್ತಾನೆ. ।।೪೯।।

ಫಲಿತವನ್ನು ಹೇಳಿ ಉಪಸಂಹಾರ ಮಾಡುವರು-

**ನಮಸ್ತುಭ್ಯಮನಂತಾಯ ದುರ್ವಿತರ್ಕ್ಯಾತ್ಮಕರ್ಮಣೇ ।**
**ನಿರ್ಗುಣಾಯ ಗುಣೇಶಾಯ ಸತ್ವಸ್ಥಾಯ ಚ ಸಾಂಪ್ರತಮ್ ।।೫೦।।**

**।। ಇತಿ ಶ್ರೀಮದ್ಭಾಗವತೇ ಅಷ್ಟಮಸ್ಕಂಧೇ ಪಂಚಮೋಽಧ್ಯಾಯಃ ।।**

**ಅನಂತಾಯ** ದೇಶ-ಕಾಲ-ಗುಣಗಳಿಂದ ಅಪರಿಚ್ಛಿನ್ನನಾದ ಅಥವಾ ತಮ್ಮಂತೆ ಬಂಧವಿಲ್ಲದ **ದುರ್ವಿತರ್ಕ್ಯಾತ್ಮಕರ್ಮಣೇ** ಬೇರೆಯವರಿಂದ ಊಹಿಸಲಾಗದ ತನ್ನ ಕರ್ಮವುಳ್ಳ ಅಥವಾ ತಾನು ಮತ್ತು ಕರ್ಮಗಳುಳ್ಳ **ನಿರ್ಗುಣಾಯ** ಪ್ರಾಕೃತಸತ್ವಾದಿ ಗುಣರಹಿತನಾದ **ಗುಣೇಶಾಯ** ಸೃಷ್ಟ್ಯಾದಿಗಳಿಗಾಗಿ ಸತ್ವಾದಿಗಳನ್ನು ಪ್ರೇರಿಸುವುದರಿಂದ ಸತ್ವಾದಿಗಳಿಗೆ ಸ್ವಾಮಿಯಾದ **ಸಾಂಪ್ರತಂ** ಈಗ **ಸತ್ವಸ್ಥಾಯ** ಸತ್ವಗುಣದಲ್ಲಿರುವ ಅಂದರೆ ಸತ್ವಗುಣವನ್ನು ಸ್ವೀಕರಿಸಿ ಪ್ರೇರಿಸಿ ಸ್ಥಿತಿಯನ್ನು ರಕ್ಷಣೆಯನ್ನು ಮಾಡುವ **ತುಭ್ಯಂ** ನಿನಗೆ **ನಮಃ** ನಮಸ್ಕಾರವು.

ಪ್ರಸ್ತುತ ಪಾಲನಕಾಲವಾದ್ದರಿಂದ ಆಪತ್ತಿನಿಂದ ನಮ್ಮನ್ನು ಪಾಲಿಸು ಎಂದು ಭಾವ. ಉಪಕ್ರಮದಲ್ಲಿ ಪಾಲನಕ್ಷಣ ಎಂದಿರುವರು. ಮತ್ತೆ ಉಪಸಂಹಾರದಲ್ಲಿ ಸತ್ವಸ್ಥಾಯ ಎಂದಿರುವರು. ಸರ್ವಥಾ ಸರ್ವರಕ್ಷಣೆ ಮಾಡಬೇಕು ಎಂದು ದೃಢಪಡಿಸುವರು. ದರ್ಶಯ ಆತ್ಮಾನಂ ಎಂಬುದನ್ನು ನಿಶ್ಚಯಿಸಿಕೊಂಡು ತುಭ್ಯಂ ಎಂದಿರುವರು. ಮುಖಾಂಬುಜಂ ಎಂಬುದರಿಂದ ತೋರಿಬಂದ ಪರಿಚ್ಛಿನ್ನತೆಯನ್ನು ಅನಂತಪದದಿಂದ, ಕ್ರಿಯಾಲ್ಪತೆಯನ್ನು ದುರ್ವಿತರ್ಕ್ಯಾತ್ಮಕರ್ಮಣೇ ಎಂಬುದಿರಂದಲೂ, ಶಬಲನೆಂಬುದನ್ನು ನಿರ್ಗುಣನೆಂಬು-ದರಿಂದಲೂ, ಗುಣಸಂಪರ್ಕದಿಂದ ಸಂಭಾವಿತದೋಷವನ್ನು ಗುಣೇಶನೆಂಬುದರಿಂದಲೂ, ತ್ರಿಗುಣಕಾರ್ಯ ಏಕಕಾಲದಲ್ಲಿ ಆಗುವದೆಂಬುದನ್ನು ಸತ್ವಸ್ಥನೆಂಬುದರಿಂದಲೂ, ನಿಗ್ರಹಕಾಲವೆಂಬುದನ್ನು ಸಾಂಪ್ರತಂ ಎಂಬುದರಿಂದಲೂ ನಿವಾರಿಸಿರುವರು. ಇವುಗಳಿಂದ ನಮ್ಮ ಪ್ರಾರ್ಥನೆಯು ನಿನ್ನ ಇಚ್ಛೆಗೆ ವಿರುದ್ಧವಾಗಿಲ್ಲವೆಂದು ತಿಳಿಸಿರುವರು. ।।೫೦।।



# ಅಥ ಷಷ್ಠೋಽಧ್ಯಾಯಃ

ಶ್ರೀಹರಿಯ ಜ್ಞಾನವು ಹೇಗೆ ಅವನ ಪ್ರೀತಿಗೆ ಕಾರಣವೋ ಹಾಗೆ ಜ್ಞಾನಪೂರ್ವಕವಾದ ಅವನ ಸ್ತುತಿಯೂ ಅವನ ಪ್ರೀತಿಜನಕವು ಪುರುಷಾರ್ಥಕಾರಣವೂ ಎಂಬ ಪ್ರಮೇಯವನ್ನು ಈ ಅಧ್ಯಾಯದಲ್ಲಿ ವಿಸ್ತರಿಸುತ್ತಾರೆ. ಅದರಲ್ಲಿಯೂ ಮೊದಲಿಗೆ ಹಿಂದಿನ ಅಧ್ಯಾಯದಲ್ಲಿ ಪ್ರಸ್ತುತವಾದ ಸ್ತುತಿಯಿಂದ ಶ್ರೀಹರಿಯು ಆವಿರ್ಭೂತನಾದನೇ? ಉದಾಸೀನನಾಗಿದ್ದನೇ? ಪ್ರತಿಯಾಗಿ ಆ ದೇವತೆಗಳಿಗೆ ಏನು ಹೇಳಿದ? ಎಂಬ ರಾಜನ ಸಂದೇಹವನ್ನು ಶುಕಾಚಾರ್ಯರು ಪರಿಹರಿಸುತ್ತಿದ್ದಾರೆ.

**ಶ್ರೀಶುಕ ಉವಾಚ**

**ಏವಂ ಸ್ತುತಃ ಸುರಗಣೈರ್ಭಗವಾನ್ ಹರಿರೀಶ್ವರಃ ।**
**ತೇಷಾಮಾವಿರಭೂದ್ ರಾಜನ್ ಸಹಸ್ರಾರ್ಕೋದಯದ್ಯುತಿಃ ॥೧॥**

**ರಾಜನ್** ಪರೀಕ್ಷಿತನೇ **ಸುರಗಣೈಃ** ಬ್ರಹ್ಮಾದಿದೇವತೆಗಳ ಸಮೂಹಗಳಿಂದ **ಏವಂ** ಹಿಂದಿನ ಅಧ್ಯಾಯದಲ್ಲಿ ಹೇಳಿದಂತೆ **ಸ್ತುತಃ** ಸ್ತೋತ್ರಮಾಡಿಸಿಕೊಂಡ **ಭಗವಾನ್** ಐಶ್ವರ್ಯಪೂರ್ಣನಾದ **ಈಶ್ವರಃ** ಈಶರಾದ ಬ್ರಹ್ಮಾದಿಗಳಿಗಿಂತ ಶ್ರೇಷ್ಠನಾದ **ಹರಿಃ** ಶ್ರೀಹರಿಯು **ಸಹಸ್ರಾರ್ಕೋದಯದ್ಯುತಿಃ ಸನ್** ಸಾವಿರಸೂರ್ಯರು ಉದಯವಾದಾಗ ಇರುವಂತೆ ಕಾಂತಿಯುಳ್ಳವನಾಗಿ **ತೇಷಾಂ** ದೇವತೆಗಳಿಗೆ **ಆವಿರಭೂತ್** ಪ್ರತ್ಯಕ್ಷನಾದನು.

ಲಿಂಗೇರೀ ಃ- ಪ್ರಕಟನಾದ ಶ್ರೀಹರಿಗೆ ದೇವತೆಗಳ ಕಾರ್ಯ ಮಾಡುವ ಸಾಮರ್ಥ್ಯ ಇದೆ ಎಂದು ಸೂಚಿಸಲು **ಭಗವಾನ್** ಮತ್ತು **ಈಶ್ವರಃ** ಎಂದು ಎರಡು ವಿಶೇಷಣಗಳನ್ನು ನೀಡಿದ್ದಾರೆ. ॥೧॥

**ತೈನೈವ ಮಹಸಾ ಸರ್ವೇ ದೇವಾಃ ಪ್ರತಿಹತೇಕ್ಷಣಾಃ ।**
**ನಾಪಶ್ಯನ್ ಖಂ ದಿಶಃ ಕ್ಷೋಣೀಮಾತ್ಮಾನಂ ಚಾಗ್ರತೋ ವಿಭುಮ್ ॥೨॥**

**ಸರ್ವೇ ದೇವಾಃ** ಎಲ್ಲ ದೇವತೆಗಳು **ತೇನ ಏವ ಮಹಸಾ** ಅಷ್ಟೇ ಪ್ರಕಾಶದಿಂದ **ಪ್ರತಿಹತೇಕ್ಷಣಾಃ ಸಂತಃ** ತಿರಸ್ಕೃತವಾದ ಕಣ್ಣುಗಳುಳ್ಳವರಾಗಿ (ಕಣ್ಣು ಕೋರೈಸಿದವರಾಗಿ) **ಖಂ** ಆಕಾಶವನ್ನು **ದಿಶಃ** ದಿಕ್ಕುಗಳನ್ನು **ಕ್ಷೋಣೀಂ** ಭೂಮಿಯನ್ನು **ಆತ್ಮಾನಂ** ತಮ್ಮನ್ನು **ಅಗ್ರತಃ** ಎದುರಿಗೆ ಇರುವ ವ್ಯಕ್ತನಾದ **ವಿಭುಂ** ಸರ್ವಸಮರ್ಥನಾದ ಶ್ರೀಹರಿಯನ್ನು **ನ ಅಪಶ್ಯನ್** ಕಾಣದಾದರು ನೋಡಲಿಲ್ಲ ಎಂದು ಅರ್ಥ. ।।೨।।

♦ ಸಹಸಾ ಎಂಬ ಪಾಠದಲ್ಲಿ ಆ ಪ್ರಕಾಶದಿಂದಲೇ ಹಟಾತ್ತಾಗಿ, ಇದ್ದಕಿದ್ದಂತೆ ಎಂದರ್ಥ.

**ವಿರಿಂಚೋ ಭಗವಾನ್ ದೃಷ್ಟ್ವಾ ಸಹ ಶರ್ವೇಣ ಭಾರತ ।**
**ಸ್ವಚ್ಛಂ ಮರಕತಶ್ಯಾಮಂ ಕಂಜಗರ್ಭಾರುಣೇಕ್ಷಣಮ್ ।।೩।।**

ಈಶ್ಲೋಕಕ್ಕೆ ಪರಂ ಪುರುಷಂ ತುಷ್ಟಾವ ಎಂದು ಏಳನೇ ಶ್ಲೋಕದಿಂದ ಅನ್ವಯ. ಆದ್ದರಿಂದ ಎಲ್ಲ ಶ್ಲೋಕಗಳನ್ನು ಒಟ್ಟಿಗೆ ವ್ಯಾಖ್ಯಾನಿಸಿದೆ. ।।೩।।

**ತಪ್ತಹೇಮಾವದಾತೇನ ಲಸತ್ಕೌಶೇಯವಾಸಸಾ ।**
**ಪ್ರಸನ್ನಚಾರುಸರ್ವಾಂಗಂ ಸುಮುಖಂ ಸುಂದರಭ್ರುವಮ್ ।।೪।।**

**ಮಹಾಮಣಿಕಿರೀಟೇನ ಕೇಯೂರಾಭ್ಯಾಂ ಚ ಭೂಷಿತಮ್ ।**
**ಕರ್ಣಾಭರಣನಿರ್ಭಾತಕಪೋಲಶ್ರೀಮುಖಾಂಬುಜಮ್ ।।೫।।**

**ಕಾಂಚೀಕಲಾಪವಲಯಹಾರನೂಪುರಶೋಭಿತಮ್ ।**
**ಕೌಸ್ತುಭಾಭರಣಂ ಲಕ್ಷ್ಮ್ಯಾ ಬಿಭ್ರತಂ ವನಮಾಲಿನಮ್ ।।೬।।**

**ಸುದರ್ಶನಾದಿಭಿಃ ಸ್ವಾಸ್ತ್ರೈರ್ಮೂರ್ತಿಮದ್ಭಿರುಪಾಸಿತಮ್ ।**
**ತುಷ್ಟಾವ ದೇವಪ್ರವರಃ ಸರ್ವೇಶಂ ಪುರುಷಂ ಪರಮ್ ।**
**ಸರ್ವಾಮರಗಣೈಃ ಸಾರ್ಧಂ ಸರ್ವಾಂಗೈರವನಿಂ ಗತೈಃ ।।೭।।**

**ಭಗವಾನ್ ವಿರಿಂಚಃ** ಐಶ್ವರ್ಯಸಂಪನ್ನರಾದ ಬ್ರಹ್ಮದೇವರು **ಶರ್ವೇಣ ಸಹ** ರುದ್ರದೇವರೊಡನೆ **ಸ್ವಚ್ಛಂ** ದೋಷವಿಲ್ಲದ (ಅಪ್ರಾಕೃತವಾದ) **ಮರಕತಶ್ಯಾಮಂ** ಇಂದ್ರನೀಲಮಣಿಯಂತೆ ಕಪ್ಪು ಬಣ್ಣದ **ಕಂಜಗರ್ಭಾರುಣೇಕ್ಷಣಂ** ಕಮಲದ ಒಳಭಾಗದಂತೆ ಕೆಂಪಾಗಿರುವ ಕಣ್ಣುಗಳುಳ್ಳ ।।೩।।

**ತಪ್ತಹೇಮಾವದಾತೇನ** ಪುಟಕ್ಕೆ ಹಾಕಿದ ಚಿನ್ನದಂತೆ ಹಳದಿ ಬಣ್ಣವುಳ್ಳ ಶುದ್ಧವಾದ **ಲಸತ್ಕೌಶೇಯವಾಸಸಾ** ಪ್ರಕಾಶಮಾನವಾದ ರೇಷ್ಮೆಯ ಪೀತಾಂಬರದಿಂದ ಕೂಡಿದ **ಪ್ರಸನ್ನಚಾರುಸರ್ವಾಂಗಂ** ಪ್ರಸನ್ನವಾದ ಸುಂದರ ಸರ್ವಾವಯವಗಳುಳ್ಳ **ಸುಮುಖಂ** ಸುಂದರವಾದ ಮುಖವುಳ್ಳ **ಸುಂದರಭ್ರುವಂ** ಸುಂದರವಾದ ಹುಬ್ಬುಗಳುಳ್ಳ

**ಮಹಾಮಣಿಕಿರೀಟೇನ** ಶ್ರೇಷ್ಠರತ್ನಗಳ ಕಿರೀಟದಿಂದ **ಕೇಯೂರಾಭ್ಯಾಂ ಚ** ಬಾಹುಗಳಲ್ಲಿ ಧರಿಸುವ ವಂಕಿ ಎಂಬ ಆಭರಣಗಳಿಂದಲೂ **ಭೂಷಿತಂ** ಅಲಂಕೃತವಾದ **ಕರ್ಣಾಭರಣ-ನಿರ್ಭಾತಕಪೋಲಶ್ರೀಮುಖಾಂಬುಜಂ** ಕಿವಿಯ ಕುಂಡಲಗಳಿಂದ ಪ್ರಕಾಶಿತವಾದ ಕೆನ್ನೆಗಳ ಕಾಂತಿಯಿಂದ ಕೂಡಿದ ಕಮಲದಂತಿರುವ ಮುಖವುಳ್ಳ,

**ಕಾಂಚೀಕಲಾಪ** ಟೊಂಕದ ಪಟ್ಟಿ ಎಂಬ ಆಭರಣ (ಉಡದಾರದಿಂದ) **ವಲಯ** ಕೈಕಡಗ **ಹಾರ** ಕುತ್ತಿಗೆಯ ಸರ **ನೂಪುರ** ಪಾದಭೂಷಣಗಳಿಂದ (ಕಾಲ್ಗಡಗ ಅಥವಾ ಗೆಜ್ಜೆ) **ಶೋಭಿತಂ** ಪ್ರಕಾಶಿಸುವ **ಕೌಸ್ತುಭಾಭರಣಂ** ಕೌಸ್ತುಭಮಣಿ ಎಂಬ ಆಭರಣವುಳ್ಳ **ಲಕ್ಷ್ಮ ಬಿಭ್ರತಂ** ಶ್ರೀವತ್ಸವೆಂಬ ಚಿಹ್ನೆಯನ್ನು ಧರಿಸಿದ **ವನಮಾಲಿನಂ** ವನಮಾಲೆಯನ್ನು ಧರಿಸಿದ,

**ಸರ್ವಾಮರಗಣೈಃ ಸಾರ್ಧಂ** ಎಲ್ಲ ದೇವತೆಗಳಿಂದ ಕೂಡಿಕೊಂಡು **ಮೂರ್ತಿಮದ್ಭಿಃ** ಶರೀರವನ್ನು ಧರಿಸಿದ **ಸುದರ್ಶನಾದಿಭಿಃ ಸ್ವಾಸ್ತ್ರೈಃ** ಚಕ್ರ ಮೊದಲಾದ ತನ್ನ ಆಯುಧಾಭಿಮಾನಿಗಳಾದ ಕಾಮಾದಿದೇವತೆಗಳಿಂದ **ಉಪಾಸಿತಂ** ಸೇವಿತನಾದ **ಪರಂ** ಜೀವ-ಜಡವಿಲಕ್ಷಣನಾದ **ಸರ್ವೇಶಂ** ಸರ್ವೋತ್ತಮನಾದ **ಪುರುಷಂ** ಆ ಪರಮಾತ್ಮನನ್ನು **ದೃಷ್ಟ್ವಾ** ನೋಡಿ **ದೇವಪ್ರವರಃ** ದೇವತೆಗಳಲ್ಲಿ ಶ್ರೇಷ್ಠರಾದ ಬ್ರಹ್ಮದೇವರು **ಅವನಿಂ ಗತ್ವೈಃ** ಭೂಮಿಯನ್ನು ಸೇರಿದ **ಸರ್ವಾಂಗೈಃ** ಎಲ್ಲ ಅವಯವಗಳಿಂದಲೂ (ಸಾಷ್ಟಾಂಗ ನಮಸ್ಕಾರ ಮಾಡಿ) **ತುಷ್ಟಾವ** ಮುಂದೆ ಹೇಳುವಂತೆ ಸ್ತೋತ್ರಮಾಡಿದರು.

ಸತ್ಯ ಃ- ಸಹಶರ್ವೇಣ ಎಂಬುದರಿಂದ ಸೂಚಿತವಾದ ಅಪ್ರಾಧಾನ್ಯದಿಂದ ದರ್ಶನದಲ್ಲಿ ತರತಮಭಾವ ಧ್ವನಿತವಾಗುವದು. ।।೩।।

ಛಲಾರೀ ಃ- ವಿರಚಯತಿ ಸೃಜತಿ ಸನಕಾದೀನ್ ಇತಿ ವಿರಿಂಚಃ ಚತುರ್ಮುಖಃ ಸನಕಾದಿಗಳನ್ನು ಸೃಷ್ಟಿಸುವ ಬ್ರಹ್ಮದೇವರು ಎಂದು ಅರ್ಥ. ।।೩।।

''ಅವದಾತಃ ಸಿತೇ ಪೀತೇ ವಿಶುದ್ಧೇ ಪ್ರವರೇऽಪಿ ಚ'' ಎಂದು ವಿಶ್ವವಿದೆ. ''ಕೌಶೇಯಂ ಕೃಮಿಕೋಶೋತ್ಥಮ್'' ಎಂದು ಅಮರವಿದೆ. ''ಅವದಾತೋऽರುಣೇ ಪೀತೇ ಶ್ವೇತೇ ಶ್ಯಾಮೇ ಚ ಕಥ್ಯತೇ'' ಎಂದು ಅಭಿಧಾನವಿದೆ. ।।೪।।

''ಕಾಂಚೀ ಸ್ಯಾನ್ಮೇಖಲಾ ದಾಮ್ನಿ'' ''ಕಲಾಪೋ ಭೂಷಣೆ ಬರ್ಹೇ'' ಎಂದು ವಿಶ್ವಗಳಿವೆ. ।।೬।।

ಸತ್ಯ ಃ- ದೇವತೆಗಳ ಸಮೂಹದ ಕಣ್ಣು ದೇವರನ್ನು ಕಾಣದಾದವು. ಬ್ರಹ್ಮದೇವರು ಚೆನ್ನಾಗಿ ದೇವರ ದರ್ಶನ ಮಾಡಿದರು. ಈ ವ್ಯತ್ಯಾಸವನ್ನು ತಾರತಮ್ಯವನ್ನು ತಿಳಿಸಲು ಬ್ರಹ್ಮದೇವರಿಗೆ ದೇವಪ್ರವರಃ ಎಂದು ವಿಶೇಷಣ ನೀಡಿದ್ದಾರೆ.

ಸರ್ವಾಂಗೈಃ ಅವನಿಂ ಗತೈಃ ಎನ್ನುವುದರಿಂದ ಸಾಷ್ಟಾಂಗನಮಸ್ಕಾರ ಮಾಡಿದರು ಎಂದು ತಿಳಿಸುತ್ತಿದ್ದಾರೆ. ''ಉರಸಾ ಶಿರಸಾ ದೃಷ್ಟ್ಯಾ ಮನಸಾ ವಚಸಾ ತಥಾ । ಪದ್ಭ್ಯಾಂ ಕರಾಭ್ಯಾಂ ಜಾನುಭ್ಯಾಂ ಪ್ರಣಾಮೋಽಷ್ಟಾಂಗ ಈರಿತಃ'' ಎಂದು ಹೇಳಿದೆ.

**ಬ್ರಹ್ಮೋವಾಚ**

**ಅಜಾಯ ಜನ್ಮಸ್ಥಿತಿಸಂಯಮಾಯ**
**ಗುಣಾಯ ನಿರ್ವಾಣಸುಖಾರ್ಣವಾಯ ।**
**ಅಣೋರಣಿಮ್ನೇಽಪರಿಗಣ್ಯಧಾಮ್ನೇ**
**ಮಹಾನುಭಾವಾಯ ನಮೋ ನಮಸ್ತೇ** ॥೮॥

**ಅಜಾಯ** ಉತ್ಪತ್ತಿ ಇಲ್ಲದ **ಜನ್ಮಸ್ಥಿತಿಸಂಯಮಾಯ** ಜಗತ್ತಿಗೆ ಜನ್ಮ-ಸ್ಥಿತಿ ಸಂಹಾರಗಳನ್ನು ನೀಡುವ **ಗುಣಾಯ** ''ವಿಜ್ಞಾನಮಾನಂದಂ ಬ್ರಹ್ಮ'' ಎಂದಿರುವದರಿಂದ ಜ್ಞಾನಾನಂದಸ್ವರೂಪನಾದ **ನಿರ್ವಾಣಸುಖಾರ್ಣವಾಯ** ಶರೀರಾಭಿಮಾನವಿಲ್ಲದೇ ಉಂಟಾದ ಸುಖದಿಂದ ಸಮುದ್ರದಂತಿರುವ (ಶರೀರದಿಂದ ಜನ್ಯವಲ್ಲದ ಸುಖದಿಂದ ಸಮುದ್ರದಂತೆ ಇರುವ, ಅಪ್ರಾಕೃತವಾದ ಶರೀರದಿಂದ ಅಭಿವ್ಯಕ್ತವಾದ ಸುಖದಿಂದ ಸಮುದ್ರದಂತಿರುವ) **ಅಣೋಃ ಅಣಿಮ್ನೇ** ಅತಿಸೂಕ್ಷ್ಮವಸ್ತುವಿಗಿಂತಲೂ ಸೂಕ್ಷ್ಮನಾದ ''ಅಣೋರಣೀಯಾನ್'' ಎಂದು ಶ್ರುತಿಯಿದೆ. **ಅಪರಿಗಣ್ಯಧಾಮ್ನೇ** ಎಣಿಸಲಾಗದ ಅನಂತವಾದ ತೇಜಸ್ಸುಳ್ಳ ಅಥವಾ ಸೀಮೆಯಿಲ್ಲದ ದೇಹವುಳ್ಳ ಅನಂತ ಪರಾಕ್ರಮ ಉಳ್ಳ ''ವಿಷ್ಣೋರ್ನುಕಂ ವಿರ್ಯಾಣಿ ಪ್ರವೋಚಂ ಯಃ ಪಾರ್ಥಿವಾನಿ ವಿಮಮೇ ರಜಾಂಸಿ'' ಎಂದು ಪ್ರಮಾಣವಿದೆ. ಅಪರಿಮಿತ ದೇಹವುಳ್ಳವನೆಂದು ಅರ್ಥ ಮಾಡಿದ್ದರಿಂದ ಮಹತೋ ಮಹೀಯಸ್ತ್ವವನ್ನೂ ಹೇಳಿದಂತಾಯಿತು. ಅಪರಿಚ್ಛಿನ್ನತೇಜಸ್ತ್ವ- ಅಣೋರಣೀಯಸ್ತ್ವಗಳು ಅಸಂಭಾವಿತವಲ್ಲವೆನ್ನಲು ಕಾರಣ ಹೇಳುವರು. **ಮಹಾನುಭಾವಾಯ** ಅಘಟಿತಘಟನಾ ಸಾಮರ್ಥ್ಯ ಉಳ್ಳವಗೆ ಎಂದರ್ಥ. ಅಚಿಂತ್ಯ ಐಶ್ವರ್ಯದಿಂದ ಅಣುತ್ವ-ಮಹತ್ವಗಳು ಏಕಕಾಲದಲ್ಲಿ ಉಪಪನ್ನವೆಂದು ಭಾವ. ಇಂಥ **ತೇ** ನಿನಗೆ **ನಮೋ ನಮಃ** ನಮಸ್ಕಾರವು.

ಸತ್ಯ :- ಜನ್ಮಸ್ಥಿತಿಸಂಯಮಾಯ ಜನ್ಮ-ಸ್ಥಿತಿಭ್ಯಾಂ ಸಹಿತಃ ಸಂಯಮಃ ಸಂಹಾರಃ ಜಗತಃ ಯೇನ ಸಃ ಎಂದು ಬಹುವ್ರೀಹಿ ಮಾಡಿಕೊಳ್ಳಬೇಕು. ಅಥವಾ ಜನ್ಮಾದಿಗಳು ಅವನ ಅಧೀನವಾದುದರಿಂದ ಅವನನ್ನೇ ಜನ್ಮಸ್ಥಿತಿಸಂಯಮ ಎಂದು ಜನ್ಮ-ಸ್ಥಿತಿ-ಸಂಯಮಗಳಿಂದ ಅಭಿನ್ನ ಎಂಬುದಾಗಿ ವ್ಯವಹರಿಸುತ್ತಿದ್ದಾರೆ.

**ರೂಪಂ ತವೈತತ್ ಪುರುಷರ್ಷಭೇಜ್ಯಂ**
**ಶ್ರೇಯೋಽರ್ಥಿಭಿರ್ವೈದಿಕತಾಂತ್ರಿಕೈಶ್ಚ ।**

**ಯೋಗೇನ ಧಾತಃ ಸಹ ನಸ್ತ್ರಿಲೋಕಾನ್**
**ಪಶ್ಯಾಮ್ಯಮುಷ್ಮಿನ್ ಭುವಿ (ಭವ) ವಿಶ್ವಮೂರ್ತೇ** ॥೯॥

**ಹೇ ಪುರುಷರ್ಷಭ** ಕ್ಷರಾಕ್ಷರಪುರುಷರಿಗಿಂತ ಶ್ರೇಷ್ಠನೇ ''ಉತ್ತಮಃ ಪುರುಷಸ್ತ್ವನ್ಯಃ'' ಎಂದಿದೆ. **ಶ್ರೇಯೋಽರ್ಥಿಭಿಃ** ಮೋಕ್ಷಾಪೇಕ್ಷಿಗಳಾದ **ವೈದಿಕತಾಂತ್ರಿಕೈಶ್ಚ** ವೇದೋಕ್ತ-ಪಂಚರಾತ್ರಾದಿತಂತ್ರೋಕ್ತವಾದ ಕರ್ಮಾನುಷ್ಠಾನ ಮಾಡುವವರಿಂದಲೂ **ತವ** ನಿನ್ನ **ಏತತ್ ರೂಪಂ** ಈ ರೂಪವೂ **ಈಡ್ಯಂ** ಸ್ತುತ್ಯವಾದುದು. **ಹೇ ಧಾತಃ** ಸೃಷ್ಟ್ಯಾದಿಕರ್ತನೇ **ಅಮುಷ್ಮಿನ್** ಈ ನಿನ್ನ ರೂಪದಲ್ಲಿ **ಯೋಗೇನ** ಉಪಾಯದಿಂದ **ಸಹ** ಲೋಕಪಾಲಕರೊಡನೆ **ತ್ರಿಲೋಕಾನ್** ಮೂರು ಲೋಕಗಳನ್ನು **ಪಶ್ಯಾಮಿ** ಕಾಣುತ್ತೇನೆ **ನಃ ಸಹ** ನಮ್ಮೊಂದಿಗೆ ಮೂರುಲೋಕಗಳನ್ನು ಎಂದಾದರೂ ಅನ್ವಯ. **ಹೇ ವಿಶ್ವಮೂರ್ತೇ** ಎಲ್ಲ ಜಗತ್ತನ್ನು ಶರೀರದಲ್ಲಿ ಧರಿಸಿದ ಶ್ರೀಹರಿಯೇ **ನಃ** ನಮಗೆ **(ಶರಣಂ) ಭವ** ರಕ್ಷಕನಾಗು. ॥೯॥

ಸತ್ಯ ಃ- ಭುವಿ ಎಂಬ ಪಾಠವೂ ಇದೆ. **ಭುವಿ** ಸರ್ವಾಧಾರವಾದ **ಅಮುಷ್ಮಿನ್** ಈ ರೂಪದಲ್ಲಿ ಎಲ್ಲವನ್ನೂ ಕಾಣುತ್ತಿದ್ದೇನೆ ಎಂದು ಅನ್ವಯಾರ್ಥ. ಭವ ಎಂದು ಭಗವಂತನನ್ನು ಸಂಬೋಧಿಸುತ್ತಿದ್ದಾರೆ. ಭವ ಮಂಗಲಾತ್ಮಕನಾದ ಭಗವಂತನೇ ಎಂದು ಅರ್ಥ. ವಿಶ್ವಮೂರ್ತೇ ಎಂದು ಹೇಳಿದ್ದರಿಂದ ನಿನ್ನ ದೇಹದಲ್ಲಿ ಜಗತ್ತನ್ನು ಕಾಣುವದು ಭ್ರಮೆಯಲ್ಲವೆಂದು ತಿಳಿಸುವರು. ॥೯॥

**ತ್ವಯ್ಯಗ್ರ ಆಸೀದಿದಮಾತ್ಮತಂತ್ರೇ ತ್ವಮಾದಿರಂತೋ ಜಗತೋಽಸ್ಯ ಮಧ್ಯಮ್ ।**
**ಘಟಸ್ಯ ಮೃತ್ಸ್ನೇವ ಪರಃ ಪರಸ್ಮಾತ್ ತ್ವಮೇವ ಚಾಶೇಷಮಶೇಷನಾಮಾ ॥**

**ಅಗ್ರೇ** ಸೃಷ್ಟಿಯ ಮೊದಲು ಪ್ರಲಯಕಾಲದಲ್ಲಿ **ಇದಂ** ಈ ಜಗತ್ತು **ಆತ್ಮತಂತ್ರೇ** ಸ್ವತಂತ್ರನಾದ **ತ್ವಯಿ** ನಿನ್ನ ಉದರದಲ್ಲಿ **ಆಸೀತ್** ಇದ್ದಿತು **ಘಟಸ್ಯ** ಗಡಿಗೆಗೆ **ಮೃತ್ಸ್ನಾ ಇವ** ಉತ್ತಮವಾದ ಮಣ್ಣಿನಂತೆ ಅದು ಹೇಗೆ ಆದಿ ಮಧ್ಯ ಅಂತ್ಯವೋ ಮುಖ್ಯಕಾರಣವೋ ನೀರು ಮೊದಲಾದವು ಅವಾಂತರಕಾರಣವೋ **ತಥಾ** ಹಾಗೆ (ಸತಿ ಕುಲಾಲಕೀಲಾಲಾದೌ ಮೃದೋಽಭಾವೇ ಯಥಾ ನ ಘಟಘಟನಾ ತಥಾ ಈಶ್ವರ ತ್ವದ್ವ್ಯತಿರೇಕೇಣ ಜಗಜ್ಜನನಂ ದುರ್ಘಟಮಿತಿ ಭಾವಃ) ಕುಂಬಾರ-ನೀರುಗಳಿದ್ದರೂ ಮಣ್ಣಿಲ್ಲದೇ ಹೇಗೆ ಮಡಿಕೆಯಾಗುವದಿಲ್ಲವೋ ಹಾಗೆ ಈಶ್ವರನಿಲ್ಲದೇ ಜಗತ್ತು ಜನಿಸಲಾರದೆಂದು ಭಾವ. **ತ್ವಂ** ನೀನೂ ಕೂಡ **ಅಸ್ಯ** ಈ **ಜಗತಃ** ಜಗತ್ತಿಗೆ **ಆದಿಃ** ಕಾರಣನು **ಅಂತಃ** ನಾಶಕನು **ಮಧ್ಯಂ** ಪಾಲಕನು ಆಗಿರುವೆ. **ಪರಸ್ಮಾತ್ ಪರಃ** ಮುಖ್ಯಕಾರಣನು **ಅಶೇಷನಾಮಾ** ಅಶೇಷ ಎಂಬ ಹೆಸರುಳ್ಳ **ತ್ವಮೇವ** ನೀನೇ **ಅಶೇಷಂ** ಎಲ್ಲವೂ ನಿನ್ನ ಅಧೀನವಾದ್ದರಿಂದ ಅಶೇಷನಾಮಕನಾಗಿರುವಿ.

ಭಗವಂತ ಅಶೇಷನಾಮಕನಾಗಿದ್ದಾನೆ ಎಂಬ ವಿಷಯದಲ್ಲಿ ''ನಾಮಾನಿ ಸರ್ವಾಣಿ ಯಮಾವಿಶಂತಿ'' ''ಯೋ ದೇವಾನಾಂ ನಾಮಧಾ ಏಕ ಏವ'' ''ಯಥಾ ಹಿರಣ್ಯಂ ಬಹುಧಾ ಸಮೀಯತೇ ನೃಭಿಃ ಕ್ರಿಯಾಭಿರ್ವ್ಯವಹಾರ ವರ್ತ್ಮಸು'' ''ವೈದಿಕೈರ್ಜನ್ಯೈಃ'' ಮುಂತಾದ ಶ್ರುತಿ-ಸ್ಮೃತಿಗಳು ಇವೆ.

ಸತ್ಯ ಃ- ಮಣ್ಣಿನ ದೃಷ್ಟಾಂತವನ್ನು ಹೇಳಿದ ಮಾತ್ರಕ್ಕೆ ಭಗವಂತ ಮಣ್ಣಿನಂತೆ ಉಪಾದಾನ ಎಂದು ತಿಳಿಯಬಾರದು. ಕಿಂತು ಘಟವು ಮಣ್ಣಿನ ಅಧೀನವಾದಂತೆ ಈ ಎಲ್ಲ ಪ್ರಪಂಚ ಭಗವಂತನ ಅಧೀನ ಎಂಬುದನ್ನು ಮಾತ್ರ ತಿಳಿಯಬೇಕು. ದೃಷ್ಟಾಂತದಲ್ಲಿ ಸರ್ವಸಾಮ್ಯವನ್ನು ತಿಳಿಯಬಾರದು. ಅಧೀನವೆಂದು ಅರ್ಥಮಾಡದೆ ಉಪಾದಾನವೆಂದು ಅರ್ಥ ಮಾಡಿದರೆ ಬ್ರಹ್ಮೋಪಾದನಕವಾದ ಜಗತ್ತು ಚೇತನವಾಗಬೇಕಾಗುವದು. ಜಗತ್ತು ಎಂದಿಗೂ ಚೇತನವಾಗುವುದಿಲ್ಲ ಆದ್ದರಿಂದ ಬ್ರಹ್ಮನೇ ಉಪಾದಾನಕಾರಣ ಎಂಬ ವಾದ ಸರಿಯಲ್ಲ. ಕಿಂತು ಎಲ್ಲ ಪ್ರಪಂಚವು ಬ್ರಹ್ಮನ ಅಧೀನವೇ ಆಗಿದೆ. ''ಯದಧೀನಾ ಯಸ್ಯ ಸತ್ತಾ ತತ್ ತದಿತ್ಯೇವ ಭಣ್ಯತೇ'' ಎಂದಿದೆ. ಆತ್ಮತಂತ್ರೇ ಪರಃ ಪರಸ್ಮಾತ್ ಇತ್ಯಾದಿಯಾದ ಪದಗಳು ಉಪಾದಾನ ಎಂಬ ಭ್ರಾಂತಿಯನ್ನು ಪರಿಹರಿಸುತ್ತವೆ.

ಸತ್ಯ ಃ-''ಅಶೇಷವಿಶೇಷನಾಮಾ'' ಎಂಬ ಪಾಠದಲ್ಲಿ ೧. ಸಾಮಾನ್ಯವಾಗಿ ಎಲ್ಲ ನಾಮ ಉಳ್ಳವನು, ವಿಶೇಷನಾಮ ಉಳ್ಳವನೂ ಎಂದು ಅರ್ಥ ತಿಳಿಯಬೇಕು. ಅಥವಾ ೨. ಅಶೇಷಾಣಾಂ ವಿಶೇಷನಾಮಾನಿ ಕರ್ತಾ ಹರ್ತಾ ಇತ್ಯೇವಮಾದೀನಿ ಯಸ್ಯ ಸಃ ಅಂದರೆ ಸೃಷ್ಟಿಕರ್ತಾ ಸಂಹಾರಕರ್ತಾ ಎಂಬ ಹೆಸರುಳ್ಳವನು.

ಲಿಂಗೇರೀ ಃ- ಅಶೇಷಾಣಾಂ ಅಂದರೆ ಯಾರೂ ಉಳಿಯದಂತೆ ಎಲ್ಲರ ವಿಶೇಷಾಣಾಂ ಬ್ರಹ್ಮಾದಿಗಳ ನಾಮಾನಿ ಹೆಸರುಗಳು ಮುಖ್ಯವಾಗಿ ಉಳ್ಳವನು ಎಂದಾದರೂ ಅರ್ಥ ತಿಳಿಯಬೇಕು. ಇದರಿಂದ ''ಹಿರಣ್ಯಗರ್ಭಃ ಸಮವರ್ತತಾಗ್ರೇ'' ''ಏಕೋ ರುದ್ರೋ ನ ದ್ವಿತೀಯಾಯ ತಸ್ಥೇ'' ಮುಂತಾದ ಶ್ರುತಿಗಳಲ್ಲಿರುವ ಹಿರಣ್ಯಗರ್ಭ-ರುದ್ರಾದಿ-ಶಬ್ದವಾಚ್ಯನು ವಿಷ್ಣುವೇ ಆಗಿದ್ದಾನೆ. ಆದ್ದರಿಂದ ವಿಷ್ಣುವೇ ಸರ್ವಜಗತ್ಸ್ರಷ್ಟ್ರ್ಯಾದಿಕರ್ತಾ ಎಂಬುದಕ್ಕೆ ಬ್ರಾಹ್ಮ-ಪಾಶುಪತಾದಿಗ್ರಂಥಗಳ ವಿರೋಧವಿಲ್ಲ ಎಂದು ಹೇಳಿದಂತಾಯಿತು.

ಲಿಂಗೇರೀ ಃ- **ಪರಸ್ಮಾತ್ ಪರಃ** ಬ್ರಹ್ಮಾದಿಗಳಿಗಿಂತ ಉತ್ತಮನು ಎಂಬ ವಿಷಯವನ್ನು ''ಅಗ್ನಿರ್ವೈ ದೇವಾನಾಂ ಅವಮಃ ವಿಷ್ಣುಃ ಪರಮಃ'' ''ವಿಷ್ಣುಮುಖಾ ವೈ ದೇವಾಃ'' ಎಂಬ ಶ್ರುತಿಗಳು ಪ್ರತಿಪಾದಿಸುತ್ತವೆ. ವಿಷ್ಣುಮುಖಾಃ ವೈ ದೇವಾಃ ಎಂದರೆ ವಿಷ್ಣುವೇ ಪ್ರಧಾನನಾಗಿ ಉಳ್ಳ ದೇವತೆಗಳು ಎಂದು ಅರ್ಥ.

ತ್ವಂ ಆದಿಃ ಅಂತಃ ಮಧ್ಯಂ ಎಂದು ಹೇಳಿದೆ. ಯದ್ಯಪಿ ಕ್ರಮಪ್ರಾಪ್ತವಾದ ಮಧ್ಯಂ ಎಂಬುದನ್ನು (ಅರ್ಥಾತ್ ಪಾಲನಕರ್ತೃತ್ವವನ್ನು) ಮಧ್ಯದಲ್ಲಿ ಹೇಳಬೇಕಿತ್ತು. ಆದರೂ

ಪಾಲನಕರ್ತೃತ್ವವು ಶ್ರೀಹರಿಯೊಬ್ಬನಲ್ಲಿದೆ ಎಂಬುದು ಆರ್ಯಾನಾರ್ಯಾನು-ಭವಸಿದ್ಧವಾದುದರಿಂದ ಕ್ರಮವ್ಯತ್ಯಾಸದಿಂದ ಯಾವುದೇ ದೋಷವಿಲ್ಲ ಎಂದು ತಿಳಿಯಬೇಕು. ॥೧೦॥

ಮಣ್ಣು ಮಡಿಕೆಗೆ ಕಾರಣವಾದಂತೆ ಎಂಬ ದೃಷ್ಟಾಂತದಲ್ಲಿ ನೈರ್ಭರ್ಯವುಳ್ಳ ಪೂರ್ವಪಕ್ಷಿಯು (ಬ್ರಹ್ಮನು ಉಪಾದಾನಕಾರಣನೆಂದು ಹೇಳುವವನು) ಮೂಗು ಹಿಡಿಯದೆ ಬಾಯಿ ತೆರೆಯಲಾರನೆಂಬ ಕಾರಣ, ಸಮಾಧಾನ ಪಡೆಯಲಾರದ ಕಾರಣ ಬ್ರಹ್ಮನಿಂದ ಭಿನ್ನವಾದ ಜಡಪ್ರಕೃತಿಯು ಜಗತ್ತಿಗೆ ಉಪಾದಾನವಾಗಿದೆ ಎಂದು ನಿರೂಪಿಸಿ ಶ್ರೀಹರಿಗೆ ನಿಮಿತ್ತತ್ವ ಹೇಳಲು ನಿಮಿತ್ತಗಳನ್ನು ವ್ಯಾಸರು ಹೇಳುವರು.

**ತ್ವಂ ಮಾಯಯಾಽಽತ್ಮಾಶ್ರಯಯಾ ಸ್ವಯೇದಂ**
**ನಿರ್ಮಾಯ ವಿಶ್ವಂ ತದನುಪ್ರವಿಷ್ಟಃ ।**
**ಪಶ್ಯಂತಿ ಯುಕ್ತಾ ಮನಸಾ ಮನೀಷಿಣೋ**
**ಗುಣವ್ಯವಾಯೇಽಪ್ಯಗುಣಂ ವಿಪಶ್ಚಿತಃ ॥೧೧॥**

**ತ್ವಂ** ನೀನು **ಆತ್ಮಾಶ್ರಯಯಾ** ನೀನೇ ಆಶ್ರಯವಾಗಿ ಉಳ್ಳ **ಸ್ವಯಾ** ಆದ್ದರಿಂದಲೇ ನಿನ್ನದೆಂದು ಕರೆಸಿಕೊಳ್ಳುವ ನಿನ್ನ ಅಧೀನವಾದ **ಮಾಯಯಾ** ಜಡಪ್ರಕೃತಿಯಿಂದ (ಅದನ್ನು ಉಪಾದಾನ ಮಾಡಿ) ಮತ್ತು **ಸ್ವಯಾ ಮಾಯಯಾ** ಸ್ವರೂಪಭೂತವಾದ ಜಡಪ್ರಕೃತಿ ನಿಯಾಮಕವಾದ ಶಕ್ತಿಯಿಂದಲೂ **ಇದಂ ವಿಶ್ವಂ** ಈ ಜಗತ್ತನ್ನು **ನಿರ್ಮಾಯ** ಸೃಷ್ಟಿಸಿ **ತದನುಪ್ರವಿಷ್ಟಃ** ಅದರ ರಕ್ಷಣೆಗಾಗಿ ಅದನ್ನು ಪ್ರವೇಶಿಸಿರುವಿ. ''ತತ್ಸೃಷ್ಟ್ವಾ ತದೇವಾನುಪ್ರಾವಿಶತ್'' ''ಯತೋ ವಾ ಇಮಾನಿ ಭೂತಾನಿ ಜಾಯಂತೇ ಯೇನ ಜಾತಾನಿ ಜೀವಂತಿ ಯತ್ಪ್ರಯಂತ್ಯಭಿಸಂವಿಶಂತಿ'' ಮುಂತಾದ ಶ್ರುತಿಪ್ರತಿಪಾದ್ಯನಾದ ಜಗಜ್ಜನ್ಮಾದಿಕರ್ತೃ ಪರಬ್ರಹ್ಮನು ವಿಷ್ಣುವೇ ಎಂದು ಚತುರ್ಮುಖ ಬ್ರಹ್ಮದೇವರು ಇದರಿಂದ ವ್ಯಕ್ತಗೊಳಿಸಿರುವರು. ಆದ್ದರಿಂದ ನಿನ್ನನ್ನು ಮಧ್ಯ ಎನ್ನುವರು. ಜ್ಞಾನಿಗಳ ಪ್ರತ್ಯಕ್ಷವನ್ನು ಇಲ್ಲಿ ಪ್ರಮಾಣವಾಗಿ ಹೇಳುತ್ತಾರೆ. **ಮನೀಷಿಣಃ** ಜ್ಞಾನಿಗಳು **ಮನಸಾ** ಮನಸ್ಸಿನಿಂದ ಮನನರೂಪವಾದ ವಿಚಾರದಿಂದ **ಯುಕ್ತಾಃ** ಕೂಡಿದವರು **ಏವಂ** ಈ ರೀತಿ **ಪಶ್ಯಂತಿ** ಕಾಣುವರು. ಆದ್ದರಿಂದ ಅವರ ಪ್ರತ್ಯಕ್ಷ ಈ ವಿಷಯದಲ್ಲಿ ಪ್ರಮಾಣ. ಹಾಗಾದರೆ ಪ್ರಾಕೃತಗುಣಸಂಬಂಧದಿಂದ ಶ್ರೀಹರಿಗೆ ದೋಷಸಂಬಂಧವೂ ಆಗಬೇಕಲ್ಲವೇ ಎಂದರೆ ಇಲ್ಲವೆನ್ನುತ್ತಾರೆ. **ವಿಪಶ್ಚಿತಃ** ಜ್ಞಾನಿಗಳು **ಗುಣವ್ಯವಾಯೇಽಪಿ** ಪ್ರಾಕೃತಗುಣಕಾರ್ಯ-ಸಮೂಹದಲ್ಲಿ ಇದ್ದವನಾದರೂ ಗುಣಸಂಬಂಧವಾದರೂ **ಅಗುಣಂ** ಪ್ರಾಕೃತಗುಣ-ಪ್ರಯುಕ್ತ ಅಜ್ಞಾನಾದಿದೋಷರಹಿತನನ್ನಾಗಿ **ಪಶ್ಯಂತಿ** ನೋಡುವರು. ॥೧೧॥

ಈ ವಿಷಯದಲ್ಲೂ ಜ್ಞಾನಿಪ್ರತ್ಯಕ್ಷವೇ ಪ್ರಮಾಣವೆಂದರ್ಥ. ಅಥವಾ ಈ ಕಾರಣದಿಂದಲೂ ಶ್ರೀಹರಿಯು ಜಗತ್ತಿಗೆ ಉಪಾದಾನ ಕಾರಣನಲ್ಲ ಕಿಂತು ನಿಮಿತ್ತನೇ ಎಂದು ಹೇಳುತ್ತಾರೆ. **ಯುಕ್ತಾಃ** ನಿನ್ನ ಅಧೀನವಾದ ಪ್ರಕೃತಿಯಿಂದ ಈ ಜಗತ್ತನ್ನು ನಿರ್ಮಿಸಿ, ಅದರಲ್ಲಿ ಪ್ರವೇಶಿಸಿದೆ ಎಂಬ ಮನಸ್ಸಿನಿಂದ ವಿಚಾರಯುಕ್ತರಾದ ಜ್ಞಾನಿಗಳು **ಗುಣವ್ಯವಾಯೇಽಪಿ** ಪ್ರಾಕೃತಗುಣಕಾರ್ಯವಾದ ಜಗತ್ತಿನ ವಿಷಯದಲ್ಲಿ, **ವಿಪಶ್ಚಿತಃ** ಪಂಡಿತರು ನಿನ್ನನ್ನು ಕಾಣುವ ಸಾಮರ್ಥ್ಯವುಳ್ಳವರು **ಅಗುಣಂ** ಗುಣಭಿನ್ನಕಾರಣ (ಉಪಾದಾನ ಭಿನ್ನ) ನಿಮಿತ್ತಕಾರಣನೆಂದೇ **ತ್ವಾಂ ಪಶ್ಯಂತಿ** ನಿನ್ನನ್ನು ಕಾಣುವರು. ಆದ್ದರಿಂದ ಇದು ಜ್ಞಾನಿಪ್ರತ್ಯಕ್ಷಸಿದ್ಧವೆಂದೂ ಭಾವ. **ಅಗುಣಂ** ಎಂದರೆ ಸತ್ವಾದಿಗುಣಶಕ್ತಿಗೆ ಅವಿಷಯನು ಎಂದೂ ಅರ್ಥ ಮಾಡಿರುವರು. **ವಿಪಶ್ಚಿತಃ** ಶ್ರುತ್ಯಾದಿಗಳಿಂದ ಪರೋಕ್ಷಜ್ಞಾನವನ್ನು ಪಡೆದ ಸಜ್ಜನರು, ಸತ್ವಾದಿಗುಣಸಮೂಹದಲ್ಲಿದ್ದರೂ ಅವುಗಳಿಂದ ರಹಿತನೆಂದು ನೋಡುವರು. ಈ ರೀತಿ ತಿಳಿಯುವವರು. ಮೋಕ್ಷಯೋಗ್ಯರೆಂದು ಹೇಳಿರುವದರಿಂದ ಅವರ ಸಾಕ್ಷಾತ್ಕಾರವು ಭ್ರಮವೆಂಬ ಶಂಕೆಗೆ ಅವಕಾಶವಿಲ್ಲ. ''ಹೃದಾ ಮನೀಷಾ ಮನಸಾಽಭಿಕ್ಲೃಪ್ತೋ ಯ ಏನಂ ವಿದುರಮೃತಾಸ್ತೇ ಭವಂತಿ'' ಎಂದು ಶ್ರುತಿ ಇದೆ.

ಸತ್ಯ ಃ- ವಿಪಃ ಚಿತಃ ಎಂದು ವಿಭಾಗ ಮಾಡಿಕೊಂಡು ಈ ರೀತಿಯಾಗಿಯೂ ಅನ್ವಯ ಮಾಡಿಕೊಳ್ಳಬಹುದು. **ಮನೀಷಿಣಃ** ಜ್ಞಾನಿಗಳು **ಚಿತಃ** ನೈಜಜ್ಞಾನದಿಂದ **ವಿಪಃ** (ಇತಿ) ಸ್ವಯಂ ಸರ್ವಪಾಲಕನು ವಿಗತಪಾಲಕನು ಪಾಲಕನಿಲ್ಲದವನು ಎಂಬುದಾಗಿ **ಪಶ್ಯಂತಿ** ನೋಡುವರು. ಐಂದ್ರಜಾಲಿಕ ಸೃಷ್ಟಿಯಂತೆ ಭಗವಂತನ ಸೃಷ್ಟಿಯು ಮಾಯಿಕವಲ್ಲವೆಂದು ತಿಳಿಸಲು **ಹೇ ನಿರ್ಮಾಯ** ಎಂದು ಸಂಬೋಧಿಸುವರು **ಹೇ ನಿರ್ಮಾಯ** ಮಾಯಾರಹಿತನೇ ಎಂದರ್ಥ. ''ಮಾಯಾಂ ತು ಪ್ರಕೃತಿಂ ವಿದ್ಯಾನ್ಮಾಯಿನಂ ತು ಮಹೇಶ್ವರಮ್'' ಎಂದು ಚಿದಚಿತ್‌ಪ್ರಕೃತಿ ನಿಯಾಮಕತ್ವವನ್ನು ಹೇಳುವರು. ಹೊರತು ಕಣ್ಣು ಕಟ್ಟುವ ವಿದ್ಯೆಯಲ್ಲ. ||೧೧||

ಮನಸ್ವಿಗಳ ಮನನ ಹೀಗಿರುವದೆಂದು ದೃಷ್ಟಾಂತ ಸಹಿತವಾಗಿ ಹೇಳುವರು.

**ಯಥಾಽಗ್ನಿಮೇಧಸ್ಯಮೃತಂ ಚ ಗೋಷು**
**ಭುವ್ಯನ್ನಮಂಬೂತ್ಥನನೇ ತಥೋರ್ವ್ಯಾಃ ।**
**ಯೋಗೈರ್ಮನುಷ್ಯಾ ಅಧಿಯಂತಿ ಹಿತ್ವಾ**
**ಗುಣೇಷು ಬುದ್ಧ್ಯಾ ಕವಯೋಽವಯಂತಿ** ||೧೨||

**ಯಥಾ** ಹೇಗೆ **ಮನುಷ್ಯಾಃ** ಮನುಷ್ಯರು **ಯೋಗೈಃ** ಮಥನ ಮೊದಲಾದ ಉಪಾಯಗಳಿಂದ **ಏಧಸಿ** ಕಟ್ಟಿಗೆಯಲ್ಲಿ (ಅರಣಿ) **ಅಗ್ನಿಂ** ಅಗ್ನಿಯನ್ನು **ಗೋಷು** ಆಕಳುಗಳಲ್ಲಿ

**ಅಮೃತಂ** ಹಾಲನ್ನು ತುಪ್ಪವನ್ನೂ **ಭುವಿ** ಭೂಮಿಯಲ್ಲಿ **ಅನ್ನಂ** ತಿನ್ನುವ ಪದಾರ್ಥಗಳನ್ನು ಧಾನ್ಯ ಮೊದಲಾದವನ್ನು **ತಥಾ** ಅದರಂತೆ **ಉರ್ವ್ಯಾಃ** ಭೂಮಿಯ **ಉತ್ಖನನೇ** ಅಗೆದಾಗ **ಅಂಬು** ನೀರನ್ನು **ಅಧಿಯಂತಿ** ಹೊಂದುವರೋ **ತಥಾ** ಹಾಗೆ **ಕವಯಃ** ಜ್ಞಾನಿಗಳು **ಬುದ್ಧ್ಯಾ** ವಿಚಾರಪೂರ್ವಕವಾದ ಜ್ಞಾನದಿಂದ **ಗುಣೇಷು** ಗುಣಕಾರ್ಯವಾದ ಜಗತ್ತಿನಲ್ಲಿ **ತ್ವಾ** ನಿನ್ನನ್ನು **ಅವಯಂತಿ** ತಿಳಿಯುವರು. ||೧೨||

ಸತ್ಯ ಃ- **ಯೋಗೈಃ** ಮಥನ-ದೋಹನ, ಬೀಜ ಬಿತ್ತುವದು, ಅಗೆಯುವದು ಮುಂತಾದ ಉಪಾಯಗಳಿಂದ **ಅವಯಂತಿ** ತಿಳಿಯುವರು. ತತ್ತ್ವಪ್ರಕಾಶಿಕೆಯ ಛಾಯಾವ್ಯಾಖ್ಯಾನದಲ್ಲಿ ಜಾನಂತಿ ಎಂದರ್ಥ ಮಾಡಿರುವರು. ಯೇ ಗತ್ಯರ್ಥಾಃ ಎಂಬ ನ್ಯಾಯದಿಂದ. **ಗುಣಾನ್ ಹಿತ್ವಾ** ಗುಣಗಳನ್ನು ಬಿಟ್ಟು ಗುಣಗಳಲ್ಲಿರುವವನನ್ನು ತಿಳಿಯುವರು. ಭಗವಂತ ಉಪಾದಾನ ಕಾರಣ ಎಂಬ ವಾಸನಾವನ್ನು ಪರಿಹರಿಸಲು ಅನೇಕ ದೃಷ್ಟಾಂತಗಳನ್ನು ಕೊಟ್ಟಿರುವರು. ಅಗ್ನಿ, ಅರಣಿ, ಆಕಳು, ಹಾಲು, ಧಾನ್ಯ, ಭೂಮಿ, ನೀರು, ಕಾರ್ಯ ಕಾರಣಗಳಾದರೂ ಹೇಗೆ ಭಿನ್ನವೋ ಹಾಗೆ ಜಗತ್ತು ಮತ್ತು ಜಗದೀಶ್ವರರು ಭಿನ್ನರೆಂದು ತಿಳಿಯುವರು. ಜ್ಞಾನಿಗಳಲ್ಲಿ ತಾರತಮ್ಯವಿರುವದರಿಂದ ಯೋಗ್ಯತಾನುಸಾರ ಜ್ಞಾನ ಆಗುವದೆಂದು ಇಷ್ಟು ದೃಷ್ಟಾಂತ ಹೇಳಿರುವರು.

ಲಿಂಗೇರೀ ಃ- ಅಗ್ನಿಯ ದೃಷ್ಟಾಂತದಿಂದ ಶ್ರೀಹರಿಯು ಜಗತ್ತಿಗಿಂತ ಭಿನ್ನನೆಂದು ಮತ್ತು ದೋಷಸಂಬಂಧಶೂನ್ಯನೆಂದು, ಅಮೃತದೃಷ್ಟಾಂತದಿಂದ ಎಲ್ಲಕ್ಕಿಂತ ಶ್ರೇಷ್ಠನೆಂದು, ಸಾರನೆಂದು ಮತ್ತು ತನ್ನ ಭಕ್ತರಿಗೆ ಮುಕ್ತಿಪ್ರದನೆಂದೂ, ಅನ್ನದ ದೃಷ್ಟಾಂತದಿಂದ ಎಲ್ಲರಿಗೂ ಉಪಜೀವ್ಯನೆಂದೂ, ನೀರಿನ ದೃಷ್ಟಾಂತದಿಂದ ಎಲ್ಲಕ್ಕಿಂತ ಹೆಚ್ಚು ಪಾಪಪರಿಹಾರಕನೆಂದೂ ತಿಳಿಸಿರುವರು. ||೧೨||

**ತಂ ತ್ವಾ ವಯಂ ನಾಥ ಸಮುಜ್ಜಿಹಾನಂ**
**ಸರೋಜನಾಭಾತಿಚಿರೇಪ್ಸಿತಾರ್ಥಮ್ ।**
**ದೃಷ್ಟ್ವಾ ಗತಾ ನಿರ್ವೃತಿಮದ್ಯ ಸರ್ವೇ**
**ಗಜಾ ದವಾರ್ತಾ ಇವ ಗಾಂಗಮಂಭಃ** **||೧೩||**

**ಹೇ ನಾಥ** ಸ್ವಾಮಿಯೇ **ಹೇ ಸರೋಜನಾಭ** ಪದ್ಮನಾಭನಾದ ವಿಷ್ಣುವೇ **ಸರ್ವೇ ವಯಂ** ನಾವೆಲ್ಲರೂ **ಅತಿಚಿರೇಪ್ಸಿತಾರ್ಥಂ** ಬಹುಕಾಲದಿಂದ ಹೊಂದಲು ಬಯಸಿದ ಪದಾರ್ಥವಾದ **ಸಮುಜ್ಜಿಹಾನಂ** ಆವಿರ್ಭವಿಸುವ ಅಥವಾ ವಿಚಾರ ಮಾಡಿ ನಿನ್ನನ್ನು ಸರ್ವೋತ್ತಮನೆಂದು ತಿಳಿದವರನ್ನು ಉನ್ನತರನ್ನಾಗಿ ಮಾಡುವ (ಸಾಧನಸಂಪನ್ನರನ್ನಾಗಿ ಮಾಡುವ ಅಥವಾ ಭಕ್ತರಿಂದ ಬಹುಜನ್ಮಗಳಲ್ಲಿ ಪ್ರಾರ್ಥಿತವಾದ ಮೋಕ್ಷಾದಿಪುರುಷಾರ್ಥವನ್ನು ಕೊಡುವ ಎಂದರ್ಥ. ತಂ ಅವಿಕ್ರಿಯಂ ಎಂದಾರಂಭಿಸಿ ಕವಯೋ ವಯಂತಿ ಎಂಬಲ್ಲಿವರೆಗೆ

ಶ್ಲೋಕಗಳಲ್ಲಿ ಹೇಳಿದ ಸರ್ವೋತ್ತಮತ್ವ-ಉಪಜೀವ್ಯತ್ವ ಮುಂತಾದ ಏಕದರ್ಶನೋಚಿತ ಬಹುಗುಣವುಳ್ಳವನಾವನೋ ಅಂತಹ **ತ್ವಾ** ನಿನ್ನನ್ನು **ಅದ್ಯ** ಈಗ **ದೃಷ್ಟ್ವಾ** ನೋಡಿ **ದವಾರ್ತಾಃ** ಕಾಡುಗಿಚ್ಚಿನಿಂದ ನೊಂದ **ಗಜಾಃ** ಆನೆಗಳು **ಗಾಂಗಂ ಅಂಭಃ** ಗಂಗಾನದಿಯ ನೀರನ್ನು ನೋಡಿ **ಇವ** ಸುಖ ಪಡುವ ಹಾಗೆ **ನಿರ್ವೃತಿಂ** ಸುಖವನ್ನು **ಗತಾಃ** ಹೊಂದಿದೆವು. ||೧೩||

ಸತ್ಯ :- ನಾಥಸಮುಜ್ಜಿಹಾನಂ ಎಂಬುದು ಒಂದು ಪದವೆಂದೂ ತಿಳಿಯಬಹುದೆಂದು ಶ್ರೀಸತ್ಯಧರ್ಮರು ಅಭಿಪ್ರಾಯಪಡುತ್ತಾರೆ. ನಾಥೇನ ಅಸ್ಮತ್ಪ್ರಾರ್ಥನಯಾ ಸಮುಜ್ಜಿಹಾನಂ ಆವಿರ್ಭವಂತಂ ಅಭಿವ್ಯಕ್ತನಾದ ಎಂದು ಅರ್ಥ. ||೧೩||

**ಸ ತ್ವಂ ವಿಧತ್ಸ್ವಾಖಿಲಲೋಕಪಾಲಾ**
**ವಯಂ ಯದರ್ಥಾಸ್ತವ ಪಾದಮೂಲಮ್ ।**
**ಸಮಾಗತಾಸ್ತೇ ಬಹಿರಂತರಾತ್ಮನ್**
**ಕಿಂ ವಾಽದ್ಯ ವಿಜ್ಞಾಪ್ಯಮಶೇಷಸಾಕ್ಷಿಣಃ** ||೧೪||

**ಯದರ್ಥಾಃ** ಯಾವ ಪ್ರಯೋಜನಾಪೇಕ್ಷಿಗಳಾಗಿ **ಅಖಿಲಲೋಕಪಾಲಾಃ** ಎಲ್ಲ ಲೋಕಗಳನ್ನು ರಕ್ಷಿಸುವದಕ್ಕಾಗಿ ನಿನ್ನಿಂದ ನಿಯುಕ್ತರಾದ **ವಯಂ** ನಾವು **ತವ ಪಾದಮೂಲಂ** ನಮಗೂ ರಕ್ಷಕರಾದ ನಿನ್ನ ಪಾದಮೂಲದ ಬಳಿಗೆ **ಸಮಾಗತಾಃ** ಬಂದಿರುವೆವೋ **ನಃ** ನಮ್ಮನ್ನು ರಕ್ಷಿಸುವ **ತ್ವಂ** ನೀನು **ತತ್** ಪ್ರಯೋಜನವನ್ನು **ನಃ** ನಮಗೆ **ವಿಧತ್ಸ್ವ** ಮಾಡಿಕೊಡು (ನ ಕೃತಮಿದಮಿತಿ ವಿಜ್ಞಾಪನಮವಿಜ್ಞೋಽಹಂ ಕಿಂ ಕರವಾಣೇತಿ ವಾಣೀಪ್ರವೀಣ ತವ ನೋಚಿತಾ ಇತಿ ವಿಜ್ಞಾಪಯಂತಿ) ಅಂದರೆ ಇಂಥದನ್ನು ಮಾಡೆಂದು ನೀವು ಹೇಳಿಯೇ ಇಲ್ಲ. ಏನೂ ತಿಳಿಯದ ನಾನೇನು ಮಾಡಲಿ? ಎಂಬ ಮಾತು ಮಾತಿನ ಜಾಣನೇ ನಿನಗೆ ಉಚಿತವಲ್ಲವೆಂದು ದೇವತೆಗಳು ವಿಜ್ಞಾಪಿಸುವರು. **ಹೇ ಆತ್ಮನ್** ನಮ್ಮ ಅಂತರ್ಯಾಮಿಯೇ **ಬಹಿಃ ಅಂತಃ** ಹೊರಗೂ ಒಳಗೂ **ಅಶೇಷಸಾಕ್ಷಿಣಃ** ಎಲ್ಲವನ್ನೂ ಪ್ರತ್ಯಕ್ಷವಾಗಿ ಕಾಣುವ **ತೇ** ನಿನಗೆ **ಅದ್ಯ** ಈಗ **ವಿಜ್ಞಾಪ್ಯಂ** ಬಿನ್ನವಿಸಿ ಕೊಳ್ಳಬೇಕಾದುದು **ಕಿಂ ವಾ ಅಸ್ತಿ** ಏನು ತಾನೇ ಇದೆ. ಎಲ್ಲವನ್ನೂ ಬಲ್ಲ ನಿನಗೆ ವಿಜ್ಞಾಪಿಸಬೇಕಾದದ್ದೇನೂ ಇಲ್ಲವೆಂದು ಅಭಿಪ್ರಾಯ. ||೧೪||

**ಅಹಂ ಗಿರಿತ್ರಶ್ಚ ಸುರಾದಯೋ ಯೇ**
**ದಕ್ಷಾದಯೋಽಗ್ನೇರಿವ ಕೇತವಸ್ತೇ ।**
**ಕಿಂ ವಾ ವಿಧೇಮೇಶ ಪೃಥಗ್ವಿಭಾವಿತಾ**
**ವಿಧತ್ಸ್ವ ಶಂ ನೋ ದ್ವಿಜದೇವಮಿತ್ರ** ||೧೫||

**ಕೇತವಃ** ಕಿಡಿಗಳು (ಜ್ವಾಲೆಗಳು) **ಅಗ್ನೇಃ ಇವ** ಅಗ್ನಿಯಿಂದ ಜನಿಸಿ ಅಗ್ನಿಯನ್ನು ಆಶ್ರಯಿಸಿಕೊಂಡಿರುವಂತೆ **ಅಹಂ** ಬ್ರಹ್ಮನಾದ ನಾನು **ಗಿರಿತ್ರಃ** ಕೈಲಾಸ ಪರ್ವತವನ್ನು ರಕ್ಷಿಸುವ ಶಿವನು **ಸುರಾದಯಃ ಚ** ಇಂದ್ರಾದಿ ದೇವತೆಗಳು **ಯೇ ದಕ್ಷಾದಯಃ** ದಕ್ಷ ಮೊದಲಾದ ಪ್ರಜೇಶ್ವರರು **ತೇ** ನಿನ್ನವರು, ನಿನ್ನಿಂದ ಹುಟ್ಟಿದವರು, ನಿನ್ನನ್ನು ಆಶ್ರಯಿಸಿದವರು, ನಿನ್ನ ಕಿಂಕರರು. **ಹೇ ಈಶ** ಹೇ ಜಗನ್ನಿಯಾಮಕನೇ **ಪೃಥಕ್** ನಿನ್ನಿಂದ ಭಿನ್ನರಾದ **ವಿಭಾವಿತಾಃ ಚ** ಸೃಷ್ಟಿಕರ್ತಾ ಸಂಹಾರಕರ್ತಾ ಎಂದು ಸಾಮಾನ್ಯರಿಗೆ ಪ್ರಸಿದ್ಧರಾದ ಅಥವಾ **ಪೃಥಗ್ವಿಭಾವಿತಾಃ** ಭಿನ್ನಾಂಶರಾಗಿ ನೀನು ಹೇಳಿದ್ದನ್ನು ಮಾಡುವವರಾಗಿ ಹುಟ್ಟಿಸಲ್ಪಟ್ಟವರು, ಪ್ರೋಕ್ತಕಾರಿಗಳು ಎಂದರ್ಥ. **ಕಿಂ ವಾ ವಿಧೇಮ** ನಿನ್ನ ಯಾವ ಆಜ್ಞೆಯನ್ನು ಮಾಡೋಣ. ಇದರಿಂದ ಕಿಂಕರತ್ವವನ್ನು ವಿಶದಪಡಿಸಿರುವರು. **ಹೇ ದ್ವಿಜದೇವಮಿತ್ರ** ಭೂಸುರರಿಗೂ, ಸುರರಿಗೂ ಅನಿಮಿತ್ತಬಂಧುವಾದ ಶ್ರೀಹರಿಯೇ **ನಃ** ನಮಗೆ **ಶಂ** ನಿನ್ನ ಅಪ್ಪ ಣೆಯಂತೆ ನಡೆಯುವದೆಂಬ ಸುಖವನ್ನು **ವಿಧತ್ಸ್ವ** ಉಂಟುಮಾಡು. ಇದನ್ನು ಮಾಡಿದರೆಂದು ಆಜ್ಞಾಪಿಸು ಎಂದರ್ಥ.

ಸತ್ಯ :- ಈಶ ಎಂದೂ ಸಂಬೋಧಿಸಿದ್ದರಿಂದ ತಮ್ಮ ಕಾರ್ಯಾಕಾರಿತ್ವಯನ್ನು ಉಪಹಾಸ ಮಾಡಿರುವರು ಎಂದು ತಿಳಿಯಬೇಕು. ಅಂದರೆ ನಾವೇನೂ ಮಾಡಲು ಶಕ್ತರಲ್ಲವೆಂದು ಭಾವ. ಹಾಗಾದರೆ ನಾನೇನು ಮಾಡಲಿ ಎಂದರೆ ಹೇಳುವರು. **ದ್ವಿಜದೇವಮಿತ್ರ** ಎಂದು. **ಶಂ ವಿಧತ್ಸ್ವ** ಬ್ರಾಹ್ಮಣರಿಗೆ ಯಜನ-ಯಾಜನಗಳಿಲ್ಲದ್ದರಿಂದ ಆದ್ದರಿಂದಲೇ ದೇವತೆಗಳಿಗೆ ಆಹುತಿ ಮುಂತಾದವುಗಳಿಲ್ಲದ್ದರಿಂದ ಇವುಗಳಿಂದ ಬರುವ ಸುಖವನ್ನೇ ಉಂಟು ಮಾಡೆಂದು ಈ ಸಂಬೋಧನಗಳಿಂದ ಸೂಚಿತವಾಗುವದು. **ದ್ವಿಜದೇವ ಮಂತ್ರಂ** ಎಂಬ ಪಾಠದಲ್ಲಿ, **ಹೇ ದ್ವಿಜದೇವ** ಬ್ರಹ್ಮಣ್ಯದೇವನೇ **ಶಂ** ಹವಿರಾದಿಸುಖವು ನಮಗೆ **ನೋ** ಇಲ್ಲ, ಆದ್ದರಿಂದ **ತ್ವಂ** ನೀನು **ಮಂತ್ರಂ** ಅದರ ಪ್ರಾಪ್ತ್ಯುಪಾಯವನ್ನು ಗುಪ್ತಭಾಷಣವನ್ನು ಮಾಡು ಎಂದು ಅರ್ಥ. ಅಥವಾ ಯತ್ ಶಂ ನಃ ತದ್ವಿಧತ್ಸ್ವ ನಮಗಾವುದು ಸುಖವೋ ಅದನ್ನು ಮಾಡು.

ಛಲಾರೀ :- ಅಗ್ನಿ ಮತ್ತು ವಿಷ್ಪುಲಿಂಗಗಳ ದೃಷ್ಟಾಂತದಿಂದ ಬಹುಪ್ರಕಾಶವುಳ್ಳ ಅಗ್ನಿಯಂತೆ ನೀನು ಸರ್ವಜ್ಞನಾಗಿರುವಿ. ಕಿಡಿಯಂತೆ ನಾವು ಅಲ್ಪಜ್ಞರಾಗಿದ್ದೇವೆ. ಆದ್ದರಿಂದ ಯಾವುದು ಸುಖೋಪಾಯ ಎಂದು ನಾವು ತಿಳಿದಿಲ್ಲ. ಸರ್ವಜ್ಞನಾದ ನೀನೇ ಆ ಉಪಾಯವನ್ನು ತಿಳಿಸಬೇಕೆಂದು ತಾತ್ಪರ್ಯ.

ಲಿಂಗೇರೀ :- ಅಸುರಂದ ಪೀಡಿತರಾದ ಇಂದ್ರಾದಿಗಳಿಂದ ವಿಭಾವಿತಾಃ ಧ್ಯಾನಾದಿಗಳಿಂದ ಸೇವಿತರಾದ ಅಸ್ವತಂತ್ರರಾದ ನಾನಾಗಲಿ, ರುದ್ರನಾಗಲೀ ಇಂದ್ರಾದಿದೇವತೆಗಳ ಅಭೀಷ್ಟಗಳನ್ನು ನೆರವೇರಿಸಲು ಸಮರ್ಥರಲ್ಲ. ಅಗ್ನಿಯಿಂದ

ಕಿಡಿಗಳಂತೆ ನಿನ್ನಿಂದಲೇ ಬಂದವರಾದ್ದರಿಂದ ಮತ್ಸ್ಯ-ಕೂರ್ಮಾದಿಗಳಂತೆ ಸುರಕಾರ್ಯ ಸಾಧಿಸಬಹುದಲ್ಲ ಎಂದರೆ ಹೇಳಿರುವರು ಪೃಥಕ್ ಎಂದು. ನಾವು ನಿನ್ನಿಂದ ಅತ್ಯಂತ ಭಿನ್ನರು ಮತ್ಸ್ಯಾದಿಗಳಂತೆ ಅಭಿನ್ನರಲ್ಲ. ಆದ್ದರಿಂದ ನಮಗೆ ಸುಖವಾಗುವಂತೆ ನೀನೇ ಆಜ್ಞಾಪಿಸು. ಎಂದು ಹೀಗೂ ಅರ್ಥ ಮಾಡಿರುವರು. ।।೧೫।।

**ಶ್ರೀಶುಕ ಉವಾಚ**

**ಏವಂ ವಿರಿಂಚ್ಯಾದಿಭಿರೀಡಿತಸ್ತದ್**
**ವಿಜ್ಞಾಯ ತೇಷಾಂ ಹೃದಯಂ ಯಥೈವ ।**
**ಜಗಾದ ಜೀಮೂತಗಭೀರಯಾ ಗಿರಾ**
**ಬದ್ಧಾಂಜಲೀನ್ ಸಂವೃತಸರ್ವಕಾಮಾನ್ (ಕಾರ್ಯಾನ್) ।।೧೬।।**

**ಏವಂ** ಈ ರೀತಿಯಾಗಿ **ವಿರಿಂಚಾದಿಭಿಃ (ಸುರೈಃ)** ಬ್ರಹ್ಮದೇವರೇ ಮೊದಲಾದ ದೇವತೆಗಳಿಂದ **ಈಡಿತಃ** ಸ್ತುತನಾದ **(ಸಃ)** ಆ ಅಜಿತನು **ತೇಷಾಂ** ಆ ದೇವತೆಗಳ **ತತ್ ಹೃದಯಂ** ಆ ಅಭಿಪ್ರಾಯವನ್ನು **ಯಥಾ ಏವ** ಯಥಾವತ್ತಾಗಿ ಅವರ ಮನಸ್ಸಿನಲ್ಲಿ ಹೇಗಿದೆಯೋ ಹಾಗೆ **ವಿಜ್ಞಾಯ** ತಿಳಿದು **ಬದ್ಧಾಂಜಲೀನ್** ಕೈ ಮುಗಿದು ಕೊಂಡಿದ್ದ **ಸಂವೃತಸರ್ವಕಾಮಾನ್** ತಮ್ಮೆಲ್ಲ ಬಯಕೆಗಳನ್ನೂ ವಿಜ್ಞಾಪಿಸಿದ **(ತಾನ್ ಪ್ರತಿ)** ಆ ದೇವತೆಗಳನ್ನು ಕುರಿತು **ಜೀವಮೂತಗಭೀರಯಾ ಗಿರಾ** ಮೋಡದ ಧ್ವನಿಯಂತೆ (ಗುಡುಗಿನಂತೆ) ಗಂಭೀರವಾದ ಮಾತಿನಿಂದ **ಜಗಾದ** ಹೇಳಿದನು ಆಜ್ಞಾಪಿಸಿದನು.

ಸತ್ಯ ಃ- **ಈಶಪೃಥಗ್ವಿಭಾವಿತಾಃ ಈಶ** ರುದ್ರದೇವರಿಂದ **ಪೃಥಕ್** ಪ್ರತ್ಯೇಕವಾಗಿ ಹೊರ ಬಂದ ಅಂದರೆ ರುದ್ರದೇವರ ಅಂಶರಾದ ದುರ್ವಾಸಶಾಪದಿಂದ **ವಿಭಾವಿತಾಃ** (ಅಸಂಭಾವಿತ ಇತಿ) ಹೀಗಾಗಿರುವರೆಂದು ಅಂತರ್ಲಾಪಿತದಿಂದ ಬರುವ ಅಭಿಪ್ರಾಯವನ್ನು **ವಿಜ್ಞಾಯ** ತಿಳಿದು ಎಂದೂ ಅರ್ಥ ಮಾಡುವರು ಎಂದು ಶ್ರೀಗಳವರು ಹೇಳಿರುವರು.

ಛಲಾರೀ ಃ- **ಸಂವೃತಸರ್ವಕಾರ್ಯಾನ್** ಎಂಬ ಪಾಠದಲ್ಲಿ ಸಂವೃತಾನಿ ಗೃಹೀತಾನಿ ಸರ್ವಾಣಿ ಕಾರ್ಯಾಣಿ ಇಂದ್ರಿಯಾಣಿ ಯೈಃ ತಾನ್ ಎಲ್ಲ ಇಂದ್ರಿಯಗಳನ್ನು ನಿಗ್ರಹಿಸಿದ ಅಂದರೆ ಭಗವಂತನಲ್ಲೇ ನಿಷ್ಠಾವುಳ್ಳ ಎಂದರ್ಥ. ।।೧೬।।

**ಏಕ ಏವೇಶ್ವರಸ್ತಸ್ಮಿನ್ ಸುರಕಾರ್ಯೇ ಸುರೇಶ್ವರಃ ।**
**ವಿಹರ್ತುಕಾಮಸ್ತಾನಾಹ ಸಮುದ್ರೋನ್ಮಥನಾದಿಭಿಃ ।।೧೭।।**

**ಸುರೇಶ್ವರಃ** ಬ್ರಹ್ಮಾದಿಗಳಿಗೆ ಸ್ವಾಮಿಯಾದ ಶ್ರೀಮನ್ನಾರಾಯಣನು **ಏಕ ಏವ** ಒಬ್ಬನೇ ಯಾರ ಅಪೇಕ್ಷೆಯಿಲ್ಲದೇ **ತಸ್ಮಿನ್ ಸುರಕಾರ್ಯೇ** ಆ ದೇವಕಾರ್ಯದಲ್ಲಿ **ಈಶ್ವರಃ**

ಸಮರ್ಥನಾದರೂ **ಸಮುದ್ರೋನ್ಮಥನಾದಿಭಿಃ ಚ** ಅಮೃತದ ಪ್ರಾಪ್ತಿಗಾಗಿ ಅಜಿತರೂಪದಿಂದ ಸಮುದ್ರ ಕಡೆಯುವದು, ಕೂರ್ಮರೂಪದಿಂದ ಮಂದರಪರ್ವತವನ್ನೆತ್ತುವದು, ನಾರಾಯಣೀರೂಪದಿಂದ ದೈತ್ಯಮೋಹನ ಮಾಡುವದು, ಧನ್ವಂತರೀ ರೂಪದಿಂದ ಅಮೃತತರುವುದು, ಮೋಹಿನೀರೂಪದಿಂದ ದೈತ್ಯರನ್ನು ಮೋಹಿಸುವುದು ದೇವತೆಗಳಿಗೆ ಅಮೃತ ಬಡಿಸುವುದು ಮುಂತಾದ ವ್ಯಾಪಾರಗಳಿಂದ **ವಿಹರ್ತುಕಾಮಃ** ಕ್ರೀಡೆಮಾಡಲು ಇಚ್ಛೆಯುಳ್ಳವನಾಗಿ **ತಾನ್ ಪ್ರತಿ** ಆ ದೇವತೆಗಳನ್ನು ಕುರಿತು **ಆಹ** ಉಪಾಯಗಳನ್ನು ಉಪದೇಶಿಸಿದನು. ಹೊರತು ಅಸಾಮರ್ಥ್ಯದಿಂದಲ್ಲವೆಂದು ಭಾವ.

ವಿಹರ್ತುಂ ಕಾಮಃ ಇಚ್ಛಾ ಯಸ್ಯ ಸಃ ವಿಹರ್ತುಕಾಮಃ ''ತುಂ ಕಾಮಮನಸೋರಪಿ'' ಎಂದು ಹೇಳಿರುವದರಿಂದ ಮಲೋಪವಾಗಿದೆ. ।।೧೭।।

**ಶ್ರೀ ಭಗವಾನುವಾಚ**

**ಹಂತ ಬ್ರಹ್ಮನ್ನಹೋ ಶಂಭೋ ಹೇ ದೇವಾ ಮಮ ಭಾಷಿತಮ್ ।**
**ಶೃಣುತಾವಹಿತಾಃ ಸರ್ವೇ ಶ್ರೇಯೋ ವಃ ಸ್ಯಾದ್ ಯಥಾ ಪುರಾ ।।೧೮।।**

**ಹೇ ಬ್ರಹ್ಮನ್ ಶಂಭೋ ಹೇ ದೇವಾಃ ಚ** ಎಲೋ ಬ್ರಹ್ಮನೇ, ರುದ್ರನೇ, ಇಂದ್ರಾದಿದೇವತೆಗಳೇ, **ಅಹೋ** ಇಂದ್ರಾದಿಗಳು ದೈತ್ಯರಿಗೆ ಹೆದರಿರುವದು ಆಶ್ಚರ್ಯವು. **ಪುರಾ** ಮೊದಲು **ಯಥಾ** ಯಾವ ರೀತಿಯಿಂದ **ವಃ** ನಿಮಗೆ **ಶ್ರೇಯಃ ಸ್ಯಾತ್** ಸಂಪತ್ತು ದೊರೆಯುವದೋ **ತಂ ವಿಧಂ** ಆ ರೀತಿಯನ್ನು ತಿಳಿಸುವ **ಮಮ ಭಾಷಿತಂ** ನನ್ನ ಮಾತನ್ನು **ಸರ್ವೇ** ನೀವೆಲ್ಲರೂ **ಅವಹಿತಾಃ ಸಂತಃ** ಒಂದೇ ಮನಸ್ಸಿನಿಂದ **ಶೃಣುತ** ಕೇಳಿರಿ **ಹಂತ** ನಿಮಗೆ ಸಂತೋಷವಾಗುವದು. ಹಿಂದಿನಂತೆ ನಿಮಗೆ ಸಂಪತ್ತು ದೊರೆಯುವದು ಎಂದಾದರೂ ಅರ್ಥ. **ಪುರಾ ಶೃಣುತ** ಮೊದಲು ಕೇಳಿರಿ ಎಂದೂ ಅರ್ಥ ಮಾಡಿರುವರು. ।।೧೮।।

**ಯಾತುಧಾನೈಶ್ಚ ದೈತೇಯೈಸ್ತಾವತ್ ಸಂಧಿರ್ವಿಧೀಯತಾಮ್ ।**
**ಕಾಲೇನಾನುಗೃಹೀತೈಸ್ತೈರ್ಯಾವದ್ ವೋ ಭವ ಆತ್ಮನಃ ।।೧೯।।**

**ಯಾವತ್** ಎಲ್ಲಿಯವರೆಗೆ **ಆತ್ಮನಃ** ನಿಮಗೆ **ಭವಃ** ಮಂಗಲವು ಶ್ರೇಯಸ್ಸು ಅಭಿವೃದ್ಧಿಯು **ಭವತಿ** ಆಗುವದೋ **ತಾವತ್** ಅಲ್ಲಿಯ ವರೆಗೆ **ಕಾಲೇನ** ಕಾಲರೂಪಿಯಾದ ಶ್ರೀಹರಿಯಿಂದ **ಅನುಗೃಹೀತೈಃ** ಅನುಕೂಲತೆಯನ್ನು ಹೊಂದಿರುವ **ತೈಃ ಯಾತುಧಾನೈಃ ಸಹ** ತತ್ಕಾಲದಲ್ಲಿ ಬಲಿಷ್ಠರಾಗಿರುವ ರಾಕ್ಷಸರೊಂದಿಗೆ **ದೈತೇಯೈಃ ಸಹ** ಬಲಿ ಮೊದಲಾದ ದೈತ್ಯರೊಂದಿಗೆ **ಸಂಧಿಃ** ಒಪ್ಪಂದವು **ವಿಧೀಯತಾಂ** ಮಾಡಲ್ಪಡಲಿ. **ಅನುಗೃಹೀತೈಃ** ನಿಮ್ಮ ಅಭಿಪ್ರಾಯವನ್ನೇ ಅನುಮೋದಿಸುವ ಮೂಲಕ ನಿಮ್ಮವರಾದ ಎಂದಾದರೂ ಅರ್ಥ. ।।೧೯।।

ಸತ್ಯ :- **ಕಾಲೇನ ಅನುಗೃಹೀತೈಃ** ಕಾಲನಾಮಕನಾದ ನನ್ನಿಂದಲೇ ಅನುಗೃಹೀತರಾದ ಅಂದರೆ ಈಗ ಅವರಿಗೆ ಬಲ ಕಾಲವೆಂದು ಭಾವ. **ವಃ** ನಿಮಗೆ **ಆತ್ಮನಃ** ನನ್ನಿಂದ **ಭವಃ** ಮಂಗಲವು **ಭವೇತ್** ಆಗುವದೋ **ತಾವತ್** ಅಲ್ಲಿಯ ವರೆಗೆ **ತೈಃ** ಅವರೊಡನೆ **ಸಂಧಿಃ** ಸಂಧಾನವು **ವಿಧೀಯತಾಂ** ಮಾಡಲ್ಪಡಲಿ. ''ಕಾವ್ಯೇನಾನುಗೃಹೀತೈಃ'' ''ಯಾತ ದಾನವದೈತೇಯ್ಯೈಃ'' ಎಂಬ ಪಾಠಗಳು ಪಾಂಕ್ತಗಳು ಸ್ಪಷ್ಟಾರ್ಥಗಳು. **ಹೇ ದೇವಾಃ** ದೇವತೆಗಳೇ ಬಲಿಚಕ್ರವರ್ತಿ ಮನೆಗೆ **ಯಾತ** ಹೋಗಿರಿ. ಹೋಗಿ ದಾನವ-ದೈತ್ಯರೊಡನೆ ಸಂಧಿ ಮಾಡಿಕೊಳ್ಳಿರಿ. ಅವರು ಈಗ ಹರಿ ಅನುಗ್ರಹದಿಂದ ಪ್ರಬಲರಾಗಿದ್ದಾರೆ. ಎಲ್ಲಿಯವರೆಗೆ ನಿಮಗೆ ಇಂದ್ರನಿಗೆ ಅಭಿವೃದ್ಧಿಯು ಆಗುವುದೋ ಅಲ್ಲಿಯ ವರೆಗೆ ಏಕಮತದಿಂದ ಸ್ವೀಕೃತರಾದ ಆ ದೈತ್ಯ-ದಾನವರೊಡನೆ ಸಂಧಾನ ಮಾಡಿಕೊಳ್ಳಿರಿ ಎಂದು ಅರ್ಥ. ||೧೯||

ಹೇ ಅರಿಧರನೇ ! (ಚಕ್ರಧಾರಿಯೇ) ಅರಿಗಳೊಡನೆ ಸಂಧಾನ ಹೇಗೆ ಮಾಡುವದು ಹೇಳು ಎಂದರೆ ಒಂದು ಕಿಂವದಂತಿಯನ್ನು ಸೂಚಿಸುತ್ತ ತಾನು ಹೇಳಿದ್ದು ಸೂಕ್ತವೆಂದು ಕಾಲಕ್ಕೆ ತಕ್ಕಂತೆ ಹೇಳುವನು-

**ಅರಯೋऽಪಿ ಹಿ ಸಂಧೇಯಾಃ ಸತಿ ಕಾರ್ಯಾರ್ಥಗೌರವೇ ।**
**ಅಹಿಮೂಷಕವದ್ ದೇವಾ ಹ್ಯರ್ಥಸ್ಯ ಪದವೀಂ ಗತೈಃ ||೨೦||**

**ಹೇ ದೇವಾಃ** ದೇವತೆಗಳೇ **ಕಾರ್ಯಾರ್ಥಗೌರವೇ ಸತಿ** ಕರ್ತವ್ಯ ಪ್ರಯೋಜನವು ದೊಡ್ಡದಾಗಿರುವಾಗ **ಅರ್ಥಸ್ಯ** ಪ್ರಯೋಜನದ **ಪದವೀಂ ಗತೈಃ** ಪ್ರಾಪ್ತಿಗಾಗಿ ಹೊರಟ ಜನರಿಂದ **ಅಹಿಮೂಷಕವತ್** ಹಾವು ಇಲಿಯ ನ್ಯಾಯದಂತೆ **ಅರಯೋऽಪಿ** ದ್ವೇಷಿಗಳೂ **ಸಂಧೇಯಾಃ** ಸಂಧಿ ಮಾಡಿಕೊಳ್ಳುವದು ನೀತಿ.

**ಅಹಿಮೂಷಕ** ನ್ಯಾಯವನ್ನು ಶ್ರೀಸತ್ಯಧರ್ಮರು ಹೀಗೆ ತಿಳಿಸಿದ್ದಾರೆ.

ಸತ್ಯ :- ೧) **ಯಾವನ್ಮಯೂರಸಂತ್ರಸ್ತ್ರಃ ಸರ್ಪೋ ಮೂಷಕವೇಶ್ಮನಿ ।**
**ನಿಲೀಯ ನಿರ್ಭಯಃ ಪಶ್ಚಾದ್ ಭಕ್ಷಿತ್ವಾ ಮೂಷಕಂ ಗತಃ ॥**

ನವಿಲಿಗೆ ಹೆದರಿದ ಹಾವು ಕೆಲವು ಕಾಲ ತನ್ನ ಶತ್ರುವಾದ ಇಲಿಯೊಂದಿಗೆ ಸಂಧಿ ಮಾಡಿಕೊಂಡಿತು. ನವಿಲು ಹೊರಟು ಹೋದ ಮೇಲೆ ಸರ್ಪವು ಭಯರಹಿತವಾಯಿತು. ಬಿಲದಿಂದ ಹೊರ ಬರುತ್ತ ಇಲಿಯನ್ನು ತಿಂದು ಹೊರಟಿತು. ಈ ರೀತಿಯಾದ ಅಹಿ-ಮೂಷಿಕನ್ಯಾಯವು ಪಂಚತಂತ್ರ ಮುಂತಾದ ರಾಜನೀತಿ ಗ್ರಂಥಗಳಲ್ಲಿ ಪ್ರಸಿದ್ಧವಾಗಿದೆ.

೨) ಜನಗಳಲ್ಲಿ ಬಳಿಕೆಯಲ್ಲಿರುವ ನ್ಯಾಯ ಮತ್ತೊಂದು ರೀತಿಯಾಗಿದೆ. ಹಾವಾಡಿಗ ಹಾವನ್ನು, ಇಲಿಯನ್ನು ಹಿಡಿದು ಬಿದಿರಿನ ಬುಟ್ಟಿಯಲ್ಲಿ ಇಟ್ಟಿದ್ದನು. ಉಪವಾಸವಿದ್ದ ಹಾವು ವಿಚಾರಿಸಿತು. ಇಲ್ಲಿಯೇ ಇದ್ದು ಈ ಒಂದೇ ಇಲಿಯನ್ನು ತಿನ್ನುವದಕ್ಕಿಂತ ಬುಟ್ಟಿಯಿಂದ ತಪ್ಪಿಸಿಕೊಂಡು ಹೊರಗೆ ಹೋಗಿ ಇದನ್ನೂ ಅನೇಕ ಇಲಿಗಳನ್ನು ತಿಂದು ಜೀವಿಸುವುದು ಉತ್ತಮವೆಂದು ಭಾವಿಸಿತು. ಇಲಿಯೊಂದಿಗೆ ಮಾತನಾಡಿತು. ಹೇ ಗೆಳೆಯ ಇಲಿಯೇ ನಾನು ಹೆಡೆಯನ್ನು ಎತ್ತಿ ನಿಲ್ಲುತ್ತೇನೆ. ನೀನು ಅದರ ಮೇಲೆ ಇದ್ದುಕೊಂಡು ಬುಟ್ಟಿಯ ಮುಚ್ಚಳವನ್ನು ಕೊರೆ. ಆ ರಂಧ್ರದಿಂದ ನಾವಿಬ್ಬರೂ ತಪ್ಪಿಸಿಕೊಂಡು ಹೋಗೋಣ. ಇಬ್ಬರೂ ಸುಖವಾಗಿ ಇರೋಣವೆಂದಿತು. ಸಮ್ಮತಿಸಿದ ಇಲಿಯು ರಂಧ್ರವನ್ನು ಮಾಡಿದಾಗ ಹೊರಕ್ಕೆ ಬಂದಾಗ ಬೆಕ್ಕನ್ನು ಕಂಡು ಹೆದರಿದ ಇಲಿಯನ್ನು ಹಾವು ತಿಂದು ಸುಖವಾಗಿ ಹೊರಟಿತು ಎಂದು ಹೇಳುವರು.

ಪರಮಾತ್ಮ ಮೋಸದ ಇಂಥ ಉಪದೇಶವನ್ನು ಯಾಕೆ ಮಾಡಿದ ಎಂಬ ಶಂಕೆ ಬರುತ್ತದೆ. ''ನಿಕೃತ್ಯಾ ನಿಕೃತಿಂ ಹನ್ಯಾತ್'' ಮೋಸವನ್ನು ಮೋಸದಿಂದಲೇ ಗೆಲ್ಲಬೇಕೆಂದು ಶಾಸ್ತ್ರ ಹೇಳುತ್ತದೆ. ಆದ್ದರಿಂದ ಈ ಉಪದೇಶವು ಯೋಗ್ಯವೇ ಆಗಿದೆ ಎಂದು ತಿಳಿಯಬೇಕು. ।।೨೦।।

ಇಲ್ಲಿ ಶ್ರೀಸತ್ಯಧರ್ಮರ ಮಾತುಗಳು ಹೀಗಿವೆ. ಕೇನಚಿದ್ವಿಷಭಿಷಜಾ ಮಂಜೂಷಾಯಾಂ ಸರ್ಪೋ ಮೂಷಕಶ್ಚ ಸ್ಥಾಪಿತೌ ತದಾ ಸಃ ಲೋಚನಶ್ರವಾಃ ಆಲುಲೋಚ । ಯದೀಮಮದ್ಯ ಭಕ್ಷಯಿಷ್ಯೇ ಚೇತ್ ಕನೀಯೋಽನ್ನಂ ನ ಶ್ವಶ್ಚ ಅತೋ ಅನೇನ ಸಂಧಿರ್ಮಮ ಬಂಧುರಿತಿ । ತತ ಆಜುಹಾವ ಅಹಿಃ ಅಹಿತಮಪಿ । ಮೂಷಕ ಸಖೇ ಮಮ ಫಣೋಪರಿ ತಿಷ್ಠನ್ ರಂಧ್ರಂ ಕುರು, ತತಸ್ತದ್ದ್ವಾರಾ ಉಭಾವಪಿ ನಿರ್ಭೀತೌ ಗಚ್ಛಾವಃ ಕ್ಷೇಮಿಣಾವಿತಿ ಬಭಾಷೇ । ತತ ಓಮಿತ್ಯುಕ್ತ್ವಾ ಸುಷಿರಂ ಕೃತವತಿ ಮೂಷಕೇ ಸ್ವನಿಃಸರಣಂ ಭವೇದಿತಿ ನೀರೀಕ್ಷ್ಯ ತಂ ಭಕ್ಷಯಿತ್ವಾ ಬಹಿರ್ನಿಃಸಸಾರ ಇತಿ ।।೨೦।।

**ಅಮೃತೋತ್ಪಾದನೇ ಯತ್ನಃ ಕ್ರಿಯತಾಮವಿಲಂಬಿತಮ್ ।**
**ಯಸ್ಯ ಪೀತಸ್ಯ ವೈ ಜಂತುರ್ಮೃತ್ಯುಗ್ರಸ್ತೋಽಮರೋ ಭವೇತ್ ।।೨೧।।**

**ಅವಿಲಂಬಿತಂ** ತಡ ಮಾಡದೆ **ಅಮೃತೋತ್ಪಾದನೇ** ಅಮೃತದ ಉತ್ಪಾದನೆಯಲ್ಲಿ **ಯತ್ನಃ** ಪ್ರಯತ್ನವು **ಕ್ರಿಯತಾಂ** ಮಾಡಲ್ಪಡಲಿ. **ಪೀತಸ್ಯ ಯಸ್ಯ** ಪಾನಮಾಡಿದ ಯಾವ ಅಮೃತದ ಸಾಮರ್ಥ್ಯದಿಂದ **ಮೃತ್ಯುಗ್ರಸ್ತಃ ಜಂತುಃ** ಸಾವಿಗೆ ತುತ್ತಾದ ಪ್ರಾಣಿಯು **ಅವಿಲಂಬಿತಂ** ಶೀಘ್ರದಲ್ಲಿ **ಅಮರಃ ಭವೇತ್** ಮರಣರಹಿತನಾಗುವನು **ವೈ** ಇದು ಅಮೃತದ ಯೋಗ್ಯತೆಯು. ।।೨೧।।

**ಕ್ಷಿಪ್ತ್ವಾ ಕ್ಷೀರೋದಧೌ ಸರ್ವಾ ವೀರುತ್ತೃಣಲತೌಷಧೀಃ ।**
**ಮಂಥಾನಂ ಮಂದರಂ ಕೃತ್ವಾ ನೇತ್ರಂ ಕೃತ್ವಾ ತು ವಾಸುಕಿಮ್ ॥೨೨॥**

**ಹೇ ದೇವಾಃ** ದೇವತೆಗಳೇ **ಕ್ಷೀರೋದಧೌ** ಕ್ಷೀರಸಮುದ್ರದಲ್ಲಿ **ಸರ್ವಾಃ** ಎಲ್ಲ **ವೀರುತ್** ಭೂಮಿಯಲ್ಲಿ ಹರಡುವ ಬಳ್ಳಿ **ತೃಣ** ಹುಲ್ಲು **ಲತಾ** ಗಿಡಗಳಿಗೆ ಅಂಟಿಕೊಳ್ಳುವ ಬಳ್ಳಿಗಳು **ಓಷಧೀಃ** ಗಿಡ-ಮರ ಇವುಗಳನ್ನು (ಒಂದೇ ಸಲ ಫಲಕೊಡುವ ಭತ್ತ ಮುಂತಾದ ಪೈರುಗಳನ್ನು) **ಕ್ಷಿಪ್ತ್ವಾ** ಹಾಕಿ **ಮಂದರಂ** ಮಂದರ ಪರ್ವತವನ್ನು **ಮಂಥಾನಂ ಕೃತ್ವಾ** ಕಡಗೋಲಾಗಿ ಮಾಡಿಕೊಂಡು **ವಾಸುಕಿಂ ತು** ವಾಸುಕಿ ಎಂಬ ಸರ್ಪವನ್ನು **ನೇತ್ರಂ ಕೃತ್ವಾ** ಹಗ್ಗವನ್ನಾಗಿ ಮಾಡಿಕೊಂಡು. ॥೨೨॥

**ಸಹಾಯೇನ ಮಯಾ ದೇವಾ ನಿರ್ಮಂಥಧ್ವಮತಂದ್ರಿತಾಃ ।**
**ಕ್ಲೇಶಭಾಜೋ ಭವಿಷ್ಯಂತಿ ದೈತ್ಯಾ ಯೂಯಂ ಫಲಗ್ರಹಾಃ ॥೨೩॥**

**ಸಹಾಯೇನ** ಎಲ್ಲ ರೀತಿಯಿಂದ ನಿಮಗೆ ಸಹಾಯಕನಾದ **ಮಯಾ** ನನ್ನೊಂದಿಗೆ **ಅತಂದ್ರಿತಾಃ ಸಂತಃ** ಆಸಲ್ಯವಿಲ್ಲದವರಾಗಿ **ನಿರ್ಮಂಥಧ್ವಂ** ಸಮುದ್ರವನ್ನು ಕಡೆಯಿರಿ. **ದೈತ್ಯಾಃ** ನಿಮ್ಮ ಶತ್ರುಗಳಾದ ದೈತ್ಯರು **ಕ್ಲೇಶಭಾಜಃ ಭವಿಷ್ಯಂತಿ** ಕಷ್ಟಕ್ಕೆ ಮಾತ್ರ ಭಾಗಿಗಳಾಗುತ್ತಾರೆ. **ಯೂಯಂ** ನನ್ನ ಭಕ್ತರಾದ ನೀವು **ಫಲಗ್ರಹಾಃ** ಪ್ರಯೋಜನ ಪಡೆಯುವಿರಿ.

ಸಮುದ್ರದಲ್ಲಿ ಮರ-ಬಳ್ಳಿಗಳನ್ನು ಹಾಕುವುದೆಂದರೆ ಭೂಮಿಯಲ್ಲಿ ಬೀಜ ಬಿತ್ತಿದಂತೆ. ಯಾವುದೋ ಒಂದು ಕಾರಣವಿಲ್ಲದೇ ಕಾರ್ಯ ಹುಟ್ಟಲಾರದು. ಬಳ್ಳಿ- ಹುಲ್ಲು ಮುಂತಾದವುಗಳು, ಸಹಕಾರಿಯಾದ ಭಗವಂತನ ಇಚ್ಛೆಯ ಸಹಾಯದಿಂದ, ವಿಚಿತ್ರವಾದ ಅಮೃತರೂಪವಾದ ಫಲಕ್ಕೆ ಸಾಧನವಾಗುತ್ತವೆ. ಕಾಡುಗಿಚ್ಚಿನಿಂದ ಸುಟ್ಟ ಬಿದರಿನ ಬೀಜಗಳು ಬಾಳೇಗಿಡವನ್ನು ಹುಟ್ಟಿಸುವಂತೆ ಎಂದು ತಿಳಿಯಬೇಕು. ॥೨೩॥

**ಯೂಯಂ ತದನುಮೋದಧ್ವಂ ಯದಿಚ್ಛಂತ್ಯಸುರಾಃ ಸುರಾಃ ।**
**ನ ಸಂರಂಭೇಣ ಸಿದ್ಧ್ಯಂತಿ ಸರ್ವೇಽರ್ಥಾಃ ಸಾಂತ್ವಯಾ ಯಥಾ ॥೨೪॥**

**ಹೇ ಸುರಾಃ** ದೇವತೆಗಳೇ **ಅಸುರಾಃ** ದೈತ್ಯರು **ಯತ್** ಯಾವುದನ್ನು **ಇಚ್ಛಂತಿ** ಅಪೇಕ್ಷಿಸುವರೋ **ತತ್** ಅದನ್ನು **ಯೂಯಂ** ನೀವು **ಅನುಮೋದಧ್ವಂ** ಒಪ್ಪಿಕೊಳ್ಳಿರಿ ಏಕೆಂದರೇ, **ಸರ್ವೇ ಅರ್ಥಾಃ** ಎಲ್ಲ ಪ್ರಯೋಜನಗಳು **ಸಾಂತ್ವಯಾ** ಸಮಾಧಾನದಿಂದ **ಯಥಾ** ಹೇಗೆ **ಸಿದ್ಧ್ಯಂತಿ** ದೊರೆಯುವವೋ **ತಥಾ** ಹಾಗೆ **ಸಂರಂಭೇಣ** ಕೋಪದಿಂದ, ಅಸಮಾಧಾನದಿಂದ, ಆರ್ಭಟದಿಂದ **ನ ಸಿದ್ಧ್ಯಂತಿ** ಸಿದ್ಧಿಸಲಾರವು. ॥೨೪॥

ಮುಂದೆ ಆಗುವದನ್ನು ಹೇಳಿ ನೀವು ಜಾಗರೂಕರಾಗಬೇಕೆಂದು ದೇವತೆಗಳಿಗೆ ಉಪದೇಶಿಸುತ್ತಿದ್ದಾನೆ-

**ನ ಭೇತವ್ಯಂ ಕಾಲಕೂಟಾತ್ ವಿಷಾಜ್ಜಲಧಿಸಂಭವಾತ್ ।**
**ಲೋಭಃ ಕಾರ್ಯೋ ನ ವೋ ಜಾತು ರೋಷಃ ಕಾಮಶ್ಚ ವಸ್ತುಷು ।।೨೫।।**

**ವಃ** ನಿಮ್ಮಿಂದ **ಜಲಧಿಸಂಭವಾತ್** ಸಮುದ್ರದಿಂದ ಹುಟ್ಟುವ **ಕಾಲಕೂಟಾತ್ ವಿಷಾತ್** ಕಾಲಕೂಟವಿಷದಿಂದ **ನ ಭೇತವ್ಯಂ** ಹೆದರಲ್ಪಡಬೇಕಾಗಿಲ್ಲ. **ಜಾತು** ಯಾವ ಸಮಯದಲ್ಲಿಯೂ **ವಸ್ತುಷು** ಸಮುದ್ರದಲ್ಲಿ ಹುಟ್ಟುವ ವಸ್ತುಗಳಲ್ಲಿ **ಲೋಭಃ ನ ಕಾರ್ಯಃ** ಆಸೆಯನ್ನು ಮಾಡಬಾರದು. **ರೋಷಃ** ದೈತ್ಯರ ಮೇಲೆ ಕೋಪವನ್ನು **ನ ಕಾರ್ಯಃ** ಮಾಡಬಾರದು. **ಕಾಮಃ** ಇಚ್ಛೆಯು **ನ ತು ಕಾರ್ಯಃ** ಯಾವ ಕಾರಣಕ್ಕೂ ಮಾಡಲ್ಪಡಬಾರದು. ।।೨೫।।

**ಶ್ರೀಶುಕ ಉವಾಚ**

**ಇತಿ ದೇವಾನ್ ಸಮಾದಿಶ್ಯ ಭಗವಾನ್ ಪುರುಷೋತ್ತಮಃ ।**
**ತೇಷಾಮಂತರ್ದಧೇ ರಾಜನ್ ಸ್ವಚ್ಛಂದಗತಿರೀಶ್ವರಃ ।।೨೬।।**

**ಹೇ ರಾಜನ್** ಪರೀಕ್ಷಿತನೇ **ಸ್ವಚ್ಛಂದಗತಿಃ** ತನ್ನ ಇಷ್ಟದಂತೆ ನಡೆಯುವ, ಸ್ವತಂತ್ರನಾದ **ಈಶ್ವರಃ** ನಿಯಾಮಕನಾದ ಶ್ರೇಷ್ಠನಾದ **ಭಗವಾನ್** ಸಮಗ್ರ ಐಶ್ವರ್ಯಸಂಪನ್ನನಾದ **ಪುರುಷೋತ್ತಮಃ** ಶ್ರೀಹರಿಯು **ದೇವಾನ್** ದೇವತೆಗಳನ್ನು **ಇತಿ** ಮೇಲೆ ಹೇಳಿದಂತೆ **ಸಮಾದಿಶ್ಯ** ಆಜ್ಞಾಪಿಸಿ **ತೇಷಾಂ (ಪಶ್ಯತಾಂ ಸತಾಂ)** ಅವರು ನೋಡುತ್ತಿದ್ದಂತೆಯೇ **ಅಂತರ್ದಧೇ** ಕಣ್ಣಿಗೆ ಕಾಣದಾದನು. ।।೨೬।।

**ಅಥ ತಸ್ಮೈ ಭಗವತೇ ನಮಸ್ಕೃತ್ಯ ಪಿತಾಮಹಃ ।**
**ಭವಶ್ಚ ಜಗ್ಮತುಃ ಸ್ವಂ ಸ್ವಂ ಧಾಮ ಚೇಯುರ್ಬಲಿಂ ಸುರಾಃ ।।೨೭।।**

**ಅಥ** ಶ್ರೀಹರಿಯು ಅದೃಶ್ಯನಾದ ನಂತರ **ಪಿತಾಮಹಃ** ಬ್ರಹ್ಮದೇವರು **ಭವಃ ಚ** ರುದ್ರದೇವರೂ **ತಸ್ಮೈ** ಅನುಗ್ರಹಮಾಡಿದ **ಭಗವತೇ** ಶ್ರೀಹರಿಗೆ **ನಮಸ್ಕೃತ್ಯ** ನಮಸ್ಕಾರಮಾಡಿ **ಸ್ವಂ ಸ್ವಂ ಧಾಮ** ತಮ್ಮ ತಮ್ಮ ಸ್ಥಾನಗಳಾದ ಸತ್ಯಲೋಕ- ಕೈಲಾಸಗಳಿಗೆ **ಜಗ್ಮತುಃ** ಹೋದರು. **ಸುರಾಃ** ಇಂದ್ರಾದಿದೇವತೆಗಳು **ಬಲಿಂ ಈಯುಃ** ಸಂಧಾನಕ್ಕಾಗಿ ಬಲಿಚಕ್ರವರ್ತಿಯ ಬಳಿಗೆ ತೆರಳಿದರು. ।।೨೭।।

**ದೃಷ್ಟ್ವಾಽರೀನಥ (ಪ್ಯ) ಸಂಪನ್ನಾನ್ ಜಾತಕ್ಷ್ವೇಲಾನ್ ಸ್ವನಾಯಕಾನ್ ।**
**ನ್ಯಷೇಧತ್ ದೈತ್ಯರಾಡುಚ್ಚೈಃ ಸಂಧಿವಿಗ್ರಹಕಾಲವಿತ್ ।।೨೮।।**

**ಅಥ** ಅನಂತರ **ಸಂಧಿವಿಗ್ರಹಕಾಲವಿತ್** ಯಾವಗ ಸಂಧಾನ ಮಾಡಿಕೊಳ್ಳಬೇಕು ಯಾವಾಗ ಯುದ್ಧ ಮಾಡಬೇಕು ಎಂಬ ಸಮಯಪ್ರಜ್ಞೆಯುಳ್ಳ **ದೈತ್ಯರಾಟ್** ದೈತ್ಯರಾಜನಾದ ಬಲಿಯು **ಅರೀನ್** ಶತ್ರುಗಳಾದ ದೇವತೆಗಳನ್ನು **ಸಂಪನ್ನಾನ್** ಶ್ರೀಹರಿಯ ಅನುಗ್ರಹವನ್ನು ಸಂಪಾದಿಸಿಕೊಂಡಿರುವರೆಂದು **ದೃಷ್ಟ್ವಾ** ತಿಳಿದು **ಅಸಂಪನ್ನಾನ್ ದೃಷ್ಟ್ವಾ ಅಪಿ** ಎಂಬ ಪಾಠದಲ್ಲಿ ಆಯುಧಾದಿಸಂಪದ್ರಹಿತರನ್ನಾಗಿ ನೋಡಿಯೂ **ಜಾತಕ್ಷ್ವೇಲಾನ್** ದೇವತೆಗಳನ್ನು ಗೆದ್ದಿರುವದರಿಂದ ಗರ್ವಿಷ್ಠರಾಗಿದ್ದ ಸಿಂಹನಾದ ಮಾಡುತ್ತಿದ್ದ **ಸ್ವನಾಯಕಾನ್** ತಾನೇ ನಾಯಕನಾಗಿವುಳ್ಳ ದೈತ್ಯರನ್ನು **ಉಚ್ಚೈಃ** ಎಲ್ಲರಿಗೂ ಕೇಳಿಸುವಂತೆ **ನ್ಯಷೇಧತ್** ಯುದ್ಧದಿಂದ ತಡೆದನು.

ಸತ್ಯ ಃ- ಸ್ವನಾಯಕಾನ್ ಎಂಬುದು ದೇವತೆಗಳಿಗೂ ವಿಶೇಷಣ. ಸು ಅನಾಯಾಕಾನ್ ನಾಯಕರಿಲ್ಲದ ಎಂದರ್ಥ. ಅಸಂಯುತಾನ್ ಎಂಬ ಪಾಠ ಸ್ಪಷ್ಟಾರ್ಥವು. ಯುದ್ಧ ಸಾಮಗ್ರಿ ಇಲ್ಲದವರನ್ನು ಎಂದರ್ಥ. ''ಕ್ಷ್ವೇಲೋ ದರ್ಪೇ ಸಿಂಹನಾದೇ ಆಸ್ಫೋಟೇ ಭುಜಸಕ್ಥಿನೋಃ'' ಎಂದು ಮುಕ್ತಮಾಲಾ. ।।೨೮।।

**ತೇ ವೈರೋಚನಿಮಾಸೀನಂ ಗುಪ್ತಂ ಚಾಸುರಯೂಥಪೈಃ ।**
**ಶ್ರಿಯಾ ಪರಮಯಾ ಜುಷ್ಟಂ ಜಿತಾಶೇಷಮುಪಾಗಮನ್ ।।೨೯।।**

**ತೇ** ಪರಮಾತ್ಮನಿಂದ ಆಜ್ಞಪ್ತರಾದ ಇಂದ್ರಾದಿದೇವತೆಗಳು **ಆಸೀನಂ** ಸಿಂಹಾಸನದಲ್ಲಿ ಕುಳಿತಿದ್ದ **ಚ** ಮತ್ತು **ಅಸುರಯೂಥಪೈಃ** ದೈತ್ಯರ ಸೇನಾಧಿ- ಪತಿಗಳಿಂದ **ಗುಪ್ತಂ** ರಕ್ಷಿತನಾದ **ಪರಮಯಾ ಶ್ರಿಯಾ** ಉತ್ತಮವಾದ ಕಾಂತಿಯಿಂದ ಕೂಡಿದ ಸಂಪತ್ತಿನಿಂದ **ಜುಷ್ಟಂ** ಸೇವಿತನಾದ ಜಿತಾಃ ಅಶೇಷಾಃ ಯೇನ ತಂ **ಜಿತಾಶೇಷಂ** ಮೂರು ಲೋಕಗಳನ್ನು ಗೆದ್ದ (ತಮ್ಮನ್ನೆಲ್ಲ ಗೆದ್ದ) **ವೈರೋಚನಿಂ** ವಿರೋಚನನೆಂಬ ದೈತ್ಯನ ಮಗನಾದ ಬಲಿಯನ್ನು **ಉಪಾಗಮನ್** ಸಮೀಪಿಸಿದರು. ।।೨೯।।

**ಮಹೇಂದ್ರಃ ಶ್ಲಕ್ಷ್ಣಯಾ ವಾಚಾ ಸಾಂತ್ವಯಿತ್ವಾ ಮಹಾಮತಿಃ ।**
**ಅಭ್ಯಭಾಷತ ತತ್ಸರ್ವಂ ಶಿಕ್ಷಿತಂ ಪುರುಷೋತ್ತಮಾತ್ ।।೩೦।।**

**ಮಹಾಮತಿಃ** ಬುದ್ಧಿಶಾಲಿಗಳಾದ **ಮಹೇಂದ್ರಃ** ಇಂದ್ರದೇವರು **ಶ್ಲಕ್ಷ್ಣಯಾ ವಾಚಾ** ಮಧುರವಾದ ಮಾತುಗಳಿಂದ **(ಬಲಿಂ) ಸಾಂತಯಿತ್ವಾ** ಬಲಿ ಚಕ್ರವರ್ತಿಯನ್ನು ಸಮಾಧಾನ ಪಡಿಸಿ **ಪುರುಷೋತ್ತಮಾತ್** ಶ್ರೀಹರಿಯಿಂದ **ಶಿಕ್ಷಿತಂ** ಉಪದಿಷ್ಟವಾದ **ತತ್ಸರ್ವಂ** ಅಮೃತಮಥನಕ್ಕೆ ಸಂಬಂಧಿಸಿದ ಎಲ್ಲ ವಿಷಯಗಳನ್ನು **ಅಭ್ಯಭಾಷತ** ಮನಸ್ಸಿಗೆ ಹಿಡಿಯುವಂತೆ ಹೇಳಿದರು. ।।೩೦।।

**ತದರೋಚತ ದೈತ್ಯಸ್ಯ ತತ್ರಾನ್ಯೇ ಯೇಽಸುರಾಧಿಪಾಃ ।**
**ಶಂಬರೋಽರಿಷ್ಟನೇಮಿಶ್ಚ ಯೇ ಚ ತ್ರಿಪುರವಾಸಿನಃ ॥೩೦॥**

**ತತ್ರ** ಆ ಸಭೆಯಲ್ಲಿ **ದೈತ್ಯಸ್ಯ** ಬಲಿಚಕ್ರವರ್ತಿಗೆ **ತತ್** ಇಂದ್ರನು ಹೇಳಿದುದು **ಅರೋಚತ** ಸಮ್ಮತವಾಯಿತು. **ಶಂಬರಃ** ಶಂಬರಾಸುರನು **ಅರಿಷ್ಟನೇಮಿಃ** ಅರಿಷ್ಟನೇಮಿಯೂ **ಚ** ಮತ್ತು **ತ್ರಿಪುರವಾಸಿನಃ** ತ್ರಿಪುರಾಸುರರು **ಅನ್ಯೇ ಯೇ ಅಸುರಾಧಿಪಾಃ** ಬೇರೇ ಯಾರು ಯಾರು ದೈತ್ಯರಿದ್ದರೋ ಅವರಿಗೂ **ಅರೋಚತ** ಸಮ್ಮತವಾಯಿತು.

**ತೇಽನ್ವರೋಚಂತ** ಎಂಬ ಪಾಠದಲ್ಲಿ **ತತ್ರ** ಅಲ್ಲಿದ್ದ **ದೈತ್ಯಸ್ಯ ಭೃತ್ಯಾಃ** ಬಲಿಯ ಭೃತ್ಯರು **ಅನ್ಯೇ** ಬೇರೆ **ಯೇ ಯೇ ಅಸುರಾಧಿಪಾಃ** ಶಂಬರ, ಅರಿಷ್ಟನೇಮಿ, ತ್ರಿಪುರವಾಸಿಗಳಾದ ದೈತ್ಯನಾಯಕರೂ **ತೇ** ಅವರು **ತತ್ರ** ಸಮುದ್ರ ಮಥನವಿಷಯದಲ್ಲಿ **ಅನ್ವರೋಚಂತ** ಒಪ್ಪಿಗೆ ಇತ್ತರು ಎಂದರ್ಥ.

ತೇಽನ್ವರೋಚಂತ ಎಂಬ ಪಾಠದಲ್ಲಿ ಶಂಬರ ಮುಂತಾದವರಿಗೆ ರುಚಿಸಿತು. ಆದರೆ ಪ್ರಧಾನನಾದ ಬಲಿಗೆ ರುಚಿಸಿತು ಎಂದು ಮುಖತಃ ಹೇಳಿದಂತಾಗುವದಿಲ್ಲ. ಆರ್ಥಿಕವಾಗಿ ಈ ಅರ್ಥವು ತೋರುತ್ತದೆ. ಆದ್ದರಿಂದ **ತದರೋಚತ** ಎಂಬ ಪಾಠವೇ ಪಾಂಕ್ತವು. ಪಂಕ್ತಿಯಲ್ಲಿರಲು ಯೋಗ್ಯವು. ॥೩೦॥

**ತತೋ ದೇವಾಸುರಾಃ ಕೃತ್ವಾ ಸಂವಿದಂ ಕೃತಸೌಹೃದಾಃ ।**
**ಉದ್ಯಮಂ ಪರಮಂ ಚಕ್ರುರಮೃತಾರ್ಥೇ ಪರಂತಪ ॥೩೧॥**

**ಹೇ ಪರಂತಪ** ಶತ್ರುತಾಪಕನಾದ ಪರೀಕ್ಷಿದ್ರಾಜನೇ **ತತಃ** ಎಲ್ಲರೂ ಅನುಮೋದಿಸಿದ ಮೇಲೆ **ಕೃತಸೌಹೃದಾಃ** ಸ್ನೇಹವನ್ನು ಮಾಡಿದ **ದೇವಾಸುರಾಃ** ದೇವತೆಗಳು ಮತ್ತು ಅಸುರರು **ಸಂವಿದಂ ಕೃತ್ವಾ** ನೀವು ನಾವು ಸೇರಿ ಸಮುದ್ರಮಥನ ಮಾಡೋಣವೆಂದು ಏಕಾಂತಭಾಷಣ ಮಾಡಿಕೊಂಡು **ಅಮೃತಾರ್ಥೇ** ಅಮೃತಕ್ಕಾಗಿ **ಪರಮಂ ಉದ್ಯಮಂ ಚಕ್ರುಃ** ಮಹಾ ಪ್ರಯತ್ನವನ್ನು ಮಾಡಿದರು. ॥೩೧॥

''ಯೇಷಾಂ ಚ ವಿರೋಧಃ ಶಾಶ್ವತಿಕಃ'' (ಸಿ.ಕೌ. ೯೧೩) ಈ ಸೂತ್ರದ ಪ್ರಕಾರ ಇಲ್ಲಿ ದೇವಾಸುರಂ ಎಂದು ಆಗಬೇಕಿತ್ತು. ಆದರೆ ಪ್ರಕೃತ ದೇವಾಸುರರಲ್ಲಿ ವಿರೋಧವಿಲ್ಲ ಅವಿರೋಧವಿದೆ ಎಂಬುದನ್ನು ಸೂಚಿಸಲು ದೇವಾಸುರಾಃ ಎಂದು ಪ್ರಯೋಗಿಸಿದ್ದಾರೆ ಎಂದು ತಿಳಿಯಬೇಕು. ಅಥವಾ ದೇವೈಃ ಸಹಿತಾಃ ಅಸುರಾಃ ಎಂದು ಉತ್ತರಪದಲೋಪಿ ಸಮಾಸ ಎನ್ನಬಹುದು.

**ತತಸ್ತೇ ಮಂದರಗಿರಿಮಂಜಸೋತ್ಪಾಟ್ಯ ದುರ್ಮದಾಃ ।**
**ನದಂತ ಉದಧಿಂ ನಿನ್ಯುಃ ಶಕ್ತಾಃ ಪರಿಘಬಾಹವಃ ॥೩೩॥**

**ತತಃ** ಒಪ್ಪಂದವಾದ ನಂತರ, ಪ್ರಯತ್ನ ಮಾಡಲು ಹೊರಟ ನಂತರ **ದುರ್ಮದಾಃ** ಬೇರೆಯವರಿಗೆ ಸಹಿಸಲಾಗದ ಮದ ಉಳ್ಳ **ಪರಿಘಬಾಹವಃ** ಪರಿಘಾಯುಧದಂತಿರುವ ದೃಢತರ ತೋಳುಗಳುಳ್ಳ ಆದ್ದರಿಂದಲೇ **ಶಕ್ತಾಃ** ಬೆಟ್ಟವನ್ನು ಕಿತ್ತಿ ತರುವ ಶಕ್ತಿಯುಳ್ಳ **ತೇ** ದೇವಾಸುರರು **ನದಂತಃ** ಶಬ್ದಮಾಡುತ್ತ **ಮಂದರಗಿರಿಂ** ಮಂದರಪರ್ವತವನ್ನು **ಅಂಜಸಾ** ಸರಿಯಾಗಿ **ಉತ್ಪಾಟ್ಯ** ಕಿತ್ತಿ **ಉದಧಿಂ** ಸಮುದ್ರಕ್ಕೆ **ನಿನ್ಯುಃ** ತೆಗೆದುಕೊಂಡು ಹೊರಟರು. **ನದಂತಃ** ನದವತ್ ಸಮುದ್ರವದಾಚರಂತಃ ಸಮುದ್ರದಂತೆ ಆಚರಿಸುವ ಎಂದರ್ಥ. ಬಹುಜನರು ಸಮುದ್ರದಂತೆ ಕಾಣುತ್ತಿದ್ದರು ಎಂದು ಭಾವ.

ಇಲ್ಲಿ ಒಂದು ಸಂದೇಹ.

**ತಮುದ್ಧರ್ತುಮಶಕ್ತಾ ವೈ ಸರ್ವೇ ದೇವಗಣಾಸ್ತದಾ ।**
**ವಿಷ್ಣುಮಾಸೀನಮಭ್ಯೇತ್ಯ ಬ್ರಹ್ಮಾಣಂ ಚೇದಮಬ್ರುವನ್ ॥**

**ಭವಂತಾವತ್ರ ಕುರುತಾಂ ಬುದ್ಧಿಂ ನೈಃಶ್ರೇಯಿಸೀಂ ಪರಾಮ್ ।**
**ಮಂದರೋದ್ಧರಣೇ ಯತ್ನಃ ಕ್ರಿಯತಾಂ ಚ ಹಿತಾಯ ನಃ ॥**

**ತಥೇತಿ ಚಾಬ್ರವೀದ್ವಿಷ್ಣುಃ ಬ್ರಹ್ಮಣಾ ಸಹ ಭಾರ್ಗವ ।**
**ಅಚೋದಯದಮೇಯಾತ್ಮಾ ಫಣೀಂದ್ರಂ ಪದ್ಮಲೋಚನಃ ॥**

**ತತೋಽನಂತಃ ಸಮುತ್ಥಾಯ ಬ್ರಹ್ಮಣಾ ಪರಿನೋದಿತಃ ।**
**ನಾರಾಯಣೇನ ಚಾಪ್ಯುಕ್ತಸ್ತಸ್ಮಿನ್ ಕರ್ಮಣಿ ವೀರ್ಯವಾನ್ ॥**

**ಅಥ ಪರ್ವತರಾಜಾನಂ ತಮನಂತೋ ಮಹಾಬಲಃ ।**
**ಉಜ್ಜಹಾರ ಬಲಾದ್ ಬ್ರಹ್ಮನ್ ಸವನಂ ಸವನೌಕಸಮ್ ॥**ಆದಿ.೧೮.೪-೮

ಆದಿಪರ್ವದ ಭಾವಾರ್ಥ ಹೀಗಿದೆ.

ಆ ಪರ್ವತವನ್ನು ಎತ್ತಲಾಗದ ಎಲ್ಲ ದೇವತೆಗಳು ವಿಷ್ಣುವಿನ ಹತ್ತಿರ ಬಂದರು. ನಮ್ಮ ಹಿತಕ್ಕಾಗಿ ಶ್ರೇಯಸ್ಸಿಗಾಗಿ ನೀವಿಬ್ಬರೂ ಮನಸ್ಸು ಮಾಡಿರಿ ಎಂದು ಬ್ರಹ್ಮದೇವರಿಗೂ ಶ್ರೀಹರಿಗೂ ಪ್ರಾರ್ಥಿಸಿದರು ಮಂದರವನ್ನೆತ್ತಲು ಪ್ರಯತ್ನ ಮಾಡಿರಿ ಎಂದು ಹೇಳಿಕೊಂಡರು. ಬ್ರಹ್ಮದೇವರಿಂದ ಪ್ರಾರ್ಥಿತನಾಗಿ ವಿಷ್ಣುವು ಹಾಗೇ ಆಗಲಿ ಎಂದು ಹೇಳಿದನು. ಆಗ ಆ ಕಾರ್ಯದಲ್ಲಿ ಸಮರ್ಥನಾದ ಗರುಡನು ನಾರಾಯಣನಿಂದ ಆಜ್ಞಪ್ತನಾಗಿ ವನಚರಪ್ರಾಣಿಗಳಿಂದ ಮತ್ತು ವನದಿಂದ ಸಹಿತವಾದ ಆ ಮಂದರಪರ್ವತವನ್ನು ಎತ್ತಿದನು. ಹೀಗೆ ಮಹಾಭಾರತದಲ್ಲಿ ಇದೆ. ಹೀಗೆ ದೇವತೆಗಳು ಮಂದರಪರ್ವತವನ್ನು ಉದ್ಧರಿಸಲು ಅಶಕ್ತರೆಂದು ಮಹಾಭಾರತದಲ್ಲಿ ಹೇಳಿದಾಗ

ಮಂದರಪರ್ವತವನ್ನು ಎತ್ತಲು ದೇವತೆಗಳು ಶಕ್ತರಾದರು ಎಂದು ಭಾಗವತದಲ್ಲಿ ಹೇಳಿದ್ದು ವಿರುದ್ಧವಾಗುತ್ತದಲ್ಲ. ಎಂದು ಸಂದೇಹ ಬರುತ್ತದೆ. ಇದಕ್ಕೆ ಉತ್ತರವನ್ನು ಹೀಗೆ ತಿಳಿಯಬೇಕು.

ಭಗವಂತನು ಪರ್ವತವನ್ನು ಉದ್ಧರಿಸಿದ್ದು, ಗರುಡನ ಮೇಲೆ ಇರಿಸಿದ್ದು, ಮಧ್ಯೇ ಮಾರ್ಗದಲ್ಲಿ ದೇವತೆಗಳು ಆ ಪರ್ವತವನ್ನು ಧರಿಸಿದ್ದು, ಅವರ ಕೈಗಳಿಂದ ಬೀಳುವದು, ಪರ್ವತದ ಭಾರದಿಂದ ದೇವತೆಗಳೆಲ್ಲ ಪುಡಿಯಾಗುವದು ಮುಂತಾದ ಕಥೆಯನ್ನು ಭಾಗವತದಲ್ಲಿ ಅನುಸಂಧಾನ ಮಾಡುವದರಿಂದ ವಿರೋಧ ಪರಿಹಾರವಾಗುವದು.

ಶ್ರೀಮದಾಚಾರ್ಯರು ತಾತ್ಪರ್ಯನಿರ್ಣಯದಲ್ಲಿ ಈ ಕಥೆಯನ್ನು ಹೀಗೆ ತಿಳಿಸಿದ್ದಾರೆ.

**ವೃಂದಾರಕಾ ಮಂದರಮೇತ್ಯ ಬಾಹುಭಿರ್ನಶೇಕುರುದ್ಧರ್ತುಮಿಮೇ ಸಮೇತಾಃ ।**
**ತದಾ ತ್ವಯಾ ನಿತ್ಯಬಲತ್ವಹೇತುತೋ ಯೋಽನಂತನಾಮಾ ಗರುಡಸ್ತದಂಸಕೇ ॥**

**ಉತ್ಪಾಟ್ಯ ಚೈಕೇನ ಕರೇಣ ಮಂದರೋ ನಿಧಾಪಿತಸ್ತಂ ಸ ಸಹ ತ್ವಯಾಽವಹತ್ ।**
**ಪುನಃ ಪರೀಕ್ಷದ್ಭಿರಸೌ ಮಹಾಗಿರಿಃ ಸಹಾಸುರೈರುನ್ನಮಿತಸ್ತದಂಸತಃ ॥**

**ವ್ಯಚೂರ್ಣಯತ್ತಾನಖಿಲಾನ್ ಪುನಸ್ತೇ ತ್ವದೀಕ್ಷಯಾ ಪೂರ್ವವದುತ್ಥಿತಾಃ ಪ್ರಭೋ ।**
**ಪುನಶ್ಚ ವಾಮೇನ ಕರೇಣ ವೀಶ್ವರೇ ನಿಧಾಯ ತಂ ಸ್ಕಂಧಗತಸ್ತ್ವಮಸ್ಯ ॥**
**ಅಗಾಃ ಪಯೋಬ್ಧಿಮ್... ॥**

ಈ ಶ್ಲೋಕಗಳ ಅಭಿಪ್ರಾಯವನ್ನು ಹೀಗೆ ತಿಳಿಯಬೇಕು. ದೇವತೆಗಳು ಮಂದರ ಪರ್ವತದ ಹತ್ತಿರ ಬಂದರು. ಎಲ್ಲರೂ ಸೇರಿ ಆ ಪರ್ವತವನ್ನು ಎತ್ತಲು ಪ್ರಯತ್ನ ಮಾಡಿದರು. ಆದರೂ ಎತ್ತಲು ಸಮರ್ಥರಾಗಲಿಲ್ಲ. ಆಗ ನಿತ್ಯವಾದ, ಅಪ್ರತಿಹತವಾದ ಬಲ ಉಳ್ಳ ಭಗವಂತನು ಒಂದೇ ಕೈಯಿಂದ ಪರ್ವತವನ್ನು ಎತ್ತಿದನು. ಅನಂತನಾಮಕನಾದ ಗರುಡನ ಹೆಗಲ ಮೇಲೆ ಇರಿಸಿದನು. ಆ ಗರುಡನು ಭಗವಂತನನ್ನೂ, ಪರ್ವತವನ್ನೂ ಹೊತ್ತುಕೊಂಡನು.

ನೆಲದಿಂದ ನಮಗೆ ಎತ್ತಲಾಗದಿದ್ದರೂ ಗರುಡನ ಹಾಗೆ ಹೆಗಲ ಮೇಲೆ ಹೊತ್ತುಕೊಳ್ಳಬಹುದೆಂದು ದೇವತೆಗಳು ಚಿಂತಿಸಿದರು. ಪ್ರಯತ್ನವನ್ನೂ ಮಾಡಿದರು. ಆದರೆ ದೇವ-ದೈತ್ಯರಿಗೆ ಆ ಪರ್ವತವನ್ನು ಹೊತ್ತುಕೊಳ್ಳಲು ಆಗಲಿಲ್ಲ. ಆ ಪರ್ವತ ಕೈಜಾರಿ ಅವರ ಮೇಲೆ ಬಿದ್ದಿತು. ಅದರಿಂದ ದೇವ-ದೈತ್ಯರು ಪುಡಿಯಾದರು. ಭಗವಂತನ ಕೃಪಾಕಟಾಕ್ಷದಿಂದ ಮೊದಲಿನಂತೆ ಮೇಲೆ ಎದ್ದರು. ಮತ್ತೆ ಭಗವಂತ ತನ್ನ ಎಡಗೈಯಿಂದ ಗರುಡನ ಮೇಲೆ ಪರ್ವತವನ್ನು ಇಟ್ಟನು. ಭಗವಂತನು ಗರುಡನ ಹೆಗಲ ಮೇಲೆ ಕುಳಿತು ಸಮುದ್ರಕ್ಕೆ ನಡೆದನು.

ಹೀಗೆ ಶ್ರೀಮದಾಚಾರ್ಯರು ತಾತ್ಪರ್ಯನಿರ್ಣಯದಲ್ಲಿ ಹೇಳಿದ್ದಾರೆ. ನಿರ್ಣಯದ ಪ್ರಕಾರ ಕಥಾ ಅನುಸಂಧಾನ ಮಾಡಿದಾಗ ದೇವತೆಗಳು ಸ್ವಯಂ ಸಮರ್ಥರಲ್ಲ. ಭಗವಂತನೇ ಪರ್ವತವನ್ನು ತಂದಿರಿಸಿದ. ಎಂದು ಭಾರತದಲ್ಲಿ ಹೇಳಿದ್ದೇ ಸರಿ ಎಂದು ತಿಳಿಯಬೇಕು.

ಭಾಗವತದಲ್ಲಿ ಶಕ್ತರೆಂದು ಯಾಕೆ ಹೇಳಿದ್ದಾರೆಂದರೆ ದೇವತೆಗಳಿಗೆ ಮಂದರಪರ್ವತವನ್ನು ಎತ್ತುವ ಶಕ್ತಿ ಇದ್ದೇ ಇದೆ. ಆದರೆ ಪ್ರಕೃತ ರುದ್ರದೇವರ ವರ ಆ ಮಂದರಪರ್ವತಕ್ಕೆ ಇದ್ದುದರಿಂದ ಪರ್ವತವನ್ನು ಎತ್ತಲು ಅಶಕ್ತರಾದರು ಎಂದು ತಿಳಿಯಬೇಕು. ।।೩೩।।

**ದೂರಭಾರೋದ್ವಹಶ್ರಾಂತಾಃ ಶಕ್ರವೈರೋಚನಾದಯಃ ।**
**ಅಪಾರಯಂತಸ್ತಂ ವೋಢುಂ ವಿವಶಾ ವಿಜಹುಃ ಪಥಿ ।।೩೪।।**

**ದೂರಭಾರೋದ್ವಹಶ್ರಾಂತಾಃ** ಭಾರವಾದ ಬೆಟ್ಟವನ್ನು ಬಹುದೂರ ಹೊರುವದರಿಂದ ಬಳಲಿದ **ಶಕ್ರವೈರೋಚನಾದಯಃ** ಇಂದ್ರ-ಬಲಿ ಮೊದಲಾದವರು **ತಂ** ಮಂದರಪರ್ವತವನ್ನು **ವೋಢುಂ** ಹೊರಲು **ಅಪಾರಯಂತಃ** ಸಮುದ್ರದ ವರೆಗೆ ಹೊತ್ತಿಕೊಂಡು ಹೋಗಲು ಸಮರ್ಥರಾಗದೇ **ವಿವಶಾಃ** ಪರವಶರಾಗಿ **ಪಥಿ** ದಾರಿಯಲ್ಲಿ **ವಿಜಹುಃ** ಆ ಪರ್ವತವನ್ನು ಕೆಳಕ್ಕೆ ಬಿಟ್ಟರು. ಕೆಡವಿದರು. ।।೩೪।।

**ನಿಪತನ್ ಸ ಗಿರಿಸ್ತಾವದ್ಬಹೂನಮರದಾನವಾನ್ ।**
**ಚೂರ್ಣಯಾಮಾಸ ಮಹತಾ ಭಾರೇಣ ಕನಕಾಚಲಃ ।।೩೫।।**

**ಸಃ** ಅವರು ಹೊತ್ತು ತರುತ್ತಿದ್ದ **ಕನಕಾಚಲಃ** ಬಂಗಾರದ ಶೃಂಗಗಳುಳ್ಳ **ಗಿರಿಃ** ಮಂದರಪರ್ವತವು **ನಿಪತನ್** ಕೆಳಕ್ಕೆ ಬೀಳುತ್ತ **ಮಹತಾ ಭಾರೇಣ** ಬಹಳ ಭಾರದಿಂದ **ತಾವತ್** ಕೆಳಕ್ಕೆ ಬೀಳುವ ಮೊದಲು **ಬಹೂನ್** ಬಹಳ **ಅಮರದಾನವಾನ್** ದೇವತೆಗಳನ್ನು, ದೈತ್ಯರನ್ನು **ಚೂರ್ಣಯಾಮಾಸ** ಚೂರು ಚೂರು ಮಾಡಿತು.

ಸತ್ಯ :- **ಯಃ ಕೋಽಪಿ** ಯಾವನೊಬ್ಬನು ಧಾಷ್ಟ್ರ್ಯದಿಂದ **ಸಗಿರಿಃ** ಪರ್ವತಸಹಿತನಾದವನು ಅಂದರೆ ಪರ್ವತ ಹೊತ್ತಿರುವನೋ **ಸೋಽಪಿ** ಅವನೂ ಸಹ **ಪತನ್** ತಾನು ಬೀಳುತ್ತ ತನ್ನ ಪಕ್ಕದಲ್ಲಿರುವ ಕೆಲವು ದೇವ-ದಾನವರನ್ನು ಚೂರ್ಣ ಮಾಡಿದನು. ಗಿರಿಣಾ ಸಹಿತಃ ಸಗಿರಿಃ ಎಂಬುದು ಒಂದೇ ಪದ ಎಂದು ತಿಳಿಯಬೇಕು. ಹೀಗೆ ಮಾಡಿದ್ದರಿಂದ ಕನಕಾಚಲಃ ಎಂದು ಹೇಳಿದ ಮೇಲೆ ಮತ್ತೆ ಗಿರಿ ಎಂದು ಹೇಳುವುದರಿಂದ ಪುನರುಕ್ತಿ ಎಂಬ ಶಂಕೆಗೆ ಅವಕಾಶವಿಲ್ಲ. ।।೩೫।।

**ತಾಂಸ್ತಥಾ ಭಗ್ನಮನಸೋ ಭಗ್ನಬಾಹೂರುಕಂಧರಾನ್ ।**
**ವಿಜ್ಞಾಯ ಭಗವಾಂಸ್ತತ್ರ ಬಭೂವ ಗರುಡಧ್ವಜಃ ॥೩೬॥**

**ಭಗವಾನ್** ಶ್ರೀಹರಿಯು **ತಥಾ** ಆ ರೀತಿಯಾಗಿ **ಭಗ್ನಬಾಹೂರುಕಂಧರಾನ್** ಮುರಿದ ತೋಳು ತೊಡೆ ಕುತ್ತಿಗೆಗಳುಳ್ಳ **ತಾನ್** ಆ ದೇವ-ದಾನವರನ್ನು **ಭಗ್ನಮನಸಃ** ತಮ್ಮಿಂದ ಸಮುದ್ರಮಥನವು ಸಾಧ್ಯವಿಲ್ಲವೆಂದು ಆ ವಿಷಯದಲ್ಲಿ ಹಿಮ್ಮೆಟ್ಟಿದ ಮನಸ್ಸುಳ್ಳವರನ್ನಾಗಿ **ವಿಜ್ಞಾಯ** ತಿಳಿದು **ತತ್ರ** ಆ ಬೆಟ್ಟವು ಬಿದ್ದ ಸ್ಥಳದಲ್ಲಿಯೇ **ಗರುಡಧ್ವಜಃ** ಗರುಡಧ್ವಜನೆಂಬ ಹೆಸರಿನಿಂದ ಗರುಡವಾಹನರೂಪದಿಂದ **ಬಭೂವ** ಪ್ರಾದುರ್ಭೂತನಾದನು. ॥೩೬॥

**ಗಿರಿಪಾತವಿನಿಷ್ಪಿಷ್ಟಾನ್ ವಿಲೋಕ್ಯಾಮರದಾನವಾನ್ ।**
**ಈಕ್ಷಯಾ ಜೀವಯಾಮಾಸ ನಿರ್ಜರಾನ್ ನಿರ್ವ್ರಣಾನ್ ಯಥಾ ॥೩೭॥**

**ಸಃ** ಗರುಡವಾಹನನಾಗಿ ಬಂದ ಶ್ರೀಹರಿಯು **ಗಿರಿಪಾತವಿನಿಷ್ಪಿಷ್ಟಾನ್** ಪರ್ವತವು ಬೀಳುವದರಿಂದ ಚೂರ್ಣವಾದ ಶರೀರವುಳ್ಳ **ಅಮರದಾನವಾನ್** ದೇವ-ದೈತ್ಯರನ್ನು **ವಿಲೋಕ್ಯ** ನೋಡಿ **ಈಕ್ಷಯಾ** ತನ್ನ ಕೃಪಾದೃಷ್ಟಿಯಿಂದ **ನಿರ್ಜರಾನ್** ದೇವತೆಗಳನ್ನು **ನಿರ್ವ್ರಣಾನ್ ಯಥಾ** ಗಾಯವಾಗದಿದ್ದವರಂತೆ **ಜೀವಯಾಮಾಸ** ಬದುಕಿಸಿದನು.

ಸತ್ಯ ಃ- **ಹೇ ಅಮರ** ಅಶ್ವತ್ಥಾಮರ ಅಸ್ತ್ರದಿಂದ ಮರಣಶೂನ್ಯನಾದ ಪರೀಕ್ಷಿತನೇ ದಾನವಾನ್ ನಿರ್ಜರಾನ್ ವಿಲೋಕ್ಯ ನಿರ್ವ್ರಣಾನ್ ಕೃತ್ವಾ ಜೀವಯಾಮಾಸ ಎಂದನ್ವಯ. ಪರೀಕ್ಷಿತನಿಗೆ ಅಮರ ಎಂದು ಸಂಬೋಧಿಸಿದ್ದರಿಂದ ಶ್ರೀಹರಿಯ ಅನುಗ್ರಹದ ಮಹಿಮೆ ನಿನ್ನ ಅನುಭವಸಿದ್ಧವೆಂಬುದು ''ದ್ರೌಣ್ಯಸ್ತ್ರವಿಪ್ಲುಷ್ಟಮಿದಂ ಮದಂಗಂ ಸಂತಾನಬೀಜಂ ಕುರುಪಾಂಡವಾನಾಮ್ । ಜುಗೋಪ ಕುಕ್ಷಿಂ ಗತ ಆತ್ತಚಕ್ರೋ ಮಾತುಶ್ಚ ಮೇ ಯಃ ಶರಣಂ ಗತಾಯಾಃ ॥ ಎಂಬ ನಿನ್ನ ವಾಕ್ಯದಿಂದ ತಿಳಿಯುವದು ಎಂದು ಸೂಚಿಸುವರು ಎನ್ನುತ್ತಾರೆ ಶ್ರೀಗಳವರು.

**ಛಲಾರಿ- ನಿರ್ಜರಾನ್** ಮುಪ್ಪಿಲ್ಲದವರನ್ನಾಗಿ **ನಿರ್ವ್ರಣಾನ್** ಗಾಯವಿಲ್ಲದವರನ್ನಾಗಿ **ಯಥಾ** ಚೆನ್ನಾಗಿ ಇಬ್ಬರನ್ನು ಬದುಕಿಸಿದನು.

**ಲಿಂಗೇರಿ-** ಕೃಪೆಯಿಂದ ಎಲ್ಲರನ್ನೂ ಬದುಕಿಸಿದನು. ಅದರಲ್ಲೂ ನಿರ್ಜರಾನ್ ದೇವತೆಗಳನ್ನು ಮೊದಲಿನಂತೆ ಗಾಯ ಅದರ ಕಲೆ ಇಲ್ಲದಂತೆ ಮಾಡಿದನು ಎಂದರ್ಥ.

**ಗಿರಿಂ ಚಾರೋಪ್ಯ ಗರುಡೇ ಹಸ್ತೇನೈಕೇನ ಲೀಲಯಾ ।**
**ಆರುಹ್ಯ ಪ್ರಯಯಾವಬ್ಧಿಂ ಸುರಾಸುರಗಣೈರ್ವೃತಃ ॥೩೮॥**

ಶ್ರೀಹರಿಯು **ಲೀಲಯಾ** ಆಯಾಸವಿಲ್ಲದೇ **ಏಕೇನ ಹಸ್ತೇನ** ಒಂದೇ ಕೈಯಿಂದ **ಗಿರಿಂ** ಪರ್ವತವನ್ನು **ಗರುಡೇ** ಗರುಡನ ಮೇಲೆ **ಆರೋಪ್ಯ** ಎತ್ತಿ ಇಟ್ಟು **ಸುರಾಸುರಗಣೈಃ ವೃತಃ ಸನ್** ದೇವ-ದಾನವರ ಸಮೂಹದಿಂದ ಕೂಡಿದವನಾಗಿ **ಆರುಹ್ಯ** ಗರುಡನನ್ನು ಏರಿ **ಅಬ್ಧಿಂ** ಕ್ಷೀರಸಮುದ್ರದ ಬಳಿಗೆ **ಪ್ರಯಯೌ** ಹೋದನು. ।।೩೮।।

**ಅವರೋಪ್ಯ ಗಿರಿಂ ಸ್ಕಂಧಾತ್ ಸುಪರ್ಣಃ ಪತತಾಂ ವರಃ ।**
**ಯಯೌ ಜಲಾಂತ ಉತ್ಸೃಜ್ಯ ಹರಿಣಾ ಸ ವಿ(ಸ)ವರ್ಜಿತಃ ।।೩೯।।**

**।। ಇತಿ ಶ್ರೀಮದ್ಭಾಗವತೇ ಅಷ್ಟಮಸ್ಕಂಧೇ ಷಷ್ಠಃ ಅಧ್ಯಾಯಃ ।।**

**ಪತತಾಂ ವರಃ** ಹಾರುವ ಪಕ್ಷಿಗಳಲ್ಲಿ ಶ್ರೇಷ್ಠನಾದ **ಸಃ ಸುಪರ್ಣಃ** ಆ ಅನಂತನೆಂಬ ಗರುಡನು **ಸ್ಕಂಧಾತ್** ಹೆಗಲಿನಿಂದ **ಗಿರಿಂ** ಬೆಟ್ಟವನ್ನು **ಅವರೋಪ್ಯ** ಇಳಿಸಿ **ಜಲಾಂತೇ** ನೀರಿನ ಮಧ್ಯದಲ್ಲಿ **ಉತ್ಸೃಜ್ಯ** ಬಿಟ್ಟು (ಹಾಕಿ) **ಹರಿಣಾ** ಶ್ರೀಹರಿಯಿಂದ **ವಿಸರ್ಜಿತಃ ಸನ್** ನೀನು ಹೋಗೆಂದು ಆಜ್ಞಪ್ತನಾಗಿ **ಯಯೌ** ತನ್ನ ಸ್ಥಾನಕ್ಕೆ ತೆರಳಿದನು. ।।೩೯।।

ಸತ್ಯ ಃ- ಗರುಡನು ಅಮೃತಪಾನ ಮಾಡದಲೆ ಸಶಕ್ತನಾಗಿದ್ದಾನೆ. ಅಮೃತಪಾನವಿಲ್ಲದೇ ವರಪ್ರಾಭಾವದಿಂಲೇ ಅಜರಾಮರನಾಗಿದ್ದಾನೆ. ಪ್ರಕೃತ ಗರುಡ ಮಾಡಬೇಕಾದ ಕಾರ್ಯ ಆಗಿದೆ. ಆದ್ದರಿಂದ ಗರುಡನನ್ನು ವಿಸರ್ಜಿಸಿದ ಎಂಬುದಾಗಿ ತಿಳಿಯಬೇಕು.

ಗರುಡನು ಇಲ್ಲಿಯೇ ಇದ್ದರೆ ಆ ಗರುಡನ ಭಯದಿಂದ ವಾಸುಕಿಯು ಬರುವುದಿಲ್ಲ. ವಾಸುಕಿಯು ಬಾರದಿದ್ದರೇ ಮಥನ ಆಗುವುದಿಲ್ಲ. ಅಮೃತ ಹುಟ್ಟಲಾರದು. ಅದಕ್ಕಾಗಿ ಆ ಗರುಡನನ್ನು ಭಗವಂತ ಕಳುಹಿಸಿದ ಎಂದು ಕೆಲವರು ಅಭಿಪ್ರಾಯಪಡುತ್ತಾರೆ.

ಗರುಡನಿದ್ದರೂ, ವಿಷವನ್ನು ಸೃಷ್ಟಿಸಲು, ವಾಸುಕಿಯನ್ನು ಕರೆತರಲು ಪರಮಾತ್ಮ ಸಮರ್ಥನೇ ಆಗಿದ್ದಾನೆ. ಪ್ರಕೃತ ಗರುಡನು ತನ್ನ ಕಾರ್ಯವನ್ನು ಮಾಡಿ ಮುಗಿಸಿದ್ದರಿಂದ, ಹೋಗಲು ಗರುಡನಿಗೆ ಅಪ್ಪಣೆ ಇತ್ತನು. ಹೀಗೆ ಶ್ರೀಸತ್ಯಧರ್ಮರು ತಿಳಿಸುತ್ತಾರೆ.

''ಸಂಸ್ಥಾಪ್ಯ ಮಂದರಂ ವಿಷ್ಣುಃ ಅನಂತೇ ಸಸುರೋ ಯಯೌ'' ಎಂದು ಪುರಾಣಾಂತರದಲ್ಲಿ ಮಂದರಪರ್ವತವನ್ನು ಅನಂತ ಅಂದರೆ ಶೇಷದೇವರು ಹೊತ್ತಿದ್ದರೆಂದು ಹೇಳಿದಂತೆ ತೋರುವದು. ಭಾಗವತದಲ್ಲಿ ಗರುಡು ಎಂದು ಹೇಳುತ್ತಿದ್ದಾರೆ. ಆದ್ದರಿಂದ ವಿರೋಧವು ಬರುತ್ತದೆ. ಅದಕ್ಕಾಗಿ ಸರ್ವಜ್ಞಾಚಾರ್ಯರು ಪ್ರಮಾಣದಿಂದ ಅರ್ಥವಿಶೇಷವನ್ನು ತಿಳಿಸುವರು.

**..ತಾತ್ಪರ್ಯ...**

**ಅನಂತೋಽಧೋ ಮಂದರಸ್ತು ಯದಾ ವೈವಸ್ವತಾಂತರಮ್ ।**
**ಅಮೃತಾರ್ಥಂ ಸುಪರ್ಣೋಽಧೋ ರೈವತಸ್ಯಾಂತರೇ ಮನೋಃ ।।ಇತಿ ಬ್ರಾಹ್ಮೇ ।।**

ವೈವಸ್ವತಮನ್ವಂತರದಲ್ಲಿಯೂ, ರೈವತಮನ್ವಂತರದಲ್ಲಿಯೂ ಅಮೃತ ಪಡೆಯುವದಕ್ಕಾಗಿ ದೇವಾಸುರರು ಕ್ಷೀರಸಮುದ್ರವನ್ನು ಮಥನ ಮಾಡಿದರು. ಅದರಲ್ಲಿ ರೈವತಮನ್ವಂತರದಲ್ಲಿ ಸುಪರ್ಣ ಎಂಬ ಗರುಡನೂ ವೈವಸ್ವತಮನ್ವಂತರದಲ್ಲಿ ಅನಂತನಾಮಕನಾದ ಗರುಡನು ಮಂದರಪರ್ವತವನ್ನು ಧರಿಸಿದನು. ಇಲ್ಲಿ ಅನಂತನೆಂದರೇ ಶೇಷದೇವರಲ್ಲ. ಗರುಡನೇ ಆಗಿದ್ದಾನೆ. ''ಯೋಽನಂತನಾಮಾ ಗರುಡಸ್ತಂದಂಸಕೇ'' ಎಂದು ಆಚಾರ್ಯರು ಇದನ್ನು ವಿವರಿಸಿದ್ದಾರೆ. ಆದ್ದರಿಂದ ಅನಂತನು ಮಂದರವನ್ನು ಹೊತ್ತಿದ್ದಾನೆ ಎಂದು ಹೇಳುವ ಪುರಾಣಾಂತರಗಳ ವಿರೋಧದ ಪರಿಹಾರವಾಗುತ್ತದೆ.

ಇದರಿಂದ ಭಾರತತಾತ್ಪರ್ಯನಿರ್ಣಯದಲ್ಲಿ ಹೇಳಿದ ಸಮುದ್ರಮಥನದ ಕಥೆಯು ಪುರಾಣಂತರದಲ್ಲಿ ಹೇಳಿದ ವೈವಸ್ವತಮನ್ವಂತರದಲ್ಲಿಯದು. ಭಾಗವತದಲ್ಲಿ ಹೇಳಿದ್ದು ರೈವತಮನ್ವಂತರದಲ್ಲಿ ನಡೆದ ಸಮುದ್ರಮಥನ ಎಂದು ಪ್ರಬೋಧಿನೀಕಾರರರು ಅಭಿಪ್ರಾಯ ಪಡುವರು.

**ತಾ.ದೀ-** ''ರೈವತಸ್ಯ ಮನೋಃ ಅನಂತರಂ ಜಾಯಮಾನೇ ಅಂತರೇ ಮನ್ವಂತರೇ ಅಂದರೆ ಚಾಕ್ಷುಷಮನ್ವಂತರದಲ್ಲಿ ಹಾಗೂ ವೈವಸ್ವತಮನ್ವಂತರದಲ್ಲಿ ಸಮುದ್ರಮಥನ ನಡೆಯುವವು. ಚಾಕ್ಷುಷಮನ್ವಂತರದಲ್ಲಿ ಸುಪರ್ಣನೆಂಬ ಗರುಡನು ವೈವಸ್ವತ ಮನ್ವಂತರದಲ್ಲಿ ಅನಂತನೆಂಬ ಗರುಡನು ಮಂದರವನ್ನು ಹೊತ್ತಿದ್ದಾನೆ ಎನ್ನುತ್ತಾರೆ. ಆದ್ದರಿಂದ ವೈವಸ್ವತಮನ್ವಂತರದಲ್ಲಿಯೂ ಸಮುದ್ರಮಥನವಾಗಿದೆ ಎಂದು ಸೂಚಿಸಲು ಸುಪರ್ಣ ಎಂಬ ಹೆಸರನ್ನು ಸ್ವೀಕರಿಸಿರುವರು. ಇದು ಚಾಕ್ಷುಷಮನ್ವಂತರಕಥಾ. ವೈವಸ್ವತಮನ್ವಂತರದಲ್ಲಿ ಅನಂತನಾಮಾ ಎಂದು ತಾತ್ಪರ್ಯದೀಪಿಕಾಕಾರರು ಅಭಿಪ್ರಾಯ ಪಡುವರು. ರೈವತಮನ್ವಂತರದಲ್ಲಿ ಸಮುದ್ರಮಥನವಾಗಿಲ್ಲವೆಂದು ಇವರ ಅಭಿಪ್ರಾಯ.

ದೀಪಿಕಾಕಾರರು ಹೇಳುವಂತೆ ಚಾಕ್ಷುಷ ಮತ್ತು ವೈವಸ್ವತಮನ್ವಂತರದಲ್ಲಿ ಸಮುದ್ರಮಥನವೆಂಬುದು ಸಮಂಜಸವೆನಿಸುತ್ತದೆ. ಏಕೆಂದರೆ ಚಾಕ್ಷುಷಮನ್ವಂತರದಲ್ಲಿ ಹೇಳುವಾಗ ಅಜಿತನಾಮಕ ಭಗವದವತಾರ ಹೇಳಿ ಅವನೇ ಅಮೃತ ಸಾಧಿಸಿದನೆಂದು ಸಂಕ್ಷೇಪವಾಗಿ ಹೇಳಿದಾಗ ಅದರ ವಿವರಣ ರೂಪವಾಗಿಯೇ ಕಥಾ ಹೊರಟಿದೆ. ಆದ್ದರಿಂದ ತಾತ್ಪರ್ಯದ ರೇವತಾಂತರೇ ಎಂಬುದಕ್ಕೆ ಚಾಕ್ಷುಷ ಎಂದು ಅರ್ಥ ಮಾಡಬೇಕು.

ಆದರೆ ವಿಜಯಧ್ವಜರು, ಲಿಂಗೇರಿ, ಶ್ರೀ ಸತ್ಯಧರ್ಮರು ಮತ್ತು ತಾತ್ಪರ್ಯಟಿಪ್ಪಣಿ ಪ್ರಭೋದಿನೀಕಾರರು ರೇವತಮನ್ವಂತರದಲ್ಲಿಯೇ ಎಂದು ಬರೆದಿರುವರು. ಸತ್ಯಧರ್ಮರು ಭಾರತ ಹರಿವಂಶ ಇತರ ಪುರಾಣ ವಿರೋಧ ಪರಿಹಾರ ಮಾಡುವರು. ರೈವತವೆಂದೇ ಬರೆದಿರುವರು. ಆದರೆ ಮೂಲಾನುಕೂಲತೆ ಹೇಗೆಂದು ವಿಚಾರ ಮಾಡಬೇಕು.

ಮೂರು ಬಾರಿ ಸಮುದ್ರಮಥನ ಆಗಿದೆ ಎಂದು ಯಾರೂ ಬರೆದಿರುವುದಿಲ್ಲ. ರೈವತಸ್ಯಾಂತರೇ ಮನೋಃ ಎಂಬುದನ್ನು ಸಾವಕಾಶ ಮಾಡಬಹುದು. ಚಾಕ್ಷುಷ ಎಂಬ ಮೂಲ ನಿರವಕಾಶವೆಂದು ತೋರುವದು. ಇನ್ನು ಇಲ್ಲಿ ಕೇವಲ ಅನಂತ ಸುಪರ್ಣ ಶಬ್ದಾರ್ಥ ಹೇಳಲು ಹೊರಟರು ಮನ್ವಂತರ ನಿರ್ಣಯವಲ್ಲ ಎಂದು ಉತ್ತರಿಸಬಹುದು. ॥೩೯॥

**ಇಲ್ಲಿಗೆ ಆರನೇ ಅಧ್ಯಾಯವು ಮುಗಿಯಿತು.**

★★★



**...ತಾತ್ಪರ್ಯ...**

**ಅನಂತೋಽಧೋ ಮಂದರಸ್ತು ಯದಾ ವೈವಸ್ವತಾಂತರಮ್ ।**
**ಅಮೃತಾರ್ಥಂ ಸುಪರ್ಣೋಽಧೋ ರೈವತಸ್ಯಾಂತರೇ ಮನೋಃ ॥ಇತಿ ಬ್ರಾಹ್ಮೇ ॥**

ವೈವಸ್ವತಮನ್ವಂತರದಲ್ಲಿಯೂ, ರೈವತಮನ್ವಂತರದಲ್ಲಿಯೂ ಅಮೃತ ಪಡೆಯುವದಕ್ಕಾಗಿ ದೇವಾಸುರರು ಕ್ಷೀರಸಮುದ್ರವನ್ನು ಮಥನ ಮಾಡಿದರು. ಅದರಲ್ಲಿ ರೈವತಮನ್ವಂತರದಲ್ಲಿ ಸುಪರ್ಣ ಎಂಬ ಗರುಡನೂ ವೈವಸ್ವತಮನ್ವಂತರದಲ್ಲಿ ಅನಂತನಾಮಕನಾದ ಗರುಡನು ಮಂದರಪರ್ವತವನ್ನು ಧರಿಸಿದನು. ಇಲ್ಲಿ ಅನಂತನೆಂದರೇ ಶೇಷದೇವರಲ್ಲ. ಗರುಡನೇ ಆಗಿದ್ದಾನೆ. ''ಯೋಽನಂತನಾಮಾ ಗರುಡಸ್ತಂದಂಸಕೇ'' ಎಂದು ಆಚಾರ್ಯರು ಇದನ್ನು ವಿವರಿಸಿದ್ದಾರೆ. ಆದ್ದರಿಂದ ಅನಂತನು ಮಂದರವನ್ನು ಹೊತ್ತಿದ್ದಾನೆ ಎಂದು ಹೇಳುವ ಪುರಾಣಾಂತರಗಳ ವಿರೋಧದ ಪರಿಹಾರವಾಗುತ್ತದೆ.

ಇದರಿಂದ ಭಾರತತಾತ್ಪರ್ಯನಿರ್ಣಯದಲ್ಲಿ ಹೇಳಿದ ಸಮುದ್ರಮಥನದ ಕಥೆಯು ಪುರಾಣಂತರದಲ್ಲಿ ಹೇಳಿದ ವೈವಸ್ವತಮನ್ವಂತರದಲ್ಲಿಯದು. ಭಾಗವತದಲ್ಲಿ ಹೇಳಿದ್ದು ರೈವತಮನ್ವಂತರದಲ್ಲಿ ನಡೆದ ಸಮುದ್ರಮಥನ ಎಂದು ಪ್ರಬೋಧಿನೀಕಾರರು ಅಭಿಪ್ರಾಯ ಪಡುವರು.

**ತಾ.ದೀ-** ''ರೈವತಸ್ಯ ಮನೋಃ ಅನಂತರಂ ಜಾಯಮಾನೇ ಅಂತರೇ ಮನ್ವಂತರೇ ಅಂದರೆ ಚಾಕ್ಷುಷಮನ್ವಂತರದಲ್ಲಿ ಹಾಗೂ ವೈವಸ್ವತಮನ್ವಂತರದಲ್ಲಿ ಸಮುದ್ರಮಥನ ನಡೆಯುವವು. ಚಾಕ್ಷುಷಮನ್ವಂತರದಲ್ಲಿ ಸುಪರ್ಣನೆಂಬ ಗರುಡನು ವೈವಸ್ವತ ಮನ್ವಂತರದಲ್ಲಿ ಅನಂತನೆಂಬ ಗರುಡನು ಮಂದರವನ್ನು ಹೊತ್ತಿದ್ದಾನೆ ಎನ್ನುತ್ತಾರೆ. ಆದ್ದರಿಂದ ವೈವಸ್ವತಮನ್ವಂತರದಲ್ಲಿಯೂ ಸಮುದ್ರಮಥನವಾಗಿದೆ ಎಂದು ಸೂಚಿಸಲು ಸುಪರ್ಣ ಎಂಬ ಹೆಸರನ್ನು ಸ್ವೀಕರಿಸಿರುವರು. ಇದು ಚಾಕ್ಷುಷಮನ್ವಂತರಕಥಾ. ವೈವಸ್ವತಮನ್ವಂತರದಲ್ಲಿ ಅನಂತನಾಮಾ ಎಂದು ತಾತ್ಪರ್ಯದೀಪಿಕಾಕಾರರು ಅಭಿಪ್ರಾಯ ಪಡುವರು. ರೈವತಮನ್ವಂತರದಲ್ಲಿ ಸಮುದ್ರಮಥನವಾಗಿಲ್ಲವೆಂದು ಇವರ ಅಭಿಪ್ರಾಯ.

ದೀಪಿಕಾಕಾರರು ಹೇಳುವಂತೆ ಚಾಕ್ಷುಷ ಮತ್ತು ವೈವಸ್ವತಮನ್ವಂತರದಲ್ಲಿ ಸಮುದ್ರಮಥನವೆಂಬುದು ಸಮಂಜಸವೆನಿಸುತ್ತದೆ. ಏಕೆಂದರೆ ಚಾಕ್ಷುಷಮನ್ವಂತರದಲ್ಲಿ ಹೇಳುವಾಗ ಅಜಿತನಾಮಕ ಭಗವದವತಾರ ಹೇಳಿ ಅವನೇ ಅಮೃತ ಸಾಧಿಸಿದನೆಂದು ಸಂಕ್ಷೇಪವಾಗಿ ಹೇಳಿದಾಗ ಅದರ ವಿವರಣ ರೂಪವಾಗಿಯೇ ಕಥಾ ಹೊರಟಿದೆ. ಆದ್ದರಿಂದ ತಾತ್ಪರ್ಯದ ರೇವತಾಂತರೇ ಎಂಬುದಕ್ಕೆ ಚಾಕ್ಷುಷ ಎಂದು ಅರ್ಥ ಮಾಡಬೇಕು.

ಆದರೆ ವಿಜಯಧ್ವಜರು, ಲಿಂಗೇರಿ, ಶ್ರೀ ಸತ್ಯಧರ್ಮರು ಮತ್ತು ತಾತ್ಪರ್ಯಟಿಪ್ಪಣಿ ಪ್ರಭೋದಿನೀಕಾರರು ರೇವತಮನ್ವಂತರದಲ್ಲಿಯೇ ಎಂದು ಬರೆದಿರುವರು. ಸತ್ಯಧರ್ಮರು ಭಾರತ ಹರಿವಂಶ ಇತರ ಪುರಾಣ ವಿರೋಧ ಪರಿಹಾರ ಮಾಡುವರು. ರೈವತವೆಂದೇ ಬರೆದಿರುವರು. ಆದರೆ ಮೂಲಾನುಕೂಲತೆ ಹೇಗೆಂದು ವಿಚಾರ ಮಾಡಬೇಕು.

ಮೂರು ಬಾರಿ ಸಮುದ್ರಮಥನ ಆಗಿದೆ ಎಂದು ಯಾರೂ ಬರೆದಿರುವುದಿಲ್ಲ. ರೈವತಸ್ಯಾಂತರೇ ಮನೋಃ ಎಂಬುದನ್ನು ಸಾವಕಾಶ ಮಾಡಬಹುದು. ಚಾಕ್ಷುಷ ಎಂಬ ಮೂಲ ನಿರವಕಾಶವೆಂದು ತೋರುವದು. ಇನ್ನು ಇಲ್ಲಿ ಕೇವಲ ಅನಂತ ಸುಪರ್ಣ ಶಬ್ದಾರ್ಥ ಹೇಳಲು ಹೊರಟರು ಮನ್ವಂತರ ನಿರ್ಣಯವಲ್ಲ ಎಂದು ಉತ್ತರಿಸಬಹುದು. ||೩೯||

**ಇಲ್ಲಿಗೆ ಆರನೇ ಅಧ್ಯಾಯವು ಮುಗಿಯಿತು.**

★★★



# ಅಥ ಸಪ್ತಮೋಽಧ್ಯಾಯಃ

ಈ ಎರಡು ಅಧ್ಯಾಯಗಳಲ್ಲಿ ಸಮುದ್ರಮಥನದ ನೆಪದಲ್ಲಿ ಶ್ರವಣ-ಮನನ ರೂಪವಾದ ಶಾಸ್ತ್ರಮಥನವನ್ನು ಹೇಳುತ್ತಾ ಅದರಲ್ಲಿ ಹಾಲಾಹಲವೆಂಬ ತಮೋಗುಣದಿಂದುಂಟಾದ ಅನ್ಯಥಾಜ್ಞಾನದ, ಮದ್ಯವೆಂಬ ರಜೋಗುಣದಿಂದ ಹುಟ್ಟಿದ ಮಿಶ್ರಜ್ಞಾನದ, ಸತ್ವಗುಣಜನ್ಯವಾದ ಅಮೃತವೆಂಬ ತತ್ತ್ವಜ್ಞಾನ ಮೊದಲಾದವುಗಳ ಉತ್ಪತ್ತಿಯನ್ನು ಹೇಳುವದರಿಂದ ಮಹಾಮಹಿಮೆಯನ್ನು ಸ್ಪಷ್ಟಪಡಿಸುವರು. ಅದರಲ್ಲಿ ಮೊದಲು ಶಾಸ್ತ್ರಶ್ರವಣರೂಪವಾದ ಮಥನಪ್ರಕಾರವನ್ನು ಹೇಳುತ್ತಿದ್ದಾರೆ.

**ಶ್ರೀಶುಕ ಉವಾಚ**

**ತೇ ನಾಗರಾಜಮಾಮಂತ್ರ್ಯ ಫಲಭಾಗೇನ ವಾಸುಕಿಮ್ ।**
**ಪರಿಧಾಯ ಗಿರೌ ತಸ್ಮಿನ್ ನೇತ್ರಮಬ್ಧಿಂ ಮುದಾನ್ವಿತಾಃ** ॥೧॥

**ಆರೇಭಿರೇ ಸುರಾ ಯತ್ತಾ ಅಮೃತಾರ್ಥೇ ಕುರೂದ್ವಹ ।**
**ಹರಿಃ ಪುರಸ್ತಾಜ್ಜಗೃಹೇ ಪೂರ್ವಂ ದೇವಾಸ್ತತೋಽಭವನ್** ॥೨॥

**ಹೇ ಕುರೂದ್ವಹ** ಪರೀಕ್ಷಿದ್ರಾಜನೇ **ತೇ ಸುರಾಃ** ಆ ದೇವತೆಗಳು **ಫಲಭಾಗೇನ** ಮಥನದ ಫಲವಾದ ಅಮೃತವನ್ನು ಕೊಡುವುದಾಗಿ ವಾಗ್ದಾನ ಮಾಡಿ **ನಾಗರಾಜಂ ವಾಸುಕಿಂ** ಸರ್ಪಶ್ರೇಷ್ಠನಾದ ವಾಸುಕಿಯನ್ನು **ಆಮಂತ್ರ್ಯ** ಕರೆದುಕೊಂಡು ಬಂದು **ಮುದಾನ್ವಿತಾಃ** ತಮ್ಮ ಆಹ್ವಾನಕ್ಕೆ ವಾಸುಕಿಯು ಒಪ್ಪಿದ್ದರಿಂದ ಸಂತೋಷಯುತರಾಗಿ **ಯತ್ತಾಃ** ಸಾವಧಾನಮನಸ್ಕರಾಗಿ **ತಸ್ಮಿನ್ ಗಿರೌ** ಆ ಪರ್ವತದಲ್ಲಿ **ನೇತ್ರಂ** ಹಗ್ಗವಾಗಿ **ಪರಿಧಾಯ** ವಾಸುಕಿಯನ್ನು ಸುತ್ತಿ **ಅಮೃತಾರ್ಥೇ** ಅಮೃತಕ್ಕಾಗಿ **ಅಬ್ಧಿಂ** ಸಮುದ್ರವನ್ನು (ಮಥಿತುಂ) **ಆರೇಭಿರೇ** ಕಡೆಯಲು ಪ್ರಾರಂಭಿಸಿದರು. **ಹರಿಃ** ಹರಿಯು **ಪುರಸ್ತಾತ್** ಹಾವಿನ ಮುಂದಿನ ಮುಖಭಾಗವನ್ನು **ಜಗೃಹೇ** ಹಿಡಿದನು. **ತತಃ** ಆದ್ದರಿಂದ **ದೇವಾಃ** ದೇವತೆಗಳು **ಪೂರ್ವಂ ಅಭವನ್** ಮುಖಭಾಗದಲ್ಲೇ ಇದ್ದರು. ಮುಖವನ್ನೇ ಹಿಡಿದರೆಂದರ್ಥ. ॥೧, ೨॥

**ತನ್ನೈಚ್ಛನ್ ದೈತ್ಯಪತಯೋ ಮಹಾಪುರುಷಚೇಷ್ಟಿತಮ್ ।**
**ನ ಗೃಹ್ಣೀಮೋ ವಯಂ ಪುಚ್ಛಮಹೇರಂಗಮಮಂಗಲಮ್ ॥೩॥**

**ಸ್ವಾಧ್ಯಾಯಶ್ರುತಸಂಪನ್ನಾಃ ಪ್ರಖ್ಯಾತಾ ಜನ್ಮಕರ್ಮಭಿಃ ।**
**ಇತಿ ತೂಷ್ಣೀಂ ಸ್ಥಿತಾನ್ ದೈತ್ಯಾನ್ ವಿಲೋಕ್ಯ ಪುರುಷೋತ್ತಮಃ ॥೪॥**

**ಸ್ಮಯಮಾನೋ ವಿಸೃಜ್ಯಾಗ್ರಂ ಪುಚ್ಛಂ ಜಗ್ರಾಹ ಸಾಮರಃ ।**
**ಕೃತಸ್ಥಾನವಿಭಾಗಾಸ್ತೇ ಏವಂ ಕಶ್ಯಪನಂದನಾಃ ॥೫॥**

**ದೈತ್ಯಪತಯಃ** ಬಲಿ ಮುಂತಾದ ದೈತ್ಯರಾಜರು **ತತ್** ಆ **ಮಹಾಪುರುಷಚೇಷ್ಟಿತಂ** ಶ್ರೀಹರಿಯ ಸರ್ಪಮುಖಭಾಗಗ್ರಹಣವೆಂಬ ಕರ್ಮವನ್ನು **ನ ಐಚ್ಛನ್** ಒಪ್ಪಲಿಲ್ಲ. **ಸ್ವಾಧ್ಯಾಯಶ್ರುತಸಂಪನ್ನಾಃ** ವೇದಾಧ್ಯಯನ-ಶಾಸ್ತ್ರಶ್ರವಣ ಇವುಗಳಿಂದ ಉತ್ತಮರಾದ **ಜನ್ಮಕರ್ಮಭಿಃ** ಶ್ರೇಷ್ಠಕುಲದಲ್ಲಿ ಕಶ್ಯಪರಿಂದ ದಿತಿಯಲ್ಲಿ ಹುಟ್ಟಿದವರೆಂದು ಯಜ್ಞಾದಿಕರ್ಮಗಳನ್ನು ಮಾಡುವರೆಂದು **ಪ್ರಖ್ಯಾತಾಃ** ಪ್ರಸಿದ್ಧರಾದ **ವಯಂ** ನಾವು (ಈ ಪ್ರಶಂಸೆಯಿಂದ ಹಾವಿನ ಬಾಲವನ್ನು ನಮಗೆ ಹಿಡಿಯಲು ಯೋಗ್ಯವಲ್ಲ ಅಮಂಗಲವೆಂದು ಸೂಚಿಸುವರು. ಮತ್ತು ಹಾವು ಕಚ್ಚೀತೆಂಬ ಭಯದಿಂದ ಬಾಲ ಹಿಡಿದರೆಂಬ ಅಪಕೀರ್ತಿಯ ಶಂಕೆಯಿಂದಲೂ ಇದು ಅಮಂಗಲ) **ಅಹೇಃ** ವಾಸುಕಿಯ **ಅಮಂಗಲಂ** ನೀಚವಾದ **ಅಂಗಂ** ಅವಯವವಾದ **ಪುಚ್ಛಂ** ಬಾಲವನ್ನು **ನ ಗೃಹ್ಣೀಮಃ** ಹಿಡಿಯುವದಿಲ್ಲ. **ಇತಿ** ಎಂದು **ತೂಷ್ಣೀಂ** ಸಮುದ್ರವನ್ನು ಕಡೆಯಲು ಹಾವನ್ನು ಹಿಡಿಯದೇ ಸುಮ್ಮನೇ **ಸ್ಥಿತಾನ್** ನಿಂತಿರುವ **ದೈತ್ಯಾನ್** ದೈತ್ಯರನ್ನು **ವಿಲೋಕ್ಯ** ನೋಡಿ **ಪುರುಷೋತ್ತಮಃ** ಶ್ರೀಹರಿಯು **ಸ್ಮಯಮಾನಃ** ಮುಗುಳು ನಗುತ್ತಾ (ಮುಂದೆ ಆಗುವ ವಿಷದ ತಾಪದ ಪರಿಜ್ಞಾನ ಇವರಿಗೆ ಇಲ್ಲವೆಂದು) **ಸಾಮರಃ** ದೇವತೆಗಳೊಡನೆ **ಅಗ್ರಂ** ಹೆಡೆಯ ಭಾಗವನ್ನು **ವಿಸೃಜ್ಯ** ಬಿಟ್ಟು **ಪುಚ್ಛಂ ಜಗೃಹೇ** ಬಾಲವನ್ನೇ ಹಿಡಿದನು. **ತೇ** ಸಮುದ್ರಮಥನಕ್ಕೆ ಸಿದ್ಧರಾದ ದೇವ-ದಾನವರು **ಏವಂ** ಮೇಲೆ ಹೇಳಿದಂತೆ **ಕೃತಸ್ಥಾನವಿಭಾಗಾಃ** ಹೆಡೆಯ ಭಾಗ ದೈತ್ಯರಿಗೆ, ಬಾಲಭಾಗ ದೇವತೆಗಳಿಗೆ ಎಂದು ಸ್ಥಾನಗಳನ್ನು ಹಂಚಿಕೊಂಡವರಾಗಿ **ಪರಮಾಯತ್ತಾಃ** ಮಹಾಪ್ರಯತ್ನ ಮಾಡುವವರಾಗಿ **ಅಮೃತಾರ್ಥೇ** ಅಮೃತಕ್ಕಾಗಿ **ಪಯೋನಿಧಿಂ** ಕ್ಷೀರಸಮುದ್ರವನ್ನು **ಮಮಂಥುಃ** ಕಡೆದರು. ॥೩,೪,೫,॥

ಸತ್ಯ ಃ- **ಸಾಮರಃ** ಸ್ವಯಮಶಿಕ್ಷಯತ್ ಪ್ರಾಗ್ದೇವಾನ್ ಸ ಸಾಮಾವಹದಿತಿ ನಾಶ್ಚರ್ಯಮಿತಿ ಭಾವಃ । ಹಿಂದೆ ದೇವತೆಗಳಿಗೆ ಸಮಾಧಾನದಿಂದ ಇರಬೇಕೆಂದು ಉಪದೇಶಿಸಿದವನು ತಾನು ಸಮಾಧಾನ ವಹಿಸಿದನೆಂಬುದು ಆಶ್ಚರ್ಯವಲ್ಲವೆಂಬ ವಿಶೇಷಾರ್ಥ ಶ್ರೀಗಳವರು ಮಾಡಿರುವರು. ಸಾಮ ರಾತಿ ಇತಿ ವಾ ಸಾಮ್ನಿ ರಮತೇ ಇತಿ ವಾ ಸಾಮರಃ ಎಂದು ವಿಗ್ರಹ ಮಾಡಿ. ಈ ವಿಶೇಷಾರ್ಥವನ್ನು ಶ್ರೀಸತ್ಯಧರ್ಮರು ಹೇಳಿರುವರು.

**ಮಮಂಥುಃ ಪರಮಾಯತ್ತಾ ಅಮೃತಾರ್ಥೇ ಪಯೋನಿಧಿಮ್ ।**
**ಮಥ್ಯಮಾನೇಽರ್ಣವೇ ಸೋಽದ್ರಿರನಾಧಾರೋ ಹ್ಯಪೋಽವಿಶತ್ ।**
**ಧ್ರಿಯಮಾಣೋಽಪಿ ಬಲಿಭಿರ್ಗೌರವಾತ್ ಪಾಂಡುನಂದನ ॥೬॥**

**ಹೇ ಪಾಂಡುನಂದನ** ಪಾಂಡವರಿಗೆ ಸಂತೋಷಕರನಾದ ಪರೀಕ್ಷಿತನೇ **ಅರ್ಣವೇ** ಸಮುದ್ರವು **ಮಥ್ಯಮಾನೇ** ಕಡೆಯಲ್ಪಡುತ್ತಿರಲು **ಅನಾಧಾರಃ** ಬುಡದಲ್ಲಿ ಯಾವ ಆಶ್ರಯವು ಇಲ್ಲದ **ಸಃ ಅದ್ರಿಃ** ಆ ಮಂದರಪರ್ವತವು **ಬಲಿಭಿಃ** ಬಲಿಷ್ಠರಿಂದ **ಧ್ರಿಯಮಾಣಃ ಅಪಿ** ಹಿಡಿಯಲ್ಪಟ್ಟಿದ್ದರೂ **ಗೌರವಾತ್** ಬಹಳ ಭಾರವಾಗಿದ್ದರಿಂದ **ಅಪಃ ಆವಿಶತ್** ನೀರಿನಲ್ಲಿ ಮುಳುಗಿತು **ಹಿ** ಇದು ಯುಕ್ತವು. ॥೬॥

**ತೇ ಸುನಿರ್ವಿಣ್ಣಮನಸಃ ಪರಿಮ್ಲಾನಮುಖಶ್ರಿಯಃ ।**
**ಆಸನ್ ಸ್ವಪೌರುಷೇ ನಷ್ಟೇ ದೈವೇನಾತಿಬಲೀಯಸಾ ॥೭॥**

**ಅತಿಬಲೀಯಸಾ** ತಮಗಿಂತ ಅತ್ಯಂತಬಲಿಷ್ಠನಾದ **ದೈವೇನ** ಅದೃಷ್ಟ ನಿಯಾಮಕನಾದ ಶ್ರೀಹರಿಯಿಂದ **ಸ್ವಪೌರುಷೇ** ತಮ್ಮ ಪ್ರಯತ್ನವು **ನಷ್ಟೇ** ವ್ಯರ್ಥವಾಗುತ್ತಿರಲು **ತೇ** ಆ ಕಶ್ಯಪಪುತ್ರರು **ಸುನಿರ್ವಿಣ್ಣಮನಸಃ** ಅತ್ಯಂತ ನಿರಾಸೆಗೊಂಡ ಮನಸ್ಸುಳ್ಳವರಾಗಿ **ಪರಿಮ್ಲಾನಮುಖಶ್ರಿಯಃ ಆಸನ್** ಬಹಳ ಬಾಡಿದ ಮುಖ ಕಾಂತಿಯುಳ್ಳವರಾದರು. ॥೭॥

ಅಮೃತದ ಆಸೆಯನ್ನು ಬಿಟ್ಟು ಬಾಡಿದ ಮುಖದಿಂದ ಕರ್ತವ್ಯ ಮೂಢರಾಗಿ ಕುಳಿತರೆಂದು ಭಾವ. ॥೭॥

**ವಿಲೋಕ್ಯ ವಿಘ್ನೇಶಗತಿಂ ತದೇಶ್ವರೋ**
**ದುರಂತವೀರ್ಯೋಽವಿತಥಾಭಿಸಂಧಿಃ ।**
**ಕೃತ್ವಾ ವಪುಃ ಕಾಚ್ಛಪಮದ್ಭುತಂ ಮಹತ್**
**ಪ್ರವಿಶ್ಯ ತೋಯಂ ಗಿರಿಮುಜ್ಜಹಾರ ॥೮॥**

**ತದಾ** ಆಗ **ದುರಂತವೀರ್ಯಃ** ಅಪಾರಶಕ್ತಿಯುಳ್ಳ **ಅವಿತಥಾಭಿಸಂಧಿಃ ಚ** ಸತ್ಯಸಂಕಲ್ಪನಾದ **ಈಶ್ವರಃ** ನಿಯಾಮಕಶ್ರೇಷ್ಠನಾದ ಶ್ರೀಹರಿಯು **ವಿಘ್ನೇಶಗತಿಂ** ಕಾರ್ಯಾರಂಭದಲ್ಲಿ ಗಣಪತಿಯ ಪೂಜೆ ಮಾಡದೇ ಇರುವುದರಿಂದ ಈ ವಿಘ್ನ ಬಂದಿದೆ ಎಂಬುದಾಗಿ (ಈ ಪರ್ವತವನ್ನು ಮುಳುಗಿಸಿದ್ದು ಗಣಪತಿ. ಅಂದರೆ ಶ್ರೀಹರಿಯ ಅತಿಶಯಸಾಮರ್ಥ್ಯದ ಪ್ರಕಟಣೆಗಾಗಿ ಶ್ರೀಹರಿಯಿಂದ ಪ್ರೇರಿತನಾಗಿಯೇ ವಿಘ್ನರಾಜ ಮಂದರವನ್ನು ಮುಳಿಗಿಸಿದ್ದು ಎಂದು ಭಾವ.) **ವಿಲೋಕ್ಯ** ತಿಳಿದು **ಅದ್ಭುತಂ** ಆಶ್ಚರ್ಯಕರವಾದ **ಮಹತ್** ಬಹಳ ದೊಡ್ಡದಾದ **ಕಾಚ್ಛಪಂ** ಆಮೆಯ ದೇಹದಂತಿರುವ **ವಪುಃ** ಸಚಿದಾನಂದಾತ್ಮಕವಾದ ಆಕಾರವನ್ನು **ಕೃತ್ವಾ** ತೆಗೆದುಕೊಂಡು **ತೋಯಂ** ಸಮುದ್ರದ

ನೀರನ್ನು **ಪ್ರವಿಶ್ಯ** ಪ್ರವೇಶ ಮಾಡಿ **ಗಿರಿಂ** ಮುಳುಗಿದ್ದ ಪರ್ವತವನ್ನು **ಉಜ್ಜಹಾರ** ಮೇಲಕ್ಕೆ ತಂದನು. ||೮||

**ಏಕಾದಶಸಹಸ್ರಾಣಿ ಯೋಜನಾನಾಂ ಸಮುಚ್ಛ್ರಿತಮ್ ।**
**ಅಧೋ ಭೂಮೇಃ ಸಹಸ್ರೇಷು ತಾವತ್ಸ್ವೇವ ಪ್ರತಿಷ್ಠಿತಮ್ ॥**

**ಮ.ಭಾ.ಆ.ಪ.೧೮.೩ ॥**

ಹನ್ನೊಂದುಸಾವಿರ ಯೋಜನ ಮೇಲೆ, ಹನ್ನೊಂದುಸಾವಿರ ಯೋಜನೆ ಭೂಮಿಯ ಒಳಗೆ ಹೀಗೆ ೨೨ಸಾವಿರ ಯೋಜನದಷ್ಟು ಈ ಮಂದರಪರ್ವತ ಇದೆ.

**ತಮುತ್ಥಿತಂ ವೀಕ್ಷ್ಯ ಕುಲಾಚಲಂ ಪುನಃ**
**ಸಮುತ್ಥಿತಾ ನಿರ್ಮಥಿತುಂ ಸುರಾಸುರಾಃ ।**
**ದಧಾರ ಪೃಷ್ಠೇನ ಸ ಲಕ್ಷಯೋಜನ-**
**ಪ್ರಸ್ತಾರಿಣಾ ದ್ವೀಪ ಇವಾಪರೋ ಮಹಾನ್ ॥೯॥**

**ಸುರಾಸುರಾಃ** ದೇವ-ದಾನವರು **ಉತ್ಥಿತಂ** ಮೇಲೆ ಬಂದ **ತಂ ಕುಲಾಚಲಂ** ಆ ಮಂದರವೆಂಬ ಕುಲಪರ್ವತವನ್ನು **ವೀಕ್ಷ್ಯ** ನೋಡಿ **ಪುನಃ** ಮತ್ತೆ **ನಿರ್ಮಥಿತುಂ** ಕಡೆಯಲು **ಸಮುತ್ಥಿತಾಃ** ಎದ್ದರು. **ಅಪರಃ** ಮತ್ತೊಂದು **ಮಹಾನ್** ವಿಶಾಲವಾದ **ದ್ವೀಪ ಇವ ಸ್ಥಿತಃ** ನಡುಗಡ್ಡೆಯಂತಿರುವ **ಸಃ** ಕೂರ್ಮರೂಪಿಯಾದ ಪರಮಾತ್ಮನು **ಲಕ್ಷಯೋಜನಪ್ರಸ್ತಾರಿಣಾ** ಲಕ್ಷಯೋಜನ ವಿಸ್ತಾರವಾದ **ಪೃಷ್ಠೇನ** ತನ್ನ ಬೆನ್ನಿನಿಂದ **ತಂ** ಆ ಕುಲಾಚಲವನ್ನು **ದಧಾರ** ಧರಿಸಿದನು. ||೯||

**ಸುರಾಸುರೇಂದ್ರೈರ್ಭುಜವೀರ್ಯವೇಪಿತಂ**
**ಪರಿಭ್ರಮಂತಂ ಗಿರಿಮಂಗ ಪೃಷ್ಠತಃ ।**
**ಬಿಭ್ರತ್ತದಾವರ್ತನಮಾದಿಕಚ್ಛಪೋ**
**ಮೇನೇಽಂಗಕಂಡೂಯನಮಪ್ರಮೇಯಃ ॥೧೦॥**

**ಹೇ ಅಂಗ** ಪರೀಕ್ಷಿದ್ರಾಜನೇ **ಸುರಾಸುರೇಂದ್ರೈಃ** ದೇವ-ದಾನವಶ್ರೇಷ್ಠರಿಂದ **ಭುಜವೀರ್ಯವೇಪಿತಂ** ತಮ್ಮ ಬಾಹುಬಲದಿಂದ ಚಲಿಸುವಂತೆ ಮಾಡಿದ್ದ **ಪೃಷ್ಠತಃ** ತನ್ನ ಬೆನ್ನಿನ ಮೇಲೆ **ಪರಿಭ್ರಮಂತಂ** ವೇಗವಾಗಿ ಸುತ್ತುತ್ತಿದ್ದ **ಗಿರಿಂ** ಪರ್ವತವನ್ನು **ಬಿಭ್ರತ್** ಧರಿಸಿದ **ಅಪ್ರಮೇಯಃ** ತಿಳಿಯಲಾಗದ ಸಾಮರ್ಥ್ಯವುಳ್ಳ **ಆದಿಕಚ್ಛಪಃ** ಆದಿಕೂರ್ಮನಾದ ಶ್ರೀಹರಿಯು **ತದಾವರ್ತನಂ** ಆ ಪರ್ವತ ತಿರುಗುವುದನ್ನು **ಅಂಗಕಂಡೂಯನಂ ಮೇನೇ** ದೇಹವನ್ನು ತುರಿಸಿದಂತೆ ತಿಳಿದನು. ಇದರಿಂದ ದೇವರಿಗೆ ಆಯಾಸವಿಲ್ಲವೆಂದು ಭಾವ. ||೧೦||

ಶ್ರೀಹರಿಯ ಆವೇಶವಿಲ್ಲದೇ ಯಾರೂ ಯಾವ ಸಣ್ಣ ಕೆಲಸ ಮಾಡಲೂ ಸಮರ್ಥರಲ್ಲ ಎಂದು ತಿಳಿಸಲು ಶ್ರೀಹರಿಯ ಆವೇಶವನ್ನು ಹೇಳುವರು-

**ತಥಾಽಸುರಾನಾ(ಣಾಂ)ವಿಶದಾಸುರೇಣ**
**ರೂಪೇಣ ತೇಷಾಂ ಬಲವೀರ್ಯಮೀರಯನ್ ।**
**ಉದ್ದೀಪಯನ್ ದೇವಗಣಾಂಶ್ಚ ವಿಷ್ಣುಃ**
**ದೈವೇನ ನಾಗೇಂದ್ರಮಬೋಧರೂಪಃ** ॥೧೧॥

**ಉಪರ್ಯಗೇಂದ್ರಂ ಗಿರಿರಾಡಿವಾನ್ಯ**
**ಆಕ್ರಮ್ಯ ಹಸ್ತೇನ ಸಹಸ್ರಬಾಹುಃ ।**
**ತಸ್ಥೌ ದಿವಿ ಬ್ರಹ್ಮಭವೇಂದ್ರಮುಖ್ಯೈ-**
**ರಭಿಷ್ಟುವದ್ಭಿಃ ಸುಮನೋಽಭಿವೃಷ್ಟ್ಯಾ (ಷ್ಟಃ)** ॥೧೨॥

**ಸಹಸ್ರಬಾಹುಃ** ಅನಂತ ಕೈಗಳುಳ್ಳ **ಅಬೋಧರೂಪಃ** ತಮೋಗುಣ ಪ್ರವರ್ತಕವಾದ ರೂಪ ಉಳ್ಳ ತಿರ್ಯಗ್‌ರೂಪ ಉಳ್ಳ **ವಿಷ್ಣುಃ** ಶ್ರೀಹರಿಯು **ತಥಾ** ಆದಿಕೂರ್ಮನಾಗಿ ಮಂದರವನ್ನು ಧರಿಸಿದಂತೆ **ಆಸುರೇಣ ರೂಪೇಣ** ಅಸುರ ನಿಯಾಮಕವಾದ ರೂಪದಿಂದ **ಅಸುರಾನ್** ದೈತ್ಯರನ್ನು **ಆವಿಶತ್** ಪ್ರವೇಶಿಸಿದನು. ಅಸುರಾಣಾಂ ಎಂಬ ಪಾಠದಲ್ಲಿ **ವಿಶತ್** ಪ್ರವೇಶಿಸಿ **ತೇಷಾಂ ಅಸುರಾಣಾಂ** ಆ ಬಲಿ ಮುಂತಾದ ಅಸುರರ **ಬಲವೀರ್ಯಂ** ಬಲ ಸಹಿತವಾದ ವೀರ್ಯವನ್ನು ಶರೀರ ಬಲವನ್ನೂ ಸಾಮರ್ಥ್ಯವನ್ನೂ **ಈರಯನ್** ಪ್ರೇರಿಸುತ್ತಾ ಉತ್ತೇಜಿಸುತ್ತಾ ಹೆಚ್ಚಿಸುತ್ತಾ **ನಾಗೇಂದ್ರಂ ಚ** ನಾಗಪ್ರೇರಕರೂಪದಿಂದ ಅಥವಾ ನಾಗರೂಪದಿಂದ **ಉದ್ದೀಪಯನ್** ಶಕ್ತಿಯುಕ್ತವನ್ನಾಗಿ ಮಾಡುತ್ತ **ದೈವೇನ ರೂಪೇಣ** ಸತ್ತ್ವಗುಣಪ್ರವರ್ತಕವಾದ ದೇವರೂಪದಿಂದ **ದೇವಗಣಾನ್** ದೇವತೆಗಳ ಸಮೂಹವನ್ನು **ಉದ್ದೀಪಯನ್** ದೇವತೆಗಳ ಸಾಮರ್ಥ್ಯವನ್ನು ಹೆಚ್ಚಿಸುತ್ತ **ದಿವಿ** ಅಂತರಿಕ್ಷದಲ್ಲಿ **ಬ್ರಹ್ಮಭವೇಂದ್ರಮುಖ್ಯೈಃ** ಬ್ರಹ್ಮ,ರುದ್ರ,ಇಂದ್ರ ಮೊದಲಾದ ದೇವತೆಗಳಿಂದ **ಸುಮನೋಽಭಿವೃಷ್ಟ್ಯಾ** ಹೂಮಳೆಯೊಂದಿಗೆ **ಅಭಿಷ್ಟುವದ್ಭಿಃ ಸದ್ಭಿಃ** ಭಕ್ತಿಯಿಂದ ಸ್ತೋತ್ರ ಮಾಡಲ್ಪಡುತ್ತಿರಲು ಅಥವಾ **ಸುಮನೋಭಿವೃಷ್ಟಃ** ಎಂಬ ಪಾಠದಲ್ಲಿ ಸ್ತುತಿಸುವ ಬ್ರಹ್ಮಾದಿಗಳಿಂದ ಹೂಮಳೆಗೆರೆಯಲ್ಪಟ್ಟು ಎಂದರ್ಥ. **ಅನ್ಯಃ ಗಿರಿರಾಡಿವ** ಮತ್ತೊಂದು ಪರ್ವತದಂತೆ **ಅಗೇಂದ್ರಂ** ಮಂದರಪರ್ವತವನ್ನು **ಉಪರಿ** ಮೇಲ್ಭಾಗದಲ್ಲಿ **ಹಸ್ತೇ ಆಕ್ರಮ್ಯ** ಮೇಲಕ್ಕೆ ಹಾರದಂತೆ ಕೈಯಿಂದ ಅದುಮಿಕೊಂಡು (ಒತ್ತಿ ಹಿಡಿದು) **ತಸ್ಥೌ** ನಿಂತಿದ್ದನು. ॥೧೧, ೧೨॥

**ಉಪರ್ಯಧಶ್ಚಾತ್ಮನಿ ನೇತ್ರಗೋತ್ರಯೋಃ**
**ಪರೇಣ ತೇ ಪ್ರಾವಿಶತಾ ಸಮೇಧಿತಾಃ ।**

**ಮಮಂಥುರಬ್ಧಿಂ ತರಸಾ ಮದೋತ್ಕಟಾ**
**ಮಹಾದ್ರಿಣಾ ಕ್ಷೋಭಿತನಕ್ರಚಕ್ರಮ್** ॥೧೩॥

**ನೇತ್ರಗೋತ್ರಯೋಃ** ಕಡೆಯುವ ಹಗ್ಗದಲ್ಲಿ ಕಡಗೋಲಾದ ಮಂದರಪರ್ವತದಲ್ಲಿ ಹಾಗೂ **ಉಪರಿ** ಮೇಲೆ **ಅಧಃ** ಕೆಳಗೆ **ಆತ್ಮನಿ** ಒಳಗೆ ಮನಸ್ಸಿನಲ್ಲಿ ಪ್ರಯತ್ನದಲ್ಲಿ ತಮ್ಮಲ್ಲಿ (ದೇವ-ದೈತ್ಯರಲ್ಲಿ) **ಪ್ರಾವಿಶತಾ** ಪ್ರವೇಶಿಸಿದ **ಪರೇಣ** ಪರಮಾತ್ಮನಿಂದ **ಸಮೇಧಿತಾಃ** ಶಕ್ತಿಯ ಅಭಿವೃದ್ಧಿಯನ್ನು ಪಡೆದ **ತೇ** ಆ ದೇವಾಸುರರು **ಮದೋತ್ಕಟಾಃ** ಮಹಾಶಕ್ತಿವಂತರೆಂಬ ಭಾವನೆಯಿಂದ ಉದ್ರಿಕ್ತರಾಗಿ **ಮಹಾದ್ರಿಣಾ** ದೊಡ್ಡಪರ್ವತದಿಂದ **ಕ್ಷೋಭಿತನಕ್ರಚಕ್ರಂ** ವ್ಯಾಕುಲಗೊಳಿಸಲ್ಪಟ್ಟ ಮೊಸಳೆ ಮೊದಲಾದ ಜಲಜಂತುಗಳ ಸಮೂಹವುಳ್ಳ **ಅಬ್ಧಿಂ** ಕ್ಷೀರಸಮುದ್ರವನ್ನು **ತರಸಾ** ವೇಗದಿಂದ **ಮಮಂಥುಃ** ಕಡೆದರು. ॥೧೩॥

**ಅಹೀಂದ್ರಸಾಹಸ್ರಕರಾಲದಿ(ದೃ)ಙ್ಮುಖ**
**ಶ್ವಾಸಾಗ್ನಿಧೂಮಾಹತವರ್ಚಸೋಽಸುರಾಃ ।**
**ಪೌಲೋಮಕಾಲೇ(ಲಿ)ಯಬಲೀಲ್ವಲಾದಯೋ**
**ದಾವಾಗ್ನಿದಗ್ಧಾಃ ಸರಲಾ(ಶಲಭಾ) ಇವಾಪತನ್** ॥೧೪॥

**ಅಹೀಂದ್ರ** ವಾಸುಕಿಯ **ಸಾಹಸ್ರ** ಸಾವಿರಸಂಖ್ಯೆಯ **ಕರಾಲ** ಕ್ರೂರವಾದ **ದೃಕ್** ಕಣ್ಣುಗಳ ಮತ್ತು **ಮುಖ** ಹೆಡೆಗಳು ಅವುಗಳಿಂದ ಹೊರಟ **ಶ್ವಾಸಾಗ್ನಿ** ಶ್ವಾಸವೆಂಬ ಬೆಂಕಿ ಮತ್ತು **ಧೂಮ** ಹೊಗೆಗಳಿಂದ **ಆಹತ** ಸಂಪೂರ್ಣನಷ್ಟವಾದ **ವರ್ಚಸಃ** ಕಾಂತಿಯುಳ್ಳ **ಅಸುರಾಃ** ಅಸುರರಾದ **ಪೌಲೋಮಕಾಲೇಯಬಲೀಲ್ವಲಾದಯಃ** ಪೌಲೋಮ, ಕಾಲೇಯ ಎಂಬ ಗಣಗಳು ಬಲಿ, ಇಲ್ವಲ, ಮೊದಲಾದವರು **ದಾವಾಗ್ನಿದಗ್ಧಾಃ** ಕಾಡುಗಿಚ್ಚಿನಿಂದ ಸುಟ್ಟುಹೋದ **ಸರಲಾಃ ಇವ ಅಭವನ್** ದೇವದಾರು ಮರದಂತೆ ಆದರು.

**ದಿಙ್ಮುಖ** ಎಂಬ ಪಾಠದಲ್ಲಿ ದಿಕ್ಕುಗಳಂತೆ ವಿಸ್ತಾರವಾದ ಹೆಡೆಗಳು ಎಂದರ್ಥ. ಮತ್ತು **ಶರಭಾ ಇವಾಪತನ್** ಎಂಬ ಪಾಠದಲ್ಲಿ ಪತಂಗಗಳಂತೆ ಬಿದ್ದರೆಂದರ್ಥ. ಸರಲಾಃ ಶರಭಾಃ ಎಂಬ ಎರಡು ಪಾಠಗಳಲ್ಲಿ **ಸರಲಾಃ** ಎಂಬ ಪಾಠವೇ ಸರಳವೆಂದು ಶ್ರೀಸತ್ಯಧರ್ಮರು ಹೇಳುತ್ತಾರೆ. ಗಿಡಗಳ ಸುಟ್ಟ ಬಣ್ಣವನ್ನು ನೋಡಬಹುದು. ಆದ್ದರಿಂದ ಸರಲಾಃ ಎಂಬ ದೃಷ್ಟಾಂತವು ಯುಕ್ತವಾಗುತ್ತದೆ. ಅಲ್ಪವಾದ ಸುಟ್ಟು ಹೋದ ಪತಂಗಗಳನ್ನು ನೋಡಲಾಗದು. ಆದ್ದರಿಂದ ಆ ದೃಷ್ಟಾಂತ ಅಷ್ಟು ಪ್ರಶಸ್ತವಲ್ಲ. ॥೧೪॥

**ದೇವಾಶ್ಚ ತಚ್ಛ್ವಾಸಶಿಖಾಹತಪ್ರಭಾನ್**
**ಧೂಮ್ರಾಂಬರಸ್ರಗ್ವರಕಂಚುಕಾನನಾನ್ ।**

**ಸಮಭ್ಯವರ್ಷನ್ ಭಗವದ್ವಶಾ ಘನಾ**
**ವವುಃ ಸಮುದ್ರೋರ್ಮ್ಯುಪಗೂಢವಾಯವಃ ॥೧೫॥**

**ತಚ್ಛ್ವಾಸಶಿಖಾಹತಪ್ರಭಾನ್** ವಾಸುಕಿಯ ಶ್ವಾಸಾಗ್ನಿಯ ಜ್ವಾಲೆಯಿಂದ ನಷ್ಟವಾದ ಕಾಂತಿಯುಳ್ಳ **ಧೂಮ್ರಾಂಬರಸ್ರಗ್ವರಕಂಚುಕಾನನಾನ್** ಹೊಗೆಯಂತೆ ಕಪ್ಪಾದ ಉಡುವ ಬಟ್ಟೆ, ಮಾಲೆ, ಶ್ರೇಷ್ಠವಾದ ಕವಚಗಳು ಮತ್ತು ಮುಖಗಳುಳ್ಳ ಅಥವಾ (ಅಂಗಿ) ರಾಜಪೋಷಾಕಗಳುಳ್ಳ ''ಕಂಚುಕೋ ವಾರವಾಣೇ ಸ್ಯಾನ್ನಿರ್ಮೋಕೇ ಕವಚೇಽಪಿ ಚ'' ಎಂದು ವಿಶ್ವವಿದೆ. **ದೇವಾನ್** ದೇವತೆಗಳನ್ನು (ನೋಡಿ ಅವರನ್ನು ಸಂತೋಷಪಡಿಸಲು) **ಭಗವದ್ವಶಾಃ** ಶ್ರೀಹರಿಯಿಂದ ಪ್ರೇರಿತವಾದ **ಘನಾಃ** ಮೋಡಗಳು ಅಭಿಮಾನಿದೇವತೆಗಳು **ಸಮಭ್ಯವರ್ಷನ್** ಚೆನ್ನಾಗಿ ಮಳೆ ಸುರಿಸಿದವು. ಸಂಶಬ್ದದಿಂದ ದೇವತೆಗಳಿಗೆ ಅನುಕೂಲ ಆಗಿದ್ದವು ಎಂದು ಸೂಚಿಸುವರು. **ಸಮುದ್ರೋರ್ಮ್ಯುಪಗೂಢವಾಯವಃ** ಕ್ಷೀರಸಮುದ್ರದ ತೆರೆಗಳ ಹನಿಗಳಿಂದ ಕೂಡಿದ ತಂಗಾಳಿಗಳು (ಅಭಿಮಾನಿ ದೇವತೆಗಳು) **ವವುಃ** ಬೀಸಿದವು.

**ಮಥ್ಯಮಾನಾತ್ ತಥಾ ಸಿಂಧೋರ್ದೇವಾಸುರವರೂಥಪೈಃ ।**
**ಯದಾ ಸುಧಾ ನ ಜಾಯೇತ ನಿರ್ಮಮಂಥಾಜಿತಃ ಸ್ವಯಮ್ ॥೧೬॥**

**ಯದಾ** ಯಾವಾಗ **ದೇವಾಸುರವರೂಥಪೈಃ** ದೇವಾಸುರರ ನಾಯಕರಿಂದ **ಮಥ್ಯಮಾನಾತ್** ಕಡೆಯಲ್ಪಡುತ್ತಿದ್ದ **ಸಿಂಧೋಃ** ಸಮುದ್ರದಿಂದ **ಸುಧಾ** ತಮಗಿಷ್ಟವಾದ ಅಮೃತವು **ನ ಜಾಯೇತ** ಹುಟ್ಟಲಿಲ್ಲವೋ ಮುಂದೆಯೂ ಹುಟ್ಟುವದಿಲ್ಲವೆನ್ನಿಸಿತೋ **ತದಾ** ಆಗ **ಅಜಿತಃ** ಚಾಕ್ಷುಷಮನ್ವಂತರದಲ್ಲಿ ಅವತರಿಸಿದ ಈ ಹೆಸರಿನ ಶ್ರೀಹರಿಯು **ನಿರ್ಮಮಂಥ** ತಾನೇ ಸ್ವಯಂ ಸಮುದ್ರವನ್ನು ಕಡೆದನು. ॥೧೬॥

ಸಮುದ್ರವನ್ನು ಕಡೆಯುವ ಭಗವಂತನ ರೂಪವನ್ನು ಅಧಿಕಾರಿಗಳು ಧ್ಯಾನಿಸಲಿ ಎಂದು ವರ್ಣಿಸುವರು-

**ಮೇಘಶ್ಯಾಮಃ ಕನಕಪರಿಧಿಃ ಕರ್ಣವಿದ್ಯೋತವಿದ್ಯುನ್-**
**ಮೂರ್ಧ್ನಿ ಭ್ರಾಜದ್ವಿಲುಲಿತಕಚಸ್ರಗ್ಧರೋ ರಕ್ತನೇತ್ರಃ ।**
**ಜೈತ್ರೈರ್ದೋರ್ಭಿರ್ಜಗದಭಯದೈರ್ದಂದಶೂಕಂ ಗೃಹಿತ್ವಾ**
**ಮಥ್ನನ್ ಮಥ್ನಾ ಪ್ರತಿಗಿರಿರಿವಾಶೋಭತಾಥೋ ಧೃತಾದ್ರಿಃ ॥೧೭॥**

**ಅಥೋ** ಕಡೆಯಲು ತೊಡಗಿದ ನಂತರ **ಮೇಘಶ್ಯಾಮಃ** ಮೋಡದಂತೆ ಶ್ಯಾಮವರ್ಣವುಳ್ಳ **ಕನಕಪರಿಧಿಃ** ಬಂಗಾರದ ಉಡುದಾರವುಳ್ಳ ಪೀತಾಂಬರಧಾರಿ- ಯಾದ **ಕರ್ಣವಿದ್ಯೋತವಿದ್ಯುತ್** ಕಿವಿಗಳಲ್ಲಿರುವ ವಿಶಿಷ್ಟಪ್ರಕಾಶವುಳ್ಳ ಮಿಂಚುಗಳಂತಿರುವ ಕುಂಡಲಗಳುಳ್ಳ ಅಥವಾ ಕರ್ಣಯೋಃ ವಿಶಿಷ್ಟೋ ದ್ಯೋತೋ ದ್ಯೋತನಂ ಯಾಭ್ಯಾಂ

ತೇ ಕರ್ಣವಿದ್ಯೋತೇ ಅಂದರೆ ಕುಂಡಲಗಳು, ಆ ಕುಂಡಲಗಳೇ ವಿದ್ಯುತ್ ಮಿಂಚಿನಂತೆ ಚಂಚಲವಾದವು ಎಂದರ್ಥ. ಕಿವಿಗಳಿಗೆ ಕುಂಡಲಗಳಿಂದ ಶೋಭೆ ಬೇರೆ ಕಡೆಗೆ, ಇಲ್ಲಿ ಕರ್ಣವಿದ್ಯೋತಯೋಃ ಕುಂಡಲಗಳಿಗೆ ವಿದ್ಯುತ್ ಪರಮಾತ್ಮನೇ ಪ್ರಕಾಶಕ ಎಂದು ಅರ್ಥ. ವಿದ್ಯೋತತೇ ಇತಿ ವಿದ್ಯುತ್ । ''ಚಪಲಾ ಕಮಲಾ ವಿದ್ಯುತ್ ಪುಂಶ್ಚಲೀ ಪಿಪ್ಪಲೀಷು ಚ । ನಂಪುಸಕಂ ತು ಶೀಘ್ರೇ ಸ್ಯಾತ್ ವಾಚ್ಯವತ್ ತರಲೇಽಪಿ ಚ'' ಎಂದು ಅಭಿಧಾನವಿರುವುದರಿಂದ ಕರ್ಣವಿದ್ಯೋತವಿದ್ಯುತ್ ಚಲಿಸುವ ಕರ್ಣಕುಂಡಲವುಳ್ಳ ಎಂದರ್ಥ. **ಮೂರ್ಧ್ನಿ** ಶಿರಸ್ಸಿನಲ್ಲಿ **ಭ್ರಾಜತ್** ಪ್ರಕಾಶಿಸುವ **ವಿಲುಲಿತ** ಚಲಿಸುವ **ಕಚ** ಕೇಶಪಾಶಗಳಲ್ಲಿ **ಸ್ರಗ್ಧರಃ** ಮಾಲೆಯನ್ನು ಧರಿಸಿದ, **ವನಸ್ರಗ್ಧರಃ** ಎಂಬ ಪಾಠದಲ್ಲಿ ವನಮಾಲೆಯನ್ನು ಧರಿಸಿದ ಎಂದು ಅರ್ಥ. ಕುತ್ತಿಗೆಯಲ್ಲಿ ಮಾಲೆಯನ್ನು ಹಾಕಿಕೊಂಡರೆ ಬಹಳ ಚಲಿಸುವದು ಕಾರಣ ತಲೆಯಲ್ಲಿ ಧರಿಸಿದನೆಂದು ತಿಳಿಯಬೇಕು. **ರಕ್ತನೇತ್ರಃ** ನೇತ್ರಾಂತವು ಕೆಂಪಾಗಿವುಳ್ಳ **ಧೃತಾದ್ರಿಃ** ಬೆಟ್ಟವನ್ನು ಹಿಡಿದಿದ್ದ ಅಜಿತನು **ಜಗದಭಯದೈಃ** ಜಗತ್ತಿಗೆ ಅಭಯವನ್ನು ಕೊಡುವ **ಜೈತ್ರೈಃ** ಜಯಶೀಲಗಳಾದ **ದೋರ್ಭಿಃ** ಬಾಹುಗಳಿಂದ **ದಂದಶೂಕಂ** ವಾಸುಕಿಸರ್ಪವನ್ನು **ಗೃಹೀತ್ವಾ** ಹಿಡಿದುಕೊಂಡು **ಮಥ್ನಾ** ಮಂದರವೆಂಬ ಕಡಗೋಲಿನಿಂದ **ಮಥ್ನನ್** ಸಮುದ್ರವನ್ನು ಕಡೆಯುತ್ತ **ಪ್ರತಿಗಿರಿರಿವ ಅಶೋಭತ** ಮತ್ತೊಂದು ಪರ್ವತದಂತೆ ಶೋಭಿಸಿದನು.

ಛಲಾರಿಯಲ್ಲಿ ಪ್ರತಿಗಿರಿರಿವ ಎಂಬುದಕ್ಕೆ ಪ್ರತಿದ್ವಂದ್ವಸರ್ಪ ಇವ ಎಂದು ವ್ಯಾಖ್ಯಾನಿಸಿರುವರು. ಅದು ಭುಜಗಳ ವಿವಕ್ಷೆಯಿಂದ ಎಂದು ತಿಳಿಯಬೇಕು. ''ದಂದಶೂಕೋ ಬಿಲೇಶಯಃ ಉರಗಃ'' ಎಂದು ಅಮರವಿದೆ. ''ದಂದಶೂಕಸ್ತು ಪುಲ್ಲಿಂಗೋ ರಾಕ್ಷಸೇ ಚ ಸರೀಸೃಪೇ'' ಎಂದು ಭಾನು. ।।೧೭।।

**ನಿರ್ಮಥ್ಯಮಾನಾದುದಧೇರಭೂದ್ವಿಷಂ**
**ಮಹೋಲ್ಬಣಂ ಹಾಲಹಲಾಹ್ವಮಗ್ರತಃ ।**
**ಸಂಭ್ರಾಂತಮೀನೋನ್ಮಕರಾಹಿಕಚ್ಛಪೋ-**
**ತ್ತಿಮಿದ್ವಿಪಗ್ರಾಹತಿಮಿಂಗಿಲಾಕುಲಾತ್** ।।೧೮।।

**ನಿರ್ಮಥ್ಯಮಾನಾತ್** ಅಜಿತನಾಮಕನಾದ ಶ್ರೀಹರಿಯಿಂದ ಚೆನ್ನಾಗಿ ಕಡೆಯಲ್ಪಡುತ್ತಿದ್ದ ಆದ್ದರಿಂದಲೇ **ಸಂಭ್ರಾಂತ** ಹೆದರಿದ **ಮೀನ** ಸಣ್ಣ ಮೀನುಗಳು **ಉನ್ಮಕರ** ಮೇಲೆ ಹಾರಾಡುವ ಜಲಚರವಿಶೇಷ (ಒಂದು ವಿಧ ಮೀನ) ''ಮಕರೋ ಯಾದಸಿ'' ಎಂದು ವಿಶ್ವವಿದೆ. **ಅಹಿ** ನಿರುಹಾವುಗಳು **ಕಚ್ಛಪ** ಆಮೆಗಳು **ಉತ್ತಿಮಿ** ಹಾರುತ್ತಿರುವ ಹತ್ತು ಯೋಜನದ ದೊಡ್ಡಮೀನುಗಳು **ದ್ವಿಪ** ನೀರಾನೆಗಳು **ಗ್ರಾಹ** ಮೊಸಳೆಗಳು **ತಿಮಿಂಗಿಲ** ತಿಮಿಂಗಿಲಗಳನ್ನು ನುಂಗುವ ನೂರು ಯೋಜನದ ಅತಿದೊಡ್ಡವಾದ ಮೀನುಗಳು

ಇವುಗಳಿಂದ **ಆಕುಲಾತ್** ತುಂಬಿದ ಪ್ರಕ್ಷುಬ್ಧವಾದ **ಉದಧೇಃ** ಸಮುದ್ರದಿಂದ **ಅಗ್ರತಃ** ಮೊದಲು **ಮಹೋಲ್ಬಣಂ** ಅತ್ಯಂತ ಕ್ರೂರವಾದ **ಹಾಲಹಲಾಹ್ವಂ** ಹಾಲಾಹಲವೆಂಬ ಹೆಸರಿನ **ವಿಷಂ** ವಿಷವು **ಅಭೂತ್** ಜನಿಸಿತು.

ಸತ್ಯ ಃ- ''ಆಖ್ಯಾಹ್ವೇ'' ಎಂದು ಅಮರವಿದೆ. ಹಲತಿ ಆಹಲತಿ ಚ ಉದರಮಿತಿ, ಹಲಂ ಚ ತತ್ ಆಹಲಂ ಚ ಹಾಲಾಹಲಮ್ । ''ಹಾಲಾಹಲಂ ಹಾಲಹಲಂ ವದಂತ್ಯಪಿ ಹಲಾಹಲಂ'' ಎಂದು ದ್ವಿರೂಪಕೋಶ. ''ಪುಂಸಿ ಕ್ಲೀಬೇ ಚ ಕಾಕೋಲಕಾಲಕೂಟಹಲಾ-ಹಲಾಃ'' ಇತ್ಯಮರಃ । ಕಾಲಮಪಿ ಕೂಟಯತಿ ಇತಿ ಕಾಲಕೂಟಃ. ಕೂಟ ಪರಿದಾಹೇ ಎಂಬ ಚುರಾದಿಯಾದ ಧಾತುವಿಗೆ ಕರ್ಮಣ್ಯಣ್ ಎಂಬ ಸೂತ್ರದಿಂದ ಅಣ್ ಪ್ರತ್ಯಯವು ಬಂದು ಕೂಟಃ ಎಂದಾಗಿದೆ. ನೇಗಿಲಿನಿಂದ ಹೊಟ್ಟೆಯನ್ನು ಕದಡುವದರಿಂದ ಹಲಾಹಲ ಎನ್ನುತ್ತಾರೆ.

**ತದುಗ್ರವೇಗಂ ದಿಶಿ ದಿಶ್ಯುಪರ್ಯಧೋ**
**ವಿಸರ್ಪದುತ್ಸರ್ಪದಸಹ್ಯವೀರ್ಯಮ್ ।**
**ಭೀತಾಃ ಪ್ರಜಾ ದುದ್ರುವುರಂಗ ಸೇಶ್ವರಾ**
**ಅರಕ್ಷ್ಯಮಾಣಾಃ ಶರಣಂ ಸದಾಶಿವಮ್ ॥೧೯॥**

**ಅಂಗ** ಪ್ರಿಯನೇ **ಅಸಹ್ಯವೀರ್ಯಂ** ಸಹಿಸಲಾಗದ ಮಾರಕಸಾಮರ್ಥ್ಯವುಳ್ಳ **ಉಗ್ರವೇಗಂ** ಅತಿಯಾದ ವೇಗವುಳ್ಳ ಆದ್ದರಿಂದಲೇ **ದಿಶಿ ದಿಶಿ** ಪ್ರತಿಯೊಂದು ದಿಕ್ಕಿನಲ್ಲಿಯೂ **ಉಪರಿ** ಮೇಲೆ **ಅಧಃ** ಕೆಳಗೂ **ವಿಸರ್ಪತ್** ಹರಡುತ್ತಿದ್ದ **ಉತ್ಸರ್ಪತ್** ಮೇಲೆ ಬರುತ್ತಿರುವ **ತತ್** ಆ ವಿಷವನ್ನು **ವಿಲೋಕ್ಯ** ನೋಡಿ **ಅರಕ್ಷಮಾಣಾಃ** ಸದಾಗತಿ-ಸದಾಶಿವರಿಗೆ (ವಾಯು-ರುದ್ರ) ಕೀರ್ತಿಯನ್ನು ನೀಡುವ ಉದ್ದೇಶದಿಂದ ಉದಾಸೀನನಾದ ಶ್ರೀಹರಿಯಿಂದ ರಕ್ಷಣೆ ಪಡೆಯದ **ಪ್ರಜಾಃ** ಪ್ರಜೆಗಳು **ಭೀತಾಃ** ಹೆದರಿದವರಾಗಿ **ಸೇಶ್ವರಾಃ** ತಮ್ಮ ಯಜಮಾನರಿಂದ ಸಹಿತರಾಗಿ ಇಂದ್ರಸಹಿತರಾಗಿ **ಸದಾಶಿವಂ** ರುದ್ರದೇವರನ್ನು **ಶರಣಂ** ಮೊರೆ ಹೋಗಲು **ದುದ್ರುವುಃ** ಕೈಲಾಸಕ್ಕೆ ಓಡಿದರು. ಅಥವಾ ಶರಣು ಹೋದರು ಎಂದರ್ಥ. ॥೧೯॥

ಅಮೃತಮಥನಕಾಲದಲ್ಲಿ ಶ್ರೀಹರಿಯು ಇದ್ದನು. ಭಗವಂತನಿರುವಾಗ ಪ್ರಜರು ರುದ್ರನನ್ನು ಏಕೆ ಮೊರೆ ಹೋದರು ಎಂದರೆ, ಆಚಾರ್ಯರು ಪ್ರಮಾಣದಿಂದಲೇ ತಾತ್ಪರ್ಯವನ್ನು ಹೇಳುವರು.

**...ತಾತ್ಪರ್ಯ...**

**ರುದ್ರಸ್ಯ ಯಶಸೇಽರ್ಥಾಯ ಸ್ವಯಂ ವಿಷ್ಣುರ್ವಿಷಂ ವಿಭುಃ ।**
**ನ ಸಂಜಹ್ರೇ ಸಮರ್ಥೋಽಪಿ ವಾಯುಂ ಚೋಚೇ ಪ್ರಶಾಂತಯೇ ॥ಇತಿ ಚ॥**

ಸರ್ವತ್ರ ವ್ಯಾಪ್ತನಾದ ಶ್ರೀಹರಿಯು ತಾನು ಸರ್ವಸಮರ್ಥನಾದರೂ ರುದ್ರದೇವರಿಗೆ ಕೀರ್ತಿರೂಪವಾದ ಪ್ರಯೋಜನಕ್ಕಾಗಿ ತಾನು ವಿಷಪೀಡೆಯನ್ನು ಪರಿಹರಿಸಲಿಲ್ಲ. ಮತ್ತು ವಿಷಪಾನದಿಂದ ರುದ್ರದೇವರಿಗೆ ಸಂಪ್ರಾಪ್ತವಾಗುವ ಸಂಕಟವನ್ನು ಪರಿಹರಿಸು ಎಂದು ವಾಯುದೇವರಿಗೆ ಹೇಳಿದನು ಎಂದು ಭಾವ. ರುದ್ರನು ಮಹಾಸಮರ್ಥನೆಂದು ಕೀರ್ತಿಯು ಬರುವದಕ್ಕಾಗಿಯೇ ಶ್ರೀವಿಷ್ಣುವು ಆಗ ಹಾಲಾಹಲವಿಷದ ನಾಶವನ್ನು, ಪ್ರಜರ ರಕ್ಷಣೆಯನ್ನು ಮಾಡಲಿಲ್ಲ. ಹೊರತು ಸಾಮರ್ಥ್ಯವಿಲ್ಲದ್ದರಿಂದಲ್ಲ.

ಶ್ರೀಹರಿಯು ರುದ್ರಾದಿಗಳಿಗಿಂತ ಅತಿಸಮರ್ಥನೆಂಬುದು ''ಅಚಿಂತ್ಯಶಕ್ತಿಃ ಪುರುಷಃ ಪುರಾಣಃ'' ಮುಂತಾದ ಶ್ರುತಿಗಳಿಂದ ಸಿದ್ಧವಾಗಿದೆ. ವಾಯುದೇವರೇ ಪ್ರಧಾನವಾಗಿ ವಿಷಪಾನ ಮಾಡಿದ್ದು. ಆ ವಾಯುದೇವರು ವಿಷವನ್ನು ಮರ್ದನ ಮಾಡಿ, ವಿಷದ ಸಾಮರ್ಥ್ಯ ಕಡಿಮೆ ಮಾಡಿ ಅಲ್ಪವಿಷವನ್ನು ರುದ್ರದೇವರಿಗೆ ನೀಡಿದರು. ಅದನ್ನು ರುದ್ರದೇವರು ಪಾನ ಮಾಡಿದರು. ಅದನ್ನೂ ಸಹಿಸಿಕೊಳ್ಳಲು ರುದ್ರದೇವರಿಗೆ ಆಗಲಿಲ್ಲ. ಈ ಕಥೆಯು ''ವಾಯುಂ ಚೋಚೇ ಪ್ರಶಾಂತಯೇ'' ಎಂಬುದರಿಂದ ಸೂಚಿತವಾಗುತ್ತದೆ. ಋಗ್ವೇದದ ಕೇಶೀಸೂಕ್ತ ಈ ಕಥೆಯನ್ನು ಅತ್ಯಂತ ಸ್ಪಷ್ಟವಾಗಿ ಹೇಳುತ್ತದೆ. ।।೧೯।।

**ವಿಲೋಕ್ಯ ತಂ ದೇವವರಂ ತ್ರಿಲೋಕ್ಯಾ**
**ಭವಾಯ ದೇವ್ಯಾಽಭಿಯುತಂ ಮುನೀನಾಮ್ ।**
**ಆಸೀನಮದ್ರಾವಪವರ್ಗಹೇತೋ-**
**ಸ್ತಪೋ ಜುಷಾಣಂ ಸ್ತುತಿಭಿಃ ಪ್ರಣೇಮುಃ ।।೨೦।।**

**ಅದ್ರೌ** ಕೈಲಾಸಪರ್ವತದಲ್ಲಿ **ಮುನೀನಾಂ** (ಮಧ್ಯೇ) ಸನತ್ಕುಮಾರಾದಿಯೋಗಿಗಳ ಮಧ್ಯದಲ್ಲಿ **ಆಸೀನಂ** ಉಪದೇಶಕನಾಗಿ ಕುಳಿತಿರುವ **ತ್ರೈಲೋಕ್ಯಾಃ ಭವಾಯ** ಮೂರುಲೋಕದ ಮಂಗಲಕ್ಕಾಗಿ **ದೇವ್ಯಾಃ** ಪಾರ್ವತಿಯೊಡನೆ **ಅಭಿಯುತಂ** ಕೂಡಿರುವ **ಅಪವರ್ಗಹೇತೋಃ** ತನ್ನ ಮೋಕ್ಷಕ್ಕಾಗಿ **ಮುನೀನಾಂ ತಪಃ** ಮುನಿಗಳಿಗೆ ಯೋಗ್ಯವಾದ ಅವರಿಗೆ ವಿಹಿತವಾದ ಹರಿಪ್ರೀತ್ಯರ್ಥವಾದ ತಪಸ್ಸನ್ನು **ಜುಷಾಣಂ** ಮಾಡುತ್ತಿರುವ **ದೇವವರಂ** ಇಂದ್ರಾದಿದೇವತೆಗಳಿಗಿಂತ ಶ್ರೇಷ್ಠರಾದ **ತಂ** ಆ ರುದ್ರದೇವರನ್ನು **ವಿಲೋಕ್ಯ** ಅಂತರ್ಯಾಮಿಯಾದ, ರುದ್ರನಾಮಕನಾದ ಹರಿಯಿಂದ ಸಹಿತರನ್ನಾಗಿ ಕಂಡು **ಸ್ತುತಿಭಿಃ** ಅಂತರ್ಯಾಮಿಗೂ ಅಧಿಷ್ಠಾನಕ್ಕೂ ಯೋಗ್ಯವಾದ ಸ್ತೋತ್ರಗಳಿಂದ ಸ್ತುತಿಸಿ **ಪ್ರಣೇಮುಃ** ಭಕ್ತಿಯಿಂದ ನಮಸ್ಕರಿಸಿದರು. ।।೨೦।।

ಅವತರಣಿಕಾ :-ನಿತ್ಯಸುಖರೂಪವಾಗಿದೆ ಮೋಕ್ಷ. ಇಂಥ ಮೋಕ್ಷಕ್ಕೆ ಅಯೋಗ್ಯರಾದ ನಿತ್ಯಸಂಸಾರಿಗಳಿಗೂ, ತಮೋಯೋಗ್ಯರಿಗೂ ಹರಿಹರರ ಭೇದದ ವಿಷಯದಲ್ಲಿ ಸಂದೇಹ ಮತ್ತು ವಿಪರೀತಜ್ಞಾನವನ್ನು ಕ್ರಮವಾಗಿ ಹುಟ್ಟಿಸಲು ಪ್ರಜೆಗಳು

ಪಾರ್ವತಿಪತಿಯನ್ನೂ ತದಂತರ್ಯಾಮಿಯಾದ, ಶಿವನಾಮಕನಾದ ನಾರಾಯಣನನ್ನೂ ಸೇರಿಸಿ ಸ್ತೋತ್ರ ಮಾಡುತ್ತಾರೆ. ಇಲ್ಲಿ ಸ್ತೋತ್ರದಲ್ಲಿಯೇ ಕಂಡು ಬರುವ ವಿಶೇಷಣಗಳಿಂದ ಮುಂದೆ ಮಾಡುವ ಅರ್ಥವೇ ಸರಿಯೆಂದು ತಿಳಿದುಬರುವದು-

**ಪ್ರಜಾ ಊಚುಃ**

**ದೇವದೇವ ಮಹಾದೇವ ಭೂತಾತ್ಮನ್ ಭೂತಭಾವನ ।**
**ತ್ರಾಹಿ ನಃ ಶರಣಾಪನ್ನಾನ್ ತ್ರೈಲೋಕ್ಯದಹನಾದ್ ವಿಷಾತ್ ॥೨೧॥**

**ಹೇ ದೇವದೇವ** ಇಂದ್ರಾದಿದೇವತೆಗಳಿಗೆ ದೇವನೇ **ಭೂತಾತ್ಮನ್** ಪ್ರಮಥನಾಥನೇ **ಭೂತಭಾವನ** ನಿನಗಿಂತ ಚಿಕ್ಕ ಪ್ರಾಣಿಗಳನ್ನು ಹುಟ್ಟಿಸುವವನೇ **ಹೇ ಮಹಾದೇವ** ಪಾರ್ವತೀಪತಿಯೇ **ಶರಣಾಪನ್ನಾನ್** ನಿನ್ನನ್ನು ಮೊರೆ ಹೊಕ್ಕಿರುವ **ನಃ** ಕರುಣಾಪಾತ್ರರಾದ ನಮ್ಮನ್ನು **ತ್ರೈಲೋಕ್ಯದಹನಾತ್** ಮೂರು ಲೋಕವನ್ನು ಸುಡುತ್ತಿರುವ **ವಿಷಾತ್** ವಿಷದಿಂದ **ತ್ರಾಹಿ** ರಕ್ಷಿಸು. ಇದು ಅಧಿಷ್ಠಾನರಾದ ರುದ್ರದೇವರ ಸ್ತೋತ್ರ. ॥೨೧॥

ಅವತರಣಿಕಾ :- ಅಂತರ್ಯಾಮಿಯ ದೃಷ್ಟಿಯಿಂದ ಸ್ತುತಿಸುವರು-

**ತ್ವಮೇಕಃ ಸರ್ವಜಗತ ಈಶ್ವರೋ ಬಂಧಮೋಕ್ಷಯೋಃ ।**
**ತಂ ತ್ವಾಮರ್ಚಂತಿ ಕುಶಲಾಃ ಪ್ರಪನ್ನಾರ್ತಿಹರಂ ಗುರುಮ್ ॥೨೨॥**

ಹೇ ಶಿವಾಂತರ್ಯಾಮಿ ನಾರಾಯಣನೇ **ತ್ವಂ ಏಕಃ** ನೀನೊಬ್ಬನೇ **ಸರ್ವಜಗತಃ** ಬ್ರಹ್ಮ-ರುದ್ರಾದಿ ಎಲ್ಲ ಜಗತ್ತಿಗೂ **ಬಂಧಮೋಕ್ಷಯೋಃ** ಬಂಧ ಮತ್ತು ಮೋಕ್ಷಗಳನ್ನು (ಸೃಷ್ಟ್ಯಾದ್ಯಷ್ಟಕವನ್ನು) ಕೊಡಲು **ಈಶ್ವರಃ** ಸಮರ್ಥನು. ಆದ್ದರಿಂದಲೇ **ಕುಶಲಾಃ** ತಮ್ಮ ಅಭೀಷ್ಟವನ್ನು ಸಂಪಾದಿಸಿಕೊಳ್ಳುವುದರಲ್ಲಿ ಜಾಣರಾದ ಅಧಿಕಾರಿಗಳು **ಪ್ರಪನ್ನಾರ್ತಿಹರಂ** ಶರಣು ಹೊಕ್ಕವರ ದುಃಖವನ್ನು ಪರಿಹರಿಸುವ **ಗುರುಂ** ವೇದಾದಿಗಳನ್ನು ಉಪದೇಶಿಸಿ ಹಿತಕಾರಿಯಾದ **ತಂ** ಮೇಲೆ ಹೇಳಿದ ಗುಣಗಳಿಂದ ಪ್ರಸಿದ್ಧನಾದ **ತ್ವಾಂ** ನಿನ್ನನ್ನು **ಭಜಂತಿ** ಸೇವಿಸುವರು. ಇದು ಅಂತರ್ಯಾಮಿಯಾದ ನಾರಾಯಣನ ಸ್ತೋತ್ರವೇ ಆಗಿದೆ. ಏಕೆಂದರೆ ತನ್ನಿಂದ ಭಿನ್ನರಾದ ಸರ್ವಜಗತ್ತಿನ ಬಂಧ-ಮೋಕ್ಷಗಳನ್ನು ಕೊಡಲು ನಾರಾಯಣನೇ ಸಮರ್ಥನು. ರುದ್ರದೇವರಲ್ಲ.

ಹಿಂದೆ ೨೦ನೇ ಪದ್ಯದಲ್ಲಿ ರುದ್ರದೇವರು ತಮ್ಮ ಮೋಕ್ಷಕ್ಕಾಗಿ ಶ್ರೀಹರಿಯನ್ನು ಕುರಿತು ತಪಸ್ಸು ಮಾಡುತ್ತಿದ್ದರೆಂದು ವರ್ಣಿತವಾಗಿದೆ. ಅಂದ ಮೇಲೆ ಬ್ರಹ್ಮಾದಿ ಎಲ್ಲ ಜಗತ್ತಿನ ಬಂಧ-ಮೋಕ್ಷಗಳಿಗೆ ರುದ್ರದೇವರು ಕಾರಣರಲ್ಲ. ಅದೂ ಅಲ್ಲದೇ ಮುಂದೆ ಇದೇ ಸೊತ್ರದಲ್ಲಿ ೨೯ನೇ ಶ್ಲೋಕದಲ್ಲಿ ''ಯತ್ತಚ್ಛಿವಾಖ್ಯಂ ಪರಮಾತ್ಮತತ್ವಂ ದೇವ ಸ್ವಯಂಜ್ಯೋತಿರವಸ್ಥಿತಿಸ್ತೇ'' ಎಂದು ರುದ್ರದೇವರಿಗೆ ಆಶ್ರಯನು ನಾರಾಯಣನೆಂದು

ಹೇಳಿದೆ. ಮತ್ತು ೩೧ ನೇ ಪದ್ಯದಲ್ಲಿ ''ಜ್ಯೋತಿಃ ಪರಂ'' ಎಂದು ರುದ್ರಹೃದಿಸ್ಥನಾದ ಪರಮಾತ್ಮನ ವರ್ಣನೆ ಇದೆ. ತೇ ಇತ್ಯಾದಿಪದಗಳು ''ಅಂತರ್ಯಾಮಿಣಮೀಶೇಷ-ಮಪೇಕ್ಷ್ಯಾಽಹಂ ತ್ವಮಿತ್ಯಪಿ । ಸರ್ವೇ ಶಬ್ದಾಃ ಪ್ರಯುಜ್ಯಂತೇ'' ಎಂಬ ಪ್ರಮಾಣದಂತೆ ಅಂತರ್ಯಾಮಿಯನ್ನು ಕುರಿತು ಪ್ರಯುಕ್ತವಾಗಿವೆ. ''ಸೃಷ್ಟಿಃ ಸ್ಥಿತಿಃ ಸಂಹೃತಿಶ್ಚ ನಿಯಮೋಽಜ್ಞಾನಭೋಧನೇ । ಬಂಧಮೋಕ್ಷೌ ಚ ಪುರುಷಾದ್ಯಸ್ಮಾತ್ಸ ಹರಿರೇಕರಾಟ್'' ಎಂಬ ಪ್ರಮಾಣಗಳು ಶ್ರೀಹರಿಯೊಬ್ಬನೇ ಬಂಧಮೋಕ್ಷಾದಿದಾತನೆಂದು ತಿಳಿಸುವವು. ಆದ್ದರಿಂದ ನಾವು ಮಾಡಿದ ಅರ್ಥವೇ ಯುಕ್ತವೆಂದು ತಿಳಿಯಬೇಕು. ।।೨೨।।

ಅವತರಣಿಕಾ ః- ''ಸದೇಹಮಾನಿಹರಯೇ ಪ್ರಣಮೇತ್ ಕೇವಲಾಯ ವಾ'' ಎಂದಿರುವುದರಿಂದ ರುದ್ರಾಂತರ್ಯಾಮಿಯನ್ನೂ ಸ್ತುತಿಸುವರು-

**ಗುಣಮಯ್ಯಾ ಸ್ವಶಕ್ತ್ಯಾಽಸ್ಯ ಸರ್ಗಸ್ಥಿತ್ಯಪ್ಯಯಾನ್ ವಿಭೋ ।**
**ಧತ್ಸೇ ಯದಾ ಸ್ವದೃಗ್ ಭೂಮನ್ ಬ್ರಹ್ಮವಿಷ್ಣುಶಿವಾಭಿಧಾಮ್ ।।೨೩।।**

**ಹೇ ಭೂಮನ್** ಪೂರ್ಣನೇ **ವಿಭೋ** ಸಮರ್ಥನೇ **ಸ್ವದೃಕ್** ಸ್ವಪ್ರಕಾಶನೇ ತನ್ನನ್ನು ಸಂಪೂರ್ಣವಾಗಿ ತಿಳಿಯುವುದರಿಂದಲೂ **ಸ್ವದೃಕ್** (ಸ್ವಂ ಸಾಕಲ್ಯೇನ ಈಕ್ಷತೇ ಇತಿ ಸ್ವದೃಕ್) **ಯದಾ** ಯಾವಾಗ **ಅಸ್ಯ** ಈ ಜಗತ್ತಿನ **ಸರ್ಗಸ್ಥಿತ್ಯಪ್ಯಯಾನ್** ಸೃಷ್ಟಿ-ಸ್ಥಿತಿ-ಸಂಹಾರಗಳನ್ನು **ಗುಣಮಯ್ಯಾ** ತ್ರಿಗುಣಾತ್ಮಕವಾದ **ಸ್ವಶಕ್ತ್ಯಾ** ನಿನ್ನ ಅಧೀನವಾದ ಪ್ರಕೃತಿಯಿಂದ ಮತ್ತು ಜ್ಞಾನಾದಿಗುಣಾತ್ಮಕವಾದ ಸ್ವರೂಪಶಕ್ತಿಯಿಂದ **ಧತ್ಸೇ (ವಿಧತ್ಸೇ)** ಮಾಡುವಿಯೋ **ತದಾ** ಆಗ **ಬ್ರಹ್ಮವಿಷ್ಣುಶಿವಾಭಿಧಾಂ ಧತ್ಸೇ** ಬ್ರಹ್ಮಾ-ವಿಷ್ಣು-ಶಿವ ಎಂಬ ಹೆಸರುಗಳನ್ನು ಕ್ರಮವಾಗಿ ಧರಿಸುವಿ.

ಲಿಂಗೇರೀ ః- ಚತುರ್ಮುಖನಲ್ಲಿ ಬ್ರಹ್ಮರೂಪದಿಂದ ಇದ್ದು ಸೃಷ್ಟಿಯನ್ನು ಮಾಡುವಿ. ವಿಷ್ಣು ಎಂಬ ಸಾಕ್ಷಾದ್ರೂಪದಿಂದ ಸ್ಥಿತಿಯನ್ನು ಸಂರಕ್ಷಣೆಯನ್ನು ಮಾಡುವಿ. ಶಿವನಾಮಕವಾದ ರುದ್ರಾಂತರ್ಗತರೂಪದಿಂದ ಸಂಹಾರವನ್ನೂ ಮಾಡುವಿ ಎಂದರ್ಥ.

''ಬ್ರಹ್ಮಣಿ ಬ್ರಹ್ಮರೂಪೋಽಸೌ ಶಿವರೂಪೀ ಶಿವೇ ಸ್ಥಿತಃ ।
ಅಹಂ ಬ್ರಹ್ಮಾ ಚ ಶರ್ವಶ್ಚ ಜಗತಃ ಕಾರಣಂ ಪರಮ್ ।
ಆತ್ಮೇಶ್ವರ ಉಪದ್ರಷ್ಟಾ ಸ್ವಯಂದೃಗವಿಶೇಷಣಃ ।
ಆತ್ಮಮಾಯಾಂ ಸಮಾವಿಶ್ಯ ಸೋಽಹಂ ಗುಣಮಯೀಂ ದ್ವಿಜ ।
ಸೃಜನ್ ರಕ್ಷನ್ ಹರನ್ ವಿಶ್ವಂ ದಧ್ರೇ ಸಂಜ್ಞಾಃ ಕ್ರಿಯೋಚಿತಾಃ ।।

ಮುಂತಾಗಿ ಪ್ರಮಾಣಗಳಿವೆ. ಸತ್ವಾದಿಗುಣನಿಯಾಮಕವಾದ ಶಕ್ತಿಯಿಂದ ಜಗತ್ತಿನ ಜನ್ಮ-ಸ್ಥಿತಿ-ಸಂಹಾರಕಾರಣತ್ವವು ವಿಷ್ಣುವಿಗೆ ಮುಖ್ಯವಾಗಿದೆ. ''ನಿಮಿತ್ತಮಾತ್ರಮೀಶಸ್ಯ

ವಿಶ್ವಸರ್ಗನಿರೋಧಯೋಃ । ಬ್ರಹ್ಮಾ ಚ ಶರ್ವಶ್ಚ ಕಾಲಾಖ್ಯಾರೂಪಿಣಸ್ತವ । ಎಂದು ದಶಮಸ್ಕಂಧದಲ್ಲಿ ಭಗವಂತನು ಪ್ರಧಾನವಾಗಿ ಮಾಡುವ ಸೃಷ್ಟಿ-ಸಂಹಾರಗಳಲ್ಲಿ ಚತುರ್ಮುಖ ಮತ್ತು ರುದ್ರರು ನಿಮಿತ್ತಮಾತ್ರ ಆಗಿದ್ದಾರೆಂದು ಸ್ಪಷ್ಟವಾಗಿ ಹೇಳಲಾಗಿದೆ. ''ಓಂ ಭೂಮಾಸಂಪ್ರಸಾದಾದಧ್ಯುಪದೇಶಾತ್ ಓಂ'' ಎಂಬ ಸೂತ್ರ ಮತ್ತು ಸೂತ್ರಭಾಷ್ಯಗಳಲ್ಲಿ ಭೂಮಶಬ್ದ ವಿಷ್ಣುಮಾತ್ರನಿಷ್ಠವೆಂದು ತಿಳಿದು ಬರುವದು. ಆದ್ದರಿಂದ ಭೂಮನ್ ಮುಂತಾಗಿ ಸ್ತುತಿಸಲ್ಪಡುವವನು ಶ್ರೀಹರಿಯೇ ಹೊರತು ಪಾರ್ವತೀಪತಿಯಲ್ಲ ಎಂದು ಸಿದ್ಧ. ।।೨೩।।

**ತ್ವಂ ಬ್ರಹ್ಮ ಪರಮಂ ಗುಹ್ಯಂ ಸದಸದ್ಭಾವಭಾವನಮ್ ।**
**ನಾನಾಶಕ್ತಿಭಿರಾಭಾಸಸ್ತ್ವಮಾತ್ಮಾ ಜಗದೀಶ್ವರಃ ।।೨೪।।**

**ಹೇ ಭೂಮನ್** ಪರಿಪೂರ್ಣನೇ **ತ್ವಂ** ನೀನು **ಸದಸದ್ಭಾವಭಾವನಂ** ೧) **ಸದ್ಭಾವಾಃ** ಒಳ್ಳೇ ಸ್ವಭಾವದ ದೇವತೆಗಳು **ಅಸದ್ಭಾವಾಃ** ಕೆಟ್ಟ ಸ್ವಭಾವದ ಅಸುರರು **ಸದಸದ್ಭಾವಾಃ** ಉಭಯ ಸ್ವಭಾವದ ಮಿಶ್ರಜೀವರು ತಿರ್ಯಗ್ ಜಂತುಗಳು ಇವುಗಳನ್ನು ಹುಟ್ಟಿಸುವ ಬೆಳೆಸುವ ವಶದಲ್ಲಿಟ್ಟುಕೊಳ್ಳುವ, **ಸತ್** ಪೃಥಿವಿ, ಜಲ, ತೇಜಸ್ಸು ಎಂಬ ಸತ್, **ಅಸತ್** ವಾಯು, ಆಕಾಶ ಎಂಬ ಅಸತ್‌ಗಳನ್ನು ಸೃಷ್ಟಿಸುವ **ಗುಹ್ಯಂ** ರಹಸ್ಯನಾದ **ಪರಮಂ ಬ್ರಹ್ಮ** ಪರಬ್ರಹ್ಮನು **ತ್ವಂ** ನೀನು **ನಾನಾಶಕ್ತಿಭಿಃ** ಸೃಷ್ಟ್ಯಾದಿಕಾರಣಗಳಾದ ಸ್ವರೂಪಶಕ್ತಿಗಳಿಂದ **ಆಭಾಸಃ** ಪ್ರಕಾಶಮಾನನಾದ **ಆತ್ಮಾ** ಆದಾನಾದಿಕರ್ತೃವು ಅಂತರ್ಯಾಮಿಯು **ಜಗದೀಶ್ವರಃ** ಜಗನ್ನಿಯಾಮಕನು ಆಗಿರುವಿ. ।।೨೪।।

ಲಿಂಗೇರೀ ಃ- ''ನಾರಾಯಣಂ ಪರಂ ಬ್ರಹ್ಮ'' ''ಪರಮಂ ಯೋ ಮಹದ್ಬ್ರಹ್ಮ'' ಎಂಬ ಪ್ರಮಾಣಗಳಿವೆ. ''ಆತ್ಮನ ಆಕಾಶಃ ಸಂಭೂತಃ'' ಮುಂತಾದ ಶ್ರುತಿಯು ಪಂಚಮಹಾಭೂತಕಾರಣತ್ವವನ್ನು ತಿಳಿಸುವದು. ''ಯದನ್ಯದ್ವಾಯೋಶ್ಚಾಂತರಿಕ್ಷಾಚ್ಚ ಏತತ್ ಸತ್'' ''ವಾಯುರಂತರಿಕ್ಷಂ ಚ ಅಸತ್'' ''ಮೂರ್ತಂ ಸದಿತಿ ಸಂಪ್ರೋಕ್ತಮಮೂರ್ತಮಸದುಚ್ಯತೇ'' ಎಂದೂ ಪ್ರಮಾಣಗಳಿವೆ. ।।೨೪।।

**ತ್ವಂ ಶಬ್ದಯೋನಿರ್ಜಗದಾದಿರಾತ್ಮಾ**
**ಪ್ರಾಣೇಂದ್ರಿಯದ್ರವ್ಯಗುಣಸ್ವಭಾವಃ ।**
**ಕಾಲಃ ಕ್ರತುಃ ಸತ್ಯಮೃತಂ ತಂ ಚ ಧರ್ಮಃ**
**ತ್ವಯ್ಯಕ್ಷರಂ ಯತ್ ತ್ರಿವೃದಾಮನಂತಿ ।।೨೫।।**

**ತ್ವಂ** ನೀನು **ಶಬ್ದಯೋನಿಃ** ಸದಾಗಮಗಳಿಂದ ತಿಳಿಯಲ್ಪಡುವವನು (ಶಬ್ದಃ ಯೋನಿಃ ಜನ್ಮ ಕಾರಣಂ ಯಸ್ಯ ಸಃ ಶಬ್ದಯೋನಿಃ) ಋಗಾದಿಶಾಸ್ತ್ರಪ್ರತಿಪಾದ್ಯನು. **ಜಗದಾದಿಃ**

ಜಗತ್ತಿನ ಮೊದಲಿದ್ದವನು **ಆತ್ಮಾ** ಅಂತರ್ಯಾಮಿಯು **ಪ್ರಾಣೇಂದ್ರಿಯದ್ರವ್ಯಗುಣಸ್ವಭಾವಃ** ಪ್ರಾಣಗಳು ಇಂದ್ರಿಯಗಳು **ದ್ರವ್ಯ** ಪಂಚಭೂತಗಳು **ಗುಣ** ಶಬ್ದಾದಿಗಳು ಇವುಗಳಿಗೆ ಮತ್ತು ಇವುಗಳ ಅಭಿಮಾನಿಗಳಿಗೆ ಅವರ ಸ್ವಭಾವಕ್ಕೆ ಪ್ರವರ್ತಕನು **ಜಗದಾದಿಃ** ಮಹತತ್ತ್ವವು **ಆತ್ಮಾ** ಅಹಂಕಾರವು **ತ್ವಂ** ನೀನೇ ಆಗಿರುವಿ ಅರ್ಥಾತ್ ಅವುಗಳಿಗೆ ಸತ್ತಾಪ್ರದನು ಮತ್ತು ಅವುಗಳ ಸ್ವಾಭಾವ ಪ್ರವರ್ತಕನು ನೀನೇ ಆಗಿರುವಿ. **ಕಾಲಃ** ಸಂಹಾರಕನು **ಕ್ರತುಃ** ಜ್ಞಾನರೂಪವು **ಸತ್ಯಂ** ಸತ್ಯಶಬ್ದವಾಚ್ಯನು ಚಿದಾನಂದರೂಪವು **ಋತಂ** ಯಾವಾಗಲೂ ಒಂದೇ ರೀತಿ ಇರುವವನು **ಧರ್ಮಃ** ಧಾರಕನು **ಯತ್ ತ್ರಿವೃತ್** ಅಕಾರ-ಉಕಾರ-ಮಕಾರಗಳೆಂಬ ಮೂರು ವರ್ಣಗಳಿಂದ ಕೂಡಿದ **ಅಕ್ಷರಂ** ಓಂಕಾರವನ್ನು **ತ್ವಯಿ ಆಮನಂತಿ** ನಿನ್ನಲ್ಲಿ ವಾಚಕವಾಗಿವೆ ಎಂದು ವೇದಾಂತಗಳು ಹೇಳುವವು.

ಸತ್ಯ ಃ- ಭಗವಂತ ಜ್ಞಾನಸ್ವರೂಪನಾಗಿದ್ದಾನೆ ಎಂಬ ವಿಷಯದಲ್ಲಿ ''ಸ ಕ್ರತುಃ ಜ್ಞಾನರೂಪತ್ವಾತ್'' ಎಂಬ ವಚನವು ಪ್ರಮಾಣವಾಗಿದೆ. ಶಶ್ವದೇಕಪ್ರಕಾರನಾಗಿದ್ದಾನೆ ಎಂಬ ವಿಷಯದಲ್ಲಿ ''ಋಗಾತಾವಿತಿ ಧಾತೋಸ್ತು ಪೂರ್ವಾವಗತವತ್ಸದಾ । ಸ್ಥಿತೇಃ ಬ್ರಹ್ಮರ್ತಮಿತ್ಯುಕ್ತಮನ್ಯತಂ ಪರಿಣಾಮತಃ ।। ಎಂಬ ವಚನವು ಪ್ರಮಾಣವಾಗಿದೆ. ೩) ''ಓಮಿತ್ಯೇಕಾಕ್ಷರಂ ಬ್ರಹ್ಮ ಓಮಿತ್ಯೇತದಕ್ಷರಮುದ್ಗೀಥಮುಪಾಸೀತ'' ''ಆತ್ಮಾ ವಾ ಇದಮೇಕ ಏವಾಗ್ರೇ ಆಸೀತ್'' ಇತ್ಯಾದಿ ವೇದಾಂತಗಳು ಭಗವಂತ ಪ್ರಣವಪ್ರತಿಪಾದ್ಯ ಎಂಬುದನ್ನು ತಿಳಿಸುತ್ತವೆ. ।।೨೫।।

ಅವತರಣಿಕಾ ಃ- ನಿಮ್ಮ ಹಿತವನ್ನು ಮಾಡುವೆನೆಂದು ಭಗವಂತನು ಸಂಕಲ್ಪಿಸಿದ್ದರಿಂದ ಅವನ ಅಸಾಧಾರಣಲಕ್ಷಣಗಳಿಂದ ರುದ್ರಾಂತರ್ಯಾಮಿಯನ್ನೇ ಲಕ್ಷ್ಯವನ್ನಾಗಿಟ್ಟುಕೊಂಡು ಸ್ತುತಿಸುವರು-

**ಅಗ್ನಿರ್ಮುಖಂ ತೇಽಖಿಲದೇವತಾತ್ಮಾ**
**ಕ್ಷಿತಿಂ ವಿದುರ್ಲೋಕಭವಾಂಘ್ರಿಪಂಕಜಮ್ ।**
**ಕಾಲೋ ಗತಿಸ್ತೇಽಖಿಲದೇವತಾತ್ಮನೋ**
**ದಿಶಶ್ಚ ಕರ್ಣೌ ರಸನಂ ಜಲೇಶಃ** **।।೨೬।।**

**ಹೇ ಲೋಕಭವ** ಲೋಕಜನಕನಾದ ಶ್ರೀಹರಿಯೇ **ಅಖಿಲದೇವತಾತ್ಮಾ** ಎಲ್ಲ ದೇವತೆಗಳಿಗೆ ಆಹುತಿಗಳನ್ನು ತಲುಪಿಸುವ (ಅವರ ದೇಹದಂತಿರುವ) **ಅಗ್ನಿಃ** ಅಗ್ನಿಯು ಜಡ ಮತ್ತು ಅಭಿಮಾನಿದೇವತೆಯು **ತೇ ಮುಖಂ** ನಿನ್ನ ಮುಖದಿಂದ ಹುಟ್ಟಿದವರು ಮುಖವನ್ನು ಆಶ್ರಯಿಸಿರುವರು. **ತೇ** ನಿನ್ನ **ಅಂಘ್ರಿಪಂಕಜಂ** ಕಮಲದಂತಿರುವ ಪಾದಗಳು (ಪಾದಗಳಿಂದ ಹುಟ್ಟಿ ಪಾದವನ್ನಾಶ್ರಯಿಸಿದ್ದು) **ಕ್ಷಿತಿಂ** ಭೂಮಿಯೆಂದೂ **ಅಖಿಲದೇವತಾತ್ಮನಃ ಚ** ಎಲ್ಲ ದೇವತೆಗಳ ಅಂತರ್ಯಾಮಿಯಾದ **ತೇ** ನಿನ್ನ **ಗತಿಃ** ಗಮನವೇ (ಗಮನದಿಂದ ಹುಟ್ಟಿ

ಗಮನವನ್ನಾಶ್ರಯಿಸಿದ್ದು) **ಕಾಲಃ** ಕಾಲವೆಂದೂ **ಕರ್ಣೌ** ಕಿವಿಗಳು (ಕಿವಿಗಳಿಂದ ಜನಿಸಿ ಅವುಗಳನ್ನೇ ಆಶ್ರಯಿಸಿದ್ದು) **ದಿಶಃ ಚ** ದಿಕ್ಕುಗಳು ಎಂದು (ದಿಗ್ದೇವತೆಗಳೆಂದು) **ರಸನಂ** ನಾಲಿಗೆಯು (ನಾಲಿಗೆಯಿಂದ ಹುಟ್ಟಿ ನಾಲಿಗೆಯನ್ನು ಆಶ್ರಯಿಸಿದವನು) **ಜಲೇಶಃ** ವರುಣನೆಂದು **ವಿದುಃ** ವೇದಾಂತಗಳು ತಿಳಿಸುವವು.

''ಮುಖಾದಿಂದ್ರಶ್ಚಾಗ್ನಿಶ್ಚ ಪದ್ಭ್ಯಾಂ ಭೂಮಿರಜಾಯತ ದಿಶಃ ಶ್ರೋತ್ರಮ್'' ಮುಂತಾದ ಶ್ರುತಿಗಳು ಈ ವಿಷಯದಲ್ಲಿ ಪ್ರಮಾಣವಾಗಿವೆ. ||೨೬||

**ನಾಭಿರ್ನಭಸ್ತೇ ಶ್ವಸನಂ ನಭಸ್ವಾನ್**
**ಸೂರ್ಯಶ್ಚ ಚಕ್ಷೂಂಷಿ ಜಲಂ ಸ್ಮರೇತಃ ।**
**ಪರಾವರಾತ್ಮಾ ದ್ರುಹಿಣಸ್ತವಾತ್ಮಾ**
**ಸೋಮೋ ಮನೋ ದ್ಯೌರ್ಭಗವನ್ ಶಿರಸ್ತೇ ||೨೭||**

**ಹೇ ಭಗವನ್** ನಾರಾಯಣನೇ **ನಭಃ** ಆಕಾಶವು **ತೇ** ನಿನ್ನ **ನಾಭಿಃ** ಹೊಕ್ಕಳು (ಆಕಾಶಾಭಿಮಾನಿಯಾದ ಗಣಪತಿಯು ನಾಭಿಯಿಂದ ಹುಟ್ಟಿದವರು) **ನಭಸ್ವಾನ್** ವಾಯುವು **ತೇ ಶ್ವಸನಂ** ಶ್ವಾಸವೆಂಬ ಪ್ರಾಣದಿಂದ ಹುಟ್ಟಿದವರು. (ಜಡ-ಚೇತನ) **ಸೂರ್ಯಃ** ಸೂರ್ಯನು **ಚಕ್ಷೂಂಷಿ** ಕಣ್ಣುಗಳು (ಹಿಂದಿನಂತೆ ಅಲ್ಲಿ ಹುಟ್ಟಿ ಅಲ್ಲೇ ಆಶ್ರಯಿಸಿದವನು) **ಜಲಂ** ನೀರು (ವರುಣನು) **ರೇತಃ** ವೀರ್ಯದಿಂದ ಜನಿಸಿದವನು **ಪರಾವರಾತ್ಮಾ** ಉತ್ತಮಾಧಮಜೀವನಿಯಾಮಕರಾದ **ದ್ರುಹಿಣಃ** ಬ್ರಹ್ಮದೇವರು **ತವ ಆತ್ಮಾ** ನಿನ್ನ ಸತ್ತ್ವವೆಂದು ಕರೆಸುವ ಚಿತ್ತದಿಂದ ಜನಿಸಿದವರು **ಸೋಮಃ** ಚಂದ್ರನು **ಮನಃ** ನಿನ್ನ ಮನದಿಂದ ಜನಿಸಿ ಮನವನ್ನು ಆಶ್ರಯಿಸಿದ್ದಾನೆ **ದ್ಯೌಃ** ದ್ಯುಲೋಕವು (ಸ್ವರ್ಗವು) **ಶಿರಃ** ನಿನ್ನ ಶಿರಸ್ಸಿನಿಂದ ಜನಿಸಿ ಅದನ್ನೇ ಆಶ್ರಯಸಿದೆ **ತವ ಆತ್ಮಾ** ನಿನ್ನ ದೇಹವು **ಪರಾವರಾತ್ಮಾ** ಮುಕ್ತಾಮುಕ್ತಚೇತನರಿಗೆ ಆಶ್ರಯವು **ಆತ್ಮಾ** ಮಧ್ಯದೇಹವು **ಪರಾವರಾತ್ಮಾ** ಉತ್ತಮಾಧಮಜನರಿಗೆ ಆಶ್ರಯವಾಗಿದೆ.

ಲಿಂಗೇರೀ ಃ- ''ನಾಭ್ಯಾ ಆಸೀದಂತರಿಕ್ಷಮ್'' ''ಪ್ರಾಣಾದ್ವಾಯುರಜಾಯತ'' ''ಚಕ್ಷೋಃ ಸೂರ್ಯೋಽಜಾಯತ'' ''ಶಿರ್ಷ್ಣೋ ದ್ಯೌಃ ಸಮವರ್ತತ'' ಮುಂತಾಗಿ ಶ್ರುತಿ ಇದೆ. ''ಯಥಾ ಹಿ ಪೌರುಷಂ ಸೂಕ್ತಂ ನಿತ್ಯಂ ವಿಷ್ಣುಪರಾಯಣಮ್'' ಎಂದಿರುವುದರಿಂದ ವಿಷ್ಣುಮಾತ್ರಪ್ರತಿಪಾದಕವಾದ ಪುರುಷಸೂಕ್ತಸಮಾಖ್ಯಾದಿಂದ ಇಲ್ಲಿ ವಿಷ್ಣುವೇ ಸ್ತುತಿಸಲ್ಪಡುವನು ಎಂಬುದು ನಿರ್ವಿವಾದ. ||೨೭||

**ಕುಕ್ಷಿಃ ಸಮುದ್ರಾ ಗಿರಯೋಽಸ್ಥಿಸಂಘಾ**
**ರೋಮಾಣಿ ಸರ್ವೌಷಧಿವೀರುಧಸ್ತೇ ।**

**ಛಂದಾಸಿ ಸಾಕ್ಷಾತ್ ತವ ಸಪ್ತಧಾತವಃ**
**ತ್ರಯೀಮಯಾತ್ಮನ್ ಹೃದಯಂ ಸ ಧರ್ಮಃ** ॥೨೮॥

**ಹೇ ತ್ರಯೀಮಯಾತ್ಮನ್** ಋಗಾದಿ ಮೂರು ವೇದಗಳಿಂದ ಮುಖ್ಯ ಪ್ರತಿಪಾದ್ಯನೇ ಶಿವಾಂತರ್ಯಾಮಿಯೇ **ಸಮುದ್ರಾಃ** ಸಪ್ತ ಸಮುದ್ರಗಳು **ಕುಕ್ಷಿಃ ಚ** ಉದರವು **ಗಿರಯಃ** ಪರ್ವತಗಳು **ಅಸ್ಥಿಸಂಘಾಃ** ನಿನ್ನ ಎಲುಬಿನ ಸಮೂಹಗಳು **ಸರ್ವೌಷಧಿವೀರುಧಃ** ಬಲಕೊಟ್ಟು ನಾಶವಾಗುವ ಎಲ್ಲ ಸಸ್ಯಗಳು ಮತ್ತು ಬಳ್ಳಿಗಳು **ರೋಮಾಣಿ** ನಿನ್ನ ಕೂದಲುಗಳು **ಛಂದಾಂಸಿ** ಗಾಯತ್ರಿ ಮೊದಲಾದ ಛಂದಸ್ಸುಗಳು **ತವ ಸಪ್ತಧಾತವಃ** ಚರ್ಮ ಮುಂತಾದ ಏಳು ಧಾತುಗಳು **ಸಃ ಧರ್ಮಃ** ಆ ಧರ್ಮಾಭಿಮಾನಿಯಾದ ಮನುವು **ಸಾಕ್ಷಾತ್ ಹೃದಯಂ** ಹೃದಯವು ಎಂದು **ವಿದುಃ** ಶಾಸ್ತ್ರಗಳು ತಿಳಿಸುವವು. ॥೨೮॥

ಅವತರಣಿಕಾ :- ಈ ಶ್ಲೋಕವು ಅಧಿಷ್ಠಾನರಾದ ರುದ್ರದೇವರ ಸ್ತೋತ್ರ ಮಾಡುತ್ತದೆ-

**ಮುಖಾನಿ ಪಂಚೋಪನಿಷತ್ತವೇಶ ಯೈಸ್ತ್ರಿಂಶದಷ್ಟೋತ್ತರಮಂತ್ರವರ್ಗಃ ।**
**ಯತ್ತಚ್ಛಿವಾಖ್ಯಂ ಪರಮಾತ್ಮತತ್ತ್ವಂ ದೇವ ಸ್ವಯಂಜ್ಯೋತಿರವಸ್ಥಿತಿಸ್ತೇ** ॥೨೯॥

**ಹೇ ಈಶ** ರುದ್ರದೇವರೇ, **ಪಂಚ ಉಪನಿಷತ್** ಸದ್ಯೋ ಜಾತಂ ಪ್ರಪದ್ಯಾಮಿ, ವಾಮದೇವಾಯ ನಮೋ ಜ್ಯೇಷ್ಠಾಯ, ಅಘೋರೇಭ್ಯೋಽಥ ಘೋರೇಭ್ಯೋ ಘೋರಘೋರತರೇಭ್ಯಃ, ತತ್ಪುರುಷಾಯ ವಿದ್ಮಹೇ, ಈಶಾನಃ ಸರ್ವವಿದ್ಯಾನಾಂ ಎಂಬ ಐದು ಮಂತ್ರಗಳು **ತವ ಮುಖಾನಿ** ''ಧ್ಯೇಯಃ ಪಂಚಮುಖೋ ರುದ್ರಃ ಸ್ಫಟಿಕಾಮಲಮೂರ್ತಿಮಾನ್'' ಎಂದಿರುವದರಿಂದ ನಿನ್ನ ಐದು ಮುಖಗಳು ಅಂದರೆ ಮುಖಗಳಿಂದ ಉಚ್ಚರಿಸಲ್ಪಟ್ಟವುಗಳು. **ಯೈಃ** ಯಾವ ಈ ಐದು ಮಂತ್ರಗಳಿಂದ **ತ್ರಿಂಶದಷ್ಟೋತ್ತರಮಂತ್ರವರ್ಗಃ** ಪದಚ್ಛೇದದಿಂದ ಮೂವತ್ತೆಂಟು ಕಲಾರೂಪವಾದ ಮಂತ್ರಸಮುದಾಯವು **ಉತ್ಪನ್ನಃ** ಹುಟ್ಟಿತು. **ಹೇ ದೇವ** ರುದ್ರದೇವರೇ **ಯತ್** ಯಾವ **ಶಿವಾಖ್ಯಂ** ನಿಮ್ಮ ಅಂತರ್ಯಾಮಿಯಾಗಿ ಶಿವನೆಂಬ ಹೆಸರಿನ **ಸ್ವಯಂಜ್ಯೋತಿಃ** ಹೃದಯದಲ್ಲಿರುವ ಸ್ವತಂತ್ರಜ್ಯೋತಿಯಾದ **ಪರಮಾತ್ಮತತ್ತ್ವಂ** ನಾರಾಯಣನೆಂಬ ತತ್ತ್ವವೋ **ತತ್** ಅದು **ತೇ** ನಿಮಗೆ **ಅವಸ್ಥಿತಿಃ** ಆಶ್ರಯವು ಆ ನಾರಾಯಣನ ಅನುಗ್ರಹದಿಂದ ನೀವು ಕೈಲಾಸಪತಿಯಾಗಿ ಇರುವಿರಿ ಎಂದರ್ಥ.

ಲಿಂಗೇರೀ :- ಅಸ್ಯ ದೇವಸ್ಯ ಮೀಳ್ಹುಷೋ ವಯಾ ವಿಷ್ಣೋರೇಷಸ್ಯ ಪ್ರಭೃಥೇ ಹವಿರ್ಭಿಃ । ವಿದೇ ಹಿ ರುದ್ರೋ ರುದ್ರಿಯಂ ಮಹಿತ್ವಂ ಯಾಸಿಷ್ಟಮಶ್ವಿನಾ ವಿರಾವತ್॥ ಎಂಬ ಶ್ರುತಿಯಲ್ಲಿ ಬಂಧಕರಾದ ರುದ್ರದೇವರು ವಿಷ್ಣುವಿನ ಪೂಜೆ ಮಾಡಿ ರುದ್ರಸಂಬಂಧಿಯಾದ ಮಹಿಮೆ ಎಂದರೆ ಕೈಲಾಸಾಧಿಪತ್ಯವನ್ನು ಹೊಂದಿದ್ದಾರೆಂದು ಸ್ಪಷ್ಟವಾಗಿ ಹೇಳಿದೆ.

''ಸರ್ವಸ್ಯ ಚಾಹಂ ಹೃದಿ ಸನ್ನಿವಿಷ್ಟಃ'' ''ಜ್ಯೋತಿರ್ಹೃದಯಮಾಹಿತಂ ಯತ್'' ''ಯೋ ವೇದ ನಿಹಿತಂ ಗುಹಾಯಾಂ'' ''ನಾರಾಯಣಃ ಪರಂ ಜ್ಯೋತಿಃ'' ಇತ್ಯಾದಿ ಶ್ರುತಿಗಳ ಅರ್ಥವನ್ನು ವಿಚಾರಿಸಿದಾಗ ಪ್ರಕೃತ ಸ್ವಯಂಜ್ಯೋತಿಯು ವಿಷ್ಣುವೇ ಎಂದು ತಿಳಿಯಬೇಕು. ''ಆತ್ಮಾ ನಾರಾಯಣಃ ಪರಃ'' ''ತಸ್ಯಾಃ ಶಿಖಾಯಾ ಮಧ್ಯೇ ಪರಮಾತ್ಮಾ ವ್ಯವಸ್ಥಿತಃ ಸ ಬ್ರಹ್ಮ ಸ ಶಿವಃ ಸ ಹರಿಃ ಸೇಂದ್ರಃ ಸೋಽಕ್ಷರಃ ಪರಮಃ ಸ್ವರಾಟ್'' ಮುಂತಾದ ಶ್ರುತಿ-ಸ್ಮೃತಿಗಳಲ್ಲಿ ಹೇಳಲ್ಪಡುವ ಪರಮಾತ್ಮನಿಗೆ ''ದ್ವಾವಿಮೌ ಪುರುಷೌ ಲೋಕೇ ಕ್ಷರಶ್ಚಾಕ್ಷರ ಏವ ಚ'' ''ಉತ್ತಮಃ ಪುರುಷಸ್ತ್ವನ್ಯಃ ಪರಾಮಾತ್ಮೇತ್ಯುದಾಹೃತಃ ॥ ''ಯಸ್ಮಾತ್ ಕ್ಷರಮತೀತೋಽಹಮಕ್ಷರಾದಪಿ ಚೋತ್ತಮಃ । ಅತೋಽಸ್ಮಿ ಲೋಕೇ ವೇದೇ ಚ ಪ್ರಥಿತಃ ಪುರುಷೋತ್ತಮಃ ॥ ಮುಂತಾದ ವಾಕ್ಯಗಳು ಕ್ಷರಾಕ್ಷರಶಬ್ದದಿಂದ ಹೇಳಲ್ಪಟ್ಟ ರಮಾ-ಬ್ರಹ್ಮಾದಿಚೇತನರಿಂದ ಭಿನ್ನನಾದವನೇ ವಿಷ್ಣು ಎಂದು ತಿಳಿಸುತ್ತವೆ. ಆದ್ದರಿಂದ ನಾವು ಹೇಳಿದ್ದೇ ಶ್ಲೋಕಾರ್ಥವು ಹೊರತು ಪಾರ್ವತೀಪತಿಯು ಇಲ್ಲಿ ಶಿವ-ಪರಮಾತ್ಮ ಶಬ್ದಗಳಿಂದ ಹೇಳಲ್ಪಡುವದಿಲ್ಲ.

ರುದ್ರದೇವರಿಗೆ ''ಮುಕ್ತ್ವಾ ಭವದ್ಭವದುದೀರಿತ ಕಾಲವೇಗಧ್ವಸ್ತಾಶಿಷೋಽಬ್ಜಭವ-ನಾಕಪತೀನ್ ಕುತೋಽನ್ಯಾನ್'' ಎಂದು ದಶಮಸ್ಕಂಧ ಉತ್ತರಾರ್ಧದಲ್ಲಿ ರುಕ್ಮಿಣಿಯಿಂದ, ''ಅದ್ಭ್ಯಃ ಸಂಭೂತೋ ಹಿರಣ್ಯಗರ್ಭಃ'' ಎಂಬ ಶ್ರುತಿಯಿಂದಲೂ ಅಬ್ಜಶಬ್ದವಾಚ್ಯರಾದ ಬ್ರಹ್ಮದೇವರೊಡನೆ ಭವಶಬ್ದವಾಚ್ಯರಾದ ರುದ್ರದೇವರಿಗೆ ನಶ್ವರ ಐಶ್ವರ್ಯವುಳ್ಳವರೆಂದು ಹೇಳಲ್ಪಟ್ಟವರಿಗೆ ಈ ಸ್ತುತಿಯೋಗ್ಯತ್ವವು ಇರಲಾರದು. ॥೨೯॥

**ಛಾಯಾ ತ್ವಧರ್ಮೋ ಮೃಡ ಯೈರ್ವಿಸರ್ಗೋ**
**ನೇತ್ರತ್ರಯಂ ಸತ್ತ್ವರಜಸ್ತಮಾಂಸಿ**
**ಸಾಕ್ಷಾನ್ಮನುಃ ಶಾಸ್ತ್ರಕೃತಸ್ತವೇಕ್ಷಾ**
**ಛಂದೋಮಯೋ ದೇವಋಷಿಃ ಪುರಾಣಃ ॥೩೦॥**

**ಹೇ ಮೃಡ** ರುದ್ರದೇವರೇ **ಅಧರ್ಮಃ ತು** ಅಧರ್ಮಾಭಿಮಾನಿಯಾದ ನಿಋತಿಯು **ತೇ** ನಿನ್ನ **ಛಾಯಾ** ನೆರಳನ್ನು ಆಶ್ರಯಿಸಿರುವನು. **ಯೈಃ** ಯಾವ ಸತ್ತ್ವ ರಜಸ್ತಮೋಗುಣಗಳಿಂದ **ವಿಸರ್ಗಃ** ಜಗತ್ತಿನ ಸೃಷ್ಟ್ಯಾದಿಕಾರ್ಯಗಳಾಗುವವೋ **ತಾನಿ** ಆ ಸತ್ತ್ವರಜಸ್ಸುತಮೋ-ಗುಣಗಳು **ತೇ** ನಿನ್ನ **ನೇತ್ರತ್ರಯಂ** ಮೂರು ಕಣ್ಣುಗಳನ್ನು ಆಶ್ರಯಿಸಿರುವವು **ಸಾಕ್ಷಾತ್ ಮನುಃ** ಮುಖ್ಯರಾದ ಸ್ವಾಯಂಭುವಮನುಗಳು **ಶಾಸ್ತ್ರಕೃತಃ** ಪಾಶುಪತಾದಿಶಾಸ್ತ್ರಗಳನ್ನು ಬರೆದ ಮತ್ತು ಅಪೌರುಷೇಯಾಗಮಗಳನ್ನು ವ್ಯಕ್ತಗೊಳಿಸಿದ **ತವ** ನಿಮ್ಮ **ಈಕ್ಷಾ** ಜ್ಞಾನದಿಂದ ಹುಟ್ಟಿದವರು **ಸಾಕ್ಷಾತ್ ಮನುಃ** ಜ್ಞಾನಜನಕವಾದ ಪುರಾಣವು **ದೇವಋಷಿಃ** ಗಾಯತ್ರೀ ಮುಂತಾದ ಮಂತ್ರಗಳ ಅಭಿಮಾನಿಗಳು **ಛಂದೋಮಯಃ** ಇಚ್ಛೆಯಿಂದ ಹುಟ್ಟಿದವರು. ಅಂತರ್ಯಾಮಿಪಕ್ಷದಲ್ಲಿಯೂ ಇದೇ ಅರ್ಥ. ॥೩೦॥

**ನ ತೇ ಗಿರಿತ್ರಾಖಿಲಲೋಕಪಾಲ-**
**ವಿರಿಂಚವೈಕುಂಠಸುರೇಂದ್ರಗಮ್ಯಮ್ ।**
**ಜ್ಯೋತಿಃ ಪರಂ ಯತ್ರ ರಜಸ್ತಮಶ್ಚ**
**ಸತ್ತ್ವಂ ನ ಯದ್ ಬ್ರಹ್ಮ ನಿರಸ್ತಭೇದಮ್** ॥೩೦॥

**ಹೇ ಗಿರಿತ್ರ** ಕೈಲಾಸಪರ್ವತಕ್ಕೆ ರಕ್ಷಕರಾದ ರುದ್ರದೇವರೇ ಗಿರಿಂ ತ್ರಾಯತೇ ಇತಿ ಗಿರಿತ್ರಃ ತತ್ಸಂಬುದ್ಧಿಃ **ಯತ್ರ** ಯಾವ ನಿಮ್ಮ ಅಂತರ್ಯಾಮಿಯಾದ ಶಿವನೆಂಬ ನಾರಾಯಣನಲ್ಲಿ **ರಜಃ ತಮಃ ಸತ್ತ್ವಂ ಚ ನ** ರಜಸ್ಸು ತಮಸ್ಸು ಮತ್ತು ಸತ್ವಗುಣಗಳು ಬಂಧಕಗಳಾಗಿ ಇಲ್ಲವೋ **ಯತ್** ಯಾವ ಈ **ಪರಂಜ್ಯೋತಿಃ** ಪರಂಜ್ಯೋತಿ ರೂಪವು **ಬ್ರಹ್ಮ** ಗುಣಪೂರ್ಣವೋ **ಯತ್ ಚ** ಯಾವುದು **ನಿರಸ್ತಭೇದಂ** ಅವತಾರ-ಅವಯವ-ಗುಣಕ್ರಿಯಾಗಳಲ್ಲಿ ಭೇದವಿಲ್ಲದ್ದೋ ''ನೇಹ ನಾನಾಸ್ತಿ ಕಿಂಚನ'' ಎಂದು ಶ್ರುತಿ ಇದೆ. **ತತ್** ಆ **ತೇ** ನಿನ್ನ ಹೃದಯದಲ್ಲಿರುವ **ಪರಂಜ್ಯೋತಿಃ** ಶಿವಾಖ್ಯ ನಾರಾಯಣನು **ವಿರಿಂಚ** ಬ್ರಹ್ಮದೇವರು **ವೈಕುಂಠಸುರೇಂದ್ರ** ಶುಭ್ರನೆಂಬ ಋಷಿಯಿಂದ ವಿಕುಂಠಾ ಎಂಬುವಳಲ್ಲಿ ಉತ್ಪನ್ನರಾದ ದೇವಶ್ರೇಷ್ಠರು ಮತ್ತು **ಅಖಿಲಲೋಕಪಾಲ** ನೀವೂ ಸೇರಿದಂತೆ ಎಲ್ಲ ದಿಕ್ಪಾಲಕರು ಇವರಿಂದ **ಗಮ್ಯಂ ನ** ಸಾಕಲ್ಯೇನ ತಿಳಿಯಲ್ಪಡುವವನಲ್ಲ.

ಸತ್ಯ ಃ- ವೈಕುಂಠಪದವು ಕಾಕಾಕ್ಷಿನ್ಯಾಯದಿಂದ ವಿರಿಂಚಪದದೊಡನೆ ಸುರೇಂದ್ರ ಪದದೊಡನೆ ಅನ್ವಯಿಸುವದು. ಆಗ ವೈಕುಂಠವಿರಿಂಚ ಮುಕ್ತಬ್ರಹ್ಮ ವೈಕುಂಠಸುರೇಂದ್ರ ಮುಕ್ತದೇವಶ್ರೇಷ್ಠರಿಂದಲೂ ಗಮ್ಯನಲ್ಲ ಎಂದೂ ಅರ್ಥ ಮಾಡಿರುವರು. ಇವರೇ ತಿಳಿಯಲಾರರು ಎಂದಮೇಲೆ, ನಮ್ಮಿಂದ ತಿಳಿಯಲಾಗದು ಎಂದೇನು ಹೇಳುವದು ಎಂದು ಭಾವ.

ಲಿಂಗೇರೀ ಃ- ''ನ ಹಿ ದ್ವಿತೀಯೋ ಗುಣಸಂಗವರ್ಜಿತಃ । ಸೃಜತ್ಯವತ್ಯತ್ತಿ ನ ಬಧ್ಯತೇಽಜಃ'' ಭಗವಂತನಿಗೆ ಸತ್ತ್ವಾದಿಗುಣಗಳ ಬಂಧನ ಇಲ್ಲ ಎಂಬ ವಿಷಯದಲ್ಲಿ ಇವೇ ಮುಂತಾದ ಪ್ರಮಾಣಗಳಿವೆ. ॥೩೦॥

**ಕಾಮಾಧ್ವರತ್ರಿಪುರಕಾಲಹರಾದ್ಯನೇಕ-**
**ಭೂತದ್ರುಹಃ ಕ್ಷಪಯತಃ ಸ್ತುತಯೇ ನ ತತ್ ತೇ ।**
**ಯತ್ ತ್ವಂತಕಾಲ ಇದಮಾತ್ಮಕೃತಂ ಸ್ವನೇತ್ರ-**
**ವಹ್ನಿಸ್ಫುಲಿಂಗಶಿಖಯಾ ಭಸಿತಂ ತವೇಶ** ॥೩೧॥

**ಹೇ ಈಶ** ರುದ್ರದೇವರೇ **ಯತ್** ಯಾವ ಕಾರಣ **ಅಂತಕಾಲೇ** ಪ್ರಲಯಕಾಲದಲ್ಲಿ **ಆತ್ಮಕೃತಂ** ನಿಮ್ಮಿಂದ ಸೃಷ್ಟವಾದ **ಇದಂ** ಈ ಇಂದ್ರಾದಿ ಜಗತ್ತು **ತವ** ನಿನ್ನ **ಸ್ವನೇತ್ರ** ನಿಜವಾದ (ಮಾಯಕವಲ್ಲದ) ಮೂರನೇ ಕಣ್ಣಿನಿಂದ ಹೊರಟ **ವಹ್ನಿಸ್ಫುಲಿಂಗ** ಅಗ್ನಿಕಿಡಿಯ **ಶಿಖಯಾ**

ಜ್ವಾಲೆಯಿಂದ **ಭಸಿತಂ** ಭಸ್ಮ ಮಾಡಲ್ಪಟ್ಟಿತ್ತೋ **ತತ್** ಆ ಕಾರಣದಿಂದ **ಕಾಮ** ಮನ್ಮಥ **ಅಧ್ವರ** ದಕ್ಷಪ್ರಜಾಪತಿಯ ಯಾಗ **ತ್ರಿಪುರ** ತ್ರಿಪುರಾಸುರರ ಮೂರು ಪುರಗಳು **ಕಾಲ** ಯಮ-ಮೃತ್ಯು **ಹರಾದಿ** ಪ್ರಾಣಾಪಹಾರಿ ಹರ ಮೊದಲಾದ ಅನೇಕ **ಭೂತದ್ರುಹಃ** ಅನೇಕ ಪ್ರಾಣನಾಶಕರಾದವರನ್ನು **ಕ್ಷಪಯತಃ** ನಾಶಮಾಡುವ (ಸಂಹಾರಕನಾದ) **ತವ** ನಿನ್ನ **ಸ್ತುತಯೇ** ಸ್ತೋತ್ರಮಾಡಲು **ತತ್** ಇಂದ್ರಾದಿ ಜಗತ್ತು **ನ ಅಲಂ** ಶಕ್ತವಲ್ಲ.

ವಿಶೇಷ :- ಇಲ್ಲಿ ಹರನ ಸ್ತುತಿಯಲ್ಲಿಯೇ ಹರ ಎಂದು ಪ್ರಯೋಗಿಸಿರುವದರಿಂದ ಈ ಸ್ತೋತ್ರವು ಶ್ರೀಹರಿಯ ಸ್ತೋತ್ರವೆಂಬುದನ್ನು ತಿಳಿಸಿರುವರು. ಆಗ ರುದ್ರಾಂತರ್ಯಾಮಿ ನರಸಿಂಹ ನೀನು ಪ್ರಳಯ ಕಾಲದಲ್ಲಿ ನಿನ್ನ ಕಣ್ಣಿನ ಬೆಂಕಿಯ ಕಿಡಿಯ ಜ್ವಾಲೆಯಿಂದ ನೀನು ಸೃಷ್ಟಿಸಿದ ಬ್ರಹ್ಮಾದಿ ಎಲ್ಲ ಜಗತ್ತನ್ನು ಸುಡುವೆ. ಆದ್ದರಿಂದ ಮನ್ಮಥ-ಅಧ್ವರ-ತ್ರಿಪುರರಿಗೆ ಮೃತ್ಯುವಾದ ರುದ್ರ ಮೊದಲಾದ ಅನೇಕ ಭೂತದ್ರೋಹಿಗಳನ್ನು ಸಂಹರಿಸುವ ನಿನ್ನ ಸ್ತುತಿಯನ್ನು ಯಾರೂ ಸಂಪೂರ್ಣವಾಗಿ ಮಾಡಲು ಸಮರ್ಥರಲ್ಲ ಎಂದರ್ಥ. ||೩೨||

ಅವತರಣಿಕಾ :- ಈ ವಿಧವಾದ ನಿನ್ನನ್ನು ಯಾರು ನಿಂದಿಸಿರುವರೋ ಅವರು ಮೂರ್ಖರು ಎಂದು ಹೇಳುವರು-

ನಿವಾಸನಿಲಯಶ್ಚಿತಾ ತವ ಶಿರಸ್ತತಿರ್ಮಾಲಿಕಾ ಕಪಾಲಮಪಿ ತೇ ಕರೇ ತ್ವಮಶಿವೋಽಸ್ಯನಂತಧೀಯಾಮ್ । ಎಂದಿರುವದರಿಂದ ರುದ್ರದೇವರ ಅನಂತಧೀ-ಚರ್ಯವನ್ನು ತಿಳಿಸುವರು-

**ಯೇ ತ್ವಾತ್ಮರಾಮಗುರುಭಿರ್ಹೃದಿ ಚಿಂತಿತಾಂಘ್ರಿ-**
**ದ್ವಂದ್ವಂ ಚರಂತಮುಮಯಾ ತಪಸಾಽಭಿತಪ್ತಮ್ ।**
**ಕತ್ಥಂತ ಉಗ್ರವಪುಷಂ ನಿರತಂ ಸ್ಮಶಾನೇ**
**ತೇ ಭೂತಭೂತಿಮವಿದಸ್ತವ ಹೀನಲಜ್ಜಾಃ** ||೩೩||

**ಹೇ ಈಶ** ರುದ್ರದೇವರೇ **ಆತ್ಮರಾಮಗುರುಭಿಃ** ಶ್ರೀಹರಿಯ ಸ್ಮರಣೆಯಿಂದ ಸಂತೋಷಿಸುವ ಸನತ್ಕುಮಾರಾದಿಗಳಿಂದ **ಹೃದಿ** ಮನಸ್ಸಿನಲ್ಲಿ **ಚಿಂತಿತಾಂಘ್ರಿದ್ವಂದ್ವಂ** ಧ್ಯಾನ ಮಾಡಲ್ಪಡುವ ಪಾದಗಳುಳ್ಳ **ತ್ವಾ** ನಿನ್ನನ್ನು **ಉಮಯಾ ಸಹ ಚರಂತಂ** ಪಾರ್ವತಿಯಲ್ಲಿ ಆಸಕ್ತನೆಂದು ಅಥವಾ ಪಾರ್ವತಿಗಾಗಿ ತಪಸ್ಸು ಮಾಡುವವನೆಂದೂ ಆದ್ದರಿಂದಲೇ **ಅಭಿತಪ್ತಂ** ಸಂತಪ್ತನನ್ನಾಗಿಯೂ ಬೇರೆ ಧರ್ಮಗಳನ್ನೂ ಮಾಡುವನೆಂದು, ಅಥವಾ ಕಂಠದಲ್ಲಿರುವ ವಿಷರೂಪವಾದ ಅಗ್ನಿಯಿಂದ ಸಂತಪ್ತನೆಂದೂ **ಸ್ಮಶಾನೇ ನಿರತಂ** ಸ್ಮಶಾನದಲ್ಲಿ ಆಸಕ್ತನಾದವನನ್ನಾಗಿಯೂ **ಉಗ್ರವಪುಷಂ** ರುಂಡಮಾಲೆ-ಕಪಾಲಗಳಿಂದ ಭಯಂಕರ ದೇಹವುಳ್ಳವನೆಂದೂ **ಯೇ** ಯಾರು **ಕತ್ಥಂತೇ** ನಿಂದಿಸಿರುವರೋ **ತೇ** ಅವರು **ತವ** ನಿನ್ನ **ಭೂತಭೂತಿಂ** ಪ್ರಭೂತವಾದ ಐಶ್ವರ್ಯವನ್ನು **ಅವಿದಃ** ತಿಳಿಯದ ಅಜ್ಞಾನಿಗಳು, ಆದ್ದರಿಂದ

**ಹೀನಲಜ್ಜಾಃ** ನಾಚಿಕೆಯಿಲ್ಲದವರು ಇಂಥ ಭಗವದ್ಭಕ್ತರಾದ ರುದ್ರದೇವರನ್ನು ಕಾಮುಕ-ಸ್ಮಶಾನವಾಸಿ ಮುಂತಾಗಿ ಹೇಳಿದರೆ ತಿಳಿದವರು ಏನಂದಾರು ಎಂಬ ನಾಚಿಕೆಯೂ ಅವರಿಗಿಲ್ಲವೆಂದರ್ಥ. ನಿನ್ನ ಮಹಿಮೆ ತಿಳಿದೂ ಹೀಗೆ ದೂಷಿಸುವವರು ನಿರ್ಲಜ್ಜರು ಎಂದೂ ಅರ್ಥ ಮಾಡಿರುವರು.

ಸತ್ಯ ಃ- ಅವಿದಸ್ತವ ಎಂಬುದು ಒಂದೇ ಪದ ಎಂದು ಮಾಡಿಕೊಂಡೂ ಅರ್ಥ ತಿಳಿಯಬೇಕು. ಅವಿದ್ಭಿಃ ನ ವಿದ್ಯದೇ ಸ್ತವಃ ಯಸ್ಯ ಸಃ ತತ್ಸಂಬುದ್ಧಿಃ ಅವಿದಸ್ತವ ಎಂದು ವಿಗ್ರಹಮಾಡಿಕೊಳ್ಳಬೇಕು. **ಹೇ ಅವಿದಸ್ತವ** ಅಜ್ಞಾನಿಗಳಿಂದ ಸ್ತುತಿಸಲ್ಪಡದವನೇ ಎಂದು ಅರ್ಥವನ್ನು ತಿಳಿಯಬೇಕೆಂದು ಶ್ರೀಸತ್ಯಧರ್ಮರು ಹೇಳುತ್ತಾರೆ. ||೩೩||

ಅವತರಣಿಕಾ ಃ- ಮಹಾತ್ಮರೂ ನಿನ್ನ ಸ್ವರೂಪವನ್ನು ತಿಳಿಯಲಾರರು ಎಂದು ಹೇಳುವರು-

**ತತ್ ತಸ್ಯ ತೇ ಸದಸತೋಃ ಪರತಃ ಪರಸ್ಯ**
**ನಾಂಜಃ ಸ್ವರೂಪಗಮನೇ ಪ್ರಭವಂತಿ ಭೂಮ್ನಃ ।**
**ಬ್ರಹ್ಮಾದಯಃ ಕಿಮುತ ಸಂಸ್ತವನೇ ವಯಂ ತು**
**ತತ್ಸರ್ಗಸರ್ಗವಿಷಯಾ ಅಪಿ ಭಕ್ತಿಮಾತ್ರಮ್** ||೩೪||

ಈ ಶ್ಲೋಕದಲ್ಲಿ ಭಗವಂತನ ಸ್ತೋತ್ರ ಮಾಡುತ್ತಿದ್ದಾರೆ ಎಂದು ಇಟ್ಟುಕೊಂಡಾಗ ಇಲ್ಲಿಯ ಬ್ರಹ್ಮಾದಯಃ ಎಂಬ ಶಬ್ದಕ್ಕೆ ವಿರಿಂಚ ಮೊದಲಾದವರು ಎಂದು ತದ್ಗುಣ ಸಂವಿಜ್ಞಾನಬಹುವ್ರೀಹಿ. ರುದ್ರನ ಸ್ತುತಿ ಇದು ಎಂಬ ಪಕ್ಷದಲ್ಲಿ ಬ್ರಹ್ಮನೇ ಕಾರಣವಾಗಿವುಳ್ಳ ಸನಕಾದಿಗಳು ಎಂದು ಅರ್ಥ ಮಾಡಿಕೊಳ್ಳಬೇಕು. ಅತದ್ಗುಣಸಂವಿಜ್ಞಾನ ಬಹುವ್ರೀಹಿ ಅಥವಾ ಬ್ರಹ್ಮಶಬ್ದಕ್ಕೆ ಬೃಹಸ್ಪತಿ ಎಂದಾದರೂ ಅರ್ಥ ಮಾಡಿಕೊಳ್ಳಬೇಕು.

**ತತ್** ನಿನ್ನ ಚರಿತ್ರೆಯು ಸಾಕಲ್ಯೇನ ತಿಳಿಯಲು ಸಾಧ್ಯವಿಲ್ಲ ಆದ್ದರಿಂದ **ಸದಸತೋಃ** ಮಹತ್ತತ್ವಾದಿ ಕಾರ್ಯಕಾರಣಗಳಿಂದ (ಜಡಪ್ರಕೃತಿಯಿಂದ) **ಪರತಃ** ಅಭಿಮಾನಿ-ಯಾದ್ದರಿಂದ ಉತ್ತಮಳಾದ ಚಿತ್ರಕೃತಿಲಕ್ಷ್ಮೀದೇವಿಯಿಂದ **ಪರಸ್ಯ** ಉತ್ತಮನಾದ ಆದ್ದರಿಂದಲೇ **ಭೂಮ್ನಃ** ಪರಿಪೂರ್ಣಸುಖವಿರುವ **ತಸ್ಯ** ಶ್ರುತಿಪ್ರಸಿದ್ಧನಾದ **ತೇ** ನಿನ್ನ **ಸ್ವರೂಪಗಮನೇ** ಸ್ವರೂಪವನ್ನು ತಿಳಿಯುವಲ್ಲಿ **ಬ್ರಹ್ಮಾದಯಃ** ಬ್ರಹ್ಮದೇವರೇ ಮೊದಲಾದವರು **ಅಂಜಃ** ಪೂರ್ಣವಾಗಿ **ನ ಪ್ರಭವಂತಿ** ಸಮರ್ಥರಲ್ಲ. ಅಂದ ಮೇಲೆ **ತತ್ಸರ್ಗಸರ್ಗವಿಷಯಾಃ** ಆ ಬ್ರಹ್ಮದೇವರ ಸೃಷ್ಟಿಗೆ ವಿಷಯರಾದ ಪ್ರಜೇಶ್ವರರಿಂದ ಸೃಷ್ಟರಾದ **ವಯಂ** ನಾವು **ಸಂಸ್ತವನೇ** ಪೂರ್ಣವಾಗಿ ಸ್ತುತಿ ಮಾಡುವಲ್ಲಿ **ನ ಪ್ರಭವಾಮಃ** ಸಮರ್ಥರಲ್ಲ ಇತಿ ಎಂದು **ಕಿಮುತ** ಹೇಳುವುದೇನು? ಸಮರ್ಥರಲ್ಲವೆಂದರ್ಥ. ಹಾಗಾದರೆ ಈಗ ನೀವು

ಮಾಡುತ್ತಿರುವದೇನು? ಎಂದರೆ ಹೇಳುತ್ತಾರೆ. **ಅಪಿ ಭಕ್ತಿಮಾತ್ರಂ** ನಾವು ಮಾಡುವದು ಸಂಸ್ತವವಲ್ಲದಿದ್ದರೂ ನಮ್ಮ ಭಕ್ತಿಪ್ರದರ್ಶನ ಮಾತ್ರವೇ ಹೊರತು ಬೇರೇನಿಲ್ಲ.

ರುದ್ರಪರವಾಗಿ ಹೀಗೆ ಅರ್ಥವನ್ನು ತಿಳಿಯಬೇಕು. ನಿನ್ನ ಐಶ್ವರ್ಯವು ಸಾಮಾನ್ಯರಿಂದ ಅಗಮ್ಯವಾದ್ದರಿಂದ **ಸದಸತೋಃ** ಪಂಚಭೂತಾಭಿಮಾನಿಗಳಿಂದ **ಪರತಃ** ಉತ್ತಮರಾದ ಇಂದ್ರದೇವರಿಗಿಂತ **ಪರಸ್ಯ** ಉತ್ತಮರಾದ **ಭೂಮ್ನಃ** ಇಂದ್ರಗಳಿಗಿಂತ ಅಧಿಕಮಹಿಮೆಯುಳ್ಳ **ತೇ** ನಿಮ್ಮ **ಸ್ವರೂಪಗಮನೇ** ಸ್ವರೂಪವನ್ನು ತಿಳಿಯುವಲ್ಲಿ **ಬ್ರಹ್ಮಾದಯಃ** ಬ್ರಹ್ಮಪುತ್ರರಾದ ಸನಕಾದಿಗಳು ಅಥವಾ ಬೃಹಸ್ಪತ್ಯಾಚಾರ್ಯ ಮುಂತಾದವರು **ಅಂಜಃ** ಸಂಪೂರ್ಣವಾಗಿ **ನ ಪ್ರಭವಂತಿ** ಸಮರ್ಥರಲ್ಲ ಅಂದಮೇಲೆ **ತತ್ಸರ್ಗಸರ್ಗವಿಷಯಾಃ** ಬ್ರಹ್ಮಪುತ್ರರಾದ ಸ್ವಾಯಂಭುವಮನುವಿನಿಂದ ಜನಿಸಿದವರು ನಿಮಗೆ ಬಹುದೂರರಾದವರು. ಅವರು ಸ್ತೋತ್ರ ಮಾಡಲಾರರೆಂದು ಹೇಳುವುದೇನು? ಇದು ಭಕ್ತಿಮಾತ್ರ.

ತುಶಬ್ದವು ಹರಪಕ್ಷ-ಹರಿಪಕ್ಷಗಳಲ್ಲಿ ವಿಶೇಷ ತಿಳಿಸುತ್ತದೆಂದು ಶ್ರೀಸತ್ಯಧರ್ಮರು ತಿಳಿಸುತ್ತಾರೆ.

ಲಿಂಗೇರೀ :- ಇಲ್ಲಿ ರುದ್ರಸ್ವರೂಪವೇ ಬ್ರಹ್ಮಾದ್ಯಗಮ್ಯವೆಂದು ಹೇಳಲ್ಪಡುವದು ಎಂದೇಕಾಗಬಾರದು ಎಂದರೆ ಅದು ಅಪ್ರಾಮಾಣಿಕ. ಅಷ್ಟೇ ಅಲ್ಲ. ಈ ಸ್ಕಂಧದಲ್ಲಿಯೇ ರುದ್ರದೇವರು ''ನಾಹಂ ಪರಾಯುರ್ಋಷಯೋ ನ ಮರೀಚಿಮುಖ್ಯಾಃ ಜಾನಂತಿ ಯದ್ವಿರಚಿತಂ ಖಲು ಸತ್ವಸರ್ಗಾಃ । ಯನ್ಮಾಯಯಾ ಮುಷಿತಚೇತಸ ಈಶ ದೈತ್ಯಮರ್ತ್ಯಾದಯಃ ಕಿಮುತ ಶಶ್ವದಭದ್ರವೃತ್ತಾಃ ॥೮.೧೧.೯॥ ಮುಂತಾಗಿ ತಮ್ಮಿಂದಲೂ ಚತುರ್ಮುಖಾದಿಗಳಿಂದಲೂ ವಿಷ್ಣುವು ಅಜ್ಞೇಯನಾಗಿದ್ದಾನೆಂದು ಹೇಳಿದ್ದಾರೆ. ''ಅಜಶಕ್ರಶಂಕರಾದ್ಯೈರ್ದುರವಸಿತಸ್ತವಮಚ್ಯುತಂ ನತೋऽಸ್ಮಿ'' ಎಂದು ದಶಮಸ್ಕಂಧದಲ್ಲಿಯೂ ಹೇಳಿದೆ. ॥೩೪॥

**ಏತತ್ಪರಂ ಪ್ರಪಶ್ಯಾಮೋ ನ ಪರಂ ತೇ ಮಹೇಶ್ವರ ।**
**ಮೃಡನಾಯ ಹಿ ಲೋಕಸ್ಯ ವ್ಯಕ್ತಿಸ್ತೇऽವ್ಯಕ್ತಕರ್ಮಣಃ ॥೩೫॥**

**ಹೇ ಮಹೇಶ್ವರ** ರುದ್ರಾಂತರ್ಯಾಮಿಯೇ **ಅವ್ಯಕ್ತಕರ್ಮಣಃ** ವ್ಯಕ್ತವಾಗದ ಕ್ರಿಯಾಸ್ವರೂಪವುಳ್ಳ **ತೇ** ನಿನ್ನ **ವ್ಯಕ್ತಿಃ** ವ್ಯಕ್ತವಾದ ಕ್ರಿಯಾಸ್ವರೂಪವು (ನಿನ್ನ ಕ್ರಿಯೆಯು) **ಲೋಕಸ್ಯ** ಜಗತ್ತಿನ **ಮೃಡನಾಯ** ಸುಖಕ್ಕಾಗಿಯೇ ಇರುವುದು **ಹಿ** ಇದು ಶಾಸ್ತ್ರಸಿದ್ಧ. **ಏತತ್ಪರಂ** ಲೋಕಕ್ಕೆ ಸುಖ ಮಾಡುವುದೇ **ತೇ** ನಿನಗೆ ಪ್ರಯೋಜನವೆಂದು **ಪ್ರಪಶ್ಯಾಮಃ** ತಿಳಿದಿದ್ದೇವೆ **ಪರಂ** ಅದನ್ನು ಬಿಟ್ಟು ಸ್ವಪ್ರಯೋಜನವನ್ನು **ನ ಪ್ರಪಶ್ಯಾಮಃ** ಇದೆ ಎಂದು ತಿಳಿಯುತ್ತಿಲ್ಲ. ರುದ್ರದೇವರ ವಿಷಯದಲ್ಲಿ **ಹೇ ಮಹೇಶ್ವರ** ರುದ್ರನೇ **ತೇ** ನಿನ್ನ **ಏತತ್** ನಮ್ಮ ಕಣ್ಣಿಗೆ ಕಾಣುವ ರೂಪವು ತ್ರಿನೇತ್ರಾದ್ಯಾಕಾರವನ್ನು **ಪರಂ** ಕೇವಲ **ಪ್ರಪಶ್ಯಾಮಃ**

ನೋಡುತ್ತಿದ್ದೇವೆ. **ಪರಂ** ನಿನಗಿಂತ ಭಿನ್ನನಾದ ಉತ್ತಮವಾದ ನಿನ್ನ ಅಂತರ್ಯಾಮಿ ರೂಪವನ್ನು **ನ** ಕಾಣುತ್ತಿಲ್ಲ. **ಅವ್ಯಕ್ತಕರ್ಮಣಃ** ಮೂರನೇ ಕಣ್ಣಿನ ಕಾರ್ಯವೇನೆಂದು ಸ್ಪಷ್ಟವಾಗಿ ತಿಳಿಯಲಾಗದ **ತೇ** ನಿನ್ನ **ವ್ಯಕ್ತಿಃ** ಈ ರೂಪವು **ಲೋಕಸ್ಯ ಮೃಡನಾಯ** ಜಗತ್ತಿನ ಸುಖಕ್ಕಾಗಿ ಇದೆ. ಆದ್ದರಿಂದ ನಮ್ಮನ್ನು ರಕ್ಷಿಸು. ||೩೫||

ತಾತ್ಪರ್ಯ ಅವತರಣಿಕಾ ಃ- ದೇವದೇವ ಎಂದಾರಂಭಿಸಿ (೨೧) ೩೫ನೇ ಶ್ಲೋಕದ ವರೆಗೆ ರುದ್ರಸ್ತುತಿಯು ಮಾಡಲ್ಪಡುವದು. ಅದರಲ್ಲಿ ರುದ್ರದೇವರಲ್ಲಿ ಅಸಂಭಾವಿತಗಳಾದ ಪ್ರಕೃತಿಪರತ್ವ ಬ್ರಹ್ಮಾಜ್ಞೇಯತ್ವ ಮುಂತಾದ ಗುಣಗಳನ್ನು ಹೇಳುವದು ಸರ್ವೋತ್ತಮತ್ವ ಹೇಳುವದು ಹಾಗೂ ಬ್ರಹ್ಮವಿಷ್ಣುಶಿವಾಭಿಧಾಂ ಎಂಬುದರಿಂದ ಮೂರು ಜನಕ್ಕೆ ಅಭೇದ ಹೇಳುವದು. ಅದು ಅಹಂ ರುದ್ರೇಭಿರ್ವಸುಭಿಶ್ಚರಾಮಿ ಮುಂತಾದ ರುದ್ರದೇವರಿಗೆ ಸರ್ವೋತ್ತಮತ್ವವಿಲ್ಲವೆಂದು ಹೇಳುವ ಪ್ರಮಾಣವಿರುದ್ಧವಾದ್ದರಿಂದ ಸರಿಯಲ್ಲ. ಭೇದ ಹೇಳುವ ಪ್ರಮಾಣದಿಂದ ಅಭೇದವೂ ಭಾಧಿತವಾಗಿದೆ. ಆದ್ದರಿಂದ ಈ ಸ್ತುತಿಯು ಅಯುಕ್ತವೆಂದು ಶಂಕೆ ಬಂದರೆ ಅದನ್ನು ಪ್ರಮಾಣದಿಂದ ಶ್ರೀಮದಾಚಾರ್ಯರು ಪರಿಹರಿಸುವರು.

**...ತಾತ್ಪರ್ಯ...**

**ತತ್ರ ತತ್ರ ಸ್ತುತಿಪದ್ಯೈರ್ಹರಿರೇವ ತು ತದ್ಗತಃ |**
**ಸ್ತೂಯತೇಽತೋ ಯುಕ್ತಮೇವ ಗುಣಾಧಿಕ್ಯವಚೋಽಪಿ ತು ||ಇತಿ ಚ||**

ಅಲ್ಲಲ್ಲಿ ಸ್ತೋತ್ರ ಮಾಡುವ ಪದಗಳಿಂದ ರುದ್ರಾಂತರ್ಗತನಾದ ಶ್ರೀಹರಿಯೇ ಸ್ತುತಿಸಲ್ಪಡುವನು. ಆದ ಕಾರಣ ಸರ್ವೋತ್ಕರ್ಷ ಮುಂತಾದ ಗುಣಾಧಿಕ್ಯ ಹೇಳುವ ವಚನವು ಹರಿವಿಷಯಕವಾದ್ದರಿಂದ ಯುಕ್ತವೇ ಆಗಿದೆ. ಹೊರತು ಹರಿಹರರಿಗೆ ಅಭೇದ ಹೇಳುವುದಿಲ್ಲ. ಇಲ್ಲಿಯೇ ಮುಂದೆ ''ಸರ್ವಾತ್ಮಾ ಪ್ರೀಯತೇ ಹರಿಃ'' ಎಂದು ಹೇಳಿದೆ. ನಾನು ವಿಷಪಾನ ಮಾಡುವದರಿಂದ ಶ್ರೀಹರಿಯು ಪ್ರೀತನಾಗುವನು ಎಂದು ರುದ್ರದೇವರೇ ಭವಾನಿಗೆ ಹೇಳುವರು. ಅದ್ದರಿಂದ ಶಿವ-ಕೇಶವರಲ್ಲಿ ಭೇದವನ್ನೇ ತಿಳಿಯಬೇಕು.

ಲಿಂಗೇರೀ ಃ- ಮೂಲ ಶ್ಲೋಕವನ್ನು ಹೀಗೆ ಅರ್ಥೈಸಿಕೊಳ್ಳಬೇಕು. ನಿನ್ನ ಹೃದಯದಲ್ಲಿರುವ **ಏತತ್** ಶಿವನೆಂಬ ಹೆಸರಿನ ನಾರಾಯಣನನ್ನು **ಪರಂ ಪಶ್ಯಾಮಃ** ಸರ್ವೋತ್ತಮನೆಂದು **ಪಶ್ಯಾಮಃ** ತಿಳಿಯುವೆವು. **ತಸ್ಮಾತ್ ಪರಂ** ಅವನಿಗಿಂತ ಉತ್ತಮನನ್ನು **ನ ಪ್ರಪಶ್ಯಾಮಃ ಚ** ಕಾಣಲಾರೆವು ಹೀಗೆ ಅರ್ಥ.

ಇದರಿಂದ ನನಗಿಂತ ಉತ್ತಮನಾದ್ದರಿಂದ ನನ್ನ ಅಂತರ್ಯಾಮಿಯನ್ನು ಸ್ತುತಿಸಿದಂತೆ ಅವನಿಗಿಂತ ಉತ್ತಮನ ಸ್ತುತಿ ಏಕೆ ಮಾಡುವುದಿಲ್ಲ ಎಂಬ ಶಂಕೆ ನಿರಾಕೃತವಾಯಿತು.

ಅವನಿಗಿಂತ ಉತ್ತಮರೇ ಇಲ್ಲವೆಂದು ತಿಳಿಸಿದ್ದಾರೆ. ''ಮತ್ತಃ ಪರತರಂ ನಾನ್ಯತ್ ಕಿಂಚಿದಸ್ತಿ ಧನಂಜಯ'' ''ಪುರುಷಾನ್ನ ಪರಂ ಕಿಂಚಿತ್'' ''ಸೋಽಧ್ವನಃ ಪಾರಮಾಪ್ನೋತಿ ತದ್ವಿಷ್ಣೋಃ ಪರಮಂ ಪದಮ್'' ಮುಂತಾದ ಪ್ರಮಾಣಗಳು ವಿಷ್ಣುವಿಗಿಂತ ಉತ್ತಮರಿಲ್ಲವೆಂದು ತಿಳಿಸುವವು. ।।೩೫।।

ಅವತರಣಿಕಾ ಃ- ದೇವತೆಗಳು ಮಾಡಿದ ಈ ಸ್ತುತಿಯನ್ನು ಬುದ್ಧಿಪೂರ್ವಕವಾಗಿ ಕೇಳಿ ರುದ್ರದೇವರು ಸುಮ್ಮನೇ ಕುಳಿತರೇ ಅಥವಾ ಏನಾದರೂ ಉತ್ತರಿಸಿದರೇ (ಪರ್ಯಾಯವಾಗಿ) ಅಥವಾ ವಿಷ ಕುಡಿದರೇ ಎಂಬ ಶ್ರೋತೃಗಳ ಶಂಕೆಯನ್ನು ನಿರಾಕರಿಸಲು ಕೊನೆಯ ಪಕ್ಷವನ್ನು ಸ್ವೀಕರಿಸಿ ಆ ವಿಷಪಾನಕ್ಕಿಂತ ಮುಂಚೆ ಮಾಡಿದ ಇತಿಕರ್ತವ್ಯವನ್ನು (ಸಹಕಾರಿಯನ್ನು) ಕೆಲವು ಶ್ಲೋಕಗಳಿಂದ ಶುಕಾಚಾರ್ಯರು ಹೇಳುವರೆಂದು ಹೇಳುವರು-

**ಶ್ರೀಶುಕ ಉವಾಚ**

**ತದ್ ವೀಕ್ಷ್ಯ ವ್ಯಸನಂ ತಾಸಾಂ ಕೃಪಯಾ ಭೃಶಪೀಡಿತಃ ।**
**ಸರ್ವಭೂತಸುಹೃದ್ ದೇವ ಇದಮಾಹ ಸತೀಂ ಪ್ರಿಯಾಮ್ ।।೩೬।।**

**ತಾಸಾಂ** ಪ್ರಜೆಗಳ **ತತ್ ವ್ಯಸನಂ** ಆ ದುಃಖವನ್ನು **ವೀಕ್ಷ್ಯ** ನೋಡಿ **ಕೃಪಯಾ** ಕರುಣೆಯಿಂದ **ಭೃಶಪೀಡಿತಃ** ಮನಸ್ಸು ಕರಗಿದವರಾಗಿ **ಸರ್ವಭೂತಸುಹೃತ್** ಎಲ್ಲ ಪ್ರಾಣಿಗಳಿಗೆ ಸ್ನೇಹಿತರಾದ (ಅನಿಮಿತ್ತೋಪಕಾರಕರಾದ) **ದೇವಃ** ರುದ್ರದೇವರು **ಸತೀಂ** ಪತಿವ್ರತೆಯಾದ **ಪ್ರಿಯಾಂ** ತನಗೆ ಪ್ರಿಯಳಾದ ಹೆಂಡತಿಯಾದ ಪಾರ್ವತೀದೇವಿಯನ್ನು ಕುರಿತು **ಇದಂ ಆಹ** ಮುಂದೆ ಹೇಳಿದಂತೆ ಹೇಳಿದನು.

ಸತ್ಯ ಃ- ವಿನಾ ಅಸನಂ ವ್ಯಸನಂ ಎಂದು ಪದಚ್ಛೇದ ಮಾಡಿಕೊಂಡು ಈ ರೀತಿಯಾಗಿ ಅರ್ಥವನ್ನು ತಿಳಿಯಬೇಕು. **ವಿನಾ** ಭಗವಂತನಿಂದ **ಅಸನಂ** ಉದಾಸೀನವಾಗಿರುವುದನ್ನು **ವೀಕ್ಷ್ಯ** ಕಂಡು, ಅಂದರೆ ಹಿಂದೆ ಹೇಳಿದಂತೆ ನನಗೆ ಕೀರ್ತಿ ಕೊಡಲೆಂದು ಶ್ರೀಹರಿಯ ಔದಾಸಿನ್ಯವನ್ನು ತಿಳಿದು ಹೆಂಡತಿಗೆ ಹೇಳಿದನು.

(೧೯ನೇ ಶ್ಲೋಕ ತಾತ್ಪರ್ಯ ಃ- ರುದ್ರಸ್ಯ ಯಶಸೇಽರ್ಥಾಯ ಸ್ವಯಂ ವಿಷ್ಣುರ್ವಿಷಂ ಪ್ರಭುಃ । ನ ಸಂಜಹ್ರೇ ಸಮರ್ಥೋಽಪಿ ವಾಯುಂ ಪ್ರೋಚೇ ಪ್ರಶಾಂತಯೇ ।। ಎಂಬ ತಾತ್ಪರ್ಯಕ್ಕೆ ಈ ಅರ್ಥವು ಅನುಗುಣವಾಗುವದು.

ಅವತರಣಿಕಾ ಃ- ನನ್ನ ಸಾಮರ್ಥ್ಯವನ್ನರಿಯದ ಈ ಭವಾನಿಯು ವಿಚಾರ ಮಾಡದೆ ವಿಷಪಾನ ಮಾಡಲು ಹೊರಟ ನನ್ನನ್ನು ತಡೆಯಬಹುದು ಎಂಬ ಶಂಕೆಯಿಂದ ಅವಳ ಅನುಮೋದನೆ ಪಡೆಯುವಂತೆ ಹೇಳುವರು-

**ಶಿವ ಉವಾಚ**

**ಅಹೋ ಬತ ಭವಾನ್ಯೇತತ್ ಪ್ರಜಾನಾಂ ಪಶ್ಯ ವೈಶಸಮ್ ।**
**ಕ್ಷಿರೋದಮಥನೋದ್ಭೂತಾತ್ ಕಾಲಕೂಟಾದುಪಸ್ಥಿತಮ್ ॥೩೭॥**

**ಭವಾನಿ** ಹೇ ಭವಾನಿಯೇ, ಅಥವಾ **ಬತ ಭವಾನಿ** ಹೇ ಭವಾನಿಯೇ ಎಂದಾದರೂ ಅರ್ಥ. ''ಬತಾಮಂತ್ರಣಸಂತೋಷಖೇದಸಂಬೋಧನೇಽಪಿಚ'' ಎಂದು ವಿಶ್ವವಿದೆ. **ಕ್ಷೀರೋದಮಥನೋದ್ಭೂತಾತ್** ಕ್ಷೀರಸಮುದ್ರದ ಮಥನದಿಂದ ಉಂಟಾದ **ಕಾಲಕೂಟವಿಷಾತ್** ಕಾಲಕೂಟವೆಂಬ ವಿಷದಿಂದ **ಉಪಸ್ಥಿತಂ** ಒದಗಿರುವ **ಪ್ರಜಾನಾಂ** ಜನರ **ಏತತ್** ಈ **ವೈಶಸಂ** ನಾಶರೂಪವಾದ ಕಷ್ಟವನ್ನು **ಪಶ್ಯ** ನೋಡು **ಅಹೋ** ಆಶ್ಚರ್ಯವು **ಬತ** ಖೇದವು. ।।೩೭।

**ಆಸಾಂ ಪ್ರಾಣಪರೀಪ್ಸೂನಾಂ ವಿಧೇಯಮಭಯಂ ಹಿ ಮೇ ।**
**ಏತಾವಾನ್ ಹಿ ಪ್ರಭೋರರ್ಥೋ ಯದ್ ದೀನಪರಿಪಾಲನಮ್ ॥೩೮॥**

**ಪ್ರಾಣಪರೀಪ್ಸೂನಾಂ** ಪ್ರಾಣವನ್ನು ಉಳಿಸಿಕೊಳ್ಳಲಿಚ್ಛಿಸುವ **ಆಸಾಂ ಈ** ಪ್ರಜೆಗಳಿಗೆ **ಅಭಯಂ** ಪ್ರಾಣಭಯಪರಿಹಾರವು **ಮೇ** ನನ್ನಿಂದ **ವಿಧೇಯಂ** ಮಾಡಲ್ಪಡಬೇಕು **ಹಿ** ಹೀಗೆ ಮಾಡುವುದು ಶಾಸ್ತ್ರಸಿದ್ಧವು **ಹಿ** ಏಕೆಂದರೆ **ಪ್ರಭೋಃ** ಸಮರ್ಥನಿಗೆ **ಯತ್ ದೀನಪರಿಪಾಲನಂ** ದುಃಖಿತರನ್ನು ಕಾಪಾಡುವದೇನಿದೆಯೋ **ಏತಾವಾನ್** ಅದಷ್ಟೇ ಆ ದೀನಪರಿಪಾಲನವೇ **ಅರ್ಥಃ** ಪ್ರಯೋಜನವು. ದೀನರನ್ನು ಪರಿಪಾಲಿಸಿದರೆ ಮಾತ್ರ ಸಮರ್ಥನಾದುದಕ್ಕೆ ಪ್ರಯೋಜನವೆಂದು ಭಾವ. ।।೩೮।।

**ಪ್ರಾಣೈಃ ಸ್ವೈಃ ಪ್ರಾಣಿನಃ ಪಾಂತಿ ಸಾಧವಃ ಕ್ಷಣಭಂಗುರೈಃ ।**
**ಬದ್ಧವೈರೇಷು ಭೂತೇಷು ಮೋಹಿತೇಷ್ವಾತ್ಮಮಾಯಯಾ ॥೩೯॥**

**ಆತ್ಮಮಾಯಯಾ** ಶ್ರೀಹರಿಯ ಬಂಧಕಶಕ್ತಿಯಿಂದ **ಮೋಹಿತೇಷು** ಭ್ರಾಂತರಾದ (ಮುಗ್ಧರಾದ) **ಭೂತೇಷು** ಪ್ರಾಣಿಗಳು **ಬದ್ಧವೈರೇಷು** ಪರಸ್ಪರ ವೈರವನ್ನೇ ಮಾಡುತ್ತಿರಲು, ಒಬ್ಬರನ್ನೊಬ್ಬರು ಕೊಲ್ಲಲಿಚ್ಛಿಸುವಾಗ **ಸಾಧವಃ ಪ್ರಾಣಿನಃ** ಸಜ್ಜನರು **ಕ್ಷಣಭಂಗುರೈಃ** ತನ್ನಷ್ಟಕ್ಕೆ ತಾನೇ ನಾಶವಾಗುವ ನಶ್ವರಗಳಾದ **ಸ್ವೈಃ** ತಮ್ಮ **ಪ್ರಾಣೈಃ** ಪ್ರಾಣಗಳಿಂದ **ಪ್ರಾಣಿನಃ ಚ** ಪ್ರಾಣಿಗಳನ್ನು **ಪಾಂತಿ** ರಕ್ಷಿಸುವರು. ಅಂದರೆ ತಮ್ಮ ಪ್ರಾಣವನ್ನಿತ್ತಾದರೂ ಮತ್ತೊಬ್ಬರನ್ನು ರಕ್ಷಿಸುವರೆಂದರ್ಥ.

ಸತ್ಯ ಃ- ಸಾಧುತಾಽಸಾಧುತಾ ನ ಭವೇದಿತಿ ಭವಾನಿ ಭವಾನಿ ತತ್ಪಾತಾ ಇತಿ ಭವಭಾವಃ) ನಾನು ಅಸಾಧುವಾಗಬಾರದು. ಆದ್ದರಿಂದ ಭವಾನಿಯೇ ತತ್ಪಾತಾ ಭವಾನಿ ವಿಷಪಾನ ಮಾಡುವವನಾಗುವೆನು ಎಂದು ರುದ್ರದೇವರ ಅಭಿಪ್ರಾಯವೆಂದು ಭಾವ.

ಅವತರಣಿಕಾ :- ತನ್ನಲ್ಲಿ ಇಲ್ಲದಿರುವ ಗುಣಗಳಿಂದ ಸ್ತುತಿಸಿದ್ದನ್ನು ಸಹಿಸದ ರುದ್ರದೇವರು ಎಲ್ಲದಕ್ಕೂ ಚಿಕಿತ್ಸೆಯಂತಿರುವ ಎಲ್ಲದರ ತಾತ್ಪರ್ಯವನ್ನು ಸ್ವಯಂ ತಿಳಿಸುವರು-

**ಪುಂಸಃ ಕೃಪಯತೋ ಭದ್ರೇ ಸರ್ವಾತ್ಮಾ ಪ್ರೀಯತೇ ಹರಿಃ ।**
**ಪ್ರೀತೇ ಹರೌ ಭಗವತಿ ಪ್ರೀಯೇಽಹಂ ಸಚರಾಚರಃ ।**
**ತಸ್ಮಾದಿದಂ ಗರಂ ಭುಂಜೇ ಪ್ರಜಾನಾಂ ಸ್ವಸ್ತಿರಸ್ತು ಮೇ ॥೪೦॥**

**ಹೇ ಭದ್ರೇ** ಮಂಗಳಕರಳೇ **ಕೃಪಯತಃ** ದಯೆಯನ್ನು ಮಾಡುವ **ಪುಂಸಃ** ಪುರುಷನ ವಿಷಯದಲ್ಲಿ **ಸರ್ವಾತ್ಮಾ** ಎಲ್ಲರಿಗೂ ಅಂತರ್ನಿಯಾಮಕನಾದ (ನನಗೂ ಸ್ವಾಮಿಯಾದ) **ಹರಿಃ** ಶ್ರೀಹರಿಯು **ಪ್ರೀಯತೇ** ಪ್ರೀತನಾಗುವನು **ಭಗವತಿ ಹರೌ ಪ್ರೀತೇ** ಐಶ್ವರ್ಯಶಾಲಿಯಾದ ಶ್ರೀಹರಿಯು ಪ್ರೀತನಾದರೆ **ಸಚರಾಚರಃ** ಜಂಗಮಸ್ಥಾವರ ಜಗತ್ತಿನಿಂದ ಕೂಡಿದ **ಅಹಂ** ರುದ್ರನಾದ ನಾನು **ಪ್ರೀಯೇ** ನನ್ನ ಅಧಿಕಾರವು ಸಾರ್ಥಕವಾಯಿತೆಂದು ಸಂತುಷ್ಟನಾಗುತ್ತೇನೆ **ತಸ್ಮಾತ್** ಶ್ರೀಹರಿಯ ಪ್ರೀತಿಕಾರಣವಾದ್ದರಿಂದ **ಇದಂ ಗರಂ** ಈ ವಿಷವನ್ನು **ಭುಂಜೇ** ತಿನ್ನುತ್ತೇನೆ **ಮೇ** ನನ್ನಿಂದ **ಪ್ರಜಾನಾಂ** ಪ್ರಜೆಗಳಿಗೆ **ಸ್ವಸ್ತಿರಸ್ತು** ಕ್ಷೇಮವಾಗಲಿ **ತಸ್ಮಾತ್** ಸರ್ವಸ್ವಾಮಿಯಾದ ಶ್ರೀಹರಿಯಿಂದ **ಮೇ** ನನಗೂ **ಸ್ವಸ್ತಿರಸ್ತು** ಕ್ಷೇಮವಾಗಲಿ ಎಂಬುದು ರುದ್ರದೇವರ ಒಳಗಿನ ಅಭಿಪ್ರಾಯ.

ಸತ್ಯ :- ನಾನು ಹರಿಯ ದಾಸ, ನನ್ನ ದಾಸರು ಚರಾಚರರು ಆದ್ದರಿಂದ ಅವನ ಪ್ರೀತಿ ನಮಗೆ ಅಪೇಕ್ಷಿತವೆಂದು ಭಾವ.

ಲಿಂಗೇರೀ :- ಇಲ್ಲಿ ಸರ್ವಾತ್ಮಾ ಹರಿಃ ಎಂದೇ ಹೇಳುವ ಮೂಲಕ ರುದ್ರದೇವರು ತಮಗೂ ಶ್ರೀಹರಿಯೇ ಸ್ವಾಮಿ ಎಂದು ತಿಳಿಸಿರುವರು. ಇದರಿಂದ ಅವರು ಸರ್ವೋತ್ತಮರಲ್ಲವೆಂದು ಸಿದ್ಧವಾಯಿತು.

ಸರ್ವಾತ್ಮಾ ಎಂಬುದರಿಂದ ಅಂತರ್ಯಾಮಿತ್ವವನ್ನು ಹೇಳಿದ್ದರಿಂದ ರುದ್ರನೇ ಪರಮಾತ್ಮಾ ಎಂಬ ಶಂಕೆಗೆ ಅವಕಾಶವಿಲ್ಲ.

ನಾವೆಲ್ಲರೂ ಮಾಡುವ ನಮಗೆ ವಿಹಿತವಾದ ಧರ್ಮಗಳಿಂದ ಸರ್ವಪುರುಷಾರ್ಥಸಾಧನವಾದ ಭಗವತ್ಪ್ರೀತಿಯನ್ನೇ ಸಂಪಾದಿಸಬೇಕು. ಈ ವಿಷಭಕ್ಷಣದಿಂದಲೂ ಶ್ರೀಹರಿಯ ಪ್ರೀತಿಯೇ ನನಗೂ ಸಂಪಾದ್ಯವಾಗಿದೆ. ಆದ್ದರಿಂದ ಈ ವಿಷಭಕ್ಷಣ ನಾನು ಮಾಡುತ್ತೇನೆ ಎಂದು ರುದ್ರದೇವರು ಪಾರ್ವತಿಗೆ ಹೇಳಿದರು.

ಸಕಲವಿಹಿತಕರ್ಮಗಳಿಂದಲೂ ಭಗವತ್ಪ್ರೀತಿಯೇ ಸಂಪಾದ್ಯ ಎಂಬ ವಿಷಯದಲ್ಲಿ ''ತತ್ಕರ್ಮ ಹರಿತೋಷಂ ಯತ್'' ''ಕಿಮಲಭ್ಯಂ ಭಗವತಿ ಪ್ರಸನ್ನೇ ಶ್ರೀನಿಕೇತನೇ'' ಮುಂತಾದ ಪ್ರಮಾಣಗಳು ಹೇರಳವಾಗಿವೆ. ||೪೦||

**ಶ್ರೀಶುಕ ಉವಾಚ**

**ಏವಮಾಮಂತ್ರ್ಯ ಭಗವಾನ್ ಭವಾನೀಂ ವಿಶ್ವಭಾವನಃ ।**
**ತದ್ವಿಷಂ ಜಗ್ಧುಮಾರೇಭೇ ಪ್ರಭಾವಜ್ಞಾಽನ್ವಮೋದತ ||೪೧||**

**ವಿಶ್ವಭಾವನಃ** ತನಗೆ ಯೋಗ್ಯವಾದ ಇಂದ್ರಾದಿಜಗತ್ತನ್ನು ಸೃಷ್ಟಿಮಾಡುವ ಅಥವಾ ಭಾವಯತೀತಿ ಭಾವನಃ ವಿಶ್ವಃ ವಾಯುಃ ಭಾವನಃ ಯಸ್ಯ ಸಃ ವಾಯುದೇವರೇ ಜನಕರಾಗಿ ಉಳ್ಳ ಎಂದರ್ಥ. ''ವಿಶ್ವೋ ವಾಯುರುದಾಹೃತಃ'' ಎಂದು ಇದೆ. **ಭಗವಾನ್** ಪೂಜ್ಯರಾದ ರುದ್ರದೇವರು **ಏವಂ** ಮೇಲೆ ಹೇಳಿದಂತೆ **ಭವಾನೀಂ** ಪಾರ್ವತಿಯನ್ನು **ಆಮಂತ್ರ್ಯ** ವಿಷ ಕುಡಿಯಲು ಅನುಮತಿ ಕೇಳಿ (ಪಾರ್ವತಿಗೆ ಹೇಳಿ) **ತದ್ವಿಷಂ** ಆ ಹಾಲಾಹಲ (ಕಾಲಕೂಟ) ವಿಷವನ್ನು (ವಾಯುದೇವರು ಕೊಟ್ಟು ಅವರು ಕುಡಿದುಳಿದ ಬಲವಿಲ್ಲದ ಸ್ವಲ್ಪ ವಿಷವನ್ನು) **ಜಗ್ಧುಂ ಆರೇಭೇ** ಕುಡಿಯಲು ಪ್ರಾರಂಭಿಸಿದರು (ಸತೀ ಕುತಃ ಸಮೀಪೇ ಸತಿ ನ ನ್ಯಷೇಧತ ಇತ್ಯತ ಆಹ) ಪಾರ್ವತಿಯು ಹತ್ತಿರವಿದ್ದು ಏಕೆ ನಿಷೇಧಿಸಲಿಲ್ಲವೆಂದರೆ ಹೇಳುವರು. **ಪ್ರಭಾವಜ್ಞಾ** ರುದ್ರದೇವರ ಸಾಮರ್ಥ್ಯವನ್ನು ತಿಳಿದವಳಾದ್ದರಿಂದ **ಅನ್ವಮೋದತ** ಅಂಗೀಕರಿಸಿದಳು. ||೪೧||

ಸತ್ಯ :- ಸತೀಂ ಪ್ರಿಯಾಂ ಎಂಬ ೩೬ನೆಯ ಶ್ಲೋಕದ ನಂತರ ಅಹೋ ಎಂಬ ೩೭ನೆಯ ಶ್ಲೋಕದ ಮೊದಲು ಶಿವ ಉವಾಚ ಎಂಬ ಗ್ರಂಥ ಬಿಟ್ಟು ಹೋಗಿದೆ. ಕೆಲವು ಪುಸ್ತಕಗಳಲ್ಲಿ ಈ ಗ್ರಂಥವು ಕಂಡು ಬರುತ್ತದೆ. ಈ ಗ್ರಂಥ ಆವಶ್ಯಕ. ಇಲ್ಲವಾದರೆ ಮಧ್ಯದಲ್ಲಿ ಮತ್ತೊಬ್ಬರ ಮಾತಿಲ್ಲದೇ ''ಸ್ವಸ್ತಿರಸ್ತು ಮೇ'' ಎಂಬುದರ ನಂತರ ''ಏವಮಾಮಂತ್ರ್ಯ'' ಎಂಬುದಕ್ಕೆ ಮೊದಲು ಶ್ರೀಶುಕ ಉವಾಚ ಎಂದು ಹೇಳಬೇಕಾಗಿಲ್ಲ ಎಂದು ತಿಳಿಯಬೇಕು.

ಅತ್ಯಂತ ಸಾಹಸವನ್ನು ಮಾಡುತ್ತಿದ್ದುದರಿಂದ ಪತ್ನಿಯನ್ನು ಸುಮುಖ ಮಾಡಿಕೊಳ್ಳುವುದಕ್ಕಾಗಿ ಭವಾನಿಯ ಅನುಮತಿಯನ್ನು ರುದ್ರದೇವರು ಪಡೆಯುತ್ತಿದ್ದಾರೆ ಎಂದು ತಿಳಿಯಬೇಕು.

ಆ ವಿಷಯದಲ್ಲಿ ಶ್ರುತ್ಯಾದಿ ಪ್ರಮಾಣಗಳುಂಟು.

''ತಮೇತಾಃ ಸಪ್ತಾಕ್ಷಿತಯ ಉಪತಿಷ್ಠಂತೇ । ತದ್ಯಾ ಇಮಾ ಅಕ್ಷಂಲ್ಲೋಹಿನ್ಯೋ ರಾಜಯಸ್ತಾಭಿರೇನಂ ರುದ್ರೋಽನ್ವಾಯತ್ತಃ ||ಬೃ.ಉ.೪.೨.೨||

ಅವತರಣಿಕಾ ಃ- ತನ್ನಲ್ಲಿ ಇಲ್ಲದಿರುವ ಗುಣಗಳಿಂದ ಸ್ತುತಿಸಿದ್ದನ್ನು ಸಹಿಸದ ರುದ್ರದೇವರು ಎಲ್ಲದಕ್ಕೂ ಚಿಕಿತ್ಸೆಯಂತಿರುವ ಎಲ್ಲದರ ತಾತ್ಪರ್ಯವನ್ನು ಸ್ವಯಂ ತಿಳಿಸುವರು-

**ಪುಂಸಃ ಕೃಪಯತೋ ಭದ್ರೇ ಸರ್ವಾತ್ಮಾ ಪ್ರೀಯತೇ ಹರಿಃ ।**
**ಪ್ರೀತೇ ಹರೌ ಭಗವತಿ ಪ್ರೀಯೇಽಹಂ ಸಚರಾಚರಃ ।**
**ತಸ್ಮಾದಿದಂ ಗರಂ ಭುಂಜೇ ಪ್ರಜಾನಾಂ ಸ್ವಸ್ತಿರಸ್ತು ಮೇ ॥೪೦॥**

**ಹೇ ಭದ್ರೇ** ಮಂಗಳಕರಳೇ **ಕೃಪಯತಃ** ದಯೆಯನ್ನು ಮಾಡುವ **ಪುಂಸಃ** ಪುರುಷನ ವಿಷಯದಲ್ಲಿ **ಸರ್ವಾತ್ಮಾ** ಎಲ್ಲರಿಗೂ ಅಂತರ್ನಿಯಾಮಕನಾದ (ನನಗೂ ಸ್ವಾಮಿಯಾದ) **ಹರಿಃ** ಶ್ರೀಹರಿಯು **ಪ್ರೀಯತೇ** ಪ್ರೀತನಾಗುವನು **ಭಗವತಿ ಹರೌ ಪ್ರೀತೇ** ಐಶ್ವರ್ಯಶಾಲಿಯಾದ ಶ್ರೀಹರಿಯು ಪ್ರೀತನಾದರೆ **ಸಚರಾಚರಃ** ಜಂಗಮಸ್ಥಾವರ ಜಗತ್ತಿನಿಂದ ಕೂಡಿದ **ಅಹಂ** ರುದ್ರನಾದ ನಾನು **ಪ್ರೀಯೇ** ನನ್ನ ಅಧಿಕಾರವು ಸಾರ್ಥಕವಾಯಿತೆಂದು ಸಂತುಷ್ಟನಾಗುತ್ತೇನೆ **ತಸ್ಮಾತ್** ಶ್ರೀಹರಿಯ ಪ್ರೀತಿಕಾರಣವಾದ್ದರಿಂದ **ಇದಂ ಗರಂ** ಈ ವಿಷವನ್ನು **ಭುಂಜೇ** ತಿನ್ನುತ್ತೇನೆ **ಮೇ** ನನ್ನಿಂದ **ಪ್ರಜಾನಾಂ** ಪ್ರಜೆಗಳಿಗೆ **ಸ್ವಸ್ತಿರಸ್ತು** ಕ್ಷೇಮವಾಗಲಿ **ತಸ್ಮಾತ್** ಸರ್ವಸ್ವಾಮಿಯಾದ ಶ್ರೀಹರಿಯಿಂದ **ಮೇ** ನನಗೂ **ಸ್ವಸ್ತಿರಸ್ತು** ಕ್ಷೇಮವಾಗಲಿ ಎಂಬುದು ರುದ್ರದೇವರ ಒಳಗಿನ ಅಭಿಪ್ರಾಯ.

ಸತ್ಯ ಃ- ನಾನು ಹರಿಯ ದಾಸ, ನನ್ನ ದಾಸರು ಚರಾಚರರು ಆದ್ದರಿಂದ ಅವನ ಪ್ರೀತಿ ನಮಗೆ ಅಪೇಕ್ಷಿತವೆಂದು ಭಾವ.

ಲಿಂಗೇರೀ ಃ- ಇಲ್ಲಿ ಸರ್ವಾತ್ಮಾ ಹರಿಃ ಎಂದೇ ಹೇಳುವ ಮೂಲಕ ರುದ್ರದೇವರು ತಮಗೂ ಶ್ರೀಹರಿಯೇ ಸ್ವಾಮಿ ಎಂದು ತಿಳಿಸಿರುವರು. ಇದರಿಂದ ಅವರು ಸರ್ವೋತ್ತಮರಲ್ಲವೆಂದು ಸಿದ್ಧವಾಯಿತು.

ಸರ್ವಾತ್ಮಾ ಎಂಬುದರಿಂದ ಅಂತರ್ಯಾಮಿತ್ವವನ್ನು ಹೇಳಿದ್ದರಿಂದ ರುದ್ರನೇ ಪರಮಾತ್ಮಾ ಎಂಬ ಶಂಕೆಗೆ ಅವಕಾಶವಿಲ್ಲ.

ನಾವೆಲ್ಲರೂ ಮಾಡುವ ನಮಗೆ ವಿಹಿತವಾದ ಧರ್ಮಗಳಿಂದ ಸರ್ವಪುರುಷಾರ್ಥಸಾಧನವಾದ ಭಗವತ್ಪ್ರೀತಿಯನ್ನೇ ಸಂಪಾದಿಸಬೇಕು. ಈ ವಿಷಭಕ್ಷಣದಿಂದಲೂ ಶ್ರೀಹರಿಯ ಪ್ರೀತಿಯೇ ನನಗೂ ಸಂಪಾದ್ಯವಾಗಿದೆ. ಆದ್ದರಿಂದ ಈ ವಿಷಭಕ್ಷಣ ನಾನು ಮಾಡುತ್ತೇನೆ ಎಂದು ರುದ್ರದೇವರು ಪಾರ್ವತಿಗೆ ಹೇಳಿದರು.

ಸಕಲವಿಹಿತಕರ್ಮಗಳಿಂದಲೂ ಭಗವತ್ಪ್ರೀತಿಯೇ ಸಂಪಾದ್ಯ ಎಂಬ ವಿಷಯದಲ್ಲಿ ''ತತ್ಕರ್ಮ ಹರಿತೋಷಂ ಯತ್'' ''ಕಿಮಲಭ್ಯಂ ಭಗವತಿ ಪ್ರಸನ್ನೇ ಶ್ರೀನಿಕೇತನೇ'' ಮುಂತಾದ ಪ್ರಮಾಣಗಳು ಹೇರಳವಾಗಿವೆ. ।।೪೦।।

**ಶ್ರೀಶುಕ ಉವಾಚ**

**ಏವಮಾಮಂತ್ರ್ಯ ಭಗವಾನ್ ಭವಾನೀಂ ವಿಶ್ವಭಾವನಃ ।**
**ತದ್ವಿಷಂ ಜಗ್ಧುಮಾರೇಭೇ ಪ್ರಭಾವಜ್ಞಾಽನ್ವಮೋದತ ।।೪೧।।**

**ವಿಶ್ವಭಾವನಃ** ತನಗೆ ಯೋಗ್ಯವಾದ ಇಂದ್ರಾದಿಜಗತ್ತನ್ನು ಸೃಷ್ಟಿಮಾಡುವ ಅಥವಾ ಭಾವಯತೀತಿ ಭಾವನಃ ವಿಶ್ವಃ ವಾಯುಃ ಭಾವನಃ ಯಸ್ಯ ಸಃ ವಾಯುದೇವರೇ ಜನಕರಾಗಿ ಉಳ್ಳ ಎಂದರ್ಥ. ''ವಿಶ್ವೋ ವಾಯುರುದಾಹೃತಃ'' ಎಂದು ಇದೆ. **ಭಗವಾನ್** ಪೂಜ್ಯರಾದ ರುದ್ರದೇವರು **ಏವಂ** ಮೇಲೆ ಹೇಳಿದಂತೆ **ಭವಾನೀಂ** ಪಾರ್ವತಿಯನ್ನು **ಆಮಂತ್ರ್ಯ** ವಿಷ ಕುಡಿಯಲು ಅನುಮತಿ ಕೇಳಿ (ಪಾರ್ವತಿಗೆ ಹೇಳಿ) **ತದ್ವಿಷಂ** ಆ ಹಾಲಾಹಲ (ಕಾಲಕೂಟ) ವಿಷವನ್ನು (ವಾಯುದೇವರು ಕೊಟ್ಟು ಅವರು ಕುಡಿದುಳಿದ ಬಲವಿಲ್ಲದ ಸ್ವಲ್ಪ ವಿಷವನ್ನು) **ಜಗ್ಧುಂ ಆರೇಭೇ** ಕುಡಿಯಲು ಪ್ರಾರಂಭಿಸಿದರು (ಸತೀ ಕುತಃ ಸಮೀಪೇ ಸತಿ ನ ನ್ಯಷೇಧತ ಇತ್ಯತ ಆಹ) ಪಾರ್ವತಿಯು ಹತ್ತಿರವಿದ್ದು ಏಕೆ ನಿಷೇಧಿಸಲಿಲ್ಲವೆಂದರೆ ಹೇಳುವರು. **ಪ್ರಭಾವಜ್ಞಾ** ರುದ್ರದೇವರ ಸಾಮರ್ಥ್ಯವನ್ನು ತಿಳಿದವಳಾದ್ದರಿಂದ **ಅನ್ವಮೋದತ** ಅಂಗೀಕರಿಸಿದಳು. ।।೪೧।।

ಸತ್ಯ :- ಸತೀಂ ಪ್ರಿಯಾಂ ಎಂಬ ೩೬ನೆಯ ಶ್ಲೋಕದ ನಂತರ ಅಹೋ ಎಂಬ ೩೭ನೆಯ ಶ್ಲೋಕದ ಮೊದಲು ಶಿವ ಉವಾಚ ಎಂಬ ಗ್ರಂಥ ಬಿಟ್ಟು ಹೋಗಿದೆ. ಕೆಲವು ಪುಸ್ತಕಗಳಲ್ಲಿ ಈ ಗ್ರಂಥವು ಕಂಡು ಬರುತ್ತದೆ. ಈ ಗ್ರಂಥ ಆವಶ್ಯಕ. ಇಲ್ಲವಾದರೆ ಮಧ್ಯದಲ್ಲಿ ಮತ್ತೊಬ್ಬರ ಮಾತಿಲ್ಲದೇ ''ಸ್ವಸ್ತಿರಸ್ತು ಮೇ'' ಎಂಬುದರ ನಂತರ ''ಏವಮಾಮಂತ್ರ್ಯ'' ಎಂಬುದಕ್ಕೆ ಮೊದಲು ಶ್ರೀಶುಕ ಉವಾಚ ಎಂದು ಹೇಳಬೇಕಾಗಿಲ್ಲ ಎಂದು ತಿಳಿಯಬೇಕು.

ಅತ್ಯಂತ ಸಾಹಸವನ್ನು ಮಾಡುತ್ತಿದ್ದುದರಿಂದ ಪತ್ನಿಯನ್ನು ಸುಮುಖ ಮಾಡಿಕೊಳ್ಳುವುದಕ್ಕಾಗಿ ಭವಾನಿಯ ಅನುಮತಿಯನ್ನು ರುದ್ರದೇವರು ಪಡೆಯುತ್ತಿದ್ದಾರೆ ಎಂದು ತಿಳಿಯಬೇಕು.

ಆ ವಿಷಯದಲ್ಲಿ ಶ್ರುತ್ಯಾದಿ ಪ್ರಮಾಣಗಳುಂಟು.

''ತಮೇತಾಃ ಸಪ್ತಾಕ್ಷಿತಯ ಉಪತಿಷ್ಠಂತೇ । ತದ್ಯಾ ಇಮಾ ಅಕ್ಷಂಲ್ಲೋಹಿನ್ಯೋ ರಾಜಯಸ್ತಾಭಿರೇನಂ ರುದ್ರೋಽನ್ವಾಯತ್ತಃ ।।ಬೃ.ಉ.೪.೨.೨।।

ವಾಯುರಸ್ಮಾ ಉಪಾಮಂಥತ್ ಪಿನಷ್ಟಿ ಸ್ಮ ಕುನನ್ನಮಾ ।
ಕೇಶೀ ವಿಷಸ್ಯ ಪಾತ್ರೇಣ ಯದ್ರುದ್ರೇಣಾಪಿಬತ್ಸಹ ।

ಪೂಷಣ್ವತೇ ಮರುತ್ವತೇ ವಿಶ್ವೇದೇವಾಯ ವಾಯವೇ ।
ಬಲಮಿಂದ್ರಸ್ಯ ಗಿರಿಶೋ ಗಿರಿಶಸ್ಯ ಬಲಂ ಮರುತ್ ।
ಬಲಂ ತಸ್ಯ ಹರಿಃ ಸಾಕ್ಷಾತ್ ನ ಹರೇರ್ಬಲಮನ್ಯತಃ ।।ಇತ್ಯಾದ್ಯಾಃ।।

ವ್ಯಾಖ್ಯಾತಾಶ್ಚೈತಾ ಬೃಹದಾರಣ್ಯಕಋಗ್ಭಾಷ್ಯಾದೌ ।

ದಕ್ಷಿಣಾಕ್ಷಿಸ್ಥಿತಂ ವಾಯುಂ ಸಪ್ತ ದೇವಾ ಉಪಾಸತೇ ।।ಬೃ.ಭಾ।।
ಅನಂತಾದವರೇಶಾನಾ ತಸ್ಯಾಃ ಪ್ರಾಣಃ ತತಶ್ಚ ವಾಕ್ ।
ತಸ್ಯಾ ರುದ್ರ ಉಮಾ ತಸ್ಮಾದಿಂದ್ರಸ್ತಸ್ಯಾಸ್ತತೋಽಪರೇ ।
ಸೌಪರ್ಣಶ್ರುತಿರಿತ್ಯಾಹ ಸಪ್ತಾಕ್ಷಿತಯ ಇತ್ಯಪಿ ।।ಋ.ಭಾ।।

ವಾಯುರಸ್ಮಾ ಉಪಾಮಂಥದ್ವಿಶ್ವೇದೇವಾಯ ವಾಯವೇ ।
ವಿಶ್ವೈರ್ದೇವೈಃ ಸಹೇತ್ಯಾದ್ಯಾಃ ಪ್ರಮಾ ಅತ್ರಾಪರಾ ಇತಿ ।।

ತಟ್ಟೀಕಾಯಾಮ್, ಈಶಾನಾ ಲಕ್ಷ್ಮೀಃ । ಇತ್ಯಾದ್ಯಾ ಅಪ್ಯಪರಾಃ ಪ್ರಮಾಃ ವಾಯೋಃ ರುದ್ರಾದ್ಯುತ್ತಮತ್ವೇ ಸಂತಿ । ತಂ ಅಕ್ಷಿಣಿ ಸ್ಥಿತಂ ವಾಯುಮೇತಾ ವಕ್ಷ್ಯಮಾಣಾ ಅಕ್ಷಿತಯಃ ಅಕ್ಷೀಣಗುಣಾಃ ಸಪ್ತದೇವತಾ ಉಪತಿಷ್ಠಂತೇ ಸೇವಂತೇ । ತತ್ ತತ್ರ ಯಾ ಇಮಾ ಅಕ್ಷನ್ ಅಕ್ಷಿಣಿ ಲೋಹಿನ್ಯಃ ಲೋಹಿತಾ ರಾಜಯಃ ರೇಖಾಃ ತಾಭಿಃ ತದಧಿಷ್ಠಾನೇನ ಏನಂ ವಾಯುಂ ರುದ್ರೋ ಅನ್ವಾಯತ್ತಃ ತದಧೀನೋ ವರ್ತತೇ ।।

ಶ್ರೀಹರಿಗಿಂತ ಕಡಿಮೆಯಾದವಳು ಲಕ್ಷ್ಮೀದೇವಿಯು. ಅವಳಿಗಿಂತ ಕೆಳಗಿನವರು ವಾಯುದೇವರು. ಬಲಗಣ್ಣಿನಲ್ಲಿರುವ ವಾಯುದೇವರನ್ನು ಏಳು ಜನ ದೇವತೆಗಳು ಸೇವಿಸುವರು. ಕಣ್ಣಿನಲ್ಲಿರುವ ಕೆಂಪು ರೇಖೆಗಳಲ್ಲಿದ್ದು ರುದ್ರದೇವರು ವಾಯುದೇವರನ್ನು ಅನುಸರಿಸುವರು. ವಾಯುದೇವರ ಅಧೀನರಾಗಿರುವರು.

ವಾಯುರಸ್ಮಾ ಉಪಾಮಂಥತ್ ಎಂಬ ಮಂತ್ರಕ್ಕೆ ಋಗ್ಭಾಷ್ಯಟೀಕೆಯಲ್ಲಿ ಹೀಗೆ ಅರ್ಥೈಸಿದ್ದಾರೆ. ಕುತ್ಸಿತಾನ್ನಂ ಅಯತೀತಿ ಕುನನ್ನಮಾ, ಕೇಶೀ ಪ್ರಶಸ್ತಕೇಶವಾನ್ ವಾಯುಃ ಯದ್ ಯದಾ ರುದ್ರೇಣ ಸಹ ಪಾತ್ರೇಣ ವಿಷಸ್ಯ ವಿಷಂ ಅಪಿಬತ್ ತದಾ ತಸ್ಮೈ ರುದ್ರಾಯ, ತದನುಜಿಘೃಕ್ಷಯಾ ಇತಿ ಯಾವತ್ । ತತ್ ವಿಷಂ ಉಪಾಮಂಥತ್, ತಸ್ಮೈವ ವಿವರಣಂ ಪಿನಷ್ಟಿ ಸ್ಮ ಇತಿ । ವಿಶ್ವೇಷಾಂ ರುದ್ರಾದೀನಾಂ ದೇವಃ ವಿಶ್ವೇದೇವ ಇತ್ಯಾದಿ ।।ಋಗ್ಭಾಷ್ಯಟೀಕಾ।।

ಅನ್ನವನ್ನು ಕುತ್ಸಿತಗೊಳಿಸುವ, ಪ್ರಶಸ್ತ ಕೇಶಗಳುಳ್ಳ ವಾಯುದೇವರು ಯಾವಾಗ ರುದ್ರದೇವರೊಡನೆ ಪಾತ್ರೆಯಲ್ಲಿ ವಿಷವನ್ನು ಪಾನ ಮಾಡಿದರೋ ಆಗ ರುದ್ರದೇವರಿಗೆ ಅನುಗ್ರಹ ಮಾಡಲು ವಿಷವನ್ನು ಮರ್ದನ ಮಾಡಿದರು. ಎಂಬುದಾಗಿ ಶ್ರುತಿಯ ಅಭಿಪ್ರಾಯವನ್ನು ತಿಳಿಯಬೇಕು.

ವಾಯುದೇವರು ರುದ್ರದೇವರಿಗಿಂತ ಉತ್ತಮರೆಂಬ ವಿಷಯದಲ್ಲಿ ಹಾಗೂ ವಾಯುದೇವರು ಕೈಯಲ್ಲಿ ವಿಷವನ್ನು ಹಾಕಿಕೊಂಡು ತಿಕ್ಕಿ ಬಲ ಕಡಿಮೆ ಮಾಡಿದರು ಎಂಬ ವಿಷಯದಲ್ಲಿ, ನಂತರ ಸಮಗ್ರವಾದ ವಿಷವನ್ನು ವಾಯುದೇವರೇ ಪಾನ ಮಾಡಿದರು ಎಂಬ ವಿಷಯದಲ್ಲಿ ಶ್ರೀಮದಾಚಾರ್ಯರ ತಾತ್ಪರ್ಯನಿರ್ಣಯದಲ್ಲಿಯ ಮುಂದಿನ ಮಾತುಗಳೂ ಪ್ರಮಾಣಗಳಾಗಿವೆ.

**ತದಾ ಜಗದ್ಗ್ರಾಸಿ ವಿಷಂ ಸಮುತ್ಥಿತಂ ತ್ವದಾಜ್ಞಯಾ ವಾಯುರಧಾತ್ ಕರೇ ನಿಜೇ||**
**ಕಲೇಃ ಸ್ವರೂಪಂ ತದತೀವ ದುಃಸಹಂ ವರಾದ್ವಿಧಾತುಃ ಸಕಲೈಶ್ಚ ದುಃಸ್ಪೃಶಮ್ ।**
**ಕರೇ ವಿಮಥ್ಯಾಸ್ತಬಲಂ ವಿಧಾಯ ದದೌ ಸ ಕಿಂಚಿದ್ ಗಿರಿಶಾಯ ವಾಯುಃ ॥**

**ಸ ತತ್ ಪಿಬನ್ ಕಂಠಗತೇನ ತೇನ ನಿಪಾತಿತೋ ಮೂರ್ಚ್ಛಿತ ಆಶು ರುದ್ರಃ ।**
**ಹರೇಃ ಕರಸ್ಪರ್ಶಬಲಾತ್ಸ ಸಂಜ್ಞಾಮವಾಪ ನೀಲೋಽಸ್ಯ ಗಲಸ್ತದಾಸೀತ್ ॥**

**ಅಥ ತ್ವದಾಜ್ಞಾಂ ಪುರತೋ ವಿಧಾಯ ನಿಧಾಯ ಪಾತ್ರೇ ತಪನೀಯರೂಪೇ ।**
**ಸ್ವಯಂ ತ್ವನಿರ್ಮಥ್ಯ ಬಲೋಪಪನ್ನಂ ಪಪೌ ಸ ವಾಯುಸ್ತದುತಾಸ್ಯ ಜೀರ್ಣಮ್||**
**ತಾ.ನಿ.೧೦.೧೩-೧೬||**

ಈ ಕಾಲಕೂಟವು ಕಲಿಯ ಸ್ವರೂಪವಾಗಿದೆ. ಈ ಕಾಲಕೂಟಕ್ಕೆ ಬ್ರಹ್ಮದೇವರ ವರವೂ ಇದೆ. ಹೀಗಾಗಿ ಯಾರೂ ಇದನ್ನು ಮುಟ್ಟಲೂ ಸಮರ್ಥರಲ್ಲ. ಜಗತ್ತನ್ನೇ ನಾಶ ಮಾಡಲು ಸಮರ್ಥ ಈ ವಿಷ. ಇಂಥ ವಿಷವು ಸಮುದ್ರಮಥನ ಮಾಡುವಾಗ ಮೊದಲು ಹುಟ್ಟಿತು.

ದೇವರ ಆಜ್ಞೆಯಿಂದ ವಾಯುದೇವರು ಆ ವಿಷವನ್ನು ತಮ್ಮ ಕೈಯಲ್ಲಿ ತೆಗೆದುಕೊಂಡರು. ಅದನ್ನು ಮರ್ದನ ಮಾಡಿದರು. ಅದರ ಸಾಮರ್ಥ್ಯವನ್ನು ಕಡಿಮೆಮಾಡಿದರು. ರುದ್ರದೇವರಿಗೆ ಸ್ವಲ್ಪ ಕೊಟ್ಟರು. ಅವರು ಅದನ್ನು ಕುಡಿದರು. ಗಂಟಲಲ್ಲಿರುವ ವಿಷದ ಪ್ರಭಾವದಿಂದ ಮೂರ್ಛಿತರಾಗಿ ಬಿದ್ದರು. ಶ್ರೀಹರಿಯ ಅಮೃತಹಸ್ತದ ಸ್ಪರ್ಶದಿಂದ ಎಚ್ಚರಗೊಂಡರು. ಆಗ ಅವರ ಕುತ್ತಿಗೆ ನೀಲಿಯಾಗಿ ನೀಲಕಂಠ ಎನಿಸಿಕೊಂಡರು.

ದೇವರ ಆಜ್ಞಾನುಸಾರ ವಾಯುದೇವರು ಚಿನ್ನದ ಪಾತ್ರದಲ್ಲಿ ಎಲ್ಲ ವಿಷವನ್ನು ಹಾಕಿಕೊಂಡು ಮರ್ದನ ಮಾಡದೆ ಪಾನ ಮಾಡಿದರು. ಅದೆಲ್ಲವು ಅವರಿಗೆ ಜೀರ್ಣವಾಯಿತು.

ಇನ್ನು ಪದ್ಮಪುರಾಣದ ಉತ್ತರಖಂಡದಲ್ಲಿ ರುದ್ರದೇವರು ಪಾರ್ವತಿಗೆ ಹೇಳಿದ ಮಾತುಗಳು ಹೀಗಿವೆ.

ಮಹಾವಿಷಂ ಮಹಾಘೋರಂ ಸಂವರ್ತಾಗ್ನಿಸಮಪ್ರಭಮ್ ।
ದೃಷ್ಟ್ವಾ ಪ್ರದುದ್ರುವುಃ ಸರ್ವೇ ಭಯಾರ್ತಾ ದೇವಮಾನವಾಃ ॥

ತತಸ್ತದ್ವಿದ್ರುತಾನ್ ದೃಷ್ಟ್ವಾ ಬ್ರಹ್ಮಾ ಲೋಕಪಿತಾಮಹಃ ।
ಜಗಾದ ವಾಯುಂ ತರಸಾ ಹರೇರಾಜ್ಞಾಪುರಃಸರಮ್ ॥

ನಿಃಶೇಷಂ ಕುರು ವಾಯೋ ತ್ವಂ ಲೋಕಸಂಹಾರಕಂ ವಿಷಮ್ ।
ತ್ವದನ್ಯೋ ನಾಸ್ತಿ ತದ್ ಗ್ರಸ್ತುಂ ಸರ್ವಜೀವಹಿತಂ ಕುರು ॥

ಇತಿ ಧಾತುರ್ವಚಃ ಶ್ರುತ್ವಾ ದಶಪ್ರಮತಿರಬ್ರವೀತ್ ।
ಭಕ್ಷಯಾಮಿ ಹರೇರಾಜ್ಞಾಂ ಪುರಸ್ಕೃತ್ಯ ವಿಧೇರ್ವಚಃ ॥

ಹರೇರ್ನಾಮೋಚ್ಚಾರಣೇನ ತದ್ಭಕ್ತ್ಯಾ ಚ ವಿಶೇಷತಃ ।
ಸರ್ವವ್ಯಾಧಿವಿಷಂ ಘೋರಂ ಪಾತ್ರೇ ನ್ಯಸ್ಯ ಕರೇ ದಧತ್ ॥

ಬಿಂದುಮಾತ್ರಂ ಪೃಥಗ್ಗೃಹ್ಯ ತದ್ವಿಷಂ ಮರ್ದಯಂಸ್ತತಃ ।
ಪರೀಕ್ಷಣಾರ್ಥಂ ಚಾನ್ಯೇಷಾಂ ದೇವಾದೀನಾಂ ಚ ಪಾರ್ವತಿ ॥

ಮಮ ಹಸ್ತೇ ದದೌ ಕಿಂಚಿತ್ ಭಕ್ಷಸ್ವೇತಿ ಸ ಮಾರುತಃ ।
ನಾಮಮಂತ್ರೇಣ ಸಹಿತಂ ಮಂತ್ರಾನುಗ್ರಹಮಾದಿಶನ್ ॥

ತದ್ವಿಷಪ್ರಾಶನಾದೇವ ಮಮ ದಾಹೋಽಭ್ಯವರ್ತತ ।
ಜಿಹ್ವಾಗ್ರಧಾರಣಾದೇವ ಮಮ ಪ್ರಾಣಾ ವಿನಿರ್ಗತಾಃ ॥

ಕೃಪಯಾ ಪವಮಾನಸ್ಯ ತಥಾ ನಾಮತ್ರಯೇಣ ಚ ।
ಅಚ್ಯುತಾನಂತಗೋವಿಂದನಾಮಮಹಾತ್ಮ್ಯತಃ ಶುಭೇ ॥

ಜೀವಿತೋಽಸ್ಮಿ ತದಾ ಕಾಲೇ ವಿಷ್ಣೋರ್ನಾಮತ್ರಯಾದಹೋ ।
ಪಶ್ಚಾತ್ತು ತದ್ವಿಷಂ ಸರ್ವಮೇಕೀಕೃತ್ಯ ಸ ಪಾತ್ರಕೇ ॥

ಅನಾಯಾಸಾತ್ಪಪೌ ವಾಯುಃ ಸರ್ವೇಷಾಂ ರಕ್ಷಣಾಯ ಚ ।
ಹರೇಶ್ಚ ಪ್ರೀತಯೇ ದೇವಿ ಬ್ರಹ್ಮಣೋ ವಚನಾತ್ತಥಾ ॥

ಋಚೋಽಬ್ರುವಂಶ್ಚ ದೇವಸ್ಯ ಕೇಶೀತಿ ಬ್ರಹ್ಮವಾದಿನಃ ।
ಇತ್ಥಂ ವಾಯೋರ್ಮಹತ್ವಂ ಹೀ ವಿಷ್ಣುಭಕ್ತಸ್ಯ ಪಾರ್ವತಿ ॥ಇತಿ॥

ಪ್ರಲಯಕಾಲದ ಅಗ್ನಿಯಂತೆ ಮಹಾಘೋರವಾದ ವಿಷವನ್ನು ಕಂಡು ಹೆದರಿ ಎಲ್ಲರೂ ಓಡಿದರು. ಬ್ರಹ್ಮದೇವರಿಗೆ ನಮಸ್ಕರಿಸಿದರು. ಓಡುವ ಅವರನ್ನು ಕಂಡು ಬ್ರಹ್ಮದೇವರು ಶ್ರೀಹರಿಯ ಆಜ್ಞಾಪ್ರಕಾರ ವಾಯುದೇವರಿಗೆ ಈ ಲೋಕಸಂಹಾರಕವಾದ ವಿಷವನ್ನು ಸಂಪೂರ್ಣವಾಗಿ ಇಲ್ಲದಂತೆ ಮಾಡು ಎಂದರು. ನಿನ್ನ ಹೊರತು ಬೇರಾರೂ ಈ ವಿಷವನ್ನು ನುಂಗಲು ಸಮರ್ಥರಿಲ್ಲ. ಜಗತ್ತಿಗೆ ಹಿತ ಮಾಡು ಎಂದು ಹೇಳಿದರು. ಬ್ರಹ್ಮದೇವರ ಮಾತನ್ನು ಕೇಳಿ ವಾಯುದೇವರು ಶ್ರೀಹರಿಯ ಆಜ್ಞೆಯನ್ನು ಸ್ವೀಕರಿಸಿ ಕುಡಿಯುವೆನು ಎಂದು ಹೇಳಿದರು. ಪರಮಾತ್ಮನ ನಾಮೋಚ್ಚಾರಣದಿಂದ, ಅವನಲ್ಲಿಯ ಭಕ್ತಿವಿಶೇಷದಿಂದ ಆ ಘೋರವಾದ ವಿಷವನ್ನೆಲ್ಲ ಒಂದು ಪಾತ್ರೆಯಲ್ಲಿ ಹಾಕಿ ಆ ಪಾತ್ರೆಯನ್ನು ಕೈಯಲ್ಲಿ ಹಿಡಿದುಕೊಂಡರು.

ಆ ಪಾತ್ರೆಯಲ್ಲಿಯ ಒಂದು ಹನಿಯನ್ನು ಪ್ರತ್ಯೇಕವಾಗಿ ತೆಗೆದುಕೊಂಡು ಆ ಹನಿ ವಿಷವನ್ನೂ ತಮ್ಮ ಕೈಯಿಂದ ತಿಕ್ಕಿದರು. ಆ ವಿಷದ ಬಲವನ್ನು ಕುಂದಿಸಿದರು. ನನ್ನ ಕೈಗಿತ್ತು ತಿನ್ನು ಎಂದು ಹೇಳಿದರು. ಜೊತೆಗೆ ನಾಮತ್ರಯಮಂತ್ರವನ್ನೂ ಉಪದೇಶಿಸಿದರು. ಆ ವಿಷವನ್ನು ಕುಡಿದಾಗ ನನಗೆ ದಾಹ ಉಂಟಾಯಿತು. ಆ ವಿಷವನ್ನು ನಾಲಿಗೆ ಮೇಲಿಟ್ಟುಕೊಂಡಾಗಲೇ ಪ್ರಾಣ ಹೋಗುವಂತಾಯಿತು. ವಾಯುದೇವರ ಅನುಗ್ರಹದಿಂದ ಹಾಗೂ ಅಚ್ಯುತ-ಅನಂತ-ಗೋವಿಂದ ಎಂಬ ನಾಮತ್ರಯ ಮಂತ್ರದ ಸಾಮರ್ಥ್ಯದಿಂದ ನಾನು ಬದುಕಿರುವೆನು. ನಾನು ಬದುಕಿರುವುದು ಆಶ್ಚರ್ಯವೇ ಸರಿ.

ನಂತರ ಪಾತ್ರೆಯಲ್ಲಿಯ ಎಲ್ಲ ವಿಷವನ್ನು, ಎಲ್ಲರ ರಕ್ಷಣೆಗಾಗಿ, ಶ್ರೀಹರಿಯ ಪ್ರೀತಿಗಾಗಿ ಬ್ರಹ್ಮದೇವರ ಮಾತಿನಂತೆ ಅನಾಯಾಸವಾಗಿ ಪಾನಮಾಡಿದರು. ಹೇ ಪಾರ್ವತಿಯೇ ! ವಿಷ್ಣುಭಕ್ತರಾದ ವಾಯುದೇವರ ಮಹತ್ವ ಇಷ್ಟು ಅಪಾರವಾಗಿದೆ. ಈ ವಿಷಯವನ್ನು ''ಕೇಶೀ ವಿಷಸ್ಯ ಪಾತ್ರೇಣ...'' ಎಂಬ ಋಗ್ವೇದಮಂತ್ರವು ಹೇಳುವದೆಂದು ಬ್ರಹ್ಮಜ್ಞಾನಿಗಳು ಹೇಳುವರು. ।।೪೧।।

**ತತಃ ಕರತಲೀಕೃತ್ಯ ವ್ಯಾಪಿ ಹಾಲಾಹಲಂ ವಿಷಮ್ ।**
**ಅಭಕ್ಷಯನ್ ಮಹಾದೇವಃ ಕೃಪಯಾ ಭೂತಭಾವನಃ ।।೪೨।।**

**ತತಃ** ಪಾರ್ವತಿಯು ಒಪ್ಪಿದ ಮೇಲೆ **ಭೂತಭಾವನಃ** ಪ್ರಾಣಿಗಳ ಉತ್ಪಾದಕರಾದ **ಮಹಾದೇವಃ** ರುದ್ರದೇವರು **ಕೃಪಯಾ** ಭೂತದಯೆಯಿಂದ **ಕರತಲೀಕೃತ್ಯ** ವಾಯುದೇವರು ಹಿಂಡಿಕೊಟ್ಟಿದ್ದರಿಂದ ವಿಷವು ಅಲ್ಪವಾದ್ದರಿಂದ ಕೈಯಲ್ಲಿ ಇಟ್ಟುಕೊಂಡು **ವ್ಯಾಪಿ** ಕೈಯನ್ನು ವ್ಯಾಪಿಸಿದ **ಹಾಲಾಹಲಂ ವಿಷಂ** ಹಾಲಾಹಲವಿಷವನ್ನು **ಅಭಕ್ಷಯತ್** ತಿಂದರು. **ವ್ಯಾಪಿ** ಜಗದ್ವ್ಯಾಪಿಯಾದ ಎಲ್ಲ ಹಾಲಾಹಲ ವಿಷವನ್ನು ಕೈಯಲ್ಲಿ

ಹಿಡಿಯುವಂತೆ ಮಾಡಿ **ತತಃ** ವಾಯುದೇವರು **ಅಭಕ್ಷಯತ್** ತಿಂದರು. ''ತತಂ ವೀಣಾದಿವಾದ್ಯೇ ಚ ಪವಮಾನೇ ತತಃ ಪುನಃ'' ಎಂದು ವಿಶ್ವಕೋಶವಿದೆ.

ಮಾಧವ ಭಾಷ್ಯದಲ್ಲಿ೮ನೇ ಅಷ್ಟಕ, ಏಳನೆಯ ಅಧ್ಯಾಯ, ೨೪ನೇ ವರ್ಗದಲ್ಲಿ, ''ಕೇಶೀತಿ ಸಪ್ತರ್ಚಂ ಅಷ್ಟಮಂ ಸೂಕ್ತಂ ಅಗ್ನಿಸೂರ್ಯವಾಯುದೇವತಾಕಂ'' ಎಂದು ಹೇಳಿರುವದರಿಂದ ವಾಯುಪರತ್ವ ಅನುಪಪನ್ನವಲ್ಲ. ।।೪೨।।

**ತಸ್ಯಾಪಿ ದರ್ಶಯಾಮಾಸ ಸ್ವವೀರ್ಯಂ ಗಲಕಲ್ಮಷಃ ।**
**ಯಚ್ಚಕಾರ ಗಲೇ ನೀಲಂ ತಚ್ಚ ಸಾಧೋರ್ವಿಭೂಷಣಮ್ ।।೪೩।।**

**ಗಲಕಲ್ಮಷಃ** ರುದ್ರದೇವರ ಕಂಠದಲ್ಲಿ ನಿಂತ ವಿಷದ ಗುರುತು **ತಸ್ಯಾಪಿ** ಇಂದ್ರಾದಿಗಳಿಗೆ ಒಡೆಯರಾದ, ಮಹಾಸಮರ್ಥರಾದ, ಸ್ವಲ್ಪ ವಿಷವನ್ನು ಕುಡಿದವರಾಗಿದ್ದರೂ ರುದ್ರದೇವರಿಗೆ **ಸ್ವವೀರ್ಯಂ** ತನ್ನ ಸಾಮರ್ಥ್ಯವನ್ನು **ದರ್ಶಯಾಮಾಸ** ತೋರಿಸಿತು. **ಯತ್ ಗಲೇ ನೀಲಂ ಚಕಾರ** ಕುತ್ತಿಗೆಯಲ್ಲಿ ನೀಲಿಯನ್ನೇನು ಉಂಟುಮಾಡಿತೋ **ತತ್** ಅದು **ಸಾಧೋಃ** ಪರಪೀಡೆಯಿಂದ ಪೀಡಿತರಾದ ಕೃಪಾಲುಗಳಾದ ಅವರಿಗೆ **ವಿಭೂಷಣಂ** ಅಲಂಕಾರವೇ ಹೊರತು ದೋಷವಲ್ಲ.

ಅಥವಾ **ಗಲಕಲ್ಮಷಃ** ಕುತ್ತಿಗೆಯಲ್ಲಿ ಕಪ್ಪುಂಟಾದ ರುದ್ರದೇವರು **ತಸ್ಯಾಪಿ** ತಾವು ತೆಗೆದುಕೊಂಡ ಅಲ್ಪವಿಷದ **ಸ್ವವೀರ್ಯಂ** ಸ್ವಾಭಾವಿಕವಾದ ಸಾಮರ್ಥ್ಯವನ್ನು **ದರ್ಶಯಾಮಾಸ** ತೋರಿಸಿದರು. ಹೀಗೂ ಅರ್ಥ ಮಾಡಿರುವರು.

ಶ್ರೀಸತ್ಯಧರ್ಮರ ಪ್ರಕಾರ **ಗಲಕಿಲ್ಬಿಷಃ** ಎಂದು ಪಾಠ. ಗಲಸ್ಯ ಕಿಲ್ಬಿಷಂ ಯಸ್ಮಿನ್ ಸಃ ಗಲಕಿಲ್ಬಿಷಃ ಎಂದು ವಿಗ್ರಹ. ಕಿಲ್ಬಿಷ ಎಂದರೆ ವಿಷ ಎಂದು ಅರ್ಥ. ।।೪೩।।

**ತಪ್ಯಂತೇ ಲೋಕತಾಪೇನ ಸಾಧವಃ ಪ್ರಾಯಶೋ ಜನಾಃ ।**
**ಪರಮಾರಾಧನಂ ತದ್ಧಿ ಪುರುಷಸ್ಯಾಖಿಲಾತ್ಮನಃ ।।೪೪।।**

**ಸಾಧವಃ ಜನಾಃ** ಭಗವದ್ಭಕ್ತರಾದ ಸಜ್ಜನರು **ಪ್ರಾಯಶಃ** ಬಹಳವಾಗಿ **ಲೋಕತಾಪೇನ** ಜನರ ದುಃಖದಿಂದ **ತಪ್ಯಂತೇ** ತಾವು ದುಃಖಿತರಾಗುತ್ತಾರೆ. **ತತ್** ಸಜ್ಜನರು ದುಃಖಪಡುವುದು **ಅಖಿಲಾತ್ಮನಃ** ಎಲ್ಲರಿಗೂ ಸ್ವಾಮಿಯಾದ **ಪುರುಷಸ್ಯ** ಶ್ರೀಹರಿಯ **ಪರಮಾರಾಧನಂ** ಮುಖ್ಯವಾದ ಆರಾಧನೆಯು ಶ್ರೀಹರಿಯ ತೃಪ್ತಿಯೇ ಪ್ರಯೋಜನವೆಂದರ್ಥ. **ಹಿ** ಇದು ಪ್ರಸಿದ್ಧವಾಗಿದೆ.

ಅಸಜ್ಜನರು ದುಃಖಿತರಾಗುವದಿಲ್ಲವೆಂಬುದನ್ನು ಪ್ರಾಯಃ ಎಂಬುದರಿಂದ ಸೂಚಿಸಿರುವರು. ಕೀರ್ತಿಗಾಗಿ ಪ್ರವೃತ್ತರಾಗುವವರನ್ನು, ಅಸಮರ್ಥರನ್ನು ವ್ಯಾವೃತ್ತಿ ಮಾಡಲು ಪ್ರಾಯಃ ಎಂದಿರುವರು. ।।೪೪।।

**ನಿಶಾಮ್ಯ ಕರ್ಮ ತಚ್ಛಂಭೋರ್ದೇವದೇವಸ್ಯ ಮಿಳ್ಹುಷಃ ।**
**ಪ್ರಜಾ ದಾಕ್ಷಾಯಣೀ ಬ್ರಹ್ಮಾ ವೈಕುಂಠಶ್ಚ ಶಶಂಸಿರೇ ॥೪೫॥**

**ಮೀಳ್ಹುಷಃ (ಮೀಡುಷಃ)** ಭಕ್ತರ ಅಭೀಷ್ಟವನ್ನು ಕೊಡುವ **ದೇವದೇವಸ್ಯ** ಇಂದ್ರಾದಿಗಳಿಗೆ ದೇವತೆಯಾದ **ಶಂಭೋಃ** ರುದ್ರದೇವರ **ತತ್ ಕರ್ಮ** ವಿಷಪಾನವೆಂಬ ಆ ಕಾರ್ಯವನ್ನು **ನಿಶಾಮ್ಯ** ನೋಡಿ **ಪ್ರಜಾಃ** ಜನರು **ದಾಕ್ಷಾಯಣೀ** ಸತೀರೂಪದಲ್ಲಿರುವ ಪಾರ್ವತಿಯು (ಹಿಂದೆ ದಕ್ಷನ ಮಗಳು) **ಬ್ರಹ್ಮಾ** ಬ್ರಹ್ಮದೇವರು **ವೈಕುಂಠಃ ಚ** ಶ್ರೀಹರಿಯು **ಶಶಂಸಿರೇ** ರುದ್ರದೇವರನ್ನು (ವಾಯುದೇವರನ್ನೂ) ಹೊಗಳಿದರು.

ಲಿಂಗೇರೀ ಃ- ಶ್ರೀಹರಿಯು ಹೊಗಳಿದನೆಂದು ಹೇಳಿದ್ದರಿಂದ ರುದ್ರ-ವಾಯುದೇವರ ಯಶಸ್ಸಿಗಾಗಿ ಶ್ರೀಹರಿಯು ಸಮರ್ಥನಾದರೂ ವಿಷಪಾನ ಮಾಡಿಲ್ಲವೆಂದು ತಿಳಿದು ಬರುವದು. ''ಪ್ರಾಣಾದೀನಾಂ ವಿಶ್ವಸೃಜಾಂ ಶಕ್ತಯೋ ಯಾಃ ಪರಸ್ಯ ತಾಃ'' ಎಂದು ದಶಮಸ್ಕಂಧದಲ್ಲಿ ಹೇಳಿರುವದರಿಂದ ಛಾತ್ರೇಣ ಉಪಾಧ್ಯಾಯಂ ಅದ್ರಾಕ್ಷೀತ್ ಎಂಬಂತೆ ಪ್ರಧಾನ-ಅಪ್ರಧಾನವಾಗಿ ಮಾಡಿದ ವಿಷಪಾನಸಾಮರ್ಥ್ಯ ವಾಯು-ರುದ್ರರಲ್ಲಿದ್ದುದು ಸ್ವತಂತ್ರಭಗವದಧೀನವಾದ್ದರಿಂದ ಹರಿಯ ಸಾಮರ್ಥ್ಯದಲ್ಲಿ ವಿವಾದವೇ ಇಲ್ಲ. ಆದ್ದರಿಂದ ವಾಯು-ರುದ್ರರ ಕೀರ್ತಿಗಾಗಿಯೇ ಪರಮಾತ್ಮನು ಈ ಕಾರ್ಯವನ್ನು ಬಿಟ್ಟಿದ್ದಾನೆ ಎಂಬುದು ಸಿದ್ಧ. ॥೪೫॥

**ಪ್ರಸ್ಕನ್ನಂ ಪಿಬತಃ ಪಾಣೇರ್ಯತ್ ಕಿಂಚಿಜ್ಜಗೃಹುಃ ಸ್ಮ ತತ್ ।**
**ವೃಶ್ಚಿಕಾಹಿವಿಷೌಷಧ್ಯೋ ದಂದಶೂಕಾಶ್ಚ ಯೇ ಪರೇ ॥೪೬॥**

**॥ ಇತಿ ಶ್ರೀಮದ್ಭಾಗವತೇ ಅಷ್ಟಮಸ್ಕಂಧೇ ಸಪ್ತಮೋಽಧ್ಯಾಯಃ ॥**

**ಪಿಬತಃ** ವಿಷವನ್ನು ಕುಡಿಯುತ್ತಿದ್ದ ರುದ್ರದೇವರ **ಪಾಣೇಃ** ಕೈಯಿಂದ **ಪ್ರಸ್ಕನ್ನಂ** ಜಾರಿದ **ಯತ್ ಕಿಂಚಿತ್** ಯಾವ ಸ್ವಲ್ಪ ವಿಷವೋ **ತತ್** ಅದನ್ನು **ವೃಶ್ಚಿಕ** ಚೇಳುಗಳು **ಅಹಿ** ಹಾವುಗಳು **ವಿಷೌಷಧ್ಯಃ** ವತ್ಸನಾಭಿ ಮುಂತಾದವು (ಲಾಂಗಲಿ ಮೊದಲಾದ ವಿಷಬಳ್ಳಿಗಳು) **ದಂದಶೂಕಾಃ** ವಿಷದಂತ ಉಳ್ಳ ದೊಡ್ಡ ಹಾವುಗಳು **ಯೇ ಅಪರೇ** ಉಳಿದ ಹುಲಿ ಮೊದಲಾದವು **ಜಗೃಹೇ** ಸ್ವೀಕರಿಸಿದವು.

ಆ ವಿಷವನ್ನು ತಮ್ಮ ಪ್ರಾಣರಕ್ಷಣೆಗೆ ಬಳಸಿಕೊಂಡವು. ಉಳಿದ ಸ್ವಲ್ಪ ವಿಷವೇ ಇಷ್ಟು ಹರಡಿದೆ ಎಂದು ಭಾವ. ''ವೃಶಿಕಶ್ಚ ದ್ರುಮೇ ರಾಶೌ ಶೂಕಕೀಟೇ'' ಎಂದು ವಿಶ್ವವಿದೆ.

**ಇಲ್ಲಿಗೆ ಏಳನೇ ಅಧ್ಯಾಯವು ಮುಗಿಯಿತು.**

★★★

 

# ಅಥ ಅಷ್ಟಮೋಽಧ್ಯಾಯಃ

**ಶ್ರೀಶುಕ ಉವಾಚ**

**ಪೀತೇ ಗರೇ ವೃಷಾಂಕೇಣ ಪ್ರೀತಾಸ್ತೇಽಮರದಾನವಾಃ ।**
**ಮಮಂಥುಸ್ತರಸಾ ಸಿಂಧುಂ ಹವಿರ್ಧಾನೀ ತತೋಽಭವತ್ ॥೧॥**

**ವೃಷಾಂಕೇಣ** ನಂದಿಯೇ ಧ್ವಜವಾಗಿ ವಾಹನವಾಗಿ ಚಿಹ್ನೆಯಾಗಿ ಉಳ್ಳ ರುದ್ರದೇವರಿಂದ **ಗರೇ** ವಿಷವು **ಪೀತೇ ಸತಿ** ಕುಡಿಯಲ್ಪಡುತ್ತಿರಲು **ತೇ** ಸಮುದ್ರ ಮಥನದಲ್ಲಿ ತೊಡಗಿದ **ಅಮರದಾನವಾಃ** ದೇವತೆಗಳು ಮತ್ತು ದೈತ್ಯರು **ಪ್ರೀತಾಃ ಸಂತಃ** ಸಂತುಷ್ಟರಾಗಿ **ತರಸಾ** ವೇಗದಿಂದ **ಸಿಂಧುಂ** ಸಮುದ್ರವನ್ನು **ಮಮಂಥುಃ** ಕಡೆದರು **ತತಃ** ಆ ಸಮುದ್ರದಿಂದ **ಹವಿರ್ಧಾನೀ** ಹವಿಸ್ಸಾದ ಹಾಲನ್ನು ಧರಿಸಿದ (ಕೊಡುವ) ಕಾಮಧೇನುವು **ಅಭವತ್** ಜನಿಸಿತು.

ಸತ್ಯ ಃ- ''ಅಂಕಃ ಸ್ಥಾನೇಽಂತಿಕೇ ಮಂತೌ ರೂಪಕೋಚ್ಚುಂಗಲಕ್ಷ್ಮಸು'' ಎಂದು ವಿಶ್ವವಿದೆ. ಇಲ್ಲಿ ಹರ ಮುಂತಾದ ಹೆಸರನ್ನು ಹೇಳದೇ ವೃಷಾಂಕ ಎಂಬ ಪದವಿಟ್ಟಿದ್ದರಿಂದ ವೃಷಃ ವೃಷಭರೂಪವು ಅಂಕಃ ಸ್ಥಾನಂ ಸತ್ಯಕಾಮೋಪದೇಶಸ್ಯ ಯಸ್ಯ ಸಃ ವೃಷಾಂಕಃ ಎಂಬ ವಿಗ್ರಹದಿಂದ ಸತ್ಯಕಾಮನ ಉಪದೇಶಕ್ಕೆ ಕಾರಣವಾದ ವೃಷಭರೂಪ ಧರಿಸಿದ ವಾಯುದೇವರೂ ವಿಷವನ್ನು ಕುಡಿಯುತ್ತಿರಲು ಎಂಬ ಅಭಿಪ್ರಾಯವನ್ನು ಸೂಚಿಸುವರು. ''ಅಥ ಹೈನಮೃಷಭೋಽಭ್ಯುವಾದ'' ''ವಾಯುರ್ವೃಷಭರೂಪಃ ಸನ್'' ಎಂದು ಛಾಂದೋಗ್ಯ ಉಪನಿಷತ್ತು ಮತ್ತು ಭಾಷ್ಯದಲ್ಲಿ ಹೇಳಿದೆ. ಹವಿಃ ಧೀಯತೇ ಅಸ್ಯಾಂ ಇತಿ ಹವಿರ್ಧಾನೀ ಎಂದು ವಿಗ್ರಹ. ॥೧॥

**ತಾಮಗ್ನಿಹೋತ್ರೀಮೃಷಯೋ ಜಗೃಹುರ್ಬ್ರಹ್ಮವಾದಿನಃ ।**
**ಯಜ್ಞಸ್ಯ ದೇವಪಾನಸ್ಯ ಮೇಧ್ಯಾಯ ಹವಿಷೇ ನೃಪ ॥೨॥**

**ಹೇ ನೃಪ** ಪರೀಕ್ಷಿದ್ರಾಜನೇ **ಬ್ರಹ್ಮವಾದಿನಃ** ಪರಬ್ರಹ್ಮ ಪ್ರತಿಪಾದಕ ವೇದಾರ್ಥ ವಿಚಾರ ಮಾಡುವ **ಋಷಯಃ** ತ್ರಿಕಾಲಜ್ಞಾನಿಗಳಾದ ಮುನಿಗಳು **ಯಜ್ಞಸ್ಯ** ಯಜ್ಞಕ್ಕೂ **ದೇವಪಾನಸ್ಯ** ದೇವತೆಗಳ ಪಾನಕ್ಕೆ ಯೋಗ್ಯವಾದ ಸೋಮರಸಕ್ಕೂ ಅಥವಾ ದೇವತೆಗಳ ಪಾನವಾದ ಸೋಮರಸವುಳ್ಳ ಯಜ್ಞದ **ಮೇಧ್ಯಾಯ** ಪವಿತ್ರವಾದ **ಹವಿಷೇ** ಹವಿಸ್ಸಿಗಾಗಿ **ತಾಂ** ಆ ಸಮುದ್ರದಿಂದ ಬಂದ **ಅಗ್ನಿಹೋತ್ರೀಂ** ಯಜ್ಞಸಾಧನವಾದ ಕಾಮಧೇನುವನ್ನು **ಜಗೃಹುಃ** ತಮಗೆ ಬೇಕೆಂದು ತೆಗೆದುಕೊಂಡರು.

**ದೇವಯಾನಸ್ಯ** ಎಂಬ ಪಾಠದಲ್ಲಿ ಬ್ರಹ್ಮಲೋಕಪ್ರಾಪಕಮಾರ್ಗವಾದ ಎಂದರ್ಥ.

**ತತ ಉಚ್ಚೈಃಶ್ರವಾ ನಾಮ ಹಯೋಽಭೂಚ್ಚಂದ್ರಪಾಂಡುರಃ ।**
**ತಸ್ಮಿನ್ ಬಲಿಃ ಸ್ಪೃಹಾಂ ಚಕ್ರೇ ನೇಂದ್ರ ಈಶ್ವರಶಿಕ್ಷಯಾ ॥೩॥**

**ತತಃ** ಅನಂತರ ಅಥವಾ ಸಮುದ್ರದಿಂದ **ಚಂದ್ರಪಾಂಡುರಃ** ಚಂದ್ರನಂತೆ ಬೆಳ್ಳಗಿರುವ **ಉಚ್ಚೈಃಶ್ರವಾಃ ನಾಮ** ಉಚ್ಚೈಃಶ್ರವ ಎಂಬ ಹೆಸರಿನ **ಹಯಃ** ಕುದುರೆಯು **ಅಭೂತ್** ಹುಟ್ಟಿತು **ತಸ್ಮಿನ್** ಆ ಕುದುರೆಯಲ್ಲಿ **ಬಲಿಃ** ಬಲಿಚಕ್ರವರ್ತಿಯು **ಸ್ಪೃಹಾಂ ಚಕ್ರೇ** ತನಗೆ ಬೇಕೆಂದು ಆಸೆ ಪಟ್ಟನು **ಈಶ್ವರಶಿಕ್ಷಯಾ** ಕಡೆಯುವ ಮೊದಲೇ ಶ್ರೀಹರಿಯ ಉಪದೇಶದಂತೆ **ಇಂದ್ರಃ ನ** ಇಂದ್ರನು ಆಸೆ ಪಡಲಿಲ್ಲ. ॥೩॥

**ತತ ಐರಾವತೋ ನಾಮ ವಾರಣೇಂದ್ರೋ ವಿನಿರ್ಗತಃ ।**
**ದಂತೈಶ್ಚತುರ್ಭಿಃ ಶ್ವೇತಾದ್ರೇರ್ಹರನ್ ಭಗವತೋ ಮಹಮ್ ॥೪॥**

**ತತಃ** ಅನಂತರ ಸಮುದ್ರದಿಂದ **ಐರಾವತೋ ನಾಮ** ಐರಾವತ ಎಂಬ **ಚತುರ್ಭಿಃ ದಂತೈಃ** ನಾಲ್ಕು ಕೋರೆಹಲ್ಲುಗಳಿಂದ ಕೂಡಿದ **ಶ್ವೇತಾಭಃ** ಬಿಳೀ ಕಾಂತಿಯುಳ್ಳ **ವಾರಣೇಂದ್ರಃ** ಶ್ರೇಷ್ಠವಾದ ಆನೆಯು **ಭಗವತಃ** ರುದ್ರದೇವರ **ಶ್ವೇತಾದ್ರೇಃ** ಬಿಳಿಯಾದ ಕೈಲಾಸ ಪರ್ವತದ **ಮಹಂ** ಕಾಂತಿಯನ್ನು **ಹರನ್ ಸನ್** ಸ್ವೀಕರಿಸಿ **ವಿನಿರ್ಗತಃ** ಹೊರಬಂದಿತು. **ತಂ ತು** ಅದನ್ನಾದರೂ **ಹರಿಃ** ಇಂದ್ರನು **ಸಮಗ್ರಹೀತ್** ತೆಗೆದುಕೊಂಡನು.

ಸತ್ಯ :- ''ಶ್ವೇತಾಭಃ ಎಂಬ ಪಾಠವೂ ಇದೆ. ಬಿಳಿ ಬಣ್ಣ ಉಳ್ಳ ಎಂದು ಅರ್ಥ. ಶ್ವೇತಾದ್ರೇಃ ಎಂಬ ಪಾಠದಲ್ಲಿ ಚಂದ್ರಪಾಂಡುರಃ ಎಂಬ ಪದವನ್ನು ಅನುವೃತ್ತಿ ಮಾಡಿಕೊಂಡು ಬಿಳಿಯ ಆನೆ ಜನಿಸಿತು ಎಂದರ್ಥ ಮಾಡಬೇಕು. ಅಥವಾ ಶ್ವೇತಾದ್ರೇಃ ಎಂದು ಹೇಳಿದ್ದರಿಂದಲೇ ಆನೆಯು ಬಿಳಿ ಎಂದರ್ಥವಾಗುವುದುರಿಂದ ಚಂದ್ರಪಾಂಡುರಃ ಎಂಬುದನ್ನು ಅನುವೃತ್ತಿ ಮಾಡಬೇಕಿಲ್ಲವೆಂದೂ ಹೇಳಬಹುದು. ಕೆಲವರು (ಛಲಾರೀ ಆಚಾರ್ಯರು) ಮಹಂ ಎಂದರೆ ಮಹತ್ವಂ ಎಂದು ಅರ್ಥ ಮಾಡಿರುವರು. ॥೪॥

**ತತೋऽಭವತ್ ಪಾರಿಜಾತಃ ಸುರಲೋಕವಿಭೂಷಣಃ ।**
**ಪೂರಯತ್ಯರ್ಥಿನೋ ಯೋऽರ್ಥೈಃ ಶಶ್ವದ್ ಭುವಿ ಯಥಾ ಭವಾನ್ ॥೫॥**

**ತತಃ ಚ** ಅನಂತರ ಸಮುದ್ರದಿಂದ **ಯಃ** ಯಾವ **ಪಾರಿಜಾತಃ** ಪಾರಿಜಾತ ವೃಕ್ಷವು **ಭುವಿ** ಭೂಮಿಯಲ್ಲಿ **ಯಥಾ ಭವಾನ್** ನಿನ್ನಂತೆಯೇ (ನೀನು ಕೇಳುವವರ ಇಷ್ಟವನ್ನು ಪೂರೈಸುವಂತೆ) ದೇವಲೋಕದಲ್ಲಿ **ಅರ್ಥಿನಃ** ಯಾಚಕರನ್ನು **ಶಶ್ವತ್** ಯಾವಾಗಲೂ **ಅರ್ಥೈಃ ಚ** ಅವರವರು ಅಪೇಕ್ಷಿಸಿದ ಪದಾರ್ಥಗಳಿಂದ **ಪೂರಯತಿ** ಇಷ್ಟವನ್ನು ಪೂರೈಸುವುದೋ **ಸಃ ಚ** ಆ **ಸುರಲೋಕವಿಭೂಷಣಃ** ದೇವಲೋಕಕ್ಕೆ ಅಲಂಕಾರವಾದ **ಪಾರಿಜಾತಃ** ಪಾರಿಜಾತವೆಂಬ ಕಲ್ಪವೃಕ್ಷವು **ಅಭವತ್** ಜನಿಸಿತು.

ಸತ್ಯ ಃ- ಇಲ್ಲಿ ಕಲ್ಪವೃಕ್ಷಕ್ಕೆ ನಿನ್ನನ್ನು ಬಿಟ್ಟು ಬೇರೆ ದೃಷ್ಟಾಂತಬೇಕಿಲ್ಲ ಎನ್ನುವರು. ಶುಕಾಚಾರ್ಯರು. ಇಲ್ಲಿ ''ಶಶ್ವದ್ ಭವಾನ್ ಯಥಾ'' ಎಂದಿದ್ದಾರೆ. ಇದರಿಂದ ಸಂಕಲ್ಪಿಸಿದಾಗ ಮಾತ್ರ ಕಲ್ಪವೃಕ್ಷವು ಅಭೀಷ್ಟಗಳನ್ನು ಪೂರೈಸುತ್ತದೆ. ನೀನು ಮಾತ್ರ ಅಪೇಕ್ಷೆ ಮಾಡದಿರುವಾಗಲೂ ನಮ್ಮ ಸಕಲ ಅಭೀಷ್ಟಗಳನ್ನು ಪೂರ್ಣಮಾಡುತ್ತಿ . ಆದ್ದರಿಂದ ಕಲ್ಪವೃಕ್ಷಕ್ಕಿಂತಲೂ ನೀನು ಅಧಿಕನಾಗಿರುವಿ ಎಂದು ಹೇಳಿದಂತಾಯಿತು.''ಶೈಲಾ ಇವೋನ್ನತಾಃ ಸಂತಃ ಕಿಂತು ಪ್ರಕೃತಿಕೋಮಲಾಃ'' ಎಂಬಂತೆ ಸಜ್ಜನರು ಪರ್ವತದಂತೆ ಬಹು ಎತ್ತರದಲ್ಲಿರುವವರಾದರೂ ಸ್ವಭಾವದಿಂದ ಬಹಳ ಮೃದುಗಳು ಎಂದು ಭಾವ. ಯಾವ ಅಪೇಕ್ಷೆಯಿಲ್ಲದ ಅವಧೂತರಾದ ಶುಕಾಚಾರ್ಯರ ಮುಖದಿಂದ ಬಂದ ಈ ಮಾತು ಔಪಚಾರಿಕವಲ್ಲ ಸ್ವಾಭಾವಿಕವಾದುದು ದಾಕ್ಷಿಣ್ಯದಿಂದ ಹೇಳಿದ್ದಲ್ಲವೆಂದು ತಿಳಿಯಬೇಕು. ॥೫॥

**ತತಶ್ಚಾಪ್ಸರಸೋ ಜಾತಾ ನಿಷ್ಕಕಂಠ್ಯಃ ಸುವಾಸಸಃ ।**
**ರಮಣ್ಯಃ ಸ್ವರ್ಗಿಣಾಂ ವಲ್ಗುಗತಿಲೀಲಾವಲೋಕನೈಃ ॥೬॥**

**ತತಃ** ಅನಂತರ ಸಮುದ್ರದಿಂದ **ನಿಷ್ಕಕಂಠ್ಯಃ** ಆಭರಣಗಳಿಂದ ಕೂಡಿದ ಕಂಠಗಳುಳ್ಳ **ಸುವಾಸಸಃ** ಉತ್ತಮ ವಸ್ತ್ರಗಳುಳ್ಳ **ಸ್ವರ್ಗಿಣಾಂ** ಸ್ವರ್ಗದಲ್ಲಿರುವವರಿಗೆ **ವಲ್ಗು** ಸುಂದರವಾದ **ಗತಿ** ನಡಿಗೆ **ಲೀಲಾ** ಹಾವ ಭಾವ ವಿಲಾಸ **ಅವಲೋಕನೈಃ** ಕಡೆಗಣ್ಣಿನ ನೋಟಗಳಿಂದ **ರಮಣ್ಯಃ** ರಮಣೀಯರಾದ (ರತಿಪ್ರದರಾದ) ಸುಖಜನಕರಾದ **ಅಪ್ಸರಸಃ** ಅಪ್ಸರಾಸ್ತ್ರೀಯರು **ಜಾತಾಃ** ಹುಟ್ಟಿದರು.

ಸತ್ಯ ಃ- ''ನಿಷ್ಕಮಸ್ತ್ರೀ ಸಾಷ್ಟಹೇಮಶತೇ ದೀನಾರಕರ್ಷಯೋಃ'' ''ವಕ್ಷೋऽಲಂಕರಣೇ'' ಎಂದು ವಿಶ್ವವಿದೆ. ನಿಷ್ಕವೆಂದರೆ ಗ್ರೈವೇಯಕ ಅಂದರೆ ಕಂಠಾಭರಣ ಎಂದರ್ಥ. ॥೬॥

**ತತಶ್ಚಾವಿರಭೂತ್ ಸಾಕ್ಷಾತ್ ಶ್ರೀರಮಾ ಭಗವತ್ಪ್ರಿಯಾ ।**
**ರಂಜಯಂತೀ ದಿಶಃ ಕಾಂತ್ಯಾ ವಿದ್ಯುತ್ಸೌದಾಮನೀ ಯಥಾ ॥೭॥**

**ತತಃ** ಅಪ್ಸರೆಯರು ಹುಟ್ಟಿದ ಮೇಲೆ ಆ ಸಮುದ್ರದಿಂದ **ಭಗವತ್ಪ್ರಿಯಾ** ಶ್ರೀಹರಿಗೆ ಪ್ರಿಯಳಾದ **ಸಾಕ್ಷಾತ್ ಶ್ರೀಃ** ನಿರುಪಚರಿತ ಶ್ರೀಶಬ್ದವಾಚ್ಯಳಾದ (ಭಾರತ್ಯಾದಿಗಳಿಂದ ಭಿನ್ನಳಾದ ಉತ್ತಮಳಾದ) ಪರಮಾತ್ಮನ ವಕ್ಷಸ್ಥಳವನ್ನು ಆಶ್ರಯಿಸಿದ **ರಮಾ** ಪರಮಾತ್ಮನಿಂದ ಸಂತೋಷಪಡುವ, ತನ್ನ ದರ್ಶನದಿಂದ ಭಕ್ತರಿಗೆ ಆನಂದವನ್ನು ಕೊಡುವ ಲಕ್ಷ್ಮೀದೇವಿಯು **ವಿದ್ಯುತ್ ಸೌದಾಮನೀ ಯಥಾ** ಕಾಂತಿಕೂಡಿದ ಪ್ರಕಾಶಗೊಳಿಸುವ ಮಿಂಚಿನಂತೆ **ಕಾಂತ್ಯಾ** ತನ್ನ ದೇಹದ ಕಾಂತಿಯಿಂದ **ದಿಶಃ** ಎಲ್ಲ ದಿಕ್ಕುಗಳನ್ನು **ರಂಜಯಂತೀ** ಪ್ರಕಾಶಪಡಿಸುವವಳಾಗಿ **ಆವಿರಭೂತ್** ವ್ಯಕ್ತಳಾದಳು.

ಲಿಂಗೇರೀ :- ಇಲ್ಲಿ **ಸಾಕ್ಷಾತ್ ಶ್ರೀ** ಎಂದುದರಿಂದ ಸ್ವರ್ಗಾಭಿಮಾನಿ ಶ್ರೀ ಮುಂತಾದವರನ್ನು ನಿವಾರಣೆ ಮಾಡಿರುವರು. **ಆವಿರಭೂತ್** ಎಂದುದರಿಂದ ಲಕ್ಷ್ಮೀದೇವಿಗೆ ಜ್ಞಾನಾನಂದಾತ್ಮಕ ದೇಹವಾದ್ದರಿಂದ ಶ್ರೀಮನ್ನಾರಾಯಣನಂತೆ ಪ್ರಾದುರ್ಭಾವವೇ ಹೊರತು ದೇಹೋತ್ಪತ್ತಿಯಲ್ಲವೆಂದು ಸೂಚಿಸಿರುವರು. ॥೭॥

**ತಸ್ಯಾಂ ಚಕ್ರುಃ ಸ್ಪೃಹಾಂ ಸರ್ವೇ ಸಸುರಾಸುರಮಾನವಾಃ ।**
**ರೂಪೌದಾರ್ಯವಯೋವರ್ಣಮಹಿಮಾಕ್ಷಿಪ್ತಚೇತಸಃ ॥೮॥**

**ಸಸುರಾಸುರಮಾನವಾಃ** ದೇವತೆಗಳು ದೈತ್ಯರು ಮನುಷ್ಯರು ಇವರಿಂದ ಸಹಿತರಾದ **ಸರ್ವೇ** ಎಲ್ಲ ಪ್ರಾಣಿಗಳು **ರೂಪೌದಾರ್ಯವಯೋವರ್ಣ- ಮಹಿಮಾಕ್ಷಿಪ್ತಚೇತಸಃ** ಆ ಲಕ್ಷ್ಮೀದೇವಿಯ **ರೂಪ** ಸೌಂದರ್ಯ (ಆಕಾರ) **ಔದಾರ್ಯ** ಮಹತ್ತ್ವ **ವಯಃ** ಯೌವನ **ವರ್ಣ** ಬಣ್ಣ (ಬಂಗಾರದ ಬಣ್ಣ) ಇವುಗಳ **ಮಹಿಮಾ** ಮಹಿಮೆಯಿಂದ (ಅತಿಶಯದಿಂದ) **ಆಕ್ಷಿಪ್ತ** ಅವಳಲ್ಲಿ ನೆಟ್ಟ **ಚೇತಸಃ** ಮನಸ್ಸುಳ್ಳವರಾಗಿ **ತಸ್ಯಾಂ** ಅವಳಲ್ಲಿ **ಸ್ಪೃಹಾಂ** ಆಸೆಯನ್ನು **ಚಕ್ರುಃ** ಮಾಡಿದರು.

ಛಲಾರೀ :- ಜ್ಞಾನಿಗಳಿಗೂ ರಾಗವನ್ನು ಹುಟ್ಟಿಸುವಂಥ ಸೌಂದರ್ಯ ಲಕ್ಷ್ಮೀದೇವಿಯಲ್ಲಿದೆ ಎಂಬುದನ್ನು ತಿಳಿಸಲು ಸುರರನ್ನು ಗ್ರಹಣ ಮಾಡಿದ್ದಾರೆ ಎಂದು ತಿಳಿಯಬೇಕು.

ವಿಶೇಷ :- ಜ್ಞಾನಾದಿಗಳನ್ನು ಪಡೆಯಲು ಸೇವಿಸಬೇಕೆಂದು ದೇವತೆಗಳು, ಐಶ್ವರ್ಯವನ್ನು ಪಡೆಯಲು ಸೇವಿಸಬೇಕೆಂದು ಮಾನವರು ಮಾದುವೆಯಾಗಬೇಕೆಂದು ಅಸುರರು, ಲಕ್ಷ್ಮೀದೇವಿಯನ್ನು ಅಪೇಕ್ಷಿಸಿದರು. ॥೮॥

ಲಕ್ಷ್ಮಿಯ ಸೌಂದರ್ಯದಿಂದ ವಶೀಕೃತ ಮನಸ್ಸುಳ್ಳ ಇಂದ್ರಾದಿಗಳು ಮಾಡಿದ ಸೇವಾರೀತಿಯನ್ನು ತಿಳಿಸುವರು. ಮತ್ತು ಲಕ್ಷ್ಮೀಸ್ವಯಂವರವನ್ನು ಹೇಳಲು ಮೊದಲು ಅಭಿಷೇಕ ಮಹೋತ್ಸವವನ್ನು ಹೇಳುವರು-

**ತಸ್ಯಾಶ್ಚಾಸನಮಾನಿನ್ಯೇ ಮಹೇಂದ್ರೋ ಮಹದದ್ಭುತಮ್ ।**
**ಮೂರ್ತಿಮತ್ಯಃ ಸರಿಚ್ಛ್ರೇಷ್ಠಾ ಹೇಮಕುಂಭೈರ್ಜಲಂ ಶುಚಿ ॥೯॥**

**ಮಹೇಂದ್ರಃ** ಇಂದ್ರದೇವರು **ತಸ್ಯಾಃ** ಆ ರಮಾದೇವಿಗೆ **ಅದ್ಭುತಂ** ಆಶ್ಚರ್ಯಕರವಾದ **ಮಹತ್** ದೊಡ್ಡದಾದ **ಆಸನಂ** ಸಿಂಹಾಸನವನ್ನು **ಆನಿನ್ಯೇ** ತಂದಿತ್ತರು. **ಮೂರ್ತಿಮತ್ಯಃ** ದೇಹಧಾರಿಗಳಾದ **ಸರಿತ್‌ಶ್ರೇಷ್ಠಾಃ** ಉತ್ತಮನದ್ಯಭಿಮಾನಿಗಳಾದ ಗಂಗಾ ಮೊದಲಾದವರು **ಹೇಮಕುಂಭೈಃ** ಬಂಗಾರದ ಕೊಡಗಳಿಂದ **ಶುಚಿ** ಶುದ್ಧವಾದ **ಜಲಂ** ನೀರನ್ನು **ಆನಿನ್ಯುಃ** ತಂದು ಕೊಟ್ಟರು. ॥೯॥

**ಅಭಿಷೇಚನಿಕಾ ಭೂಮಿರಾಹರತ್ ಸಕಲೌಷಧೀಃ ।**
**ಗಾವಃ ಪಂಚ ಪವಿತ್ರಾಣಿ ವಸಂತೋ ಮಧು ಮಾಧವಮ್ ॥೧೦॥**

**ಭೂಮಿಃ** ಭೂದೇವಿಯು **ಅಭಿಷೇಚನಿಕಾಃ** ಸ್ನಾನಕ್ಕೆ ಯೋಗ್ಯವಾದ **ಸಕಲೌಷಧೀಃ** ಎಲ್ಲ ಧಾನ್ಯಗಳನ್ನು (ಸುವಾಸನೆ ಧಾತುಗಳನ್ನು) **ಆಹರತ್** ತಂದುಕೊಟ್ಟಳು. **ಗಾವಃ** ಆಕಳುಗಳು **ಪಂಚ ಪವಿತ್ರಾಣಿ** ಶುದ್ಧಗೊಳಿಸುವ ಹಾಲು-ಮೊಸರು-ತುಪ್ಪ-ಗೋಮಯ-ಗೋಮೂತ್ರ ಈ ಐದು ಗವ್ಯಗಳನ್ನು **ಆಹರನ್** ತಂದಿತ್ತವು **ವಸಂತಃ** ವಂಸತ ಋತುವಿನ ಅಭಿಮಾನಿಯು **ಮಾಧವಂ** ವೈಶಾಖದಲ್ಲಿ ಲಭಿಸುವ **ಮಧು** ಜೇನುತುಪ್ಪವನ್ನು ಫಲಪುಷ್ಪಾದಿಗಳನ್ನು **ಆಹರತ್** ತಂದಿತ್ತನು. ॥೧೦॥

**ಋಷಯಃ ಕಲ್ಪಯಾಂಚಕ್ರುರಭಿಷೇಕಂ ಯಥಾವಿಧಿ ।**
**ಜಗುರ್ಭದ್ರಾಣಿ ಗಂಧರ್ವಾ ನಾರ್ಯಶ್ಚ ನನೃತುರ್ಜಗುಃ ॥೧೧॥**

**ಋಷಯಃ** ವಸಿಷ್ಠಾದಿ ಋಷಿಗಳು **ತಸ್ಯಾಃ** ರಮಾದೇವಿಗೆ **ಯಥಾವಿಧಿ** ಶಾಸ್ತ್ರಾನುಸಾರ **ಅಭಿಷೇಕಂ** ಸಕಲೈಶ್ವರ್ಯಚಕ್ರವರ್ತಿನಿಯೆಂದು ಪಟ್ಟಾಭಿಷೇಕವನ್ನು **ಕಲ್ಪಯಾಂಚಕ್ರುಃ** ಮಾಡಿದರು. ಆ ಕಾಲದಲ್ಲಿ **ಗಂಧರ್ವಾಃ** ಗಂಧರ್ವರು **ಭದ್ರಾಣಿ** ಮಂಗಳಕರವಾದ ಹಾಡುಗಳನ್ನು **ಜಗುಃ** ಹಾಡಿದರು. **ನಾರ್ಯಃ** ಅಪ್ಸರೆಯರು **ನನೃತುಃ** ನರ್ತನ ಮಾಡಿದರು. **ಜಗುಃ ಚ** ಗಾನವನ್ನೂ ಮಾಡಿದರು. ಗಾನಮಾಡುತ್ತ ಕುಣಿದರೆಂದರ್ಥ.

ವಿಶೇಷ :- ಗಂಧರ್ವಾಃ ಎಂಬುದರ ಬದಲಾಗಿ ನರ್ತಕ್ಯಃ ಎಂಬ ಪಾಠವನ್ನು ಛಲಾರೀ ಆಚಾರ್ಯರು ಗ್ರಹಿಸಿದ್ದಾರೆ. **ನರ್ತಕ್ಯಃ** ಎಂದರೆ ನಟನ ಸ್ತ್ರೀಯರು ಎಂದು ಅರ್ಥ. ನಾರ್ಯಶ್ಚ ಎಂಬುದರ ಬದಲಾಗಿ ನಟಾಶ್ಚ ಎಂಬ ಪಾಠವನ್ನು ಲಿಂಗೇರೀ

ಆಚಾರ್ಯರು ಗ್ರಹಣ ಮಾಡಿದ್ದಾರೆ. **ನಟಾಃ** ವಿದ್ಯಾಧರಾದಿಗಳು **ನನೃತುಃ** ಎಂದು ಅನ್ವಯ ಮಾಡಿದ್ದಾರೆ. ಚ ಶಬ್ದದಿಂದ ಕಿನ್ನರರನ್ನು ತೆಗೆದುಕೊಂಡು ಅವರು ಜಗುಃ ಹಾಡು ಹಾಡಿದರು ಎಂದು ಅನ್ವಯ ಹೇಳುತ್ತಾರೆ. ವಿದ್ಯಾಧರಾದಿಗಳು ನರ್ತನಮಾಡಿದರು. ಕಿನ್ನರರು ಹಾಡು ಹಾಡಿದರು ಎಂದು ಲಿಂಗೇರೀ ಆಚಾರ್ಯರು ತಿಳಿಸುತ್ತಾರೆ. ||೧೧||

**ಮೇಘಾ ಮೃದಂಗಪಣವಮುರಜಾನಕಗೋಮುಖಾನ್ ।**
**ವ್ಯನಾದಯನ್ ಶಂಖವೇಣುವೀಣಾತುಮುಲನಿಃಸ್ವನಾನ್ ||೧೨||**

**ಮೇಘಾಃ** ಮೋಡಗಳ ಅಭಿಮಾನಿದೇವತೆಗಳು **ಶಂಖ** ಪ್ರಸಿದ್ಧವಾದ ಶಂಖ **ವೇಣು** ಕೊಳಲು **ವೀಣಾ** ತಂತಿಯ ಒಂದು ವಾದ್ಯ ಇವುಗಳಿಂದ **ತುಮುಲ** ಬೆರೆತ **ನಿಃಸ್ವನಾನ್** ಶಬ್ದಗಳುಳ್ಳ **ಮೃದಂಗ** ಮದ್ದಳೆ **ಪಣವ** ಮದ್ದಳೆ ಪ್ರಭೇದ **ಮುರಜ** ತಮಟೆ **ಆನಕ** ಢಕ್ಕಾ **ಗೋಮುಖಾನ್** ನಗಾರಿಗಳನ್ನು **ವ್ಯನಾದಯನ್** ಬಾರಿಸಿದರು. ||೧೨||

**ತತೋಽಭಿಷಿಷಿಚುರ್ದೇವೀಂ ಶ್ರಿಯಂ ಪದ್ಮಕರಾಂ ಸತೀಮ್ ।**
**ದಿಗಿಭಾ ಪೂರ್ಣಕಲಶೈಃ ಸೂಕ್ತವಾಕ್ಯೈರ್ದ್ವಿಜೇರಿತೈಃ ||೧೩||**

**ತತಃ** ಅನಂತರ **ದಿಗಿಭಾಃ** ಐರಾವತ-ಪುಂಡರೀಕ ಮೊದಲಾದ ದಿಗ್ಗಜಗಳು **ಪದ್ಮಕರಾಂ** ಕೈಗಳಲ್ಲಿ ಕಮಲಗಳನ್ನು ಹಿಡಿದಿರುವ (ಪದ್ಮವೆಂಬ ನಿಧಿಯು ಇದೆ) **ಸತೀಂ** ದೋಷರಹಿತಳಾದ **ಶ್ರಿಯಂ ದೇವೀಂ** ಲಕ್ಷ್ಮೀದೇವಿಯನ್ನು **ದ್ವಿಜೇರಿತೈಃ** ಬ್ರಾಹ್ಮಣರು ಹೇಳುತ್ತಿದ್ದ **ಸೂಕ್ತವಾಕ್ಯೈಃ** ''ಹಿರಣ್ಯವರ್ಣಾಂ...'' ಮುಂತಾದ ವಾಕಾನುವಾಕ್ಯ ಎಂಬ ವಾಕ್ಯವಿಶೇಷಗಳಿಂದ ಸಹಿತವಾಗಿ **ಪೂರ್ಣಕಲಶೈಃ ಚ** ನೀರು ತುಂಬಿದ ಕಲಶಗಳಿಂದ **ಅಭಿಷಿಷಿಚುಃ** ಅಭಿಷೇಕ ಮಾಡಿದವು. ||೧೩||

**ಸಮುದ್ರಃ ಪೀತಕೌಶೇಯವಾಸಸೀ ಸಮುಪಾಹರತ್ ।**
**ವರುಣಃ ಸ್ರಜಂ ವೈಜಯಂತೀಂ ಮಧುನಾ ಮತ್ತಷಟ್ಪದಾಮ್ ||೧೪||**

**ಸಮುದ್ರಃ** ಲಕ್ಷ್ಮೀದೇವಿಯ ತಂದೆಯಾದ ಸಮುದ್ರಪಾತ್ರಕ್ಕೆ ಅಭಿಮಾನಿಯಾದ ವರುಣನು ಸಮುದ್ರಜಲಾಭಿಮಾನಿಯಾದ ವರುಣನು **ಪೀತಕೌಶೇಯವಾಸಸೀ** ಹಳದಿಯ ರೇಷ್ಮೆವಸ್ತ್ರಗಳನ್ನು **ಸಮುಪಾಹರತ್** ತಂದಿತ್ತನು. **ಮಧುನಾ** ಮಕರಂದ (ಪುಷ್ಪರಸ) ಪಾನದಿಂದ **ಮತ್ತಃ** ಮದಿಸಿದ (ಸಂತುಷ್ಟನಾದ) **ಷಟ್ಪದ** ದುಂಬಿಗಳಿಂದ ಕೂಡಿದ **ವೈಜಯಂತೀಂ ಸ್ರಜಂ** ವೈಜಯಂತೀ ಎಂಬ ನಾನಾಸುಗಂಧಪುಷ್ಪಗಳಿಂದ ನಿರ್ಮಿತ ಮಾಲೆಯನ್ನೂ **ಸಮುಪಾಹರತ್** ಕಾಣಿಕೆಯಾಗಿತ್ತನು. ||೧೪||

ಸತ್ಯ :- ವರುಣನಿಗೆ ಎರಡು ರೂಪಗಳು ಇವೆ. ಒಂದು ರೂಪದಿಂದ ಸಮುದ್ರಪಾತ್ರಕ್ಕೆ ಅಭಿಮಾನಿಯಾಗಿದ್ದಾನೆ. ಮತ್ತೊಂದುರೂಪದಿಂದ ಸಮುದ್ರಜಲಕ್ಕೆ ಅಭಿಮಾನಿಯಾಗಿದ್ದಾನೆ.

**ಭೂಷಣಾನಿ ವಿಚಿತ್ರಾಣಿ ವಿಶ್ವಕರ್ಮಾ ಪ್ರಜಾಪತಿಃ ।**
**ಹಾರಂ ಸರಸ್ವತೀ ಪದ್ಮಮಜೋ ನಾಗ(ಗಾ)ಶ್ಚ ಕುಂಡಲೇ ॥೧೫॥**

**ಪ್ರಜಾಪತಿಃ** ಪ್ರಜೇಶ್ವರನಾದ **ವಿಶ್ವಕರ್ಮಾ** ದೇವಶಿಲ್ಪಿಯು **ವಿಚಿತ್ರಾಣಿ** ಅನೇಕ ರೀತಿಯ ಆಶ್ಚರ್ಯಕರಗಳಾದ **ಭೂಷಣಾನಿ** ಆಭರಣಗಳನ್ನು **ಸರಸ್ವತೀ** ಲಕ್ಷ್ಮೀದೇವಿಯ ಸೊಸೆಯಾದ ಸರಸ್ವತೀದೇವಿಯು **ಹಾರಂ** ಮುತ್ತಿನ ಮಾಲೆಯನ್ನು ''ಹಾರೋ ಮುಕ್ತಾವಲೌ'' ಎಂದು ವಿಶ್ವವಿದೆ. **ಅಜಃ** ಮಕ್ಕಳಾದ ಬ್ರಹ್ಮದೇವರು **ಪದ್ಮಂ** ಕಮಲವನ್ನು **ನಾಗಃ** ಶೇಷದೇವರು (**ನಾಗಾಃ** ಸರ್ಪಗಳು) **ಕುಂಡಲೇ** ಕಿವಿಯ ಆಭರಣಗಳನ್ನು ತಂದುಕೊಟ್ಟರು. ॥೧೫॥

**ತತಃ ಕೃತಸ್ವಸ್ತ್ಯಯನೋತ್ಪಲಸ್ರಜಂ**
**ನದದ್ದ್ವಿರೇಫಾಂ ಪರಿಗೃಹ್ಯ ಪಾಣಿನಾ ।**
**ಚಚಾಲ ವಕ್ತ್ರಂ ಸುಕಪೋಲಕುಂಡಲಂ**
**ಸವ್ರೀಡಹಾಸಂ ದಧತೀ ಸುಶೋಭನಮ್ ॥೧೬॥**

**ಸ್ತನದ್ವಯಂ ಚಾತಿಕೃಶೋದರೀ ಸಮಂ**
**ನಿರಂತರಂ ಚಂದನಕುಂಕುಮೋಕ್ಷಿತಮ್ ।**
**ತತಸ್ತತೋ ನೂಪುರವಲ್ಗುಶಿಂಜಿತೈ-**
**ರ್ವಿಸರ್ಪತೀ ಹೇಮಲತೇವ ಸಾ ಬಭೌ ॥೧೭॥**

**ತತಃ** ಹಿಂದೆ ಹೇಳಿದಂತೆ ದೇವತೆಗಳು ಸೇವಿಸಿದ ನಂತರ **ಕೃತಸ್ವಸ್ತ್ಯಯನಾ** ಕಲ್ಯಾಣಕ್ಕಾಗಿ ಪುಣ್ಯಾಹವಾಚನವನ್ನು ಮಾಡಿಕೊಂಡ **ಅತಿಕೃಶೋದರೀ** ಅತ್ಯಂತ ತೆಳುವಾದ ಹೊಟ್ಟೆಯುಳ್ಳ (ಸೂಕ್ಷ್ಮಮಧ್ಯಾ ಎಂದು ಅರ್ಥ ಮಾಡಿರುವರು. ಸಣ್ಣ ನಡುವುಳ್ಳವಳು ಎಂದರ್ಥ.) **ಸಾ** ಆ ಲಕ್ಷ್ಮೀದೇವಿಯು **ಸುಕಪೋಲಕುಂಡಲಂ** ಒಳ್ಳೆಯ ಕೆನ್ನೆಗಳು ಕಿವಿಯ ಆಭರಣಗಳಿಂದ ಕೂಡಿದ **ಸವ್ರೀಡಹಾಸಂ** ನಾಚಿಕೆಯಿಂದ ಕೂಡಿದ ನಗುವುಳ್ಳ ಆದ್ದರಿಂದಲೇ **ಸುಶೋಭನಂ** ಅತ್ಯಂತ ಮಂಗಳಕರವಾದ ಸುಂದರವಾದ **ವಕ್ತ್ರಂ** ಮುಖವನ್ನು **ಸಮಂ** ಸಮಾನವಾಗಿ ಎತ್ತರ ಮತ್ತು ದುಂಡಗಿರುವ **ನಿರಂತರಂ** ಎರಡರ ಮಧ್ಯದಲ್ಲಿ ವ್ಯವಧಾನವಿಲ್ಲದ (ಸೇರಿಕೊಂಡಿರುವ) **ಚಂದನಕುಂಕುಮೋಕ್ಷಿತಂ** ಶ್ರೀಗಂಧ ಮತ್ತು ಕೇಸರಗಳಿಂದ ಲಿಪ್ತವಾದ **ಸ್ತನದ್ವಯಂ ಚ** ಉರೋಜಗಳೆರಡನ್ನು **ದಧತೀ ಸತೀ** ಧರಿಸಿದವಳಾಗಿ **ಪಾಣಿನಾ** ಕೈಯಿಂದ **ನದತ್** ಶಬ್ದಮಾಡುತ್ತಿರುವ **ದ್ವಿರೇಫಾಂ** ದುಂಬಿಗಳಿಂದ ಕೂಡಿದ **ಉತ್ಪಲಸ್ರಜಂ** ಕಮಲದ ಮಾಲೆಯನ್ನು **ಪರಿಗೃಹ್ಯ** ಹಿಡಿದುಕೊಂಡು **ತತಃ** ಆ ಸ್ಥಳದಿಂದ **ಚಚಾಲ** ಚಲಿಸಿದಳು. (ಹೊರಟಳು) **ತತಃ** ಮುಂದೆ **ನೂಪುರ** ಕಾಲ್ಗೆಜ್ಜೆಗಳ **ವಲ್ಗು** ಇಂಪಾದ **ಶಿಂಜಿತೈಃ** ಶಬ್ದಗಳಿಂದ ಕೂಡಿ **ವಿಸರ್ಪತೀ** ಭೂಮಿಗೆ ತಗುಲಿಸಿಕೊಂಡು

ಹೆಜ್ಜೆಯಿಡುತ್ತಿದ್ದ **ಸಾ** ಆ ಶ್ರೀದೇವಿಯು **ಹೇಮಲತಾ ಇವ** ಬಂಗಾರದ ಬಳ್ಳಿಯಂತೆ **ಬಭೌ** ಶೋಭಿಸಿದಳು. ।।೧೬, ೧೭।।

ಲೋಕವನ್ನು ಅನುಕರಣೆ ಮಾಡುವ ಲೋಕಮಾತೆಯ ಒಂದು ವಿಲಾಸವನ್ನು ಹೇಳುವರು-

**ವಿಲೋಕಯಂತೀ ನಿರವದ್ಯಮಾತ್ಮನಃ**
**ಪದಂ ಧ್ರುವಂ ಚಾವ್ಯಭಿಚಾರಿಸದ್ಗುಣಮ್ ।**
**ಗಂಧರ್ವಯಕ್ಷಾಸುರಸಿದ್ಧಚಾರಣ-**
**ತ್ರೈವಿಷ್ಟಪೇಯಾದಿಷು ನಾನ್ವವಿಂದತ್** ।।೧೮।।

**ಸಾ** ಹಾಗೆ ಹಾರವನ್ನು ಹಿಡಿದು ಹೊರಟ ರಮಾದೇವಿಯು **ಗಂಧರ್ವಯಕ್ಷಾಸುರಸಿದ್ಧಚಾರಣತ್ರೈವಿಷ್ಟಪೇಯಾದಿಷು** ಗಂಧರ್ವ-ಯಕ್ಷ-ಅಸುರ-ಸಿದ್ಧ-ಚಾರಣ-ಸ್ವರ್ಗವಾಸಿಗಳಾದ ದೇವತೆಗಳಲ್ಲಿ, **ಆತ್ಮನಃ ಚ** ತನ್ನ **ಧ್ರುವಂ** ಎಲ್ಲ ಕಾಲಗಳಲ್ಲಿಯೂ ಏಕಪ್ರಕಾರವಾಗಿರುವ **ಅವ್ಯಭಿಚಾರಿಸದ್ಗುಣಂ ಅವ್ಯಭಿಚಾರಿ** ಯಾರಲ್ಲಿಯೂ ಇಲ್ಲದಿರುವ (ಅತಿವ್ಯಾಪ್ತಿ ಇಲ್ಲದ) **ಸತ್** ಅವ್ಯಾಪ್ತಿ ಅಸಂಭವ ದೋಷರಹಿತವಾದ (ನಿರ್ದುಷ್ಟವಾದ) **ಗುಣಂ** ನಿರವಧಿಕಪರಿಪೂರ್ಣ ಕಲ್ಯಾಣಗುಣಗಳುಳ್ಳ ಆದ್ದರಿಂದಲೇ **ನಿರವದ್ಯಂ ಚ** ಪಾರತಂತ್ರ್ಯಾದಿ ಯಾವ ದೋಷಗಳೂ ಇಲ್ಲದ **ಪದಂ** ಆಶ್ರಯನಾದ ಪತಿ ಎಂಬ ವಸ್ತುವನ್ನು **ವಿಲೋಕಯಂತೀ** ನೋಡುವವಳಾಗಿ ಹುಡುಕುವವಳಾಗಿ (ಇವನು ನನ್ನ ಗಂಡನಲ್ಲವೆಂದು ವಿಮರ್ಶಿಸುವವಳಾಗಿ) **ನಾನ್ವವಿಂದತ್** ಹೊಂದಲಿಲ್ಲ. ಅಂದರೆ ತನ್ನ ಗಂಡನಾದ ನಾರಾಯಣನನ್ನು ಕಾಣಲಿಲ್ಲ. ಇವರಾರಲ್ಲಿಯೂ ನಾರಾಯಣನ ಲಕ್ಷಣಗಳು ಇಲ್ಲದ್ದರಿಂದ ಇವರು ನಾರಾಯಣನಲ್ಲವೆಂದು ಸಮರ್ಥಿಸಿದಳೆಂದರ್ಥ.

ಸತ್ಯ ಃ- ತೃತೀಯಂ ವಿಷ್ಟಪಂ ಸ್ಥಾನಂ ಯಸ್ಯಾಃ ಸಾ ತ್ರಿವಿಷ್ಟಪಾ ಅದಿತಿಃ ತಸ್ಯಾಃ ಅಪತ್ಯಾನಿ ಆದಿತೇಯಾ ತ್ರೈವಿಷ್ಟಪೇಯಾಃ ಎಂದರ್ಥ ಮಾಡಿರುವರು. ಭಗವಂತನು ಮಾತ್ರ ದೋಷರಹಿತನಾಗಿದ್ದಾನೆ. ಇತರರೆಲ್ಲರೂ ಸದೋಷರಾಗಿದ್ದಾರೆ ಎಂಬುದು ರಮಾದೇವಿಯ ತಾತ್ಪರ್ಯ ಎಂದು ತಿಳಿಯಬೇಕು. ।।೧೮।।

ಯಾರು ಯಾರಲ್ಲಿ ಏನೇನು ದೋಷವನ್ನು ಕಂಡು ಅವರವರನ್ನು ತ್ಯಜಿಸಿದಳು ಎಂದರೆ ಹೇಳುವರು-

**ನೂನಂ ತಪೋ ಯಸ್ಯ ನ ಮನ್ಯುನಿರ್ಜಯೋ**
**ಜ್ಞಾನಂ ಕ್ವಚಿತ್ ತಚ್ಚ ನ ಸಂಗವರ್ಜಿತಮ್ ।**

**ಕಶ್ಚಿನ್ಮಹಾಂಸ್ತಸ್ಯ ನ ಕಾಮನಿರ್ಜಯಃ**
**ಸ ಈಶ್ವರಃ ಕಿಂ ಪರತೋ ವ್ಯಪಾಶ್ರಯಃ** ॥೧೯॥

**ಯಸ್ಯ** ಯಾವ ದೂರ್ವಾಸ ಮೊದಲಾದ ಋಷಿಗಳಿಗೆ **ನೂನಂ ತಪಃ ಅಸ್ತಿ** ನಿಶ್ಚಯವಾಗಿ ತಪಸ್ಸಿದೆ (ವಿಧ್ಯುಕ್ತವಾದ ರೀತಿಯಲ್ಲಿ ಕೃಚ್ಛ್ರ-ಚಾಂದ್ರಾಯಣಾದಿಗಳಿಂದ ಶರೀರಶೋಷಣವಿದೆ) **ನೂನಂ ನ ಮನ್ಯುನಿರ್ಜಯಃ** ನಿಶ್ಚಯವಾಗಿಯೂ ಕೋಪದ ಜಯವಿಲ್ಲ. ಅಂಬರೀಷಾದಿಗಳ ಮೇಲೆ ಕೋಪಿಸಿಕೊಂಡಿದ್ದು ಸರ್ವವಿದಿತ. ಆದ್ದರಿಂದ ದೂರ್ವಾಸರು ಕೋಪ ಗೆದ್ದವರಲ್ಲ. **ಕ್ವಚಿತ್** ಬೃಹಸ್ಪತ್ಯಾಚಾರ್ಯ ಮೊದಲಾದವರಲ್ಲಿ **ಜ್ಞಾನಂ** ಜ್ಞಾನವಿದೆ. **ತಚ್ಚ** ಅದಾದರೂ **ಸಂಗವರ್ಜಿತಂ ನ** ಫಲಕಾಮನಾರಹಿತವಲ್ಲ, ವಿಷಯಸಂಗವರ್ಜಿತವಾದುದಲ್ಲ. **ನೂನಂ** ನಿಶ್ಚಯ. ಬೃಹಸ್ಪತ್ಯಾಚಾರ್ಯರು ಪೂರ್ಣಗರ್ಭಿಣಿಯಾದ ತಮ್ಮನ ಹೆಂಡತಿಯನ್ನು ಬಲಾತ್ಕಾರದಿಂದ ರಮಿಸಿದರು. ಆದ್ದರಿಂದ ಅವರು ನನ್ನ ವಿವಾಹಕ್ಕೆ ಅರ್ಹರಲ್ಲ. **ಕಶ್ಚಿತ್** ಒಬ್ಬನು **ಮಹಾನ್** ವಯಸ್ಸಿನಿಂದಲೂ ಗುಣದಿಂದಲೂ ದೊಡ್ಡವನು. **ಮಹಾನ್** ಮಹತ್ತತ್ವಾಭಿಮಾನಿ ಚತುರ್ಮುಖನು ಇದ್ದಾನೆ. ಆದರೆ, **ತಸ್ಯ** ಅವನಿಗೆ **ನ ಕಾಮನಿರ್ಜಯಃ ನೂನಂ** ಕಾಮಜಯ ನಿಶ್ಚಿತವಾಗಿ ಇಲ್ಲ. ''ಪ್ರಜಾಪತಿರ್ವೈ ಸ್ವಾಂ ದುಹಿತರಮಭ್ಯಧಾವತ್'' ಎಂದು ಶ್ರುತಿಯಿದೆ. ಅಜ್ಞಾನಿಗಳ ದೃಷ್ಟಿಯಿಂದ ಬ್ರಹ್ಮನು ಮಗಳನ್ನು ಕಾಮಿಸಿದನು ಎಂದು ಶ್ರುತಿ ಹೇಳುತ್ತದೆ. ಬೃಹಸ್ಪತಿಗೆ ಹೇಳುವಾಗ **ನ ಸಂಗವರ್ಜಿತಂ** ಎಂದಿದ್ದಾರೆ. ಬ್ರಹ್ಮದೇವರಿಗೆ **ನ ಕಾಮನಿರ್ಜಯಃ** ಎಂದಿದ್ದಾರೆ ಇದರಿಂದ ನಾನು ದೊಡ್ಡವನಾದರೂ ಸ್ವೀಕಾರಾರ್ಹ ಎಂದಾಗುವದೇ? ಅದಕ್ಕೂ ಇದಕ್ಕೂ ಏನು ವ್ಯತ್ಯಾಸ ಎನ್ನಬೇಡಿ. ಇಲ್ಲಿ ಬ್ರಹ್ಮದೇವರಿಗೆ ಕಾಮನಾಮಾತ್ರ ಅದೂ ಕೂಡ ತೋರಿಸಿದ್ದು. ವಾಸ್ತವವಲ್ಲವೆಂಬುದು ''ನ ಮೇ ಹೃಷಿಕಾಣಿ ಪತಂತ್ಯಸತ್ಪಥೇ'' ಎಂಬ ಅವರ ಮಾತಿನಿಂದ ತಿಳಿಯುವದು. ಬೃಹಸ್ಪತಿಯದು ಸಂಸರ್ಗವೇ ಆದ್ದರಿಂದ ಬಹಳ ವ್ಯತ್ಯಾಸವುಂಟು. **ಯಃ ಈಶ್ವರಃ** ಇಂದ್ರನು **ಸಃ ಅಪಿ ಕಿಂ** ಪ್ರಯೋಜನಕನೇನು? **ಪರತೋ ವ್ಯಪಾಶ್ರಯಃ** ಐಶ್ವರ್ಯಕ್ಕೆ ಶ್ರೀಹರಿಯನ್ನಾಶ್ರಯಿಸಿದವನು ನನ್ನ ಗಂಡನು ಹೇಗಾದನು? **ಯಃ ಪರತೋ ವ್ಯಪಾಶ್ರಯಃ** ತನ್ನ ಸಂಪತ್ತಿಗೆ ಸ್ಥಾನಕ್ಕೆ ಬೇರೆಯವರನ್ನು ಆಶ್ರಯಿಸಿದವನು. ಅಂದರೆ ಹಿಂದೆ ಹೇಳಿದ ''ಅಸ್ಯ ದೇವಸ್ಯ ಮೀಳ್ಹುಷೇ'' ಎಂಬ ಶ್ರುತಿಯಲ್ಲಿ ಹೇಳಿದಂತೆ ವಿಷ್ಣುವಿನ ಅನುಗ್ರಹದಿಂದ ಪದವಿ ಪಡೆದ ರುದ್ರನು ಈಶ್ವರಃ ಕಿಂ ಸಮರ್ಥನೇನು? ಅಲ್ಲವೆಂದು ಭಾವ. ''ಈಶ್ವರಃ ಸರ್ವಭೂತಾನಾಂ'' ಎಂಬ ಶ್ರುತಿಯು (ರುದ್ರದೇವರಿಗೆ ಈಶ್ವರತ್ವ ಹೇಳುವ) ನಿರವಕಾಶವಾದ ''ಅಸ್ಯ ದೇವಸ್ಯ'' ಎಂಬ ಶ್ರುತಿಯಿಂದ ಬಾಧಿತವಾದ್ದರಿಂದ ವಿವಕ್ಷಿತಸ್ಥಾವರಭೂತೇಶ್ವರತ್ವವನ್ನು ಅಂದರೆ ತನಗಿಂತಲೂ ಕಡಿಮೆಯಾದ ಜಗತ್ತಿಗೆ ಈಶ್ವರತ್ವವನ್ನು ಹೇಳುತ್ತದೆಯೇ ಹೊರತು ಸರ್ವೇಶ್ವರತ್ವವನ್ನು ಹೇಳುವುದಿಲ್ಲ ಎಂದು ಭಾವ. ॥೧೯॥

**ಧರ್ಮಃ ಕ್ವಚಿತ್ ತಸ್ಯ ನ ಭೂತಸೌಹೃದಂ**
**ತ್ಯಾಗಃ ಕ್ವಚಿತ್ ತಚ್ಚ ನ ಮುಕ್ತಿಕಾರಣಮ್ ।**
**ವೀರ್ಯಂ ನ ಪುಂಸೋऽಸ್ತ್ಯಜವೇಗನಿಷ್ಕೃತಂ**
**ನ ಹಿ ದ್ವಿತೀಯೋ ಗುಣಸಂಗವರ್ಜಿತಃ ॥೨೦॥**

**ಕ್ವಚಿತ್** ಯಮಧರ್ಮನಲ್ಲಿ **ಧರ್ಮಃ** ಧರ್ಮವೆಂಬ ಗುಣವಿದೆ **ತಸ್ಯ** ಅವನಿಗೆ **ನ ಭೂತಸೌಹೃದಂ** ಪ್ರಾಣಿಗಳಲ್ಲಿ ದಯೆಯಿಲ್ಲ. ಶಿಕ್ಷಾಧಿಕಾರಿಯಾದ್ದರಿಂದ ದಯೆ ಇಲ್ಲದೇ ಅಪರಾಧಾನುಗುಣ ಶಿಕ್ಷಿಸಲೇಬೇಕಾಗುವದು. **ಕ್ವಚಿತ್** ಕುಬೇರನಲ್ಲಿ **ತ್ಯಾಗಃ** ತ್ಯಾಗವಿದೆ ಹಣಕೊಡುವನು ಆದರೆ ಅದು ಸತ್ಪಾತ್ರರಿಗೆ ಅಲ್ಲವಾದ್ದರಿಂದ **ನ ಮುಕ್ತಿಕಾರಣಂ** ಮುಕ್ತಿಸಾಧನವಾದುದಲ್ಲ ಅದು **ಮುಕ್ತಿಕಾರಣಂ** ನಾನು ಅವನನ್ನು ಬಿಡಲು ಕಾರಣವೇ ಹೊರತು ಅವನನ್ನು ವರಿಸಲು ಕಾರಣವಲ್ಲ. (ತಚ್ಚ ತದಪಿ ಮುಕ್ತಿಕಾರಣಂ ಮತ್ಕರ್ತೃಕತ್ಯಾಗಕಾರಣಂ ನ ವರವರಣಕಾರಣಂ ಇತ್ಯಾವ್ಯತ್ಯಾರ್ಥೋ ಜ್ಞೇಯಃ ಎಂದು ಶ್ರೀಸತ್ಯಧರ್ಮರು ಹೇಳುತ್ತಾರೆ.) **ಕ್ವಚಿತ್ ಪುಂಸಃ** ಕಾರ್ತವೀರ್ಯ ಮುಂತಾದವರಲ್ಲಿ **ವೀರ್ಯಂ ಅಸ್ತಿ** ಪರಾಕ್ರಮವಿದೆ ಆದರೆ **ಅಜವೇಗನಿಷ್ಕೃತಂ ನ** ಕಾಲಚಕ್ರದ ವೇಗಕ್ಕೆ ಪ್ರತೀಕಾರ ರೂಪವಾದುದಲ್ಲ ಅನಿತ್ಯವೆಂದು ಭಾವ. ಇನ್ನು **ಗುಣಸಂಗವರ್ಜಿತಃ** ವಿಷಯಸಂಗವರ್ಜಿತರಾದ ಸನಕಾದಿಗಳು **ನ ಹಿ ದ್ವಿತೀಯಃ** ಪತ್ನೀರಹಿತರು ನಿತ್ಯಬ್ರಹ್ಮಚಾರಿಗಳಾದ್ದರಿಂದ ಅವರನ್ನು ವರಿಸಲಾಗುವುದಿಲ್ಲ, ''ಪತ್ನೀ ಪಾಣಿಗ್ರಹೀತಿ ಸ್ಯಾತ್ ದ್ವಿತಿಯಾ ಸಹಧರ್ಮಿಣೀ'' ಎಂದು ಅಮರವಿದೆ. ಇವರು ನನಗೆ **ದ್ವಿತೀಯಃ** ಗಂಡನು **ನ** ಆಗಲಾರನು ಎಂದರ್ಥ.

ಕೆಲವರು ವಿಷಯಸಂಗವರ್ಜಿತಃ ಯಃ ಸಃ ನ ಕದಾऽಪಿ ದ್ವಿತೀಯೋ ವರೋ ನ ಹಿ ಸಮಾಧಿನಿಷ್ಠನಾದ, ವಿಷಯ ಸಂಗ ಬಿಟ್ಟ ವ್ಯಕ್ತಿಯು ನನಗೆ ವರನಾಗಲಾರ ಎಂದರ್ಥ ಮಾಡಿರುವರು. ವರನು ವಧುವಿಗೆ ಎರಡನೆಯವನು ಕಾರಣ ದ್ವಿತೀಯ ಎಂದಿರುವರು. ಆದ್ದರಿಂದಲೇ ವಧುವರೌ ಎಂದು ಮೊದಲು ವಧುವನ್ನು ನಿರ್ದೇಶ ಮಾಡುವರು ಎನ್ನುತ್ತಾರೆ. ॥೨೦॥

**ಕ್ವಚಿಚ್ಚಿರಾಯುರ್ನ ಹಿ ಶೀಲಮಂಗಲಂ**
**ಕ್ವಚಿತ್ ತದಪ್ಯಸ್ತಿ ನ ವೇದ್ಯಮಾಯುಷಃ ।**
**ಯತ್ರೋಭಯಂ ಕುತ್ರ ಚ ಸೋऽಪ್ಯಮಂಗಲಃ**
**ಸುಮಂಗಲಃ ಕಶ್ಚನ ಕಾಂಕ್ಷತೇ ಹಿ ಮಾಮ್ ॥೨೧॥**

**ಕ್ವಚಿತ್** ಅಶ್ವತ್ಥಾಮನಲ್ಲಿ, ಮಾರ್ಕಂಡೇಯನಲ್ಲಿ **ಚಿರಾಯುಃ** ದೀರ್ಘಾಯುಷ್ಯವಿದೆ ಆದರೆ **ನ ಶೀಲಮಂಗಲಂ** ತಮ್ಮ ನಡವಳಿಕೆಯಿಂದ ಮಂಗಲವಿಲ್ಲ (ಶಿರೋರತ್ನ

ಕಿತ್ತಿಸಿಕೊಂಡಿದ್ದರಿಂದ ದುರ್ಗಂಧದಿಂದ ಅಮಂಗಲನು, ಮಾರ್ಕಂಡೇಯನಲ್ಲಿ ಅನುಕೂಲ ಸ್ವಭಾವವಿಲ್ಲ, ಅವನು ಇಂದ್ರಿಯದಮನಶೀಲನು ಎಂದು ಭಾವ.) **ತದಪಿ** ಶೀಲ-ಮಂಗಲಗಳು **ಕ್ವಚಿತ್** ಮನುಷ್ಯೋತ್ತಮನಲ್ಲಿ ಹೇಳಿದೆ. ಆದರೆ **ನ ವೇದ್ಯಂ ಆಯುಷಃ** ಆಯುಷ್ಯ ಇಷ್ಟೆಂದು ಹೇಳಲಾಗದು. **ಯತ್ರ ಉಭಯಂ** ರುದ್ರಾದಿಗಳಲ್ಲಿ ದೀರ್ಘಾಯುಷ್ಯ ಮತ್ತು ಅನುಕೂಲಸ್ವಭಾವ ಇವೆರಡೂ ಇವೆ, ಆದರೂ **ಸೋಽಪಿ ಅಮಂಗಲಃ** ಆ ರುದ್ರದೇವರು ಕೂಡಾ ಸ್ಮಶಾನನಿವಾಸಿಗಳಾದ್ದರಿಂದ ಅಮಂಗಲ-ರಾಗಿದ್ದಾರೆ, ಚಿರಾಯುಷ್ಯ ಮತ್ತು ಶೀಲಮಂಗಲ ಎಂಬ ಎರಡನ್ನೂ ತೆಗೆದುಕೊಂಡರೆ ಶ್ಮಶಾನವಾಸಿಯಾದ್ದರಿಂದ ಮಾಂಗಲ್ಯ ಎಂಬುದು ಬಾಧಿತವಾಗುತ್ತದೆ. ನನ್ನ ಒಡೆಯ ಹಾಗಲ್ಲ ಎಂದು ಹೇಳುತ್ತಾರೆ **ಕಶ್ಚನ ಸುಮಂಗಲಃ** ಒಬ್ಬನು ಹಿಂದೆ ಹೇಳಿದ ಯಾವ ದೋಷವಿಲ್ಲದವನು ಇದ್ದಾನೆ ಅವನು **ಮಾಂ ನ ಹಿ ಕಾಂಕ್ಷತೇ** ನನ್ನನ್ನು ಅಪೇಕ್ಷಿಸುವದಿಲ್ಲ. ನಿರಪೇಕ್ಷನೆಂದು ಮುಂದೆ ಹೇಳುವಳು. ನನಗೆ ಅವನ ಅಪೇಕ್ಷೆಯೇ ಹೊರತು ಅವನಿಗೆ ನನ್ನ ಅಪೇಕ್ಷೆಯಿಲ್ಲ. ಸ್ವರಮಣನೆಂದು ಭಾವ.

ಸತ್ಯ ಃ- ಹಿಂದಿನ ವಾಕ್ಯಗಳಿಂದಲೇ ಇನ್ನು ಕೆಲವರನ್ನು ನಿರಾಕರಿಸಿದ್ದು ತಿಳಿದು ಬರುವುದು. **ಮನ್ಯುನಿರ್ಜಯಃ ನ** ದೈನ್ಯನಿರ್ಜಯ ಇಲ್ಲ **ತಪಃ** ತಾಪಕತ್ವ ಇದೆ. ''ಮನ್ಯುರ್ದೈನ್ಯೇ ಕ್ರತೌ ಕ್ರುಧಿ'' ಎಂದು ವಿಶ್ವವಿದೆ. ಇದರಿಂದ ಸೂರ್ಯನನ್ನು ನಿರಾಕರಿಸಿರುವಳು. **ಕ್ವಚಿತ್ ಜ್ಞಾನಂ** ಮನೋನಿಯಾಮಕನಾದ ಯಾಮಿನೀ ನಿಯಾಮಕನಾದ ಚಂದ್ರನಲ್ಲಿ ಜ್ಞಾನವಿದ್ದರೂ ಆ ಜ್ಞಾನವು **ಸಂಗವರ್ಜಿತಂ ನ** ಸಂಗವರ್ಜಿತವಲ್ಲ ತಾರಾರಮಣ ಮಾಡಿದವನು, ಹೀಗೆ ಹೇಳುವ ಮೂಲಕ ಚಂದ್ರನನ್ನೂ ನಿರಾಕರಿಸಿದಳು, **ಕ್ವಚಿತ್ ಸಂಗವರ್ಜನಂ** ಅಮುಖ್ಯವಾಯುವಿನಲ್ಲಿ ಸಂಗವರ್ಜನ ಇದೆ, ಆದರೂ ಶ್ರೀಹರಿಯ ವಿಷಯದಲ್ಲಿ ಅಜ್ಞಾನವಿದೆ. ಆದ್ದರಿಂದ ಅವನು ಬೇಡ. **ಯಸ್ಯ** ಹಿರಣ್ಯಕನಿಗೆ **ತಪಃ** ತಪಸ್ಸುಂಟು ಬ್ರಹ್ಮನನ್ನು ಕುರಿತು ತಪಸ್ಸು ಮಾಡಿದ್ದಾನೆ. ಅವನಿಗೆ **ನ ಮನ್ಯುನಿರ್ಜಯಃ** ಸಿಟ್ಟು ಸ್ವಾಧೀನವಿಲ್ಲ ''ಕ್ರುದ್ಧಸ್ಯ ಯಸ್ಯ ಕಂಪಂತೇ ತ್ರಯೋ ಲೋಕಾಃ'' ಎಂದಿದೆ. ಕುಬೇರ ನಿರಾಕರಣದಿಂದ ಯಕ್ಷರನ್ನು ನಿರಾಕರಿಸಿದಂತಾಯಿತು. ಯಕ್ಷನಿಗೆ **ಭೂತಸೌಹೃದಂ** ದೀನನಾದ ಶಿಖಂಡಿಗೆ ತುಂಬುರನು ಶರೀರವನ್ನು ದಾನಮಾಡುವ ಮೂಲಕ ಭೂತಸೌಹಾರ್ದವನ್ನು ತೋರಿಸಿದ ಆದರೆ **ನ ಧರ್ಮಃ** ತನ್ನ ಯಜಮಾನಾದ ಕುಬೇರನು ಬಂದಾಗ ಉತ್ಥಾನ-ಅಭಿಗಮನಗಳನ್ನು ಮಾಡಲಿಲ್ಲ. ಹೀಗಾಗಿ ಅವನಲ್ಲಿ ಪುಣ್ಯವಿಲ್ಲ. ಇದರಿಂದ ಗಂಧರ್ವರನ್ನು ನಿರಾಕರಿಸಿದಂತಾಯಿತು, **ಈಶ್ವರಃ** ಈಶತ್ವಾದಿ ಸಿದ್ಧಿ ಇದ್ದರೂ **ಪರತೋ ವ್ಯಪಾಶ್ರಯಃ** ಮತ್ತೊಬ್ಬರಿಗೆ ಅಧೀನರಾಗಿ ಇರುವುದರಿಂದ ಸಿದ್ಧರ ವ್ಯಾವೃತ್ತಿ ಆಯಿತು. ಇದರಿಂದ ಚಾರಣರನ್ನು ನಿಷೇಧಿಸಿರುವರು.

ಛಲಾರೀ ಃ- ಬ್ರಹ್ಮನು ಅತಿವೃದ್ಧನು, ಸೂರ್ಯನು ಸಂತಾಪಕರ್ತಾ, ವಾಯು ಚಂಚಲ, ರುದ್ರ ದಿಗಂಬರನು, ಇಂದ್ರ ಗರ್ವಿಷ್ಠನು, ಚಂದ್ರ ಪ್ರತಿದಿನ ಕ್ಷಯಯುಕ್ತನು. ಈ ರೀತಿಯಿಂದಲೂ ರಮಾದೇವಿ ಬ್ರಹ್ಮಾದಿಗಳಲ್ಲಿ ದೋಷಗಳನ್ನು ಚಿಂತಿಸಿದಳು ಎಂದು ಆದಿಪುರಾಣದಲ್ಲಿ ಹೇಳಿದೆ.

ಏಷ ಬ್ರಹ್ಮಾತಿವೃದ್ಧಸ್ತಪತಿ ದಿನಪತಿಶ್ಚಂಚಲೋ ಮಾತರಿಶ್ವಾ
ದಿಗ್ವಾಸಾ ನೀಲಕಂಠಸ್ತ್ರಿದಶಪತಿರಸೌ ಗರ್ವಿತಃ ಕ್ಷೀಯತೇಽಬ್ಜಃ ।
ಇತ್ಥಂ ದೇವ್ಯಾ ವಿಚಿಂತ್ಯ ಭ್ರಮರಕುಲಕಲಾಗೀತಶಬ್ದಪ್ರಪುಲ್ಲಾ
ದತ್ತಾ ಮಾಲಾ ಮುರಾರೇಃ ಸುರತರುಕುಸುಮಾಲಂಕೃತಾ ಪಾತು ಯುಷ್ಮಾನ್ ॥

ಲಿಂಗೇರೀ ಃ- **ಕಶ್ಚನ** ಲೋಕವಿಲಕ್ಷಣನಾದ **ಸುಮಂಗಲಃ** ಸರ್ವದಾ ಮಾಂಗಲ್ಯಯುತನಾದ ಶ್ರೀಮನ್ನಾರಾಯಣನು **ಮಾಂ** ನನ್ನನ್ನು **ಕಾಂಕ್ಷತೇ** ಇಚ್ಛಿಸುವನು. ''ಯಯೋರೇವ ಸಮಂ ವಿತ್ತಂ ಯಯೋರೇವ ಸಮಂ ವಯಃ । ತಯೋರ್ವಿವಾಹೋ ವಾದಶ್ಚ ನೋತ್ತಮಾಧಮಯೋಃ ಕ್ವಚಿತ್'' ಎಂದು ಹೇಳಿದ ಸಾಮ್ಯವು ಇವರಲ್ಲಿ ''ದ್ವಾವೇತೌ ನಿತ್ಯಮುಕ್ತೌ'' ಮುಂತಾದ ಶ್ರುತಿ-ಸ್ಮೃತಿ ಸಿದ್ಧವಾಗಿದೆ. ನಾನು ಯಾವಾಗಲೂ ಅವನ ಹೆಂಡತಿಯೇ ಆಗಿದ್ದೇನೆ. ''ಮಮ ಯೋನಿರ್ಮಹದ್ಬ್ರಹ್ಮ ತಸ್ಮಿನ್ ಗರ್ಭಂ ದಧಾಮ್ಯಹಮ್'' ಎಂದು ಶ್ರೀಹರಿಯ ಮಾತು ಎಂಬುದನ್ನು ಹಿಶಬ್ದದಿಂದ ತಿಳಿಸುವರು.

ನಾರಾಯಣನು ಸರ್ವಚೇತನವಿಲಕ್ಷಣ ಮತ್ತು ಸರ್ವದಾ ಮಾಂಗಲ್ಯ ಇವೆರಡೂ ''ದ್ವಾವಿಮೌ ಪುರುಷೌ ಲೋಕೇ'' ''ಉತ್ತಮಃ ಪುರುಷಸ್ತ್ವನ್ಯಃ'' ''ಮಂಗಲಾನಾಂ ಚ ಮಂಗಲಮ್'' ಮುಂತಾದ ಭಾರತದಿಂದ ಸಿದ್ಧವಾಗಿದೆ.

ಸುಮಂ ಗಲಃ ಕಶ್ಚ ಎಂದು ಪದಚ್ಛೇದ ಮಾಡಿಕೊಂಡು ಈ ರೀತಿಯಾಗಿಯೂ ಅರ್ಥವನ್ನು ತಿಳಿಯಬೇಕು. **ಕಶ್ಚ ಗಲಃ** (ವಿಷ್ಣುವಿನ) ಒಂದು ಕಂಠವು **ಸುಮಂ** ಹೂಮಾಲೆಯನ್ನು **ಕಾಂಕ್ಷತೇ** ಅಪೇಕ್ಷಿಸುತ್ತದೆ. ಈ ಹೂಮಾಲೆಯನ್ನು ಸ್ವೀಕರಿಸಲು ವಿಷ್ಣುವಿನ ಕಂಠವೇ ಯೋಗ್ಯವಾಗಿದೆ ಎಂದು ಅರ್ಥ. ವಿಷ್ಣುವೇ ನನ್ನ ಪತಿಯಾಗಲು ಯೋಗ್ಯವೆಂದು ತಾತ್ಪರ್ಯ.

**ಶ್ರೀಶುಕ ಉವಾಚ**

**ಏವಂ ವಿಮೃಶ್ಯಾವ್ಯಭಿಚಾರಿಸದ್ಗುಣಂ**
**ಪರಂ ನಿಜೈಕಾಶ್ರಯಿಸದ್ಗುಣಾಶ್ರಯಮ್ ।**
**ವವ್ರೇ ವರಂ ಸರ್ವಗುಣೈರಪೇಕ್ಷಿತಂ**
**ರಮಾ ಮುಕುಂದಂ ನಿರಪೇಕ್ಷಮೀಪ್ಸಿತಮ್** ॥೨೨॥

**ರಮಾ** ಲಕ್ಷ್ಮೀದೇವಿಯು **ಏವಂ** ಮೇಲೆ ಹೇಳಿದಂತೆ **ವಿಮೃಶ್ಯ** ಬ್ರಹ್ಮಾದಿಚೇತನರು ದೋಷಯುಕ್ತರೆಂದು ಬೇರೆಯವರಿಗೆ ತಿಳಿಸಿಕೊಟ್ಟು **ಅವ್ಯಭಿಚಾರಿ** ಬೇರೆಯವರಲ್ಲಿಲ್ಲದ **ಸತ್** ಅವ್ಯಾಪ್ತಿ-ಅಸಂಭವಗಳಿಲ್ಲದ (ನಿರ್ದುಷ್ಟವಾದ) **ಗುಣಂ** ಪರಿಪೂರ್ಣಗುಣಗಳಿಂದ ಯುಕ್ತನಾದ, **ನಿಜೈಕಾಶ್ರಯಿಸದ್ಗುಣಾಶ್ರಯಂ** ನಿಜ ತಮ್ಮ ಸ್ವರೂಪಗಳಾದ **ಏಕಾಶ್ರಯಿ** ಪರಮಾತ್ಮನೊಬ್ಬನನ್ನೇ ವಿಷಯೀಕರಿಸುವ **ಸದ್ಗುಣ** ಭಕ್ತ್ಯಾದಿಗುಣವಂತನಾದ ಚೇತನರಿಗೆ **ಆಶ್ರಯಂ** ಆಶ್ರಯನಾದ ೨) ತನ್ನ ಸ್ವರೂಪಭೂತಗಳಾದ್ದರಿಂದ ತನ್ನನ್ನು ಮಾತ್ರವೇ ಆಶ್ರಯಿಸಿದ ಸದ್ಗುಣಗಳಿಗೆ ಸತ್ತಾಪ್ರದನಾದ ೩) ತನ್ನವರೂ ತನ್ನನ್ನು ಮಾತ್ರವೇ ಆಶ್ರಯಿಸಿದವರೂ ಆದ ಮುಕ್ತರಿಗೆ ಆಶ್ರಯನಾದ ೪) ತಾನೇ ಮುಖ್ಯನಾಗಿ ಆಶ್ರಯನಾಗಿರುವ ಭಕ್ತರ ಸದ್ಗುಣಗಳಿಗೆ ಅವರವರ ಯೋಗ್ಯತಾನುಸಾರ ಸತ್ತಾಪ್ರದನಾಗಿ ಆಶ್ರಯನಾಗಿರುವ **ಮುಕುಂದಂ** ಇನ್ನೂ ಮುಕ್ತರಾಗದ ಮುಕ್ತಿಯೋಗ್ಯರಿಗೆ ಮೋಕ್ಷವನ್ನು ಕೊಡುವ **ಸರ್ವಗುಣೈಃ** ಭಕ್ತಿ-ದಯಾ ಮೊದಲಾದ ಎಲ್ಲ ಸದ್ಗುಣಗಳಿಂದಲೂ **ಅಪೇಕ್ಷಿತಂ** ವಾಸಸ್ಥಳನೆಂದು ಅಪೇಕ್ಷಿತನಾದ ಎಲ್ಲ ಸಜ್ಜನರಿಂದಲೂ ಭಕ್ತ್ಯಾದಿಗುಣಗಳಿಂದ ಉಪಾಸ್ಯನಾದ **ನಿರಪೇಕ್ಷಂ** ತನ್ನ ಸ್ವರೂಪ, ಪ್ರಮಿತಿ, ಪ್ರವೃತ್ತಿಗಳಿಗೆ ಬೇರೆಯವರ ಅಪೇಕ್ಷೆಯಿಲ್ಲದ, ಸ್ವತಂತ್ರನಾದ ಆದರೆ **ಈಪ್ಸಿತಂ** ಲಕ್ಷ್ಮೀ ಮೊದಲಾದ ಎಲ್ಲ ಸಚ್ಚೇತನರಿಗೂ ಹೊಂದಲಪೇಕ್ಷಿತನಾದ **ಪರಂ (ವರಂ)** ಸರ್ವೋತ್ತಮನಾದ **ಪದಂ** ತನ್ನ ಆಶ್ರಯನಾದ ಪತಿಯನ್ನು **ವವ್ರೇ** ವರಿಸಿದಳು.

ಈ ಶ್ಲೋಕದಲ್ಲಿ ಶ್ರೀಹರಿಯ ನಿಯತಪತ್ನಿಯಾದ ರಮೆಯು ಇತರರನ್ನು ನೋಡಿ ಆಲೋಚನೆ ಮಾಡಿದಳು ಎಂದು ಹೇಳುವದು ಹೇಗೆ ಯುಕ್ತವಾದೀತು ಎಂದು ಶಂಕೆ ಬಂದರೆ ಪ್ರಮಾಣದಿಂದ ಶ್ರೀಮದಾಚಾರ್ಯರು ಉತ್ತರಿಸುವರು-

**...ತಾತ್ಪರ್ಯ...**

**ಅನಾದ್ಯನಂತಕಾಲೇऽಪಿ ವಿಷ್ಣುಮೇವಾಶ್ರಿತಾ ರಮಾ**
**ಅನ್ಯೇಷಾಂ ಜ್ಞಾಪನಾರ್ಥಾಯ ದೋಷಾನುಕ್ತ್ವೇತರಾನ್ ಜಹೌ ।।ಇತಿ ಚ।।**

ಅನಾದ್ಯನಂತಕಾಲದಲ್ಲಿಯೂ ಲಕ್ಷ್ಮೀದೇವಿ ಶ್ರೀವಿಷ್ಣುವನ್ನೇ ಆಶ್ರಯಿಸಿ ಕೊಂಡಿದ್ದಾಳೆ. ಇದನ್ನು ತಿಳಿಸುವುದಕ್ಕಾಗಿಯೇ ಬ್ರಹ್ಮಾದಿಗಳಲ್ಲಿಯ ದೋಷಗಳನ್ನು ಹೇಳಿ ಅವರನ್ನು ಪರಿತ್ಯಜಿಸಿದಳು. ಬ್ರಹ್ಮಾದಿಗಳೆಲ್ಲರೂ ದೋಷಯುಕ್ತರು. ಶ್ರೀಹರಿಯೊಬ್ಬನೇ ದೋಷರಹಿತ. ಈ ಪ್ರಮೇಯವನ್ನು ಸಜ್ಜನರಿಗೆ ತಿಳಿಸುವುದಕ್ಕಾಗಿ ದೇವತೆಗಳಲ್ಲಿಯ ದೋಷಗಳನ್ನು ಲಕ್ಷ್ಮೀದೇವಿಯು ಹೇಳಿದಳು. ಆ ದೇವತೆಗಳನ್ನು ಬಿಟ್ಟಳು. ಹೀಗೆ ಮಾಡದೆ ಕೂಡಲೇ ಶ್ರೀಹರಿಯನ್ನು ಸ್ವೀಕರಿಸಿದ್ದರೆ ಇತರರು ದೋಷಿಗಳು, ಭಗವಂತನೊಬ್ಬನೇ ನಿರ್ದೋಷನೆಂದು ಆಗುತ್ತಿರಲಿಲ್ಲ. ಅದಕ್ಕಾಗಿಯೇ ಲಕ್ಷ್ಮೀದೇವಿಯು ಹೀಗೆ ಮಾಡಿದ್ದಾಳೆ.

ಹೊರತು ಲಕ್ಷ್ಮೀದೇವಿಯು ಈಗ ವಿಷ್ಣುವನ್ನು ಆಶ್ರಯಿಸಿದಳು. ಸರ್ವಕಾಲದಲ್ಲಿ ಅಲ್ಲ ಎಂದರ್ಥವಲ್ಲ. ಅಥವಾ ಲಕ್ಷ್ಮೀದೇವಿಗೆ ಅಜ್ಞಾನವಿದೆ ಎಂದೂ ಅಲ್ಲ. ।।೨೨।।

**ತಸ್ಯಾಂಸದೇಶ ಉಶತೀಂ ನವಕಂಜಮಾಲಾಂ**
**ಮಾದ್ಯನ್ಮಧುವ್ರತವರೂಥಗಿರೋಪಘುಷ್ಟಾಮ್ ।**
**ತಸ್ಥೌ ನಿವೀಯ ನಿಕಟೇ ತದುರಃ ಸ್ವಧಾಮ**
**ಸವ್ರೀಡಹಾಸವಿಕಸನ್ನಯನೇನ ಭೀತಾ ।।೨೩।।**

**ತಸ್ಯ** ನಿರ್ದೋಷನೂ, ಗುಣಪೂರ್ಣನೂ, ಸ್ವತಂತ್ರನೂ ಆದ ಶ್ರೀಹರಿಯ **ಅಂಸದೇಶೇ** ಹೆಗಲಿನಲ್ಲಿ **ಉಶತೀಂ** ಸಜ್ಜನರ ಇಷ್ಟಾರ್ಥವನ್ನು ನೆರವೇರಿಸುವ, ಮನೋಹರವಾದ, ಪ್ರಕಾಶಮಾನವಾದ **ಮಾದ್ಯತ್** ಪುಷ್ಪರಸಪಾನದಿಂದ ಮದಿಸಿದ (ಹರ್ಷಗೊಂಡ) **ಮಧುವ್ರತ** ದುಂಬಿಗಳ **ವರೂಥ** ಸಮೂಹ **ಗಿರಾ** ಝೇಂಕಾರದಿಂದ **ಉಪಘುಷ್ಟಾಂ** ಶಬ್ದಿತವಾದ **ನವಕಂಜಮಾಲಾಂ** ಹೊಸದಾಗಿ ಅರಳಿರುವ ಕಮಲಗಳ ಮಾಲೆಯನ್ನು **ನಿವೀಯ** ಹಾಕಿ **ಸವ್ರೀಡ** ನಾಚಿಕೆಯಿಂದಲೂ **ಹಾಸ** ನಗುವಿನಿಂದಲೂ ಕೂಡಿದ **ವಿಕಸನ್ನಯನೇನ** ಅರಳಿದ ಕಣ್ಣುಗಳಿಂದ **ಸ್ವಧಾಮ** ಅನಾದಿಕಾಲದಿಂದ ತನ್ನ ವಾಸಸ್ಥಳವಾದ **ತದುರಃ** ಶ್ರೀಹರಿಯ ವಕ್ಷಸ್ಥಳವನ್ನು **ಪಶ್ಯಂತೀ** ನೋಡುತ್ತ **ಭೀತಾ** ಹೆದರಿದವಳಂತೆ ಕಂಪವುಳ್ಳವಳಾಗಿ (ಮಿಥುನವು ಸೇರಿದಾಗ ಉಂಟಾಗುವ ಒಂದು ಅವಸ್ಥಾವಿಶೇಷ) **ನಿಕಟೇ** ಪರಮಾತ್ಮನ ಸಮೀಪದಲ್ಲಿ **ತಸ್ಥೌ** ನಿಂತಳು. ।।

ಸತ್ಯ ಃ- ಹಾಸವಿಕಸನ್ನಯನಾ ಇನಭೀತಾ ಎಂದು ಪದವಿಭಾಗ ಮಾಡಿಕೊಂಡು ಹೀಗೆ ಅರ್ಥವನ್ನು ತಿಳಿಯಬೇಕು. ಹಾಸೇನ ವಿಕಸಂತೀ ನಯನೇ ಯಸ್ಯಾಃ ಸಾ ಹಾಸವಿಕಸನ್ನಯನಾ । ಇನಃ ಇತಿ ಭೀತಾ ಇನಭೀತಾ । ಹೀಗೆ ವಿಗ್ರಹ ಮಾಡಿಕೊಳ್ಳಬೇಕು. ಹೀಗೆ ಮಾಡಿದಾಗ ರಮಾ ಎಂಬ ಕರ್ತೃಪದ ಅಧ್ಯಾಹಾರ ಮಾಡಬೇಕಿಲ್ಲ. ಹಾಗೂ ಕಣ್ಣು ಒಂದೇ ಎಂಬ ಶಂಕೆಗೂ ಅವಕಾಶವಿಲ್ಲ. ''ಹಾಸವಿಕಸನ್ನಯನಾ'' ಎಂಬುದೇ ಕರ್ತೃಪದ. ಸವ್ರೀಡಂ ಎಂಬುದು ಕ್ರಿಯಾವಿಶೇಷಣ. ಮೊದಲು ಮುಖಾರವಿಂದವನ್ನು ನೋಡಿ, ಸ್ವಾಮಿ ಎಂದು ಹೆದರಿ ನಂತರ ವಕ್ಷಸ್ಥಳ ನೋಡುತ್ತ ನಿಂತಳೆಂದು ಭಾವ. ।।

ಇಲ್ಲಿ ನವಕಂಜಮಾಲಾಂ ಎಂದು ಕಮಲದ ಮಾಲೆ ಎಂದು ಹೇಳಿದೆ. ಈ ಕಥಾಸಂಗ್ರಾಹಕ ಪುರಾಣದಲ್ಲಿ ಏಷ ಬ್ರಹ್ಮಾ.. ಎಂಬ ಶ್ಲೋಕದಲ್ಲಿ ''ಸುರತರು-ಕುಸುಮಾಲಂಕೃತಾ ಮಾಲಾ ಮುರಾರೇಃ ದತ್ತಾ'' ಎಂದು ಹೇಳಿದೆ. ಆದ್ದರಿಂದ ವಿರೋಧ ತೋರುತ್ತದೆ. ಆ ವಿರೋಧವಿಲ್ಲ. ಯಾಕೆಂದರೆ ಸುರತರುವಿನ ಪುಷ್ಪಗಳು ಒಂದೇ ರೀತಿಯಾಗಿ ಇರುತ್ತವೆ ಎಂದಲ್ಲ. ಬಯಸಿದ ಹೂಗಳನ್ನೆಲ್ಲ ಅದು ಕೊಡುತ್ತದೆ. ಆದ್ದರಿಂದ ಈಗ ಆ ಸುರತರುವಿನ ಹೂಗಳು ಕಮಲದ ಹೂಗಳಾಗಿವೆ. ಈ ವಿಷಯ ಭಾರತದ

ಹರಿವಂಶದಲ್ಲಿ ನಾರದರು ರುಕ್ಮಿಣಿಗೆ ತಿಳಿಸಿದ್ದಾರೆ. ''ಯಾನಿ ಯಾನಿ ಚ ಪುಷ್ಪಾಣಿ ತ್ವಂ ದೇವ್ಯಭಿಲಷಿಷ್ಯಸಿ । ಕುಸುಮಂ ವೃಕ್ಷರಾಜಸ್ಯ ತಾನಿ ತಾನಿ ಪ್ರದಾಸ್ಯತಿ ॥ ಹೇ ದೇವಿಯೇ! ಯಾವ ಯಾವ ಹೂಗಳನ್ನು ನೀನು ಅಪೇಕ್ಷಿಸುವಿಯೋ ಆ ಎಲ್ಲ ಹೂಗಳನ್ನೂ ಈ ದೇವವೃಕ್ಷವು ನೀಡುತ್ತದೆ. ಹೀಗೆ ಈ ವೃಕ್ಷದ ಸಾಮರ್ಥ್ಯವನ್ನು ಹೇಳಿದ್ದಾರೆ. ಆದ್ದರಿಂದ ಪ್ರಕೃತ ವಿರೋಧವಿಲ್ಲ ಎಂದು ತಿಳಿಯಬೇಕು. ॥೨೩॥

**ಸ್ವಸ್ಯಾಃ ಸ್ತ್ರಿಯಸ್ತ್ರಿಜಗತೋ ಜನಕೋ ಜನನ್ಯಾ**
**ವಕ್ಷೋ ನಿವಾಸಮಕರೋತ್ ಪರಮಂ ವಿಭೂತೇಃ ।**
**ಶ್ರೀಃ ಸ್ವಾಃ ಪ್ರಜಾಃ ಸಕರುಣೇನ ನಿರೀಕ್ಷಣೇನ**
**ಯತ್ರ ಸ್ಥಿತೈಧಯತ ಸಾಧಿಪತೀಂಸ್ತ್ರಿಲೋಕಾನ್** ॥೨೪॥

**ತ್ರಿಜಗತಃ** ಮೂರು ಜಗತ್ತಿಗೆ (ಲೋಕಕ್ಕೆ) **ಜನಕಃ** ತಂದೆಯಾದ ಅಜಿತನಾಮಕ ಪರಮಾತ್ಮನು **ತ್ರಿಜಗತಃ ಜನನ್ಯಾಃ** ಮೂರು ಲೋಕಕ್ಕೂ ತಾಯಿಯಾದ **ಸ್ವಸ್ಯಾಃ ಸ್ತ್ರಿಯಃ** ಅನಾದ್ಯನಂತಕಾಲದಿಂದ ತನ್ನ ಹೆಂಡತಿಯಾದ **ವಿಭೂತೇಃ** ಮಹಾಲಕ್ಷ್ಮೀದೇವಿಗೆ **ಪರಮಂ ವಕ್ಷಃ** ಸರ್ವೋತ್ತಮವಾದ ತನ್ನ ಎದೆಯನ್ನು **ಪರಮಂ ನಿವಾಸಂ** ಅತ್ಯುತ್ತಮ ವಾಸಸ್ಥಳವನ್ನಾಗಿ **ಅಕರೋತ್** ಮಾಡಿದನು. **ಯತ್ರ** ಯಾವ ವಕ್ಷಸ್ಥಳದಲ್ಲಿ **ಸ್ಥಿತಾ** ಇದ್ದುಕೊಂಡು **ಶ್ರೀಃ** ಶ್ರೀಶಬ್ದವಾಚ್ಯಳಾದ ರಮಾದೇವಿಯು **ಸಕರುಣೇನ** ದಯಾಯುಕ್ತವಾದ **ನಿರೀಕ್ಷಣೇನ** ನೋಟದಿಂದ **ಸಾಧಿಪತೀನ್** ಆಯಾ ಲೋಕಗಳ ಅಧಿಪತಿಗಳಾದ ಬ್ರಹ್ಮಾದಿಗಳಿಂದ ಸಹಿತವಾದ **ತ್ರಿಲೋಕಾನ್** ಮೂರು ಲೋಕಗಳನ್ನು ಅಲ್ಲಿಯ ಜನರನ್ನು **ಸ್ವಾಃ ಪ್ರಜಾಃ** ತನ್ನ ಮಕ್ಕಳನ್ನು **ಐಧಯತ್** ಎಲ್ಲ ರೀತಿಯ ಅಭಿವೃದ್ಧಿಯುಳ್ಳವರನ್ನಾಗಿ ಮಾಡಿದಳು.

ಸತ್ಯ ಃ- ''ಸಾಧಿಪತೀನ್'' ಎಂದು ಹೇಳಿದ್ದರಿಂದ ಆಧಿನಾ ಮನೋವ್ಯಥಯಾ ಸಹಿತಾಃ ಸಾಧಯಃ ತೇ ಪತಯಃ ಯೇಷಾಂ ತೇ ಎಂದು ವಿಗ್ರಹ ಮಾಡುವುದರಿಂದ ಅವರಲ್ಲಿರುವ ಸ್ಥಿತಿಯನ್ನು ಹೇಳಿದಂತಾಗುವುದು. ಅದನ್ನೇ ''ಯಂ ಕಾಮಯೇ'' ಮುಂತಾಗಿ ಹೇಳಿದೆ. ॥೨೪॥

೨೪ನೇ ಶ್ಲೋಕದಲ್ಲಿ ಸ್ವಾರಸಿಕವಾಗಿ ತ್ರಿಜಗತಃ ಜನನ್ಯಾಃ ಜನಕಃ ಎಂದು ಅನ್ವಯ ತೋರುವದು. ಅದಕ್ಕೆ ಪೂರಕವಾಗಿ ''ಯತಃ ಪ್ರಸೂತಾ ಜಗತಃ ಪ್ರಸೂತಿಃ'' ಎಂಬ ಶ್ರುತಿಯೂ ಇದೆ. ಆದರೆ ಯಾವ ಟಿಪ್ಪಣಿಕಾರರೂ ಹಾಗೆ ಅನ್ವಯ ಮಾಡದೆ ತ್ರಿಜಗತಃ ಜನಕಃ ತ್ರಿಜಗತಃ ಜನನ್ಯಾಃ ಎಂದು ಅನ್ವಯ ಮಾಡಿ ಜಗತ್ತಿನ ತಂದೆ-ತಾಯಿಗಳೆಂದು ಅರ್ಥ ಮಾಡಿರುವರು. ಇದಕ್ಕೆ ಹೀಗೆ ಕಾರಣ ಹೇಳಬಹುದು. ''ಸ ಇದಂ ಸರ್ವಮಸೃಜತ'' ಎಂಬುದು ಅಸಂಕುಚಿತವಾಗಿ ಸರ್ವಸ್ರಷ್ಟೃತ್ವವನ್ನು ಹೇಳಲು ಪರಾಧೀನ

ವಿಶೇಷಾವಾಪ್ತಿರೂಪವಾದ ಉತ್ಪತ್ತಿಯನ್ನು ''ಯತಃ ಪ್ರಸೂತಾ...'' ಎಂಬಲ್ಲಿ ಹೇಳಿದ್ದರೂ ಇಲ್ಲಿ ಮದುವೆಯ ಸಂದರ್ಭದಲ್ಲಿ ರಮಾಜನಕನೆಂದು ಹೇಳಿದರೆ ಮಗಳನ್ನೇ ಮದುವೆಯಾದನೇ? ಹಾಗಾಗಬಹುದೇ? ಎಂಬ ಶಂಕೆ ಬರದಿರಲಿ ಎಂದು ಆ ರೀತಿ ಅನ್ವಯ ಹೇಳಿಲ್ಲ. ಪತಿಯ ಉಪಸರ್ಜನತಯಾ ಪತ್ನಿಗೆ ನಮಸ್ಕಾರ ಸೂಚಿಸಲು ''ಶ್ರಿಯಃ ಪತ್ಯೇ'' ಎಂದು ಹೇಳಿದ ಟೀಕಾಚಾರ್ಯರು, ಶ್ರೀಮದಾಚಾರ್ಯರನ್ನೂ, ಭಾರತೀಯನ್ನೂ ಪ್ರತ್ಯೇಕ ಶ್ಲೋಕಗಳಿಂದ ಹೇಳಿರುವರು. ಅದಕ್ಕೆ ಕಾರಣ ''ಸದಾ ಸಮಸ್ತಾಶ್ರಮಭಾಕ್ ಸುರೇಶ್ವರಃ'' ಎಂದಿದ್ದರೂ ಮನುಷ್ಯರಾಗಿ ಅವತರಿಸಿದಾಗ ಸನ್ಯಾಸಿಗಳಾಗಿರುವುದರಿಂದ ಅವರೊಡನೆ ಭಾರತಿಯನ್ನು ಹೇಳಿದರೆ ಜನರು ತಪ್ಪು ತಿಳಿದಾರು? ಆದ್ದರಿಂದ ಅವರೊಡನೆ ಭಾರತಿಯನ್ನು ಹೇಳಿಲ್ಲ. ಇಲ್ಲಿಯೂ ಹಾಗೆಯೇ ಎಂದು ತಿಳಿಯಬೇಕು.

**ಶಂಖತೂರ್ಯಮೃದಂಗಾನಾಂ ವಾದಿತ್ರಾಣಾಂ ಪೃಥಕ್ ಸ್ವನಃ ।**
**ದೇವಾನುಗಾನಾಂ ಸಸ್ತ್ರೀಣಾಂ ನೃತ್ಯತಾಂ ಗಾಯತಾಮಭೂತ್ ॥೨೫॥**

ಆ ಲಕ್ಷ್ಮೀನಾರಾಯಣರ ವಿವಾಹಮಹೋತ್ಸವ ಕಾಲದಲ್ಲಿ **ಶಂಖತೂರ್ಯ-ಮೃದಂಗಾನಾಂ** ಶಂಖ-ತೂರ್ಯ-ಮೃದಂಗಗಳೆಂಬ **ವಾದಿತ್ರಾಣಾಂ** ವಾದ್ಯಗಳ **ಸ್ವನಃ** ಶಬ್ದವು **ನೃತ್ಯತಾಂ** ನರ್ತನ ಮಾಡುತ್ತಿದ್ದ **ಗಾಯತಾಂ** ಹಾಡುತ್ತಿದ್ದ **ಸಸ್ತ್ರೀಣಾಂ** ಅಪ್ಸರೆಯರಿಂದ ಕೂಡಿದ **ದೇವಾನುಗಾನಾಂ** ವಿದ್ಯಾಧರ ಮತ್ತು ಗಂಧರ್ವರ **ಸ್ವನಃ** ಶಬ್ದವು **ಪೃಥಕ್** ಬೇರೆ ಬೇರೆ **ಅಭೂತ್** ಆಯಿತು. ಪ್ರತ್ಯೇಕವಾಗಿ ಕೇಳಿ ಬಂದಿತು. ॥೨೫॥

**ಬ್ರಹ್ಮರುದ್ರಾಂಗಿರೋಮುಖ್ಯಾಃ ಸರ್ವೇ ವಿಶ್ವಸೃಜೋ ವಿಭುಮ್ ।**
**ಈಡಿರೇಽವಿತಥೈರ್ಮಂತ್ರೈಸ್ತಲ್ಲಿಂಗೈಃ ಪುಷ್ಪವರ್ಷಿಣಃ ॥೨೬॥**

**ಬ್ರಹ್ಮರುದ್ರಾಂಗಿರೋಮುಖ್ಯಾಃ** ಬ್ರಹ್ಮದೇವರು, ರುದ್ರದೇವರು ಬ್ರಹ್ಮಮಾನಸ-ಪುತ್ರರಾದ ಅಂಗಿರಸ ಋಷಿಗಳೇ ಶ್ರೇಷ್ಠರಾಗಿ ಉಳ್ಳ **ಸರ್ವೇ** ಎಲ್ಲ **ವಿಶ್ವಸೃಜಃ** ಪ್ರಜಾಪತಿಗಳು **ಪುಷ್ಪವರ್ಷಿಣಃ ಸಂತಃ** ಹೂಮಳೆ ಗರೆಯುವವರಾಗಿ **ವಿಭುಂ** ಲಕ್ಷ್ಮೀಸಹಿತನಾದ ಅಜಿತನನ್ನು **ತಲ್ಲಿಂಗೈಃ** ಶ್ರೀಹರಿಯ ಅಸಾಧಾರಣ ಧರ್ಮಗಳನ್ನು ಹೇಳುವ ಲಕ್ಷ್ಮಿಯ ಲಕ್ಷಣಗಳನ್ನು ಹೇಳುವ ಆದ್ದರಿಂದಲೇ **ಅವಿತಥೈಃ** ಅನ್ವರ್ಥಗಳಾದ **ಮಂತ್ರೈಃ** ''ವಿಷ್ಣೋರ್ನು ಕಂ ವೀರ್ಯಾಣಿ'' ಮುಂತಾದ ವಿಷ್ಣುಸೂಕ್ತ, ''ಹಿರಣ್ಯವರ್ಣಾಂ ಹರಿಣೀಂ'' ಮುಂತಾದ ಶ್ರೀಸೂಕ್ತಗಳಿಂದ **ಈಡಿರೇ** ಸ್ತುತಿಸಿದರು. ॥೨೬॥

ಲಕ್ಷ್ಮೀಕಟಾಕ್ಷದ ಮಹಿಮೆಯನ್ನು ಹೇಳುತ್ತಾರೆ-

**ಶ್ರಿಯಾ ವಿಲೋಕಿತಾ ದೇವಾಃ ಸಪ್ರಜಾಪತಯಃ ಪ್ರಜಾಃ ।**
**ಶೀಲಾದಿಗುಣಸಂಪನ್ನಾ ಲೇಭಿರೇ ನಿರ್ವೃತಿಂ ಪರಾಮ್ ॥೨೭॥**

**ಸಪ್ರಜಾಪತಯಃ** ಬ್ರಹ್ಮದೇವರಿಂದ ಸಹಿತರಾದ **ದೇವಾಃ** ರುದ್ರಾದಿದೇವತೆಗಳು **ಪ್ರಜಾಃ** ಇತರ ಸಜ್ಜನರು **ಶ್ರಿಯಾ** ವಿಷ್ಣುವಿನ ವಕ್ಷಸ್ಥಳದಲ್ಲಿ ವಾಸಿಸುವ ಲಕ್ಷ್ಮೀದೇವಿಯಿಂದ **ವಿಲೋಕಿತಾಃ ಸಂತಃ** ನೋಡಲ್ಪಟ್ಟವರಾಗಿ **ಶೀಲಾದಿಗುಣಸಂಪನ್ನಾಃ ಸಂತಃ** ಒಳ್ಳೆ ಸ್ವಭಾವ ಮೊದಲಾದ ಗುಣಗಳಿಂದ ಕೂಡಿದವರಾಗಿ **ಪರಾಂ** ಅತಿಶಯವಾದ **ನಿರ್ವೃತಿಂ** ಸುಖವನ್ನು **ಲೇಭಿರೇ** ಹೊಂದಿದರು. ಉತ್ತಮವಾದ ಮೋಕ್ಷವನ್ನು ಹೊಂದಿದರು ಎಂದು ಭಾವ. ।।೨೭।।

**ನಿಸ್ಸತ್ತ್ವಾ ಲೋಲುಪಾ ರಾಜನ್ ನಿರುದ್ಯೋಗಾ ಗತತ್ರಪಾಃ ।**
**ಯದಾ ಚೋಪೇಕ್ಷಿತಾ ಲಕ್ಷ್ಮ್ಯಾ ಬಭೂವುರ್ದೈತ್ಯದಾನವಾಃ ।।೨೮।।**

**ರಾಜನ್** ಪರೀಕ್ಷಿದ್ರಾಜನೇ **ಯದಾ ಚ** ಯಾವಾಗ **ದೈತ್ಯದಾನವಾಃ** ದಿತಿಪುತ್ರರು ದನುಪುತ್ರರೂ ಆದ ಅಸುರರು ಮತ್ತು **ದೈತ್ಯೇಷು** ದೈತ್ಯರಲ್ಲಿಯೇ ಒಬ್ಬನಾದ **ದಾನಸ್ಯ ವಾಃ** ಭೂದಾನದ ನೀರು ಉಳ್ಳ, ಭೂದಾನವನ್ನು ಮಾಡಿದ ಎಂದು ಅರ್ಥ ಬಲಿಚಕ್ರವರ್ತಿಯು (ನಿರಂತರ ದಾನ ಮಾಡುವ ಬಲಿಯೂ ಸಹ) **ಲಕ್ಷ್ಮ್ಯಾ** ಲಕ್ಷ್ಮೀದೇವಿಯಿಂದ **ಉಪೇಕ್ಷಿತಾಃ** ಕರುಣಾಕಟಾಕ್ಷ ವಿಷಯರಾಗದೇ ಉದಾಸೀನ ಮಾಡಲ್ಪಟ್ಟರೋ **ತದಾ** ಆಗ **ನಿಃಸತ್ವಾಃ** ಬಲಹೀನರು **ಲೋಲುಪಾಃ** ವಿಷಯಾಸಕ್ತರೂ **ನಿರುದ್ಯೋಗಾಃ** ಪ್ರಯತ್ನರಹಿತರೂ **ಗತತ್ರಪಾಃ** ನಿರ್ಲಜ್ಜರೂ **ಬಭೂವುಃ** ಆದರು.

ಲಿಂಗೇರೀ :- ಬಲಹೀನರಾದ್ದರಿಂದ ನಿರುದ್ಯೋಗಿಗಳು, ನಾಚಿಕೆಯಿಲ್ಲದವರಾದ್ದರಿಂದ ಲೋಲುಪರೂ ಲಕ್ಷ್ಮೀಅಪೇಕ್ಷೆವುಳ್ಳವರೂ ಆದರು ಎಂದರ್ಥ. ವ್ಯರ್ಥವಾದ ಆಕಾಂಕ್ಷೆ ಉಳ್ಳವರು ಆದರು. ।।೨೮।।

**ಅಥಾಸೀದ್ ವಾರುಣೀ ದೇವೀ ಕನ್ಯಾ ಕಮಲಲೋಚನಾ ।**
**ಅಸುರಾ ಜಗೃಹುಸ್ತಾಂ ವೈ ಹರೇರನುಮತೇನ ತೇ ।।೨೯।।**

**ಅಥ** ಲಕ್ಷ್ಮೀದೇವಿಯು ಸಮುದ್ರದಿಂದ ವ್ಯಕ್ತಳಾಗಿ ನಾರಾಯಣನನ್ನು ಮದುವೆಯಾದ ನಂತರ **ಕಮಲಲೋಚನಾ** ಕಮಲಗಳಂತೆ ಕಣ್ಣುಗಳುಳ್ಳ **ಕನ್ಯಾ** ಕುಮಾರಿಯಾದ **ವಾರುಣೀ ದೇವೀ** ಮದ್ಯಕ್ಕೆ ಅಭಿಮಾನಿಯಾದ ವಾರುಣೀದೇವತೆಯು (ಹೆಂಡದೊಂದಿಗೆ) **ಆಸೀತ್** ಸಮುದ್ರದಿಂದ ಜನಿಸಿದಳು. **ಹರೇಃ** ಶ್ರೀಹರಿಯ **ಅನುಮತೇನ** ಒಪ್ಪಿಗೆಯಿಂದ **ತಾಂ** ಅವಳನ್ನು **ತೇ ವೈ** ಅಸುರರೇ **ಜಗೃಹುಃ** ತೆಗೆದುಕೊಂಡರು. ।।೨೯।।

**ಅಥೋದಧೇರ್ಮಥ್ಯಮಾನಾತ್ ಕಾಶ್ಯಪೈರಮೃತಾರ್ಥಿಭಿಃ ।**
**ಉದತಿಷ್ಠನ್ ಮಹಾರಾಜ ಪುರುಷಃ ಪರಮಾದ್ಭುತಃ ।।೩೦।।**

**ದೀರ್ಘಪೀವರದೋರ್ದಂಡಃ ಕಂಬುಗ್ರೀವೋಽರುಣೇಕ್ಷಣಃ ।**
**ಶ್ಯಾಮಲಸ್ತರುಣಃ ಸ್ರಗ್ವೀ ಸರ್ವಾಭರಣಭೂಷಿತಃ ।।೩೧।।**

**ಪೀತವಾಸಾ ಮಹೋರಸ್ಕಃ ಸುಮೃಷ್ಟಮಣಿಕುಂಡಲಃ ।**
**ನೀಲಕುಂಚಿತಕೇಶಾಂತಃ ಸುಭಗಃ ಸಿಂಹವಿಕ್ರಮಃ ॥೩೨॥**

**ಹೇ ಮಹಾರಾಜ** ಪರೀಕ್ಷಿತನೇ **ಅಥ** ವಾರುಣೀದೇವಿಯು ಹುಟ್ಟಿದ ನಂತರ **ಅಮೃತಾರ್ಥಿಭಿಃ** ಅಮೃತಾಪೇಕ್ಷಿಗಳಾದ **ಕಾಶ್ಯಪೈಃ** ಕಶ್ಯಪರ ಮಕ್ಕಳಾದ ದೇವ-ದಾನವ-ದೈತ್ಯರಿಂದ **ಮಥ್ಯಮಾನಾತ್** ಕಡೆಯಲ್ಪಟ್ಟ **ಉದಧೇಃ** ಕ್ಷೀರಸಮುದ್ರದಿಂದ **ಪರಮಾದ್ಭುತಂ** ಮಹಾಶ್ಚರ್ಯಕರನಾದ, **ದೀರ್ಘಪೀವರದೋರ್ದಂಡಃ** ಉದ್ದವಾದ, ಪುಷ್ಟವಾದ, ದುಂಡಾದ ದಂಡಗಳಂತಿರುವ ಬಾಹುಗಳುಳ್ಳ **ಕಂಬುಗ್ರೀವಃ** ಶಂಖದಂತೆ ಮೂರು ವಲಿ(ರೇಖೆ)ಗಳುಳ್ಳ ಕಂಠ ಉಳ್ಳ **ಅರುಣೇಕ್ಷಣಃ** ಕೊನೆಯಲ್ಲಿ ಕೆಂಪಗಿರುವ ಕಣ್ಣುಳ್ಳ **ಶ್ಯಾಮಲಃ** ಕಪ್ಪು (ಇಂದ್ರನೀಲ) ಬಣ್ಣವುಳ್ಳ **ತರುಣಃ** ಯುವಕನಾದ **ಸ್ರಗ್ವೀ** ಹಾರ ಹಾಕಿಕೊಂಡ **ಸರ್ವಾಭರಣಭೂಷಿತಃ** ಎಲ್ಲ ಆಭರಣಗಳಿಂದ ಅಲಂಕೃತನಾದ **ಪೀತವಾಸಾಃ** ಹಳದಿಯ ಬಟ್ಟೆಯನ್ನುಟ್ಟ **ಮಹೋರಸ್ಕಃ** ಅಗಲವಾದ ಎದೆಯುಳ್ಳ **ಸುಮೃಷ್ಟಮಣಿಕುಂಡಲಃ** ಚೆನ್ನಾಗಿ ಪ್ರಕಾಶಿಸುವ ಬಂಗಾರದಲ್ಲಿ ಕೂಡಿಸಿದ ರತ್ನಗಳುಳ್ಳ ಕುಂಡಲಗಳನ್ನು ಧರಿಸಿದ, **ನೀಲಕುಂಚಿತಕೇಶಾಂತಃ** ಕಪ್ಪಾದ ತುದಿಯಲ್ಲಿ (ಕೊನೆಯಲ್ಲಿ) ವಕ್ರವಾದ ಕೂದಲುಳ್ಳ (ಕೇಶಾಶ್ಚ ತದಂತಾಶ್ಚ ಕೇಶಾಂತಾಃ, ನೀಲಾಶ್ಚ ಕುಂಚಿತಾಶ್ಚ ತೇ ಕೇಶಾಂತಾಃ ಯಸ್ಯ ಸಃ ಕ್ರಮಾನ್ನೈಲ್ಯಂ ಕೇಶೇಷು ತದಂತೇ ವಕ್ರತಾ ಚ ಯಸ್ಯ ಸಃ) **ಸುಭಗಃ** ಸುಂದರನಾದ ಷಡ್ಗುಣೈಶ್ವರ್ಯಸಂಪನ್ನನಾದ **ಸಿಂಹವಿಕ್ರಮಃ** ಸಿಂಹದಂತೆ ನಡಿಗೆಯುಳ್ಳ ಅಥವಾ ಪರಾಕ್ರಮವುಳ್ಳ. ॥೩೦.೩೧.೩೨॥

**(ಅಮೃತಸ್ಯ) ಅಮೃತಾಪೂರ್ಣಕಲಶಂ ಬಿಭ್ರದ್ ವಲಯಭೂಷಿತಃ ।**
**ಸ ವೈ ಭಗವತಃ ಸಾಕ್ಷಾದ್ ವಿಷ್ಣೋರಂಶಾಂಶಸಂಭವಃ ॥೩೩॥**

**ಅಮೃತಪೂರ್ಣಕಲಶಂ ಬಿಭ್ರತ್** ಅಮೃತ ತುಂಬಿದ ಕಲಶವನ್ನು ಧರಿಸಿರುವ **ವಲಯಭೂಷಿತಃ** ಕೈಗೆ ಕಡಗಗಳಿಂದ ಅಲಂಕೃತನಾದ **ಪುರುಷಃ** ಪುರುಷನು **ಉದತಿಷ್ಠತ್** ಉದಯಿಸಿದನು ಮೇಲೆದ್ದು ಬಂದನು **ಸಃ** ಆ ಪುರುಷನು **ಸಾಕ್ಷಾತ್** ಅತಿಮುಖ್ಯ ವೃತ್ತಿಯಿಂದ **ಭಗವತಃ** ಭಗವಾನ್ ಎಂಬ ಶಬ್ದದ ಅರ್ಥವಾದ **ವಿಷ್ಣೋಃ** ವಿಷ್ಣುವಿನ ಅಂಶ ಸ್ವರೂಪಾಂಶನಾದ ಪದ್ಮನಾಭನ **ಅಂಶೇನ** ಅಂಶದಿಂದ ಪುರುಷರೂಪದಿಂದ (ಏಕದೇಶದಿಂದ) **ಸಂಭವಃ** ಪ್ರಾದುರ್ಭಾವ ಉಳ್ಳವನು. ವಿಷ್ಣುವಿನ ಅವತಾರವೆಂದರ್ಥ. ॥ ೩೩॥

ಸತ್ಯ ಃ- **ಅಮೃತಾಪೂರ್ಣಕಲಶಂ** ಎಂಬ ಪಾಠ ಸ್ವರಸವಾದುದು ಅಮೃತದಿಂದ ಆ **ಸಮ್ಯಕ್** ಪೂರ್ಣ ಎಂದರ್ಥವಾಗುವದು. ಅಮೃತಾಭೃತಂ ಎಂಬ ಮುಂದಿನ ಮೂಲ ಮೂಲಕವಾಗಿದೆ. ಅಮೃತಸ್ಯ ಎಂಬ ಪಾಠದಲ್ಲಿ ತೃತೀಯಾರ್ಥೇ ಷಷ್ಠೀ ಎಂದು ತಿಳಿಯಬೇಕು.

**ಧನ್ವಂತರಿರಿತಿ ಖ್ಯಾತ ಆಯುರ್ವೇದದೃಗಿಜ್ಯಭಾಕ್ ।**
**ತಮಾಲೋಕ್ಯಾಸುರಾಃ ಸರ್ವೇ ಕಲಶಂ ಚಾಮೃತಾಭೃತಮ್ ॥೩೪॥**

**ಆಯುರ್ವೇದದೃಕ್** ವೈದ್ಯಕವೇದದ ದ್ರಷ್ಟಾರನಾದ **ಇಜ್ಯಭಾಕ್** ಯಜ್ಞಭೋಕ್ತೃವಾದ ಆ ಪರಮಾತ್ಮನು **ಧನ್ವಂತರಿಃ ಇತಿ ಖ್ಯಾತಃ** ಧನ್ವಂತರಿ ಎಂದು ಪ್ರಸಿದ್ಧನಾದನು **ಸರ್ವೇ ಅಸುರಾಃ** ಎಲ್ಲ ದೈತ್ಯರು **ತಂ** ಆ ಧನ್ವಂತರಿಯನ್ನು **ಅಮೃತಾಭೃತಂ** ಅಮೃತದಿಂದ ಪರಿಪೂರ್ಣವಾದ **ಕಲಶಂ** ಕಲಶವನ್ನು **ಆಲೋಕ್ಯ** ನೋಡಿ, **ಅಹರನ್** ಅಪಹರಿಸಿದರು.

ಸತ್ಯ :- **ಯಜ್ಞಭಾಕ್** ಎಂಬ ಪಾಠದಲ್ಲಿ ಯಜ್ಞದಲ್ಲಿ ಕೊಡುವ ಹವಿಸ್ಸಿನ ಭಾಗವುಳ್ಳವನು ಎಂದರ್ಥ. **ಅಮೃತಾಹೃತಂ** ಎಂಬ ಪಾಠದಲ್ಲಿ ಅಮೃತವೆಂಬ ಆಹಾರದಿಂದ ಕೂಡಿದ ಎಂದರ್ಥ.

ಧನ್ವಂ ಪಾಪವನ್ನು ತಾರಯತೀತಿ ಧನ್ವಂತರಿಃ (ಆಧಿಕ್ಯೇ ಅಧಿಕಂ ಎಂದಿರುವದರಿಂದ ಇಲ್ಲಿಯ ಬಿಂದುವಿನಿಂದ ಅತಿಶಯ ತಾರಕನೆಂದರ್ಥ ಬರುತ್ತದೆ.) ೨) ಧನ್ವಂ ಪಾಪಂ ತಾರಯತಿ ಪ್ಲಾವಯತಿ ಲೋಕಾನ್ ಇತಿ ಧನ್ವಂತರಿಃ ಜನರನ್ನು ಪಾಪಸಾಗರದಿಂದ ದಾಟಿಸುವನು ಎಂದು ಅರ್ಥ. ॥೩೪॥

**ಲಿಪ್ಸಂತಃ ಸರ್ವವಸ್ತೂನಿ ಕಲಶಂ ತರಸಾಽಹರನ್ ॥೩೫॥**

**ಸರ್ವವಸ್ತೂನಿ** ಸಮುದ್ರದಲ್ಲಿ ಹುಟ್ಟಿದ ಎಲ್ಲ ವಸ್ತುಗಳನ್ನು **ಲಿಪ್ಸಂತಃ** ಇಚ್ಛೆಸುತ್ತಿದ್ದ ಅವರು **ತರಸಾ** ಶೀಘ್ರವಾಗಿ **ಕಲಶಂ** ಕಲಶವನ್ನು **ಅಹರನ್** ಕಸೆದುಕೊಂಡರು.

ಲಿಪ್ಸಂತಃ ಎಂಬ ಶ್ಲೋಕದಲ್ಲಿ ಅಸುರರು ಬಲಾತ್ಕಾರದಿಂದ ಅಮೃತಕಲಶವನ್ನು ಧನ್ವಂತರಿಯಿಂದ ಕಿತ್ತುಕೊಂಡರು ಎಂದು ಹೇಳುವುದರಿಂದ ಶ್ರೀಹರಿಯು ಅಸಮರ್ಥನು. ದೈತ್ಯರು ಸಮರ್ಥರು ಎಂದು ತೋರುವದು. ಆದ್ದರಿಂದ ಪ್ರಮಾಣದಿಂದ ವ್ಯಾಖ್ಯಾನಿಸುವರು-

**...ತಾತ್ಪರ್ಯ...**

**ತೇಷಾಂ ಸತ್ಯಾಚ್ಚಾಲನಾರ್ಥಂ ಹರಿರ್ಧನ್ವಂತರಿರ್ವಿಭುಃ ।**
**ಸಮರ್ಥೋಽಪ್ಯಸುರಾಣಾಂ ತು ಸ್ವಹಸ್ತಾದಮುಚತ್ ಸುಧಾಂ ॥ ಇತಿ ಚ ॥**

ಇಲ್ಲಿ ಶಾಸ್ತ್ರರಹಸ್ಯವಿದು. ಅಮೃತಕ್ಕಾಗಿ ದೇವತೆಗಳು ದೈತ್ಯರೂ ಸಮವಾಗಿ ಶ್ರಮಪಟ್ಟಿದ್ದಾರೆ. ಅಂದ ಮೇಲೆ ಇಬ್ಬರೂ ಸಮಭಾಗಿಗಳು. ಆದರೆ ಮುಂದೆ ದೈತ್ಯರಿಗೆ ಅಮೃತವು ಸಿಗದಂತೆ ಶ್ರೀಹರಿ ಮಾಡಿದ್ದಾನೆ. ಇದು ಪಕ್ಷಪಾತವಾಗುವುದು. ಹಾಗಾಗದಿರಲೆಂದು ಅವರೆಲ್ಲರೂ ಸತ್ಯಚ್ಯುತರೆಂಬ ಅಪರಾಧವನ್ನು ತೋರಿಸಿ ಅವರು ತಮ್ಮ

ಅಪರಾಧದಿಂದಲೇ ಅದನ್ನು ಕಳೆದುಕೊಂಡರು ಎಂದು ತಿಳಿಸುವುದಕ್ಕಾಗಿ ಸಮರ್ಥನಾಗಿದ್ದರೂ ಧನ್ವಂತರಿಯು ತನ್ನ ಕೈಯಲ್ಲಿಯ ಕಲಶವನ್ನು ಬಿಟ್ಟುಕೊಟ್ಟನು. ಸಮುದ್ರಮಥನದಿಂದ ಹುಟ್ಟಿದ ವಸ್ತುವನ್ನು ಶ್ರೀಹರಿಯ ಅನುಮತಿಯಿಂದಲೇ ಎಲ್ಲರೂ ಸ್ವೀಕರಿಸಬೇಕೆಂದು ಶ್ರೀಹರಿಯ ಅನುಮತಿಯಿಲ್ಲದೇ ಬಲಾತ್ಕಾರದಿಂದ ಯಾರೂ ತೆಗೆದುಕೊಳ್ಳಬಾರದು ಎಂದು ದೇವಾಸುರರು ಸಮುದ್ರವನ್ನು ಕಡೆಯುವುದಕ್ಕಿಂದ ಮೊದಲೇ ನಿಯಮವನ್ನು ಮಾಡಿಕೊಂಡಿದ್ದರು. ಕಾರಣ ಇದನ್ನು ಸುಳ್ಳು ಮಾಡಲು ಹೀಗೆ ಮಾಡಿದನು. ಈ ನಿಯಮ ಮಾಡಿದ್ದರೆಂದು ಹೇಗೆ ಹೇಳುವಿರಿ ಭಾಗವತದಲ್ಲಿ ಇದಕ್ಕೆ ಜ್ಞಾಪಕವಿಲ್ಲವಲ್ಲ ಎಂದರೆ ''ಅಥಾಸೀದ್ವಾರುಣೀ ದೇವೀ'' ಎಂಬ ಶ್ಲೋಕದ ಉತ್ತರಾರ್ಧದಲ್ಲಿ ''ಅಸುರಾ ಜಗೃಹುಸ್ತಾಂ ವೈ ಹರೇರನುಮತೇನ ತೇ'' ಎಂದು ಅಸುರರು ಶ್ರೀಹರಿಯ ಅನುಮತಿಯಿಂದಲೇ ವಾರುಣೀ ಎಂಬ ಮದ್ಯವನ್ನು ತೆಗೆದುಕೊಂಡರು ಎಂದು ಹೇಳಿದೆ. ಇದರಿಂದ ಈ ನಿಯಮ ಮಾಡಿದ್ದರು ಎಂದು ತಿಳಿಯುವದು. ಇಲ್ಲವಾದರೇ ಹಾಗೆ ಹೇಳಬೇಕಿದ್ದಿಲ್ಲ. ಇನ್ನು ಅಸುರರು ಸ್ವ ಇಚ್ಛೆಯಿಂದಲೇ ಸುರೆಯನ್ನು ತೆಗೆದುಕೊಂಡರು. ಅದು ಶ್ರೀಹರಿಗೆ ಒಪ್ಪಿಗೆ ಆಯಿತಷ್ಟೇ ಎಂದರ್ಥ. ಆ ಶ್ಲೋಕಕ್ಕೆ ಕಾರಣ ಇದು. ಆದರೆ ನಿಯಮಜ್ಞಾಪಕವಲ್ಲ ಎನ್ನುವಂತಿಲ್ಲ. ಹಾಗಾದರೇ ''ಹರೇರನುಮತಂ ತತ್'' ಎನ್ನಬೇಕಿತ್ತು. ಹೊರತು ''ಹರೇರನುಮತೇನ '' ಎಂದಲ್ಲ. ಆದ್ದರಿಂದ ಇದೇ ನಿಯಮಜ್ಞಾಪಕವಾಗುವದು ಎಂದು ಭಾವ. ಇಲ್ಲಿ ಸತ್ಯಚ್ಯುತಿಯೂ ಕೂಡ ''ಸತ್ಯಚ್ಯುತಾನ್ ಕಾರಯಿತುಂ ವಧಾಯ'' ಎಂಬ ಭಾರತ ತಾತ್ಪರ್ಯನಿರ್ಣಯಾನುಸಾರ ವಧಾಯ ಎಂದು ತಿಳಿಯಬೇಕು. ಅವರವರಿಗೆ ಯೋಗ್ಯವಾದುದನ್ನು ಸ್ವೀಕರಿಸಬೇಕೆಂದು ನಿಯಮವಿತ್ತು. ಅಸುರರಿಗೆ ಸುರಾ ಯೋಗ್ಯವಾಗಿದೆ. ಆದ್ದರಿಂದ ಅದನ್ನಿತ್ತ. ಅವರಿಗೆ ಅಮೃತವು ಅಯೋಗ್ಯವಾಗಿದೆ. ಆದ್ದರಿಂದ ಅದನ್ನು ತೆಗೆದುಕೊಳ್ಳುವುದನ್ನು ತಪ್ಪಿಸಿ ಅವರ ಸಂಹಾರ ಮಾಡಲೆಂದೇ ಅಮೃತಕಲಶವನ್ನು ಕೈಬಿಟ್ಟ. ಆ ಅಮೃತಕಲಶವನ್ನು ದೈತ್ಯರು ಅಪಹರಿಸಿದರು ಎಂದು ಭಾವ. ।।೩೫।।

**ನೀಯಮಾನೇಽಸುರೈಸ್ತಸ್ಮಿನ್ ಕಲಶೇಽಮೃತಭಾಜನೇ ।**
**ವಿಷಣ್ಣಮನಸೋ ದೇವಾ ಹರಿಂ ಶರಣಮಾಯಯುಃ ।।೩೫।।**

**ಅಮೃತಭಾಜನೇ** ಅಮೃತದಿಂದ ತುಂಬಿದ ಪಾತ್ರೆಯಾದ **ತಸ್ಮಿನ್ ಕಲಶೇ** ಧನ್ವಂತರಿಯ ಕೈಯಲ್ಲಿದ್ದ ಆ ಕಲಶವು **ಅಸುರೈಃ ನೀಯಮಾನೇ** ದೈತ್ಯರಿಂದ ಸೆಳೆದೊಯ್ಯಲ್ಪಡುತ್ತಿರಲು **ದೇವಾಃ** ಇಂದ್ರಾದಿದೇವತೆಗಳು **ವಿಷಣ್ಣಮನಸಃ ಸಂತಃ** ತಮ್ಮ ಶ್ರಮವೆಲ್ಲ ವ್ಯರ್ಥವಾಯಿತೆಂದು ನೊಂದ ಮನಸ್ಸುಳ್ಳವರಾಗಿ **ಹರಿಂ** ಧನ್ವಂತರಿಯನ್ನು **ಶರಣಂ ಆಯಯುಃ** ಮೊರೆ ಹೋದರು.

ಅಥವಾ ಕಲಶೇ ಅಸುರೈಃ ನೀಯಮಾನೇ ಸುಮನಸಃ ಅಮೃತಭಾಜನೇ ಹರಿಂ ಶರಣಂ ಆಯಯುಃ ಎಂದನ್ವಯ. ಕಲಶವನ್ನು ದೈತ್ಯರು ಒಯ್ಯುತ್ತಿರಲು ದೇವತೆಗಳು **ಅಮೃತಭಾಜನೇ** ಅಮೃತವನ್ನು ವಿಭಾಗ ಮಾಡಿಕೊಡು ಎಂದು ಹರಿಯನ್ನು ಮೊರೆ ಹೋದರು ಎಂದರ್ಥ. ।।೩೫।।

**ಇತಿ ತದ್ದೈನ್ಯಮಾಲೋಕ್ಯ ಭಗವಾನ್ ಭೃತ್ಯಕಾಮಕೃತ್ ।**
**ಮಾ ಖಿದ್ಯತ ಮಿಥೋಽರ್ಥಂ ವಃ ಸಾಧಯಿಷ್ಯೇ ಸ್ವಮಾಯಯಾ ।।೩೬।।**

**ಭೃತ್ಯಕಾಮಕೃತ್** ಸೇವಕರಾದ ದೇವತೆಗಳ ಇಷ್ಟವನ್ನು ನೆರವೇರಿಸುವ **ಭಗವಾನ್** ಧನ್ವಂತರಿನಾಮಕನಾದ ಶ್ರೀಹರಿಯು **ತದ್ದೈನ್ಯಂ** ದೇವತೆಗಳ ಅಸಹಾಯಕತೆಯನ್ನು **ಆಲೋಕ್ಯ** ನೋಡಿ, **ಮಾ ಖಿದ್ಯತ** ದುಃಖಿಸಬೇಡಿ **ಸ್ವಮಾಯಯಾ** ನನ್ನ ಸಾಮರ್ಥ್ಯದಿಂದ **ಮಿಥಃ** ಪರಸ್ಪರವಾಗಿ **ಕಲಹಂ ಉತ್ಪಾದ್ಯ** ಅವರಲ್ಲಿ ಜಗಳವನ್ನು ಹುಟ್ಟಿಸಿ **ವಃ** ನಿಮ್ಮ **ಅರ್ಥಂ** ಪ್ರಯೋಜನವನ್ನು (ನೀವು ಮಾತ್ರ ಅಮೃತವನ್ನು ಕುಡಿಯಬೇಕೆಂಬ ನಿಮ್ಮ ಇಷ್ಟವನ್ನು) **ಸಾಧಯಿಷ್ಯೇ** ಸಾಧಿಸಿ ಕೊಡುವೆನು **ಇತಿ ಆಹ** ಎಂದು ಹೇಳಿದನು. ।।೩೬।।

ಸತ್ಯ ಃ- ಭೃತ್ಯಾ ಕಾಮಕೃತ್ ನ ಭವತಿ ಇತಿ ಭೃತ್ಯಕಾಮಕೃತ್ ಎಂದು ವಿಗ್ರಹ ಮಾಡಿಕೊಳ್ಳಬೇಕು. ಭೃತ್ಯವೇತನದಿಂದ ಸಂಪಳ ತೆಗೆದುಕೊಂಡು ಅಭೀಷ್ಟವನ್ನು ಮಾಡದ ಎಂದು ಅರ್ಥವನ್ನು ತಿಳಿಯಬೇಕು.

**ಮಿಥಃ ಕಲಿರಭೂತ್ ತೇಷಾಂ ತದರ್ಥೇ ತರ್ಷಚೇತಸಾಮ್ ।**
**ಅಹಂ ಪೂರ್ವಮಹಂ ಪೂರ್ವಂ ನ ತ್ವಂ ನ ತ್ವಮಿತಿ ಪ್ರಭೋ ।।೩೭।।**

**ಪ್ರಭೋ** ಪರೀಕ್ಷಿತನೇ **ತದರ್ಥೇ** ಅಮೃತಕ್ಕಾಗಿ **ತರ್ಷಚೇತಸಾಂ** ಆಸೆಯಿಂದ ಕೂಡಿದ ಮನಸ್ಸುಳ್ಳ **ತೇಷಾಂ** ಆ ಅಸುರರಲ್ಲಿ **ಮಿಥಃ ಚ** ಪರಸ್ಪರವಾಗಿ **ಅಹಂ** ನಾನು **ಪೂರ್ವಂ** ಮೊದಲು ನೋಡಿದ್ದು **ಅಹಂ ಪೂರ್ವಂ** ನಾನು ಕಸೆದು ಕೊಂಡದ್ದು ಕಾರಣ ನಾನೇ ಕುಡಿಯುವೆನು **ತ್ವಂ ನ** ನೀನು ನೋಡಿದವನಲ್ಲ **ತ್ವಂ ನ** ನೀನು ಕಸಿದುಕೊಂಡವನಲ್ಲ ಆದ್ದರಿಂದ ಈ ಅಮೃತವು ನನಗೆ ಸೇರಿದ್ದು ನಿನಗಲ್ಲ ಇತಿ ಎಂದು **ಕಲಿಃ ಅಭೂತ್** ಜಗಳವಾಯಿತು. ।।೩೭।।

**ದೇವಾಃ ಸ್ವಭಾಗಮರ್ಹಂತಿ ಯೇ ತುಲ್ಯಾಯಾಸಹೇತವಃ ।**
**ಸತ್ರಯಾಗ ಇವೈತಸ್ಮಿನ್ನೇಷ ಧರ್ಮಃ ಸನಾತನಃ ।।೩೮।।**

**ಇತಿ ಸ್ವಾನ್ ಪ್ರತ್ಯಷೇಧನ್ ವೈ ದೈತೇಯಾ ಜಾತಮತ್ಸರಾಃ ।**
**ದುರ್ಬಲಾಃ ಪ್ರಬಲಾನ್ ರಾಜನ್ ಗೃಹೀತಕಲಾಶಾನ್ ಮುಹುಃ ।।೩೯।।**

**ಹೇ ರಾಜನ್** ಪರೀಕ್ಷಿತನೇ **ಜಾತಮತ್ಸರಾಃ** ಪ್ರಬಲರ ಕೈಯಲ್ಲಿ ಅಮೃತಕಲಶ ದೊರೆತಿದೆ ನಮಗೆ ಕೊಡದೆ ಅವರೇ ಕುಡಿದು ಬಿಡುವರು ಎಂಬ ಮಾತ್ಸರ್ಯ ಉಂಟಾದ **ದುರ್ಬಲಾಃ** ಅಶಕ್ತರಾದ **ದೈತೇಯಾಃ** ದೈತ್ಯರು **ಗೃಹೀತಕಲಶಾನ್** ಅಮೃತಕಲಶವನ್ನು ಹಿಡಿದುಕೊಂಡ **ಪ್ರಬಲಾನ್** ಬಲಿಷ್ಠರಾದ **ಸ್ವಾನ್** ತಮ್ಮವರಾದ ಬಲಿ ಮುಂತಾದ ದೈತ್ಯರನ್ನು ಕುರಿತು **ಮುಹುಃ ಚ** ಮತ್ತೆ ಮತ್ತೆ **ಸತ್ರಯಾಗೇ ಇವ** ಅನೇಕ ಯಜಮಾನರುಳ್ಳ ಅನೇಕ ದಿವಸ ಮಾಡುವ ಯಾಗದಲ್ಲಿ ಹೇಗೆ ಎಲ್ಲರಿಗೂ ಸಮಾನ ಭಾಗವಿದೆಯೋ ಅದರಂತೆ **ಏತಸ್ಮಿನ್** ಈ ಸಮುದ್ರಮಥನ ಪೂರ್ವಕ ಅಮೃತಪ್ರಾಪ್ತಿ ಎಂಬ ಕಾರ್ಯದಲ್ಲಿ **ತುಲ್ಯಾಯಾಸಹೇತವಃ** ಕಷ್ಟದ ಕೆಲಸದಲ್ಲಿ ಸಮಾನವಾಗಿ ಕಾರಣರಾದ **ಯೇ ದೇವಾಃ** ಯಾವ ದೇವತೆಗಳಿರುವರೋ **ತೇ ಅಪಿ** ಅವರೂ ಕೂಡಾ **ಸ್ವಭಾಗಂ ಅರ್ಹಂತಿ** ತಮಗೆ ಸಲ್ಲಬೇಕಾದ ಭಾಗವನ್ನು ಹೊಂದಲು ಅರ್ಹರಾಗಿದ್ದಾರೆ. **ಏಷಃ** ಅವರಿಗೂ ಹಂಚುವ ಕೆಲಸವು **ಸದಾತನಃ** ಎಲ್ಲ ಕಾಲದ **ಧರ್ಮಃ** ಧರ್ಮವು **ಇತಿ** ಎಂದು **ಪ್ರತ್ಯಷೇಧನ್** ತಡೆದರು **ವೈ** ಇದು ಸ್ವಾಭಾವಿಕ. ।।೩೮.೩೯।।

**ಏತಸ್ಮಿನ್ನಂತರೇ ವಿಷ್ಣುಃ ಸರ್ವೋಪಾಯವಿದೀಶ್ವರಃ ।**
**ಯೋಷಿದ್ರೂಪಮನಿರ್ದೇಶ್ಯಂ ದಧಾರ ಪರಮಾದ್ಭುತಮ್ ।।೪೦।।**

**ಪ್ರೇಕ್ಷಣೀಯೋತ್ಪಲಶ್ಯಾಮಂ ಸರ್ವಾವಯವಸುಂದರಮ್ ।**
**ಸಮಾನಕರ್ಣಾಭರಣಂ ಸುಕಪೋಲೋನ್ನಸಾನನಮ್ ।।೪೧।।**

**ನವಯೌವ್ವನನಿಷ್ಪಂದಸ್ತನಭಾರಕೃಶೋದರಮ್ ।**
**ಮುಖಾಮೋದಾನುರಕ್ತಾಲಿಝುಂಕಾರೋದ್ವಿಗ್ನಲೋಚನಮ್ ।।೪೨।।**

**ಬಿಭ್ರತ್ ಸ್ವಕೇಶಭಾರೇಣ ಮಾಲಾಮುತ್ಫುಲ್ಲಮಲ್ಲಿಕಾಮ್ ।**
**ಸುಗ್ರೀವಕಂಠಾಭರಣಂ ಸುಭುಜಾಂಗದಭೂಷಿತಮ್ ।।೪೩।।**

**ವಿರಜಾಂಬರಸಂವೀತಂ ಚಿತ್ರಂ ವರ್ಧ್ವಿಯಶೋಭಯಾ ।**
**ಕಾಂಚ್ಯಾ ಪ್ರವಿಲಸದ್ ವಲ್ಗುಸ್ಫುಟಚ್ಚರಣನೂಪುರಮ್ ।।೪೪।।**

**ಸವ್ರೀಡಸ್ಮಿತವಿಕ್ಷಿಪ್ತಭ್ರೂವಿಲಾಸಾವಲೋಕನೈಃ ।**
**ದೈತ್ಯಯೂಥಪಚೇತಸ್ಸು ಕಾಮಮುದ್ದೀಪಯನ್ಮುಹುಃ ।।೪೫।।**

**ಏತಸ್ಮಿನ್ ಅಂತರೇ** ಈ ಮಧ್ಯದಲ್ಲಿ (ದೈತ್ಯರು ಪರಸ್ಪರ ಕಲಹ ಮಾಡುತ್ತಿದ್ದ ಸಮಯದಲ್ಲಿ) **ಸರ್ವೋಪಾಯವಿತ್ ಈಶ್ವರಃ** ಎಲ್ಲ ಕಾರ್ಯಗಳನ್ನೂ ಸಾಧಿಸುವ ಉಪಾಯವನ್ನು ಬಲ್ಲವರಲ್ಲಿ ಶ್ರೇಷ್ಠನಾದ ವಿಷ್ಣುವು **ಪ್ರೇಕ್ಷಣೀಯ** ನೋಡಲು ಯೋಗ್ಯವಾದ ಅಂದರೆ ಸುಂದರವಾದ **ಉತ್ಪಲಶ್ಯಾಮಂ** ನೈದಿಲೆಯ ಹೂವಿನಂತೆ ಶ್ಯಾಮವರ್ಣವುಳ್ಳ

**ಸರ್ವಾವಯವಸುಂದರಂ** ಎಲ್ಲ ಅವಯವಗಳಿಂದ ಸುಂದರವಾದ **ಸಮಾನಕರ್ಣಾಭರಣಂ** ಒಂದೇ ರೀತಿಯ ಕಿವಿಗಳ ಆಭರಣಗಳುಳ್ಳ **ಸುಕಪೋಲೋನ್ನಸಾನನಂ** ಒಳ್ಳೆಯ ಕೆನ್ನೆ ಮತ್ತು ಎತ್ತರವಾದ ಮೂಗು ಮತ್ತು ಮುಖ ಉಳ್ಳ **ನವಯೌವ್ವನ** ಆಗಲೇ ಪ್ರಾರಂಭವಾದ ಹೊಸ ತಾರುಣ್ಯದಿಂದ **ನಿಷ್ಪಂದ** ಅಲುಗಾಡದಿರುವ **ಸ್ತನಭಾರ** ಕುಚಗಳ ಭಾರದಿಂದ **ಕೃಶೋದರಂ** ಸೂಕ್ಷ್ಮವಾದ (ತೆಳುವಾದ) ಹೊಟ್ಟೆಯುಳ್ಳ **ಮುಖಾಮೋದ** ಮುಖದ ವಾಸನೆಯಿಂದ **ಅನುರಕ್ತ** ಆಸಕ್ತವಾದ **ಅಲಿ** ದುಂಬಿಗಳ ಝೇಂಕಾರದಿಂದ **ಉದ್ವಿಗ್ನ** ಚಂಚಲವಾದ **ಲೋಚನಂ** ಕಣ್ಣುಗಳುಳ್ಳ **ಸ್ವಕೇಶಭಾರೇಣ** ತನ್ನ ಕೂದಲ ಸಮೂಹದಿಂದ **ಉತ್ಫುಲ್ಲಮಲ್ಲಿಕಾಂ** ಅರಳಿದ ಮಲ್ಲಿಗೆ ಹೂವುಗಳುಳ್ಳ **ಮಾಲಾಂ** ಹೂವಿನ ದಂಡೆಯನ್ನು **ಬಿಭ್ರತ್** ಧರಿಸಿರುವ **ಸುಗ್ರೀವ** ಸುಂದರವಾದ ಕುತ್ತಿಗೆಯುಳ್ಳ **ಕಂಠಾಭರಣಂ** ಕುತ್ತಿಗೆಯಲ್ಲಿ ಆಭರಣವನ್ನು ಹಾಕಿಕೊಂಡ **ಸುಭುಜಾಂಗದಭೂಷಣಂ** ಸುಂದರವಾದ ತೋಳಿನಲ್ಲಿ ನಾಗಮುರಿಗೆ ಮೊದಲಾದ ಆಭರಣಗಳನ್ನು ಧರಿಸಿದ **ವಿರಜಾಂಬರಸಂವೀತಂ** ಕೊಳೆಯಿಲ್ಲದ ಸ್ವಚ್ಛವಾದ ಸೀರೆಯನ್ನುಟ್ಟಿರುವ **ವಧ್ವೀಯಶೋಭಯಾ** ವಧುಗಳ (ಮದುವೆಯಾಗದ ತರುಣಿಯರ) ಮೈಕಾಂತಿಯಿಂದ **ಚಿತ್ರಂ** ಆಶ್ಚರ್ಯಕರವಾದ **ಕಾಂಚ್ಯಾ** ಡಾಬಿನಿಂದ (ಟೊಂಕದ ಪಟ್ಟಿಯಿಂದ) **ಪ್ರವಿಲಸತ್** ಪ್ರಕಾಶ ಮಾನವಾದ **ವಲ್ಗು** ಇಂಪಾದ **ಸ್ಫುರತ್** ಪ್ರಕಾಶಮಾನವಾದ **ಚರಣನೂಪುರಂ** ಕಾಲಿನ ಅಂದಿಗೆ ಮೊದಲಾದ ಆಭರಣವುಳ್ಳ (ಗೆಜ್ಜೆ ಕಾಲ್ಗಡಗ) **ಸವ್ರೀಡ** ನಾಚಿಕೆಯಿಂದ ಕೂಡಿದ **ಸ್ಮಿತ** ಮುಗುಳು ನಗೆಯಿಂದ **ವಿಕ್ಷಿಪ್ತ** ಚಂಚಲವಾದ **ಭ್ರೂವಿಲಾಸ** ಹುಬ್ಬು ಹಾರಿಸುವುದರಿಂದ ಕೂಡಿದ **ಅವಲೋಕನೈಃ** ನೋಟಗಳಿಂದ **ಮುಹುಃ** ಮತ್ತೆ ಮತ್ತೆ **ದೈತ್ಯಯೂಥಪಚೇತಸ್ಸು** ಅಸುರರ ಸೇನಾನಾಯಕರ ಮನಸ್ಸುಗಳಲ್ಲಿ **ಕಾಮಂ** ತನ್ನ ವಿಷಯಕವಾದ ಇಚ್ಛೆಯನ್ನು **ಉದ್ದೀಪಯತ್** ಪ್ರಜ್ವಲಗೊಳಿಸುವ ಆದ್ದರಿಂದಲೇ **ಪರಮಾದ್ಭುತಂ** ಅತ್ಯಾಶ್ಚರ್ಯಕರವಾದ ಆದ್ದರಿಂದಲೇ **ಅನಿರ್ದೇಶ್ಯಂ** ಹೀಗೆ ಎಂದು ಹೇಳಲಾಗದ **ಯೋಷಿದ್ರೂಪಂ** ಹೆಣ್ಣಿನ ರೂಪವನ್ನು **ದಧಾರ** ಧರಿಸಿದನು. ನಾರಾಯಣೀ ರೂಪದಿಂದ ವ್ಯಕ್ತನಾದನು. ।।೪೦, ೪೫।।

**ತೇಽನ್ಯೋಽನ್ಯತಃ ಸುಧಾಪಾತ್ರಂ ಹರಂತಸ್ತ್ಯಕ್ತಸೌಹೃದಾಃ ।**
**ಕ್ಷಿಪಂತೋ ದಸ್ಯುಧರ್ಮೇಣ ಆಯಾಂತೀಂ ದದೃಶುಃ ಸ್ತ್ರಿಯಮ್ ।।೪೬।।**

**ದಸ್ಯುಧರ್ಮೇಣ** ಕಳ್ಳರ ರೀತಿಯಿಂದ **ತ್ಯಕ್ತಸೌಹೃದಾಃ** ಸ್ನೇಹರಹಿತರಾಗಿ **ಅನ್ಯೋನ್ಯತಃ** ಒಬ್ಬರಿಂದೊಬ್ಬರು **ಸುಧಾಪಾತ್ರಂ** ಅಮೃತಕಲಶವನ್ನು **ಹರಂತಃ** ಕಸಿದುಕೊಳ್ಳುವವರಾಗಿ **ತೇ** ಆ ದೈತ್ಯರು **ಕ್ಷಿಪಂತಃ ಸಂತಃ** ಪರಸ್ಪರ ಬೈದುಕೊಳ್ಳುತ್ತಾ **ಆಯಾಂತೀಂ** ತಮ್ಮ ಎದುರಿಗೆ ಬರುತ್ತಿರುವ **ಸ್ತ್ರಿಯಂ** ಸ್ತ್ರೀರೂಪಿಯಾದ ಹರಿಯನ್ನು **ದದೃಶುಃ** ನೋಡಿದರು. ।।೪೬।।

**ಅಹೋ ರೂಪಮಹೋ ಧಾಮ ಅಹೋ ಅಸ್ಯಾ ನವಂ ವಯಃ ।**
**ಇತಿ ತೇ ತಾಮಭಿದ್ರುತ್ಯ ಪಪ್ರಚ್ಛುರ್ಜಾತಹೃಚ್ಛಯಾಃ ॥೪೭॥**

**ಜಾತಹೃಚ್ಛಯಾಃ** ನಾರಾಯಣಿಯನ್ನು ನೋಡಿದ ಕೂಡಲೇ ಹುಟ್ಟಿದ ಮನ್ಮಥೇಚ್ಛೆಯುಳ್ಳ **ತೇ** ಆ ದೈತ್ಯರು **ಅಸ್ಯಾಃ** ಈ ಹೆಣ್ಣು ಮಗಳ **ರೂಪಂ** ಸೌಂದರ್ಯವು **ಅಹೋ** ಆಶ್ಚರ್ಯವು **ಧಾಮ** ಶರೀರಕಾಂತಿಯು **ಅಹೋ** ಆಶ್ಚರ್ಯವು **ವಯಃ** ವಯಸ್ಸು **ನವಂ** ಈಗ ತಾನೇ ಪ್ರಾರಂಭವಾಗುತ್ತಿದೆ **ಅಹೋ** ಆಶ್ಚರ್ಯವು **ಇತಿ** ಹೀಗೆ ಅನ್ನುತ್ತಾ **ತಾಂ ಅಭಿದ್ರುತ್ಯ** ಅವಳ ಹತ್ತಿರ ಹೋಗಿ **ಪಪ್ರಚ್ಛುಃ** ಪ್ರಶ್ನಿಸಿದರು. ॥೪೭॥

ಅವತರಣಿಕಾ ಃ- ಪ್ರಶ್ನ ಪ್ರಕಾರವನ್ನು ಹೇಳುವರು-

**ಕಾ ತ್ವಂ ಕಂಜಪಲಾಶಾಕ್ಷಿ ಕುತೋ ವಾ ಕಿಂ ಚಿಕೀರ್ಷಸಿ ।**
**ಕಸ್ಯಾಽಸಿ ವದ ವಾಮೋರು ಮಥ್ನಂತೀವ ಮನಾಂಸಿ ನಃ ॥೪೮॥**

**ಹೇ ಕಂಜಪಲಾಶಾಕ್ಷಿ** ಕಮಲದ ದಳದಂತೆ ವಿಶಾಲವಾದ ಕಣ್ಣುಗಳುಳ್ಳವಳೇ **ತ್ವಂ** ನೀನು **ಕಾ** ಯಾರ ಮಗಳು (ನ ಸ್ಪೃಷ್ಟಪೂರ್ವಾಂ ಜಾನೀಮಃ ಎಂಬ ಮುಂದಿನ ವಾಕ್ಯದ ಸ್ವಾರಸ್ಯಕ್ಕಾಗಿ ಹೀಗೆ ಅರ್ಥ ತಿಳಿಯಬೇಕು. ಅಂದರೆ ಯಾರ ಹೆಂಡತಿ ಎಂದು ಪ್ರಶ್ನೆಯಲ್ಲವೆಂದು ಭಾವ.) **ಕುತಃ** ಎಲ್ಲಿಂದ ಬಂದಿರುವಿ. **ಕಿಂ ಚಿಕೀರ್ಷಸಿ** ಏನು ಮಾಡಲಿಚ್ಛಿಸುವಿ **ಹೇ ವಾಮೋರು** ಸುಂದರ ತೊಡೆಯುಳ್ಳವಳೇ **ನಃ** ನಮಗೆ **ವದ** ಹೇಳು ನಃ ನಮ್ಮ **ಮನಾಂಸಿ** ಮನಸ್ಸುಗಳನ್ನು **ಮಥ್ನತೀ ಇವ** ಕ್ಷೋಭೆ ಗೊಳಿಸುವಂತೆ ಕಾಣುತ್ತಿರುವಿ.

**ನ ವಯಂ ತ್ವಾಽಮರ್ೈರ್ದೈತ್ಯೈಃ ಸಿದ್ಧಗಂಧರ್ವಚಾರಣೈಃ ।**
**ಸ್ಪೃಷ್ಟಪೂರ್ವಾಂ ತು ಜಾನೀಮೋ ಲೋಕೇಶೈಶ್ಚ ಕುತೋ ನೃಭಿಃ ॥೪೯॥**

**ವಯಂ** ನಾವು **ತ್ವಾ** ನಿನ್ನನ್ನು **ಅಮರ್ೈಃ** ದೇವತೆಗಳಿಂದ **ದೈತ್ಯೈಃ** ಅಸುರರಿಂದ **ಸಿದ್ಧಗಂಧರ್ವಚಾರಣೈಃ** ಸಿದ್ಧರಿಂದ ಗಂಧರ್ವರಿಂದ ಚಾರಣರಿಂದ **ಚ** ಮತ್ತು **ಲೋಕೇಶೈಃ** ಲೋಕಪಾಲಕರಾದ ಇಂದ್ರಾದಿಗಳಿಂದ **ನ ಸ್ಪೃಷ್ಟಪೂರ್ವಾಂ** ಅನುಭವಿಸದಿರುವವಳೆಂದು **ಜಾನೀಮಃ** ತಿಳಿಯುವೆವು **ನೃಭಿಃ ಕುತಃ** ಮನುಷ್ಯರಿಂದ ಅನುಭವಿಸಲ್ಪಟ್ಟಿಲ್ಲವೆಂದೇನು ಹೇಳುವುದು? ಸ್ವತಃಸಿದ್ಧವೆಂದು ಭಾವ. ॥೪೯॥

**ನೂನಂ ತ್ವಂ ವಿಧಿನಾ ಸುಭ್ರು ಪ್ರೇಷಿತಾಽಸಿ ಶರೀರಿಣಾಮ್ ।**
**ಸರ್ವೇಂದ್ರಿಯಮನಃಪ್ರೀತಿಂ ವಿಧಾತುಂ ಸಘೃಣೇನ ಕಿಮ್ ॥೫೦॥**

**ಹೇ ಸುಭ್ರು** ಸುಂದರ ಹುಬ್ಬಿನವಳೇ (ಸುಂದರಿಯೇ) **ತ್ವಂ** ನೀನು **ನೂನಂ** ನಿಶ್ಚಯವಾಗಿ **ಸಘೃಣೇನ** ದಯಾವಂತನಾದ **ವಿಧಿನಾ** ಬ್ರಹ್ಮದೇವರಿಂದ **ಶರೀರಿಣಾಂ** ದೇಹಿಗಳ

**ಸರ್ವೇಂದ್ರಿಯಮನಃಪ್ರೀತಿಂ** ಎಲ್ಲ ಇಂದ್ರಿಯಗಳ ಮತ್ತು ಮನಸ್ಸಿನ ತೃಪ್ತಿಯನ್ನು **ವಿಧಾತುಂ** ಉಂಟುಮಾಡಲು **ಪ್ರೇಷಿತಾ ಅಸಿ ಕಿಂ** ಕಳಿಸಲ್ಪಟ್ಟಿರುವಿ ಏನು? ।।೫೦।।

**ಸಾ ತ್ವಂ ನಃ ಸ್ಪರ್ಧಮಾನಾನಾಮೇಕವಸ್ತುನಿ ಭಾಮಿನಿ ।**
**ಜ್ಞಾತೀನಾಂ ಬದ್ಧವೈರಾಣಾಂ ಶಂ ವಿಧತ್ಸ್ವ ಸುಮಧ್ಯಮೇ** ।।೫೧।।

**ಹೇ ಸುಮಧ್ಯಮೇ** ಸುಂದರವಾದ ನಡು (ಕಟಿ ಟೊಂಕ) ಉಳ್ಳ **ಸಾ** ನಮ್ಮ ಇಂದ್ರಿಯ ತೃಪ್ತಿಗಾಗಿ ಬ್ರಹ್ಮನಿಂದ ಪ್ರೇಷಿತಳಾದ **ತ್ವಂ** ನೀನು **ಏಕವಸ್ತುನಿ** ಅಮೃತವೆಂಬ ಒಂದೇ ಪದಾರ್ಥಕ್ಕಾಗಿ **ಸ್ಪರ್ಧಮಾನಾನಾಂ** ಕಲಹ ಮಾಡುತ್ತಿರುವ ಆದ್ದರಿಂದಲೇ **ಬದ್ಧವೈರಾಣಾಂ** ದೃಢವಾಗಿ ಶತ್ರುಗಳಾದ **ಜ್ಞಾತೀನಾಂ** ದಾಯಾದಿಗಳಾದ **ನಃ** ನಮಗೆ **ಶಂ ವಿಧತ್ಸ್ವ** ಸರಿಯಾಗಿ ಭಾಗಮಾಡಿ ಕೊಟ್ಟು ಸುಖವನ್ನುಂಟುಮಾಡು.

ಸತ್ಯ ಃ- ಸು ಮಧ್ಯೇ ಮಿಃ ಯಸ್ಯಾಃ ಸಾ ಸುಮಧ್ಯಮಾ ತತ್ಸಂಬುದ್ಧಿಃ ಸುಮಧ್ಯಮೇ ಎಂದು ವಿಗ್ರಹ ಮಾಡಿಕೊಳ್ಳಬೇಕು. **ಸು** ಚೆನ್ನಾಗಿ **ಮಧ್ಯೇ** ಮಧ್ಯದಲ್ಲಿ **ಮಿಃ** ಮಿಕಾರ ಉಳ್ಳವಳು ಅಂದರೆ ಭಾಮಿನಿ ಎಂದು ಅರ್ಥ. ಈ ಪದದ ಮಧ್ಯದಲ್ಲಿ ಮಿ ಎಂಬ ಅಕ್ಷರ ಇದೆ. ಭಾಮಿನಿ ಎಂದರೆ ಕೋಪದಲ್ಲಿಯೂ ಸುಂದರವಾಗಿ ಕಾಣುವವಳು ಎಂದು ಅರ್ಥ.

ಏಕವಸ್ತುನಿ ಎಂದು ನಪುಂಸಕದ ನಿರ್ದೇಶನದಿಂದ ಕಲಹವು ಸ್ತ್ರೀಪ್ರಯುಕ್ತವಲ್ಲ. ಆದ್ದರಿಂದ ಸುಂದೋಪಸುಂದನ್ಯಾಯಕ್ಕೆ ಅವಕಾಶವಿಲ್ಲವೆಂದು ಧ್ವನಿತವಾಗುವುದು. ।।೫೧।।

**ವಯಂ ಕಶ್ಯಪದಾಯಾದಾ ಭ್ರಾತರಃ ಕೃತಪೌರುಷಾಃ ।**
**ವಿಭಜಸ್ವ ಯಥಾನ್ಯಾಯಂ ನೈವ ಭೇದೋ ಯಥಾ ಭವೇತ್** ।।೫೨।।

**ವಯಂ** ನಾವು **ಕಶ್ಯಪದಾಯಾದಾಃ** ಕಶ್ಯಪರ ಆಸ್ತಿಯನ್ನು ಅನುಭವಿಸುವವರು ಅರ್ಥಾತ್ ಕಶ್ಯಪರ ಪುತ್ರರು **ಭ್ರಾತರಃ** ಅಣ್ಣ-ತಮ್ಮಂದಿರು **ಕೃತಪೌರುಷಾಃ** ಅಮೃತಕ್ಕಾಗಿ ಪ್ರಯತ್ನ ಮಾಡಿದವರು. ಆದ್ದರಿಂದ ನಮ್ಮಲ್ಲಿ **ಭೇದಃ** ಪರಸ್ಪರ ವಿರೋಧವು ಜಗಳವು **ಯಥಾ ನೈವ ಭವೇತ್** ಬಾರದಿರುವಂತೆ **ಯಥಾನ್ಯಾಯಂ** ನೀತಿಯನ್ನನುಸರಿಸಿ **ವಿಭಜಸ್ವ** ಅಮೃತವನ್ನು ವಿಭಾಗ ಮಾಡಿ ಕೊಡು. ।।೫೨।।

**ಶ್ರೀಶುಕ ಉವಾಚ**

**ಇತ್ಯುಪಾಮಂತ್ರಿತೋ ದೈತ್ಯೈರ್ಮಾಯಾಯೋಷಿದ್ವಪುರ್ಹರಿಃ ।**
**ಪ್ರಹಸ್ಯ ರುಚಿರಾಪಾಂಗೈರ್ನಿರೀಕ್ಷನ್ನಿದಮಬ್ರವೀತ್** ।।೫೩।।

**ದೈತ್ಯೈಃ** ದೈತ್ಯರಿಂದ **ಇತಿ** ಮೇಲೆ ಹೇಳಿದಂತೆ **ಉಪಾಮಂತ್ರಿತಃ** ಪ್ರಾರ್ಥಿತನಾದ **ಮಾಯಾಯೋಷಿದ್ವಪುಃ** ತನ್ನ ಇಚ್ಛೆಯಿಂದಲೇ ಹೆಂಗಸಿನ ಆಕಾರವನ್ನು ತೆಗೆದುಕೊಂಡ **ಹರಿಃ**

ಶ್ರೀಹರಿಯು **ಪ್ರಹಸ್ಯ** (ಹೇ ದೇವತೆಗಳೇ ಅಸುರರು ನನ್ನ ಬಲೆಗೆ ಬಿದ್ದರು ಎಂದು) ಗಟ್ಟಿಯಾಗಿ ನಕ್ಕು **ರುಚಿರಾಪಾಂಗೈಃ** ಅವರನ್ನು ಮೋಹಗೊಳಿಸುವ ಸುಂದರವಾದ ಕುಡಿನೋಟದಿಂದ **ನಿರೀಕ್ಷನ್** ಅವರನ್ನು ನೋಡುತ್ತ **ಇದಂ ಅಬ್ರವೀತ್** ಮುಂದಿನ ಮಾತುಗಳನ್ನು ಹೇಳಿದನು. ।।೫೩।।

**ಶ್ರೀಭಗವಾನುವಾಚ**

**ಕಥಂ ಕಶ್ಯಪದಾಯಾದಾಃ ಪುಂಶ್ಚಲ್ಯಾಂ ಮಯಿ ಸಂಗತಾಃ ।**
**ವಿಶ್ವಾಸಂ ಪಂಡಿತಾ ಜಾತು ಕಾಮಿನೀಷು ನ ಯಾಂತಿ ಹಿ ।।೫೪।।**

**ಹೇ ಕಶ್ಯಪದಾಯಾದಾಃ** ಎಲೋ ಕಶ್ಯಪಋಷಿಪುತ್ರರೇ ನೀವು **ಪುಂಶ್ಚಲ್ಯಾಂ** ಸ್ವೈರಿಣೀ ಸ್ತ್ರೀಯರ ಸ್ವಭಾವವನ್ನು ಅನುಸರಿಸುವ **ಮಯಿ** ನನ್ನಲ್ಲಿ ಅಪರಿಚಿತಳಾದವಳಲ್ಲಿ **ಕಥಂ ಸಂಗತಾಃ** ಹೇಗೆ ವಿಶ್ವಾಸ ಮಾಡಿದಿರಿ, ಆಸಕ್ತರಾದಿರಿ. **ಹಿ** ಏಕೆಂದರೆ **ಪಂಡಿತಾಃ** ತಿಳಿದವರು **ಜಾತು** ಎಂದಿಗೂ **ಕಾಮಿನೀಷು** ಸ್ವೇಚ್ಛಾಚಾರಿಗಳಾದ ಸ್ತ್ರೀಯರಲ್ಲಿ **ವಿಶ್ವಾಸಂ ನ ಯಾಂತಿ** ವಿಶ್ವಾಸವನ್ನು ಮಾಡುವುದಿಲ್ಲ. ।।೫೪।।

**ಸಾಲಾವೃಕಾಣಾಂ ಸ್ತ್ರೀಣಾಂ ಚ ಸ್ವೈರಿಣೀನಾಂ ಸುರದ್ವಿಷಃ ।**
**ಸಖ್ಯಾನ್ಯಾಹುರನಿತ್ಯಾನಿ ನೂತ್ನಂ ನೂತ್ನಂ ವಿಚಿನ್ವತಾಮ್ ।।೫೫।।**

**ಹೇ ಸುರದ್ವಿಷಃ** ದೇವದ್ವೇಷಿಗಳಾದ ದೈತ್ಯರೇ, (**ಪಂಡಿತಾಃ** ತಿಳಿದವರು) **ನೂತ್ನಂ ನೂತ್ನಂ** ಹೊಸ ಹೊಸದನ್ನು ಹುಡುಕಿಕೊಂಡು ಹೋಗುವ **ಸಾಲಾವೃಕಾಣಾಂ** ನಾಯಿ, ಕಪಿಗಳಂತಿರುವ **ಸ್ವೈರಿಣೀನಾಂ** ಸ್ವೇಚ್ಛಾಚಾರಿಗಳಾದ **ಸ್ತ್ರೀಣಾಂ** ಸ್ತ್ರೀಯರ **ಸಖ್ಯಾನಿ** ಸ್ನೇಹಗಳನ್ನು **ಅನಿತ್ಯಾನಿ** ಅಸ್ಥಿರಗಳೆಂದು **ಆಹುಃ** ಹೇಳುವರು. ಹೊಸದನ್ನು ಹುಡುಕುವುದರಿಂದ ಹಳೆಯದರಲ್ಲಿ ಪ್ರೀತಿಯು ಇರುವುದಿಲ್ಲವೆಂದರ್ಥ. ।।೫೫।।

**ಶ್ರೀಶುಕ ಉವಾಚ**

**ಇತಿ ತೇ ಕ್ಷ್ವೇಲಿತೈಸ್ತಸ್ಯಾ ಆಶ್ವಸ್ತಮನಸೋಽಸುರಾಃ ।**
**ಜಹಸುರ್ಭಾವಗಂಭೀರಂ ದದುಶ್ಚಾಮೃತಭಾಜನಮ್ ।।೫೬।।**

**ತೇ ಅಸುರಾಃ** ಆ ದೈತ್ಯರು **ಇತಿ** ಮೇಲೆ ಹೇಳಿದಂತೆ **ತಸ್ಯಾಃ** ಆ ಸ್ತ್ರೀಯರ **ಕ್ಷ್ವೇಲಿತೈಃ** ಛಲಮಾತುಗಳಿಂದ ನಗುವಿನಿಂದ ಕೂಡಿದ ಬೆರಗುಮಾತುಗಳಿಂದ **ಆಶ್ವಸ್ತಮನಸಃ** ಮತ್ತಷ್ಟು ನಂಬುಗೆ ಉಳ್ಳವರಾಗಿ **ಭಾವಗಂಭೀರಂ** ತಮ್ಮ ಅಭಿಪ್ರಾಯವನ್ನು ಸೂಚಿಸುವ ರೀತಿಯಲ್ಲಿ **ಜಹಸುಃ** ದೊಡ್ಡದಾಗಿ ನಕ್ಕರು **ಅಮೃತಭಾಜನಂ** ಅಮೃತಕಲಶವನ್ನು **ದದುಃ** ಆ ನಾರಾಯಣಿಗೆ ಕೊಟ್ಟರು.

ಸತ್ಯ ಃ- **ಆಶು** ಬೇಗನೇ **ಅಸ್ತಮನಸಃ** ಮನಃಕಲಹದಲ್ಲಿ ನಿರಸ್ತವಾದ ಮನಸ್ಸುಳ್ಳ ಅಂದರೆ ಜಗಳ ಬಿಟ್ಟ ಎಂದೂ ಅರ್ಥ ಮಾಡಬಹುದು.

**ಭಾವಗಂಭೀರಂ** ಯದ್ಯಪಿ ವದತಿ ಸುದತೀ ವಿಶ್ವಾಸಂ ಪಂಡಿತಾ ನ ಯಾಂತಿ ಇತಿ ತಥಾಽಪಿ ವಂಚನಂ ನ ತನುಯಾದಿತಿ ಕಿಂಚಿತ್ ಗಾಂಭೀರ್ಯಂ ಭಾವೇ ಜ್ಞೇಯಮ್ ॥

ಅಂದರೆ ಯದ್ಯಪಿ ಪಂಡಿತರು ಸ್ತ್ರೀಯರಲ್ಲಿ ವಿಶ್ವಾಸ ಮಾಡುವದಿಲ್ಲವೆಂದೇನೋ ಈ ಮಹಿಳೆ ಹೇಳುತ್ತಿದ್ದಾಳೆ. ಆದರೆ ಇವಳು ಹಾಗೇನೂ ವಂಚನೆ ಮಾಡಲಾರಳು ಎಂದು ಅಭಿಪ್ರಾಯದಲ್ಲಿ ಗಾಂಭೀರ್ಯವೆಂದು ತಿಳಿಯಬೇಕು. ॥೫೬॥

**ತತೋ ಗೃಹೀತ್ವಾಽಮೃತಭಾಜನಂ ಹರಿ-**
**ರ್ಬಭಾಷ ಈಷತ್‌ಸ್ಮಿತಶೋಭಯಾ ಗಿರಾ ।**
**ಯದ್ಯಭ್ಯುಪೇತಂ ಕ್ವ ಚ ಸಾಧ್ವಸಾಧು ವಾ**
**ಕೃತಂ ಮಯಾ ವೋ ವಿಭಜೇ ಸುಧಾಮಿಮಾಮ್** ॥೫೭॥

**ಹರಿಃ** ನಾರಾಯಣೀರೂಪದ ಶ್ರೀಹರಿಯು **ತತಃ** ದೈತ್ಯರು ತನ್ನ ಕೈಗೆ ಅಮೃತಪಾತ್ರೆಯನ್ನು ಕೊಟ್ಟ ನಂತರ ಅಥವಾ ಅವರಿಂದ **ಅಮೃತಭಾಜನಂ** ಅಮೃತಪಾತ್ರವನ್ನು **ಗೃಹೀತ್ವಾ** ತೆಗೆದುಕೊಂಡು **ಈಷತ್ಸ್ಮಿತಶೋಭಯಾ** ಮಂದಸ್ಮಿತದಿಂದ ಶೋಭಿಸುವ **ಗಿರಾ** ಮಾತಿನಿಂದ **ಬಭಾಷೇ** ಹೇಳಿದನು. ಅದೇನೆಂದರೆ **ಮಯಾ** ನನ್ನಿಂದ **ಕ್ವ ಚ** ಯಾವ ವಿಷಯದಲ್ಲಾದರೂ **ಸಾಧು** ಸರಿಯೇ **ಅಸಾಧು ವಾ** ತಪ್ಪೋ **ಕೃತಂ** ಮಾಡಿದ್ದು **ವಃ** ನಿಮಗೆ **ಅಭ್ಯುಪೇತಂ ಯದಿ** ಒಪ್ಪಿಗೆ ಆಗುವುದಾದರೆ ಆಗ **ಇಮಾಂ ಸುಧಾಂ ವಿಭಜೇ** ಈ ಅಮೃತವನ್ನು ಹಂಚುವೆನು. ಅಂದರೆ ನಾನು ಮಾಡಿದ್ದನ್ನು ಒಪ್ಪಬೇಕೆಂದರ್ಥ. ॥೫೭॥

**ಇತ್ಯಭಿವ್ಯಾಹೃತಂ ತಸ್ಯಾ ಆಕರ್ಣ್ಯಾಸುರಪುಂಗವಾಃ ।**
**ಅಪ್ರಮಾಣವಿದಸ್ತಸ್ಯಾಸ್ತತ್ ತಥೇತ್ಯನ್ವಮಂಸತ** ॥೫೮॥

**ತಸ್ಯಾಃ** ಆ ನಾರಾಯಣಿಯ **ಇತಿ** ಮೇಲೆ ಹೇಳಿದ **ಅಭಿವ್ಯಾಹೃತಂ** ಮಾತನ್ನು **ಆಕರ್ಣ್ಯ** ಕೇಳಿ **ತಸ್ಯಾಃ** ಅವಳ, **ಅಪ್ರಮಾಣವಿದಃ** ಮಾತಿನ ಅಭಿಪ್ರಾಯದ ಆಳವನ್ನು ತಿಳಿಯದ, ಸ್ವರೂಪವನ್ನರಿಯದ **ಅಸುರಪುಂಗವಾಃ** ಅಸುರಶ್ರೇಷ್ಠರು **ತತ್ ತಥಾ** ಹಾಗೆಯೇ ಆಗಲಿ ಅಂದರೆ ನೀನು ಮಾಡಿದ್ದು ನಮಗೆ ಒಪ್ಪಿಗೆ **ಇತಿ** ಎಂದು **ಅನ್ವಮಂಸತ** ಸಮ್ಮತಿಸಿದರು. ॥೫೮॥

**ಅಥೋಪೋಷ್ಯ ಕೃತಸ್ನಾನಾ ಹುತ್ವಾ ಚ ಹವಿಷಾಽನಲಮ್ ।**
**ದತ್ವಾ ಗೋವಿಪ್ರಭೂತೇಭ್ಯಃ ಕೃತಸ್ವಸ್ತ್ಯಯನಾ ದ್ವಿಜೈಃ** ॥೫೯॥

**ಯಥೋಪಜೋಷಂ ವಾಸಾಂಸಿ ಪರಿಧಾಯಾಹತಾನಿ ತೇ ।**
**ಕುಶೇಷು ಪ್ರಾವಿಶನ್ ಸರ್ವೇ ಪ್ರಾಗಗ್ರೇಷ್ವಭಿಭೂಷಿತಾಃ ॥೬೦॥**

**ಅಥ** ಸ್ತ್ರೀರೂಪವನ್ನು ಧರಿಸಿದ ಭಗವಂತನು ಅಮೃತವನ್ನು ಹಂಚುತ್ತೇನೆ ಎಂದು ಒಪ್ಪಿಕೊಂಡ ಮೇಲೆ **ಸರ್ವೇ ತೇ** ಅವರೆಲ್ಲರೂ **ಉಪೋಷ್ಯ** ಉಪವಾಸ ಮಾಡಿ **ಕೃತಸ್ನಾನಾಃ** ಸ್ನಾನ ಮಾಡಿ **ಚ** ಮತ್ತು **ಹವಿಷಾ** ಹವಿಸ್ಸಿನಿಂದ **ಅನಲಂ** ಅಗ್ನಿಯಲ್ಲಿ **ಹುತ್ವಾ** ಹೋಮ ಮಾಡಿ **ಗೋವಿಪ್ರಭೂತೇಭ್ಯಃ** ಆಕಳುಗಳಿಗೂ, ಬ್ರಾಹ್ಮಣರಿಗೂ, ಪ್ರಾಣಿಗಳಿಗೂ **ದತ್ವಾ** ಕೊಡಬೇಕಾದ ಹುಲ್ಲು, ಧನ, ಆಹಾರಗಳನ್ನು ಕೊಟ್ಟು **ದ್ವಿಜೈಃ** ಬ್ರಾಹ್ಮಣರಿಂದ **ಕೃತಸ್ವಸ್ತ್ಯಯನಾಃ** ಪುಣ್ಯಾಹವಾಚನ ಮಾಡಿಸಿಕೊಂಡವರಾಗಿ **ಯಥೋಪಜೋಷಂ** ತಮಗೆ ತೃಪ್ತಿಯಾಗುವಂತೆ **ಆಹತಾನಿ** ಹೊಸದಾದ ಅಥವಾ ಆಗಲೇ ಒಗೆದು ಶುದ್ಧವಾದ ವಸ್ತ್ರಗಳನ್ನು **ಪರಿಧಾಯ** ಉಟ್ಟುಕೊಂಡು **ಅಭಿಭೂಷಿತಾಃ** ಅಲಂಕರಿಸಿಕೊಂಡವರಾಗಿ **ತೇ ಸರ್ವೇ** ಆ ಎಲ್ಲ ದೇವತೆಗಳೂ ದೈತ್ಯರೂ **ಪ್ರಾಗಗ್ರೇಷು ಕುಶೇಷು** ಪೂರ್ವದಿಕ್ಕಿಗೆ ತುದಿಯುಳ್ಳ ದರ್ಭೆಗಳಲ್ಲಿ **ಯಥೋಪಜೋಷಂ** ಸುಖವಾಗುವಂತೆ **ಪ್ರಾವಿಶನ್** ಕುಳಿತರು.

ಲಿಂಗೇರೀ :- **ಗಾಂ ವಿಪ್ರಭೂತೇಭ್ಯಃ** ಎಂದು ಲಿಂಗೇರೀ ಆಚಾರ್ಯರು ಪಠಿಸಿದ್ದಾರೆ. ವಿಪ್ರಭೂತೇಭ್ಯಃ ವಿಂ ಪರಮಾತ್ಮಾನಂ ಪ್ರೀಣಂತೀತಿ ವಿಪ್ರಾಃ ತಥಾ ಭೂತೇಭ್ಯಃ ಬ್ರಾಹ್ಮಣೇಭ್ಯಃ ಗಾಂ ದತ್ವಾ ಎಂದು ವ್ಯಾಖ್ಯಾನ ಮಾಡಿರುವರು. ವಿಪ್ರಭೂತೇಭ್ಯಃ ಪರಮಾತ್ಮನನ್ನು ಸಂತೋಷಪಡಿಸುವ ಬ್ರಾಹ್ಮಣರಿಗೆ ಗಾಂ ಆಕಳುಗಳನ್ನು ದತ್ವಾ ದಾನ ಮಾಡಿ ಎಂಬುದಾಗಿ ಅನ್ವಯಾರ್ಥವನ್ನು ಹೇಳಿದ್ದಾರೆ.॥೫೯॥

ಸತ್ಯ :- ''ಆಹತಂ ಸ್ಯಾತ್ ಪುರಾತನೇ'' ''ನೂತ್ನವಸ್ತ್ರೇಽಪಿ ಚಾಹತಮ್'' ಎಂದು ವಿಶ್ವವಿದೆ. ಕೆಲವರು ಅಹತಂ ಎಂದು ಪಠಿಸುತ್ತಾರೆ. ''ಅಹತಂ ಯಂತ್ರನಿರ್ಮುಕ್ತಮುಕ್ತಂ ವಾಸಃ ಸ್ವಯಂಭುವಾ । ಶಸ್ತಂ ಮಂಗಲಕಾರ್ಯೇಷು ತಾವನ್ಮಾತ್ರೇಣ ಸರ್ವದಾ'' ಎಂದು ಅಹತದ ಲಕ್ಷಣವನ್ನೂ ಹೇಳುವರು. ಯಂತ್ರದಿಂದ ಹೊರಗೆ ಬಂದಿರುವ ಇನ್ನೂ ಉಪಯೋಗಿಸದ ಹೊಸದಾದ ವಸ್ತ್ರವನ್ನು ಅಹತವಸ್ತ್ರ ಎಂದು ಬ್ರಹ್ಮದೇವರು ಹೇಳಿದ್ದಾರೆ. ವಿವಾಹ ಮುಂತಾದ ಮಂಗಲಕಾರ್ಯಗಳಲ್ಲಿ ಇಂಥ ವಸ್ತ್ರಗಳನ್ನು ಉಪಯೋಗಿಸಬೇಕು.

**ಪ್ರಾಙ್ಮುಖೇಷೂಪವಿಷ್ಟೇಷು ಸುರೇಷು ದಿತಿಜೇಷು ಚ ।**
**ಧೂಪಾಮೋದಿತಶಾಲಾಯಾಂ ಜುಷ್ಟಾಯಾಂ ಮಾಲ್ಯದೀಪಕೈಃ ॥೬೧॥**

**ಮಾಲ್ಯಧೂಪಕೈಃ** ಹೂಮಾಲೆಗಳಿಂದ, ಧೂಪಗಳಿಂದ **ಜುಷ್ಟಾಯಾಂ** ಅಲಂಕೃತವಾದ **ಧೂಪಾಮೋದಿತಶಾಲಾಯಾಂ** ಅಗರ-ಗುಗ್ಗುಲ ಮುಂತಾದ ಸುಗಂಧದ್ರವ್ಯಗಳನ್ನು ಹಚ್ಚುವುದರಿಂದ ಸುವಾಸಿತವಾದ ಚಪ್ಪರದಲ್ಲಿ **ಸುರೇಷು** ದೇವತೆಗಳು **ದಿತಿಜೇಷು** ದೈತ್ಯರು **ಪ್ರಾಙ್ಮುಖೇಷು** ಪೂರ್ವಾಭಿಮುಖವಾಗಿ **ಉಪವಿಷ್ಟೇಷು** ಕುಳಿತಿರಲು, ॥೬೧॥

**ತಸ್ಯಾಂ ನರೇಂದ್ರ ಕರ(ಲ)ಭೋರುಲಸದ್ದುಕೂಲ-**
**ಶ್ರೋಣೀತಟಾಲಸಗತಿರ್ಮದವಿಹ್ವಲಾಕ್ಷೀ ।**
**ಸಾ ಕೂಜತೀ ಕನಕನೂಪುರಸಿಂಜಿತೇನ**
**ಕುಂಭಸ್ತನೀ ಕಲಶಪಾಣಿರಥಾವಿವೇಶ** ॥೬೨॥

**ಹೇ ನರೇಂದ್ರ** ಪರೀಕ್ಷಿದ್ರಾಜನೇ **ಅಥ** ಅವರೆಲ್ಲರೂ ಕುಳಿತ ಮೇಲೆ **ಕಲಭೋರು** ಆನೆ ಮರಿಯ ಸೊಂಡಲಿನಂತೆ ಮೇಲೆ ದಪ್ಪವಾಗಿ ಕ್ರಮವಾಗಿ ದುಂಡಗಿರುವ ತೊಡೆಗಳ ಮೇಲೆ **ಲಸತ್** ಹೊಳೆಯುವ **ದುಕೂಲ** ರೇಷ್ಮೇ ವಸ್ತ್ರವುಳ್ಳ **ಶ್ರೋಣೀತಟ** ನಿತಂಬಗಳ ಭಾರದಿಂದ **ಅಲಸ** ಮಂದವಾದ **ಗತಿಃ** ನಡುಗೆಯುಳ್ಳ **ಮದವಿಹ್ವಲಾಕ್ಷೀ** ಸಂತೋಷಾತಿಶಯದಿಂದ (ಯೌವ್ವನಭಾರದಿಂದ) ಚಂಚಲವಾದ ಕಣ್ಣುಗಳುಳ್ಳ **ಕುಂಭಸ್ತನೀ** ಕುಂಭಗಳಂತಿರುವ ಕುಚಗಳುಳ್ಳ **ಕಲಶಪಾಣಿಃ** ಕೈಯಲ್ಲಿ ಅಮೃತಕಲಶವನ್ನು ಹಿಡಿದ **ಸಾ** ನಾರಾಯಣಿಯು **ಕನಕ** ಬಂಗಾರದ **ನೂಪುರ** ಕಾಲುಗೆಜ್ಜೆಗಳ **ಸಿಂಜಿತೇನ** ಅವ್ಯಕ್ತಮಧುರಶಬ್ದದಿಂದ **ಕೂಜತೀ** ಶಬ್ದ ಮಾಡುವವಳಾಗಿ **ತಸ್ಯಾಂ** ಆ ಮಂಟಪದಲ್ಲಿ **ಆವಿವೇಶ** ಪ್ರವೇಶಿಸಿದಳು. ॥೬೨॥

**ತಾಂ ಶ್ರೀಮುಖೀಂ ಕನಕಕುಂಡಲಚಾರುಕರ್ಣ-**
**ನಾಸಾಕಪೋಲವದನಾಂ ಪರದೇವತಾಖ್ಯಾಮ್ ।**
**ಸಂವೀಕ್ಷ್ಯ ಸಂಮುಮುಹುರುತ್ಸ್ಮಿತವೀಕ್ಷಣೇನ**
**ದೇವಾಸುರಾ ವಿಗಲಿತಸ್ತನಪಟ್ಟಿಕಾಂತಾಮ್** ॥೬೩॥

**ದೇವಾಸುರಾಃ** ಸಾಮಾನ್ಯದೇವತೆಗಳು ಅಸುರರು **ಶ್ರೀಮುಖೀಂ** ಕಾಂತಿಯುತವಾದ ಮುಖವುಳ್ಳ **ಕನಕ** ಬಂಗಾರದ **ಕುಂಡಲ** ಕಿವಿಯ ಆಭರಣ **ಚಾರು** ಸುಂದರವಾದ **ಕರ್ಣ** ಕಿವಿಗಳು **ನಾಸಾ** ಸುಂದರವಾದ ಮೂಗು **ಕಪೋಲ** ಸುಂದರವಾದ ಕೆನ್ನೆಗಳು ಇವುಗಳಿಂದ ಯುಕ್ತವಾದ **ವದನಾಂ** ಮುಖ ಉಳ್ಳ **ವಿಗಲಿತ** ಜಾರಿದ **ಸ್ತನಪಟ್ಟಿಕಾಂತಾಂ** ಸ್ತನಾವರಣವಾದ ಉಟ್ಟ ವಸ್ತ್ರದ ತುದಿಯುಳ್ಳ (ಜಾರಿದ ಕುಪ್ಪಸ ಉಳ್ಳ) **ಪರದೇವತಾಖ್ಯಾಂ** ಪರದೇವತೆಯೆಂದು ಹೆಸರುಳ್ಳ **ತಾಂ** ನಾರಾಯಣಿಯನ್ನು **ಸಂವೀಕ್ಷ್ಯ** ಅಡಿಯಿಂದ ಮುಡಿಯ ವರೆಗೆ ನೋಡಿ **ಉತ್ಸ್ಮಿತವೀಕ್ಷಣೇನ** ಅವಳ ಉತ್ಕೃಷ್ಟವಾದ ಮುಗುಳು ನಗೆ ಹಾಗೂ ನೋಟಗಳಿಂದ **ಸಂಮುಮುಹುಃ** ಅತ್ಯಂತ ಭ್ರಾಂತರಾದರು. ಏನು ಮಾಡುವಳೆಂದು ತಿಳಿಯಲಾರದವರಾದರು. ॥೬೩॥

ಸತ್ಯ ಃ- ಶ್ರಿಯಾ ಶೋಭಯಾ ಮುಖಂ ನಿಸ್ಸರಣಂ ಯಸ್ಯಾಃ ಸಾ ಎಂದು ವಿಗ್ರಹಮಾಡಿಕೊಳ್ಳಬೇಕು. ಶೋಭೆಯಿಂದ ಶ್ರೀಮುಖೀಂ ಎಂಬುದಕ್ಕೆ ಶೋಭೆಯಿಂದ ಹೊರಟ ಎಂದರ್ಥ. ''ಮುಖನಿಸ್ಸರಣೇ ವಕ್ತ್ರೇ'' ಎಂದು ವಿಶ್ವವಿದೆ. ಹೀಗೆ ಮಾಡಿದ್ದರಿಂದ ವದನಶಬ್ದ ಅಧಿಕವಾಗಲಾರದು.

**ಅಸುರಾಣಾಂ ಸುಧಾ(ಪಾ)ದಾನಂ ಸರ್ಪಾಣಾಮಿವ ದುರ್ನಯಮ್ ।**
**ಮತ್ವಾ ಜಾತಿನೃಶಂಸಾನಾಂ ನ ತಾನ್ ವ್ಯಭಜದಚ್ಯುತಃ ॥೬೪॥**

**ಅಚ್ಯುತಃ** ಚ್ಯುತಿರಹಿತನಾದ ಸ್ತ್ರೀರೂಪಿಯಾದ ಶ್ರೀಹರಿಯು **ಜಾತಿನೃಶಂಸಾನಾಂ** ಹುಟ್ಟಿನಿಂದಲೇ ಕ್ರೂರವಾದ **ಸರ್ಪಾಣಾಂ** ಹಾವುಗಳಿಗೆ **ಸುಧಾದಾನಂ ಇವ** ಹಾಲು ಕೊಡುವುದು ಹೇಗೆ ವಿಷಪೋಷಕವೋ ಹಾಗೆ ಜಾತಿಯಿಂದಲೇ ಕ್ರೂರಿಗಳಾದ **ಅಸುರಾಣಾಂ** ದೈತ್ಯರಿಗೆ **ಸುಧಾದಾನಂ** ಅಮೃತವನ್ನು ಕೊಡುವುದು **ದುರ್ನಯಂ** ನೀತಿಯಲ್ಲ (ನೀತಿಬಾಹಿರ) ಎಂದು **ಮತ್ವಾ** ತಿಳಿದು **ತಾನ್** ಅಸುರರನ್ನು ಉದ್ದೇಶಿಸಿ (ಅಸುರರಿಗೆ) **ನ ವ್ಯಭಜತ್** ಅಮೃತವನ್ನು ಹಂಚಲಿಲ್ಲ. ॥೬೪॥

ಸತ್ಯ ಃ- ದೈತ್ಯರು ಬಹಳಜನರಿದ್ದಾರೆ. ತಾನು ಮಾತ್ರ ಒಬ್ಬನೇ? ದೇವರು ಏನು ಮಾಡಿಯಾನು? ಆ ದೈತ್ಯರಿಗೆ ಹೆದರಲಿಲ್ಲವೇ? ಎಂದರೆ **ಅಚ್ಯುತಃ** ಎಂದು ಉತ್ತರಿಸುತ್ತಿದ್ದಾರೆ. ಯಾರಿಂದಲೂ ಚ್ಯುತಿ ಇಲ್ಲದವನು. ಅವನಿಗೆ ಯಾರ ಭಯವೂ ಇಲ್ಲವೆಂದು ಭಾವ.

ನತಾನ್ ಎಂಬುದು ಒಂದೇ ಪದವೆಂದು ಮಾಡಿಕೊಂಡು ಹೀಗೆ ಅನ್ವಯ ತಿಳಿಯಬೇಕು. ''ನತಾನ್ ವ್ಯಭಜತ್'' ನತರಾದ ವಿನೀತರಾದ ದೇವತೆಗಳಿಗೆ ಅಮೃತವನ್ನು ಹಂಚಿದನೆಂದು ಭಾವ.

ಸುಧಾಶಬ್ದಕ್ಕೆ ಹಾಲು ಮತ್ತು ಅಮೃತ ಎಂಬ ಅರ್ಥದಲ್ಲಿ ''ಸುಧಾ ಪಯಸಿ ದೇವಾನ್ನೇ ಗುಣಪಕ್ವಪಯೋಮ್ಯದಿ'' ಎಂಬ ಅಭಿಧಾನವು ಪ್ರಮಾಣವಾಗಿದೆ.

ನಾನು ಏನೇ ಮಾಡಿದರೂ ದೈತ್ಯರಂತೂ ಒಪ್ಪುತ್ತಾರೆ. ಆದ್ದರಿಂದ ನನ್ನ ಭಕ್ತರಾದ ದೇವತೆಗಳಿಗೆ ಸುಧಾಪಾನ ಮಾಡಿಸುತ್ತೇನೆ. ಅಲ್ಲದೆ ಆ ದೈತ್ಯರೇ ''ಯಥಾನ್ಯಾಯಂ ವಿಭಜಸ್ವ'' ಎಂದು ಹೇಳಿರುವರು. ಕ್ರೂರರಾದ ದೈತ್ಯರಿಗೆ ಅಮೃತವನ್ನು ಕೊಡುವುದು ನ್ಯಾಯವಲ್ಲ. ಆದ್ದರಿಂದ ಇಬ್ಬರಿಗೂ ಅಮೃತ ಕೊಡುವುದಿಲ್ಲ. ಎಂದು ಪರಮಾತ್ಮನ ಅಭಿಪ್ರಾಯ. ॥೬೪॥

ಅವತರಣಿಕಾ ಃ- ಅವೆರಡನ್ನೂ ವಿಸ್ತಾರವಾಗಿ ಹೇಳುವರು-

**ಕಲ್ಪಯಿತ್ವಾ ಪೃಥಕ್ ಪಂಕ್ತೀರುಭಯೇಷಾಂ ಜಗತ್ಪತಿಃ ।**
**ತಾಂಶ್ಚೋಪವೇಶಯಾಮಾಸ ಸ್ವಾಸು ಸ್ವಾಸು ಚ ಪಂಕ್ತಿಷು ॥೬೫॥**

**ಜಗತ್ಪತಿಃ** ಜಗತ್ಪಾಲಕನಾದ ಶ್ರೀಹರಿಯು **ಉಭಯೇಷಾಂ** ದೇವತೆಗಳಿಗೂ ಅಸುರರಿಗೂ **ಪೃಥಕ್** ಬೇರೆ ಬೇರೆ **ಪಂಕ್ತೀಃ** ಸಾಲುಗಳನ್ನು **ಕಲ್ಪಯಿತ್ವಾ** ಮಾಡಿ **ತಾನ್**

ಅವರನ್ನು **ಸ್ವಾಸು ಸ್ವಾಸು** ತಮ್ಮ ತಮ್ಮ **ಪಂಕ್ತಿಷು** ಸಾಲುಗಳಲ್ಲಿ **ಉಪವೇಶಯಾಮಾಸ** ಕೂಡಿಸಿದನು. ।।೬೫।।

**ದೈತ್ಯಾನ್ ಗೃಹೀತಕಲಶೋ ವಂಚಯನ್ನುಪಸಂಚರೈಃ ।**
**ದೂರಸ್ಥಾನ್ ಪಾಯಯಾಮಾಸ ಜರಾಮೃತ್ಯುಹರಾಂ ಸುರಾನ್ ।।೬೬।।**

**ಗೃಹೀತಕಲಶಃ** ಕೈಯಲ್ಲಿ ಅಮೃತ ಕಲಶ ಹಿಡಿದ ಶ್ರೀಹರಿಯು **ಉಪಸಂಚರೈಃ** ಹತ್ತಿರದಲ್ಲಿ ತಿರುಗಾಡುವುದು ಹಾಸ್ಯದ ಮಾತು ಮುಂತಾದವುಗಳಿಂದ **ದೈತ್ಯಾನ್** ದೈತ್ಯರನ್ನು **ವಂಚಯನ್** ಮೋಸಗೊಳಿಸುತ್ತ **ದೂರಸ್ಥಾನ್** ದೂರದಲ್ಲಿದ್ದ **ಸುರಾನ್** ದೇವತೆಗಳನ್ನು **ಜರಾಮೃತ್ಯುಹರಂ** ಮುಪ್ಪು-ಮರಣ ಪರಿಹಾರಕವಾದ ಅಮೃತವನ್ನು **ಪಾಯಯಾಮಾಸ** ಕುಡಿಸಿದನು. ।।೬೬।।

ಸತ್ಯ :- ''ಪರಿವೇಷಕಾಃ ಸ್ವಕೀಯಾಶ್ಚೇತ್ ಕ್ವೋಪವೇಶೇಽಪಿ ಕಿಮ್'' ಬಡಿಸುವವರು ನಮ್ಮವರಿದ್ದಾಗ ಎಲ್ಲಿ ಕುಳಿತರೇನು? ಎಂಬ ಗಾದೆಮಾತು ಆವಾಗಿನಿಂದಲೇ ಪ್ರಚಾರಕ್ಕೆ ಬಂದಿತು ಎಂದು ಭಾವ. ।।೬೬।।

**ತೇ ಪಾಲಯಂತಃ ಸಮಯಮಸುರಾಃ ಸ್ವಕೃತಂ ನೃಪ ।**
**ತೂಷ್ಣೀಮಾಸನ್ ಕೃತಸ್ನೇಹಾಃ ಸ್ತ್ರೀವಿವಾದಜುಗುಪ್ಸಯಾ ।।೬೭।।**

**ಹೇ ನೃಪ** ರಾಜನೇ **ತೇ ಅಸುರಾಃ** ಆ ದೈತ್ಯರು **ಸ್ವಕೃತಂ** ತಾವು ಒಪ್ಪಿದ **ಸಮಯಂ** ನೀನು ಮಾಡಿದ್ದು ನಮಗೆ ಒಪ್ಪಿಗೆಯೆಂಬ ಒಪ್ಪಂದವನ್ನು **ಪಾಲಯಂತಃ** ಕಾಪಾಡುವವರಾಗಿ **ಕೃತಸ್ನೇಹಾಃ** ಅವಳಲ್ಲಿ ಪ್ರೀತಿ ಮಾಡಿದವರಾದ್ದರಿಂದ **ಸ್ತ್ರೀವಿವಾದಜುಗುಪ್ಸಯಾ** ಸ್ತ್ರೀಯೊಡನೆ ವಿವಾದ ಮಾಡಿದರೆ ಜನರು ತಮ್ಮನ್ನು ನಿಂದಿಸುವರೆಂಬ ಕಾರಣದಿಂದ **ತೂಷ್ಣೀಂ ಆಸನ್** ಸುಮ್ಮನೆ ಇದ್ದರು.

ಸತ್ಯ :- ಕೆಲವರು **ಕೃತಸ್ನೇಹಾಃ** ಎಂಬುದಕ್ಕೆ ಕೃತಃ ಛಿನ್ನಃ ಸ್ನೇಹಃ ಯೇಷಾಂ ಎಂದು ವಿಗ್ರಹ ಮಾಡಿಕೊಂಡು ಈಗ ಸ್ನೇಹವನ್ನು ಕಳೆದುಕೊಂಡ ಎಂದು ಅರ್ಥ ಮಾಡುವರು. ಹೀಗೆ ಮಾಡುವ ಪಕ್ಷದಲ್ಲಿ ಮುಂದಿನ ಶ್ಲೋಕವನ್ನು ಹೇಗೆ ವ್ಯಾಖ್ಯಾನಿಸುವುದೆಂದು ವಿಚಾರಣೀಯವಾಗುವುದು. ''ಸ ಕಥಂ ವ್ಯಾಕಾರ್ಯ ಇತ್ಯಾರ್ಯಾ ಆಚಾರ್ಯಾ ವಿಚಾರ್ಯಾಃ''

''ಕೃತೇನ ಹಸಿತೇನ ಸಹ ಸ್ನೇಹಶ್ಚ ಯೈಸ್ತೇ ನಗುತ್ತ ಸ್ನೇಹಮಾಡಿದ ಎಂದರ್ಥ. ''ಕೃತಂ ಯುಗೇಽಪಿ ಪರ್ಯಾಪ್ತೇ ವಿಹಿತೇ ಹಸಿತೇ ಫಲೇ'' ಎಂಬ ವಿಶ್ವಕೋಶವು ಕೃತ ಎಂಬ ಶಬ್ದಕ್ಕೆ ನಗು ಎಂದು ಅರ್ಥವನ್ನು ಹೇಳುತ್ತದೆ. ।।೬೭।।

**ತಸ್ಯಾಂ ಕೃತಾತಿಪ್ರಣಯಾಃ ಪ್ರಣಯಾಪಾಯಕಾತರಾಃ ।**
**ಬಹುಮಾನೇನ ಚಾಬದ್ಧಾ ನೋಚುಃ ಕಿಂಚನ ವಿಪ್ರಿಯಮ್** ॥೬೮॥

**ತಸ್ಯಾಂ** ಅವಳಲ್ಲಿ **ಕೃತಾತಿಪ್ರಣಯಾಃ** ಅತ್ಯಂತ ಪ್ರೀತಿಮಾಡಿದ ಅಥವಾ ವಿಶ್ವಾಸಮಾಡಿದ ಅಸುರರು **ಪ್ರಣಯೋಪಾಯಕಾತರಾಃ** ಸ್ನೇಹವು ವಿಶ್ವಾಸವು ಹೋಗುವುದೆಂಬ ಭಯವುಳ್ಳವರಾಗಿ **ಬಹುಮಾನೇನ** ತಾವು ಮಾತಿಗೆ ತಪ್ಪುವರಲ್ಲವೆಂಬ ಅಭಿಮಾನದಿಂದ ಅಥವಾ ಅವಳ ಸಮೀಪದಲ್ಲಿಯೇ ಸಂಚರಿಸುವುದೇ ಮುಂತಾದ ಸತ್ಕಾರದಿಂದ ಪುರುಷರಿಗೆ ಕಾಮಿನೀಕಲಹದಿಂದೇನು ಎಂಬ ದುರಹಂಕಾರದಿಂದ **ಆಬದ್ಧಾಃ** ನಿಯಂತ್ರಿತರಾಗಿ **ಕಿಂಚನ ವಿಪ್ರಿಯಂ ನ ಊಚುಃ** ಸ್ವಲ್ಪವೂ ಅವಳಿಗೆ ಪ್ರಿಯವಾಗದ ಮಾತನ್ನು ಆಡಲಿಲ್ಲ.

'ಪ್ರಣಯಃ ಪ್ರೇಮ್ಣಿ ವಿಸ್ರಂಭೇ'' ಎಂಬ ವಿಶ್ವಕೋಶವು ಪ್ರಣಯ ಎಂಬ ಶಬ್ದಕ್ಕೆ ಪ್ರೇಮ ಮತ್ತು ವಿಶ್ವಾಸ ಎಂಬ ಅರ್ಥಗಳನ್ನು ತಿಳಿಸುತ್ತದೆ.

**ಕಾತರಾಃ** ಅಧೈರ್ಯವುಳ್ಳವರಾಗಿ ಎಂದು ಅರ್ಥ. ''ಅಧೀರೇ ಕಾತರತ್ರಸ್ತೌ'' ಎಂದು ಅಮರ. ಸಮಯಪಾಲನತ್ವ, ಸ್ನೇಹತ್ವ, ಸ್ತ್ರೀವಿವಾದ, ಜುಗಪ್ಸಿತತ್ವ, ಕೃತಾತಿಪ್ರಣಯತ್ವ, ಪ್ರಣಯಾಪಾಯಕಾತರತ್ವ, ಬಹುಮಾನೇನ ಆಬದ್ಧತ್ವ ಈ ಆರು ಕಾರಣಗಳಿಂದ ದೈತ್ಯರು ಸ್ವಲ್ಪವೂ ವಿರುದ್ಧವಾಗಿ ಮಾತನಾಡಲಿಲ್ಲ.

ಛಲಾರೀ :- **ಬಹುಮಾನೇನ** ಈ ದೇವತೆಗಳು ಕೃಪಣರು ಮೊದಲು ಸ್ವಲ್ಪ ಕುಡಿಯಲಿ, ನೀವು ಧೀರರು ಒಂದು ಕ್ಷಣ ಪ್ರತೀಕ್ಷೆ ಮಾಡಿರಿ ಎಂದು ಅವಳು ಆಡಿದ ಗೌರವದ ಮಾತಿನಿಂದ **ಆಬದ್ಧಾಃ** ನಿಯಂತ್ರಿತರಾಗಿ, ಪ್ರತಿಯಾಗಿ ಏನೂ ಮಾತನಾಡಲಿಲ್ಲ, ಎಂದೂ ಅರ್ಥ ಮಾಡಿರುವರು. ॥೬೮॥

**ದೇವಲಿಂಗಪ್ರತಿಚ್ಛನ್ನಃ ಸ್ವರ್ಭಾನುರ್ದೇವಸಂಸದಿ ।**
**ಪ್ರವಿಶ್ಯ ಸೋಮಮಪಿಬಚ್ಚಂದ್ರಾರ್ಕಾಭ್ಯಾಂ ಚ ಸೂಚಿತಃ** ॥೬೯॥

**ಸ್ವರ್ಭಾನುಃ** ರಾಹುವು **ದೇವಲಿಂಗಪ್ರತಿಚ್ಛನ್ನಃ** ದೇವತೆಗಳ ವೇಷದಿಂದ ತನ್ನ ಸ್ವರೂಪವನ್ನು ಅಡಗಿಸಿಕೊಂಡು **ದೇವಸಂಸದಿ** ದೇವತೆಗಳ ಸಾಲಿನಲ್ಲಿ **ಪ್ರವಿಶ್ಯ** ಸೇರಿಕೊಂಡು **ಸೋಮಂ** ಅಮೃತವನ್ನು **ಅಪಿಬತ್** ಬಾಯಿಗೆ ಹಾಕಿಕೊಂಡನು. **ಚಂದ್ರಾರ್ಕಾಭ್ಯಾಂ** ಚಂದ್ರ ಮತ್ತು ಸೂರ್ಯರಿಂದ **ಸೂಚಿತಃ** ಈ ರಾಹುವು ಅನುಚಿತವಾಗಿ ನಡೆದುಕೊಂಡನೆಂದು ಸೂಚಿಸಲ್ಪಟ್ಟನು. ''ರಾಹುಃ ಸ್ವರ್ಭಾನುಃ'' ಎಂದು ಅಮರ. ॥೬೯॥

**ಚಕ್ರೇಣ ಕ್ಷುರಧಾರೇಣ ಜಹಾರ ಪಿಬತಃ ಶಿರಃ ।**
**ಹರಿಸ್ತಸ್ಯ ಕಬಂಧಸ್ತು ಸುಧಯಾ ಪ್ಲಾವಿತೋಽಪತತ್** ॥೭೦॥

**ಹರಿಃ** ಶ್ರೀಹರಿಯು **ಕ್ಷುರಧಾರೇಣ** ಕತ್ತಿಯಂತೆ ಚೂಪಾದ **ಚಕ್ರೇಣ** ಚಕ್ರದಿಂದ **ಪಿಬತಃ** ಅಮೃತಪಾನ ಮಾಡುತ್ತಿರುವ **ತಸ್ಯ** ರಾಹುವಿನ **ಶಿರಃ** ತಲೆಯನ್ನು **ಜಹಾರ** ಕತ್ತರಿಸಿದನು **ಕಬಂಧಃ ತು** ಮುಂಡವಾದರೂ **ಸುಧಯಾ ಪ್ಲಾವಿತಃ** ಅಮೃತಸಿಕ್ತವಾಗಿ **ಅಪತತ್** ಶುದ್ಧೋದಸಾಗರದಲ್ಲಿ ಬಿದ್ದಿತು. ।।೭೦।।

ಸತ್ಯ ಃ- ''ಕ್ಷಿಪ್ತಃ ಕಂಬಧೋऽಸ್ಯ ಶುಭೋಧಸಾಗರೇ ತ್ವಯಾ ಸ್ಥಿತೋऽದ್ಯಾಪಿ ಹಿ ತತ್ರ ಸಾಮೃತಃ'' ಎಂಬುದಾಗಿ ಈ ವಿಷಯವನ್ನು ಶ್ರೀಮದಾಚಾರ್ಯರು ತಾತ್ಪರ್ಯನಿರ್ಣಯದಲ್ಲಿ ಹೇಳಿದ್ದಾರೆ. ''ಕಬಂಧಸ್ತೂತ್ತರೇ ರಕ್ಷೋವಿಶೇಷೇ ಚ ವಿಧುಂತುದೇ'' ಎಂದು ವಿಶ್ವವಿದೆ. ಕೇವಲ ಅಮೃತದ ಸಂಬಂಧದಿಂದ ಆ ದೇಹವು ಅಜರಾಮರವಾಯಿತು ಎಂದು ಭಾವ.

**ರಾಹುರ್ಬಾಹುಬಲೇನ ದುರ್ಲಭಮಿತಿ ಜ್ಞಾತ್ವಾನ್ನಪಂಕ್ತೌ ಸ್ಥಿತಃ**
**ಶ್ರೀಶೇನ ಸ್ವಶಯೇऽರ್ಪಿತಂ ತದಮೃತಂ ದ್ರಾಜ್ ನಾऽಪಿಬತ್ ಕೌತುಕೀ ।**
**ತರ್ಹ್ಯೇವೇಂದುರವಿಪ್ರಚೋದಿತಹರಿಚ್ಛಿನ್ನಾತ್ಮಮೂರ್ಧಾऽಪತತ್**
**ಚಾಲಸ್ಯಾದಮೃತಂ ವಿಷಂ ಚ ಭವತೀತ್ಯಾಭಾಣಕಂ ಪ್ರಾಸರತ್ ।।**

ಬಾಹುಬಲದಿಂದ ಅಮೃತವನ್ನು ಕುಡಿಯುವುದು ಅಸಾಧ್ಯ ಎಂದು ರಾಹುವು ತಿಳಿದ. ದೇವತೆಗಳ ಸಾಲಿನಲ್ಲಿ ಕುಳಿತ. ಶ್ರೀಹರಿಯು ತನ್ನ ಕೈಯಲ್ಲಿ ಹಾಕಿದ ಅಮೃತವನ್ನು ಕೌತುಕದಿಂದ ಶೀಘ್ರವಾಗಿ ಕುಡಿಯಲಿಲ್ಲ. ಆಗ ಸೂರ್ಯ-ಚಂದ್ರರಿಂದ ಪ್ರೇರಿತನಾದ ಶ್ರೀಹರಿಯು ರಾಹುವಿನ ತಲೆಯನ್ನು ಕತ್ತರಿಸಿದ. ಕೂಡಲೇ ರಾಹುವು ಕೆಳಗೆ ಬಿದ್ದನು. ಆಲಸ್ಯದಿಂದ ಅಮೃತವು ವಿಷವಾಗುವುದು ಎಂಬ ಗಾದೆ ಮಾತು ಆಗಿನಿಂದಲೇ ಹರಡಿತು.

ಇಲ್ಲಿ ಕೆಲವರು ಅಪ್ಲಾವಿತಃ ಅಮೃತಸಂಬಂಧವಾಗಲಿಲ್ಲ ಎಂದು ವ್ಯಾಖ್ಯಾನ ಮಾಡುತ್ತಾರೆ. ಆದರೆ ಆ ಕಬಂಧವು ಇಲ್ಲಿಯ ವರೆಗೂ ಜರಾಮರಣವಿಲ್ಲದೇ ಇರುವುದಕ್ಕೆ ಬೇರೆ ಕಾರಣವನ್ನು ಹೇಳದಿರುವದರಿಂದ ಆ ವ್ಯಾಖ್ಯಾನವು ಅನಾದರಣೆಯವಾಗಿದೆ. ಪರಕೀಯರ ವ್ಯಾಖ್ಯಾನವನ್ನು ಅನುಸರಿಸುವ ನಮ್ಮವರೂ ಕೂಡ ''ತತ್ರ ಸಾಮೃತಃ'' ಎಂಬ ಆಚಾರ್ಯರ ಮಾತನ್ನು ನೋಡುವುದಿಲ್ಲ. ।।೭೦।।

**ಶಿರಸ್ತ್ವಮರತಾಂ ನೀತಮಜೋ ಗ್ರಹಮಚೀಕ್ಲೃಪತ್ ।**
**ಯಸ್ತು ಪರ್ವಣಿ ಚಂದ್ರಾರ್ಕಾವಭಿಧಾವತಿ ವೈರಧೀಃ** ।।೭೧।।

**ಅಜಃ** ಬ್ರಹ್ಮದೇವರು **ಅಮರತಾಂ ನೀತಂ** ದೇವತೆಗಳಿಂದ ಆವಿಷ್ಟವಾದುದರಿಂದ ಅಮರತ್ವವನ್ನು ಹೊಂದಿದ **ಶಿರಃ** ತಲೆಯನ್ನು **ಗ್ರಹಂ ಅಚೀಕ್ಲೃಪತ್** ನವಗ್ರಹಗಳಲ್ಲಿ ಒಂದನ್ನಾಗಿ ಮಾಡಿದರು **ಯಃ** ಯಾವ ರಾಹುವು **ವೈರಧೀಃ** ನನ್ನನ್ನು ಶ್ರೀಹರಿಗೆ

ಸೂಚಿಸದವರೆಂಬ ವೈರಬುದ್ಧಿಯಿಂದ **ಪರ್ವಣಿ** ಹುಣ್ಣಿಮೆ ಅಮಾವಾಸ್ಯಾಗಳಲ್ಲಿ **ಚಂದ್ರಾರ್ಕೌ ಅಭಿಧಾವತಿ** ಚಂದ್ರ-ಸೂರ್ಯರ ಕಡೆಗೆ ಓಡುತ್ತಾನೆ. ಮಂಡಲಗಳನ್ನು ಆಚ್ಛಾದಿಸುವನು ಎಂದು ಅಭಿಪ್ರಾಯ. ।।೭೧।।

ಸತ್ಯ ಃ- ಈ ಚಂದ್ರ-ಸೂರ್ಯರ ಮಂಡಲಗಳನ್ನು ರಾಹುವು ಆಚ್ಛಾದಿಸುತ್ತಾನೆ ಎಂಬ ವಿಷಯವು ಮಹಾಭಾರತದ ಆದಿಪರ್ವದಲ್ಲಿಯೂ ಉಕ್ತವಾಗಿದೆ. ''ತತೋ ವೈರವಿನಿರ್ಬಂಧಃ ಕೃತೋ ರಾಹುಮುಖೇನ ವೈ । ಶಾಶ್ವತಶ್ಚಂದ್ರಸೂರ್ಯಾಭ್ಯಾಂ ಗ್ರಸತ್ಯದ್ಯಾಽಪಿ ಚೈವ ತೌ'' ।।ಇತಿ।।

ತುಶಬ್ದವು ''ಶಿರಸ್ತು ತಸ್ಯ ಗ್ರಹತಾಮವಾಪ ಸುರೈಃ ಸಮಾವಿಷ್ಟಂ'' ಎಂದು ನಿರ್ಣಯದಲ್ಲಿ ಹೇಳಿದ್ದಾರೆ. ಮತ್ತು ''ತೇನಾಮೃತಾರ್ಥಂ ಹಿ ಸಹಸ್ರಜನ್ಮಸು ಪ್ರತಪ್ಯ ಭೂಯಸ್ತಪ ಆರಿತೋ ವರಃ । ಸ್ವಯಂಭುವಃ'' ಎಂದು ಶ್ರೀಮದಾಚಾರ್ಯರು ಹೇಳಿದ ವಿಶೇಷವನ್ನು ಮತ್ತು ಸರ್ವಜ್ಞನಾದ ಶ್ರೀಹರಿಯು ಬ್ರಹ್ಮದೇವರ ವರವನ್ನು ರಕ್ಷಿಸಲೆಂದೇ ರಾಹುವಿನ ಕೈಯಲ್ಲಿ ಅಮೃತವನ್ನು ಹಾಕಿದ ವಿಷಯವನ್ನು, ಶ್ರೀಹರಿಯ ಸೇವೆ ದೊರೆಯಲಿ ಎಂಬ ಕಾರಣಕ್ಕಾಗಿ ಚಂದ್ರ-ಸೂರ್ಯರು ರಾಹುವಿನ ವಿಚಾರವನ್ನು ಪರಮಾತ್ಮನಿಗೆ ಸೂಚಿಸಿದ್ದೇ ಹೊರತು ಭಗವಂತನಿಗೆ ತಿಳಿದಿಲ್ಲ ಎಂದಲ್ಲ ಎಂಬ ಈ ವಿಷಯವನ್ನು ತುಶಬ್ದವು ತಿಳಿಸುತ್ತದೆ.

''ಶಶಿಸೂರ್ಯನೇತ್ರಂ'' ಎಂಬಲ್ಲಿ ಸೂರ್ಯ-ಚಂದ್ರರು ಪರಮಾತ್ಮನ ಕಣ್ಣನ್ನು ಆಶ್ರಯಿಸಿದ್ದಾರೆ ಎಂದು ಹೇಳಿದ್ದಾರೆ. ಹಾಗಾದರೆ ಕಣ್ಣಿನಿಂದ ಆಗುವ ಸೇವೆಯನ್ನು ಚಂದ್ರ-ಸೂರ್ಯರು ಮಾಡುವುದೇ ಯುಕ್ತ. ಹೊರತು ಇತರ ದೇವತೆಗಳಲ್ಲ ಎಂಬುದು ಯುಕ್ತವೇ ಆಗಿದೆ. ಅಲ್ಲದೇ ಪರಮಾತ್ಮ ವಿಶ್ವಚಕ್ಷುವಾದದ್ದರಿಂದ ಶ್ರೀಹರಿಯು, ದೇವತೆಗಳ ಸಾಲಿನಲ್ಲಿ ಬಂದು ಕುಳಿತಿರುವ ರಾಹುವನ್ನು ನೋಡಲಿಲ್ಲ ಎಂದು ಹೇಳುವುದು ಅಯುಕ್ತ. ದೇವರ ಕಣ್ಣುಗಳನ್ನು ಆಶ್ರಯಿಸಿದ ಸೂರ್ಯ-ಚಂದ್ರರು ನೋಡಿದ್ದಾರೆ ಎಂದ ಮೇಲೆ ಶ್ರೀಹರಿಯ ಕಣ್ಣುಗಳು ಕೂಡಾ ನೋಡಿದವೆಂದೇ ತಿಳಿಯಬೇಕು. ಇಷ್ಟೆಲ್ಲ ವಿಶೇಷಗಳನ್ನು ತುಶಬ್ದವು ತಿಳಿಸುತ್ತದೆ. ।।೭೧।।

**ಪೀತಪ್ರಾಯೇಽಮೃತೇ ದೇವೈರ್ಭಗವಾನ್ ಲೋಕಭಾವನಃ ।**
**ಪಶ್ಯತಾಮಸುರೇಂದ್ರಾಣಾಂ ಸ್ವರೂಪಂ ಜಗೃಹೇ ವಿಭುಃ ।।೭೨।।**

**ಲೋಕಭಾವನಃ** ಜಗಜ್ಜನಕನಾದ **ಭಗವಾನ್** ಶ್ರೀಹರಿಯು **ದೇವೈಃ** ದೇವತೆಗಳಿಂದ **ಅಮೃತೇ** ಅಮೃತವು **ಪೀತಪ್ರಾಯೇ ಸತಿ** ಅವರವರ ಯೋಗ್ಯತಾಪ್ರಕಾರ ಕುಡಿದು ಮುಗಿಸುತ್ತಿರಲು ಅಥವಾ ಈಗ ಕೈಯಲ್ಲಿ ಸ್ವಲ್ಪ ಉಳಿದಿರುವುದರಿಂದ ಬಹಳಷ್ಟು

ಕುಡಿದಿರಲು ಎಂದರ್ಥ, **ಅಸುರೇಂದ್ರಾಣಾಂ ಪಶ್ಯತಾಂ ಸತಾಂ** ದೈತ್ಯಶ್ರೇಷ್ಠರು ನೋಡುತ್ತಿರುವಾಗಲೇ **ವಿಭುಃ** ಅಘಟಿತಘಟನಾ ಸಮರ್ಥನಾದ ಸ್ವಾಮಿಯು **ಸ್ವರೂಪಂ ಜಗೃಹೇ** ಪುರುಷರೂಪವನ್ನು ಸ್ವೀಕರಿಸಿದನು. ।।೭೨।।

ಅವತರಣಿಕಾ :- ಶ್ರೀಹರಿಯ ಕರುಣೆ ಇದ್ದರೇನೇ ನಾವು ಮಾಡುವ ಕಾರ್ಯಗಳು ಸಫಲವಾಗುವವು ಇಲ್ಲವಾದರೆ ಇಲ್ಲವೆಂದು ಸ್ಪಷ್ಟವಾಗಿ ಹೇಳುವರು-

**ಏವಂ ಸುರಾಸುರಗಣಾಃ ಸಮದೇಶಕಾಲ-**
**ಹೇತ್ವರ್ಥಯೋಗಮತಯೋಽಪಿ ಫಲೇ ವಿಕಲ್ಪಾಃ ।**
**ತತ್ರಾಮೃತಂ ಸುರಗಣಾಃ ಫಲಮಂಜಸಾಽಽಪುಃ**
**ಯತ್ಪಾದಪಂಕಜರಜಃಶ್ರಯಣಾನ್ನ ದೈತ್ಯಾಃ** ।।೭೩।।

**ಸುರಾಸುರಗಣಾಃ** ದೇವ-ದೈತ್ಯರ ಸಮೂಹಗಳು **ಸಮದೇಶಕಾಲಹೇತ್ವರ್ಥ-ಯೋಗಮತಯಃ ಅಪಿ, ಸಮ** ಸಮಾನವಾದ **ದೇಶ** ಕ್ಷೀರಸಮುದ್ರತೀರ **ಕಾಲ** ಮಥನದ ಕಾಲ **ಹೇತು** ಕಾರಣವಾದ ಮಂದರಪರ್ವತ **ಅರ್ಥ** ಕಾಮಧೇನು ಮುಂತಾದವುಗಳ ಅಥವಾ ಸಮುದ್ರದಲ್ಲಿ ಹಾಕಿದ ಬಳ್ಳಿ ಮುಂತಾದವುಗಳ **ಯೋಗ** ಸಂಬಂಧ ಮತ್ತು **ಗತಿ** ಅಮೃತಕ್ಕಾಗಿ ಗಮನ **ಮತಿ** ಎಂಬ ಪಾಠದಲ್ಲಿ ಬುದ್ಧಿ **ಅರ್ಥ** ಪ್ರಯೋಜನ **ಯೋಗ** ಉಪಾಯ ಇವುಗಳು ಸಮಾನವಾಗಿದ್ದರೂ **ಏವಂ** ಮೇಲೆ ಹೇಳಿದಂತೆ **ಫಲೇ** ಅಮೃತಪ್ರಾಪ್ತಿ ಎಂಬ ಫಲದ ವಿಷಯದಲ್ಲಿ **ವಿಕಲ್ಪಾಃ ಬಭೂವುಃ** ದೇವತೆಗಳು ಹೊಂದಿದರು ದೈತ್ಯರು ಹೊಂದಲೇ ಇಲ್ಲ. ಮೇಲೆ ಹೇಳಿರುವ ದೇಶ-ಕಾಲಾದಿ ಸಾಧನಗಳು ಒಂದೇ ಆದರೂ ಈ ರೀತಿ ವಿಚಿತ್ರವಾಗಲು ಕಾರಣ ಹೇಳುವರು. (ಇದು ವ್ಯವಸ್ಥಿತವಿಕಲ್ಪ.) **ತತ್ರ** ದೇವಾಸುರರ ಮಧ್ಯದಲ್ಲಿ ಅಥವಾ ಈ ರೀತಿ ಸಾಧನಗಳಿದ್ದರೂ **ಸುರಗಣಾಃ** ದೇವತೆಗಳ ಸಮೂಹಗಳು **ಯತ್ಪಾದಪಂಕಜರಜಃಶ್ರಯಣಾತ್** ಯಾವ ಶ್ರೀಹರಿಯ ಪಾದಕಮಲಗಳ ಧೂಳಿಯನ್ನು ಆಶ್ರಯಿಸಿದ್ದರಿಂದ **ಫಲಂ** ಅಮೃತವನ್ನು **ಅಂಜಸಾ ಆಪುಃ** ಚೆನ್ನಾಗಿ ಹೊಂದಿದರು. ಅಥವಾ ಅಂಜಃಶಬ್ದ ಅವಧಾರಣಾರ್ಥದಲ್ಲಿ. ದೇವರನ್ನು ಆಶ್ರಯಿಸಿದ್ದರಿಂದಲೇ ಎಂದರ್ಥ. **ನ ದೈತ್ಯಾಃ** ಶ್ರೀಹರಿಯ ಪಾದಧೂಳಿಯನ್ನು ಆಶ್ರಯಿಸದ ಕಾರಣ ಅಮೃತವನ್ನು ಹೊಂದಲಿಲ್ಲ. ಆದ್ದರಿಂದ ಫಲಪ್ರಾಪ್ತಿಗೆ ಶ್ರೀಹರಿಯ ಆಶ್ರಯವೇ ಕಾರಣವಾದ್ದರಿಂದ ಫಲಾಪೇಕ್ಷಿಗಳು ಅವನನ್ನೇ ಆಶ್ರಯಿಸಬೇಕು ಎಂದು ಅಭಿಪ್ರಾಯ. ।।೭೩।।

ವಿಶೇಷ :- ಮುಕ್ತಿಯೋಗ್ಯರಿಗೂ ತಮೋಯೋಗ್ಯರಿಗೂ ಸಾಧನೆಯ ರಂಗವು ಸಂಸಾರವೇ. ಆದರೂ ಹರಿಭಕ್ತರಿಗೆ ಮೋಕ್ಷ, ಹರಿವಿಮುಖರಿಗೆ ತಮಸ್ಸು ಎಂದು ತಿಳಿಯಬೇಕು. ಫಲದಲ್ಲಿ ವೈಚಿತ್ರ್ಯವಿದ್ದಮೇಲೆ ಸಾಧನದಲ್ಲಿಯೂ ವೈಚಿತ್ರ್ಯ ಇರಲೇಬೇಕಷ್ಟೇ. ಶ್ರೀಸತ್ಯಧರ್ಮರ ಪ್ರಕಾರ ''**ವಿಫಲೇ ವಿಕಲ್ಪಾಃ**'' ಎಂದು ಪಾಠ. **ವಿಫಲೇ**

ಶ್ರೀಹರಿಯು ಫಲಾನುಪಲಂಭಕನಾದಾಗ ಅಂದರೆ ವಿರುದ್ಧನಾದಾಗ **ವಿಕಲ್ಪಾಃ** ದೈತ್ಯರು ಅಸಮರ್ಥರಾದರು, ಅಥವಾ **ವಿಫಲೇ** ವಿಶಿಷ್ಟವಾದ ಫಲ ದೇವತೆಗಳಿಗಾಗಿಯೇ ಎಂದಾದಾಗ ದೈತ್ಯರು ಫಲವನ್ನು ಹೊಂದಲಿಲ್ಲ ಎಂದು ಅನ್ವಯ ಮಾಡಿಕೊಳ್ಳಬೇಕು.

ಅವತರಣಿಕಾ :- ಸತ್ಯ :- ದೇಶ-ಕಾಲ ಮುಂತಾದ ಸಾಧನ, ಶ್ರಮ ಇವುಗಳು ಸಮಾನವಾಗಿಯೇ ಇರುವಾಗ ದೇವ-ದಾನವರ ಮಧ್ಯದಲ್ಲಿ ಕೆಲವರು ಫಲ ಹೊಂದಿದರು, ಕೆಲವರು ಹೊಂದಲಿಲ್ಲ. ಯಾಕೆಂದರೆ ಈ ರೀತಿ ಮಾಡಿದ್ದರಿಂದ, ಈ ರೀತಿ ಮಾಡದಿರುವದರಿಂದ ಎಂದು ಹೇಳುವರು-

ಅವತರಣಿಕಾ :- ಲಿಂಗೇರೀ :- ಅಸುರಾದಿಗಳೂ ಕೂಡ ರುದ್ರಾದಿದೇವತೆಗಳನ್ನು ಆರಾಧಿಸುತ್ತಾರೆ. ಅಂದ ಮೇಲೆ ಅವರಿಗೂ ಏಕೆ ಅಮೃತಪ್ರಾಪ್ತಿರೂಪ ವಿಶಿಷ್ಟಫಲ ದೊರೆಯಲಿಲ್ಲ ಎಂದು ಶಂಕಿಸಿ ಶ್ರೀಹರಿಯ ಪಾದಾರವಿಂದದಲ್ಲಿ ಸಮರ್ಪಿಸದೇ ಇದ್ದದ್ದರಿಂದ ಎಂಬ ಅಭಿಪ್ರಾಯದಿಂದ ಹೇಳುವರು-

**ಯದ್ಯುದ್ಯತೇಷು ವಸುಕರ್ಮಮನೋವಚೋಭಿ-**
**ರ್ದೇವಾತ್ಮಜಾದಿಷು ನೃಭಿಸ್ತದಸತ್ ಪುರಸ್ತಾತ್ ।**
**ತೈರೇವ ಸದ್ ಭವತಿ ಯತ್ ಕ್ರಿಯತೇ ಚ ತಸ್ಮಿನ್**
**ಸರ್ವಸ್ಯ ತದ್ ಭವತಿ ಮೂಲನಿಷೇಚನಂ ಯತ್** ॥೭೪॥

**॥ ಇತಿ ಶ್ರೀಮದ್ಭಾಗವತೇ ಅಷ್ಟಮಸ್ಕಂಧೇ ಅಷ್ಟಮೋಧ್ಯಾಯಃ ॥**

**ನೃಭಿಃ** ಫಲಾಪೇಕ್ಷಿಗಳಾದ ಅಧಿಕಾರಿಗಳಿಂದ **ಪುರಸ್ತಾತ್** ಪರಮಾತ್ಮನ ಅನುಸಂಧಾನವಿಲ್ಲದ ಕಾಲದಲ್ಲಿ ವೇದಾದಿಗಳ ಅಂತರಂಗದ ಅರ್ಥಾನುಸಂಧಾನಕ್ಕಿಂತ ಮೊದಲು **ಯದಿ** ಒಂದು ವೇಳೆ **ಉದ್ಯತೇಷು** ನೀನು ಇದನ್ನು ಮಾಡು, ನೀನು ಇದನ್ನು ಮಾಡೆಂಬ ಶ್ರೀಹರಿಯ ನಿಯಮನವನ್ನು, ಆಜ್ಞೆಯನ್ನು ಅನುಸರಿಸಿ ನಡೆಯುತ್ತಿರುವ (ಆಯಾ ಫಲಗಳನ್ನು ಕೊಡಲು ಉದ್ಯುಕ್ತರಾದ) **ಉದ್ಯತೇಷು** ಉತ್ಕೃಷ್ಟಫಲ ಕೊಡುವಲ್ಲಿ ಉಪರತರಾದ (ವಿಶಿಷ್ಟಶಕ್ತಿ ಇಲ್ಲದ್ದರಿಂದ) ಅಸ್ವತಂತ್ರರಾದ **ದೇವಾತ್ಮಜಾದಿಷು** ಬ್ರಹ್ಮದೇವರ ಮಕ್ಕಳಾದ ರುದ್ರಾದಿಗಳಲ್ಲಿ ಅವರನ್ನುದ್ದೇಶಿಸಿ **ವಸು** ದ್ರವ್ಯ (ಹಣ) **ಕರ್ಮ** ಕ್ರಿಯೆ **ಮನಃ** ಮನಸ್ಸು **ವಚೋಭಿಃ** ಮಾತುಗಳಿಂದ **ಯತ್** ಯಾವ ಪೂಜಾದಿಗಳು **ಕ್ರಿಯತೇ** ಇವರೇ ಸಂತುಷ್ಟರಾಗಲಿ ಎಂದು ಮಾಡಲ್ಪಡುವವೋ (ತರ್ಹಿ) ಆಗ **ತತ್** ಅದು **ಅಸತ್** ಫಲ ಕೊಡುವುದಿಲ್ಲವಾದ್ದರಿಂದ ಇಲ್ಲದಿದ್ದಂತೆಯೇ ಹಾಗಾದರೆ ಫಲ ಕೊಡುವವು ಯಾವೆಂದರೆ ಹೇಳುತ್ತಾರೆ **ತೈಃ ಏವ** ಅದೇ ಅಧಿಕಾರಿಗಳಿಂದಲೇ ಅವೇ ದ್ರವ್ಯಾದಿಗಳಿಂದಲೇ **ತಸ್ಮಿನ್** ಆ ದೇವತೆಗಳಿಗೆ ನಿಯಾಮಕನಾದ ಶ್ರೀಹರಿಯಲ್ಲಿ ಅಂದರೆ ಅವನನ್ನು ಉದ್ದೇಶಿಸಿ ಅವನ

ಪ್ರೀತಿಗಾಗಿ **ಯದಿ** ಒಂದು ವೇಳೆ **ಯತ್ ಕ್ರಿಯತೇ** ಯಾವ ಪೂಜಾದಿಗಳು ಮಾಡಲ್ಪಡುವವೋ **ತರ್ಹಿ** ಆಗ **ತತ್** ಅವು **ಸತ್** ವಿಶಿಷ್ಟಫಲಪ್ರದಗಳಾದ್ದರಿಂದ ವಿದ್ಯಮಾನಗಳಾಗುವವು ಇವೆ ಎನ್ನಿಸಿಕೊಳ್ಳುವವು. ಶ್ರೀಕಾಂತನನ್ನು ಮಾತ್ರ ಪೂಜಿಸುವವರಿಗೆ ಇತರ ದೇವತೆಗಳ ಆರಾಧನೆಯಿಂದ ಬರುವ ಫಲ ಹೇಗೆ ಬಂದೀತು. ಅಲ್ಲದೇ ಅವರನ್ನು ಪೂಜಿಸದಿದ್ದುದರಿಂದ ಅವರು ಕುಪಿತರಾಗುವರಲ್ಲ ಎಂದರೆ ಹೇಳುವರು- **ಯತ್ ಮೂಲನಿಷೇಚನಂ** ಎಲ್ಲರಿಗೂ ನಿಮಿತ್ತಕಾರಣನಾದ ಯಾವ ಶ್ರೀಹರಿಯ ಪೂಜೆ ಎಂಬ ನೀರೆರೆಯುವುದು **ಮೂಲಸ್ಯ** ಬೇರಿಗೆ **ನಿಷೇಚನಂ** ನೀರು ಹಾಕುವುದು **ಸರ್ವಸ್ಯ** ಕೊಂಬೆಗಳೇ ಮೊದಲಾದ ಎಲ್ಲ ಗಿಡದ ಭಾಗಗಳಿಗೂ ಆಗುವಂತೆ **ಸರ್ವಸ್ಯ** ಶ್ರೀಹರಿಯನ್ನಾಶ್ರಯಿಸಿದ ಇತರ ಎಲ್ಲ ದೇವತೆಗಳಿಗೂ **ತತ್** ಆ ಪೂಜೆಯು **ಭವತಿ** ಆಗುವುದು. ಯಾರೂ ನಮ್ಮ ಪೂಜೆ ಮಾಡಲಿಲ್ಲವೆಂದು ತಿಳಿಯುವದಿಲ್ಲ. ಅವರೂ ತೃಪ್ತರೇ ಆಗುತ್ತಾರೆ. ಹರಿಭಕ್ತಿಯಿಲ್ಲದೇ ರುದ್ರಾದಿಗಳನ್ನು ಸ್ವತಂತ್ರರೆಂದು ಪೂಜಿಸಿದ್ದರಿಂದ ದೈತ್ಯರಿಗೆ ಅಮೃತ ದೊರೆಯಲಿಲ್ಲ. ಆದ್ದರಿಂದ ಶ್ರೀಹರಿಯಲ್ಲಿ ಭಕ್ತಿ ಮಾಡಬೇಕೆಂದರ್ಥ.

ವಿಶಿಷ್ಟ ಅರ್ಥ :- ಅಥವಾ **ತೈಃ ಏವ** ಆ ದೇವತೆಗಳಿಂದಲೇ **ಯತ್** ಯಾವ ಮನುಷ್ಯರು ತಮ್ಮನ್ನು ಕುರಿತು ಮಾಡಿದ ಪೂಜಾದಿಗಳನ್ನು **ತಸ್ಮಿನ್** ತಮಗೆ ಸ್ವಾಮಿಯಾದ ಶ್ರೀಹರಿಯಲ್ಲಿ **ಕ್ರಿಯತೇ** ಅರ್ಪಿಸಲ್ಪಡುತ್ತವೋ ಆದ್ದರಿಂದ ಅವನ ಉದ್ದೇಶದಿಂದ ಮಾಡಿದಾಗಲೇ **ಸತ್ ಭವತಿ** ಫಲಪ್ರದವಾಗುವವು. ಎಂದಾದರೂ ಅರ್ಥ. ''ಯೇಽಪ್ಯನ್ಯದೇವತಾಭಕ್ತಾಃ'' ''ಯಜಂತ್ಯವಿಧಿಪೂರ್ವಕಂ'' ''ಅಂತವತ್ತು ಫಲಂ ತೇಷಾಂ'' ಇತ್ಯಾದಿ ಗೀತಾವಾಕ್ಯಗಳು ಈ ವಿಷಯದಲ್ಲಿ ಪ್ರಮಾಣವಾಗಿವೆ.

ಶ್ರೀಹರಿಯ ಆಶ್ರಯವು ಅಗತ್ಯವಿಲ್ಲವೆಂದರೆ ಹೇಳುತ್ತಾರೆ. **ಪುರಸ್ತಾತ್** ಮತ್ತೊಂದು ದೇಹ ಬರುವುದಕ್ಕೆ ಮೊದಲು **ಉದ್ಯತೇಷು** ಸಹಾಯಾಭಿಮುಖರಾದ ದೇಹ-ಮಕ್ಕಳು ಮುಂತಾದವರಲ್ಲಿ, ಹಣ-ಕ್ರಿಯಾ-ಇಂದ್ರಿಯ-ಮಾತುಗಳಿಂದ ಮಾಡುವ ಆದರವು **ಅಸತ್** ಕೇವಲ ಹಣದ ವ್ಯಯವಷ್ಟೇ (ಪರಮಾತ್ಮನ ಇಚ್ಛೆಯಿಲ್ಲದಿದ್ದಲ್ಲಿ ಅವರು ಯಾರೂ ಇವನ ಸಹಾಯಕರಾಗುವದಿಲ್ಲ. ಅವುಗಳಿಂದಲೇ ಶ್ರೀಹರಿಯ ಪೂಜೆಯೆಂದು ಮಾಡಿದರೆ ಅದು ಫಲಕಾರಿಯಾಗುವದು. ಪ್ರೇರಕನಾದ ಶ್ರೀಹರಿಯು ಅವರಿಂದ ಸಹಾಯ ಮಾಡಿಸುವನು. ಅವನಿಗೆ ಮಾಡಿದ ಪೂಜೆಯು ಅವರಿಗೂ ತೃಪ್ತಿಗೆ ಕಾರಣವಾಗುವುದು. ಬೇರಿಗೆ ನೀರೆರೆದರೆ ಕೊಂಬೆಗಳೂ ಸರಸವಾಗಿರುವವು. ಇದರಿಂದ ತತ್ತದ್ಗತನಾದ ಶ್ರೀಹರಿಯ ಪೂಜೆಯೆಂದು ಸಂಸಾರ ನಡೆಸಿದಲ್ಲಿ ಅದು ಮುಕ್ತಿಗೆ ಕಾರಣವೆಂದು ಅವನನ್ನು ಮರೆತು ಕೇವಲ ದೇಹಾದಿಗಳಲ್ಲಿ ಆಸಕ್ತರಾಗಿ ನಡೆಸಿದರೇ ಬಂಧಕವೆಂದು ಹೇಳಿದಂತಾಯಿತು. ಆತ್ಮಜಾದಿಗಳಲ್ಲಿ ಹೇಗೋ ಹಾಗೆ ದೇವತಾದಿಗಳಲ್ಲಿ ಎಂದೂ ಅರ್ಥ ಮಾಡಿರುವರು.

ಸತ್ಯ ಃ- ದೇವಾತ್ಮಜಾದಿಷು ಎಂಬಲ್ಲಿ ಆತ್ಮಜಾದಿ ಎಂಬುದು ದೃಷ್ಟಾಂತಕ್ಕಾಗಿ ಹೇಳಿದ್ದು ಮಕ್ಕಳು ಮುಂತಾದವರಲ್ಲಿ ಮಾಡಿದರೆ ಹೇಗೋ ಹಾಗೆ **ದೇವೇಷು** ಶ್ರೀಹರಿಯಿಂದ ಭಿನ್ನರಾದ ದೇವತೆಗಳಲ್ಲಿ ಎಂದರ್ಥ. ದ್ವಂದ್ವ ಮಾಡಿ ಹೇಳಿದ ಸ್ಥಳದಲ್ಲಿ ಒಂದಕ್ಕೆ ದೃಷ್ಟಾಂತಸಮರ್ಪಕತ್ವ ಹೇಗೆ ಎಂದು ಕೇಳುವಂತಿಲ್ಲ. ''ಆಕಾಶಗ್ರಹಣಂ ದೃಷ್ಟಾಂತೋಪದರ್ಶನಾರ್ಥಂ'' ಮುಂತಾದ ಸುಧಾ ಮತ್ತು ''ವಿದ್ಯಾಶಬ್ದಸ್ಯ ಯೋಗರೂಢಿಭ್ಯಾಂ ಪ್ರವರ್ತತೇ'' ಎಂಬ ಸುಧಾವ್ಯಾಖ್ಯಾನದಲ್ಲಿ ಯಾದವಾಚಾರ್ಯರು ''ಅತ್ರ ಯಥಾರ್ಥಜ್ಞಾನೇಽಪಿ ವೇದನಂ ವಿದ್ಯಾ ಇತಿ ಯೋಗಸ್ಯ ''ಕರ್ಮಣಾ ಬದ್ಧ್ಯತೇ ಜಂತುಃ ವಿದ್ಯಯಾ ಚ ವಿಮುಚ್ಯತೇ'' ''ವಿದ್ಯೈವ ತು ನಿರ್ಧಾರಣಾತ್'' ಮುಂತಾದ ಪ್ರಯೋಗ ಒಪ್ಪಿ ರೂಢಿಯನ್ನು ತೋರಿಸಿದ್ದು ದೃಷ್ಟಾಂತವಾಗಿ ಎಂದು ತಿಳಿಯಬೇಕು ಎಂದಿದ್ದಾರೆ.

ಇದರಂತೆ ದ್ವಿತೀಯಾಧ್ಯಾಯ ದ್ವಿತೀಯಪಾದದಲ್ಲಿಯೂ ''ಮಹತ್ವಾಣುತ್ವಯೋಶ್ಚೈವ'' ಎಂಬ ಅನುವ್ಯಾಖ್ಯಾನ ವ್ಯಾಖ್ಯಾನದಲ್ಲಿ ಇಲ್ಲಿ ಮಹತ್ವ ತೆಗೆದುಕೊಂಡದ್ದು ದೃಷ್ಟಾಂತಕ್ಕಾಗಿ ಎಂದು ಹೇಳಿದ್ದಾರೆ. ಹೀಗೆ ಬಹಳ ಕಡೆಗೆ ಇದ್ದದ್ದರಿಂದ ಹೀಗೆ ಹೇಳುವುದು ಹೊಸದೇನಲ್ಲ.

''ದೇಹಾತ್ಮಜಾದಿಷು'' ಎಂಬ ಪಾಠ ಸರಲ. ''ಯದ್ಯುದ್ಯತೇಷು ವಸುಕರ್ಮ-ಮನೋವಚೋಭಿರ್ದೇಹಾತ್ಮಜಾದಿಷು ನೃಭಿಸ್ತದಸತ್ ಪೃಥಕ್ತ್ವಾತ್ । ತೈರೇವ ಸದ್ಭವತಿ ಯತ್ಕ್ರಿಯತೇ ಪೃಥಕ್ತ್ವಾತ್'' ಎಂದು ಕೆಲವು ಕಡೆ ಪಾಠ ಇದೆ. ಭಗವಂತನ ಪ್ರೀತಿಯನ್ನು ಮಾತ್ರ ಇಚ್ಛಿಸಿದರೆ ಅದು ಅಪೃಥಕ್ ಪರಮಾತ್ಮನಿಗೆ ಸಮರ್ಪಿಸಿದ್ದರಿಂದ, ಇತರ ದೇವತೆಗಳನ್ನು ತತ್ಪರಿವಾರತ್ವೇನ ಪೂಜಿಸಿದ್ದರಿಂದ ಅದು ಬೇರೆ ಅಲ್ಲ. ಕೇವಲ ದೇಹಾದಿವಿಷಯಕವಾದರೆ ಹರಿವಿಷಯವಾಗದಿರುವುದರಿಂದ ಪೃಥಕ್ ಎಂದಾಗುವದು. ಪೃಥಕ್ತ್ವಾತ್ ಅಪೃಥಕ್ತ್ವಾತ್ ಎಂಬಲ್ಲಿಯ ಪಂಚಮಿಯು ''ಲ್ಯಬ್ಲೋಪನಿಮಿತ್ತ-ಪಂಚಮೀ'' ಪೃಥಕ್ತ್ವಂ ಅಪೃಥಕ್ತ್ವಂ ನಿಮಿತ್ತೀಕೃತ್ಯ ಸತ್ ಅಸತ್ ಆಗುವವು. ಅಸವಃ ಪ್ರಾಣಾಶ್ಚ ಯದ್ಯುಜ್ಯತೇ ದೇಹಾದ್ಯುಪಯುಕ್ತಂ ಕ್ರಿಯತೇ ತತ್ ಎಂದಿದ್ದಾರೆ. ।।೭೪।

**ಇಲ್ಲಿಗೆ ಎಂಟನೇ ಅಧ್ಯಾಯವು ಮುಗಿಯಿತು.**

★★★

 

# ಅಥ ನವಮೋಽಧ್ಯಾಯಃ

ಭಗವಂತನ ಜ್ಞಾನದಿಂದ ಸಕಲಪಾಪಗಳೂ ದೂರವಾಗುತ್ತವೆ. ಶ್ರೀಹರಿಯ ಅನುಗ್ರಹದಿಂದಲೇ ಆ ಜ್ಞಾನವು ಸಂಪನ್ನವಾಗುತ್ತದೆ. ಪಾಪಗಳನ್ನು ಪರಿಹರಿಸಲು ಜ್ಞಾನದ ಹೊರತು ಮತ್ತೊಂದು ಸಾಧನ ಇಲ್ಲ. ಮುಂದಿನ ಎರಡು ಅಧ್ಯಾಯಗಳಿಂದ ಈ ವಿಷಯವನ್ನೇ ತಿಳಿಸುತ್ತಿದ್ದಾರೆ. ಮತ್ತು ದೇವಾಸುರರಿಗೆ ನಡೆದ ಯುದ್ಧವನ್ನೂ ಹೇಳುತ್ತಿದ್ದಾರೆ. ಅದರಲ್ಲಿಯೂ ಮೊದಲಿಗೆ ಭಗವಂತನು ಅಲ್ಲೇ ಇದ್ದನೋ ಬೇರೆಡೆಗೆ ಹೋದನೋ ಎಂಬ ವಿಷಯದಲ್ಲಿ ಸ್ವಲ್ಪ ಅನುವಾದ ಮಾಡಿ ಶ್ರೀಹರಿಯ ಗಮನ ಪ್ರಕಾರವನ್ನು ಹೇಳುತ್ತಿದ್ದಾರೆ.

**ಶ್ರೀಶುಕ ಉವಾಚ**

**ಇತಿ ದಾನವದೈತೇಯಾ ನಾವಿಂದನ್ನಮೃತಂ ನೃಪ ।**
**ಯುಕ್ತಾಃ ಕರ್ಮಣಿ ಯತ್ತಾಶ್ಚ ವಾಸುದೇವ(ನಾರಾಯಣ)ಪರಾಙ್ಮುಖಾಃ ॥೧॥**

**ಹೇ ನೃಪ** ರಾಜನೇ **ದಾನವದೈತೇಯಾಃ** ದಾನವರು ಮತ್ತು ದೈತ್ಯರು **ಯತಃ** ಯಾವ ಕಾರಣ **ವಾಸುದೇವಪರಾಙ್ಮುಖಾಃ** ಶ್ರೀಹರಿಯಲ್ಲಿ ವಿಮುಖರೋ ಭಕ್ತ್ಯಾದಿಗಳಿಲ್ಲದವರೋ **ತತಃ** ಆದ್ದರಿಂದ **ಕರ್ಮಣಿ** ಸಮುದ್ರಮಥನ ಕ್ರಿಯೆಯಲ್ಲಿ **ಯುಕ್ತಾಃ** ಮನಸ್ಸುಳ್ಳವರಾಗಿ **ಯತ್ತಾಃ ಚ** ಪ್ರಯತ್ನಮಾಡಿದವರಾದರೂ ಇತಿ ಮೇಲೆ ಹೇಳಿದಂತೆ **ಅಮೃತಂ** ಅಮೃತವನ್ನು **ನ ಅವಿಂದನ್** ಹೊಂದಲಿಲ್ಲ. ॥೧॥

**ಸಾಧಯಿತ್ವಾಽಮೃತಂ ರಾಜನ್ ಪಾಯಯಿತ್ವಾಽಮೃತಂ ಸುರಾನ್ ।**
**ಪಶ್ಯತಾಂ ಸರ್ವಭೂತಾನಾಂ ಯಯೌ ಗರುಡವಾಹನಃ ॥೨॥**

**ಹೇ ರಾಜನ್** ಎಲೋ ರಾಜನೇ **ಗರುಡವಾಹನಃ** ಗರುಡವಾಹನದ ಮೇಲೆ ಬಂದ ಅಜಿತನು **ಅಮೃತಂ ಸಾಧಯಿತ್ವಾ** ಅಮೃತವನ್ನು ಸಂಪಾದಿಸಿಕೊಟ್ಟು **ಸುರಾನ್ (ಸ್ವಕಾನ್)** ತನ್ನ ಭಕ್ತರಾದ ದೇವತೆಗಳಿಗೆ **ಅಮೃತಂ ಪಾಯಯಿತ್ವಾ** ಅಮೃತಪಾನ ಮಾಡಿಸಿ

**ಸರ್ವಭೂತಾನಾಂ ಪಶ್ಯತಾಂ** ಎಲ್ಲ ಜನರು ನೋಡುತ್ತಿರುವಾಗಲೇ **ಗರುಡವಾಹನಃ ಯಯೌ** ಗರುಡನ ಮೇಲೆ ಏರಿ ಅದೃಶ್ಯನಾದನು. ।।೨।।

**ಸಪತ್ನಾನಾಂ ಪರಾಮೃದ್ಧಿಂ ದೃಷ್ಟ್ವಾ ಚ ದಿತಿನಂದನಾಃ ।**
**ಅಮೃಷ್ಯಮಾಣಾ ಉತ್ಪೇತುರ್ದೇವಾನ್ ಪ್ರತ್ಯುದ್ಯತಾಯುಧಾಃ ।।೩।।**

**ದಿತಿನಂದನಾಃ** ದಿತಿಯ ಮಕ್ಕಳಾದ ದೈತ್ಯರು **ಸಪತ್ನಾನಾಂ** ಶತ್ರುಗಳಾದ ದೇವತೆಗಳ **ಪರಾಂ ಋದ್ಧಿಂ** ಅತಿಶಯವಾದ ಅಮೃತಪ್ರಾಪ್ತಿ ಮೊದಲಾದ ಅಭಿವೃದ್ಧಿಯನ್ನು ತಮಗೆ ದೊರೆಯದಿರುವುದನ್ನೂ **ದೃಷ್ಟ್ವಾ** ನೋಡಿ **ಅಮೃಷ್ಯಮಾಣಾಃ** ಸಹಿಸದವರಾಗಿ **ಉದ್ಯತಾಯುಧಾಃ** ಆಯುಧಗಳನ್ನೆತ್ತಿಕೊಂಡು **ದೇವಾನ್ ಪ್ರತಿ ಉತ್ಪೇತುಃ** ಯುದ್ಧಕ್ಕಾಗಿ ದೇವತೆಗಳ ಮೇಲೆ ಎರಗಿದರು. ।।೩।।

**ತತಃ ಸುರಗಣಾಃ ಸರ್ವೇ ಸುಧಯಾ ಪೀತಯೈಧಿತಾಃ ।**
**ಪ್ರತಿಸಂಯುಯುಧುಃ ಶಸ್ತ್ರೈರ್ನಾರಾಯಣಪರಾಯಣಾಃ ।।೪।।**

**ತತಃ** ಅನಂತರ **ನಾರಾಯಣಪರಾಯಣಾಃ** ಶ್ರೀಹರಿಯನ್ನೇ ಮುಖ್ಯ ಆಶ್ರಯನೆಂದು ತಿಳಿದವರಾಗಿ **ಸರ್ವೇ ಸುರಗಣಾಃ** ಎಲ್ಲ ದೇವತೆಗಳು **ಪೀತಯಾ ಸುಧಯಾ ಏಧಿತಾಃ (ಸಂತಃ)** ಪಾನ ಮಾಡಿದ ಅಮೃತದಿಂದ ಬಲಾದಿ ಅಭಿವೃದ್ಧಿಯುಳ್ಳವರಾಗಿ **ಶಸ್ತ್ರೈಃ** ಶಸ್ತ್ರಗಳಿಂದ **ಸಂಯುಯುಧುಃ** ಅಸುರರೊಡನೆ ಯುದ್ಧ ಮಾಡಿದರು. ।।೪।।

**ತತ್ರ ದೇವಾಸುರೋ ನಾಮ ರಣಃ ಪರಮದಾರುಣಃ ।**
**ರೋಧಸ್ಯುದನ್ವತೋ ರಾಜನ್ ತುಮುಲೋ ರೋಮಹರ್ಷಣಃ ।।೫।।**

**ರಾಜನ್** ರಾಜನೇ **ತತ್ರ** ಆ ಕಾಲದಲ್ಲಿ **ಉದನ್ವತಃ ರೋಧಸಿ** ಸಮುದ್ರತೀರದಲ್ಲಿ **ಪರಮದಾರುಣಃ** ಅತ್ಯಂತ ಭಯಂಕರವಾದ **ತುಮುಲಃ** ಗದ್ದಲದ **ರೋಮಹರ್ಷಣಃ** ರೋಮಾಂಚನಕಾರಿಯಾದ **ದೇವಾಸುರಃ ನಾಮ ರಣಃ** ದೇವಾಸುರ ಎಂಬ ಹೆಸರಿನ ಯುದ್ಧವು ಆಯಿತು.

''ಉದನ್ವಾನುದಧಿಃ ಸಿಂಧುಃ ಸರಸ್ವಾನ್ ಸಾಗರೋऽರ್ಣವಃ'' ''ಕೂಲಂ ರೋಧಶ್ಚ ತೀರಂ ಚ'' ಎಂದು ಅಮರ ಇದೆ. ಉದಕಾಃ ಅತ್ರ ಸಂತೀತಿ ಉದನ್ವಾನ್ ।।೫।।

**ತತ್ರಾನ್ಯೋಽನ್ಯಂ ಸಪತ್ನಾಸ್ತೇ ಸಂರಬ್ಧಮನಸೋ ರಣೇ ।**
**ಸಮಾಸಾದ್ಯಾಸಿಭಿರ್ಬಾಣೈರ್ನಿಜಘ್ನುರ್ವಿವಿಧಾಯುಧೈಃ ।।೬।।**

**ತತ್ರ ರಣೇ** ಆ ಯುದ್ಧದಲ್ಲಿ **ಸಂರಬ್ಧಮನಸಃ** ಪರಸ್ಪರ ಕೋಪಾವೇಶವುಳ್ಳ ಆಗ್ರಹವುಳ್ಳ ಮನಸ್ಸುಳ್ಳ**ತೇ ಸಪತ್ನಾಃ** ಶತ್ರುಗಳಾದ ಆ ದೇವಾಸುರರು **ಸಮಾಸಾದ್ಯ** ಒಬ್ಬರ ಮೇಲೋಬ್ಬರು

ಎರಗಿ **ಅಸಿಭಿಃ** ಕತ್ತಿಗಳಿಂದ **ಬಾಣೈಃ** ಬಾಣಗಳಿಂದ **ವಿವಿಧಾಯುಧೈಃ** ಅನೇಕ ಬಗೆಯ ಆಯುಧಗಳಿಂದ **ಅನ್ಯೋನ್ಯಂ** ಪರಸ್ಪರವಾಗಿ **ನಿಜಘ್ನುಃ** ಹೊಡೆದರು. ।।೬।।

**ಶಂಖತೂರ್ಯಮೃದಂಗಾನಾಂ ಭೇರೀಡಮರಿಣಾಂ ಮಹಾನ್ ।**
**ಹಸ್ತ್ಯಶ್ವರಥಪತ್ತೀನಾಂ ನದತಾಂ ನಿಃಸ್ವನೋಽಭವತ್ ।।೭।।**

ಆ ಯುದ್ಧದಲ್ಲಿ **ನದತಾಂ** ಬಾರಿಸಲ್ಪಡುವ **ಶಂಖತೂರ್ಯಮೃದಂಗಾನಾಂ** ಶಂಖ-ತೂರ್ಯ-ಮೃದಂಗಗಳ **ಭೇರೀಡಮರಿಣಾಂ** ಭೇರಿ ಮತ್ತು ಡಮರುಗಳ (**ನದತಾಂ** ಕೂಗುತ್ತಿರುವ) **ಹಸ್ತ್ಯಶ್ವರಥಪತ್ತೀನಾಂ** ಆನೆ-ಕುದುರೆ ರಥ ಮತ್ತು ಕಾಲಾಳುಗಳ **ಮಹಾನ್** ದೊಡ್ಡ **ನಿಃಸ್ವನಃ** ಶಬ್ದವು **ಅಭವತ್** ಆಯಿತು.

ಸತ್ಯ ಃ- ಡಂ ಇತಿ ಶಬ್ದಂ ಇಯರ್ತಿ ಇತಿ ಡಮರೀ, ಡಂ ಎಂದು ಶಬ್ದವನ್ನು ಮಾಡುವ ಒಂದು ವಿಧವಾದ ವಾದ್ಯ. ''ವಾದ್ಯಪ್ರಭೇದಾ ಡಮರುರ್ಮಡ್ಡುಡಿಂಡಿಮ-ಝರ್ಝರಾಃ'' ಎಂದು ಅಮರ. ''ಪದಾತಿಪತ್ತಿಪದಗ'' ಎಂದು ಅಮರ. ।।೭।।

**ರಥಿನೋ ರಥಿಭಿಸ್ತತ್ರ ಪತ್ತಿಭಿಃ ಸಹ ಪತ್ತಯಃ ।**
**ಹಯಾ ಹಯೈರಿಭಾಶ್ಚೇಭೈಃ ಸಮಾಸಜ್ಜಂತ ಸಂಯುಗೇ ।।೮।।**

**ತತ್ರ ಸಂಯುಗೇ** ಆ ಯುದ್ಧದಲ್ಲಿ **ರಥಿನಃ** ರಥಿಕರು **ರಥಿಭಿಃ** ರಥಿಕರೊಡನೆ **ಪತ್ತಯಃ** ಕಾಲಾಳುಗಳು **ಪತ್ತಿಭಿಃ ಸಹ** ಕಾಲಾಳುಗಳೊಡನೆ **ಹಯಾಃ** ಕುದುರೆಗಳು (ಸವಾರರು) **ಹಯೈಃ** ಕುದುರೆಗಳೊಡನೆ **ಇಭಾಃ** ಆನೆಗಳು **ಇಭೈಃ** ಆನೆಗಳೊಡನೆ **ಸಮಾಸಜ್ಜಂತ** ಸೇರಿದರು. ಅಂದರೆ ದ್ವಂದ್ವಯುದ್ಧವಾಯಿತೆಂದರ್ಥ. ।।೮।।

ಅವರು ಹತ್ತಿ ಬಂದ ವಾಹನಗಳನ್ನು ಹೇಳುತ್ತಾರೆ.

**ಉಷ್ಟ್ರೈಃ ಕೇಚಿದ್ ದ್ವಿಜೈಃ ಕೇಚಿದಪರೇಽಭಿಯಯುಃ ಖರೈಃ ।**
**ಕೇಚಿದ್ ಗೌರಮೃಗೈಃ ಋಕ್ಷೈಃ ದ್ವೀಪಿಭಿರ್ಹರಿಭಿರ್ಭಟಾಃ ।।೯।।**

**ಕೇಚಿದ್ ಭಟಾಃ** ಕೆಲವು ಯೋಧರು **ಉಷ್ಟ್ರೈಃ** ಒಂಟೆಗಳಿಂದ **ದ್ವಿಜೈಃ** ಕೆಲವರು ಪಕ್ಷಿಗಳಿಂದ **ಅಪರೇ** ಮತ್ತು ಕೆಲವರು **ಖರೈಃ** ಕತ್ತೆಗಳಿಂದ **ಕೇಚಿದ್** ಹಲವರು **ಗೌರಮೃಗೈಃ** ಬಿಳಿಮೃಗಗಳಿಂದ **ಋಕ್ಷೈಃ** ಕರಡಿಗಳಿಂದ **ದ್ವೀಪಿಭಿಃ** ಹುಲಿಗಳಿಂದ **ಹರಿಭಿಃ** ಸಿಂಹಗಳಿಂದ ಅಥವಾ ಕಪಿಗಳಿಂದ ಸೇರಿಕೊಂಡು ವಾಹನ ಮಾಡಿಕೊಂಡು ಯುದ್ಧಕ್ಕೆ ತೆರಳಿದರು. ।।೯।।

**ಗೃಧ್ರೈಃ ಕಂಕೈರ್ಬಕೈರನ್ಯೇ ಶ್ಯೇನೈರ್ಭಾಸೈಸ್ತಿಮಿಂಗಿಲೈಃ ।**
**ಶರಭೈರ್ಮಹಿಷೈಃ ಖಡ್ಗೈರ್ಗೋವೃಷೈರ್ಗವಯಾರುಣೈಃ ।।೧೦।।**

**ಅನ್ಯೇ** ಇನ್ನೂ ಕೆಲವರು **ಗೃಧ್ರೈಃ** ಹದ್ದುಗಳಿಂದ **ಕಂಕೈಃ** ಕೆಲವರು ಕಾಗೆಗಳಿಂದ **ಬಕೈಃ** ಕೆಲವರು ಬಕಪಕ್ಷಿಗಳಿಂದ **ಶ್ಯೇನೈಃ** ಗಿಡಗಗಳಿಂದ **ಭಾಸೈಃ** ನಾಯಿಗಳಿಂದ **ತಿಮಿಂಗಿಲೈಃ** ದೊಡ್ಡ ಮೀನುಗಳಿಂದ **ಶರಭೈಃ** ಎಂಟು ಕಾಲಿನ ಮೃಗಗಳಿಂದ **ಮಹಿಷೈಃ** ಕಾಡುಕೋಣಗಳಿಂದ **ಖಡ್ಗೈಃ** ಖಡ್ಗಮೃಗಗಳಿಂದ **ಗೋವೃಷೈಃ** ಘೂಳಿಗಳಿಂದ **ಗವಯೈಃ** ಕಾಡಾಕಳುಗಳಿಂದ **ಅರುಣೈಃ** ಕೆಂಪು ಮೃಗಗಳಿಂದ ಹೊರಟರು.

''ಭಾಸೋ ಮಾಸಿ ಸಮಾಖ್ಯಾತೋ ಲೋಷ್ಮೇ ಕುಕ್ಕುಟಗೃಧ್ರಯೋಃ'' ಎಂದು ವಿಶ್ವವಿದೆ. ||೧೦||

**ಶಿವಾಭಿರಾಖುಭಿಃ ಕೇಚಿತ್ ಕೃಕಲಾಸೈಃ ಶಶೈರ್ನರೈಃ ।**
**ಬಸ್ತೈರೇಕೇ ಕೃಷ್ಣಸಾರೈರ್ಹಂಸೈರನ್ಯೇ ಚ ಸೂಕರೈಃ** ||೧೧||

**ಕೇಚಿತ್** ಕೆಲವರು **ಶಿವಾಭಿಃ** ಹೆಣ್ಣು ನರಿಗಳಿಂದ **ಆಖುಭಿಃ** ಇಲಿಗಳಿಂದ **ಕೃಕಲಾಸೈಃ** ಓತಿಕಾಟಗಳಿಂದ **ಶಶೈಃ** ಮೊಲಗಳಿಂದ **ನರೈಃ** ಮನುಷ್ಯರಿಂದ **ಬಸ್ತೈಃ** ಆಡುಗಳಿಂದ (ಕುರಿ) **ಕೃಷ್ಣಸಾರೈಃ** ಜಿಂಕೆಗಳಿಂದ **ಹಂಸೈಃ** ಹಂಸಪಕ್ಷಿಗಳಿಂದ **ಅನ್ಯೇ** ಇನ್ನುಳಿದವರು **ಸೂಕರೈಃ** ಹಂದಿಗಳಿಂದ ಹೊರಟರು. ಆಯಾ ಪ್ರಾಣಿಗಳನ್ನು ಹತ್ತಿ ಹೊರಟರು ಎಂದು ಅಭಿಪ್ರಾಯ.

**ಅನ್ಯೇ ಜಲಸ್ಥಲಖಗೈಃ ಸತ್ತ್ವೈರ್ವಿಕೃತವಿಗ್ರಹೈಃ ।**
**ಸೇನಯೋರುಭಯೋ ರಾಜನ್ ವಿವಿಶುಸ್ತೇಽಗ್ರತೋಽಗ್ರತಃ** ||೧೨||

**ರಾಜನ್** ಪರೀಕ್ಷಿತನೇ **ಅನ್ಯೇ** ಮತ್ತಿತರರು **ಜಲಸ್ಥಲಖಗೈಃ** ನೀರಿನಲ್ಲಿ, ನೆಲದಲ್ಲಿ, ಆಕಾಶದಲ್ಲಿ ಸಂಚರಿಸುವ ಪ್ರಾಣಿಗಳಿಂದ **ವಿಕೃತವಿಗ್ರಹೈಃ ಸತ್ತ್ವೈಃ** ವಿಕಾರವಾದ ಶರೀರವುಳ್ಳ ಪ್ರಾಣಿಗಳಿಂದ **ಉಭಯೋಃ ಸೇನಯೋಃ** ಎರಡೂ ಸೈನ್ಯಗಳಲ್ಲಿ **ಅಗ್ರತಃ ಅಗ್ರತಃ** ಮುಂದೆ ಮುಂದೆ **ತೇ** ಭಟರು **ವಿವಿಶುಃ** ಪ್ರವೇಶಿಸಿದರು. ||೧೨||

**ಚಿತ್ರಧ್ವಜಪಟೈ ರಾಜನ್ನಾತಪತ್ರೈಃ ಶಿತಾಮಲೈಃ ।**
**ಮಹಾಧನೈರ್ವಜ್ರದಂಡೈರ್ವಿಭ್ರಾಜದ್ಬಾರ್ಹಚಾಮರೈಃ** ||೧೩||

**ವಾತೋದ್ಧೂತೋತ್ತರೋಷ್ಣೀಷೈಃ ಸತ್ಕೃತೈರ್ವರ್ಮಭೂಷಣೈಃ ।**
**ಸ್ಫುರದ್ಭಿರ್ವಿಶದೈಃ ಶಸ್ತ್ರೈಃ ಸುತರಾಂ ಸೂರ್ಯರಶ್ಮಿಭಿಃ** ||೧೪||

**ದೇವದಾನವವೀರಾಣಾಂ ಧ್ವಜಿನ್ಯೌ ಪಾಂಡುನಂದನ ।**
**ರೇಜತುರ್ವೀಚಿಮಾಲಾಭಿರ್ಯಾದಸಾಮಿವ ಸಾಗರೇ** ||೧೫||

**ಹೇ ಪಾಂಡುನಂದನ** ಪಾಂಡವರ ಸಂತೋಷಕ್ಕೆ ಕಾರಣನಾದ **ರಾಜನ್** ಪರೀಕ್ಷಿತನೇ **ದೇವದಾನವವೀರಾಣಾಂ** ದೇವತೆಗಳ ದೈತ್ಯರ ವೀರರ **ಧ್ವಜಿನ್ಯೌ** ಸೈನ್ಯಗಳು **ಚಿತ್ರಧ್ವಜಪಟೈಃ**

ಧ್ವಜಸ್ತಂಭಗಳ ವಿಚಿತ್ರವಾದ ವಸ್ತ್ರಗಳಿಂದಲೂ **ಸಿತಾಮಲೈಃ** ಬೆಳ್ಳಗೂ ಶುದ್ಧವೂ ಆಗಿರುವ **ಆತಪತ್ರೈಃ** ಬಿಸಿಲಿನಿಂದ ರಕ್ಷಿಸುವ ಛತ್ರಿಗಳಿಂದಲೂ **ಮಹಾಧನೈಃ ಚ** ಬಹಳ ಬೆಲೆಬಾಳುವ **ವಜ್ರದಂಡೈಃ** ವಜ್ರಖಚಿತ ದಂಡಗಳಿಂದಲೂ (ದಂಡಧಾರಿಗಳಿಂದಲೂ) **ವಿಭ್ರಾಜತ್** ಪ್ರಕಾಶಿಸುವ **ವಾಹರ್ಚಾಮರೈಃ** ನವಿಲುಗರಿಯ ಚಾಮರಗಳಿಂದಲೂ **ವಾತೋದ್ಧೂತೋ-ತ್ತರೋಷ್ಣೀಷೈಃ** ಸಮುದ್ರದ ಗಾಳಿಯಿಂದ ಬಹಳವಾಗಿ ಹಾರಾಡುತ್ತಿದ್ದ ಶ್ರೇಷ್ಠವಾದ ತಲೆಗೆ ಸುತ್ತಿಕೊಳ್ಳುವ ವಸ್ತ್ರಗಳಿಂದಲೂ **ಸತ್ಕೃತೈಃ** ಚೆನ್ನಾಗಿ ಮಾಡಿದ **ವರ್ಮಭೂಷಣೈಃ** ಕವಚಾಲಂಕಾರಗಳಿಂದಲೂ **ವಿಶದೈಃ** ಶಾಣೆ ಹಿಡಿದದ್ದರಿಂದ ಪ್ರಶಸ್ತವಾದ **ಸೂರ್ಯರಶ್ಮಿಭಿಃ** ಸೂರ್ಯನ ಕಿರಣಗಳಿಂದಲೂ **ಸುತರಾಂ** ಬಹಳವಾಗಿ **ಸ್ಫುರದ್ಭಿಃ** ಹೊಳೆಯುವ **ಶಸ್ತ್ರೈಃ** ಆಯುಧಗಳಿಂದಲೂ **ಸಾಗರೇ** ಸಮುದ್ರದಲ್ಲಿ **ವೀಚಿಮಾಲಾಭಿಃ** ಅಲೆಗಳ ಸಮೂಹಗಳಿಂದ **ಯಾದಸಾಂ** ಜಲಚರಗಳ (**ವರೂಥಿನೀ ಇವ** ಸಮೂಹಗಳಂತೆ) **ರೇಜತುಃ** ಪ್ರಕಾಶಿಸಿದವು. ||೧೩-೧೪-೧೫||

ಸತ್ಯ ಃ- ಶಿತಾಮಲೈಃ ಶಿತಾವದಮಲೈಃ ಶ್ವೇತಶರ್ಕರಾವದಮಲೈಃ ಅಂದರೆ ಕಲ್ಲು ಸಕ್ಕರೆಯಂತೆ ಶುದ್ಧವಾದ ಎಂದು ಅರ್ಥ. ''ಚಕ್ರೇ ಶಿತಾಪರ್ಣಮಹೋತ್ಸವಮನ್ವಗಾಃ'' ಎಂಬ ವಿದ್ಯಾಧೀಶವಿಜಯವ್ಯಾಖ್ಯಾನದಲ್ಲಿ ''ಶಿತಾ ಸ್ಯಾತ್ ಶ್ವೇತಶರ್ಕರಾ'' ಎಂಬ ಅಭಿಧಾನ ಹೇಳಿದೆ ಎನ್ನುತ್ತಾರೆ ಶ್ರೀಗಳವರು. ||೧೫||

**ವೈರೋಚನೋ ಬಲಿಃ ಸಂಖ್ಯೇ ಸೋಽಸುರಾಣಾಂ ಚಮೂಪತಿಃ |**
**ಯಾನಂ ವೈಹಾಯಸಂ ನಾಮ ಕಾಮಗಂ ಮಯನಿರ್ಮಿತಮ್ ||೧೬||**

**ಸರ್ವಸಾಂಗ್ರಾಮಿಕೋಪೇತಂ ಸರ್ವಾಶ್ಚರ್ಯಮಯಂ ಪ್ರಭೋ |**
**ಅಪ್ರತರ್ಕ್ಯಮನಿರ್ದೇಶ್ಯಂ ದೃಶ್ಯಮಾನಮದರ್ಶನಮ್ ||೧೭||**

**ಆಸ್ಥಿತಸ್ತದ್ವಿಮಾನಾಗ್ರ್ಯಂ ಸರ್ವಾನೀಕಾಧಿಪೈರ್ವೃತಃ |**
**ವಾಲವ್ಯಜನಛತ್ರಾಗ್ರ್ಯೈ ರೇಜೇ ಚಂದ್ರ ಇವೋದಯೇ ||೧೮||**

**ಪ್ರಭೋ** ರಾಜನಾದ ಪರೀಕ್ಷಿತನೇ **ಸಂಖ್ಯೇ** ಯುದ್ಧದಲ್ಲಿ **ಅಸುರಾಣಾಂ** ದೈತ್ಯರ **ಚಮೂಪತಿಃ** ಸೇನಾಧಿಪತಿಯಾದ **ಸಃ** ಪ್ರಸಿದ್ಧನಾದ **ವೈರೋಚನಿಃ** ವಿರೋಚನನ ಮಗನಾದ **ಬಲಿಃ** ಬಲಿಚಕ್ರವರ್ತಿಯು **ಮಯನಿರ್ಮಿತಂ** ದೈತ್ಯರ ಶಿಲ್ಪಿಯಾದ ಮಯನಿಂದ ನಿರ್ಮಿತವಾದ **ಕಾಮಗಂ** ಇಚ್ಛಾನುಸಾರ ಎಲ್ಲಿ ಬೇಕಾದರೂ ಹೋಗುವ **ಸರ್ವಸಾಂಗ್ರಾಮಿ-ಕೋಪೇತಂ** ಎಲ್ಲ ಯುದ್ಧಸಾಮಗ್ರಿಗಳಿಂದ ತುಂಬಿದ **ಸರ್ವಾಶ್ಚರ್ಯಮಯಂ** ಎಲ್ಲ ರೀತಿಯ ಆಶ್ಚರ್ಯಕರ ಪದಾರ್ಥಗಳುಳ್ಳ, ಎಲ್ಲರಿಗೂ ಆಶ್ಚರ್ಯಕರವಾದ **ಅಪ್ರತರ್ಕ್ಯಂ** ಊಹಿಸಲಾಗದ **ಅನಿರ್ದೇಶ್ಯಂ** ಹೀಗೆ ಎಂದು ಹೇಳಲಾಗದ (ಅದ್ಭುತತ್ವಾದನಿರ್ವಾಚ್ಯಂ

ಎಂಬಂತೆ) **ದೃಶ್ಯಮಾನಂ** ಕಾಣುವ **ಅದೃಶ್ಯಮಾನಂ** ಕಾಣದಿರುವ ಮಿಂಚಿನಂತೆ ಕಂಡೂ ಕಾಣದ ಅಥವಾ ಕಾಣಿಸದಂತೆ ಇರಬಲ್ಲ ಎಂದರ್ಥ. **ವಿಮಾನಾಗ್ರ್ಯಂ** ಶ್ರೇಷ್ಠ ವಿಮಾನವಾದ **ವೈಹಾಯಸಂ ನಾಮ** ಆಕಾಶ ಮಾರ್ಗದಲ್ಲಿ ಸಂಚರಿಸುವ ಆದ್ದರಿಂದಲೇ ವೈಹಾಯಸವೆಂಬ ಹೆಸರುಳ್ಳ **ತತ್ ಯಾನಂ** ಆ ಶ್ರೇಷ್ಠವಾದ ವಾಹನದಲ್ಲಿ **ಆಸ್ಥಿತಃ ಚ** ಕುಳಿತವನಾಗಿ **ಸರ್ವಾನೀಕಾಧಿಪೈಃ** ಎಲ್ಲ ಸೇನಾಧಿಪತಿಗಳಿಂದ **ವೃತಃ** ಸುತ್ತುವರೆದವನಾಗಿ **ವಾಲವ್ಯಜನಛತ್ರಾಗ್ರ್ಯೈಃ** ಶ್ರೇಷ್ಠವಾದ ಚಾಮರ-ಛತ್ರಗಳಿಂದ **ಉದಯೇ** ಉದಯ ಪರ್ವತದಲ್ಲಿ **ಚಂದ್ರ ಇವ** ನಕ್ಷತ್ರಗಳಿಂದ ಸುತ್ತುವರೆದ ಚಂದ್ರನಂತೆ **ರೇಜೇ** ಪ್ರಕಾಶಿಸಿದನು. ||೧೬-೧೭-೧೮||

**ತಸ್ಯಾಸನ್ ಸರ್ವತೋ ಯಾನೈರ್ಯೂಥಾನಾಂ ಪತಯೋಽಸುರಾಃ |**
**ನಮುಚಿಃ ಶಂಬರೋ ಬಾಣೋ ವಿಪ್ರಚಿತ್ತಿರಯೋಮುಖಃ ||೧೯||**

**ದ್ವಿಮೂರ್ಧಾ ಕಾಲನಾಭೋಽಥ ಪ್ರಹೇತಿರ್ಹೇತಿರಿಲ್ವಲಃ |**
**ಶಕುನಿರ್ಭೂತಸಂತಾಪೋ ವಜ್ರದಂಷ್ಟ್ರೋ ವಿರೋಚನಃ ||೨೦||**

**ಹಯಗ್ರೀವಃ ಶಂಕುಶಿರಾಃ ಕಪಿಲೋ ಮೇಘದುಂದುಭಿಃ |**
**ತಾರಕಶ್ಚಕ್ರದೃಕ್ ಶುಂಭೋ ನಿಶುಂಭೋ ಜಂಭ ಉತ್ಕಲಃ ||೨೧||**

**ಅರಿಷ್ಟೋಽರಿಷ್ಟನೇಮಿಶ್ಚ ಮಯಶ್ಚ ತ್ರಿಪುರಾಧಿಪಃ |**
**ಅನ್ಯೇ ಪೌಲೋಮಕಾಲೇಯಾ ನಿವಾತಕವಚಾದಯಃ ||೨೨||**

**ಯಾನೈಃ** ರಥಗಳಿಂದ ಕೂಡಿದ **ಯೂಥಾನಾಂ** ಶತ್ರುಸೈನ್ಯಗಳ **ಪತಯಃ** ನಾಯಕರಾದ **ನಮುಚಿಃ** ನಮುಚಿಯು, **ಶಂಬರಃ** ಶಂಬರನು, **ಬಾಣಃ** ಬಲಿಪುತ್ರನಾದ ಬಾಣನು **ವಿಪ್ರಚಿತ್ತಿಃ** ವಿಪ್ರಚಿತ್ತಿಯು, **ಅಯೋಮುಖಃ** ಅಯೋಮುಖನು, **ದ್ವಿಮೂರ್ಧಾ** ದ್ವಿಮೂರ್ಧನು, **ಕಾಲನಾಭಃ** ಕಾಲನಾಭನು, **ಪ್ರಹೇತಿಃ** ಪ್ರಹೇತಿಯು, **ಹೇತಿಃ** ಹೇತಿಯು, **ಇಲ್ವಲಃ** ಇಲ್ವಲನು, **ಶಕುನಿಃ** ಶಕುನಿಯು, **ಭೂತಸಂತಾಪಃ** ಭೂತಸಂತಾಪನು, **ವಜ್ರದಂಷ್ಟ್ರಃ** ವಜ್ರದಂಷ್ಟ್ರನು, **ವಿರೋಚನಃ** ಬಲಿಯ ತಂದೆಯಾದ ವಿರೋಚನನು, **ಹಯಗ್ರೀವಃ** ಹಯಗ್ರೀವನು, **ಶಂಕುಶಿರಾಃ** ಶಂಕುಶಿರನು, **ಕಪಿಲಃ** ಕಪಿಲನು, **ಮೇಘದುಂದುಭಿಃ**, ಮೇಘದುಂದುಭಿಯು, **ತಾರಕಃ** ತಾರಕನು, **ಚಕ್ರದೃಕ್**, ಚಕ್ರದೃಕ್ ಎಂಬುವವನು, **ಶುಂಭಃ** ಶುಂಭನು, **ನಿಶುಂಭಃ** ನಿಶುಂಭನು, **ಜಂಭಃ** ಜಂಭನು, **ಉತ್ಕಲಃ** ಉತ್ಕಲನು, **ಅರಿಷ್ಟಃ** ಅರಿಷ್ಟನು, **ಅರಿಷ್ಟನೇಮಿಃ** ಅರಿಷ್ಟನೇಮಿಯು, **ಮಯಃ** ಮಯನು, **ತ್ರಿಪುರಾಧಿಪಃ** ತ್ರಿಪುರಾಧಿಪನು ಮತ್ತು **ಅನ್ಯೇ** ಇತರ **ಪೌಲೋಮಕಾಲಕೇಯಾಃ** ಪೌಲಮರು ಮತ್ತು ಕಾಲಕೇಯರು **ನಿವಾತಕವಚಾದಯಃ** ನಿವಾತಕವಚರೇ ಮೊದಲಾದ **ಅಸುರಾಃ** ಅಸುರರು **ತಸ್ಯ** ಬಲಿಯ **ಸರ್ವತಃ ಚ** ಸುತ್ತಲೂ **ಆಸನ್** ಇದ್ದರು. ||೧೯-೨೦-೨೧-೨೨||

**ಅಲಬ್ಧಭಾಗಾಃ ಸೋಮಸ್ಯ ಕೇವಲಂ ಕ್ಲೇಶಭಾಗಿನಃ ।**
**ಸರ್ವ ಏತೇ ರಣಮುಖೇ ಬಹುಶೋ ನಿರ್ಜಿತಾಮರಾಃ ॥೨೩॥**

**ಸಿಂಹನಾದಂ ಪ್ರಕುರ್ವಂತಃ ಶಂಖಾನ್ ದಧ್ಮುರ್ಮಹಾರವಾನ್ ।**
**ದೃಷ್ಟ್ವಾ ಸಪತ್ನಾನುತ್ಸಿಕ್ತಾನ್ ಬಲಭಿತ್ ಕುಪಿತೋ ಭೃಶಮ್ ॥೨೪॥**

**ಸೋಮಸ್ಯ** ಅಮೃತದ **ಅಲಬ್ಧಭಾಗಾಃ** ಭಾಗವನ್ನು ಪಡೆಯದ **ಕೇವಲಂ ಕ್ಲೇಶಭಾಗಿನಃ** ಕಷ್ಟಕ್ಕೆ ಮಾತ್ರ ಭಾಗಿಗಳಾದ **ರಣಮುಖೇ** ಯುದ್ಧದಲ್ಲಿ **ಬಹುಶಃ** ಬಹಳವಾಗಿ **ನಿರ್ಜಿತಾಮರಾಃ** ದೇವತೆಗಳನ್ನು ಗೆದ್ದ **ಏತೇ ಸರ್ವೇ** ಈ ಎಲ್ಲ ಅಸುರರು **ಸಿಂಹನಾದಂ ವಿಮುಂಚಂತಃ ಚ** ಸಿಂಹನಾದ ಮಾಡುವವರಾಗಿ **ಮಹಾರವಾನ್** ಬಹುದೊಡ್ಡ ಶಬ್ದ ಬರುವ **ಶಂಖಾನ್** ಶಂಖಗಳನ್ನು **ದಧ್ಮುಃ** ಊದಿದರು. **ಸ್ವರಾಟ್** ಸ್ವರ್ಗಾಧಿಪತಿಯಾದ **ಬಲಭಿತ್** ಬಲಾಸುರ ಸಂಹಾರಿಯಾದ ಇಂದ್ರದೇವನು **ಉತ್ಸಿಕ್ತಾನ್** ಬಲಿಷ್ಠರೆಂದು ಗರ್ವಿಸುತ್ತಿರುವ **ಸಪತ್ನಾನ್** ಶತ್ರುಗಳಾದ ದೈತ್ಯರನ್ನು **ದೃಷ್ಟ್ವಾ** ನೋಡಿ **ಭೃಶಂ** ಬಹಳವಾಗಿ **ಕುಪಿತಃ** ಕ್ರುದ್ಧನಾದನು. ॥೨೩-೨೪॥

**ಐರಾವತಂ ದಿಕ್ಕರಿಣಮಾರುಢೋ ವಿಯತಿ ಸ್ವರಾಟ್ ।**
**ಯಥಾ ಸ್ರವತ್ಪ್ರಸ್ರವಣಮುದಯಾದ್ರಿಮಹರ್ಪತಿಃ ॥೨೫॥**

**ವಿಯತಿ** ಆಕಾಶದಲ್ಲಿ **ಅಹರ್ಪತಿಃ ಚ** ಸೂರ್ಯನು **ಸ್ರವತ್ಪ್ರಸ್ರವಣಂ** ಯಾವಾಗಲೂ ಹರಿಯುತ್ತಿರುವ ನೀರಿನ ಝರಿಗಳುಳ್ಳ **ಉದಯಾದ್ರಿಂ ಯಥಾ** ಉದಯಪರ್ವತವನ್ನು ಏರುವಂತೆ **ಸ್ವರಾಟ್** ಸ್ವರ್ಗಾಧಿಪತಿಯಾದ ಇಂದ್ರನು **ಸ್ರವತ್ಪ್ರಸ್ರವಣಂ** ಮದೋದಕವನ್ನು ಸ್ರವಿಸುವ **ಐರಾವತಂ ದಿಕ್ಕರಿಣಂ** ಐರಾವತವೆಂಬ ದಿಗ್ಗಜವನ್ನು **ಆರೂಢಃ** ಹತ್ತಿದನು.

**ತಸ್ಯಾಸನ್ ಸರ್ವತೋ ದೇವಾ ನಾನಾವಾಹಧ್ವಜಾಯುಧಾಃ ।**
**ಲೋಕಪಾಲಾಃ ಸಹ ಗಣೈರ್ವಾಯ್ವಗ್ನಿವರುಣಾದಯಃ ॥೨೬॥**

**ನಾನಾವಾಹಧ್ವಜಾಯುಧಾಃ** ಅನೇಕ ರೀತಿಯ ವಾಹನಗಳು ಧ್ವಜಗಳು ಆಯುಧಗಳುಳ್ಳ **ಲೋಕಪಾಲಾಃ** ಲೋಕಪಾಲಕರಾದ **ವಾಯ್ವಗ್ನಿವರುಣಾದಯಃ** ದಿಗಧಿಪತಿಯಾದ ಪ್ರವಹವಾಯು, ಅಗ್ನಿ, ವರುಣ ಮೊದಲಾದವರು **ಗಣೈಃ ಸಹ** ತಮ್ಮ ತಮ್ಮ ಸೇನಾಸಮೂಹದೊಂದಿಗೆ **ತಸ್ಯ** ಇಂದ್ರನಿಗೆ **ಸರ್ವತಃ** ಸುತ್ತಲೂ **ಆಸನ್** ಸಂರಕ್ಷಕರಾಗಿ ಇದ್ದರು. ॥೨೬॥

**ತೇಽನ್ಯೋನ್ಯಮಭಿಸಂಸೃತ್ಯ ಕ್ಷಿಪಂತೋ ನಾಮಭಿರ್ಮಿಥಃ ।**
**ಆಹ್ವಯಂತೋ ವಿಶಂತೋಽಗ್ರೇ ಯುಯುಧುರ್ದ್ವಂದ್ವಯೋಧಿನಃ ॥೨೭॥**

**ತೇ** ಆ ದೇವಾಸುರರು **ಅನ್ಯೋನ್ಯಂ** ಪರಸ್ಪರವಾಗಿ **ಅಭಿಸಂಸೃತ್ಯ** ಸಂಧಿಸಿ- ದವರಾಗಿ **ಮಿಥಃ ಚ** ಪರಸ್ಪರ **ಕ್ಷಿಪಂತಃ** ಆಕ್ಷೇಪಿಸುತ್ತ **ನಾಮಭಿಃ** ಹೆಸರು ಹಿಡಿದು **ಆಹ್ವಯಂತಃ ಚ** ಕರೆಯುವವರಾಗಿ **ಅಗ್ರೇ** ಮುಂದೆ ಮುಂದೆ **ವಿಶಂತಃ** ನುಗ್ಗುವವರಾಗಿ **ದ್ವಂದ್ವಯೋಧಿನಃ** ಇಬ್ಬಿಬ್ಬರೇ ಎದಿರಿಸುವವರಾಗಿ **ಯುಯುಧುಃ** ಯುದ್ಧಮಾಡಿದರು. ।।೨೭।।

ದ್ವಂದ್ವಯುದ್ಧಗಳನ್ನು ಹೇಳುವರು-

**ಯುಯುಧೇ ಬಲಿರಿಂದ್ರೇಣ ತಾರಕೇಣ ದಿವಸ್ಪತಿಃ (ಗುಹೋऽಸ್ಯತ) ।**
**ವರುಣೋ ಹೇತಿನಾऽಯುಧ್ಯನ್ಮಿತ್ರೋ ರಾಜನ್ ಪ್ರಹೇತಿನಾ ।।೨೮।।**

**ರಾಜನ್** ಪರೀಕ್ಷಿತನೇ **ಬಲಿಃ** ಬಲಿಯು **ಇಂದ್ರೇಣ** ಇಂದ್ರನೊಡನೆ **ಯುಯುಧೇ** ಯುದ್ಧ ಮಾಡಿದನು **ದಿವಸ್ಪತಿಃ** ಸೇನಾನಾಯಕನಾದ ಸ್ಕಂದನು **ತಾರಕೇಣ** ತಾರಕನೊಡನೆ **ವರುಣಃ** ವರುಣನು **ಹೇತಿನಾ** ಹೇತಿ ಎಂಬುವನೊಂದಿಗೆ **ಮಿತ್ರಃ** ಮಿತ್ರನೆಂಬ ಸೂರ್ಯನು **ಪ್ರಹೇತಿನಾ** ಪ್ರಹೇತಿಯೊಟ್ಟಿಗೆ **ಅಯುಧ್ಯತ್** ಯುದ್ಧಮಾಡಿದನು.

ಸತ್ಯ ಃ- ದಿವಸ್ಪತಿಃ ಸೇನಾನೀಃ ಸ್ಕಂದಃ ಸೇನಾನಾಯಕನಾದ ಸ್ಕಂದ ಎಂದು ಸತ್ಯಧರ್ಮರು ಅರ್ಥ ಹೇಳಿದ್ದಾರೆ.

ಛಲಾರೀ ಃ- ಗುಹೋऽಸ್ಯತ **ಗುಹಃ** ಸ್ಕಂದನು **ತಾರಕೇಣ** ತಾರಕನೊಂದಿಗೆ **ಅಸ್ಯತ** ಯುದ್ಧ ಮಾಡಿದನು ಎಂದು ಅನ್ವಯ ಮಾಡಿಕೊಳ್ಳಬೇಕು. ।।೨೮।।

**ಯಮಸ್ತು ಕಾಲನಾಭೇನ ವಿಶ್ವಕರ್ಮಾ ಮಯೇನ ವೈ ।**
**ಶಂಬರೋ ಯುಯುಧೇ ತ್ವಷ್ಟ್ರಾ ಸವಿತ್ರಾ ತು ವಿರೋಚನಃ ।।೨೯।।**

**ಯಮಃ ತು** ಯಮನಾದರೂ **ಕಾಲನಾಭೇನ** ಕಾಲನಾಭನೊಂದಿಗೆ **ವಿಶ್ವಕರ್ಮಾ** ದೇವಶಿಲ್ಪಿಯಾದ ವಿಶ್ವಕರ್ಮನು **ಮಯೇನ** ದೈತ್ಯರ ಶಿಲ್ಪಿಯಾದ ಮಯನೊಡನೆ **ಚ** ಮತ್ತು **ಶಂಬರಃ** ಶಂಬರಾಸುರನು **ತ್ವಷ್ಟ್ರಾ** ತ್ವಷ್ಟಾ ಎಂಬ ಸೂರ್ಯನೊಂದಿಗೆ **ವಿರೋಚನಃ** ವಿರೋಚನನು **ಸವಿತ್ರಾ** ಮತ್ತೊಬ್ಬ ಸೂರ್ಯನೊಡನೆ **ಯುಯುಧೇ** ಯುದ್ಧ ಮಾಡಿದನು.

**ಅಪರಾಜಿತೇನ ನಮುಚಿರಶ್ವಿನೌ ವೃಷಪರ್ವಣಾ ।**
**ಸೂರ್ಯೋ ಬಲಿಸುತೈರ್ದೇವೋ ಬಾಣಜ್ಯೇಷ್ಠಶತೇನ ಸಃ ।।೩೦।।**

**ನಮುಚಿಃ** ನಮುಚಿ ಎಂಬ ಅಸುರನು **ಅಪರಾಜಿತೇನ** ಈ ಹೆಸರಿನ ದೇವತೆಯೊಡನೆ **ಅಶ್ವಿನೌ** ಅಶ್ವಿನೀದೇವತೆಗಳು **ವೃಷಪರ್ವಣಾ** ವೃಷಪರ್ವನೆಂಬ ಅಸುರರಾಜನಾದ ಶರ್ಮಿಷ್ಠಾಳ ತಂದೆಯೊಡನೆ **ಸಃ** ಪ್ರಸಿದ್ಧನಾದ **ದೇವಃ ಸೂರ್ಯಃ** ವಿವಸ್ವಾನ್ ಎಂಬ ಸೂರ್ಯನು **ಬಾಣಜ್ಯೇಷ್ಠಶತೇನ** ಬಾಣಾಸುರನೇ ಹಿರಿಯನಾಗಿ ಉಳ್ಳ ನೂರು ಸಂಖ್ಯೆಯುಳ್ಳ **ಬಲಿಸುತೈಃ** ಬಲಿಯ ಮಕ್ಕಳೊಡನೆ **ಯುಯುಧೇ** ಯುದ್ಧಮಾಡಿದನು.

**ರಾಹುಣಾ ಚ ತಥಾ ಸೋಮಃ ಪುಲೋಮ್ನಾ ಯುಯುಧೇಽನಿಲಃ ।**
**ನಿಶುಂಭಶುಂಭಯೋರ್ದೇವೀ ಭದ್ರಕಾಲೀ ನರಾಶನೀ ॥೩೦॥**

**ತಥಾ** ಹಾಗೂ **ಸೋಮಃ** ಚಂದ್ರನು **ರಾಹುಣಾ** ರಾಹು ಎಂಬ ಅಸುರನೊಡನೆ **ಯುಯುಧೇ** ಯುದ್ಧ ಮಾಡಿದನು. **ಅನಿಲಃ** ಭೂತವಾಯುವು **ಪುಲೋಮ್ನಾ** ಪುಲೋಮ ಎಂಬ ಅಸುರನೊಡನೆ ಯುದ್ಧಮಾಡಿದನು. **ನರಾಶನೀ** ನ ರೀಯಂತೇ ಇತಿ ನರಾಃ ಅಂದರೆ ಬ್ರಹ್ಮಾದಿವರಗಳಿಂದ ನಾಶ ಹೊಂದದಿರುವ ಮಹಿಷಾಸುರಾದಿಗಳನ್ನು (ತಾನ್ ಅಶ್ನಾತೀತಿ ನರಾಶೀ) ತಿನ್ನುವುದರಿಂದ ನರಾಶೀ ಎನಿಸಿಕೊಂಡ **ಭದ್ರಕಾಲೀ** ಭಕ್ತರಿಗೆ ಮಂಗಲಪ್ರದಳು ಆದ್ದರಿಂದ ಭದ್ರಾ ಎನಿಸಿದ, ಅಸುರಸಂಹಾರಕಳಾದ್ದರಿಂದ ಕಾಲೀ ಎನಿಸಿಕೊಂಡ **ದೇವೀ** ದುರ್ಗಾದೇವಿಯು **ನಿಶಂಭಶುಂಭಯೋಃ** ಇದು ಕರ್ತರಿ ಷಷ್ಠೀ ನಿಶುಂಭ-ಶುಂಭರೊಡನೆ **ಯುಯುಧೇ** ಯುದ್ಧ ಮಾಡಿದಳು. ॥೩೦॥

**ವೃಷಾಕಪಿಸ್ತು ಜಂಭೇನ ಮಹಿಷೇಣ ವಿಭಾವಸುಃ ।**
**ಇಲ್ವಲಃ ಸಹವಾತಾಪಿಃ ಬ್ರಹ್ಮಪುತ್ರೈರರಿಂದಮ ॥೩೧॥**

**ಅರಿಂದಮ** ಶತ್ರುಗಳನ್ನು ಸದೆಬಡಿಯುವ ಪರೀಕ್ಷಿತನೇ **ವೃಷಾಕಪಿಃ** ರುದ್ರದೇವರು ''ವೃಷಾಕಪಿಃ ಶಿವೇ ಕೃಷ್ಣೇ'' ಎಂದು ವಿಶ್ವವಿದೆ. **ಜಂಭೇನ** ಜಂಭನೆಂಬ ಅಸುರನೊಡನೆ **ವಿಭಾವಸುಃ** ಅಗ್ನಿಯು **ಮಹಿಷೇಣ** ಮಹಿಷಾಸುರನೊಡನೆ **ಸಹವಾತಾಪಿಃ ಇಲ್ವಲಃ** ವಾತಾಪಿ ಸಹಿತನಾದ ಇಲ್ವಲನೆಂಬ ಅಸುರನು **ಬ್ರಹ್ಮಪುತ್ರೈಃ** ದಕ್ಷಪ್ರಜೇಶ್ವರರೊಡನೆ, ವಸಿಷ್ಠಾದಿಗಳೊಡನೆ **ಯುಯುಧೇ** ಯುದ್ಧಮಾಡಿದನು. ॥೩೧॥

**ಕಾಮದೇವೇನ ದುರ್ಮರ್ಷ ಉತ್ಕಲೋ ಮಾತೃಭಿಃ ಸಹ ।**
**ಬೃಹಸ್ಪತಿಸ್ತೂಶನಸಾ ನರಕೇಣ ಶನೈಶ್ಚರಃ ॥೩೨॥**

**ದುರ್ಮರ್ಷಃ** ದುರ್ಮರ್ಷನೆಂಬ ಅಸುರನು **ಕಾಮದೇವೇನ** ಮನ್ಮಥನೆಂಬ ದೇವತೆಯೊಡನೆ **ಉತ್ಕಲಃ** ಉತ್ಕಲನೆಂಬ ಅಸುರನು **ಮಾತೃಭಿಃ** ಏಳು ಮಾತೃಗಳೊಡನೆ **ಬೃಹಸ್ಪತಿಃ** ದೇವತೆಗಳಿಗೆ ಗುರುಗಳಾದ ಬೃಹಸ್ಪತ್ಯಾಚಾರ್ಯರು **ಉಶನಸಾ** ದೈತ್ಯರಿಗೆ ಗುರುಗಳಾದ ಶುಕ್ರಾಚಾರ್ಯರೊಡನೆ **ಶನೈಶ್ಚರಃ** ರಾಶಿಗಳಲ್ಲಿ ನಿಧಾನವಾಗಿ ಸಂಚರಿಸುವ ಶನಿದೇವನು **ನರಕೇಣ** ನರಕಾಸುರನೊಡನೆ ಯುದ್ಧ ಮಾಡಿದರು.

ಸತ್ಯ :- ''ಬ್ರಾಹ್ಮೀ ಮಾಹೇಶ್ವರೀ ಚೈವ ಕೌಮಾರೀ ವೈಷ್ಣವೀ ತಥಾ । ವಾರಾಹೀ ಚ ತಥೇಂದ್ರಾಣೀ ಚಾಮುಂಡಾ ಸಪ್ತ ಮಾತರಃ ಎಂದು ಹೇಳಿದ ಏಳು ಮಾತೃಗಳೆಂದು ತಿಳಿಯಬೇಕು. ॥೩೨॥

**ಮರುತೋ ನಿವಾತಕವಚೈಃ ಕಾಲೇಯೈರ್ವಸವೋಽಮರಾಃ ।**
**ವಿಶ್ವೇದೇವಾಸ್ತು ಪೌಲೋಮ್ಯೈ ರುದ್ರಾ ಕ್ರೋಧವಶೈಃ ಸಹ ॥೩೪॥**

**ಮರುತಃ** ೪೯ ಜನ ಮರುದ್ದೇವತೆಗಳು **ನಿವಾತಕವಚೈಃ** ನಿವಾತಕವಚರೆಂಬ ಅಸುರರ ಗುಂಪಿನೊಡನೆ **ವಸವಃ ಅಮರಾಃ** ಅಷ್ಟವಸುಗಳೆಂಬ ದೇವತೆಗಳು **ಕಾಲೇಯೈಃ** ಕಾಲೇಯರೆಂಬ ಅಸುರರೊಡನೆ **ವಿಶ್ವೇದೇವಾಃ** ವಿಶ್ವೇದೇವತೆಗಳು **ಪೌಲೋಮ್ಯೈಃ** ಈ ಹೆಸರಿನ ದೈತ್ಯರೊಡನೆ **ರುದ್ರಾಃ** ಏಕಾದಶರುದ್ರರು **ಕ್ರೋಧವಶೈಃ ಸಹ** ಕ್ರೋಧವಶರೆಂಬ ಅಸುರರೊಡನೆ ಯುದ್ಧ ಮಾಡಿದರು. ॥೩೪॥

**ತ ಏವಮಾಜಾವಸುರಾಃ ಸುರೇಂದ್ರಾಃ**
**ದ್ವಂದ್ವೇನ ಸಂಹತ್ಯ ಚ ಯುದ್ಧ್ಯಮಾನಾಃ ।**
**ಅನ್ಯೋನ್ಯಮಾಸಾದ್ಯ ನಿಜಘ್ನುರೋಜಸಾ**
**ಜಿಗೀಷವಸ್ತೀಕ್ಷ್ಣಶರಾಂಶ್ಚ ಚಿಕ್ಷಿಪುಃ ॥೩೫॥**

**ಏವಂ** ಈ ರೀತಿಯಾಗಿ **ಆಜೌ** ಯುದ್ಧಭೂಮಿಯಲ್ಲಿ **ತೇ** ಆ **ಅಸುರಾಃ** ಬಲಿ ಮೊದಲಾದ ದೈತ್ಯರು **ಸುರೇಂದ್ರಾಃ** ಇಂದ್ರ ಮೊದಲಾದ ದೇವತಾಶ್ರೇಷ್ಠರು **ದ್ವಂದ್ವೇನ ಸಂಹತ್ಯ** ಇವನೊಡನೆ ಇವನು, ಇವನೊಡನೆ ನಾನು ಹೀಗೆ ಇಬ್ಬಿಬ್ಬರಾಗಿ ಸೇರಿ **ಅನ್ಯೋನ್ಯಂ** ಪರಸ್ಪರವಾಗಿ **ಆಸಾದ್ಯ** ಹೊಂದಿ **ಯುದ್ಧ್ಯಮಾನಾಃ** ಯುದ್ಧ ಮಾಡುವವರಾಗಿ **ಓಜಸಾ** ಅವಷ್ಟಂಭನ ಶಕ್ತಿಯಿಂದ **ನಿಜಘ್ನುಃ** ಹೊಡೆದರು. **ಜೀಗಿಷವಃ** ಪರಸ್ಪರ ಗೆಲ್ಲುವ ಇಚ್ಛೆಯಿಂದ **ತೀಕ್ಷ್ಣಾನ್ ಶರಾನ್ ಚಿಕ್ಷಿಪುಃ** ಚೂಪಾದ ಬಾಣಗಳನ್ನು ಬಿಟ್ಟರು. ॥೩೫॥

**ಭೂಶುಂಡಿಭಿಶ್ಚಕ್ರಗದಾರ್ಷ್ಟಿಪಟ್ಟಿಶೈಃ**
**ಶಕ್ತ್ಯುಲ್ಮುಕೈಃ ಪ್ರಾಸಪರಶ್ವಧೈರಪಿ ।**
**ನಿಸ್ತ್ರಿಂಶಭಲ್ಲೈಃ ಪರಿಘೈಃ ಸಮುದ್ಗರೈಃ**
**ಸಭಿಂಡಿಪಾಲೈಶ್ಚ ಶಿರಾಂಸಿ ಚಿಚ್ಛಿದುಃ ॥೩೬॥**

**ತೇ** ದೇವಾಸುರರು **ಭೂಶುಂಡಿಭಿಃ** ಆಯುಧವಿಶೇಷಗಳಿಂದ **ಚಕ್ರಗದಾರ್ಷ್ಟಿಪಟ್ಟಿಶೈಃ** ಚಕ್ರ, ಗದಾ, ಸಾಧಾರಣ ಖಡ್ಗ ಮತ್ತು ಅಗಲವಾದ ಎರಡೂ ಕಡೆಯಲ್ಲಿ ಹರಿತವಾದ ಖಡ್ಗಗಳಿಂದ **ಶಕ್ತ್ಯುಲ್ಮುಕೈಃ** ಶಕ್ತಿ ಎಂಬ ಆಯುಧದಿಂದ ಮತ್ತು ಕೊಳ್ಳಿಗಳಿಂದ **ಪ್ರಾಸಪರಶ್ವಧೈಃ** ಕುಂತ ಎಂಬ ಆಯುಧದಿಂದ ಮೇಲೆ ಕೆಳಗೆ ಕಬ್ಬಿಣದ ಅಲಗು ಇರುವ ಕೋಲುಗಳಿಂದ ಮತ್ತು ಕೊಡಲಿಗಳಿಂದ **ನಿಸ್ತ್ರಿಂಶಭಲ್ಲೈಃ** ಮೂವತ್ತು ಅಂಗುಲಗಳಿಗೂ ಮೀರಿದ ಖಡ್ಗದಿಂದ **ಭಲ್ಲೈಃ** ಬಾಣಗಳಿಂದ **ಪರಿಘೈಃ** ಬಾಗಿಲ ಹಿಂದೆ ಬಲಕೊಡುವ ಕಟ್ಟಿಗೆಯಿಂದ ನಿರ್ಮಿಸಿದ ಅಗಳಿಯಿಂದ **ಸಮುದ್ಗರೈಃ** ಒನಿಕೆಗಳಿಂದ ಸಹಿತವಾದ ದೃಢವಾದ ಹಿಡಿ ಇರುವ (ದೊಡ್ಡ

ಮೇಲ್ಭಾಗವಿರುವ) ಗದೆಯಂಥ ಆಯುಧಗಳಿಂದ ಕೂಡಿದ **ಭಿಂಡಿಪಾಲೈಃ** ಭಿಂಡಿಪಾಲ ಎಂಬ ಆಯುಧಗಳಿಂದ **ಶಿರಾಂಸಿ ಚಿಚ್ಛಿದುಃ** ತಲೆಗಳನ್ನು ಕತ್ತರಿಸಿದರು. ಎರಡು ಹೋಳು ಮಾಡಿದರು. ||೩೬||

**ಗಜಾಸ್ತುರಂಗಾಃ ಸರಥಾಃ ಪದಾತಯಃ**
**ಸಾರೋಹವಾಹಾ ವಿವಿಧಾ ವಿಖಂಡಿತಾಃ ।**
**ನಿಕೃತ್ತಬಾಹೂರುಶಿರೋಧರಾಂಘ್ರಯಃ**
**ಛಿನ್ನಧ್ವಜೇಷ್ವಾಸತನುತ್ರಭೂಷಣಾಃ** ||೩೭||

**ಸರಥಾಃ** ರಥಗಳಿಂದ ಕೂಡಿದ **ಗಜಾಃ** ಆನೆಗಳು **ತುರಂಗಾಃ** ಕುದುರೆಗಳು **ಪದಾತಯಃ** ಕಾಲಾಳುಗಳು **ವಿವಿಧಾಃ** ಅನೇಕರೀತಿಯಾದ **ಸಾರೋಹವಾಹಾಃ** ಹತ್ತಿ ಕುಳಿತಿರುವ ಭಟರಿಂದ ಕೂಡಿದ ವಾಹನಗಳು (ಆರುಹಂತೀತಿ ಆರೋಹಾಃ ಗಜಾದ್ಯಾರೂಢಾಃ ಪುರುಷಾಃ ತೈಃ ಸಹಿತಾ ಸಾರೋಹಾಃ ವಾಹಾಃ ವಾಹನಾನಿ) **ವಿಖಂಡಿತಾಃ** ತುಂಡರಿಸಲ್ಪಟ್ಟವು (ವೀರರು) **ನಿಕೃತ್ತ** ಕತ್ತರಿಸಿದ **ಬಾಹು** ತೋಳು **ಊರು** ತೊಡೆ **ಶಿರೋಧರ** ಕುತ್ತಿಗೆ **ಅಂಘ್ರಯಃ** ಪಾದಗಳುಳ್ಳವರಾದರು **ಛಿನ್ನ** ಚೂರಾದ **ಧ್ವಜ** ಪಾತಾಕೆ **ಇಷ್ವಾಸ** ಬಿಲ್ಲು **ತನುತ್ರ** ಕವಚ **ಭೂಷಣಾಃ** ಆಭರಣಗಳುಳ್ಳವರಾದರು. ||೩೭||

**ತೇಷಾಂ ಪದಾಘಾತರಥಾಂಗಚೂರ್ಣಿತಾ-**
**ದಾಯೋದನಾದುಲ್ಬಣ ಉಚ್ಛ್ರಿತಸ್ತದಾ ।**
**ರೇಣುರ್ದಿಶಃ ಖಂ ದ್ಯುಮಣಿಂ ಚ ಛಾದಯನ್**
**ನ್ಯವರ್ತತಾಸೃಕ್‌ಸ್ರುತಿಭಿಃ ಪರಿಪ್ಲುತಃ** ||೩೮||

**ತೇಷಾಂ** ಆ ದೇವಾಸುರರ **ಪದಾಘಾತ** ಕಾಲುಗಳ ತುಳಿತದಿಂದ **ರಥಾಂಗ** ಚಕ್ರಗಳ ಸುತ್ತಾಟದಿಂದ **ಚೂರ್ಣಿತಾತ್** ಪುಡಿಮಾಡಲ್ಪಟ್ಟ **ಆಯೋಧನಾತ್** ಯುದ್ಧಭೂಮಿಯಿಂದ **ತದಾ** ಆಗ **ಉಚ್ಛ್ರಿತಃ** ಮೇಲಕ್ಕೆದ್ದ **ಉಲ್ಬಣಃ** ಕಣ್ಣು ಮೂಗುಗಳಲ್ಲಿ ತುಂಬಿ ತೊಂದರೆ ಕೊಡುವುದರಿಂದ ಕ್ರೂರವಾದ ಅಸಹ್ಯವಾದ **ರೇಣುಃ** ಧೂಳಿಯು **ದಿಶಃ** ದಿಕ್ಕುಗಳನ್ನು **ಖಂ** ಆಕಾಶವನ್ನು **ದ್ಯುಮಣಿಂ ಚ** ಸೂರ್ಯನನ್ನೂ **ಛಾದಯನ್** ಆವರಿಸುತ್ತ **ಅಸೃಕ್‌ಸ್ರುತಿಭಿಃ** ರಕ್ತಪ್ರವಾಹಗಳಿಂದ **ಪರಿಪ್ಲುತಃ ಸನ್** ತೊಯ್ದು **ನ್ಯವರ್ತತ** ಭೂಮಿಗೆ ಅಂಟಿಕೊಂಡಿತು.

**ಶಿರೋಭಿರುದ್ಧೂತಕಿರೀಟಕುಂಡಲೈಃ**
**ಸಂರಂಭದೃಗ್ಭಿಃ ಪರಿದಷ್ಟದಚ್ಛದೈಃ ।**
**ಮಹಾಭುಜೈಃ ಸಾಭರಣೈಃ ಸಹಾಯುಧೈಃ**
**ಸಂಪ್ರಾಸ್ತೃತಾ ಭೂಃ ಕಲಭೋರುಭಿರ್ಬಭೌ** ||೩೯||

**ಭೂಃ** ಯುದ್ಧಭೂಮಿಯು **ಉದ್ವೃತ್ತಕಿರೀಟಕುಂಡಲೈಃ** ಬೀಳಲ್ಪಟ್ಟ ಕಿರೀಟ ಮತ್ತು ಕುಂಡಲಗಳಿರುವ (ಕಿರೀಟ-ಕುಂಡಲಗಳಿಂದ ರಹಿತವಾದ) **ಸಂರಂಭದೃಗ್ಭಿಃ** ಕೋಪಾವೇಶದಿಂದ ಕೂಡಿದ ಕಣ್ಣುಳ್ಳ **ಪರಿದಷ್ಟದಚ್ಛದೈಃ** ಕಚ್ಚಲ್ಪಟ್ಟ ತುಟಿಗಳುಳ್ಳ **ಸಾಭರಣೈಃ** ಆಭರಣಗಳಿಂದ ಕೂಡಿದ **ಶಿರೋಭಿಃ** ತಲೆಗಳಿಂದಲೂ **ಸಹಾಯುಧೈಃ** ಆಯುಧಗಳಿಂದ ಕೂಡಿದ **ಮಹಾಭುಜೈಃ** ಉದ್ದವಾದ ತೋಳುಗಳಿಂದ **ಕಲಭೋರುಭಿಃ** ಆನೆಯ ಸೊಂಡಿಲಿನಂತೆ ದುಂಡಗೂ ಪುಷ್ಟವಾಗಿಯೂ ಕ್ರಮವಾಗಿ ಚಿಕ್ಕದಾಗಿಯೂ ಇರುವ ತೊಡೆಗಳಿಂದ **ಸಂಪ್ರಾಸ್ತೃತಾ** ಆಚ್ಛಾದಿತವಾಗಿ **ಬಭೌ** ಶೋಭಿಸಿತು. ।।೩೯।।

**ಕಬಂಧಾಸ್ತತ್ರ ಚೊತ್ಪೇತುಃ ಪತಿತೈಃ ಸ್ವಶಿರೋಽಕ್ಷಿಭಿಃ ।**
**ಉದ್ಯತಾಯುಧದೋರ್ದಂಡೈರಾಧಾವಂತೋ ಭಟಾನ್ ಮೃಧೇ ।।೪೦।।**

**ತತ್ರ ಮೃಧೇ** ಆ ಯುದ್ಧದಲ್ಲಿ **ಕಬಂಧಾಃ** ತಲೆಯಿಲ್ಲದ ದೇಹಗಳು (ಮುಂಡಗಳು) **ಪತಿತೈಃ** ಕೆಳಗೆ ಉರುಳಿದ **ಸ್ವಶಿರೋಕ್ಷಿಭಿಃ** ತಮ್ಮ ತಲೆಯಲ್ಲಿರುವ ಕಣ್ಣುಗಳಿಂದ **ಪಶ್ಯಂತಃ** ನೋಡುತ್ತ **ಉದ್ಯತಾಯುಧದೋರ್ದಂಡೈಃ** ಆಯುಧಗಳನ್ನೆತ್ತಿದ ದಂಡದಂತಿರುವ ಕೈಗಳಿಂದ **ಭಟಾನ್** ತಮ್ಮ ಪ್ರತಿಭಟರನ್ನು ಕುರಿತು **ಆಧಾವಂತಃ** ಓಡುತ್ತ **ಉತ್ಪೇತುಃ** ಮೇಲೆ ಬಿದ್ದವು.

**ಬಲಿರ್ಮಹೇಂದ್ರಂ ದಶಭಿಸ್ತ್ರಿಭಿರೈರಾವತಂ ಶರೈಃ ।**
**ಚತುರ್ಭಿಶ್ಚತುರೋ ವಾಹಾನೇಕೇನಾರೋಹಮಾರ್ಛಯತ್ ।।೪೧।।**

**ಚತುರಃ** ಕುಶಲನಾದ **ಬಲಿಃ** ಬಲಿಯು **ಮಹೇಂದ್ರಂ** ಇಂದ್ರನನ್ನು **ದಶಭಿಃ ಶರೈಃ** ಹತ್ತು ಬಾಣಗಳಿಂದ **ಐರಾವತಂ** ಆನೆಯನ್ನು **ತ್ರಿಭಿಃ ಶರೈಃ** ಮೂರು ಬಾಣಗಳಿಂದ **ಚತುರ್ಭಿಃ ಶರೈಃ** ನಾಲ್ಕು ಬಾಣಗಳಿಂದ **ಚತುರಃ ವಾಹಾನ್** ಆನೆಯ ನಾಲ್ಕು ಕಾಲುಗಳನ್ನು ರಕ್ಷಿಸಲು ಇದ್ದ ನಾಲ್ಕು ಕುದುರೆಗಳನ್ನು **ಏಕೇನ ಶರೇಣ** ಒಂದು ಬಾಣದಿಂದ **ಆರೋಹಂ** ಮಾವುತನನ್ನು **ಆರ್ಛಯತ್ ಆರ್ಛತ್** ಹೊಡೆದನು. (ಧಾತುಗಳಿಗೆ ಅನೇಕಾರ್ಥಗಳಿರುವುದರಿಂದ ಗತ್ಯರ್ಥಕವಾದ ಋಚ್ಛ ಧಾತು ಇಲ್ಲಿ ತಾಡನಾರ್ಥಕವೆಂದು ತಿಳಿಯಬೇಕು.) ।।೪೧।।

**ಸ ತಾನಾಪತತಃ ಶಕ್ರಸ್ತಾವದ್ಭಿಃ ಶೀಘ್ರವಿಕ್ರಮಃ ।**
**ಚಿಚ್ಛೇದ ನಿಶಿತೈರ್ಭಲ್ಲೈರಸಂಪ್ರಾಪ್ತಾನ್ ಹಸನ್ನಿವ ।।೪೨।।**

**ಸಃ ಶಕ್ರಃ** ಆ ಇಂದ್ರನು **ಶೀಘ್ರವಿಕ್ರಮಃ** ಶೀಘ್ರವಾಗಿ ಬಾಣಬಿಡುವ ಸಾಮರ್ಥ್ಯ ಉಳ್ಳವನಾದ್ದರಿಂದ **ತಾವದ್ಭಿಃ** ಬಲಿಯು ಬಿಟ್ಟಷ್ಟು ಅಂದರೆ ಹದಿನೆಂಟುಸಂಖ್ಯಾಕವಾದ **ನಿಶಿತೈಃ** ಹರಿತವಾದ **ಭಲ್ಲೈಃ** ಬಾಣಗಳಿಂದ **ಅಸಂಪ್ರಾಪ್ತಾನ್** ತನ್ನನ್ನು ಹೊಂದದಿರುವ **ತಾನ್ ಆಪತತಃ ಚ** ತನ್ನ ಮೇಲೆ ಬರುತ್ತಿರುವ ಬಾಣಗಳನ್ನು **ಹಸನ್ನಿವ** ನಗುತ್ತಲೇ **ಚಿಚ್ಛೇದ** ಕತ್ತರಿಸಿದನು. ।।೪೨।।

**ತಸ್ಯ ಕರ್ಮೋತ್ತಮಂ ವೀಕ್ಷ್ಯ ದುರ್ಮರ್ಷಃ ಶಕ್ತಿಮಾದದೇ ।**
**ತಾಂ ಜ್ವಲಂತೀಂ ಮಹೋಲ್ಕಾಭಾಂ ಹಸ್ತಸ್ಥಾಮಚ್ಛಿನದ್ಧರಿಃ ॥೪೩॥**

**ಬಲಿಃ** ಬಲಿಯು **ತಸ್ಯ** ಇಂದ್ರನ **ಉತ್ತಮಂ ಕರ್ಮ** ತನ್ನ ಬಾಣಗಳನ್ನು ಕತ್ತರಿಸಿದ ಶ್ರೇಷ್ಠವಾದ ಕಾರ್ಯವನ್ನು **ದುರ್ಮರ್ಷಃ** ಸಹಿಸದೇ **ಶಕ್ತಿಂ** ಶಕ್ತ್ಯಾಯುಧವನ್ನು **ಆದದೇ** ತೆಗೆದುಕೊಂಡನು **ಹಸ್ತಸ್ಥಾ** ಬಲಿಯ ಕೈಯ್ಯಲ್ಲಿರುವ **ಮಹೋಲ್ಕಾಭಾಂ** ದೊಡ್ಡ ಕೊಳ್ಳಿಯಂತಿರುವ **ಜ್ವಲಂತೀಂ** ಪ್ರಕಾಶಮಾನವಾದ **ತಾಂ** ಶಕ್ತ್ಯಾಯುಧವನ್ನು **ಹರಿಃ** ಇಂದ್ರನು **ಅಚ್ಛಿನತ್** ಕತ್ತರಿಸಿದನು. ॥೪೩॥

**ತತಃ ಶೂಲಂ ತತಃ ಪ್ರಾಸಂ ತತಸ್ತೋಮರಮೃಷ್ಟಯಃ ।**
**ಯದ್ಯಚ್ಛಸ್ತ್ರಂ ಸಮಾದದ್ಯಾತ್ ಸರ್ವಂ ತದಚ್ಛಿನದ್ ವಿಭುಃ ॥೪೪॥**

**ತತಃ** ನಂತರ **ಶೂಲಂ** ತ್ರಿಶೂಲವನ್ನು **ತತಃ** ನಂತರ **ಪ್ರಾಸಂ** ಪ್ರಾಸವನ್ನು **ತತಃ** ನಂತರ **ತೋಮರಂ** ಸರ್ವಲಾ ಎಂಬ ಆಯುಧವನ್ನು ''ಸರ್ವಲಾ ತೋಮರೋಽಸ್ತ್ರಿಯಾಂ'' ಎಂದು ಅಮರವಿದೆ. **ಋಷ್ಟಯಃ ಋಷ್ಟೀನ್** ಋಷ್ಟಿ ಎಂಬ ಆಯುಧವನ್ನು ಹೀಗೆ **ಯದ್ಯತ್** ಯಾವ ಯಾವ **ಶಸ್ತ್ರಂ** ಶಸ್ತ್ರಗಳನ್ನು **ಸಮಾದದ್ಯಾತ್** ಬಲಿಯು ತೆಗೆದುಕೊಳ್ಳುತ್ತಾನೆಯೋ **ಸರ್ವಂ ತತ್** ಆ ಎಲ್ಲವನ್ನು **ವಿಭುಃ** ಸಮರ್ಥನಾದ ಇಂದ್ರನು **ಅಚ್ಛಿನತ್** ಕತ್ತರಿಸಿದನು.

**ಸಸರ್ಜಾಥಾಸುರೀಂ ಮಾಯಾಮಂತರ್ಧಾನಗತೋಽಸುರಃ ।**
**ತತಃ ಪ್ರಾದುರಭೂಚ್ಛೈಲಃ ಸುರಾನೀಕೋಪರಿ ಪ್ರಭೋ ॥೪೫॥**

**ಪ್ರಭೋ** ಪರೀಕ್ಷಿತನೇ **ಅಥ** ಅನಂತರ **ಅಂತರ್ಧಾನಗತಃ ಅಸುರಃ** ಕಣ್ಣಿಗೆ ಕಾಣದವನಾಗಿ ಬಲಿಯು **ಮಾಯಾಂ ಸಸರ್ಜ** ಆಸುರೀ ಮಾಯಾವನ್ನು ಸೃಷ್ಟಿಸಿದನು. **ತತಃ** ಆ ಮಾಯೆಯಿಂದ **ಸುರಾನೀಕೋಪರಿ** ದೇವಸೈನ್ಯದ ಮೇಲೆ **ಶೈಲಃ ಪ್ರಾದುರಭೂತ್** ಪರ್ವತವು ಪ್ರಕಟವಾಯಿತು. ॥೪೫॥

**ತತೋ ನಿಪೇತುಸ್ತರವೋ ದಹ್ಯಮಾನಾ ದವಾಗ್ನಿನಾ ।**
**ಶಿಲಾವಿಟಂಕಶಿಖರಾಶ್ಚೂರ್ಣಯಂತೋ ದ್ವಿಷದ್ಬಲಮ್ ॥೪೬॥**

**ತತಃ** ಆ ಪರ್ವತದಿಂದ **ದವಾಗ್ನಿನಾ** ಕಾಡ್ಗಿಚ್ಚಿನಿಂದ **ದಹ್ಯಮಾನಾಃ** ಸುಡುತ್ತಿರುವ **ಶಿಲಾವಿಟಂಕಶಿಖರಾಃ** ಕಲ್ಲಿನಂತಿರುವ ಪಾರಿವಾಳದ ಗೂಡಿನಿಂದ ಕೂಡಿದ ತುದಿಯುಳ್ಳ **ತರವಃ** ಗಿಡಗಳು **ದ್ವಿಷದ್ಬಲಂ** ಶತ್ರುಗಳಾದ ದೇವತೆಗಳ ಸೈನ್ಯವನ್ನು **ಚೂರ್ಣಯಂತಃ** ಪುಡಿಮಾಡುತ್ತ **ನಿಪೇತುಃ** ಬಿದ್ದವು. ॥೪೬॥

ಸತ್ಯ ಃ- ವಿಟಂಕವದ್ವಿದ್ಯಮಾನಾನಿ ಶಿಖರಾಣಿ ಅಗ್ರಭಾಗಾಃ । ''ಶಿಖರಂ ಶೈಲವೃಕ್ಷಾಗ್ರೇ'' ಎಂದು ವಿಶ್ವವಿದೆ. ''ಕಪೋತಪಾಲಕಾಯಾಂ ಸ್ಯಾದ್ವಿಟಂಕಂ ಪುಂನಪುಂಸಕಂ'' ಎಂದು ಅಮರವಿದೆ.

ಛಲಾರೀ ಃ- ಶಿಲಾ ವಿಟಂಕಶಿಖರಾಃ ಎಂದು ಬಿಡಿಸಿಕೊಂಡು ಹೀಗೆ ಅರ್ಥ ಹೇಳುತ್ತಾರೆ. **ವಿಟಂಕಾನಿ** ಉನ್ನತಗಳಾದ **ಶಿಖರಾಣಿ** ಯಾಸು ತಾಃ ಶಿಖರಗಳುಳ್ಳ **ಶಿಲಾಃ** ಕಲ್ಲುಗಳು ಎಂದು ಅರ್ಥ ಮಾಡಿರುವರು. ॥೪೬॥

**ಮಹೋರಗಾ ಸಮುತ್ಪೇತುರ್ದಂದಶೂಕಾಃ ಸವೃಶ್ಚಿಕಾಃ ।**
**ಸಿಂಹವ್ಯಾಘ್ರವರಾಹಾಶ್ಚ ಮರ್ದಯಂತೋ ಮಹಾಸುರಾನ್ ॥೪೭॥**

**ಮಹೋರಗಾಃ** ಹೆಬ್ಬಾವುಗಳು **ಸವೃಶ್ಚಿಕಾಃ** ಚೇಳುಸಹಿತಗಳಾದ **ದಂದಶೂಕಾಃ** ಕಚ್ಚುವ ಸ್ವಭಾವದ ಸರ್ಪಗಳು **ಸಿಂಹವ್ಯಾಘ್ರವರಾಹಾಃ** ಸಿಂಹ, ಹುಲಿ ಕಾಡುಹಂದಿಗಳು **ಮಹಾಸುರಾನ್** ದೊಡ್ಡ ದೇವತೆಗಳನ್ನು **ಮರ್ದಯಂತಃ** ಹಿಂಸಿಸುತ್ತ **ಸಮುತ್ಪೇತುಃ** ಬಂದು ಎರಗಿದವು. ॥೪೭॥

**ಯಾತುಧಾನ್ಯಶ್ಚ ಶತಶಃ ಶೂಲಹಸ್ತಾ ವಿವಾಸಸಃ ।**
**ಛಿಂದಿ ಭಿಂದೀತಿ ವಾದಿನ್ಯಸ್ತಥಾ ರಕ್ಷೋಗಣಾ ವಿಭೋ ॥೪೮॥**

**ಹೇ ವಿಭೋ** ರಾಜನೇ **ಶೂಲಹಸ್ತಾಃ** ಕೈಯಲ್ಲಿ ಶೂಲಗಳನ್ನು ಹಿಡಿದ **ವಿವಾಸಸಃ** ವಸ್ತ್ರರಹಿತರಾದ **ಶತಶಃ** ನೂರಾರು ಜನರು **ಛಿಂದಿ** ಇಭ್ಭಾಗ ಮಾಡಿರಿ **ಭಿಂದಿ** ಸೀಳಿಹಾಕಿರಿ ಎಂದು **ವಾದಿನ್ಯಃ** ಹೇಳುವವರಾಗಿ **ಯಾತುಧಾನ್ಯಃ** ರಾಕ್ಷಸಸ್ತ್ರೀಯರು **ತಥಾ** ಹಾಗೂ **ರಕ್ಷೋಗಣಾಃ** ರಾಕ್ಷಸರ ಸಮೂಹಗಳು **ಸಮುತ್ಪೇತುಃ** ದೇವತೆಗಳ ಮೇಲೆ ಎರಗಿದವು.

**ತತೋ ಮಹಾಘನಾ ವ್ಯೋಮ್ನಿ ಗಂಭೀರಪುರುಷಸ್ವನಾಃ ।**
**ಅಂಗಾರಾನ್ ಮುಮುಚುರ್ವಾತೈರಾಹತಾಃ ಸ್ತನಯಿತ್ನವಃ ॥೪೯॥**

**ತತಃ** ಅನಂತರ **ವ್ಯೋಮ್ನಿ** ಆಕಾಶದಲ್ಲಿ **ಸ್ತನಯಿತ್ನವಃ** ಗರ್ಜನ ಮಾಡುವ ಸ್ವಭಾವ ಉಳ್ಳ **ಮಹಾಘನಾಃ** ದೊಡ್ಡದಾದ ಮೋಡಗಳು **ಗಂಭೀರಪರುಷಸ್ವನಾಃ** ಗಂಭೀರವಾದ ಕ್ರೂರವಾದ ಧ್ವನಿಯುಳ್ಳವುಗಳಾಗಿ **ವಾತೈಃ ಆಹತಾಃ** ಗಾಳಿಯಿಂದ ಒಟ್ಟುಗೂಡಿ **ಅಂಗಾರಾನ್ ಮುಮುಚುಃ** ಕೆಂಡಗಳನ್ನು ಸುರಿಸಿದವು. **ಸ್ತನಯಿತ್ನವಃ** ಮೋಡಗಳು **ಯೇ ಮಹಾಘನಾಃ** ಯಾವ ಕಬ್ಬಿಣದ **ಮುದ್ಗರಾಃ** ಒನಕಿ ಹಾರಿಗಳಿವೆಯೋ **ತತಃ** ಅವುಗಳನ್ನು **ಮುಮುಚುಃ** ಸುರಿಸಿದವು.

''ಘನಃ ಸಾಂದ್ರೇ ದೃಢೇ ದೀರ್ಘೇ ವಿಸ್ತಾರೇ ಲೋಹಮುದ್ಗರೇ'' ಎಂದು ವಿಶ್ವವಿದೆ.

**ಸೃಷ್ಟೋ ದೈತ್ಯೇನ ಸುಮಹಾನ್ ವಹ್ನಿಶ್ವಸನಸಾರಥಿಃ ।**
**ಸಾಂವರ್ತಕ ಇವಾತ್ಯುಗ್ರೋ ವಿಬುಧಧ್ವಜನೀಮಧಾಕ್ ॥೫೦॥**

**ದೈತ್ಯೇನ** ಬಲಿಯಿಂದ **ಸೃಷ್ಟಃ** ಸೃಷ್ಟಿಸಲ್ಪಟ್ಟ **ಶ್ವಸನಸಾರಥಿಃ** ವಾಯುವೇ ಸಾರಥಿಯಾಗಿ ಉಳ್ಳ ಸಹಾಯವಾಗಿವುಳ್ಳ **ಸಾಂವರ್ತಕ ಇವ ಅತ್ಯುಗ್ರಃ ಚ** ಪ್ರಲಯಕಾಲದ ಅಗ್ನಿಯಂತೆ ಅತ್ಯಂತ ತೀಕ್ಷ್ಣವಾದ **ಸುಮಹಾನ್ ವಹ್ನಿಃ** ಭಾರಿ ಬೆಂಕಿಯು **ವಿಬುಧಧ್ವಜನೀಂ** ದೇವತೆಗಳ ಸೈನ್ಯವನ್ನು **ಅಧಾಕ್** ಸುಟ್ಟಿತು. ಬೂದಿಮಾಡಿತು. ಅಧಾಕ್ ಎಂಬುದು ಛಾಂದಸ ಪ್ರಯೋಗ. ಅಧಾಕ್ಷೀತ್ ಎಂದರ್ಥ. ॥೫೦॥

**ತತಃ ಸಮುದ್ರ ಉದ್ವೇಲಃ ಸರ್ವತಃ ಪ್ರತ್ಯದೃಶ್ಯತ ।**
**ಪ್ರಚಂಡವಾತೈರುದ್ಧೂತತರಂಗಾವರ್ತಭೀಷಣಃ ॥೫೧॥**

**ತತಃ** ಅನಂತರ **ಪ್ರಚಂಡವಾತೈಃ** ಅತಿ ತೀಕ್ಷ್ಣವಾದ ಗಾಳಿಯಿಂದ **ಉದ್ಧೂತ** ಉಂಟಾದ **ತರಂಗ** ತೆರೆಗಳು **ಆವರ್ತ** ಸುಳಿಗಳು ಇವುಗಳಿಂದ **ಭೀಷಣಃ** ಭಯಂಕರವಾದ **ಸಮುದ್ರಃ** ಸಮುದ್ರವು **ಸರ್ವತಃ** ಎಲ್ಲ ಕಡೆಗೂ **ಉದ್ವೇಲಃ** ಎಲ್ಲೆ ಮೀರಿ ದಂಡೆಯನ್ನು ಮೀರಿದ್ದಾಗಿ **ಪ್ರತ್ಯದೃಶ್ಯತ** ಕಾಣಿಸಿಕೊಂಡಿತು. ॥೫೧॥

**ಏವಂ ದೈತ್ಯೈರ್ಮಹಾಮಾಯೈರಲಕ್ಷ್ಯಗತಿಭೀಷಣೈಃ ।**
**ಸೃಜ್ಯಮಾನಾಸು ಮಾಯಾಸು ವಿಷೇದುಃ ಸುರಸೈನಿಕಾಃ ॥೫೨॥**

**ಏವಂ** ಈ ರೀತಿಯಾಗಿ **ಅಲಕ್ಷ್ಯಗತಿಭೀಷಣೈಃ** ಅದೃಶ್ಯವಾದ ಗತಿಯಿಂದ ಭಯಂಕರರಾದ **ಮಹಾಮಾಯೈಃ** ಭಾರೀ ಮಾಯೆಯುಳ್ಳ **ದೈತ್ಯೈಃ** ದೈತ್ಯರಿಂದ **ಮಾಯಾಸು** ಮಾಯೆಗಳು **ಸೃಜ್ಯಮಾನಾಸು** ಸೃಷ್ಟಿ ಮಾಡಲ್ಪಡುತ್ತಿರಲು **ಸುರಸೈನಿಕಾಃ** ದೇವತೆಗಳ ಸೈನಿಕರು **ವಿಷೇದುಃ** ಏನು ಮಾಡಬೇಕೆಂದು ತಿಳಿಯದೇ ದುಃಖಿತರಾದರು.

**ನ ತತ್ಪ್ರತಿವಿಧಿಂ ಯತ್ರ ವಿದುರಿಂದ್ರಾದಯೋ ನೃಪ ।**
**ಧ್ಯಾತಃ ಪ್ರಾದುರಭೂತ್ ತತ್ರ ಭಗವಾನ್ ವಿಶ್ವಭಾವನಃ ॥೫೩॥**

**ಹೇ ನೃಪ** ರಾಜನೇ **ಯತ್ರ** ಯಾವಾಗ **ಇಂದ್ರಾದಯಃ** ಇಂದ್ರ ಮೊದಲಾದ ದೇವತೆಗಳು **ಪ್ರತಿವಿಧಿಂ** ದೈತ್ಯರ ಮಾಯಾಸೃಷ್ಟಿಯ ಪ್ರತೀಕಾರವನ್ನು **ನ ವಿದುಃ** ತಿಳಿಯಲಿಲ್ಲವೋ **ತತ್ರ** ಆಗ **ವಿಶ್ವಭಾವನಃ** ಜಗದುತ್ಪಾದಕನಾದ **ಭಗವಾನ್** ಶ್ರೀಹರಿಯು **ಧ್ಯಾತಃ** ದೇವತೆಗಳಿಂದ ಧ್ಯಾನ ಮಾಡಿಸಿಕೊಳ್ಳುವವನಾಗಿ **ಪ್ರಾದುರಭೂತ್** ವ್ಯಕ್ತನಾದನು.

**ತತಃ ಸುಪರ್ಣಾಂಸಕೃತಾಂಘ್ರಿಪಲ್ಲವಃ**
**ಪಿಶಂಗವಾಸಾ ನವಕಂಜಲೋಚನಃ ।**

**ಅದೃಶ್ಯತಾಷ್ಟಾಯುಧಬಾಹುರುಲ್ಲಸತ್**
**ಶ್ರೀಕೌಸ್ತುಭಾನರ್ಘಕಿರೀಟಕುಂಡಲಃ** **॥೩೪॥**

**ತತಃ** ನಂತರ **ಸುಪರ್ಣಾಂಸಕೃತಾಂಘ್ರಿಪಲ್ಲವಃ** ಗರುಡನ ಹೆಗಲಮೇಲೆ ಚಿಗುರಿನಂತೆ ಕೋಮಲವಾದ ಪಾದಗಳನ್ನು ಇಟ್ಟಿರುವ **ಪಿಶಂಗವಾಸಾಃ** ಹಳದಿಯ ವಸ್ತ್ರವನ್ನು ಧರಿಸಿದ **ನವಕಂಜಲೋಚನಃ** ಆಗಲೇ ಅರಳಿದ ಕಮಲದಂತೆ ವಿಸ್ತೃತವಾದ ಕಣ್ಣುಗಳುಳ್ಳ **ಅಷ್ಟಾಯುಧಬಾಹುಃ** ಎಂಟು ಆಯುಧಗಳಿಂದ ಯುಕ್ತಗಳಾದ ಎಂಟು ಕೈಗಳುಳ್ಳ **ಉಲ್ಲಸತ್‌ಶ್ರೀ** ಅತ್ಯಂತ ಪ್ರಕಾಶಮಾನವಾದ **ಕೌಸ್ತುಭ** ಕೌಸ್ತುಭಮಣಿ **ಅನರ್ಘ** ಅಮೂಲ್ಯವಾದ **ಕಿರೀಟಕುಂಡಲಃ** ಕಿರೀಟ ಮತ್ತು ಕುಂಡಲಗಳುಳ್ಳವನಾಗಿ **ಭಗವಾನ್** ಶ್ರೀಹರಿಯು **ಅದೃಶ್ಯತ** ದೇವಾಸುರರಿಂದ ನೋಡಲ್ಪಟ್ಟನು. ॥೩೪॥

**ತಸ್ಮಿನ್ ಪ್ರವಿಷ್ಟೇಽಸುರಕೂಟಕರ್ಮಜಾ**
**ಮಾಯಾ ವಿನೇಶುರ್ಮಹತಾಂ ಮಹೀಯಸಿ ।**
**ಸ್ವಾಪ್ನೋ ಯಥಾಽಹಿಃ ಪ್ರತಿಬೋಧ ಆಗತೇ**
**ಹರಿಸ್ಮೃತಿಃ ಸರ್ವವಿಪದ್ವಿಮೋಕ್ಷಣೇ** **॥೩೫॥**

**ಮಹತಾಂ** ಉತ್ತಮರಾದ ಬ್ರಹ್ಮಾದಿಗಳಿಗಿಂತ **ಮಹಿಯಸಿ** ಅತ್ಯುತ್ತಮನಾದ ನಾರಾಯಣನು **ತಸ್ಮಿನ್** ಆ ಯುದ್ಧದಲ್ಲಿ **ಪ್ರವಿಷ್ಟೇ ಸತಿ** ಪ್ರವೇಶ ಮಾಡುತ್ತಿರಲು **ಅಸುರಕೂಟಕರ್ಮಜಾಃ** ದೈತ್ಯರ ಕಪಟವ್ಯಾಪಾರದಿಂದ ಉಂಟಾದ **ಮಾಯಾಃ** ಮಾಯಿಕವಾದ ಪರ್ವತ-ಗಿಡ ಮೊದಲಾದವುಗಳು **ಆಗತೇ ಪ್ರತಿಬೋಧೇ** ಎಚ್ಚರವಾದಾಗ **ಸ್ವಾಪ್ನಃ ಚ** ಕನಸಿನಲ್ಲಿ ಕಂಡ **ಅಹಿಃ ಯಥಾ** ಹಾವಿನಂತೆ **ವಿನೇಶುಃ ಚ** ಕಾಣದಾದವು. ಕೈಮುತ್ಯ ಹೇಳುವರು. **ಹರಿಸ್ಮೃತಿಃ** ಶ್ರೀಹರಿಯ ಸ್ಮರಣೆಯೇ **ಸರ್ವವಿಪದ್ವಿಮೋಕ್ಷಣೇ** ಎಲ್ಲ ವಿಪತ್ತುಗಳ ಪರಿಹಾರಕವು.

ಸತ್ಯ ಃ- ಭಗವಂತನ ಸ್ಮರಣೆಯೇ ಸರ್ವವಿಧವಾದ ಆಪತ್ತುಗಳನ್ನು ಪರಿಹರಿಸುತ್ತದೆ. ಅಂದಮೇಲೇ ಶ್ರೀಹರಿಯೇ ಸ್ವಯಂ ಬಂದಾಗ ಮಾಯೆಯು ನಷ್ಟವಾಯಿತೆಂದೇನು ಮಹಾ ಹೇಳಬೇಕಾದದ್ದು ಇಲ್ಲವೆಂದು ಭಾವ.

ಅಸ್ಥಿರತೆಯಲ್ಲಿ ಸ್ವಾಪ್ನಪದಾರ್ಥದ ದೃಷ್ಟಾಂತವನ್ನು ಕೊಟ್ಟಿದ್ದಾರೆ. ಅಥವಾ ಜಾಗ್ರತ್ತಾದಾತ್ಮ್ಯವನ್ನು ಸಾಪ್ನಪದದಿಂದ ತೆಗೆದುಕೊಳ್ಳಬೇಕು. ॥೩೫॥

**ದೃಷ್ಟ್ವಾ ಮೃಧೇ ಗರುಡವಾಹಮಿ(ಹಾ)ಭಾರಿವಾಹ**
**ಆವಿಧ್ಯ ಶೂಲಮಹಿನೋದಥ ಕಾಲನೇಮಿಃ ।**

**ತಲ್ಲೀಲಯಾ ಗರುಡಮೂರ್ಧ್ನಿ ಪತದ್ ಗೃಹಿತ್ವಾ**
**ತೇನಾಹನನ್ನೃಪ ಸವಾಹಮರಿಂ ತ್ರ್ಯಧೀಶಃ** ||೫೬||

**ಹೇ ನೃಪ** ಪರೀಕ್ಷಿದ್ರಾಜನೇ **ಇಹ ಮೃಧೇ** ಈ ಯುದ್ಧದಲ್ಲಿ **ಅರಿವಾಹಃ** ದೇವತೆಗಳ ಶತ್ರುಗಳಾದ ದೈತ್ಯರನ್ನು ಅಥವಾ ದೈತ್ಯರ ಶತ್ರುಗಳಾದ ದೇವತೆಗಳನ್ನು ವಹತಿ ಉದ್ಧರತಿ ರಣಭೂಮೇಃ ಅಂದರೆ ರಣಭೂಮಿಯಿಂದ ಓಡಿಸುವ ಎಂದರ್ಥ ಇಭಾರಿವಾಹ ಎಂಬ ಪಾಠದಲ್ಲಿ ಆನೆಯ ಶತ್ರುವಾದ ಸಿಂಹವೇ ವಾಹನವಾಗಿ ಉಳ್ಳ **ಕಾಲನೇಮಿಃ** ಕಾಲನೇಮಿ ಎಂಬ ಅಸುರನು **ಗರುಡವಾಹಂ** ಗರುಡವಾಹನನಾದ ಶ್ರೀಹರಿಯನ್ನು **ದೃಷ್ಟ್ವಾ** ನೋಡಿ **ಆವಿದ್ಧ್ಯ** ಸರಿಯಾಗಿ ಗುರಿ ಇಟ್ಟು ಅಥವಾ ತಿರುಗಿಸಿ **ಶೂಲಂ** ತ್ರಿಶೂಲವನ್ನು **ಅಹಿನೋತ್** ಎಸೆದನು ವಿಷ್ಣುವಿನ ಮೇಲೆ ಪ್ರಯೋಗಿಸಿದನು. **ಅಥ** ನಂತರ **ತ್ರ್ಯಧೀಶಃ** ಮೂರು ಲೋಕಕ್ಕೆ ಒಡೆಯನಾದ ಅಥವಾ ವೈಕುಂಠ-ಶ್ವೇತದ್ವೀಪ-ಅನಂತಾಸನಗಳಿಗೆ ಒಡೆಯನಾದ ಅಥವಾ ಸತ್ವಗುಣ- ರಜೋಗುಣ-ತಮೋಗುಣಗಳಿಗೆ ಅಧೀಶನಾದ ಅಥವಾ ಪಿತೃಮಾರ್ಗ-ದೇವಮಾರ್ಗ-ಮನುಷ್ಯಮಾರ್ಗಗಳಿಗೆ ಅಧೀಶನಾದ, ಮೂರು ವೇದಗಳಿಗೆ ಅಧೀಶನಾದ ಶ್ರೀಹರಿಯು ''ಅಪ್ರಜಾಃ ಸಂತ್ವತ್ರಿಣಃ'' ಎಂಬ ಋಗ್ಭಾಷ್ಯದಲ್ಲಿ ಮಾರ್ಗತ್ರಯಗಳು ಹೇಳಲ್ಪಟ್ಟಿವೆ. **ತತ್** ಆ ಶೂಲವನ್ನು **ಲೀಲಯಾ** ಅನಾಯಾಸವಾಗಿ **ಗೃಹೀತ್ವಾ** ಹಿಡಿದುಕೊಂಡು **ತೇನ** ಆ ಶೂಲದಿಂದ **ಸವಾಹಂ ಅರಿಂ** ವಾಹನಸಹಿತನಾದ ಶತ್ರುವಾದ ಕಾಲನೇಮಿಯನ್ನು **ಅಹನತ್** ಕೊಂದನು. ||೫೬||

ಈ ಶ್ಲೋಕದಲ್ಲಿ ಮತ್ತು ಮುಂದಿನ ಶ್ಲೋಕದಲ್ಲಿ ಕಾಲನೇಮಿ ಮೊದಲಾದವರು ಚಾಕ್ಷುಷಮನ್ವಂತರದಲ್ಲಿ ಮೃತರಾಗಿದ್ದಾರೆ ಎಂದು ಕೇಳಿಬರುತ್ತದೆ. ಮತ್ತು ವೈವಸ್ವತಮನ್ವಂತರದಲ್ಲಿಯೂ ಸಮುದ್ರಮಥನಕಾಲದಲ್ಲಿ ಅವರು ಮಾಡಿದ ಯುದ್ಧದಲ್ಲಿ ಅವರ ಮರಣ ಕೇಳಿ ಬರುತ್ತದೆ. ಅದು ಹೇಗೆ ಸಾಧ್ಯವೆಂದರೆ ಪ್ರಮಾಣವನ್ನೇ ಹೇಳುವರು.

**ತಾತ್ಪರ್ಯ :- ಕಾಲನೇಮ್ಯಾದಯಃ ಸರ್ವೇ ಹರಿಣಾ ನಿಹತಾ ಅಪಿ |**
**ಶುಕ್ರೇಣೋಜ್ಜೀವಿತಾಃ ಸಂತಃ ಪುನಸ್ತೇನೈವ ಪಾತಿತಾಃ ||ಇತಿ ಚ||**

ಕಾಲನೇಮಿ ಮೊದಲಾದವರನ್ನು ವೈವಸ್ವತಮನ್ವಂತರದ ಸಮುದ್ರಮಥನಕಾಲದಲ್ಲಿ ಪರಮಾತ್ಮನೇ ಸಂಹರಿಸಿದ್ದಾನೆ. ನಂತರ ಶುಕ್ರಾಚಾರ್ಯರು ಮೃತಸಂಜೀವಿನೀ ವಿದ್ಯೆಯಿಂದ ಆ ಕಾಲನೇಮಿ ಮುಂತಾದವರನ್ನು ಬದುಕಿಸಿದ್ದಾರೆ. ಮತ್ತೆ ಪರಮಾತ್ಮನೇ ಅವರನ್ನು ಸಂಹರಿಸಿದ್ದಾನೆ. ಇದರ ವಿಸ್ತಾರವನ್ನು ಪ್ರಕಾಶಿಕಾವ್ಯಾಖ್ಯಾನದಿಂದ ತಿಳಿಯಿರಿ. ಇದರಿಂದ ಆ ಕಾಲನೇಮಿಯೇ ಇದೇ ಮನ್ವಂತರದಲ್ಲಿ ಇಪ್ಪತ್ತೆಂಟನೇ ದ್ವಾಪರದಲ್ಲಿ ಕಂಸನಾಗಿ ಶ್ರೀಕೃಷ್ಣನಿಂದ ಕೊಲ್ಲಲ್ಪಟ್ಟನು ಎಂದು ಹೇಳಿದಂತಾಯಿತು. ||೫೬||

**ಮಾಲೀ ಸುಮಾಲ್ಯತಿಬಲೌ ಯುಧಿ ಪೇತತು-**
**ರ್ಯಚ್ಚಕ್ರೇಣ ಕೃತ್ತಶಿರಸಾವಥ ಮಾಲ್ಯವಾಂಸ್ತಮ್ ।**
**ಆಹತ್ಯ ತಿಗ್ಮಗದಯಾಽಹನದಂಡಜೇಂದ್ರಂ**
**ತಾವಚ್ಛಿರೋಽಚ್ಛಿನದರೇರ್ನದತೋಽರಿಣಾಽಽದ್ಯಃ** ॥೫೭॥

**॥ ಇತಿ ಶ್ರೀಮದ್ಭಾಗವತೇ ಅಷ್ಟಮಸ್ಕಂಧೇ ನವಮೋಽಧ್ಯಾಯಃ ॥**

**ಯತ್** ಯಾವಾಗ **ಚಕ್ರೇಣ** ಶ್ರೀಹರಿಯ ಚಕ್ರದಿಂದ **ಕೃತ್ತಶಿರಸೌ** ಕತ್ತರಿಸಿದ ತಲೆ ಉಳ್ಳವರಾಗಿ **ಮಾಲೀ ಸುಮಾಲೀ ಇತಿ** ಮಾಲೀ ಸುಮಾಲೀ ಎಂಬ **ಅತಿಬಲೌ** ಅತ್ಯಂತಬಲಿಷ್ಠರಾದವರು **ಯುಧಿ** ಯುದ್ಧದಲ್ಲಿ **ಪೇತತುಃ** ಸತ್ತುಬಿದ್ದರೋ **ಅಥ** ಆಗ **ಮಾಲ್ಯವಾನ್** ಮಾಲ್ಯವಂತನು **ಆಹತ್ಯ ಚ** ತಿರುಗಿಸಿ **ತಿಗ್ಮಗದಯಾ** ತೀಕ್ಷ್ಣವಾದ ಗದೆಯಿಂದ **ತಂ ಅಂಡಜೇಂದ್ರಂ** ಆ ಪಕ್ಷಿರಾಜನಾದ ಗರುಡನನ್ನು ಅಥವಾ **ಅಂಡಜ** ಗರುಡ ಅವನಿಗೆ ಇಂದ್ರ ರಾಜನಾದ ಶ್ರೀಹರಿಗೆ ಎಂದರ್ಥ. **ಅಹನತ್** ಹೊಡೆದನು **ತಾವತ್** ಅಷ್ಟರಲ್ಲಿ **ಆದ್ಯಃ** ಎಲ್ಲರಿಗೂ ಮೊದಲಿಗನಾದ **ಸುರಃ** ಉಪಜೀವ್ಯನಾದ ಶ್ರೀಹರಿಯು **ಅರಿಣಾ** ಚಕ್ರ**ದಿಂದ** **ನದತಃ** ಸಿಂಹನಾದ ಮಾಡುತ್ತಿದ್ದ **ಅರೇಃ** ಶತ್ರುವಾದ ಮಾಲ್ಯವಂತನ **ಶಿರಃ** ತಲೆಯನ್ನು **ಅಚ್ಛಿನತ್** ಕತ್ತರಿಸಿದನು. ॥೫೭॥

**ಇಲ್ಲಿಗೆ ಒಂಬತ್ತನೇ ಅಧ್ಯಾಯವು ಮುಗಿಯಿತು.**

★★★

 

# ಅಥ ದಶಮೋಽಧ್ಯಾಯಃ

ಮೊದಲು ದೇವಾಸುರಯುದ್ಧವು ಪ್ರಾರಂಭವಾಯಿತು. ಆ ಯುದ್ಧದಲ್ಲಿ (ಹರಿಣಾ ಅರಿಣಾ ಅರಿಶಿರೋಹರಣಂ) ಶ್ರೀಹರಿಯು ಚಕ್ರದಿಂದ ಶತ್ರುವಿನ ತಲೆ ಕತ್ತರಿಸಿದನು ಎಂದು ಮಧ್ಯದಲ್ಲಿ ಹೇಳಿದರು. ಆದರೆ ಯುದ್ಧದಲ್ಲಿ ಅಮರರು ಮೃತರಾದರೇ, ಓಡಿಹೋದರೇ, ಕೌತುಕವನ್ನು ನೋಡುತ್ತ ಶತ್ರಗಳನ್ನು ಕೈಬಿಟ್ಟು ಅಲ್ಲಿಯೇ ನಿಂತಿದ್ದರೇ ಎಂಬುದು ತಿಳಿಯಲಿಲ್ಲವಲ್ಲ ಎಂದರೆ, ಮೃತರಾದರೆಂಬ ಮೊದಲನೇ ಪಕ್ಷ ಸರಿಯಲ್ಲ. ಅಮೃತಪಾನ ಮಾಡಿರುವುದರಿಂದ ದೇವತೆಗಳು ಮರಣರಹಿತರು. ಪಲಾಯನ ಮಾಡಿದರೋ, ಕುತೂಹಲದಿಂದ ನೋಡುತ್ತ ನಿಂತರೋ ಎಂಬ ಎರಡನೇ ಮೂರನೇ ಪಕ್ಷಗಳೂ ಸಂಭವಿಸಲಾರವು. ತಮ್ಮ ಧ್ಯಾನದಿಂದ ಆವಿರ್ಭೂತನಾದ ಭಗವಂತನಿಂದ ಆಪ್ಯಾಯಿತರಾಗಿದ್ದಾರೆ. ಪರಮಾತ್ಮನಿಂದ ಪುಷ್ಟಿಯನ್ನು ಪಡೆದಿದ್ದಾರೆ. ಆದ್ದರಿಂದ ದೇವತೆಗಳು ಏನು ಮಾಡಿದರು? ಎಂದರೆ ಹೇಳುವರು-

**ಶ್ರೀಶುಕ ಉವಾಚ**

**ಅಥೋ ಸುರಾಃ ಪ್ರತ್ಯುಪಲಬ್ಧಚೇತಸಃ**
**ಪರಸ್ಯ ಪುಂಸಃ ಪರಯಾನುಕಂಪಯಾ ।**
**ಜಘ್ನುರ್ಭೃಶಂ ಶಕ್ರಸಮೀರಣಾದಯಃ**
**ತಾಂಸ್ತಾನ್ ರಣೇ ಯೈರಭಿಸಂಹತಾಃ ಪುರಾ** ॥೧॥

**ಅಥೋ** ಶ್ರೀಹರಿಯು ರಣರಂಗಪ್ರವೇಶ ಮಾಡಿ ಕಾಲನೇಮಿ ಮೊದಲಾದವರನ್ನು ಸಂಹರಿಸಿದ ಮೇಲೆ **ಶಕ್ರಸಮೀರಣಾದಯಃ** ಇಂದ್ರ-ವಾಯು ಮೊದಲಾದ **ಸುರಾಃ** ದೇವತೆಗಳು **ಪರಸ್ಯ ಪುಂಸಃ** ಸರ್ವೋತ್ತಮಪುರುಷನಾದ ಶ್ರೀಹರಿಯ **ಪರಯಾ ಅನುಕಂಪಯಾ** ಅತಿಶಯವಾದ ಕರುಣೆಯಿಂದ **ಪ್ರತ್ಯುಪಲಬ್ಧಚೇತಸಃ** ಮತ್ತೆ ಯುದ್ಧ ಮಾಡಬೇಕೆಂಬ ಮನಸ್ಸುಳ್ಳವರಾಗಿ **ಪುರಾ** ಮಾಯಾಯುದ್ಧಕ್ಕಿಂತ ಮೊದಲು **ಯೈಃ** ಯಾರು

ಯಾರೊಂದಿಗೆ **ರಣೇ ಅಭಿಸಂಹತಾಃ** ದ್ವಂದ್ವಯುದ್ಧದಲ್ಲಿ ಸೇರಿಕೊಂಡಿದ್ದರೋ **ತಾನ್‌ತಾನ್** ಅವರವರನ್ನು **ಭೃಶಂ ಜಘ್ನುಃ** ಬಹಳವಾಗಿ ಹೊಡೆದರು.

ತಾನ್‌ತಾನ್ ಎಂಬುದು ಒಂದೇ ಪದ. ''ತೇತೇ ಪಿಬಂತು ಜಿಹ್ವಯಾ'' ಎಂಬ ಭಾಷ್ಯ-ಟೀಕಾಗಳನ್ನು ಉದಾಹರಿಸಿ ವ್ಯಾಖ್ಯಾನ ಮಾಡಿದ್ದನ್ನು ಆರನೇ ಸ್ಕಂಧದಲ್ಲಿ ನೋಡಿರಿ. ಯೈಃ ಎಂದು ಮತ್ತೊಂದನ್ನು ಶೇಷವೆಂದು ತಿಳಿಯಬೇಕು. ।।೧।।

ಅವತರಣಿಕಾ :- ಬಲಿ ಮತ್ತು ಇಂದ್ರರು ಮುಖ್ಯರಾದ್ದರಿಂದ ಅವರ ಯುದ್ಧವನ್ನು ವರ್ಣಿಸುವರು-

**ವೈರೋಚನಾಯ ಸಂರಬ್ಧೋ ಭಗವಾನ್ ಪಾಕಶಾಸನಃ ।**
**ಉದಯಚ್ಛದ್ ಯದಾ ವಜ್ರಂ ಪ್ರಜಾ ಹಾಹೇತಿ ಚುಕ್ರುಶುಃ ।।೨।।**

**ಭಗವಾನ್** ಯಥಾಯೋಗ್ಯವಾಗಿ ಐಶ್ವರ್ಯಾದಿ ಸಂಪನ್ನನಾದ **ಪಾಕಶಾಸನಃ** ಪಾಕನೆಂಬ ಅಸುರನನ್ನು ಶಿಕ್ಷಿಸಿದುದರಿಂದ ಪಾಕಶಾಸನನೆನಿಸಿದ ಇಂದ್ರನು **ಸಂರಬ್ಧಃ** ಕುಪಿತನಾಗಿ **ವೈರೋಚನಾಯ** ವಿರೋಚನನ ಮಗನಾದ ಬಲಿಯನ್ನು ಹೊಡೆಯಲು **ಯದಾ** ಯಾವಾಗ **ವಜ್ರಂ** ವಜ್ರಾಯುಧವನ್ನು **ಉದಯಚ್ಛತ್** ಎತ್ತಿದನೋ **ತದಾ** ಆಗ **ಪ್ರಜಾಃ** ಅಸುರ ಸ್ವಭಾವದ ಜನರು **ಹಾಹಾ ಇತಿ ಚುಕ್ರುಶುಃ** ನಮಗೆ ಖೇದವು ಬಂದಿತು ಎಂದು ಕೂಗಿಕೊಂಡರು. ।।೨।।

ಅವತರಣಿಕಾ :- ಶ್ರೀಹರಿಯ ಕೃಪಾಸಂಪತ್ತನ್ನು ಸಂಪಾದಿಸಿದವನಾದುದರಿಂದಲೂ, ಅಮೋಘವಾದ ಆಯುಧವುಳ್ಳವನಾದುದರಿಂದಲೂ ವೈರಿಯನ್ನು ತೆಗಳುತ್ತ, ತಿರಸ್ಕರಿಸುತ್ತ ತನ್ನ ಪೌರುಷ ಪ್ರದರ್ಶನದ ಮಾತುಗಳನ್ನು ಆಡುವುದು ಯೋಧರ ಸಂಪ್ರದಾಯಾಗತವಾದ್ದರಿಂದ ಇಂದ್ರನು ವಜ್ರಾಯುಧವನ್ನೆತ್ತಿ ವಾಗ್ವಜ್ರವನ್ನೂ ಪ್ರಹಾರ ಮಾಡಿದನೆಂದು ಈ ನಾಲ್ಕು ಶ್ಲೋಕಗಳಿಂದ ಹೇಳುತ್ತಿದ್ದಾರೆ-

**ವಜ್ರಪಾಣಿಸ್ತಮಾಹೇದಂ ತಿರಸ್ಕೃತ್ಯ ಪುರಃಸ್ಥಿತಮ್ ।**
**ಮನಸ್ವಿನಂ ಸುಸಂಪನ್ನಂ ವಿಚರಂತಂ ಮಹಾಮೃಧೇ ।।೩।।**

**ವಜ್ರಪಾಣಿಃ** ಇಂದ್ರನು **ಪುರಃಸ್ಥಿತಂ** ಎದುರಿಗೆ ನಿಂತಿದ್ದ **ಮನಸ್ವಿನಂ** ಯುದ್ಧದಲ್ಲಿ ಮನಸ್ಸುಳ್ಳ **ಸುಸಂಪನ್ನಂ** ಶಸ್ತ್ರಾಸ್ತ್ರ ಗಳಿಂದ ಸುಸಜ್ಜಿತನಾದ **ಮಹಾಮೃಧೇ ವಿಚರಂತಂ** ಮಹಾಯುದ್ಧದಲ್ಲಿ ಸಂಚರಿಸುವ **ತಂ** ಬಲಿಯನ್ನು **ತಿರಸ್ಕೃತ್ಯ** ತಿರಸ್ಕರಿಸಿ **ಇದಂ** ಮುಂದೆ ಹೇಳುವುದನ್ನು **ಆಹ** ಹೇಳಿದನು. ।।೩।।

**ಇಂದ್ರ ಉವಾಚ**

**ನಟವನ್ಮೂಢ ಮಾಯಾಭಿರ್ಮಾಯೇಶಾನ್ ನೋ ಜಿಗೀಷಸಿ ।**
**ಜಿತ್ವಾ ಬಾಲಾನ್ ನಿಬದ್ಧಾಕ್ಷಾನ್ ಯಥಾ ಹರತಿ ತದ್ಧನಮ್ ॥೪॥**

**ಯಥಾ** ಹೇಗೆ **ನಟಃ** ದುಷ್ಟನಾದ ಐಂದ್ರಜಾಲಿಕನು **ಬಾಲಾನ್** ಈ ವಿದ್ಯೆಯನ್ನು ತಿಳಿಯದ ಜನರನ್ನು **ಮಾಯಯಾ ನಿಬದ್ಧಾಕ್ಷಾನ್** ಮೂರು ಯೋಜನದ ವರೆಗೆ ಹರಡುವ ಕಣ್ಣುಕಟ್ಟಿನಿಂದ ಕಟ್ಟಲ್ಪಟ್ಟ ಕಣ್ಣುಳ್ಳವರನ್ನಾಗಿ ಮಾಡಿ **ಜಿತ್ವಾ** ಅವರನ್ನು ಹೊಂದಿ **ತದ್ಧನಂ** ಅವರ ಹಣವನ್ನು **ಹರತಿ** ಅಪಹರಿಸುವನೋ **ತಥಾ** ಹಾಗೆ **ಹೇ ಮೂಢ** ಕರ್ತವ್ಯಪ್ರಜ್ಞೆಯಿಲ್ಲದ ಮೂರ್ಖನೇ (ಮಾಯೇಶರೆಂಬ ಜ್ಞಾನವಿಲ್ಲದವನೇ **ತ್ವಂ** ನೀನು **ಮಾಯಾಭಿಃ** ಇಂದ್ರಜಾಲಗಳಿಂದ **ನಟವತ್** ಐಂದ್ರಜಾಲಿಕನಂತೆ **ಮಾಯೇಶಾನ್** ಐಂದ್ರಜಾಲಗಳಿಗೆ ನಿಯಾಮಕರಾದ ಅಥವಾ ಮಾಯೇಶನಾದ ಶ್ರೀಹರಿಯುಳ್ಳ (ಮಾಯೇಶಃ ಅಸ್ತಿ ಏಷಾಂ ಇತಿ ಮಾಯೇಶಾಃ ತಾನ್ ಶ್ರೀಹರಿಯೇ ಸ್ವಾಮಿಯಾಗಿ ಉಳ್ಳ **ನಃ** ನಮ್ಮನ್ನು **ಜಿಗೀಷಸಿ** ಗೆಲ್ಲಲಿಚ್ಛಿಸುವಿ. ॥೪॥

ಸತ್ಯ ಃ- **ನಭಃ ಹರತಿ** ಎಂಬ ಪಾಠದಲ್ಲಿ **ನಭಃ** ಆಕಾಶವನ್ನು **ಆಚ್ಛಾದ್ಯ** ಆವರಿಸಿ ಅಥವಾ **ನಭಃ** ತಮ್ಮ ಅವಕಾಶಸ್ಥಳಕ್ಕೆ **ಹರತಿ** ಅಪಹರಿಸುವನೋ ಅದರಂತೆ ಎಂದರ್ಥ. **ನಭಃ ಜಿತ್ವಾ** ಆಕಾಶವನ್ನು ಹೊಂದಿ ಎಂದು ಅರ್ಥ. ಮತ್ತೊಬ್ಬ ಮಂತ್ರಜ್ಞನು ಬಂದು ನನ್ನ ಈ ಪ್ರಯತ್ನವನ್ನು ವಿಫಲಗೊಳಿಸಬಾರದು ಎಂಬುದಕ್ಕಾಗಿ ಆಕಾಶವನ್ನು ಹೊಂದಿ ಅವನ ಧನ ಅಪಹರಿಸುವನು ಎಂದರ್ಥ. ಜಿಧಾತು ಪ್ರಾಪ್ತ್ಯರ್ಥಕವೆಂದು ಆರನೆಯ ಸ್ಕಂಧದಲ್ಲಿ ಛಾಂದೋಗ್ಯಭಾಷ್ಯ ಉದಾಹರಿಸಿ ವಿವರಿಸಿದೆ. ಅಥವಾ ನಭಃ ತದ್ಧನಂ ಎಂದು ಅನ್ವಯ ಹೇಳಬೇಕು. ನ ವಿದ್ಯತೇ ಭಾಃ ಪ್ರಕಾಶೋ ಯಸ್ಮಿನ್ ತತ್ ನಭಃ ತದ್ಧನಂ ಪ್ರಕಾಶವಿಲ್ಲದ ಹಣ ಎಂದು ಅರ್ಥ. ಅಂದರೆ ಬಂದ ಮತ್ತೊಬ್ಬ ಮಾಂತ್ರಿಕರಿಗೆ ಬರಿ ಕತ್ತಲೇ ಕಾಣುವದು ಎಂದರ್ಥ. ॥೪॥

**ಆರುರುಕ್ಷಂತಿ ಮಾಯಾಭಿರುತ್ಸಿಸೃಪ್ಸಂತಿ ಯೇ ದಿವಮ್ ।**
**ತಾನ್ ದಸ್ಯೂನ್ ವಿಧುನೋಮ್ಯಜ್ಞಾನ್ ಪೂರ್ವಸ್ಮಾಚ್ಚ ಪದಾದಧಃ ॥೫॥**

**ಯೇ** ಯಾರು **ಮಾಯಾಭಿಃ** ಕಪಟದಿಂದ ಕೂಡಿದ ಕರ್ಮಗಳಿಂದ **ದಿವಂ** ಸ್ವರ್ಗವನ್ನು **ಆರುರುಕ್ಷಂತಿ** ಹತ್ತಲು ಇಚ್ಛಿಸುವರೋ **ಉತ್ಸಿಸೃಪ್ಸಂತಿ** ಅದಕ್ಕಿಂತಲೂ ಮೇಲಿನ ಲೋಕಗಳಿಗೆ ಮೋಕ್ಷಕ್ಕೆ ಹೋಗಲು ಬಯಸುವರೋ **ದಸ್ಯೂನ್** ಕಳ್ಳರಾದ **ಅಜ್ಞಾನ್** ತಮ್ಮ ಯೋಗ್ಯತೆಗೆ ಮೀರಿದ್ದನ್ನು ಬಯಸಬಾರದು ಎಂಬುದನ್ನು ತಿಳಿಯದ **ತಾನ್** ಆ ಮೂರ್ಖರನ್ನು **ಅಹಂ** ನಾನು **ಪೂರ್ವಸ್ಮಾತ್** ಅವರು ಹಿಂದೆ ಇದ್ದ ಪದವಿಯಿಂದ (ಚಕ್ರವರ್ತಿಪದವಿಯಿಂದ) **ಅಧಃ ವಿಧುನೋಮಿ** ಮತ್ತೆಂದೂ ಮೇಲೆ ಬಾರದಂತೆ ಕೆಳಗೆ ಹಾಕುತ್ತೇನೆ ಎಂದು ಅರ್ಥ.

ಸತ್ಯ :- ಆರುರುಕ್ಷಂತಿ ಎಂಬ ಪದಪ್ರಯೋಗ ಮಾಡಿದ್ದರಿಂದ ಋಗ್ವೇದದ ''ಮಾಯಾಭಿರುತ್ಸಿಸೃಪ್ಸತ ಇಂದ್ರ ದ್ಯಾಮಾರುರುಕ್ಷತಃ । ಅವ ದಸ್ಯೂನ್ ರಧೂನುಥಾಃ'' ಎಂಬ ಋಕ್ ಇದಕ್ಕೆ ಮೂಲಪ್ರಮಾಣವೆಂದು ಸೂಚಿಸುವರು. ಈ ಋಕ್ಕನ್ನು ಟೀಕಾಕಾರರು ಶ್ರೀಹರಿಪರತಯಾ ವ್ಯಾಖ್ಯಾನಿಸಿರುವರು. (ಹೇ ಪರಮೇಶ್ವರನೇ ಕುವಿದ್ಯೆಗಳಿಂದ ಉತ್ತಮತ್ವವನ್ನು ಹೊಂದಲು ಇಚ್ಛಿಸುವ, ಸ್ವರ್ಗವನ್ನು ಹೊಂದಲೂ ಇಚ್ಛಿಸುವ ಕಳ್ಳರನ್ನು ಅಂಧಂತಮಸ್ಸಿನಲ್ಲಿ ಹಾಕು. ಎಂದು ಜ್ಞಾನಪಾದದಲ್ಲಿರುವ ಅಧಿಕರಣದಲ್ಲಿ ತತ್ವಪ್ರಕಾಶಿಕೆಯಲ್ಲಿ ಹೀಗೆ ವ್ಯಾಖ್ಯಾನಿಸಿದ್ದಾರೆ. ಇಲ್ಲಿಯಾದರು ಪ್ರಸಿದ್ಧ ಇಂದ್ರಪರತಯಾ ಹೇಗೆ ಯೋಜಿಸುವುದು ಎಂದು ಪ್ರಶ್ನಿಸಬೇಕಿಲ್ಲ. ಪರಮಮುಖ್ಯ-ಮುಖ್ಯಾರ್ಥತ್ವಗಳಿಂದ ತತ್ವಪ್ರಕಾಶಿಕಾ ಮತ್ತು ಭಾಗವತಗಳು ಹೊರಟಿರುವುದರಿಂದ ವಿರೋಧವಿಲ್ಲ. ''ಪೂರ್ವಪ್ರಸಿದ್ಧವರ್ಜಂ ತು ಶಕ್ರಾಂತಾ ದೇವತಾ ಮತಾಃ'' ಎಂದಿರುವುದರಿಂದ ಈ ಅರ್ಥವನ್ನು ನಿಷೇಧಿಸಿಲ್ಲ. ಋಕ್ಕಿನಲ್ಲಿ ಉತ್ಸಿಸೃಪ್ಸನ್ ಎಂಬುದು ಮೊದಲಿದೆ. ನಂತರ ಆರುರುಕ್ಷತಃ ಎಂದು ಕ್ರಮವಿದೆ. ಆದರೂ ಸ್ವರ್ಗಾಧಿಪತಿಯಾಗಬೇಕೆಂಬ ಅಪೇಕ್ಷೆ ಬಲಿಗೆ ಇದೆ. ಇದರಿಂದ ಇಂದ್ರನು ಕೋಪವಶನಾಗಿದ್ದಾನೆ. ಇದನ್ನು ತಿಳಿಸಲು ಇಲ್ಲಿ ಹೀಗೆ ವ್ಯತ್ಯಾಸ ಮಾಡಿರುವರು ಎಂದು ತಿಳಿಯಬೇಕು. ।।೫।।

**ಸೋಽಹಂ ದುರ್ಮಾಯಿನಸ್ತೇಽದ್ಯ ವಜ್ರೇಣ ಶತಪರ್ವಣಾ ।**
**ಶಿರೋ ಹರಿಷ್ಯೇ ಮಂದಾತ್ಮನ್ ಘಟಸ್ವ ಜ್ಞಾತಿಭಿಃ ಸಹ ।।೬।।**

**ಹೇ ಮಂದಾತ್ಮನ್** ಕ್ಷುದ್ರಮನಸ್ಸುಳ್ಳ ಬಲಿಯೇ **ಸಃ** ಹಿಂದೆ ಹೇಳಿದಂತೆ ಪರಾಕ್ರಮಿಯಾದ **ಅಹಂ** ನಾನು **ದುರ್ಮಾಯಿನಃ** ದುಷ್ಟಮಾಯಾಗಳಿಂದ ಯುದ್ಧ ಮಾಡುತ್ತಿರುವ **ತೇ** ನಿನ್ನ **ಶಿರಃ** ತಲೆಯನ್ನು **ಅದ್ಯ** ಈಗ **ಶತಪರ್ವಣಾ** ನೂರುಗಂಟುಗಳುಳ್ಳ **ವಜ್ರೇಣ** ವಜ್ರಾಯುಧದಿಂದ **ಹರಿಷ್ಯೇ** ದೇಹದಿಂದ ಬೇರ್ಪಡಿಸುವೆನು ಆದ್ದರಿಂದ **ಜ್ಞಾತಿಭಿಃ ಸಹ** ನಿನ್ನ ದಾಯಾದಿಗಳಾದ ದೈತ್ಯರೊಡನೆ **ಘಟಸ್ವ** ಸೇರಿಕೊಂಡು ಯುದ್ಧಕ್ಕೆ ಬಾ. ।।೬।।

**ಬಲಿರುವಾಚ**

**ಸಂಗ್ರಾಮೇ ವರ್ತಮಾನಾನಾಂ ಕಾಲಚೋದಿತಕರ್ಮಣಾಮ್ ।**
**ಕೀರ್ತಿರ್ಜಯೋಽಜಯೋ ಮೃತ್ಯುಃ ಸರ್ವೇಷಾಂ ಸ್ಯುರನುಕ್ರಮಾತ್ ।।೭।।**

**ಸಂಗ್ರಾಮೇ** ಯುದ್ಧದಲ್ಲಿ **ವರ್ತಮಾನಾನಾಂ** ಇರುವ **ಕಾಲಚೋದಿತಕರ್ಮಣಾಂ** ಕಾಲನಾಮಕನಾದ ಭಗವಂತನ ಪ್ರೇರಣೆಯಿಂದ ಕರ್ಮಗಳನ್ನು ಮಾಡುವ **ಸರ್ವೇಷಾಂ** ಎಲ್ಲರಿಗೆ **ಕೀರ್ತಿಃ** ಕೀರ್ತಿಯು **ಜಯಃ** ಗೆಲುವು **ಅಜಯಃ** ಸೋಲು **ಮೃತ್ಯುಃ** ಸಾವು ಇವುಗಳು **ಅನುಕ್ರಮಾತ್** ಅವರ ಅವರ ಕರ್ಮಗಳಿಗೆ ಅನುಗುಣವಾಗಿ **ಸ್ಯುಃ** ಇರುವವು. ।।೭।।

**ತಮಿಮಂ ಕಾಲರಶನಂ ಜನಂ ಪಶ್ಯಂತಿ ಸೂರಯಃ ।**
**ನ ಹೃಷ್ಯಂತಿ ನ ಶೋಚಂತಿ ತತ್ರ ಯೂಯಮಪಂಡಿತಾಃ ॥೮॥**

**ಸೂರಯಃ** ಜ್ಞಾನಿಗಳು **ತಂ ಇಮಂ** ಅಂತಹ ಈ **ಕಾಲರಶನಂ** ಕಾಲನಾಮಕ ಭಗವಂತನ ಪಾಶಕ್ಕೆ ಒಳಗಾದ **ಜನಂ** ಜನರನ್ನು **ಪಶ್ಯಂತಿ** ನೋಡುತ್ತಾರೆ. ಅದನ್ನು ನೋಡಿದ ಜ್ಞಾನಿಗಳು **ನ ಹೃಷ್ಯಂತಿ** ಸಂತೋಷವನ್ನು ಪಡುವುದಿಲ್ಲ **ನ ಶೋಚಂತಿ** ದುಃಖಪಡುವುದಿಲ್ಲ **ತತ್ರ** ಕಾಲನಾಮಕ ಭಗವಂತನ ವಿಷಯದಲ್ಲಿ **ಯೂಯಂ** ನೀವು **ಅಪಂಡಿತಾಃ** ಅಜ್ಞಾನಿಗಳು.

ಶ್ರೀಹರಿಯ ಸ್ವಾತಂತ್ರ್ಯವನ್ನು ತಿಳಿದ ಜ್ಞಾನಿಗಳು ಸುಖದುಃಖಗಳಿಂದ ಹಿಗ್ಗುವದಿಲ್ಲ ಕುಗ್ಗುವದಿಲ್ಲ ಅಜ್ಞಾನಿಗಳಾದ ನೀವು ದುಃಖವನ್ನು ಹೊಂದುತ್ತ ಇದ್ದೀರಿ ಎಂದರ್ಥ. ಇಲ್ಲವಾದರೇ ಈ ರೀತಿ ವ್ಯರ್ಥ ಮಾತನಾಡುತ್ತಿದ್ದಿಲ್ಲವೆಂದು ಭಾವ. ॥೮॥

ಅವತರಣಿಕಾ :- ಎಲ್ಲವೂ ಭಗವಂತನ ಅಧೀನವಾಗಿದೆ. ನಮ್ಮ ಅಧೀನವಾಗಿದೆ ಎಂದು ತಿಳಿಯುವ ನಿಮಗೆ ''ಶಿರೋ ಹರಿಷ್ಯೇ'' ಎಂಬುದಾಗಿ ಹೇಳುವುದು ಮೂರ್ಖಪ್ರಲಾಪವೇ ಆಗಿದೆ ಎಂದು ಬಲಿಯು ಹೇಳುತ್ತಿದ್ದಾನೆ-

**ನ ವಯಂ ಮನ್ಯಮಾನಾನಾಮಾತ್ಮಾನಂ ತತ್ರ ಕಾರಣಮ್ ।**
**ಗಿರೋ ವಃ ಸಾಧು ಶೋಚ್ಯಾನಾಂ ಗೃಹ್ಣೀಮೋ ಮರ್ಮತಾಡನಾಃ ॥೯॥**

**ವಯಂ** ಶ್ರೀಹರಿಯ ಸ್ವಾತಂತ್ರ್ಯವನ್ನು ಬಲ್ಲ ನಾವು **ತತ್ರ** ಜಯಾಪಜಯ ಮುಂತಾದವುಗಳಲ್ಲಿ **ಆತ್ಮಾನಂ** ತಮ್ಮನ್ನು **ಸಾಧನಂ** ಸ್ವತಂತ್ರಕಾರಣರನ್ನಾಗಿ **ಮನ್ಯಮಾನಾನಾಂ** ತಿಳಿದಿರುವ ಆದ್ದರಿಂದಲೇ **ಶೋಚ್ಯಾನಾಂ** ವ್ಯರ್ಥವಾಗಿ ದುರಭಿಮಾನಿಗಳು ಹಾಳಾಗುವರಲ್ಲ ಎಂದು ಶೋಚನೀಯರಾದ **ವಃ** ನಿಮ್ಮ **ಮರ್ಮತಾಡನಾಃ** ನಮ್ಮ ಮರ್ಮಸ್ಥಳಗಳನ್ನು ಭೇದಿಸುವ **ಗಿರಃ** ಮಾತುಗಳನ್ನು **ಸಾಧು** ಸರಿಯೆಂದು **ನ ಗೃಹ್ಣೀಮಃ** ತಿಳಿಯುವುದಿಲ್ಲ.

ಸತ್ಯ :- ಅಥವಾ **ಸಾಧುಶೋಚ್ಯಾನಾಂ** ಸಜ್ಜನರಿಂದ ಶೋಚನೀಯರಾದ ನಿಮ್ಮ ಮಾತುಗಳನ್ನು ನಾವು ಒಪ್ಪುವುದಿಲ್ಲವೆಂದರ್ಥ. ತಾವೇ ಸ್ವತಂತ್ರರೆಂದು ತಿಳಿದು ಅನ್ಯಾಯವಾಗಿ ಇವರು ಹಾಳಾಗುವರು ಅಯ್ಯೋ ಪಾಪ ಎಂದು ಭಗವದ್ಭಕ್ತರು ನಿಮ್ಮ ವಿಷಯದಲ್ಲಿ ಶೋಚಿಸುವರೆಂದರ್ಥ. ॥೯॥

**ಶ್ರೀಶುಕ ಉವಾಚ**

**ಪ್ರತ್ಯಾಕ್ಷಿಪ್ಯ ವಿಭುಂ ವೀರೋ ನಾರಾಚೈರ್ವೀರಮರ್ದನಃ ।**
**ಆಕರ್ಣಪೂರ್ಣೈರಹನದಾಕ್ಷೇಪೈರಾಹತಂ ಪುನಃ ॥೧೦॥**

**ವೀರಮರ್ದನಃ** ಪ್ರತಿವೀರರನ್ನು ಹಿಂಸಿಸುವ **ವೀರಃ** ಪರಾಕ್ರಮಿಯಾದ ಬಲಿಯು **ವಿಭುಂ** ಸಮರ್ಥರಾದ ಇಂದ್ರದೇವರನ್ನು **ಇತಿ** ಈ ರೀತಿಯಾಗಿ (ಮೇಲೆ ಹೇಳಿದಂತೆ) **ಆಕ್ಷಿಪ್ಯ** ತಿರಸ್ಕರಿಸಿ **ಆಕ್ಷೇಪೈಃ ಆಹತಂ** ತಿರಸ್ಕಾರವಚನದಿಂದ ತಾಡಿತನಾದವನನ್ನು **ಪುನಃ** ಮತ್ತೆ **ಆಕರ್ಣಪೂರ್ಣೈಃ** ಕಿವಿಯವರೆಗೆ ಎಳೆದು ಬಿಟ್ಟ **ನಾರಾಚೈಃ** ಬಾಣಗಳಿಂದ **ಅಹನತ್** ಹೊಡೆದನು. ॥೧೦॥

**ಆಕ್ಷೇಪೈಃ** ಎಂಬ ಸ್ಥಾನದಲ್ಲಿ **ಆಶುಗೈಃ** ಎಂದು ಪಠಿಸಿದ್ದಾರೆ. ಆ ಪಾಠದಲ್ಲಿ ವೇಗವಾಗಿ ಹೋಗುವ ಎಂದರ್ಥ. ನಾರಾಚೈಃ ಎಂಬುದಕ್ಕೆ ಆಶುಗೈಃ ಎಂಬುದು ವಿಶೇಷಣ ಎಂದು ತಿಳಿಯಬೇಕು. ॥೧೦॥

**ಏವಂ ನಿರಾಕೃತೋ ದೇವೋ ವೈರಿಣಾ ತಥ್ಯವಾದಿನಾ ।**
**ನಾಮೃಷ್ಯತ್ ತದಧಿಕ್ಷೇಪಂ ತೋತ್ರಾಹತ ಇವ ದ್ವಿಪಃ ॥೧೧॥**

**ದೇವಃ** ಇಂದ್ರದೇವರು **ತಥ್ಯವಾದಿನಾ** ಸತ್ಯವಾದ ಪ್ರಮೇಯವನ್ನು ಹೇಳಿದ **ವೈರಿಣಾ** ಶತ್ರುವಾದ ಬಲಿಯಿಂದ **ಏವಂ** ಮೇಲೆ ಹೇಳಿದ ರೀತಿಯಲ್ಲಿ **ನಿರಾಕೃತಃ** ನಿರಾಕರಿಸಲ್ಪಟ್ಟವರಾಗಿ **ತೋತ್ರಾಹತಃ** ಅಂಕುಶದಿಂದ ತಿವಿಯಲ್ಪಟ್ಟ **ದ್ವಿಪಃ ಇವ** ಆನೆಯಂತೆ **ತದಧಿಕ್ಷೇಪಂ** ಬಲಿಯು ಮಾಡಿದ ಧಿಕ್ಕಾರವನ್ನು **ನ ಅಮೃಷ್ಯತ್** ಸಹಿಸಲಿಲ್ಲ. ॥೧೧॥

**ಪ್ರಾಹರತ್ ಕುಲಿಶಂ ತಸ್ಮಾ ಅಮೋಘಂ ಪರಮರ್ದನಮ್ ।**
**ಸಯಾನೋ ನ್ಯಪತದ್ ಭೂಮೌ ಛಿನ್ನಪಕ್ಷ ಇವಾಚಲಃ ॥೧೨॥**

**ದೇವಃ** ಇಂದ್ರದೇವರು **ತಸ್ಮೈ** ಆ ಬಲಿಗಾಗಿ **ಪರಮರ್ದನಂ** ಶತ್ರುವನ್ನು ಮರ್ದನ ಮಾಡುವ **ಅಮೋಘಂ** ವ್ಯರ್ಥವಲ್ಲದ **ಕುಲಿಶಂ** ವಜ್ರಾಯುಧವನ್ನು **ಪ್ರಾಹರತ್** ಪ್ರಯೋಗಿಸಿದರು. ಆಗ ಬಲಿಯು **ಛಿನ್ನಪಕ್ಷಃ** ವಜ್ರಾಯುಧದಿಂದ ಕತ್ತರಿಸಿ ಹೋದ ರೆಕ್ಕೆಯುಳ್ಳ **ಅಚಲಃ ಇವ** ಪರ್ವತದಂತೆ **ಸಯಾನಃ** ವಿಮಾನಸಹಿತನಾಗಿ **ಭೂಮೌ ನ್ಯಪತತ್** ನೆಲದಲ್ಲಿ ಬಿದ್ದನು. ॥೧೨॥

**ಸಖಾಯಂ ಪತಿತಂ ದೃಷ್ಟ್ವಾ ಜಂಭೋ ಬಲಿಸಖಃ ಸುಹೃತ್ ।**
**ಅಭ್ಯಯಾತ್ ಸೌಹೃದಂ ಸಖ್ಯುರ್ಹತಸ್ಯಾಪಿ ಸಮಾಚರನ್ ॥೧೩॥**

**ಬಲಿಸಖಃ** ಬಲಿಯ ಸ್ನೇಹಿತನಾದ **ಸುಹೃತ್** ಕೇಳದೇ ಹಿತಮಾಡುವ **ಜಂಭಃ** ಜಂಭಾಸುರನು **ಸಖಾಯಂ** ಸ್ನೇಹಿತನಾದ ಬಲಿಯನ್ನು **ಪತಿತಂ** ಭೂಮಿಯಲ್ಲಿ ಬಿದ್ದವನನ್ನು **ದೃಷ್ಟ್ವಾ** ನೋಡಿ **ಹತಸ್ಯಾಽಪಿ** ಸತ್ತವನಿಗೂ **ಸಖ್ಯುಃ** ಸ್ನೇಹಿತನಿಗೆ **ಸ್ವಂ** ತನ್ನ **ಸೌಹೃದಂ** ಸ್ನೇಹವನ್ನು **ಆಚರನ್** ಕಾರ್ಯಕಾರಿಯಾಗಿ ಮಾಡುತ್ತ **ಅಭ್ಯಯಾತ್** ಇಂದ್ರದೇವರನ್ನು ಎದುರಿಸಿದನು.

ಸತ್ಯ ಃ- ಬಲೀ ಚ ಅಸೌ ಸಖಃ ಖಾನಿ ಇಂದ್ರಿಯಾಣಿ ತೈಃ ಸಹಿತಃ ಸಖಃ, ಸಹಿತಃ ಖೈರಿತಿ ಸಖಃ ಬಲಿಭಿಃ ಬಲವದ್ಭಿಃ ಇತಿ ಬಲಿಷ್ಠನಾದ ಗೆಳೆಯನಿಂದ ಸಹಿತನೆಂಬುದು ಯೋಗ್ಯತಾಲಭ್ಯವಾದ ಅರ್ಥ. ॥೧೩॥

**ಸ ಸಿಂಹವಾಹ ಆಸಾದ್ಯ ಗದಾಮುದ್ಯಮ್ಯ ರಂಹಸಾ ।**
**ಜತ್ರಾವತಾಡಯಚ್ಛಕ್ರಂ ಗಜಂ ಚ ಸುಮಹಾಬಲಃ ॥೧೪॥**

**ಸಿಂಹವಾಹಃ** ಸಿಂಹವೇ ವಾಹನವಾಗಿ ಉಳ್ಳ **ಸುಮಹಾಬಲಃ** ಅತ್ಯಂತ ಬಲಿಷ್ಠನಾದ **ಸಃ** ಜಂಭಾಸುರನು **ಆಸಾದ್ಯ** ಸಮೀಪಿಸಿ **ಗದಾಂ ಉದ್ಯಮ್ಯ** ಗದೆಯನ್ನು ಎತ್ತಿ **ರಂಹಸಾ** ವೇಗದಿಂದ **ಶಕ್ರಂ** ಇಂದ್ರದೇವರನ್ನು **ಜತ್ರೌ** ಕುತ್ತಿಗೆಯ ಮೂಲದಲ್ಲಿ **ಅತಾಡಯತ್** ಹೊಡೆದನು. **ಗಜಂ ಚ ಅತಾಡಯತ್** ಐರಾವತವನ್ನು ಕೂಡಾ ಹೊಡೆದನು. ॥೧೪॥

**ಗದಾಪ್ರಹಾರವ್ಯಥಿತೋ ಭೃಶಂ ವಿಹ್ವಲಿತೋ ಗಜಃ ।**
**ಜಾನುಭ್ಯಾಂ ಧರಣೀಂ ಸ್ಪೃಷ್ಟ್ವಾ ಕಶ್ಮಲಂ ಪರಮಂ ಯಯೌ ॥೧೫॥**

**ಗದಾಪ್ರಹಾರವ್ಯಥಿತಃ** ಗದೆಯ ಪೆಟ್ಟಿನಿಂದ ವ್ಯಥೆಗೊಂಡ **ಗಜಃ** ಐರಾವತವು **ಭೃಶಂ** ಬಹಳವಾಗಿ **ವಿಹ್ವಲಿತಃ ಸನ್** ಚಂಚಲವಾಗಿ ನಡುಗುತ್ತ **ಜಾನುಭ್ಯಾಂ** ಮೊಣಕಾಲುಗಳಿಂದ **ಧರಣೀಂ** ಭೂಮಿಯನ್ನು **ಸ್ಪೃಷ್ಟ್ವಾ** ಮುಟ್ಟಿ (ಊರಿಕೊಂಡು) **ಪರಮಂ** ಅತಿಶಯವಾದ **ಕಶ್ಮಲಂ** ಮೂರ್ಛೆಯನ್ನು **ಯಯೌ** ಹೊಂದಿತು. ॥೧೫॥

**ತತೋ ರಥೋ ಮಾತಲಿನಾ ಹರಿಭಿರ್ದಶಶತೈರ್ವೃತಃ ।**
**ಆನೀತೋ ದ್ವಿಪಮುತ್ಸೃಜ್ಯ ರಥಮಾರುರುಹೇ ವಿಭುಃ ॥೧೬॥**

**ತತಃ** ಐರಾವತವು ನೆಲಕ್ಕೆ ಕಾಲೂರಿದ ಮೇಲೆ **ಮಾತಲಿನಾ** ಇಂದ್ರನ ಸಾರಥಿಯಿಂದ **ಹರಿಭಿಃ ದಶಶತೈಃ ವೃತಃ** ಸಾವಿರ ಕುದುರೆಗಳಿಂದ ಕೂಡಿದ **ರಥಃ** ರಥವು **ಆನೀತಃ** ತರಲ್ಪಟ್ಟಿತು **ವಿಭುಃ** ಇಂದ್ರದೇವರು **ದ್ವಿಪಂ** ಐರಾವತವನ್ನು **ಉತ್ಸೃಜ್ಯ** ಬಿಟ್ಟು **ರಥಂ ಆರುರುಹೇ** ರಥವನ್ನು ಹತ್ತಿದರು. ॥೧೬॥

**ತಸ್ಯ ತತ್ ಪೂಜಯನ್ ಕರ್ಮ ಯಂತುರ್ದಾನವಸತ್ತಮಃ ।**
**ಶೂಲೇನ ಜ್ವಲತಾ ತಂ ತು ಸ್ಮಯಮಾನೋಽಹನನ್ ಮೃಧೇ ॥೧೭॥**

**ದಾನವಸತ್ತಮಃ** ದನುಪುತ್ರರಲ್ಲಿ ಉತ್ತಮನಾದ ಜಂಭಾಸುರನು **ತಸ್ಯ** ಇಂದ್ರನ **ಯಂತುಃ** ಸಾರಥಿಯ **ತತ್ ಕರ್ಮ** ಸಮಯೋಚಿತವಾದ ಆನೆಯು ಬಿದ್ದಾಗ ರಥ ತಂದುದನ್ನು **ಪೂಜಯನ್** ಪ್ರಶಂಸಿಸುತ್ತ **ಸ್ಮಯಮಾನಃ** ನಗುತ್ತ **ಮೃಧೇ** ಯುದ್ಧದಲ್ಲಿ **ತಂ ತು** ಆ ಮಾತಲಿಯನ್ನೂ **ಜ್ವಲತಾ ಶೂಲೇನ** ಬೆಂಕಿಯಂತೆ ಹೊಳೆಯುವ ಶೂಲದಿಂದ **ಅಹನತ್** ಹೊಡೆದನು. ॥೧೭॥

**ಸೇಹೇ ರುಜಂ ಸುದುರ್ಮರ್ಷಂ ಸತ್ವಮಾಲಂಬ್ಯ ಮಾತಲಿಃ ।**
**ಇಂದ್ರೋ ಜಂಭಸ್ಯ ಸಂಕ್ರುದ್ಧೋ ವಜ್ರೇಣಾಪಾಹರಚ್ಛಿರಃ ॥೧೮॥**

**ಮಾತಲಿಃ** ಮಾತಲಿಯು **ಸತ್ವಂ** ಶಾರೀರಬಲವನ್ನು **ಆಲಂಬ್ಯ** ಅವಲಂಬಿಸಿ **ಸುದುರ್ಮರ್ಷಂ** ಬೇರೆಯವರಿಂದ ಸಹಿಸಲಾಗದ **ರುಜಂ** ಶೂಲದ ಏಟಿನ ದುಃಖವನ್ನು **ಸೇಹೇ** ಸಹಿಸಿಕೊಂಡನು. **ಇಂದ್ರಃ** ಇಂದ್ರದೇವರು **ಸಂಕ್ರುದ್ಧಃ** ಬಹಳ ಕೋಪಗೊಂಡು **ವಜ್ರೇಣ** ವಜ್ರಾಯುಧದಿಂದ **ಜಂಭಸ್ಯ** ಜಂಭಾಸುರನ **ಶಿರಃ** ತಲೆಯನ್ನು **ಅಪಾಹರತ್** ಮುಂಡದಿಂದ ಬೇರ್ಪಡಿಸಿದರು. ॥೧೮॥

**ಜಂಭಂ ಶ್ರುತ್ವಾ ಹತಂ ತಸ್ಯ ಜ್ಞಾತಯೋ ನಾರದಾದೃಷೇಃ ।**
**ನಮುಚಿಃ ಸಬಲಃ ಪಾಕಸ್ತ್ರಯೋಽಪೇಯುಸ್ತ್ವರಾನ್ವಿತಾಃ ॥೧೯॥**

**ತಸ್ಯ** ಜಂಭನ **ಜ್ಞಾತಯಃ** ಸಂಬಂಧಿಗಳಾದ **ನಮುಚಿಃ ಬಲಃ ಪಾಕಃ** ನಮುಚಿ ಬಲ ಮತ್ತು ಪಾಕ ಎಂಬ **ತ್ರಯಃ** ಮೂರು ಜನರು **ನಾರದಾತ್ ಋಷೇಃ** ನಾರದ ಋಷಿಗಳಿಂದ **ಜಂಭಂ** ಜಂಭನನ್ನು **ಹತಂ ಶ್ರುತ್ವಾ** ಸತ್ತವನನ್ನಾಗಿ ಕೇಳಿ **ತ್ವರಾನ್ವಿತಾಃ** ವೇಗದಿಂದ ಕೂಡಿದವರಾಗಿ **ಉಪೇಯುಃ** ಬಂದರು. ॥೧೯॥

ಲಿಂಗೇರೀ :- ತ್ರಯಃ ಎಂಬುದರ ಬದಲಿಗೆ ತತ್ರ ಎಂಬ ಪಾಠವನ್ನು ಸಂಗ್ರಹಿಸಿ ಅದಕ್ಕೆ ಯುದ್ಧ ನಡೆದ ಸ್ಥಳದಲ್ಲಿ ಎಂದು ಅರ್ಥ. ॥೧೯॥

**ವಚೋಭಿಃ ಪರುಷೈರಿಂದ್ರಮರ್ದಯಂತೋಽಸ್ಯ ಮರ್ಮಸು ।**
**ಶರೈರವಾಕಿರನ್ ಮೇಘೋ ಧಾರಾಭಿರಿವ ಪರ್ವತಮ್ ॥೨೦॥**

ನಮುಚಿ ಮೊದಲಾದವರು **ಪರುಷೈಃ** ನಿಷ್ಠುರಗಳಾದ **ವಚೋಭಿಃ** ಮಾತುಗಳಿಂದ **ಇಂದ್ರಂ** ಇಂದ್ರನನ್ನು **ಮರ್ಮಸು ಅರ್ದಯಂತಃ** ಮರ್ಮ ಭೇದಿಸುತ್ತ **ಮೇಘಾಃ** ಮೋಡಗಳು **ಧಾರಾಭಿಃ** ಮಳೆಯಿಂದ **ಪರ್ವತಂ ಇವ** ಪರ್ವತವನ್ನು ತೊಯಿಸುವಂತೆ **ಶರೈಃ ಅವಾಕಿರನ್** ಬಾಣದ ಮಳೆ ಗರೆದರು. ॥೨೦॥

ಅವತರಣಿಕಾ :- ಬಲ ಮೊದಲಾದವರ ಪ್ರತ್ಯೇಕ ಪರಾಕ್ರಮ ಹೇಳುವರು-

**ಹರೀನ್ ದಶಶತಾನಾಜೌ ಹರ್ಯಶ್ವಸ್ಯ ಬಲಃ ಶರೈಃ ।**
**ತಾವದ್ಭಿರರ್ದಯಾಮಾಸ ಯುಗಪಲ್ಲಘುಹಸ್ತವಾನ್ ॥೨೧॥**

**ಲಘುಹಸ್ತವಾನ್** ಶೀಘ್ರದಲ್ಲಿ ಬಾಣಬಿಡಲು ಸಮರ್ಥವಾದ ಕೈಗಳುಳ್ಳ **ಬಲಃ** ಬಲಾಸುರನು **ಆಜೌ** ಯುದ್ಧದಲ್ಲಿ **ಹರ್ಯಶ್ವಸ್ಯ** ಇಂದ್ರದೇವರ **ದಶಶತಾನ್** ಒಂದು ಸಾವಿರ (ಹತ್ತು ನೂರು) **ಹರೀನ್** ಕುದುರೆಗಳನ್ನು **ತಾವದ್ಭಿಃ** ಅಷ್ಟೇ ಸಂಖ್ಯೆಯ **ಶರೈಃ** ಬಾಣಗಳಿಂದ **ಯುಗಪತ್** ಏಕ ಕಾಲದಲ್ಲಿ **ಅರ್ದಯಾಮಾಸ** ಹಿಂಸಿಸಿದನು. ॥೨೧॥

ಸತ್ಯ ಃ- ಬಲೀ ಚ ಅಸೌ ಸಖಃ ಖಾನಿ ಇಂದ್ರಿಯಾಣಿ ತೈಃ ಸಹಿತಃ ಸಖಃ, ಸಹಿತಃ ಖೈರಿತಿ ಸಖಃ ಬಲಿಭಿಃ ಬಲವದ್ಭಿಃ ಇತಿ ಬಲಿಷ್ಠನಾದ ಗೆಳೆಯನಿಂದ ಸಹಿತನೆಂಬುದು ಯೋಗ್ಯತಾಲಭ್ಯವಾದ ಅರ್ಥ. ॥೧೩॥

**ಸ ಸಿಂಹವಾಹ ಆಸಾದ್ಯ ಗದಾಮುದ್ಯಮ್ಯ ರಂಹಸಾ ।**
**ಜತ್ರಾವತಾಡಯಚ್ಛಕ್ರಂ ಗಜಂ ಚ ಸುಮಹಾಬಲಃ ॥೧೪॥**

**ಸಿಂಹವಾಹಃ** ಸಿಂಹವೇ ವಾಹನವಾಗಿ ಉಳ್ಳ **ಸುಮಹಾಬಲಃ** ಅತ್ಯಂತ ಬಲಿಷ್ಠನಾದ **ಸಃ** ಜಂಭಾಸುರನು **ಆಸಾದ್ಯ** ಸಮೀಪಿಸಿ **ಗದಾಂ ಉದ್ಯಮ್ಯ** ಗದೆಯನ್ನು ಎತ್ತಿ **ರಂಹಸಾ** ವೇಗದಿಂದ **ಶಕ್ರಂ** ಇಂದ್ರದೇವರನ್ನು **ಜತ್ರೌ** ಕುತ್ತಿಗೆಯ ಮೂಲದಲ್ಲಿ **ಅತಾಡಯತ್** ಹೊಡೆದನು. **ಗಜಂ ಚ ಅತಾಡಯತ್** ಐರಾವತವನ್ನು ಕೂಡಾ ಹೊಡೆದನು. ॥೧೪॥

**ಗದಾಪ್ರಹಾರವ್ಯಥಿತೋ ಭೃಶಂ ವಿಹ್ವಲಿತೋ ಗಜಃ ।**
**ಜಾನುಭ್ಯಾಂ ಧರಣೀಂ ಸ್ಪೃಷ್ಟ್ವಾ ಕಶ್ಮಲಂ ಪರಮಂ ಯಯೌ ॥೧೫॥**

**ಗದಾಪ್ರಹಾರವ್ಯಥಿತಃ** ಗದೆಯ ಪೆಟ್ಟಿನಿಂದ ವ್ಯಥೆಗೊಂಡ **ಗಜಃ** ಐರಾವತವು **ಭೃಶಂ** ಬಹಳವಾಗಿ **ವಿಹ್ವಲಿತಃ ಸನ್** ಚಂಚಲವಾಗಿ ನಡುಗುತ್ತ **ಜಾನುಭ್ಯಾಂ** ಮೊಣಕಾಲುಗಳಿಂದ **ಧರಣೀಂ** ಭೂಮಿಯನ್ನು **ಸ್ಪೃಷ್ಟ್ವಾ** ಮುಟ್ಟಿ (ಊರಿಕೊಂಡು) **ಪರಮಂ** ಅತಿಶಯವಾದ **ಕಶ್ಮಲಂ** ಮೂರ್ಛೆಯನ್ನು **ಯಯೌ** ಹೊಂದಿತು. ॥೧೫॥

**ತತೋ ರಥೋ ಮಾತಲಿನಾ ಹರಿಭಿರ್ದಶಶತೈರ್ವೃತಃ ।**
**ಆನೀತೋ ದ್ವಿಪಮುತ್ಸೃಜ್ಯ ರಥಮಾರುರುಹೇ ವಿಭುಃ ॥೧೬॥**

**ತತಃ** ಐರಾವತವು ನೆಲಕ್ಕೆ ಕಾಲೂರಿದ ಮೇಲೆ **ಮಾತಲಿನಾ** ಇಂದ್ರನ ಸಾರಥಿಯಿಂದ **ಹರಿಭಿಃ ದಶಶತೈಃ ವೃತಃ** ಸಾವಿರ ಕುದುರೆಗಳಿಂದ ಕೂಡಿದ **ರಥಃ** ರಥವು **ಆನೀತಃ** ತರಲ್ಪಟ್ಟಿತು **ವಿಭುಃ** ಇಂದ್ರದೇವರು **ದ್ವಿಪಂ** ಐರಾವತವನ್ನು **ಉತ್ಸೃಜ್ಯ** ಬಿಟ್ಟು **ರಥಂ ಆರುರುಹೇ** ರಥವನ್ನು ಹತ್ತಿದರು. ॥೧೬॥

**ತಸ್ಯ ತತ್ ಪೂಜಯನ್ ಕರ್ಮ ಯಂತುರ್ದಾನವಸತ್ತಮಃ ।**
**ಶೂಲೇನ ಜ್ವಲತಾ ತಂ ತು ಸ್ಮಯಮಾನೋಽಹನನ್ ಮೃಧೇ ॥೧೭॥**

**ದಾನವಸತ್ತಮಃ** ದನುಪುತ್ರರಲ್ಲಿ ಉತ್ತಮನಾದ ಜಂಭಾಸುರನು **ತಸ್ಯ** ಇಂದ್ರನ **ಯಂತುಃ** ಸಾರಥಿಯ **ತತ್ ಕರ್ಮ** ಸಮಯೋಚಿತವಾದ ಆನೆಯು ಬಿದ್ದಾಗ ರಥ ತಂದುದನ್ನು **ಪೂಜಯನ್** ಪ್ರಶಂಸಿಸುತ್ತ **ಸ್ಮಯಮಾನಃ** ನಗುತ್ತ **ಮೃಧೇ** ಯುದ್ಧದಲ್ಲಿ **ತಂ ತು** ಆ ಮಾತಲಿಯನ್ನೂ **ಜ್ವಲತಾ ಶೂಲೇನ** ಬೆಂಕಿಯಂತೆ ಹೊಳೆಯುವ ಶೂಲದಿಂದ **ಅಹನತ್** ಹೊಡೆದನು. ॥೧೭॥

**ಸೇಹೇ ರುಜಂ ಸುದುರ್ಮರ್ಷಂ ಸತ್ವಮಾಲಂಬ್ಯ ಮಾತಲಿಃ ।**
**ಇಂದ್ರೋ ಜಂಭಸ್ಯ ಸಂಕ್ರುದ್ಧೋ ವಜ್ರೇಣಾಪಾಹರಚ್ಛಿರಃ ॥೧೮॥**

**ಮಾತಲಿಃ** ಮಾತಲಿಯು **ಸತ್ವಂ** ಶಾರೀರಬಲವನ್ನು **ಆಲಂಬ್ಯ** ಅವಲಂಬಿಸಿ **ಸುದುರ್ಮರ್ಷಂ** ಬೇರೆಯವರಿಂದ ಸಹಿಸಲಾಗದ **ರುಜಂ** ಶೂಲದ ಏಟಿನ ದುಃಖವನ್ನು **ಸೇಹೇ** ಸಹಿಸಿಕೊಂಡನು. **ಇಂದ್ರಃ** ಇಂದ್ರದೇವರು **ಸಂಕ್ರುದ್ಧಃ** ಬಹಳ ಕೋಪಗೊಂಡು **ವಜ್ರೇಣ** ವಜ್ರಾಯುಧದಿಂದ **ಜಂಭಸ್ಯ** ಜಂಭಾಸುರನ **ಶಿರಃ** ತಲೆಯನ್ನು **ಅಪಾಹರತ್** ಮುಂಡದಿಂದ ಬೇರ್ಪಡಿಸಿದರು. ॥೧೮॥

**ಜಂಭಂ ಶ್ರುತ್ವಾ ಹತಂ ತಸ್ಯ ಜ್ಞಾತಯೋ ನಾರದಾದೃಷೇಃ ।**
**ನಮುಚಿಃ ಸಬಲಃ ಪಾಕಸ್ತ್ರಯೋಪೇಯುಸ್ತ್ವರಾನ್ವಿತಾಃ ॥೧೯॥**

**ತಸ್ಯ** ಜಂಭನ **ಜ್ಞಾತಯಃ** ಸಂಬಂಧಿಗಳಾದ **ನಮುಚಿಃ ಬಲಃ ಪಾಕಃ** ನಮುಚಿ ಬಲ ಮತ್ತು ಪಾಕ ಎಂಬ **ತ್ರಯಃ** ಮೂರು ಜನರು **ನಾರದಾತ್ ಋಷೇಃ** ನಾರದ ಋಷಿಗಳಿಂದ **ಜಂಭಂ** ಜಂಭನನ್ನು **ಹತಂ ಶ್ರುತ್ವಾ** ಸತ್ತವನನ್ನಾಗಿ ಕೇಳಿ **ತ್ವರಾನ್ವಿತಾಃ** ವೇಗದಿಂದ ಕೂಡಿದವರಾಗಿ **ಉಪೇಯುಃ** ಬಂದರು. ॥೧೯॥

ಲಿಂಗೇರೀ ಃ- ತ್ರಯಃ ಎಂಬುದರ ಬದಲಿಗೆ ತತ್ರ ಎಂಬ ಪಾಠವನ್ನು ಸಂಗ್ರಹಿಸಿ ಅದಕ್ಕೆ ಯುದ್ಧ ನಡೆದ ಸ್ಥಳದಲ್ಲಿ ಎಂದು ಅರ್ಥ. ॥೧೯॥

**ವಚೋಭಿಃ ಪರುಷೈರಿಂದ್ರಮರ್ದಯಂತೋಽಸ್ಯ ಮರ್ಮಸು ।**
**ಶರೈರವಾಕಿರನ್ ಮೇಘೋ ಧಾರಾಭಿರಿವ ಪರ್ವತಮ್ ॥೨೦॥**

ನಮುಚಿ ಮೊದಲಾದವರು **ಪರುಷೈಃ** ನಿಷ್ಠುರಗಳಾದ **ವಚೋಭಿಃ** ಮಾತುಗಳಿಂದ **ಇಂದ್ರಂ** ಇಂದ್ರನನ್ನು **ಮರ್ಮಸು ಅರ್ದಯಂತಃ** ಮರ್ಮ ಭೇದಿಸುತ್ತ **ಮೇಘಾಃ** ಮೋಡಗಳು **ಧಾರಾಭಿಃ** ಮಳೆಯಿಂದ **ಪರ್ವತಂ ಇವ** ಪರ್ವತವನ್ನು ತೊಯಿಸುವಂತೆ **ಶರೈಃ ಅವಾಕಿರನ್** ಬಾಣದ ಮಳೆ ಗರೆದರು. ॥೨೦॥

ಅವತರಣಿಕಾ ಃ- ಬಲ ಮೊದಲಾದವರ ಪ್ರತ್ಯೇಕ ಪರಾಕ್ರಮ ಹೇಳುವರು-

**ಹರೀನ್ ದಶಶತಾನಾಜೌ ಹರ್ಯಶ್ವಸ್ಯ ಬಲಃ ಶರೈಃ ।**
**ತಾವದ್ಭಿರರ್ದಯಾಮಾಸ ಯುಗಪಲ್ಲಘುಹಸ್ತವಾನ್ ॥೨೧॥**

**ಲಘುಹಸ್ತವಾನ್** ಶೀಘ್ರದಲ್ಲಿ ಬಾಣಬಿಡಲು ಸಮರ್ಥವಾದ ಕೈಗಳುಳ್ಳ **ಬಲಃ** ಬಲಾಸುರನು **ಆಜೌ** ಯುದ್ಧದಲ್ಲಿ **ಹರ್ಯಶ್ವಸ್ಯ** ಇಂದ್ರದೇವರ **ದಶಶತಾನ್** ಒಂದು ಸಾವಿರ (ಹತ್ತು ನೂರು) **ಹರೀನ್** ಕುದುರೆಗಳನ್ನು **ತಾವದ್ಭಿಃ** ಅಷ್ಟೇ ಸಂಖ್ಯೆಯ **ಶರೈಃ** ಬಾಣಗಳಿಂದ **ಯುಗಪತ್** ಏಕ ಕಾಲದಲ್ಲಿ **ಅರ್ದಯಾಮಾಸ** ಹಿಂಸಿಸಿದನು. ॥೨೧॥

**ಶತಾಭ್ಯಾಂ ಮಾತಲಿಂ ಪಾಕೋ ರಥಂ ಸಾವಯವಂ ಪೃಥಕ್ ।**
**ಸಕೃತ್ಸಂಧಾನಮೋಕ್ಷೇಣ ತದದ್ಭುತಮಭೂದ್ ರಣೇ ॥೨೨॥**

**ಪಾಕಃ** ಪಾಕಾಸುರನು **ಸಾವಯವಂ** ಎಲ್ಲ ಅವಯವಗಳಿಂದ ಕೂಡಿದ **ಮಾತಲಿಂ** ಮಾತಲಿಯನ್ನು **ರಥಂ** ರಥವನ್ನು **ಪೃಥಕ್ ಶತಾಭ್ಯಾಂ** ಬೇರೇ ಬೇರೆಯಾಗಿ ನೂರು ಬಾಣಗಳಿಂದ (ಮಾತಲಿಯನ್ನು ನೂರು ಬಾಣಗಳಿಂದ ಮತ್ತು ರಥವನ್ನು ನೂರು ಬಾಣಗಳಿಂದ ಒಟ್ಟು ಎರಡುನೂರು ಬಾಣಗಳಿಂದ ಎಂದು ಅರ್ಥ) ಹೊಡೆದನು **ರಣೇ** ಯುದ್ಧದಲ್ಲಿ **ತತ್** ಪಾಕಾಸುರನು ಒಂದು ನೂರು ಬಾಣದಿಂದ ಮಾತಲಿಯ ಎಲ್ಲ ಅವಯವಗಳನ್ನು ಮತ್ತೊಂದು ನೂರು ಬಾಣಗಳಿಂದ ರಥದ ಎಲ್ಲ ಭಾಗಗಳನ್ನು ಹೊಡೆದ ಕರ್ಮವು ಕೆಲವರು (ಎರಡೆರಡು ನೂರು ಬಾಣಗಳಿಂದ ಎಂದರ್ಥ ಮಾಡಿರುವರು) **ಸಕೃತ್** ಒಂದೇ ಸಲ ಬಿಲ್ಲಿನಲ್ಲಿ ಸಂಧಾನಮಾಡಿ **ಮೋಕ್ಷೇಣ** ಬಿಡುವುದರಿಂದ **ಅದ್ಭುತಂ ಅಭೂತ್** ಆಶ್ಚರ್ಯಕರವಾಗಿತ್ತು.

ಎರಡುನೂರು ಬಾಣಗಳನ್ನು ಏಕಕಾಲದಲ್ಲಿ ಹೆದೆ ಏರಿಸಿ ಒಂದೇ ಕಾಲದಲ್ಲಿ ಬಿಟ್ಟು ಅದರಲ್ಲಿ ಒಂದು ನೂರು ಸಾರಥಿಗೆ ಒಂದು ನೂರು ರಥಕ್ಕೆ ಎಲ್ಲ ಅವಯವಗಳಿಗೆ ಗಾಯವಾಗಿದ್ದು ಆಶರ್ಯಕರವೆಂದು ಭಾವ. ॥೨೨॥

**ನಮುಚಿಃ ಪಂಚದಶಭಿಃ ಸ್ವರ್ಣಪುಂಖೈರ್ಮಹೇಷುಭಿಃ ।**
**ಆಹತ್ಯ ವ್ಯನದತ್ ಸಂಖ್ಯೇ ಸತೋಯ ಇವ ತೋಯದಃ ॥೨೩॥**

**ನಮುಚಿಃ** ನಮುಚಿ ಎಂಬ ಅಸುರನು **ಸ್ವರ್ಣಪುಂಖೈಃ** ಬಂಗಾರದಿಂದ ಕೆತ್ತಿದ ಹೆದೆ ಏರಿಸುವ ತುದಿಯುಳ್ಳ **ಪಂಚದಶಭಿಃ** ಹದಿನೈದು ಸಂಖ್ಯೆಯುಳ್ಳ **ಮಹೇಷುಭಿಃ** ದೊಡ್ಡಬಾಣಗಳಿಂದ **ಸಂಖ್ಯೇ** ಯುದ್ಧದಲ್ಲಿ **ಆಹತ್ಯ** ಇಂದ್ರದೇವರನ್ನು ಹೊಡೆದು **ಸತೋಯಃ** ನೀರು ತುಂಬಿದ **ತೋಯದಃ ಇವ** ಮೋಡದಂತೆ **ವ್ಯನದತ್** ಸಿಂಹನಾದ ಮಾಡಿದನು. ॥೨೩॥

**ಸರ್ವತಃ ಶರಕೂಟೇನ ಶಕ್ರಂ ಸರಥಸಾರಥಿಮ್ ।**
**ಛಾದಯಾಮಾಸುರಸುರಾಃ ಪ್ರಾವೃಟ್‌ಸೂರ್ಯಮಿವಾಂಬುದಾಃ ॥೨೪॥**

**ಅಸುರಾಃ** ಬಲ, ಪಾಕ, ನಮುಚಿಗಳೆಂಬ ದೈತ್ಯರು **ಸರಥಸಾರಥಿಂ** ರಥ ಮತ್ತು ಸಾರಥಿಯಿಂದ ಸಹಿತನಾದ **ಶಕ್ರಂ** ಇಂದ್ರನನ್ನು **ಸರ್ವತಃ** ಎಲ್ಲ ಕಡೆಗಳಿಂದಲೂ **ಅಂಬುದಾಃ** ಮೋಡಗಳು **ಪ್ರಾವೃಟ್‌ಸೂರ್ಯಂ ಇವ** ಮಳೆಗಾಲದ ಸೂರ್ಯನನ್ನು ಮುಚ್ಚುವಂತೆ **ಶರಕೂಟೇನ** ಬಾಣಸಮೂಹದಿಂದ **ಛಾದಯಾಮಾಸುಃ** ಮುಚ್ಚಿದರು. ಇಂದ್ರನು ಕಾಣದಂತೆ ಮಾಡಿದರೆಂದರ್ಥ. ॥೨೪॥

**ಅಲಕ್ಷಯಂತಸ್ತಮತೀವ ವಿಹ್ವಲಾ**
**ವಿಚುಕ್ರುಶುರ್ದೇವಗಣಾಃ ಸಹಾನುಗಾಃ ।**
**ಅನಾಯಕಾಃ ಶತ್ರುಬಲೇನ ನಿರ್ಜಿತಾ**
**ವಣಿಕ್ಪಥಾ ಭಿನ್ನನವೋ ಯಥಾರ್ಣವೇ** ॥೨೫॥

**ತಂ** ಇಂದ್ರನನ್ನು **ಅಲಕ್ಷಯಂತಃ** ಕಾಣದ ಆದ್ದರಿಂದಲೇ **ಅತೀವ ವಿಹ್ವಲಾಃ** ಬಹಳ ಕಾತರರಾದ **ಸಹಾನುಗಾಃ** ಅನುಚರರಿಂದ ಸಹಿತರಾದ **ದೇವಗಣಾಃ** ದೇವತಾಸಮೂಹಗಳು **ಅನಾಯಕಾಃ** ರಕ್ಷಿಸುವ ಸ್ವಾಮಿ ಇಲ್ಲದವರಾಗಿ **ಶತ್ರುಬಲೇನ ನಿರ್ಜಿತಾಃ** ಶತ್ರುಗಳಾದ ದೈತ್ಯರ ಸೈನ್ಯದಿಂದ ಸೋತವರಾಗಿ **ಅರ್ಣವೇ** ಸಮುದ್ರದಲ್ಲಿ **ಭಿನ್ನನವಾಃ** ಒಡೆದು ಹೋದ ನೌಕೆಯುಳ್ಳ **ವಣಿಕ್‌ಪಥಾಃ ಇವ** ವ್ಯಾಪಾರಿಗಳ ಗುಂಪಿನಂತೆ **ವಿಚುಕ್ರುಶುಃ** ಕೂಗಿಕೊಂಡರು.

ಸತ್ಯ ಃ- ''ಅಪಿ ಮಾಷಂ ಮಷಂ ಕುರ್ಯಾತ್ ಛಂದೋಭಂಗಂ ನ ಕಾರಯೇತ್'' ಎಂದಿರುವುದರಿಂದ **ಭಿನ್ನನವಃ** ಎಂದಿದ್ದಾರೆ. **ಭಿನ್ನನಾವಃ** ಎಂದರ್ಥ. ವಣಿಕ್ಪಥಾ ಎಂದದ್ದರಿಂದ ಬಹಳ ದಿನ ವ್ಯಾಪಾರಮಾಡಿ ಅಭ್ಯಾಸವಿರುವುದರಿಂದ ತತ್ಕಾಲದಲ್ಲಿ ಉಚಿತವಾದ ಆಲೋಚನೆಯಿಂದ ಹೇಗೋ ಪಾರಾಗಬಹುದು. ಆದರೆ ಈ ವ್ಯಾಪಾರಿಗಳು ಹೊಸಬರು. ಹೇಗೆ ಪಾರಾದರು? ಎಂದು ಸೂಚಿಸುವರು. ॥೨೫॥

**ತತಸ್ತುರಾಷಾಡಿಷುಬದ್ಧಪಂಜರಾದ್**
**ವಿನಿರ್ಗತಃ ಸಾಶ್ವರಥಧ್ವಜಾಗ್ರಣೀಃ ।**
**ಬಭೌ ದಿಶಃ ಖಂ ಪೃಥಿವೀಂ ಚ ರೋಚಯನ್**
**ಸ್ವತೇಜಸಾ ಸೂರ್ಯ ಇವ ಕ್ಷಪಾತ್ಯಯೇ** ॥೨೬॥

**ತತಃ** ದೇವತೆಗಳು ಹೆದರಿ ಕೂಗಿಕೊಂಡ ನಂತರ **ಇಷುಬದ್ಧಪಂಜರಾತ್** ಶತ್ರುಗಳ ಬಾಣಗಳಿಂದ ನಿರ್ಮಿತವಾದ ಪಂಜರದಿಂದ **ವಿನಿರ್ಗತಃ** ಹೊರಬಂದ **ಸಾಶ್ವರಥಧ್ವಜಾಗ್ರಣೀಃ** ಕುದುರೆ-ರಥ-ಧ್ವಜ-ಸಾರಥಿಸಹಿತರಾದ **ತುರಾಷಾಟ್** ಶತ್ರುಗಳ ವೇಗವನ್ನು ಸಹಿಸುವ **ಕ್ಷಪಾತ್ಯಯೇ** ರಾತ್ರಿಯು ಕಳೆಯುತ್ತಿರಲು **ಸ್ವತೇಜಸಾ** ತನ್ನ ಕಾಂತಿಯಿಂದ **ಸೂರ್ಯಃ ಇವ** ಸೂರ್ಯನು ಪ್ರಕಾಶಿಸುವಂತೆ **ದಿಶಃ** ದಿಕ್ಕುಗಳನ್ನು **ಖಂ** ಆಕಾಶವನ್ನು **ಪೃಥಿವೀಂ** ಭೂಮಿಯನ್ನು **ರೋಚಯನ್** ಪ್ರಕಾಶಗೊಳಿಸುತ್ತ **ಬಭೌ** ಶೋಭಿಸಿದನು.

ಸತ್ಯ ಃ- ತುರಂ ವೇಗವಂತಂ ಸಾಹಯತಿ ಅಭಿಭಾವಯತಿ ಇತಿ ತುರಾಷಾಟ್ ಎಂದು ವಿಗ್ರಹ ಮಾಡಿಕೊಳ್ಳಬೇಕು. ವೇಗ ಉಳ್ಳ ಶತ್ರುಗಳನ್ನು ಸೋಲಿಸುವ ಇಂದ್ರದೇವರು ಎಂದು ಅರ್ಥ.

''ತುರಾಷಾಣ್ ಮೇಘವಾಹನಃ'' ''ತ್ರಿಯಾಮಾ ಕ್ಷಣದಾಕ್ಷಪಾಃ'' ''ಅನಂತಂ ಸುರವರ್ತ್ಮ ಖಂ'' ಹೀಗೆ ಕೋಶಗಳಿವೆ. ।।೨೬।।

**ನಿರೀಕ್ಷ್ಯ ಪೃತನಾಂ ದೇವಃ ಪರೈರಭ್ಯರ್ದಿತಾಂ ರಣೇ ।**
**ಉದಯಚ್ಛದ್ ರಿಪೂನ್ ಹಂತುಂ ವಜ್ರಂ ವಜ್ರಧರೋ ರುಷಾ ।।೨೭।।**

**ವಜ್ರಧರಃ** ವಜ್ರಾಯುಧವನ್ನು ಧರಿಸಿರುವ **ದೇವಃ** ಇಂದ್ರನು **ರಣೇ** ಯುದ್ಧದಲ್ಲಿ **ಪರೈಃ** ಶತ್ರುಗಳಿಂದ **ಅಭ್ಯರ್ದಿತಾಂ** ಸಂಪೂರ್ಣವಾಗಿ ಸೋಲಿಸಲ್ಪಟ್ಟ **ಪೃತನಾಂ** ತಮ್ಮ ಸೈನ್ಯವನ್ನು **ನಿರೀಕ್ಷ್ಯ** ನೋಡಿ **ರುಷಾ** ಸಿಟ್ಟಿನಿಂದ **ರಿಪುಂ** ಶತ್ರುವನ್ನು **ಹಂತುಂ** ಕೊಲ್ಲಲು **ವಜ್ರಂ** ವಜ್ರಾಯುಧವನ್ನು **ಉದಯಚ್ಛತ್** ಮೇಲೆಕ್ಕೆತ್ತಿದನು. ।।೨೭।।

**ಸ ತೇನೈವಾಷ್ಟಧಾರೇಣ ಶಿರಸೀ ಬಲಪಾಕಯೋಃ ।**
**ಜ್ಞಾತೀನಾಂ ಪಶ್ಯತಾಂ ರಾಜನ್ ಜಹಾರ ಜನಯನ್ ಭಯಮ್ ।।೨೮।।**

**ಹೇ ರಾಜನ್** ಪರೀಕ್ಷಿತನೇ **ಸಃ** ಇಂದ್ರದೇವರು **ಅಷ್ಟಧಾರೇಣ** ಎಂಟು ಅರಗಳುಳ್ಳ **ತೇನ ಏವ** ಆ ವಜ್ರಾಯುಧದಿಂದಲೇ **ಬಲಪಾಕಯೋಃ** ಬಲ ಮತ್ತು ಪಾಕರೆಂಬ ರಾಕ್ಷಸರ **ಶಿರಸೀ** ತಲೆಗಳನ್ನು **ಪಶ್ಯತಾಂ ಜ್ಞಾತೀನಾಂ** ನೋಡುತ್ತಿರುವ ಬಂಧುಗಳಿಗೆ **ಭಯಂ ಜನಯನ್** ಭಯವನ್ನು ಹುಟ್ಟಿಸುವವರಾಗಿ **ಜಹಾರ** ಅಪಹರಿಸಿದರು. ತಲೆಯನ್ನು ಕತ್ತರಿಸಿದರು ಎಂದರ್ಥ. ।।೨೮।।

**ನಮುಚಿಸ್ತದ್ವಧಂ ದೃಷ್ಟ್ವಾ ಶೋಕಾಮರ್ಷರುಷಾನ್ವಿತಃ ।**
**ಜಿಘಾಂಸುರಿಂದ್ರಂ ನೃಪತೇ ಚಕಾರ ಪರಮೋದ್ಯಮಮ್ ।।೨೯।।**

**ಹೇ ನೃಪತೇ** ರಾಜನೇ **ತದ್ವಧಂ** ಬಲ-ಪಾಕರ ಸಂಹಾರವನ್ನು **ದೃಷ್ಟ್ವಾ** ನೋಡಿ **ನಮುಚಿಃ** ನಮುಚಿ ಎಂಬ ಅಸುರನು **ಶೋಕಾಮರ್ಷರುಷಾನ್ವಿತಃ** ದುಃಖ-ಅಸಹನೆ-ಸಿಟ್ಟಿನಿಂದ ಕೂಡಿದವನಾಗಿ **ಇಂದ್ರಂ** ಇಂದ್ರನನ್ನು **ಜಿಘಾಂಸುಃ** ಕೊಲ್ಲಲು ಬಯಸಿ **ಪರಮೋದ್ಯಮಂ ಚಕಾರ** ಅತಿಶಯವಾದ ಪ್ರಯತ್ನ ಮಾಡಿದನು. ।।೨೯।।

**ಅಶ್ಮಸಾರಮಯಂ ಶೂಲಂ ಘಂಟಾವದ್ಧೇಮಭೂಷಣಮ್ ।**
**ಪ್ರಗೃಹ್ಯಾಭ್ಯದ್ರವತ್ ಕ್ರುದ್ಧೋ ನಮುಚಿರ್ದಾನವೋತ್ತಮಃ ।।೩೦।।**

**ದಾನವೋತ್ತಮಃ** ದೈತ್ಯಶ್ರೇಷ್ಠನಾದ **ನಮುಚಿಃ** ನಮುಚಿಯು **ಕ್ರುದ್ಧಃ** ಸಿಟ್ಟಾಗಿ **ಅಶ್ಮಸಾರಮಯಂ** ಕಬ್ಬಿಣದಿಂದ ನಿರ್ಮಿತವಾದ **ಘಂಟಾವತ್** ಘಂಟೆಗಳನ್ನು ಕಟ್ಟಿರುವ **ಹೇಮಭೂಷಣಂ** ಬಂಗಾರದಿಂದ ಅಲಂಕರಿಸಿದ **ಶೂಲಂ** ಶೂಲವನ್ನು **ಪ್ರಗೃಹ್ಯ** ಹಿಡಿದುಕೊಂಡು **ಅಭ್ಯದ್ರವತ್** ಇಂದ್ರನ ಮೇಲೆ ಎರಗಿದನು. ।।೩೦।।

**ತದಾವಿದ್ಧ್ಯ ಮಹಾವೀರ್ಯೋ ಹತೋಽಸೀತಿ ವಿತರ್ಜಯನ್ ।**
**ಪ್ರಾಹಿಣೋದ್ದೇವರಾಜಾಯ ನಿನದನ್ ಮೃಗರಾಡಿವ ॥೩೧॥**

**ಮಹಾವೀರ್ಯಃ** ಬಹುಪರಾಕ್ರಮಿಯಾದ ನಮುಚಿಯು **ತತ್** ಆ ಶೂಲವನ್ನು **ಆವಿದ್ಧ್ಯ** ತಿರುಗಿಸಿ **ಹತಃ ಅಸಿ** ನೀನು ಮೃತನಾದಿ ಎಂದು ಹೇಳುತ್ತಾ **ವಿತರ್ಜಯನ್** ವಿಶೇಷವಾಗಿ ನಿಂದಿಸುತ್ತ ಹೆದರಿಸುತ್ತ (**ವಿಸರ್ಜಯನ್** ಎಂಬ ಪಾಠದಲ್ಲಿ ಪ್ರಯೋಗಿಸುತ್ತ) **ಮೃಗರಾಟ್ ಇವ** ಸಿಂಹದಂತೆ **ನಿನದನ್** ಗರ್ಜಿಸುತ್ತ **ದೇವರಾಜಾಯ** ಇಂದ್ರನಿಗೆ **ಪ್ರಾಹಿಣೋತ್** ಎಸೆದನು. ॥೩೧॥

**ತದಾಪತದ್ ಗಗನತಲೇ ಮಹಾಜವಂ**
**ನಿಚಿಚ್ಛಿದೇ ಹರಿರಿಷುಭಿಃ ಸಹಸ್ರಧಾ ।**
**ತಮಾಹನನ್ ನೃಪ ಕುಲಿಶೇನ ಕಂಧರೇ**
**ರುಷಾಽನ್ವಿತಸ್ತ್ರಿದಶಪತಿಃ ಶಿರೋ ಹರನ್ ॥೩೨॥**

**ಹೇ ನೃಪ** ರಾಜನೇ **ತ್ರಿದಶಪತಿಃ** ದೇವತೆಗಳಿಗೆ ರಾಜನಾದ **ಹರಿಃ** ಇಂದ್ರನು **ಗಗನತಲೇ** ಆಕಾಶದಲ್ಲಿ **ಆಪತತ್** ಬರುತ್ತಿದ್ದ **ಮಹಾಜವಂ** ಅತ್ಯಂತ ವೇಗ ಉಳ್ಳ **ತತ್** ಆ ಶೂಲವನ್ನು **ಇಷುಭಿಃ** ಬಾಣಗಳಿಂದ **ಸಹಸ್ರಧಾ** ಸಾವಿರ ಹೋಳಾಗಿ **ನಿಚಿಚ್ಛಿದೇ** ಸಂಪೂರ್ಣವಾಗಿ ಕತ್ತರಿಸಿದನು ಮತ್ತು **ರುಷಾನ್ವಿತಃ** ಕೋಪದಿಂದ ಕೂಡಿದವನಾಗಿ **ಶಿರಃ ಹರನ್** ನಮುಚಿಯ ತಲೆಯನ್ನು ತೆಗೆಯುವವನಾಗಿ **ತಂ** ಆ ನಮುಚಿಯನ್ನು **ಕಂಧರೇ** ಕುತ್ತಿಗೆಯಲ್ಲಿ **ಕುಲಿಶೇನ** ವಜ್ರಾಯುಧದಿಂದ **ಅಹನತ್** ಹೊಡೆದನು. ॥೩೨॥

**ತತೋಽಸ್ಯ ನ ತ್ವಚಮಪಿ ವಜ್ರ ಊರ್ಜಿತೋ**
**ಬಿಭೇದ ಯಃ ಸುರಪತಿನೌಜಸೇರಿತಃ ।**
**ತದದ್ಭುತಃ ಪರಮತಿವೀರ್ಯವೃತ್ರಭಿತ್**
**ತಿರಸ್ಕೃತೋ ನಮುಚಿಶಿರೋಧರತ್ವಚಾ ॥೩೩॥**

**ಯಃ** ಯಾವ ವಜ್ರಾಯುಧವು **ಸುರಪತಿನಾ** ಇಂದ್ರದೇವರಿಂದ **ಓಜಸಾ** ಬಲಪೂರ್ವಕವಾಗಿ **ಈರಿತಃ ಅಪಿ** ಪ್ರಯೋಗಿಸಲ್ಪಟ್ಟಿದ್ದರೂ **ಊರ್ಜಿತಃ ಅಪಿ** ಹೆಚ್ಚು ಶಕ್ತಿಯುಳ್ಳದ್ದಾಗಿದ್ದರೂ ಆ ವಜ್ರಾಯುಧವು **ಅಸ್ಯ** ಈ ನಮುಚಿಯ **ತ್ವಚಂ ಅಪಿ** ಕುತ್ತಿಗೆಯ ಚರ್ಮವನ್ನು ಕೂಡ **ನ ಬಿಭೇದ** ಭೇದಿಸಲಿಲ್ಲ. **ತತ್** ಅದು **ಪರಂ ಅದ್ಭುತಂ** ಅತಿ ಆಶ್ಚರ್ಯಕರವೆನಿಸಿತು. ಎಂದಿಗೂ ಹೀಗೆ ವಜ್ರಾಯುಧವು ವ್ಯರ್ಥವಾಗಿರಲಿಲ್ಲವೆಂದು ಅಭಿಪ್ರಾಯ. **ಅತಿವೀರ್ಯವೃತ್ರಭಿತ್** ಬಹುಪರಾಕ್ರಮಿಯಾದ ವೃತ್ರಾಸುರನನ್ನು ಸಂಹರಿಸಿದ ಇಂದ್ರದೇವರು **ನಮುಚಿಶಿರೋಧರತ್ವಚಾ** ನಮುಚಿಯ ಕುತ್ತಿಗೆಯ ಚರ್ಮದಿಂದ **ತಿರಸ್ಕೃತಃ ಅಭೂತ್** ಅಪಮಾನಿತರಾದರು.

ವೃತ್ರಾಸುರನನ್ನು ಕೊಂದ ವಜ್ರಾಯುಧದಿಂದ ನಮುಚಿಯ ಕುತ್ತಿಗೆ ಚರ್ಮವನ್ನು ಕೂಡ ಕತ್ತರಿಸಲಾಗಲಿಲ್ಲವಾದ್ದರಿಂದ ಇದು ಅಪಮಾನಕರವೆಂದು ಭಾವ. ।।೩೩।।

**ತಸ್ಮಾದಿಂದ್ರೋಽಬಿಭೇಚ್ಛತ್ರೋರ್ವಜ್ರಃ ಪ್ರತಿಹತೋ ಯತಃ ।**
**ಕಿಮಿದಂ ದೈವಯೋಗೇನ ಭೂತಂ ಲೋಕವಿಮೋಹನಮ್ ।।೩೪।।**

**ಇಂದ್ರಃ** ಇಂದ್ರದೇವರು **ಯತಃ** ಯಾವ ಶತ್ರುವಿನಿಂದ **ವಜ್ರಃ** ವಜ್ರಾಯುಧವು **ಪ್ರತಿಹತಃ** ತಿರಸ್ಕೃತವಾಯಿತೋ **ತಸ್ಮಾತ್ ಶತ್ರೋಃ** ಆ ಶತ್ರುವಿನಿಂದ **ಅಬಿಭೇತ್** ಹೆದರಿದರು **ದೈವಯೋಗೇನ** ಅದೃಷ್ಟಪ್ರೇರಕನಾದ ಶ್ರೀಹರಿಯಿಂದ **ಲೋಕಮೋಹನಂ** ನೋಡುವ ಜನರಿಗೆ ಭ್ರಾಂತಿಯನ್ನುಂಟು ಮಾಡುವ, ವಜ್ರಾಯುಧವು ಉಪಯೋಗವಿಲ್ಲವೆಂದು ತಪ್ಪು ತಿಳುವಳಿಕೆಯನ್ನುಂಟು ಮಾಡುವ **ಇದಂ** ನಮುಚಿಯ ಕುತ್ತಿಗೆಯ ಚರ್ಮ ಹರಿಯಲಿಲ್ಲವೆಂಬುದು **ಕಿಂ ಭೂತಂ** ಏನಾಯಿತು? ಯಾವ ಗ್ರಹವೋ, ಪಿಶಾಚಿಯೋ ಕಾರ್ಯವಾಗದಂತೆ ಮಾಡಿದೆ ಎಂದು ಚಿಂತಿಸಿದನು. ।।೩೪।।

ಅವತರಣಿಕಾ :- ವಜ್ರಾಯುಧವು ಯಾವಾಗಲೂ ಕೆಲಸ ಮಾಡುವುದೇ ಇಲ್ಲ. ಕೆಲಸ ಮಾಡದಿರುವುದು ವಜ್ರಾಯುಧಕ್ಕೆ ಹೊಸತೇನಲ್ಲ. ವಜ್ರಾಯುಧ ಅಪೂರ್ವ ಏನಲ್ಲ ಎಂದು ಶಂಕಿಸಿದರೆ ವಜ್ರಾಯುಧದ ಮಹಿಮೆಯನ್ನು ಹೇಳುತ್ತಿದ್ದಾರೆ-

**ಯೇನ ಮೇ ಪೂರ್ವಮದ್ರೀಣಾಂ ಪಕ್ಷಚ್ಛೇದಃ ಪ್ರಜಾತ್ಯಯೇ ।**
**ಕೃತೋ ನಿವಿಶತಾಂ ಭಾರೈಃ ಪತತ್ರೈಃ ಪತತಾಂ ಭುವಿ ।।೩೫।।**

**ಯೇನ** ಯಾವ ವಜ್ರಾಯುಧದಿಂದ **ಮೇ** ನನ್ನಿಂದ **ಪೂರ್ವಂ** ಹಿಂದೆ **ಪತತ್ರೈಃ** ರೆಕ್ಕೆಗಳಿಂದ **ಪತತಾಂ** ಹಾರುತ್ತಿದ್ದ **ಭುವಿ** ಭೂಮಿಯಲ್ಲಿ ಅಲ್ಲಲ್ಲಿ ಊರುಗಳ ಮೇಲೆ **ನಿವಿಶತಾಂ** ಕೂಡುತ್ತಿದ್ದ **ಅದ್ರೀಣಾಂ** ಪರ್ವತಗಳ **ಭಾರೈಃ** ಭಾರದಿಂದ **ಪ್ರಜಾತ್ಯಯೇ ಸತಿ** ಜನರ ನಾಶವಾಗುತ್ತಿರಲು **ಅದ್ರೀಣಾಂ** ಪರ್ವತಗಳ **ಪಕ್ಷಚ್ಛೇದಃ ಕೃತಃ** ರೆಕ್ಕೆಗಳನ್ನು ಈ ವಜ್ರಾಯುಧವು ಕಡಿದು ಹಾಕಿದೆ. ಅಷ್ಟು ಸಮರ್ಥವಾದದ್ದು ಈ ವಜ್ರಾಯುಧ. ।।೩೫।।

**ತಪಃಸಾರಮಯಂ ತ್ವಾಷ್ಟ್ರಂ ವೃತ್ರೋ ಯೇನ ವಿಪಾಟಿತಃ ।**
**ಅನ್ಯೇ ಚಾಪಿ ಬಲೋಪೇತಾಃ ಸರ್ವಾಸ್ತ್ರೈರಕ್ಷತತ್ವಚಃ ।।೩೬।।**

**ಯೇನ** ಯಾವ ವಜ್ರಾಯುಧದಿಂದ **ವೃತ್ರಃ** ವೃತ್ರಾಸುರನು **ವಿಪಾಟಿತಃ** ಸೀಳಲ್ಪಟ್ಟನೋ **ಸರ್ವಾಸ್ತ್ರೈಃ** ಬೇರೆಲ್ಲ ಅಸ್ತ್ರಗಳಿಂದ **ಅಕ್ಷತತ್ವಚಃ** ಗಾಯವಾಗದಿರುವ ಚರ್ಮ ಉಳ್ಳ **ಬಲೋಪೇತಾಃ** ಬಲಿಷ್ಠರಾದ **ಅನ್ಯೇ ಅಪಿ** ಉಳಿದ ದೈತ್ಯರೂ ಕೂಡ **ವಿಪಾಟಿತಾಃ** ಸೀಳಿ ಹಾಕಲ್ಪಟ್ಟರೋ (**ತತ್ ಇದಂ** ಅಂಥ ಈ ವಜ್ರಾಯುಧವು) **ತ್ವಾಷ್ಟ್ರಂ** ದಧೀಚಿಗಳ ಅಸ್ಥಿಯಿಂದ

ನಿರ್ಮಿತವಾದದ್ದು. **ತಪಸ್ಸಾರಮಯಂ** ದಧೀಚಿ ಋಷಿಗಳ ತಪಸ್ಸಿನ ಸಾರಭೂತವಾದದ್ದು. ಆದ್ದರಿಂದ ಈ ವಜ್ರಾಯುಧವು ಅಪೂರ್ವವಾಗಿದೆ ಎಂದು ಭಾವ.

ಸತ್ಯ ಃ- ''ತಪಸ್ಸಾರಮಯಂ ತ್ವಾಷ್ಟ್ರಂ'' ಎಂಬುದಾಗಿ ತ್ವಾಷ್ಟ್ರಶಬ್ದವನ್ನು ನಪುಂಸಕದಲ್ಲಿ ಪ್ರಯೋಗಿಸಿದ್ದಾರೆ. ಆದರೆ ವಜ್ರಶಬ್ದವು ಪುಲ್ಲಿಂಗವಾಗಿದೆ. ಆದ್ದರಿಂದ ಈ ಪ್ರಯೋಗ ಅನುಪಪನ್ನ ಎಂದು ಶಂಕೆ ಬರುತ್ತದೆ. ಆದರೆ ''ವಜ್ರೋಽಸ್ತ್ರೀ ಚಕ್ರವಜ್ರಾಂಧಕಾರ'' ಎಂಬ ಅಮರಲಿಂಗಾನುಶಾಸನದಂತೆ ನಪುಂಸಕಲಿಂಗದಲ್ಲಿಯೂ ವಜ್ರ ಶಬ್ದದ ಪ್ರಯೋಗ ಉಂಟು. ಆದ್ದರಿಂದ ಪ್ರಕೃತ ತ್ವಾಷ್ಟ್ರಂ ಎಂದು ನಪುಂಸಕಲಿಂಗದಲ್ಲಿ ಪ್ರಯೋಗಿಸಿದ್ದು ತಪ್ಪೇನಲ್ಲ. ದಧೀಚಿ ಋಷಿಗಳ ತಪಸ್ಸಿನ ಸಾರವಾದ ಇಂಥ ವಜ್ರಾಯುಧಕ್ಕೆ ಇವತ್ತು ಏನಾಗಿದೆ ಎಂದು ಅಭಿಪ್ರಾಯ. ।।೩೬।।

**ಸೋಽಯಂ ಪ್ರತಿಹತೋ ವಜ್ರೋ ಮಯಾ ಮುಕ್ತೋಽಸುರೇಽಲ್ಪಕೇ ।**
**ನಾಹಂ ತದಾದದೇ ವಜ್ರಂ ಬ್ರಹ್ಮತೇಜೋಽಪ್ಯಕಾರಣಮ್ ।।೩೭।।**

**ಸಃ ಅಯಂ ವಜ್ರಃ** ಅಂತಹ ಸಾಮರ್ಥ್ಯವುಳ್ಳ ಈ ವಜ್ರಾಯುಧವು **ಅಲ್ಪಕೇ** ಅತ್ಯಲ್ಪನಾದ (ದುರ್ಬಲನಾದ) **ಅಸುರೇ** ನಮುಚಿಯ ಮೇಲೆ **ಮುಕ್ತಃ** ಬಿಡಲ್ಪಟ್ಟುದಾಗಿ **ಪ್ರತಿಹತಃ** ವ್ಯರ್ಥವಾಯಿತು. ಇದು ಆಶ್ಚರ್ಯ. ಆದ್ದರಿಂದ **ಅಹಂ** ನಾನು **ಬ್ರಹ್ಮತೇಜಃ ಅಪಿ** ಬ್ರಾಹ್ಮಣ ತಪಸ್ಸಾಮರ್ಥ್ಯದಿಂದ ಕೂಡಿದ್ದರೂ **ಅಕಾರಣಂ** ನಮುಚಿಯ ವಧೆಗೆ ಕಾರಣವಾಗದ **ತತ್** ಆದ್ದರಿಂದ ಒಂದು ಸಾಧಾರಣ ಕಟ್ಟಿಗೆಗೆ ಸಮಾನವಾದ **ವಜ್ರಂ** ವಜ್ರವನ್ನು **ನ ಆದದೇ** ಸ್ವೀಕರಿಸುವುದಿಲ್ಲ. ಮತ್ತೆ ಅವನ ಸಂಹಾರಕ್ಕೆ ಆ ವಜ್ರಾಯುಧವನ್ನು ಉಪಯೋಗಿಸುವುದಿಲ್ಲ ಎಂದರ್ಥ. ।।೩೭।।

**ಇತಿ ಶಕ್ರಂ ವಿಷೀದಂತಮಾಹ ವಾಗಶರೀರಿಣೀ ।**
**ನಾಯಂ ಶುಷ್ಕೈರಥೋ ನಾರ್ದ್ರೈರ್ವಧಮರ್ಹತಿ ದಾನವಃ ।।೩೮।।**

**ವಿಷೀದಂತಂ** ವಿಷಾದಯುಕ್ತರಾದ **ಶಕ್ರಂ** ಇಂದ್ರದೇವರಿಗೆ, **ಅಯಂ ದಾನವಃ** ಈ ಅಸುರನು **ಶುಷ್ಕೈಃ** ಒಣಗಿದ ಪದಾರ್ಥದಿಂದ **ಅಥೋ** ಅಥವಾ **ಆರ್ದ್ರೈಃ** ಹಸಿಯ ಪದಾರ್ಥದಿಂದ **ವಧಂ ನ ಅರ್ಹತಿ** ಸಂಹಾರವನ್ನು ಹೊಂದಲಾರನು. **ಇತಿ** ಈ ರೀತಿಯಾಗಿ **ಅಶರೀರಿಣೀ ವಾಕ್** ಅಶರೀರವಾಣಿಯು **ಆಹ** ಹೇಳಿತು. ।।೩೮।।

ಅವತರಣಿಕಾ ಃ- ಮಾತನಾಡುವ ವ್ಯಕ್ತಿ ಪ್ರಕೃತ ಕಾಣಿಸುತ್ತಿಲ್ಲ. ಆದ್ದರಿಂದ ಈ ದೈತ್ಯನ ಸಾಮರ್ಥ್ಯ ಏನು? ಯಾಕೆ ಹೀಗೆ ಇವನು ಅವಧ್ಯನಾಗಿದ್ದಾನೆ? ಎಂದು ಇಂದ್ರನು ಕೇಳುವಂತಿಲ್ಲ. ಆದ್ದರಿಂದ ಆ ಆಕಾಶವಾಣಿಯೇ ಇಂದ್ರನ ಮನೋಗತವನ್ನು ತಿಳಿದು ಮತ್ತೆ ಹೇಳುತ್ತಿದೆ-

**ಮಯಾಸ್ಮೈ ಯದ್ ವರೋ ದತ್ತೋ ಮೃತ್ಯುರ್ನೈವಾರ್ದ್ರಶುಷ್ಕಯೋಃ ।**
**ಅತೋಽನ್ಯಶ್ಚಿಂತನೀಯಸ್ತೇ ಉಪಾಯೋ ಮಘವನ್ ರಿಪೋಃ ॥೩೯॥**

**ಮಘವನ್** ಇಂದ್ರನೇ **ಯತ್** ಯಾವ ಕಾರಣ **ಮಯಾ** ನನ್ನಿಂದ **ಅಸ್ಮೈ** ಇವನಿಗೆ **ಆರ್ದ್ರಶುಷ್ಕಯೋಃ** ಹಸಿ, ಮತ್ತು ಒಣಗಿದ ಪದಾರ್ಥದಿಂದ **ಮೃತ್ಯುಃ ನೈವ** ನಿನಗೆ ಮರಣವಿಲ್ಲ **ಇತಿ** ಎಂದು **ವರಃ ದತ್ತಃ** ವರವು ಕೊಡಲ್ಪಟ್ಟಿದೆ **ಅತಃ** ಆದ್ದರಿಂದ **ರಿಪೋಃ** ಶತ್ರುವಿನ ಸಂಹಾರಕ್ಕಾಗಿ **ಅನ್ಯಃ ಉಪಾಯಃ** ಬೇರೆ ಉಪಾಯವು **ಚಿಂತನೀಯಃ** ವಿಚಾರ ಮಾಡಬೇಕು ಎಂದು **ಆಹ** ಆಕಾಶವಾಣಿಯು ಹೇಳಿತು. ॥೩೯॥

**ತಾಂ ದೈವೀಂ ಗಿರಮಾಕರ್ಣ್ಯ ಮಘವಾನ್ ಸುಸಮಾಹಿತಃ ।**
**ಧ್ಯಾಯನ್ ಫೇನಮಥಾಪಶ್ಯದುಪಾಯಮುಭಯಾತ್ಮಕಮ್ ॥೪೦॥**

**ಮಘವಾನ್** ಧನದಿಂದ ಮತ್ತು ಸುಖದಿಂದ ಸಂಪನ್ನನಾದ ಇಂದ್ರನು **ದೈವೀಂ** ದೇವತಾಸಂಬಂಧಿಯಾದ **ತಾಂ ಗಿರಂ** ಆ ಮಾತನ್ನು **ಆಕರ್ಣ್ಯ** ಕೇಳಿ **ಸುಸಮಾಹಿತಃ** ಏಕಾಗ್ರಮನಸ್ಸುಳ್ಳವನಾಗಿ **ಧ್ಯಾಯನ್** ಒಣಗಿದ್ದೂ ಅಲ್ಲದ ಹಸಿಯೂ ಅಲ್ಲದ ಪದಾರ್ಥ ಯಾವುದು ಎಂದು ವಿಚಾರಮಾಡುತ್ತ **ಅಥ** ಅನಂತರ **ಉಭಯಾತ್ಮಕಂ** ಹಸಿಯೂ ಆಗದ ಒಣಗಿದ್ದೂ ಆಗದ **ಫೇನಂ** ನೀರಿನ ವಿಕಾರವಾದ ನೊರೆಯನ್ನು **ಉಪಾಯಂ** ನಮುಚಿಯ ವಧೋಪಾಯವೆಂದು **ಅಪಶ್ಯತ್** ಕಂಡುಕೊಂಡನು. ॥೪೦॥

**ನ ಶುಷ್ಕೇಣ ನ ಚಾರ್ದ್ರೇಣ ಜಹಾರ ನಮುಚೇಃ ಶಿರಃ ।**
**ತಂ ತುಷ್ಟುವುರ್ಮುನಿಗಣಾ ಮಾಲ್ಯೈಶ್ಚಾವಾಕಿರನ್ ವಿಭುಮ್ ॥೪೧॥**

**ನ ಶುಷ್ಕೇಣ** ಒಣಗಿದ್ದೂ ಅಲ್ಲದ **ನ ಚಾರ್ದ್ರೇಣ** ಹಸಿಯದೂ ಅಲ್ಲದ ನೊರೆಯಿಂದ **ನಮುಚೇಃ** ನಮುಚಿಯ **ಶಿರಃ** ತಲೆಯನ್ನು **ಜಹಾರ** ಇಂದ್ರನು ಕೆಡವಿದನು **ವಿಭುಂ** ಸಮರ್ಥನಾದ ಇಂದ್ರನನ್ನು **ಮುನಿಗಣಾಃ** ಮುನಿಗಳ ಸಮೂಹಗಳು **ತುಷ್ಟುವುಃ** ಸ್ತೋತ್ರಮಾಡಿದರು **ಮಾಲ್ಯೈಃ ಅವಾಕಿರನ್** ಇಂದ್ರನ ಮೇಲೆ ಹೂಮಳೆಯನ್ನು ಸುರಿಸಿದರು.

**ಗಂಧರ್ವಮುಖ್ಯೌ ಜಗತುರ್ವಿಶ್ವಾವಸುಪರಾವಸೂ ।**
**ದೇವದುಂದುಭಯೋ ನೇದುರ್ನರ್ತಕ್ಯೋ ನನೃತುರ್ಮುದಾ ॥೪೨॥**

**ಗಂಧರ್ವಮುಖ್ಯೌ** ಗಂಧರ್ವರಲ್ಲಿ ಶ್ರೇಷ್ಠರಾದ **ವಿಶ್ವಾವಸುಪರಾವಸೂ** ವಿಶ್ವಾವಸು ಪರಾವಸು ಎಂಬುವವರು **ಜಗತುಃ** ಗಾನ ಮಾಡಿದರು **ನರ್ತಕ್ಯಃ** ಅಪ್ಸರೆಯರು **ಮುದಾ** ಸಂತೋಷದಿಂದ **ನನೃತುಃ** ನರ್ತನ ಮಾಡಿದರು **ದೇವದುಂದುಭಯಃ** ದೇವತೆಗಳ ನಗಾರಿಗಳು **ನೇದುಃ** ಧ್ವನಿಮಾಡಿದವು. ॥೪೨॥

**ಅನ್ಯೇಽಪ್ಯೇವಂ ಪ್ರತಿದ್ವಂದ್ವಾನ್ ವಾಯ್ವಗ್ನಿವರುಣಾದಯಃ ।**
**ಸೂದಯಾಮಾಸುರಸ್ತ್ರೌಘೈರ್ಮೃಗಾನ್ ಕೇಸರಿಣೋ ಯಥಾ** ॥೪೩॥

**ಯಥಾ** ಹೇಗೆ **ಕೇಸರಿಣಃ** ಸಿಂಹಗಳು **ಮೃಗಾನ್** ಪ್ರಾಣಿಗಳನ್ನು ಕೊಲ್ಲುವವೋ **ಏವಂ** ಹಾಗೆ **ಅನ್ಯೇ ಅಪಿ** ಬೇರೆಯವರಾದ **ವಾಯ್ವಗ್ನಿವರುಣಾದಯಃ** ವಾಯು-ಅಗ್ನಿ-ವರುಣ ಮೊದಲಾವರು **ಪ್ರತಿದ್ವಂದ್ವಾನ್** ಎದುರಾಳಿಗಳನ್ನು **ಅಸ್ತ್ರೌಘೈಃ** ಅಸ್ತ್ರಗಳ ಸಮೂಹಗಳಿಂದ **ಸೂದಯಾಮಾಸುಃ** ಸಂಹರಿಸಿದರು. ॥೪೩॥

**ಬ್ರಹ್ಮಣಾ ಪ್ರೇಷಿತೋ ದೇವಾನ್ ದೇವರ್ಷಿರ್ನಾರದೋ ನೃಪ ।**
**ವಾರಯಾಮಾಸ ವಿಬುಧಾನ್ ದೃಷ್ಟ್ವಾ ದಾನವಸಂಕ್ಷಯಮ್** ॥೪೪॥

**ಹೇ ನೃಪ** ರಾಜನೇ **ದಾನವಸಂಕ್ಷಯಂ** ದೈತ್ಯರ ನಾಶವನ್ನು **ದೃಷ್ಟ್ವಾ** ನೋಡಿ **ಬ್ರಹ್ಮಣಾ** ಚತುರ್ಮುಖನಿಂದ **ಪ್ರೇಷಿತಃ** ಕಳಿಸಲ್ಪಟ್ಟ **ದೇವರ್ಷಿಃ ನಾರದಃ** ದೇವರ್ಷಿಗಳಾದ ನಾರದರು **ವಿಬುಧಾನ್** ದೇವತೆಗಳನ್ನು **ವಾರಯಾಮಾಸ** ಯುದ್ಧ ಸಾಕೆಂದು ತಡೆದರು. ॥೪೪॥

**ನಾರದ ಉವಾಚ**

**ಭವದ್ಭಿರಮೃತಂ ಪ್ರಾಪ್ತಂ ನಾರಾಯಣಭುಜಾಶ್ರಯೈಃ ।**
**ಶ್ರಿಯಾ ಸಮೇಧಿತಾಃ ಸರ್ವೇ ಉಪಾರಮತ ವಿಗ್ರಹಾತ್** ॥೪೫॥

**ಹೇ ದೇವಾಃ** ದೇವತೆಗಳೇ **ನಾರಾಯಣಭುಜಾಶ್ರಯೈಃ** ಶ್ರೀಹರಿಯ ತೋಳುಗಳನ್ನು ಆಶ್ರಯಿಸಿದ **ಭವದ್ಭಿಃ** ನಿಮ್ಮಿಂದ **ಅಮೃತಂ ಪ್ರಾಪ್ತಂ** ಅಮೃತವು ಹೊಂದಲ್ಪಟ್ಟಿತು **ಸರ್ವೇ** ನೀವೆಲ್ಲರೂ **ಶ್ರಿಯಾ** ಸಂಪತ್ತಿನಿಂದ **ಸಮೇಧಿತಾಃ** ಅಭಿವೃದ್ಧರಾಗಿರುವಿರಿ ಆದ್ದರಿಂದ **ವಿಗ್ರಹಾತ್** ಯುದ್ಧದಿಂದ **ಉಪಾರಮತ** ವಿರಾಮ ಹೊಂದಿರಿ (ಯುದ್ಧವನ್ನು ನಿಲ್ಲಿಸಿರಿ) ಎಂದು ಬ್ರಹ್ಮದೇವರ ಆಜ್ಞೆಯಾಗಿದೆ ಎಂದು ತಿಳಿಸಿದರು. ॥೪೫॥

**ಶ್ರೀಶುಕ ಉವಾಚ**

**ಸಂಯಮ್ಯ ಮನ್ಯುಸಂರಂಭಂ ಮಾನಯಂತೋ ಮುನೇರ್ವಚಃ ।**
**ಸಂಗೀಯಮಾನಾನುಚರೈರ್ಯಯುಃ ಸರ್ವೇ ತ್ರಿವಿಷ್ಟಪಮ್** ॥೪೬॥

**ಸರ್ವೇ** ದೇವತೆಗಳೆಲ್ಲರೂ **ಮುನೇಃ** ಬ್ರಹ್ಮದೇವರ ನಾರದರ **ವಚಃ** ಮಾತನ್ನು (ಮುನಿಸ್ತು ಸರ್ವವಿದ್ಯಾನಾಂ ಬ್ರಹ್ಮಾ) ಎಂದಿದೆ **ಮಾನಯಂತಃ** ಗೌರವಿಸುವವರಾಗಿ **ಮನ್ಯುಸಂರಂಭಂ ಸಂಯಮ್ಯ** ಕೋಪೋದ್ರೇಕವನ್ನು ತಡೆದುಕೊಂಡು **ಅನುಚರೈಃ** ಗಂಧರ್ವರಿಂದ **ಸಂಗೀಯಮಾನಾಃ** ಗಾನಮಾಡಲ್ಪಡುವವರಾಗಿ **ತ್ರಿವಿಷ್ಟಪಂ** ಸ್ವರ್ಗವನ್ನು ಕುರಿತು **ಯಯುಃ** ಹೋದರು. ॥೪೬॥

''ಮನ್ಯುಃ ಕ್ರೋಧೇ ಕ್ರತೌ ದೈನ್ಯೇ'' ''ಸುರಲೋಕೋ ದ್ಯೌರ್ದಿವೌ ದ್ವೇ ಸ್ತ್ರಿಯಾಂ ಕ್ಲೀಬೇ ತ್ರಿವಿಷ್ಟಪಂ'' ಎಂದು ಅಮರವಿದೆ. ।।೪೬।।

**ಯೇಽವಶಿಷ್ಟಾ ರಣೇ ತಸ್ಮಿನ್ ನಾರಾದನುಮತೇನ ತೇ ।**
**ಬಲಿಂ ವಿಪನ್ನಮಾದಾಯ ಅಸ್ತಂ ಗಿರಿಮುಪಾಗಮನ್ ।।೪೭।।**

**ತಸ್ಮಿನ್ ರಣೇ** ಆ ಯುದ್ಧದಲ್ಲಿ **ಯೇ** ಯಾರು **ಅವಶಿಷ್ಟಾಃ** ಅಳಿದು ಉಳಿದಿದ್ದರೋ **ತೇ** ಆ ದೈತ್ಯರು **ನಾರದಾನುಮತೇನ** ನಾರದರ ಒಪ್ಪಿಗೆಯಂತೆ **ವಿಪನ್ನಂ** ಆಪತ್ತಿಗೀಡಾದ **ಬಲಿಂ** ಬಲಿರಾಜನನ್ನು **ಆದಾಯ** ತೆಗೆದುಕೊಂಡು **ಅಸ್ತಂ ಗಿರಿಂ** ಅಸ್ತಪರ್ವತವನ್ನು ಕುರಿತು **ಯಯುಃ** ಹೋದರು. ಪಶ್ಚಿಮದಲ್ಲಿರುವ ಶುಕ್ರಾಚಾರ್ಯರ ಬಳಿ ಹೋದರೆಂದರ್ಥ.

**ತತ್ರಾಪಿ ನಷ್ಟಾವಯವಾನ್ ವಿದ್ಯಮಾನಶಿರೋಧರಾನ್ ।**
**ಉಶನಾ ಜೀವಯಾಮಾಸ ಸಂಜೀವಿನ್ಯಾ ಸ್ವವಿದ್ಯಯಾ ।।೪೮।।**

**ಉಶನಾಃ** ಶುಕ್ರಾಚಾರ್ಯರು **ತತ್ರ** ಆ ಅಸ್ತಗಿರಿಯಲ್ಲಿ ಅಥವಾ ರಣದಲ್ಲಿ **ವಿದ್ಯಮಾನಶಿರೋಧರಾನ್** ದೇಹದಿಂದ ಬೇರೆ ಆಗದೆ ಇರುವ ರುಂಡಗಳುಳ್ಳ **ನಷ್ಟಾವಯವಾನ್ ಅಪಿ** ಕೈ-ಕಾಲು ಮುಂತಾದ ಅವಯವವಿಲ್ಲದವರನ್ನೂ **ಸಂಜೀವಿನ್ಯಾ ಸ್ವವಿದ್ಯಯಾ** ಮೃತಸಂಜೀವಿನೀ ಎಂಬ ತಮ್ಮ ವಿದ್ಯೆಯಿಂದ **ಜೀವಯಾಮಾಸ** ಬದುಕಿಸಿದರು.

**ಅವಿನಷ್ಟಾವಯವಾನ್** ಎಂಬ ಪಾಠದಲ್ಲಿ ನಾಶವಾಗದಿರುವ ಅವಯವಗಳುಳ್ಳವರನ್ನು ಎಂದರ್ಥ. **ಭಿದ್ಯಮಾನಾನ್ ಶಿರೋಧರಾನ್** ಎಂಬ ಪಾಠದಲ್ಲಿ ತಲೆ ಒಡೆದವರನ್ನು ಅರ್ಥಾತ್ ಮೃತರಾದವರನ್ನು ಎಂದರ್ಥ.

ತಲೆ ಮುಂತಾದ ಎಲ್ಲ ಅವಯವಗಳಿಂದ ಸಹಿತರಾಗಿ ಪ್ರಾಣಹೋದವರನ್ನೂ ಶುಕ್ರಾಚಾರ್ಯರು ಬದುಕಿಸಿದರು. ಅವಯವಗಳಿದ್ದುದರಿಂದ ವಿಶಲ್ಯಕರಣಿ ಸಂಧಾನಕರಣೀ ಬೇಕಾಗಲಿಲ್ಲವೆಂದು ಭಾವ.

ಸತ್ಯ :- ''ಶುಕ್ರೇಣೋಜ್ಜೀವಿತಾಸ್ತೇ ತು ಪುನಸ್ತೇನೈವ ಪಾತಿತಾಃ'' ಎಂದು ಹಿಂದಿನ ಅಧ್ಯಾಯದ ತಾತ್ಪರ್ಯದಲ್ಲಿ ಸಂಜೀವಿನಿಯನ್ನು ಹೇಳಿಲ್ಲ. ಅದರ ವಿರೋಧ ಬಂತಲ್ಲ ಎನ್ನುವಂತಿಲ್ಲ. ಅಲ್ಲಿ ಮುಖ್ಯರಾದ ಶುಕ್ರಾಚಾರ್ಯರನ್ನು ಹೇಳಿರುವರು. ಸಂಜೀವಿನೀ ರೂಪವಾದ ಉಪಾಯವನ್ನು ಹೇಳಿಲ್ಲ. ಆ ಸಂಜೀವಿನೀ ರೂಪವಾದ ಉಪಾಯವನ್ನು ಇಲ್ಲಿ ಹೇಳಿದ್ದಾರೆ. ಆದ್ದರಿಂದ ಯಾವ ವಿರೋಧವೂ ಇಲ್ಲ. ।।೪೮।।

**ಬಲಿಶ್ಚೋಶನಸಾ ಸ್ಪೃಷ್ಟಃ ಪ್ರತ್ಯಾಪನ್ನೇಂದ್ರಿಯಸ್ಮೃತಿಃ ।**
**ಪರಾಜಿತೋಽಪಿ ನಾಖಿದ್ಯಲ್ಲೋಕತತ್ತ್ವವಿಚಕ್ಷಣಃ ॥೪೯॥**

**॥ ಇತಿ ಶ್ರೀಮದ್ಭಾಗವತೇ ಅಷ್ಟಮಸ್ಕಂಧೇ ದಶಮೋಽಧ್ಯಾಯಃ ॥**

**ಬಲಿಃ ಚ** ಬಲಿಯಾದರೂ **ಉಶನಸಾ** ಶುಕ್ರಾಚಾರ್ಯರಿಂದ **ಸ್ಪೃಷ್ಟಃ** ಮುಟ್ಟಲ್ಪಟ್ಟವನಾಗಿ **ಪ್ರತ್ಯಾಪನ್ನೇಂದ್ರಿಯಸ್ಮೃತಿಃ** ಮರಳಿ ಬಂದ ಇಂದ್ರಿಯಗಳ ಶಕ್ತಿ ಮತ್ತು ಸ್ಮರಣೆಯುಳ್ಳವನಾಗಿ **ಯತಃ** ಯಾವ ಕಾರಣ **ಲೋಕತತ್ತ್ವವಿಚಕ್ಷಣಃ** ಶ್ರೀಹರಿಯಿಂದ ಭಿನ್ನವಾದ ಜಗತ್ತಿನ ಯಥಾರ್ಥಸ್ಥಿತಿಯನ್ನು ಅಂದರೆ ಸಮಸ್ತಪ್ರಪಂಚವೂ ಶ್ರೀಹರಿಯ ಅಧೀನವಾಗಿದೆ ಎಂಬುದನ್ನು ಚೆನ್ನಾಗಿ ತಿಳಿದಿರುವ ಆದ್ದರಿಂದಲೇ **ಪರಾಜಿತಃ ಅಪಿ** ಸೋತವನಾದರೂ **ನ ಅಖಿದ್ಯತ್** ದುಃಖಪಡಲಿಲ್ಲ.

ಸತ್ಯ ಃ- **ಲೋಕೈಃ** ಜ್ಞಾನಿಗಳಿಂದ **ತತ್ತ್ವ** ಯಾವುದು ತತ್ವವೆಂದು ನಿಶ್ಚಯಿಸಲ್ಪಟ್ಟಿದೆಯೋ **ವಿಚಕ್ಷಣಃ** ಅಂಥ ಜ್ಞಾನಿರಹಸ್ಯವಾದ ಪ್ರಮೇಯದಲ್ಲಿ ಕುಶಲನು ಹೀಗೂ ಅರ್ಥ ಮಾಡಿರುವರು, ಜ್ಞಾನಿಗಳಿಗೆ ಸಮ್ಮತವಾದ ಜಯಪರಾಜಯಾದಿಗಳು ಭಗವದಧೀನವೆಂದು ಬಲ್ಲವನು ಎಂದರ್ಥ. ॥೪೯॥

**ಇಲ್ಲಿಗೆ ಹತ್ತನೇ ಅಧ್ಯಾಯವು ಮುಗಿಯಿತು.**

★★★

# ಅಥ ಏಕಾದಶೋಽಧ್ಯಾಯಃ

**ಶ್ರೀಶುಕ ಉವಾಚ**

ನಾರಾಯಣನ ಮೋಹಿನೀ ರೂಪವನ್ನು ಕಂಡು ರುದ್ರದೇವರು ಕೂಡಾ ಮೋಹಿತರಾದರು. ಇದು ಶ್ರೀಹರಿಯ ಮಾಹಾತ್ಮ್ಯ. ಈ ಮಾಹಾತ್ಮ್ಯವನ್ನು ಈ ಅಧ್ಯಾಯದಲ್ಲಿ ಹೇಳುತ್ತಿದ್ದಾರೆ-

**ವೃಷಧ್ವಜೋ ನಿಶಮ್ಯೇದಂ ಯೋಷಿದ್ರೂಪೇಣ ದಾನವಾನ್ ।**
**ಮೋಹಯಿತ್ವಾ ಸುರಗಣಾನ್ ಹರಿಃ ಸೋಮಮಪಾಯಯತ್ ॥೧॥**

**ವೃಷಧ್ವಜಃ** ಎತ್ತಿನ ಧ್ವಜದ ರುದ್ರದೇವರು **ಹರಿಃ** ಶ್ರೀಹರಿಯು **ಯೋಷಿದ್ರೂಪೇಣ** ಹೆಣ್ಣಿನ ರೂಪದಿಂದ **ದಾನವಾನ್** ಅಸುರರನ್ನು **ಮೋಹಯಿತ್ವಾ** ಮೋಹಗೊಳಿಸಿ **ಸುರಗಣಾನ್** ದೇವಸಮೂಹಕ್ಕೆ **ಸೋಮಂ** ಅಮೃತವನ್ನು **ಅಪಾಯಯತ್** ಕುಡಿಸಿದನು ಇತಿ ಎಂಬ **ಇದಂ** ಈ ವಿಷಯವನ್ನು **ನಿಶಮ್ಯ** ಕೇಳಿ, ॥೧॥

**ವೃಷಮಾರುಹ್ಯ ಗಿರಿಶಃ ಸರ್ವಭೂತಗಣೈರ್ವೃತಃ ।**
**ಸಹ ದೇವ್ಯಾ ಯಯೌ ದ್ರಷ್ಟುಂ ಯತ್ರಾಸ್ತೇ ಮಧುಸೂದನಃ ॥೨॥**

**ಗಿರಿಶಃ** ಕೈಲಾಸವಾಸಿಯಾದ ರುದ್ರದೇವರು **ವೃಷಂ ಆರುಹ್ಯ** ಎತ್ತನ್ನು ಏರಿಕೊಂಡು **ಸರ್ವಭೂತಗಣೈಃ ವೃತಃ** ಎಲ್ಲ ಭೂತಗಳಿಂದ ಕೂಡಿಕೊಂಡು **ದೇವ್ಯಾ ಸಹ** ಪಾರ್ವತಿಯೊಡನೆ ಸೇರಿಕೊಂಡು **ಮಧುಸೂದನಃ** ಮಧುವೆಂಬ ದೈತ್ಯಸಂಹಾರಕನಾದ ಶ್ರೀಹರಿಯು **ಯತ್ರ ಆಸ್ತೇ** ಎಲ್ಲಿ ವ್ಯಕ್ತನಾಗಿರುವನೋ **ತತ್ರ** ಆ ವೈಕುಂಠಕ್ಕೆ **ದ್ರಷ್ಟುಂ** ನೋಡಲು **ಯಯೌ** ಹೋದರು. ॥೨॥

**ಸಭಾಜಿತೋ ಭಗವತಾ ಸಾದರಂ ಸೋಮಯಾ ಭವಃ ।**
**ಸೂಪವಿಷ್ಟ ಉವಾಚೇದಂ ಪ್ರತಿಪೂಜ್ಯ ಸ್ಮಯನ್ ಹರಿಮ್ ॥೩॥**

**ಭಗವತಾ** ಶ್ರೀಹರಿಯಿಂದ **ಉಮಯಾ ಸಹಿತಃ** ಪಾರ್ವತೀಸಹಿತನಾಗಿ **ಸಭಾಜಿತಃ** ಪೂಜಿತನಾದ **ಸಃ ಭವಃ** ಆ ರುದ್ರದೇವರು **ಸೂಪವಿಷ್ಟಃ** ಚೆನ್ನಾಗಿ ಕುಳಿತುಕೊಂಡು **ಸ್ಮಯನ್** ಮುಗುಳು ನಗುತ್ತ **ಹರಿಂ** ಶ್ರೀಹರಿಯನ್ನು **ಸಾದರಂ** ಆದರಸಹಿತವಾಗಿ **ಪ್ರತಿಪೂಜ್ಯ** ನಮಸ್ಕಾರಾದಿಗಳಿಂದ ಪೂಜೆಮಾಡಿ **ಇದಂ ಉವಾಚ** ಮುಂದೆ ಹೇಳುವುದನ್ನು ಹೇಳಿದನು.

ಛಲಾರೀ :- ಸೋಮಯಾ ಎಂಬಲ್ಲಿ ಸಃ ಉಮಯಾ ಎಂದು ಪದಚ್ಛೇದ ಮಾಡಿಕೊಳ್ಳಬೇಕು. ''ಸೈಷ ರಾಜಾ ಯುಧಿಷ್ಠಿರಃ'' ''ಸೋಷಾಮವಿಂದತ್ಸ'' ಎಂಬುದಾಗಿ ಪ್ರಯೋಗಗಳೂ ಇವೆ. ।।೩।।

**ದೇವದೇವ ಜಗದ್ವ್ಯಾಪಿನ್ ಜಗದೀಶ ಜಗನ್ಮಯ ।**
**ಸರ್ವೇಷಾಮೇವ ಭಾವಾನಾಂ ತ್ವಮಾತ್ಮಾ ಹೇತುರೀಶ್ವರಃ ।।೪।।**

**ದೇವದೇವ** ಬ್ರಹ್ಮಾದಿದೇವತೆಗಳಿಗೂ ದೇವನೇ **ಜಗದ್ವ್ಯಾಪಿನ್** ಜಗತ್ತನ್ನು ವ್ಯಾಪಿಸಿರುವವನೇ (ಅದೂ ಆಕಾಶದಂತಲ್ಲವೆಂದು ಹೇಳುವರು.) **ಜಗದೀಶ** ಜಗತ್ತಿಗೆ ನಿಯಾಮಕನೇ (ಅದೂ ಪರಾಧೀನವಾಗಿ ಅಲ್ಲವೆನ್ನುವರು) **ಜಗನ್ಮಯ** ಜಗತ್ತಿಗೆ ಪ್ರಧಾನನೇ ಅಂದರೆ ಸ್ವತಂತ್ರನೇ **ತ್ವಂ ಏವ** ನೀನೇ **ಸರ್ವೇಷಾಂ ಭಾವಾನಾಂ** ಎಲ್ಲ ಪದಾರ್ಥಗಳಿಗೆ **ಆತ್ಮಾ** ಅಂತರ್ಯಾಮಿಯು **ಈಶ್ವರಃ** ಶ್ರೇಷ್ಠ ನಿಯಾಮಕನು **ಹೇತುಃ** ನಿಮಿತ್ತಕಾರಣನು ಆಗಿರುವಿ.

ವಿಶೇಷ :- ಭಾವಪದದಿಂದ ನಿನ್ನ ಯೋಷಿದ್ರೂಪವನ್ನು ಕಾಣಬೇಕೆಂಬ ಈ ನನ್ನ ಮನೋಭಾವಕ್ಕೂ ನೀನೇ ಕಾರಣನೆಂದು ತಿಳಿಸಿರುವರು. ।।೪।।

**ತವೈವ ಚರಣಾಭೋಜಂ ಶ್ರೇಯಸ್ಕಾಮಾ ನಿರಾಶಿಷಃ ।**
**ವಿಸೃಜ್ಯೋಭಯತಸ್ಸಂಗಂ ಮುನಯಃ ಸಮುಪಾಸತೇ ।।೫।।**

**ಶ್ರೇಯಸ್ಕಾಮಾಃ** ಮೋಕ್ಷಕ್ಕೆ ಕಾರಣವಾದ ನಿನ್ನ ಅಪರೋಕ್ಷವನ್ನು ಇಚ್ಛಿಸುವ ಏಕಾಂತಭಕ್ತರಾದ **ಮುನಯಃ** ಮನನಶೀಲರಾದ ಸನಕಾದಿಗಳು **ನಿರಾಶಿಷಃ** ಐಹಿಕ ಆಮುಷ್ಮಿಕ ಫಲಾಪೇಕ್ಷೆಯಿಲ್ಲದವರಾಗಿ ಆದ್ದರಿಂದಲೇ **ಉಭಯತಃ ಸಂಗಂ** ಐಹಿಕ-ಆಮುಷ್ಮಿಕಗಳಲ್ಲಿ ಆಸಕ್ತಿಯನ್ನು **ವಿಸೃಜ್ಯ** ಬಿಟ್ಟು **ತವ ಚರಣಾಂಭೋಜಮೇವ** ನಿನ್ನ ಪಾದಕಮಲಗಳನ್ನೇ **ಸಮುಪಾಸತೇ** ಸ್ವತಂತ್ರವೆಂದು ಉಪಾಸಿಸುತ್ತಾರೆ. ।।೫।।

ಅವತರಣಿಕಾ :- ಅದ್ವೈತಿಗಳು ಹೇಳುವಂಥ ಶಬಲಬ್ರಹ್ಮನನ್ನು ಮುನಿಗಳು ಉಪಾಸಿಸುವುದಿಲ್ಲ ಎಂಬುದನ್ನು ಈ ಶ್ಲೋಕದಲ್ಲಿ ಹೇಳುತ್ತಿದ್ದಾರೆ.

**ತ್ವಂ ಬ್ರಹ್ಮ ಪೂರ್ಣಮಮೃತಂ ವಿಗುಣಂ ವಿಶೋಕಂ**
**ಆನಂದಮಾತ್ರಮವಿಕಾರಮನನ್ಯದನ್ಯತ್ ।**

**ವಿಶ್ವಸ್ಯ ಹೇತುರುದಯಸ್ಥಿತಿಸಂಯಮಾನಾಂ**
**ಆತ್ಮೇಶ್ವರಶ್ಚ ತದಪೇಕ್ಷತಯಾಽನಪೇಕ್ಷಃ** ॥೬॥

**ತ್ವಂ** ನೀನು **ಪೂರ್ಣಂ** ನಿರವಧಿಕಗುಣಗಳಿಂದ ಪರಿಪೂರ್ಣನಾದ **ಅಮೃತಂ** ನಾಶ ಇಲ್ಲದ ನಿತ್ಯಮುಕ್ತನಾದ **ವಿಗುಣಂ** ಪ್ರಾಕೃತಗುಣರಹಿತನಾದ ಆದ್ದರಿಂದಲೇ **ವಿಶೋಕಂ** ದುಃಖಾದಿದೋಷಗಳಿಲ್ಲದ **ಆನಂದಮಾತ್ರಂ** ಆನಂದಾದಿ ಕಲ್ಯಾಣಗುಣಗಳೇ ಸ್ವರೂಪವಾಗಿರುವ **ಅವಿಕಾರಂ** ಷಡ್ವಿಧವಿಕಾರಗಳಿಲ್ಲದ **ಅನನ್ಯತ್** ಸಮಾಧಿಕವಸ್ತುವಿಲ್ಲದ, ಅವಯವ, ಗುಣ, ಕ್ರಿಯಾ, ರೂಪಗಳಲ್ಲಿ ಭೇದವಿಲ್ಲದ **ಅನ್ಯತ್** ರಮಾ-ಬ್ರಹ್ಮಾದಿ ಚೇತನಾಚೇತನ ಜಗತ್ತಿನಿಂದ ಅತ್ಯಂತಭಿನ್ನನಾದ **ವಿಶ್ವಸ್ಯ** ಪರತಂತ್ರವಾದ ಜಗತ್ತಿನ **ಉದಯಸ್ಥಿತಿಸಂಯಮಾನಾಂ** ಸೃಷ್ಟಿ, ಸ್ಥಿತಿ, ಲಯ ಮೊದಲಾದ ಅಷ್ಟಕಕ್ಕೆ **ಹೇತುಃ** ನಿಮಿತ್ತಕಾರಣನಾದ **ಆತ್ಮಾ** ಎಲ್ಲರ ಅಂತರ್ಯಾಮಿಯಾದ **ಈಶ್ವರಃ** ಸರ್ವೇಚ್ಛ-ನಿಯಾಮಕನಾದ **ತದಪೇಕ್ಷತಯಾ** ಪ್ರಕೃತ್ಯಾದಿಗಳಿಲ್ಲದೇ ಸೃಷ್ಟಿಸಲು ಸಮರ್ಥನಾಗಿದ್ದರೂ ಪ್ರಕೃತ್ಯಾದಿಗಳನ್ನು ಉಪಯೋಗಿಸಿ ಸೃಷ್ಟ್ಯಾದಿಗಳನ್ನು ಮಾಡುವುದರಿಂದ ಅದರ ಅಗತ್ಯತೆಯಿಲ್ಲದ್ದರಿಂದ **ಅನಪೇಕ್ಷಃ** ಮತ್ತೊಂದರ ಅಪೇಕ್ಷೆಯಿಲ್ಲದ **ಬ್ರಹ್ಮ** ಪರಬ್ರಹ್ಮನು ಆಗಿರುವೆ. ॥೬॥

ವಿಶೇಷ :- ಪೂರ್ಣಂ ಎಂಬುದು ಬ್ರಹ್ಮಪದದ ವ್ಯಾಖ್ಯಾನವಾಗಿದೆ. ವಿನಾಶವಿಲ್ಲದವನು ಪೂರ್ಣನಾಗಿರುವುದು ಯುಕ್ತವೆಂದು ಅಮೃತಪದದಿಂದ ತಿಳಿಸುತ್ತಿದ್ದಾರೆ. ಷಡ್ವಿಧ ವಿಕಾರವಿಲ್ಲದವನು ಇಂಥವನು ಮತ್ತೊಬ್ಬನಿಲ್ಲವೆಂದು ಅನನ್ಯಪದದಿಂದ ತಿಳಿಸಿದ್ದಾರೆ. ಸ್ವತಂತ್ರನೆಂಬುದನ್ನು ಉಪೇಕ್ಷತಯಾ ಅನಪೇಕ್ಷನೆಂಬುದರಿಂದ ತಿಳಿಸಿದ್ದಾರೆ. ಜಗತ್ಕಾರಣನು ಉಪೇಕ್ಷನೂ ಒಬ್ಬನೇ ಎಂಬುದನ್ನು ವಿಶ್ವಸ್ಯ ಮುಂತಾದವುಗಳಿಂದ ಹೇಳಿರುವರು. **ವಿಗುಣಂ** ಎಂದರೆ ಅಪ್ರಧಾನವಿರುದ್ಧ ಎಂದೂ ಅರ್ಥ ಮಾಡಿರುವರು.

ಸತ್ಯ :- **ವಿಶೋಕಯತಿ ಅನ್ಯಾನ್ ಇತಿ ವಿಶೋಕಂ** ಬೇರೆಯವರನ್ನು ಶೋಕರಹಿತರನ್ನಾಗಿ ಮಾಡುವನು ಎಂದು ಅರ್ಥ. ಅಮೃತತ್ವಕ್ಕೆ ಮುಖ್ಯತ್ವವನ್ನು ತಿಳಿಸಿ ಮುಖ್ಯಪ್ರಾಣನನ್ನು ವ್ಯಾವೃತ್ತಿಮಾಡಲು ವಿಗುಣತ್ವಾದಿಗಳನ್ನು ಹೇಳಿದ್ದಾರೆ.

ವಿಶೇಷ :- ಶ್ರೀಸತ್ಯಧರ್ಮರ ಪ್ರಕಾರ ತದಪೇಕ್ಷತಯಾ ಎಂದು ಪಾಠ. ತೇಷಾಂ ಪ್ರಕೃತ್ಯಾದೀನಾಂ ತದ್ದೇವತಾನಾಂ ಅಪೇಕ್ಷಾ ಯಸ್ಮಿನ್ ಸಃ, ಅಥವಾ ತೈಃ ಅಪೇಕ್ಷಿತ ಇತಿ ತದಪೇಕ್ಷಃ ತಸ್ಯ ಭಾವಃ ತದಪೇಕ್ಷತಾ ತಯಾ ಎಂದು ವಿಗ್ರಹ ಮಾಡಿದ್ದಾರೆ. ಛಲಾರೀ ಆಚಾರ್ಯರು ಕೂಡಾ ತದಪೇಕ್ಷತಯಾ ಎಂದೇ ಪಾಠವನ್ನು ಸಂಗ್ರಹಿಸಿದ್ದಾರೆ. ತೈಃ ಆತ್ಮಭಿಃ ಫಲಾರ್ಥಂ ಅಪೇಕ್ಷ್ಯಂತೇ ಇತಿ ತದಪೇಕ್ಷಃ ತಸ್ಯ ಭಾವಃ ತದಪೇಕ್ಷತಾ ತಯಾ

ಫಲದಾನಾರ್ಥಂ ಜೀವೈರುಪಾಸ್ಯಮಾನತ್ವಾದಿತ್ಯರ್ಥಃ ಎಂದು ವಿಗ್ರಹವನ್ನು ತೋರಿಸಿದ್ದಾರೆ. ಅವರು ತಮಗೆ ಬಲ ಬರಲು ನಿನ್ನನ್ನು ಅಪೇಕ್ಷಿಸುವರು. ನೀನು ದಯೆಯಿಂದ ಅವರನ್ನು ಸ್ವೀಕರಿಸುವಿ.

ವಾಸ್ತವಿಕವಾಗಿ ಭಗವಂತ ಯಾರನ್ನೂ ಅಪೇಕ್ಷಿಸುವುದಿಲ್ಲ ಎಂಬುದನ್ನು ತಿಳಿಸಲು **ಅನಪೇಕ್ಷಃ** ಎಂದು ಹೇಳುತ್ತಿದ್ದಾರೆ. ಅನಿರ್ವಾಹೇಣ ನ ವಿದ್ಯತೇ ಅಪೇಕ್ಷಾ ಯಸ್ಯ ಸಃ ಅನಪೇಕ್ಷಃ ಅನಿವಾರ್ಯವಾಗಿ ಯಾರ ಅಪೇಕ್ಷೆಯೂ ಭಗವಂತನಿಗೆ ಇಲ್ಲ. ಅವರವರನ್ನು ಅನುಗ್ರಹಿಸುವುದಕ್ಕಾಗಿ ಅವರನ್ನು ಉಪಯೋಗಿಸುವಿ ಎಂದು ಅಭಿಪ್ರಾಯ. ವಿಶ್ವಸ್ಯ ಅಮೃತಸ್ಯ ಅಮೃತರಾದ ವಾಯುದೇವರ ಉದಯಾದಿಗಳಿಗೆ ಕಾರಣನಾದವನು ಭಗವಂತ. ಆದ್ದರಿಂದ ವಾಯುದೇವರಿಗೆ ದೇವರ ಅಪೇಕ್ಷೆ ಇದೆ. ತೇನ ವಾಯುನಾ ಅಪೇಕ್ಷಿತಃ ಇತಿ ತದಪೇಕ್ಷಿತಃ । ಸ್ವಯಂ ಪರಮಾತ್ಮನಿಗೆ ವಾಯುದೇವರ ಅಪೇಕ್ಷೆ ಇಲ್ಲ. ಹೀಗೂ ಅರ್ಥ ಮಾಡಿರುವರು. ತದುಪೇಕ್ಷತಯಾ ಎಂಬ ಪಾಠದಲ್ಲಿ ತೇಷು ಕೃತಾ ಉಪೇಕ್ಷಾ ಯಸ್ಯ ತಸ್ಯ ಭಾವಃ ತಯಾ ಎಂದು ವಿಗ್ರಹ. ಅನಪೇಕ್ಷಃ ಎಂದರೆ ಅದರಿಂದ ಬರುವ ಫಲಾಪೇಕ್ಷಾರಹಿತನೆಂದೂ ಅರ್ಥ. ।।೬।।

ಅವತರಣಿಕಾ ः- ಪರಮಾತ್ಮನಲ್ಲಿ ಭೇದವಿಲ್ಲವೆಂಬುದನ್ನು ದೃಷ್ಟಾಂತಸಹಿತವಾಗಿ ಹೇಳುವರು-

**ಏಕಸ್ತ್ವಮೇವ ಸದಸದ್ದ್ವಯಮದ್ವಯಂ ಚ**
**ಸ್ವರ್ಣಂ ಕೃತಾಕೃತಮಿವೇಹ ನ ವಸ್ತುಭೇದಃ ।**
**ಅಜ್ಞಾನತಸ್ತ್ವಯಿ ಜನೈರ್ವಿಹಿತೋ ವಿಕಲ್ಪೋ**
**ಯಸ್ಮಾದ್ ಗುಣವ್ಯತಿಕರೋ ನಿರುಪಾಧಿಕಶ್ಚ ।।೭।।**

**ಕೃತಾಕೃತಂ** ಬಳೆ, ಉಂಗುರ, ಮುಂತಾದ ಆಭರಣಗಳಾಗಿ ಮಾಡಿದ ಮತ್ತು ಮಾಡದಿರುವ **ಸ್ವರ್ಣಂ** ಬಂಗಾರವು **ಏಕಂ** ಒಂದೆಯೋ **ಇಹ** ಬಂಗಾರದಲ್ಲಿ **ವಸ್ತುಭೇದಃ** ಇದು ಬೇರೆ ಅದು ಬೇರೆ ಎಂದು ವಸ್ತುತಃ ಭೇದವು **ನ** ಇಲ್ಲವೋ **ಇವ** ಇದರಂತೆ **ಸದಸದ್ದ್ವಯಂ** ಕಾರ್ಯಗಳಾದ ಮಹತ್ತತ್ವಾದಿಗಳಲ್ಲಿಯೂ ಕಾರಣವಾದ ಪ್ರಕೃತಿಯಲ್ಲಿಯೂ ಇದ್ದು ಆಯಾ ಪದಾರ್ಥಗಳ ಸ್ವಭಾವವನ್ನು ಪ್ರವರ್ತಿಸುವುದರಿಂದ ಸತ್ ಅಸತ್ ಎಂಬ ಎರಡು ಶಬ್ದವಾಚ್ಯನೂ, ಮತ್ತು **ಅದ್ವಯಂ** ಒಬ್ಬನೇ ಎಂದು ಕರೆಯಲ್ಪಡುವವನೂ ಆಗಿರುವ **ತ್ವಂ** ನೀನು **ಏಕಃ ಏವ** ಒಬ್ಬನೇ **ಇಹ** ನಿನ್ನಲ್ಲಿ **ವಸ್ತುಭೇದಃ ನ** ವಾಸ್ತವಿಕವಾದ ಭೇದವು ಇಲ್ಲ. ಇದರಿಂದ ''ಸದೇವ ಸೋಮ್ಯ ಇದಮಗ್ರ ಆಸೀತ್'' ''ಅಸದ್ವಾ ಇದಮಗ್ರ ಆಸೀತ್'' ''ನ ಸತ್ ತನ್ನಾಸದುಚ್ಯತೇ'' ಮುಂತಾದ ಶ್ರುತಿಗಳಿಂದ ಪ್ರತಿಪಾದ್ಯನಾದ ಪರಬ್ರಹ್ಮನು ಒಬ್ಬನೆಂಬುದು ಹೇಗೆ ಎಂಬ ಶಂಕೆಗೆ ಉತ್ತರ

ಕೊಟ್ಟಂತಾಯಿತು. ಈ ಸ್ವಗತ ಅಭೇದವು ಮತ್ತು ಸರ್ವಪ್ರವರ್ತಕತ್ವವು ಸಾಮರ್ಥ್ಯವಿಲ್ಲದವನಿಗೆ ಕೂಡುವುದಿಲ್ಲವಾದ್ದರಿಂದ ನಿರತಿಶಯಸಾಮರ್ಥ್ಯವೂ ನಿನ್ನಲ್ಲಿ ತಿಳಿದುಬರುವುದೆಂದು ಅಭಿಪ್ರಾಯ. ಒಬ್ಬನೇ ಪರಮಾತ್ಮನಿಗೆ ಸ್ಥಾನಭೇದದಿಂದ ಭೇದವನ್ನು ಹೇಳುವುದಕ್ಕೆ ಜನರ ಅಜ್ಞಾನವೇ ಕಾರಣವೆಂದು ಹೇಳುವರು. **ಯಸ್ಮಾತ್** ಯಾವ ಕಾರಣ **ತ್ವಯಿ** ನಿನ್ನಲ್ಲಿ **ವಿಕಲ್ಪಃ** ಸ್ವಗತಭೇದವು **ಅಜ್ಞಾನತಃ** ''ಏಕಮೇವಾದ್ವಿತೀಯಂ'' ''ನ ಸ್ಥಾನತೋऽಪಿ ಪರಸ್ಯೋಭಯಲಿಂಗಂ ಸರ್ವತ್ರ ಹಿ'' ''ಸರ್ವೇಷಾಂ ಭೂತಾನಾಮಂತರಪುರುಷಃ'' ''ಸಮ ಆತ್ಮೇತಿ ವಿದ್ಯಾತ್'' ಮುಂತಾದ ಪ್ರಮಾಣಗಳ ಜ್ಞಾನವಿಲ್ಲದಿರುವುದರಿಂದ, **ಜನೈಃ** ಮೂಢಜನರಿಂದ **ವಿಹಿತಃ** ಆರೋಪಿತವೋ **ತಸ್ಮಾತ್** ಆ ಕಾರಣದಿಂದ ಅದು ವಾಸ್ತವಿಕವಲ್ಲ. (ಎಂದು ಶೇಷ) **ವಿಹತಃ** ಎಂಬ ಪಾಠದಲ್ಲಿ ಅಜ್ಞಾನದಿಂದ ಕಲ್ಪಿತವಾದ್ದರಿಂದ ಅದು ನಷ್ಟವಾಯಿತೆಂದರ್ಥ. ವಸ್ತುತಃ ಇಲ್ಲ. ಈ ಭೇದವಿಕಲ್ಪಕ್ಕೆ ಅವಕಾಶವಾದರೂ ಹೇಗೆ ಎಂದರೆ ಹೇಳುತ್ತಾರೆ. **ಯಸ್ಮಾತ್** ಯಾವ ಕಾರಣ **ಗುಣಾನಾಂ ವ್ಯತಿಕರಃ** ಗುಣಗಳ ಪರಸ್ಪರ ಕಾರ್ಯಪ್ರಯುಕ್ತ ಸೇರುವಿಕೆಯು ಆಯಾಕಾರ್ಯಗಳಲ್ಲಿ ಅವುಗಳ ಪ್ರವರ್ತಕನಾಗಿ ನೀನು ಇರುವುದರಿಂದಲೋ (ಇರುವಿಯೋ) **ತಸ್ಮಾತ್** ಆ ಕಾರಣದಿಂದ ಈ ಅಜ್ಞಜನರ ಭೇದಕಲ್ಪನೆಗೆ ಅವಕಾಶ ಉಂಟೆಂದರ್ಥ. ಸ್ವಾಭಾವಿಕವಾದ ಭೇದವಿಲ್ಲದಿದ್ದರೂ ಉಪಾಧಿಪ್ರಯುಕ್ತವಾದ ಭೇದವಿರಬಹುದಲ್ಲ ಎಂದರೆ ಹೇಳುತ್ತಾರೆ **ಯಸ್ಮಾತ್ ತ್ವಂ ನಿರುಪಾಧಿಕಃ** ಯಾವ ಕಾರಣ ನೀನು ಉಪಾಧಿರಹಿತನೋ ಆ ಕಾರಣ ಔಪಾಧಿಕ ಭೇದಕ್ಕೆ ಅವಕಾಶವಿಲ್ಲ. ಕಲ್ಪಿತವೇ. ಯದ್ಯಪಿ ಆನಂದಮಾತ್ರನೆಂದು ಹೇಳಿದ್ದರಿಂದ ಉಪಾಧಿರಹಿತನೆಂದು ಸಿದ್ಧವಾಗಿದೆ. ಆದರೂ ನಿರುಪಾಧಿಕನೆಂದು ಮತ್ತೆ ಹೇಳಿದ್ದು ಮಂದಜನರ ಶಂಕಾ ನಿವಾರಣೆಗಾಗಿ ಎಂದು ತಿಳಿಯಬೇಕು. ॥೭॥

**ತ್ವಾಂ ಬ್ರಹ್ಮ ಕೇಚಿದವಯಂತ್ಯುತ ಧರ್ಮಮೇಕ**
**ಏಕೇ ಪರಂ ಸದಸತೋಃ ಪುರುಷಂ ಪರೇಶಮ್ ।**
**ಅನ್ಯೇ ವದಂತಿ ನವಶಕ್ತಿಯುತಂ ಪರಂ ತ್ವಾಂ**
**ಕೇಚಿನ್ಮಹಾಪುರುಷಮವ್ಯಮಾತ್ಮತಂತ್ರಮ್** ॥೮॥

**ಕೇಚಿತ್** ವೇದಾಂತಿಗಳು **ತ್ವಾಂ** ನಿನ್ನನ್ನು **ಬ್ರಹ್ಮ ಇತಿ** ಗುಣಪೂರ್ಣನೆಂದು **ಅವಯಂತಿ** ತಿಳಿಯುವರು. **ಉತ** ಮತ್ತು **ಏಕೇ** ಮೀಮಾಂಸಕರು (ಸ್ಮೃತಿಕಾರರು) **ಧರ್ಮಂ** ಜಗದ್ಧಾರಕನಾದ್ದರಿಂದ ಧರ್ಮ(ಕರ್ಮ)ವೆನ್ನುತ್ತಾರೆ **ಏಕೇ** ಪೌರಾಣಿಕರು **ಪರೇಶಂ** ಸರ್ವೋತ್ತಮನಿಯಾಮಕನಾದ ನಿನ್ನನ್ನು **ಸದಸತೋಃ** ಮೂರ್ತಾಮೂರ್ತಪದಾರ್ಥಗಳಿಗಿಂತ **ಪರಂ** ಭಿನ್ನನಾದ **ಪುರುಷಂ** ಚೇತನನೆಂದು ತಿಳಿಯುತ್ತಾರೆ. **ಅನ್ಯೇ** ಇವರಿಗಿಂತ ಭಿನ್ನರಾದ ಪಂಚರಾತ್ರಾನುಯಾಯಿಗಳು **ತ್ವಾಂ** ನಿನ್ನನ್ನು **ನವಶಕ್ತಿಯುತಂ** ವಿಮಲಾ,

ಉತ್ಕರ್ಷಿಣೀ, ಜ್ಞಾನಾ, ಕ್ರಿಯಾ, ಯೋಗಾ, ಪ್ರಹ್ವೀ, ಸತ್ಯಾ, ಈಶಾನಾ, ಅನುಗ್ರಹಾ, ಎಂಬ ಒಂಭತ್ತು ಶಕ್ತಿಯಿಂದ ಕೂಡಿದವನಾದ **ಪರಂ** ಸರ್ವೋತ್ತಮನನ್ನಾಗಿ **ವದಂತಿ** ಹೇಳುತ್ತಾರೆ **ಕೇಚಿತ್** ಏಕಾಂತಭಕ್ತರು ನಿನ್ನನ್ನು **ಅವ್ಯಯಂ** ಚತುರ್ವಿಧ ನಾಶರಹಿತನೆಂದು **ಆತ್ಮತಂತ್ರಂ** ಸ್ವತಂತ್ರನಾದ **ಮಹಾಪುರುಷಂ** ಪುರುಷೋತ್ತಮನೆಂದೂ **ವದಂತಿ** ಹೇಳುವರು.

ಅವತರಣಿಕಾ :- ಅವರವರಿಗೆ ಸಾಮಾನ್ಯಜ್ಞಾನ ಉಳಿದವರಿಗೆ ಜ್ಞಾನದಾರಿದ್ರ್ಯವನ್ನು ಕೈಮುತ್ಯದಿಂದ ಹೇಳುತ್ತಿದ್ದಾರೆ-

**ನಾಹಂ ಪರಾಯುಃ ಋಷಯೋ ನ ಮರೀಚಿಮುಖ್ಯಾ**
**ಜಾನಂತಿ ಯದ್ವಿರಚಿತಂ ಖಲು ಸತ್ವಸರ್ಗಾಃ ।**
**ಯನ್ಮಾಯಯಾ ಮುಷಿತಚೇತಸ ಈಶ ದೈತ್ಯ-**
**ಮರ್ತ್ಯಾದಯಃ ಕಿಮುತ ಶಶ್ವದಭದ್ರವೃತ್ತಾಃ** ॥೯॥

**ಹೇ ಈಶ** ನಿಯಾಮಕನೇ **ಸತ್ವಸರ್ಗಾಃ** ಸಾತ್ವಿಕಜೀವರಾದ **ಅಹಂ** ರುದ್ರನಾದ ನಾನೂ (ಎದುರಿಗೆ ಇರುವುದರಿಂದ ತನ್ನನ್ನೇ ಮೊದಲು ಹೇಳಿರುವರು) **ಪರಾಯುಃ** ಪರ ಎಂಬ ಆಯುಷ್ಯ ಉಳ್ಳ ಬ್ರಹ್ಮದೇವರೂ **ಋಷಯಃ** ನಾರದಾದಿಗಳೂ **ಯತ್** ಯಾವ ನಿನ್ನ **ಮಾಯಯಾ** ಬಂಧಕವಾದ ಇಚ್ಛೆಯಿಂದ **ಮುಷಿತಚೇತಸಃ** ಅಪಹೃತವಾದ ಮನಸ್ಸುಳ್ಳವರಾಗಿ ''ಮುಷಿತಂ ಖಂಡಿತೇ ಹೃತೇ'' ಎಂದು ವಿಶ್ವ **ಯದ್ವಿರಚಿತಂ** ಯಾವ ನಿನ್ನಿಂದ ಸೃಷ್ಟವಾದ ಜಗತ್ತನ್ನು ಮಂದರು **ನ ಜಾನಂತಿ ಖಲು** ಸಾಕಲ್ಯೇನ ತಿಳಿಯಲಾರರು **ಮರೀಚಿಮುಖ್ಯಾಃ** ಮರೀಚಿ ಮೊದಲಾದ ಪ್ರಜೇಶ್ವರರು **ನ ಜಾನಂತಿ** ತಿಳಿಯುವುದಿಲ್ಲ **ಶಶ್ವದಭದ್ರವೃತ್ತಾಃ** ಯಾವಾಗಲೂ ಅಮಂಗಲ ಪ್ರವೃತ್ತಿಯುಳ್ಳವರಾದ **ದೈತ್ಯಮರ್ತ್ಯಾದಯಃ** ದೈತ್ಯರು ಮನುಷ್ಯಾಧಮರು ಮೊದಲಾದ ತಾಮಸ-ರಾಜಸಜೀವರು **ಕಿಮುತ** ತಿಳಿಯುವುದಿಲ್ಲವೆಂದೇನು ಹೇಳುವುದು. ॥೯॥

ಸತ್ಯ :- ಹಿಂದಿನ ಶ್ಲೋಕದಲ್ಲಿ **ಏಕೇ** ಸಾಂಖ್ಯರು **ಏಕೇ** ಮಾಂತ್ರಿಕರು ಕೆಲವರು ಇವನೊಬ್ಬ ಮಹಾಪುರುಷ ಎಂದು ಹೇಳುವರು. ಏನನ್ನು ಅನುಸರಿಸಿ ಹೀಗೆ ಹೇಳುವರು ಎಂದರೇ **ಆತ್ಮತಂತ್ರಂ** ಎಂದಿರುವರು. ಅಂದರೆ ತಮ್ಮಿಂದಲೇ ಉತ್ಪ್ರೇಕ್ಷಿತವಾದ ಸಿದ್ಧಾಂತವನ್ನೇ ಹೇಳುವರೆಂದು ತಾತ್ಪರ್ಯ. (ಇವರಿಗೆ) ಈ ತಾಮಸರಿಗೆ ಜ್ಞಾನದಾರಿದ್ರ್ಯವನ್ನು ಕೈಮುತ್ಯದಿಂದ ಹೇಳುವರು.

ಸಾತ್ವಿಕರೆಂದದ್ದರಿಂದ ತಿಳಿಯುವ ಯೋಗ್ಯತೆ ಉಳ್ಳವರೆಂದೂ, ಆದರೂ ತಿಳಿಯದಿರಲು ನೀನು ತಿಳಿಸಿಕೊಡದಿರುವುದೇ ಕಾರಣವೆಂದೂ, ದೈತ್ಯ ಮೊದಲಾದವರು ತಿಳಿಯುವ ಯೋಗ್ಯತೆಯೇ ಇಲ್ಲದವರೆಂದೂ **ಯನ್ಮಾಯಯಾ** ಇತ್ಯಾದಿಗಳಿಂದ ತಿಳಿಸಿರುವರು.

ಲಿಂಗೇರೀ :- ರುದ್ರ ಮುಂತಾದವರೇ ಭಗವಂತನನ್ನು ತಿಳಿಯಲಾರರು ಎಂದು ಹೇಳಿದ್ದರಿಂದ ಪೌಂಡ್ರಕವಾಸುದೇವ, ಭಾಸ್ಕರ ಮುಂತಾದವರು ಹೇಳುವ ಭಗವತ್ಸಾಮ್ಯವು ಸರ್ವಥಾ ಯುಕ್ತವಲ್ಲ ಎಂದು ಸಿದ್ಧವಾಗುತ್ತದೆ. ಆದ್ದರಿಂದ ನಾನು ನಿನ್ನನ್ನು ಸ್ತುತಿಸಿದ್ದು ಸರಿಯೆಂದೂ ಸಮರ್ಥಿಸಿರುವರು. ||೯||

ಅವತರಣಿಕಾ :- ಮತಗಳ ನಾನಾತ್ವವು ನನಗೆ ಸಮ್ಮತವಲ್ಲವೆಂದು ಹೇಳುವರು-

**ಸ ತ್ವಂ ಸಮೀಹಸಿ ತತಃ ಸ್ಥಿತಜನ್ಮನಾಶಾನ್**
**ಭೂತೇ ಹಿತಂ ಚ ಜಗತೋ ಹ್ಯಪಿ ಬಂಧಮೋಕ್ಷೌ ।**
**ವಾಯುರ್ಯಥಾ ವಿಶತಿ ಖಂ ಚ ಚರಾಚರಾಖ್ಯಂ**
**ಸರ್ವಂ ತ್ವದಾತ್ಮಕತಯಾಽವಗಮೋ ನುತಿಸ್ತೇ** ||೧೦||

**ತತಃ** ಇತರ ದೇವತೆಗಳಿಗಿಂತ ನೀನು ಉತ್ತಮನಾದ ಕಾರಣದಿಂದ **ಸಃ** ಬ್ರಹ್ಮಾದಿಗಳಿಂದ ತಿಳಿಯಲಾಗದ ಸಾಮರ್ಥ್ಯ ಉಳ್ಳ **ತ್ವಂ** ನೀನು **ಜಗತಃ** ಚರಾಚರಪ್ರಪಂಚದ **ಸ್ಥಿತಿಜನ್ಮನಾಶಾನ್** ಪಾಲನೆ-ಸೃಷ್ಟಿ-ಸಂಹಾರಗಳನ್ನು **ಭೂತೇಹಿತಂ ಚ** ಪ್ರಾಣಿಗಳ ಇಷ್ಟವನ್ನು **ಬಂಧಮೋಕ್ಷೌ** ಸಂಸಾರದಿಂದ ಬಂಧ ಮತ್ತು ಮೋಚನಗಳನ್ನು **ಸಮೀಹಸಿ** ಅವರವರ ಯೋಗ್ಯತಾನುಸಾರ ಮಾಡುತ್ತಿರುವಿ ಇದರಿಂದ ಸೃಷ್ಟ್ಯಾದಿಗಳನ್ನು ಬೇರೆ ಬೇರೆಯವರು ಮಾಡುತ್ತಿರುವುದರಿಂದ ನಿನ್ನ ರೂಪಗಳಲ್ಲಿ ಭೇದವೇಕಿರಬಾರದೆಂಬ ಶಂಕೆಯನ್ನು ಪರಿಹರಿಸಿರುವರು. ಆದ್ದರಿಂದ ಬ್ರಹ್ಮಧರ್ಮಾದಿಶಬ್ದಗಳು ನಿನ್ನನ್ನೇ ಹೇಳುವುದೆಂಬುದು ಸ್ತೋತ್ರ. ಅದಕ್ಕಿಂತ ಬೇರೆ ನಿನ್ನ ಸ್ತುತಿ ಇಲ್ಲವೆಂದರ್ಥ. ಆದ್ದರಿಂದ ನಿನ್ನಲ್ಲಿ ಭೇದವಿದೆ ಎಂಬುದು ಭ್ರಾಂತಿ ಎಂದರ್ಥ. ಇದಕ್ಕೆ ಉದಾಹರಣೆ ಕೊಡುತ್ತಾರೆ, **ಯಥಾ** ಹೇಗೆ **ವಾಯುಃ** ವಾಯುದೇವನು **ಖಂ** ಆಕಾಶವನ್ನು **ಚರಾಚರಾಖ್ಯಂ** ಚರಾಚರವೆಂಬ ಜಗತ್ತನ್ನು **ವಿಶತಿ** ಪ್ರವೇಶಿಸುರುವನೋ **ಚ** ಅದರಿಂದ ಭಿನ್ನನೋ **ತಥಾ** ಹಾಗೆಯೇ ''ತತ್ ಸೃಷ್ಟ್ವಾ ತದೇವಾನುಪ್ರಾವಿಶತ್'' ಎಂಬ ಶ್ರುತಿಯಂತೆ **ಸರ್ವಂ** ಈ ಎಲ್ಲ ಜಗತ್ತೂ **ತ್ವದಾತ್ಮಕತಯಾ** ಆಯಾ ವಸ್ತುಗಳ ಪ್ರವರ್ತಕರೂಪಗಳಿಂದ ಅವುಗಳಲ್ಲಿ ಪ್ರವೇಶಿಸಿ ಅವುಗಳಲ್ಲಿ ವ್ಯಾಪ್ತನಾಗಿರುವೆ ಎಂದು, ನಿಯಾಮಕನಾಗಿರುವೆ ಎಂದು **ಅವಗಮಃ** ತಿಳಿಯುವುದೇ **ತೇ** ನಿನ್ನ **ನುತಿಃ** ಸ್ತೋತ್ರವು ಆಗುವುದು.

ನೀನೂ ಜಗತ್ತು ಒಂದು ಎಂಬುದು ಸ್ತೋತ್ರವಲ್ಲ. ಅದು ಅನ್ಯಥಾಜ್ಞಾನ. ಇದರಿಂದ ಧರ್ಮಾದಿಪ್ರವರ್ತಕನಾದ್ದರಿಂದ ಆಯಾ ಶಬ್ದವಾಚ್ಯನೆಂಬ ಜ್ಞಾನವೇ ಸ್ತುತಿಯೆಂದು ಹೇಳಿದಂತಾಯಿತು. ''ಸರ್ವಂ ಖಲ್ವಿದಂ ಬ್ರಹ್ಮ'' ''ಪುರುಷ ಏವೇದಂ ಸರ್ವಂ'' ''ತದ್ವಿಶ್ವಮುಪಜೀವತಿ'' ''ಸರ್ವಂ ಸಮಾಪ್ನೋಷಿ ತತೋಽಸಿ ಸರ್ವಃ'' ಮೊದಲಾದ **ಅವಗಮಃ** ಆಗಮವು **ತೇ** ನಿನ್ನ **ನುತಿಃ** ಗುಣೋತ್ಕರ್ಷವನ್ನು ಹೇಳುತ್ತದೆ. ಆದ್ದರಿಂದ

ಆಗಮವೇ ನಿನ್ನನ್ನು ಸ್ತುತಿಸಲು ಸಮರ್ಥ. ನಿನ್ನನ್ನು ಸ್ತುತಿಸಲು ನಾನು ಸಮರ್ಥನಲ್ಲ. ಎಂದು ತಿಳಿಸಿದಂತಾಗುತ್ತದೆ. ವಾಯುವಿನ ದೃಷ್ಟಾಂತದಿಂದ ಅಧಿಷ್ಠಾನಗಳ ದೋಷಸಂಗವಿಲ್ಲವೆಂದು ತಿಳಿಸಿರುವರು. ಅವಗಚ್ಛತಿ ಸರ್ವಂ ಇತಿ ಅವಗಮಃ ಸರ್ವಜ್ಞ ಎಂದೂ ಅರ್ಥ ಮಾಡಿದೆ. ॥೧೦॥

ಹೇ ರುದ್ರನೇ! ಏಕೇ ಇಷ್ಟೊಂದು ಸ್ತೋತ್ರ ಮಾಡಿದೆ, ಅದನ್ನು ಹೇಳು ಎಂದರೆ ಹೇಳುವರು-

**ಅವತಾರಾ ಮಯಾ ದೃಷ್ಟಾ ರಮಮಾಣಸ್ಯ ತೇ ಗುಣೈಃ ।**
**ಸೋऽಹಂ ತದ್ ದ್ರಷ್ಟುಮಿಚ್ಛಾಮಿ ಯತ್ತೇ ಯೋಷಿದ್ವಪುರ್ಧೃತಮ್ ॥೧೧॥**

**ರಮಮಾಣಸ್ಯ** ನಿನ್ನ ಇಚ್ಛೆಯಿಂದಲೇ ಕ್ರೀಡಿಸುವ **ತೇ** ನಿನ್ನ **ಗುಣೈಃ** ಗುಣಗಳಿಂದ ಪೂರ್ಣವಾದ **ಅವತಾರಾಃ** ನಾರಾಯಣೀ ರೂಪವನ್ನು ಬಿಟ್ಟು ಉಳಿದ ಅವತಾರಗಳು **ಮಯಾ ದೃಷ್ಟಾಃ** ನನ್ನಿಂದ ನೋಡಲ್ಪಟ್ಟಿವೆ **ಸಃ ಅಹಂ** ಉಳಿದ ಅವತಾರಗಳನ್ನು ಕಂಡ ನಾನು **ತೇ** ನಿನ್ನಿಂದ **ಯತ್** ಯಾವ **ಯೋಷಿದ್ವಪುಃ** ಸ್ತ್ರೀರೂಪವು **ಧೃತಂ** ವ್ಯಕ್ತಮಾಡಲ್ಪಟ್ಟಿತೋ **ತತ್** ಅದನ್ನು **ದ್ರಷ್ಟುಂ ಇಚ್ಛಾಮಿ** ನೋಡಲು ಬಯಸುತ್ತೇನೆ. ॥೧೧॥

**ಯೇನ ಸಮ್ಮೋಹಿತಾ ದೈತ್ಯಾಃ ಪಾಯಿತಾಶ್ಚಾಮೃತಂ ಸುರಾಃ ।**
**ತದ್ದಿದೃಕ್ಷವ ಆಯಾತಾಃ ಪರಂ ಕೌತೂಹಲಂ ಹಿ ನಃ ॥೧೨॥**

**ಯೇನ** ಯಾವ ಈ ಸ್ತ್ರೀರೂಪದಿಂದ **ದೈತ್ಯಾಃ** ಅಮೃತಪ್ರಾಪ್ತಿಗಾಗಿ ಕಲಶವನ್ನು ಕಸಿದುಕೊಂಡು ಹೋಗಿದ್ದ ದೈತ್ಯರು **ಸಮ್ಮೋಹಿತಾಃ** ಪೂರ್ಣವಾಗಿ ಮೋಹಗೊಳಿಸಲ್ಪಟ್ಟರೋ **ಚ** ಮತ್ತು **ಸುರಾಃ** ದೇವತೆಗಳು (ಅಮೃತಪಾನಕ್ಕೆ ಅರ್ಹರಾದವರು) **ಅಮೃತಂ ಪಾಯಿತಾಃ** ಅಮೃತವನ್ನು ಕುಡಿಸಲ್ಪಟ್ಟರೋ **ತತ್** ಆ ರೂಪವನ್ನು **ದಿದೃಕ್ಷವಃ** ನೋಡಬೇಕೆಂಬ ಇಚ್ಛೆಯಿಂದ **ಆಯಾತಾಃ** ನಾವು ಬಂದಿರುವೆವು **ಹಿ** ಏಕೆಂದರೆ **ನಃ** ನಮಗೆ **ಪರಂ ಕೌತೂಹಲಂ** ಅದನ್ನು ಯಾವಾಗ ಕಂಡೇವು ಎಂಬ ಬುದ್ಧಿಯು ಇರುವುದು. ಅದನ್ನು ತೋರಿಸುವ ಅನುಗ್ರಹವನ್ನು ನೀನು ಮಾಡಬೇಕೆಂದು ಈ ಸ್ತೋತ್ರವನ್ನು ಮಾಡಿದ್ದೇನೆ ಎಂದು ತಾತ್ಪರ್ಯ. ॥೧೨॥

**ಶ್ರೀಶುಕ ಉವಾಚ**

**ಏವಮಭ್ಯರ್ಥಿತೋ ವಿಷ್ಣುರ್ಭಗವಾನ್ ಶೂಲಪಾಣಿನಾ ।**
**ಪ್ರಹಸ್ಯ ಭಾವಗಂಭೀರಂ ಗಿರಿಶಂ ಪ್ರತ್ಯಭಾಷತ ॥೧೩॥**

**ಭಗವಾನ್** ಸಮಸ್ತ ಐಶ್ವರ್ಯಪೂರ್ಣನಾದ **ವಿಷ್ಣುಃ** ವಿಷ್ಣುವು **ಶೂಲಪಾಣಿನಾ** ರುದ್ರದೇವರಿಂದ **ಏವಂ** ಮೇಲೆ ಹೇಳಿದಂತೆ **ಅಭ್ಯರ್ಥಿತಃ ಸನ್** ಭಕ್ತಿಯಿಂದ ಪ್ರಾರ್ಥಿತನಾಗಿ

ಲಿಂಗೇರೀ :- ರುದ್ರ ಮುಂತಾದವರೇ ಭಗವಂತನನ್ನು ತಿಳಿಯಲಾರರು ಎಂದು ಹೇಳಿದ್ದರಿಂದ ಪೌಂಡ್ರಕವಾಸುದೇವ, ಭಾಸ್ಕರ ಮುಂತಾದವರು ಹೇಳುವ ಭಗವತ್ಸಾಮ್ಯವು ಸರ್ವಥಾ ಯುಕ್ತವಲ್ಲ ಎಂದು ಸಿದ್ಧವಾಗುತ್ತದೆ. ಆದ್ದರಿಂದ ನಾನು ನಿನ್ನನ್ನು ಸ್ತುತಿಸಿದ್ದು ಸರಿಯೆಂದೂ ಸಮರ್ಥಿಸಿರುವರು. ।।೯।।

ಅವತರಣಿಕಾ :- ಮತಗಳ ನಾನಾತ್ವವು ನನಗೆ ಸಮ್ಮತವಲ್ಲವೆಂದು ಹೇಳುವರು-

**ಸ ತ್ವಂ ಸಮೀಹಸಿ ತತಃ ಸ್ಥಿತಜನ್ಮನಾಶಾನ್**
**ಭೂತೇ ಹಿತಂ ಚ ಜಗತೋ ಹ್ಯಪಿ ಬಂಧಮೋಕ್ಷೌ ।**
**ವಾಯುರ್ಯಥಾ ವಿಶತಿ ಖಂ ಚ ಚರಾಚರಾಖ್ಯಂ**
**ಸರ್ವಂ ತ್ವದಾತ್ಮಕತಯಾಽವಗಮೋ ನುತಿಸ್ತೇ** ।।೧೦।।

**ತತಃ** ಇತರ ದೇವತೆಗಳಿಗಿಂತ ನೀನು ಉತ್ತಮನಾದ ಕಾರಣದಿಂದ **ಸಃ** ಬ್ರಹ್ಮಾದಿಗಳಿಂದ ತಿಳಿಯಲಾಗದ ಸಾಮರ್ಥ್ಯ ಉಳ್ಳ **ತ್ವಂ** ನೀನು **ಜಗತಃ** ಚರಾಚರಪ್ರಪಂಚದ **ಸ್ಥಿತಿಜನ್ಮನಾಶಾನ್** ಪಾಲನೆ-ಸೃಷ್ಟಿ-ಸಂಹಾರಗಳನ್ನು **ಭೂತೇಹಿತಂ ಚ** ಪ್ರಾಣಿಗಳ ಇಷ್ಟವನ್ನು **ಬಂಧಮೋಕ್ಷೌ** ಸಂಸಾರದಿಂದ ಬಂಧ ಮತ್ತು ಮೋಚನಗಳನ್ನು **ಸಮೀಹಸಿ** ಅವರವರ ಯೋಗ್ಯತಾನುಸಾರ ಮಾಡುತ್ತಿರುವಿ ಇದರಿಂದ ಸೃಷ್ಟ್ಯಾದಿಗಳನ್ನು ಬೇರೆ ಬೇರೆಯವರು ಮಾಡುತ್ತಿರುವುದರಿಂದ ನಿನ್ನ ರೂಪಗಳಲ್ಲಿ ಭೇದವೇಕಿರಬಾರದೆಂಬ ಶಂಕೆಯನ್ನು ಪರಿಹರಿಸಿರುವರು. ಆದ್ದರಿಂದ ಬ್ರಹ್ಮಧರ್ಮಾದಿಶಬ್ದಗಳು ನಿನ್ನನ್ನೇ ಹೇಳುವುದೆಂಬುದು ಸ್ತೋತ್ರ. ಅದಕ್ಕಿಂತ ಬೇರೆ ನಿನ್ನ ಸ್ತುತಿ ಇಲ್ಲವೆಂದರ್ಥ. ಆದ್ದರಿಂದ ನಿನ್ನಲ್ಲಿ ಭೇದವಿದೆ ಎಂಬುದು ಭ್ರಾಂತಿ ಎಂದರ್ಥ. ಇದಕ್ಕೆ ಉದಾಹರಣೆ ಕೊಡುತ್ತಾರೆ, **ಯಥಾ** ಹೇಗೆ **ವಾಯುಃ** ವಾಯುದೇವನು **ಖಂ** ಆಕಾಶವನ್ನು **ಚರಾಚರಾಖ್ಯಂ** ಚರಾಚರವೆಂಬ ಜಗತ್ತನ್ನು **ವಿಶತಿ** ಪ್ರವೇಶಿಸುರುವನೋ **ಚ** ಅದರಿಂದ ಭಿನ್ನನೋ **ತಥಾ** ಹಾಗೆಯೇ ''ತತ್ ಸೃಷ್ಟ್ವಾ ತದೇವಾನುಪ್ರಾವಿಶತ್'' ಎಂಬ ಶ್ರುತಿಯಂತೆ **ಸರ್ವಂ** ಈ ಎಲ್ಲ ಜಗತ್ತೂ **ತ್ವದಾತ್ಮಕತಯಾ** ಆಯಾ ವಸ್ತುಗಳ ಪ್ರವರ್ತಕರೂಪಗಳಿಂದ ಅವುಗಳಲ್ಲಿ ಪ್ರವೇಶಿಸಿ ಅವುಗಳಲ್ಲಿ ವ್ಯಾಪ್ತನಾಗಿರುವೆ ಎಂದು, ನಿಯಾಮಕನಾಗಿರುವೆ ಎಂದು **ಅವಗಮಃ** ತಿಳಿಯುವುದೇ **ತೇ** ನಿನ್ನ **ನುತಿಃ** ಸ್ತೋತ್ರವು ಆಗುವುದು.

ನೀನೂ ಜಗತ್ತು ಒಂದು ಎಂಬುದು ಸ್ತೋತ್ರವಲ್ಲ. ಅದು ಅನ್ಯಥಾಜ್ಞಾನ. ಇದರಿಂದ ಧರ್ಮಾದಿಪ್ರವರ್ತಕನಾದ್ದರಿಂದ ಆಯಾ ಶಬ್ದವಾಚ್ಯನೆಂಬ ಜ್ಞಾನವೇ ಸ್ತುತಿಯೆಂದು ಹೇಳಿದಂತಾಯಿತು. ''ಸರ್ವಂ ಖಲ್ವಿದಂ ಬ್ರಹ್ಮ'' ''ಪುರುಷ ಏವೇದಂ ಸರ್ವಂ'' ''ತದ್ವಿಶ್ವಮುಪಜೀವತಿ'' ''ಸರ್ವಂ ಸಮಾಪ್ನೋಷಿ ತತೋಽಸಿ ಸರ್ವಃ'' ಮೊದಲಾದ **ಅವಗಮಃ** ಆಗಮವು **ತೇ** ನಿನ್ನ **ನುತಿಃ** ಗುಣೋತ್ಕರ್ಷವನ್ನು ಹೇಳುತ್ತದೆ. ಆದ್ದರಿಂದ

ಆಗಮವೇ ನಿನ್ನನ್ನು ಸ್ತುತಿಸಲು ಸಮರ್ಥ. ನಿನ್ನನ್ನು ಸ್ತುತಿಸಲು ನಾನು ಸಮರ್ಥನಲ್ಲ. ಎಂದು ತಿಳಿಸಿದಂತಾಗುತ್ತದೆ. ವಾಯುವಿನ ದೃಷ್ಟಾಂತದಿಂದ ಅಧಿಷ್ಠಾನಗಳ ದೋಷಸಂಗವಿಲ್ಲವೆಂದು ತಿಳಿಸಿರುವರು. ಅವಗಚ್ಛತಿ ಸರ್ವಂ ಇತಿ ಅವಗಮಃ ಸರ್ವಜ್ಞ ಎಂದೂ ಅರ್ಥ ಮಾಡಿದೆ. ||೧೦||

ಹೇ ರುದ್ರನೇ! ಏಕೇ ಇಷ್ಟೊಂದು ಸ್ತೋತ್ರ ಮಾಡಿದೆ, ಅದನ್ನು ಹೇಳು ಎಂದರೆ ಹೇಳುವರು-

**ಅವತಾರಾ ಮಯಾ ದೃಷ್ಟಾ ರಮಮಾಣಸ್ಯ ತೇ ಗುಣೈಃ ।**
**ಸೋऽಹಂ ತದ್ ದ್ರಷ್ಟುಮಿಚ್ಛಾಮಿ ಯತ್ತೇ ಯೋಷಿದ್ವಪುರ್ಧೃತಮ್ ||೧೧||**

**ರಮಮಾಣಸ್ಯ** ನಿನ್ನ ಇಚ್ಛೆಯಿಂದಲೇ ಕ್ರೀಡಿಸುವ **ತೇ** ನಿನ್ನ **ಗುಣೈಃ** ಗುಣಗಳಿಂದ ಪೂರ್ಣವಾದ **ಅವತಾರಾಃ** ನಾರಾಯಣೀ ರೂಪವನ್ನು ಬಿಟ್ಟು ಉಳಿದ ಅವತಾರಗಳು **ಮಯಾ ದೃಷ್ಟಾಃ** ನನ್ನಿಂದ ನೋಡಲ್ಪಟ್ಟಿವೆ **ಸಃ ಅಹಂ** ಉಳಿದ ಅವತಾರಗಳನ್ನು ಕಂಡ ನಾನು **ತೇ** ನಿನ್ನಿಂದ **ಯತ್** ಯಾವ **ಯೋಷಿದ್ವಪುಃ** ಸ್ತ್ರೀರೂಪವು **ಧೃತಂ** ವ್ಯಕ್ತಮಾಡಲ್ಪಟ್ಟಿತ್ತೋ **ತತ್** ಅದನ್ನು **ದ್ರಷ್ಟುಂ ಇಚ್ಛಾಮಿ** ನೋಡಲು ಬಯಸುತ್ತೇನೆ. ||೧೧||

**ಯೇನ ಸಮ್ಮೋಹಿತಾ ದೈತ್ಯಾಃ ಪಾಯಿತಾಶ್ಚಾಮೃತಂ ಸುರಾಃ ।**
**ತದ್ದಿದೃಕ್ಷವ ಆಯಾತಾಃ ಪರಂ ಕೌತೂಹಲಂ ಹಿ ನಃ ||೧೨||**

**ಯೇನ** ಯಾವ ಈ ಸ್ತ್ರೀರೂಪದಿಂದ **ದೈತ್ಯಾಃ** ಅಮೃತಪ್ರಾಪ್ತಿಗಾಗಿ ಕಲಶವನ್ನು ಕಸಿದುಕೊಂಡು ಹೋಗಿದ್ದ ದೈತ್ಯರು **ಸಮ್ಮೋಹಿತಾಃ** ಪೂರ್ಣವಾಗಿ ಮೋಹಗೊಳಿಸಲ್ಪಟ್ಟರೋ **ಚ** ಮತ್ತು **ಸುರಾಃ** ದೇವತೆಗಳು (ಅಮೃತಪಾನಕ್ಕೆ ಅರ್ಹರಾದವರು) **ಅಮೃತಂ ಪಾಯಿತಾಃ** ಅಮೃತವನ್ನು ಕುಡಿಸಲ್ಪಟ್ಟರೋ **ತತ್** ಆ ರೂಪವನ್ನು **ದಿದೃಕ್ಷವಃ** ನೋಡಬೇಕೆಂಬ ಇಚ್ಛೆಯಿಂದ **ಆಯಾತಾಃ** ನಾವು ಬಂದಿರುವೆವು **ಹಿ** ಏಕೆಂದರೆ **ನಃ** ನಮಗೆ **ಪರಂ ಕೌತೂಹಲಂ** ಅದನ್ನು ಯಾವಾಗ ಕಂಡೇವು ಎಂಬ ಬುದ್ಧಿಯು ಇರುವುದು. ಅದನ್ನು ತೋರಿಸುವ ಅನುಗ್ರಹವನ್ನು ನೀನು ಮಾಡಬೇಕೆಂದು ಈ ಸ್ತೋತ್ರವನ್ನು ಮಾಡಿದ್ದೇನೆ ಎಂದು ತಾತ್ಪರ್ಯ. ||೧೨||

**ಶ್ರೀಶುಕ ಉವಾಚ**

**ಏವಮಭ್ಯರ್ಥಿತೋ ವಿಷ್ಣುರ್ಭಗವಾನ್ ಶೂಲಪಾಣಿನಾ ।**
**ಪ್ರಹಸ್ಯ ಭಾವಗಂಭೀರಂ ಗಿರಿಶಂ ಪ್ರತ್ಯಭಾಷತ ||೧೩||**

**ಭಗವಾನ್** ಸಮಸ್ತ ಐಶ್ವರ್ಯಪೂರ್ಣನಾದ **ವಿಷ್ಣುಃ** ವಿಷ್ಣುವು **ಶೂಲಪಾಣಿನಾ** ರುದ್ರದೇವರಿಂದ **ಏವಂ** ಮೇಲೆ ಹೇಳಿದಂತೆ **ಅಭ್ಯರ್ಥಿತಃ ಸನ್** ಭಕ್ತಿಯಿಂದ ಪ್ರಾರ್ಥಿತನಾಗಿ

**ಗಿರಿಶಂ ಪ್ರತಿ** ರುದ್ರದೇವರನ್ನು ಕುರಿತು **ಭಾವಗಂಭೀರಂ** ಗೂಢಾಭಿಪ್ರಾಯದಿಂದ ಪೂರ್ಣವಾಗಿರುವಂತೆ **ಪ್ರಹಸ್ಯ** ನಕ್ಕು **ಅಭಾಷತ** ಹೇಳಿದನು. ।।೧೩।।

**ಶ್ರೀಭಗವಾನುವಾಚ**

**ಕೌತೂಹಲಾಯ ದೈತ್ಯಾನಾಂ ಯೋಷಿದ್ವೇಷೋ ಮಯಾ ಕೃತಃ ।**
**ಪಶ್ಯತಾ ಸುರಕಾರ್ಯಾಣಿ ಗತೇ ಪೀಯೂಷಭಾಜನೇ ।।೧೪।।**

**ಪೀಯೂಷಭಾಜನೇ** ಅಮೃತಕಲಶವು **ಗತೇ ಸತಿ** ಧನ್ವಂತರಿರೂಪದ ನನ್ನ ಕೈಯಿಂದ ದೈತ್ಯರು ಅಪಹರಿಸುತ್ತಿರಲು **ಸುರಕಾರ್ಯಾಣಿ** ದೇವತೆಗಳಿಗೆ ಅಮೃತ ದೊರಕಿಸಬೇಕೆಂದು **ಪಶ್ಯತಾ** ತಿಳಿದ **ಮಯಾ** ನನ್ನಿಂದ **ದೈತ್ಯಾನಾಂ** ದೈತ್ಯರನ್ನು **ಕೌತೂಹಲಾಯ** ಆಶ್ಚರ್ಯಗೊಳಿಸಲು **ಯೋಷಿದ್ವೇಷಃ** ಸ್ತ್ರೀರೂಪವು **ಕೃತಃ** ತೋರಿಸಲ್ಪಟ್ಟಿತು. ।।೧೪।।

ಕಾಮನನ್ನು ದಹಿಸಿದ ನಿನ್ನನ್ನೂ ಮನ್ಮಥೇಚ್ಛೆಗೆ ಗುರಿಪಡಿಸುವುದೆಂಬುದೇ ಗೂಢಾಭಿಪ್ರಾಯ. ಅದಕ್ಕಾಗಿಯೇ ನಕ್ಕದ್ದು.

ಸತ್ಯ ಃ- ದೈತ್ಯರು ಅಮೃತವನ್ನು ಪಾನಮಾಡಲು ಅಯೋಗ್ಯರಾಗಿದ್ದಾರೆ. ದೇವತೆಗಳು ಅಮೃತಪಾನಕ್ಕೆ ಯೋಗ್ಯರಾಗಿದ್ದಾರೆ. ಆದ್ದರಿಂದ ದೈತ್ಯರನ್ನು ವಂಚಿಸಿ ದೇವತೆಗಳಿಗೆ ಮಾತ್ರ ಅಮೃತವನ್ನು ನೀಡಬೇಕು. ಈ ವೈಷಮ್ಯವನ್ನು ಕಾಮಿನೀವೇಷದಿಂದಲೇ ಮಾಡಬೇಕು. ಬೇರೇ ರೂಪದಿಂದ ಮಾಡಲಾಗದು. ಆದ್ದರಿಂದ ಪರಮಾತ್ಮ ಕಾಮಿನೀರೂಪವನ್ನು ಧರಿಸಿದ ಎಂದು ಅಭಿಪ್ರಾಯ. ।।೧೪।।

**ತತ್ತೇಽಹಂ ದರ್ಶಯಿಷ್ಯಾಮಿ ದಿದೃಕ್ಷೋಃ ಸುರಸತ್ತಮ ।**
**ತತ್ಕಾಮಿನಾಂ ಚ ಮಂತವ್ಯಂ ಸಂಕಲ್ಪಪ್ರಭವೋದಯಮ್ ।।೧೫।।**

**ಹೇ ಸುರಸತ್ತಮ** ಇಂದ್ರಾದಿದೇವತೆಗಳಿಗಿಂತ ಉತ್ತಮನಾದ ರುದ್ರನೇ **ದಿದೃಕ್ಷೋಃ** ನೋಡಲಿಚ್ಛಿಸುವ **ತೇ** ನಿನಗೆ **ಅಹಂ** ನಾನು (ನಿನ್ನ ಸ್ತುತಿಯಿಂದ ಅನುಗ್ರಹೋನ್ಮುಖನಾಗಿ) **ತತ್** ಆ ಹೆಣ್ಣುರೂಪವನ್ನು **ದರ್ಶಯಿಷ್ಯಾಮಿ** ತೋರಿಸುತ್ತೇನೆ. **ತತ್** ಆ ಸ್ತ್ರೀರೂಪವೂ **ಕಾಮಿನಾಂ** ಕಾಮುಕರಿಗೂ **ಚ** ಅಕಾಮುಕರಿಗೂ **ಸಂಕಲ್ಪಪ್ರಭವೋದಯಂ** ಮನಸ್ಸಿನಿಂದ ಜನಿಸಿದ ಮನ್ಮಥನ ಅಂದರೆ ಕಾಮನನ್ನು ಹುಟ್ಟಿಸುವುದೆಂದು **ಮಂತವ್ಯಂ** ತಿಳಿ. ।।೧೫।।

ಸತ್ಯ ಃ- ತತ್ಕಾಮಿನಾಂ ಎಂಬುದಕ್ಕೆ ತತತ್ವಾತ್ ವ್ಯಾಪ್ತನಾದುದರಿಂದ **ತತ್** ಅಂದರೆ ಭಗವಂತ. ತಸ್ಯ ಕಾಮಃ ಯೇಷಾಂ ಅಸ್ತೀತಿ ತೇ ತತ್ಕಾಮಿನಃ ಅಂದರೆ ಅಂಥ ಭಗವಂತನ ಕಾಮುಕರು ಅರ್ಥಾತ್ ವಿಷಯಕಾಮನಾರಹಿತರು ನಿಷ್ಕಾಮರು ಎಂದು ಅರ್ಥ. ತೇಷಾಮಪಿ ಅವರಿಗೂ ಮಂತವ್ಯಂ ಕಾಮಜನಕವೆಂದು ತಿಳಿಯಬೇಕು. ಚಶಬ್ದದಿಂದ

ಕಾಮಿನಾಂ ಕಿಮು ಕಾಮುಕರಿಗೆ ಕಾಮಜನಕವೆಂದು ಪ್ರತ್ಯೇಕವಾಗಿ ಹೇಳಬೇಕೇ? ಎಂದು ಸೂಚಿಸಿರುವರು. ।।೧೫।।

**ಶ್ರೀಶುಕ ಉವಾಚ**

**ಇತಿ ಬ್ರುವಾಣೋ ಭಗವಾಂಸ್ತತ್ರೈವಾಂತರಧೀಯತ ।**
**ಸರ್ವತಶ್ಚಾರಯಂಶ್ಚಕ್ಷುರ್ಭವ ಆಸ್ತೇ ಸಹೋಮಯಾ ।।೧೬।।**

**ಭಗವಾನ್** ಶ್ರೀಹರಿಯು **ಇತಿ ಬ್ರುವಾಣಃ ಏವ** ಹೀಗೆ ರುದ್ರದೇವರಿಗೆ ಹೇಳುತ್ತಲೇ **ಅಂತರಧೀಯತ** ಅದೃಶ್ಯನಾದನು. **ಭವಃ** ರುದ್ರದೇವರು **ಚಕ್ಷುಃ** ತನ್ನ ಕಣ್ಣನ್ನು **ಸರ್ವತಃ** ಸುತ್ತಲೂ **ಚಾರಯನ್** ಸಂಚಾರ ಮಾಡಿಸುತ್ತ ಕಣ್ಣಿನಿಂದ ಸುತ್ತಲೂ ನೋಡುತ್ತ **ಉಮಯಾ ಸಹ** ಪಾರ್ವತಿಯೊಡನೇ **ಆಸ್ತೇ** ಇದ್ದರು.

ಸತ್ಯ ಃ- ರುದ್ರದೇವರು ತ್ರಿಲೋಚನರು. ಹೀಗಾಗಿ ಚಕ್ಷೂಂಷಿ ಎಂದು ಬಹುವಚನವನ್ನು ಪ್ರಯೋಗಿಸಬೇಕಾಗಿತ್ತು. ನಿಜ. ಆದರೆ, ಪ್ರಕೃತ ರುದ್ರದೇವರು ಭಗವಂತನನ್ನು ನೋಡುವ ಒಂದೇ ಕಾರ್ಯದಲ್ಲಿ ಮೂರು ಕಣ್ಣಗಳನ್ನೂ ತೊಡಗಿಸಿದ್ದಾರೆ. ಹೊರತು ಭಿನ್ನ ಭಿನ್ನವಿಷಯಗಳನ್ನು ನೋಡುತ್ತಿಲ್ಲ. ಆದ್ದರಿಂದ ಚಕ್ಷೂಂಷಿ ಎಂದು ಬಹುವಚನ ಪ್ರಯೋಗಿಸದೇ ಚಕ್ಷುಃ ಎಂದು ಏಕವಚನವನ್ನು ಪ್ರಯೋಗಿಸಿದ್ದಾರೆ. ।।೧೬।।

**ತತೋ ದದರ್ಶೋಪವನೇ ವರಸ್ತ್ರಿಯಂ**
**ವಿಚಿತ್ರಪುಷ್ಪಾರುಣಪಲ್ಲವದ್ರುಮೇ ।**
**ವಿಕ್ರೀಡತೀಂ ಕಂದುಕಲೀಲಯಾ ಲಸನ್**
**ನಿತಂಬಪರ್ಯಸ್ತದುಕೂಲಮೇಖಲಾಮ್ ।।೧೭।।**

**ತತಃ** ಸ್ವಲ್ಪಕಾಲದ ನಂತರ **ಭವಃ** ರುದ್ರದೇವರು **ವಿಚಿತ್ರ** ಬಗೆ ಬಗೆಯ **ಪುಷ್ಪ** ಹೂಗಳು **ಅರುಣ** ಕೆಂಪಾದ **ಪಲ್ಲವ** ಚಿಗುರುಗಳು ಉಳ್ಳ **ದ್ರುಮೇ** ಗಿಡಗಳುಳ್ಳ **ಉಪವನೇ** ಸಮೀಪದ ತೋಟದಲ್ಲಿ (ಆಗಲೇ ಸೃಷ್ಟವಾದ ಅಥವಾ ಮೊದಲೇ ಇದ್ದ ವನದಲ್ಲಿ) **ಕಂದುಕಲೀಲಯಾ** ಚೆಂಡಾಟದಿಂದ **ವಿಕ್ರೀಡತೀಂ** ಆಡುತ್ತಿದ್ದ **ಲಸತ್** ಪ್ರಕಾಶಿಸುವ **ನಿತಂಬ** ನಡುವಿನ ಹಿಂಭಾಗದಲ್ಲಿ (ಕಟಿಪಶ್ಚಾದ್ಭಾಗೇ) **ಪರ್ಯಸ್ತ** ಆಚ್ಛಾದಿತವಾದ (ಸುತ್ತುವರೆದ) **ದುಕೂಲ** ರೇಷ್ಮೆಬಟ್ಟೆಯ ಮೇಲೆ ಇರುವ **ಮೇಖಲಾಂ** ವಡ್ಯಾಣ ಉಳ್ಳ **ವರಸ್ತ್ರಿಯಂ** ಅತಿ ಸುಂದರಳಾದ ಹೆಂಗಸನ್ನು **ದದರ್ಶ** ರುದ್ರದೇವರು ನೋಡಿದರು. ।।೧೭।।

**ಆವರ್ತನೋದ್ವರ್ತನಕಂಪಿತಸ್ತನಪ್ರಕೃಷ್ಟಹಾರೋರುಭರೈಃ ಪದೇ ಪದೇ ।**
**ವಿಭಜ್ಯಮಾನಾಮಿವ ಮಧ್ಯತಶ್ಚಲತ್ಪದಪ್ರವಾಲಂ ನಯತೀಂ ತತಸ್ತತಃ ।।೧೮।।**

**ಆವರ್ತನ** ಕೆಳಕ್ಕೆ ಬಿಳೋಣ (ಸುತ್ತಲೂ ತಿರುಗುವುದು) **ಉದ್ವರ್ತನ** ಮೇಲಕ್ಕೆ ಹೋಗೋಣ ಎಂಬ ಚೆಂಡಾಟದಿಂದ **ಕಂಪಿತ** ಕುಣಿಯುತ್ತಿರುವ **ಸ್ತನ** ಪಯೋಧರಗಳ **ಪ್ರಕೃಷ್ಟ** ಅತ್ಯುತ್ತಮವಾದ **ಹಾರ** ಹಾರಗಳ **ಉರುಭರೈಃ** ಅತಿಶಯ ಭಾರಗಳಿಂದ **ಪದೇ ಪದೇ** ಹೆಜ್ಜೆ ಹೆಜ್ಜೆಗೂ **ಮಧ್ಯತಃ** ನಡುವಿನಲ್ಲಿ (ಟೊಂಕದಲ್ಲಿ) **ವಿಭಜ್ಯಮಾನಾಂ** ಇವ ಎರಡು ಭಾಗವಾಗುತ್ತಿರುವಳೋ ಎಂಬಂತೆ **(ಸ್ಥಿತಾಂ)** ಇರುವ **ತತಃ ತತಃ** ಒಂದು ಕಡೆಯಿಂದ ಮತ್ತೊಂದು ಕಡೆಗೆ **ಚಲತ್ಪದಪ್ರವಾಲಂ** ಚಲಿಸುತ್ತಿರುವ ಚಿಗುರಿನಂತೆ ಕೆಂಪು ಮತ್ತು ಕೋಮಲವಾದ ಪಾದಗಳನ್ನು **ನಯಂತೀ** ಹೊಂದಿಸುತ್ತಿರುವ **ವರಸ್ತ್ರಿಯಂ** ಶ್ರೇಷ್ಠಳಾದ ಸ್ತ್ರೀಯನ್ನು **ದದರ್ಶ** ರುದ್ರದೇವರು ನೋಡಿದರು. ಎಂದು ಅನ್ವಯ.

ಸತ್ಯ ಃ- ಕಂಪಿತತ್ವವನ್ನು ಸ್ತನಗಳಿಗೆ ವಿಶೇಷಣ ಮಾಡಿದರೆ ಲಾವಣ್ಯ ಮತ್ತು ತಾರುಣ್ಯಗಳ ರಸಾಭಾಸವಾಗುತ್ತದೆ. ಆದ್ದರಿಂದ ಹಾರಕ್ಕೆ ಅನ್ವಯಿಸುವುದೇ ಸುಂದರವೆಂದು ಭಾವ. ರುಕ್ಮಿಣೀಶವಿಜಯದಲ್ಲಿ ''ವಿವಿಚ್ಯ ಸರ್ವಾಂಗವಿಚಾರಕಾಲೇ ತಯೋಃ ಸಮಂತಾತ್ ಘಟನಾ ಕಿಲಾಸ್ತೇ । ಸುಪೀನದೇವೀಸ್ತನಮಧ್ಯದೇಶೇ ಸುದುರ್ಲಭಾ ಸಾ ಪರಮಚ್ಯುತಸ್ಯ'' ಎಂದು ಹೇಳಿದೆ. ರುಕ್ಮಿಣೀಶವಿಜಯ ಶ್ಲೋಕದ ಭಾವಾರ್ಥ ಹೀಗಿದೆ. ಶ್ರೀಕೃಷ್ಣ-ರುಕ್ಮಿಣಿಯರ ವಿವಾಹಾಂಗವಾದ ರಾಶೀಕೂಟ-ಗ್ರಹಮೈತ್ರಿ ಮುಂತಾದುವನ್ನು ಪ್ರತ್ಯೇಕವಾಗಿ ವಿಚಾರಮಾಡುವಾಗ ಒಳ್ಳೆಯ ಘಟನೆಯಾಯಿತು. ಇಲ್ಲಿ ಸರ್ವಾಂಗಪದದಿಂದ ಹಸ್ತ-ಮುಖ ಮೊದಲಾದ ಎಲ್ಲ ಅವಯವಗಳು ಎಂದು ಧ್ವನಿತವಾದ ಅರ್ಥ. ಇದರಲ್ಲಿ ಒಂದಕ್ಕೆ ಆಕ್ಷೇಪ ಮಾಡುವರು. **ಅಚ್ಯುತಸ್ಯ** ಶ್ರೀಕೃಷ್ಣನಿಗೆ **ಪರಂ** ಕೇವಲ **ದೇವ್ಯಾಃ** ರುಕ್ಮಿಣಿಯ **ಸುಪೀನದೇವೀಸ್ತನಮಧ್ಯದೇಶೇ** ನಿಬಿಡಗಳಾದ ಸ್ತನಗಳ ಮಧ್ಯದೇಶದಲ್ಲಿ **ಸಾ ಘಟನಾ** ಸಂಬಂಧವು **ಸುದುರ್ಲಭಾ** ದುರ್ಲಭವಾಯಿತು. ಆಲಿಂಗನ ಮಾಡಿದಾಗ ಸರ್ವಾವಯವಸಂಬಂಧವಾಗುವುದು ಸಂಭಾವಿತ. ಆದರೆ ನಿಬಿಡವಾದ ಸ್ತನಗಳ ನಡುವೆ ಸಂಬಂಧವಾಗಲಿಲ್ಲವೆಂದು ಶೃಂಗಾರಲಬ್ಧವಿನೋದ. ಇದರಿಂದ ಪ್ರಕೃತದಲ್ಲಿ ನಿಬಿಡವಾದ ಸ್ತನಗಳಲ್ಲಿ ಕಂಪಿತತ್ವವನ್ನು ಹೇಳುವುದು ಯುಕ್ತವಲ್ಲ. ಕಿಂತು ಆ ಕಂಪಿತತ್ವವನ್ನು ಹಾರಕ್ಕೆ ಅನ್ವಯಿಸುವುದು ಯುಕ್ತವಾಗಿದೆ ಎಂದು ಭಾವ.

ಅಥವಾ ರುದ್ರದೇವರನ್ನು ಮೋಹಗೊಳಿಸುವುದಕ್ಕಾಗಿ ಸ್ತನಗಳು ಕಂಪಿಸುವ ರೀತಿಯಲ್ಲಿ ಚೆಂಡಾಟವನ್ನು ಪರಮಾತ್ಮ ಆಡಿದ ಎಂದು ಅನ್ವಯಿಸಿಕೊಳ್ಳುವುದು ಕೂಡಾ ಯುಕ್ತವೇ ಆಗಿದೆ ಎಂದು ತಿಳಿಯಬೇಕು. ।।೧೮।।

**ದಿಕ್ಷು ಭ್ರಮತ್ಕಂದುಕಚಾಪಲೈರ್ಭೃಶಂ**
**ಪ್ರೋದ್ವಿಗ್ನತಾರಾಯತಲೋಲಲೋಚನಾಮ್ ।**
**ಸ್ವಕರ್ಣವಿಭ್ರಾಜಿತಲೋಲಕುಂಡಲೋ-**
**ಲ್ಲಸತ್ಕಪೋಲಾಲಕಮಂಡಿತಾನನಾಮ್** ।।೧೯।।

**ದಿಕ್ಷು** ದಿಕ್ಕುಗಳಲ್ಲಿ ಅಂದರೆ ಬೇರೆ ಬೇರೆ ಕಡೆಗೆ **ಭ್ರಮತ್** ಹೋಗುತ್ತಿರುವ **ಕಂದುಕ** ಚೆಂಡಿನ **ಚಾಪಲ್ಯೈಃ** ಚಲನೆಗಳಿಂದ **ಭೃಶಂ** ಬಹಳವಾಗಿ **ಪ್ರೋದ್ವಿಗ್ನ** ಕಾತರಗೊಂಡ (ಆ ಚೆಂಡನ್ನು ಹಿಡಿಯುವ ಕಾತರತೆಯುಳ್ಳ) **ತಾರ** ಕಣ್ಣುಗುಡ್ಡೆಗಳಿಂದ **ಆಯತ** ಅಗಲವಾದ **ಲೋಲ** ಚಂಚಲವಾದ **ಲೋಚನಾಂ** ಕಣ್ಣುಗಳುಳ್ಳ **ಸ್ವಕರ್ಣ** ತನ್ನ ಕಿವಿಗಳಲ್ಲಿ **ವಿಭ್ರಾಜಿತ** ಪ್ರಕಾಶಮಾನಗಳೂ **ಲೋಲ** ಚಂಚಲಗಳೂ ಆದ **ಕುಂಡಲ** ಬೆಂಡೋಲೆಗಳಿಂದ **ಉಲ್ಲಸತ್** ಪ್ರಕಾಶಿಸುವ **ಕಪೋಲ** ಕೆನ್ನೆಗಳಿಂದಲೂ **ಅಲಕ** ಮುಂಗೂದಲುಗಳಿಂದಲೂ **ಮಂಡಿತ** ಅಲಂಕೃತವಾದ **ಆನನಾಂ** ಮುಖ ಉಳ್ಳ **ವರಸ್ತ್ರಿಯಂ ದದರ್ಶ** ಎಂದು ಹಿಂದಿನ ಶ್ಲೋಕದಲ್ಲಿಯ ಪದಗಳೊಂದಿಗೆ ಅನ್ವಯಿಸಿಕೊಳ್ಳಬೇಕು. ॥೧೯॥

**ಶ್ಲಥದ್ದೂಕೂಲಾಂ ಕಬರೀಂ ಚ ವಿಚ್ಯುತಾಂ**
**ಸನ್ನಹ್ಯತೀಂ ವಾಮಕರೇಣ ವಲ್ಗುನಾ ।**
**ವಿನಿಘ್ನತೀಮನ್ಯಕರೇಣ ಕಂದುಕಂ**
**ವಿಮೋಹಯಂತೀಂ ಜಗದಾತ್ಮಮಾಯಯಾ ॥೨೦॥**

**ಶ್ಲಥತ್** ಜಾರುತ್ತಿರುವ **ದುಕೂಲಾಂ** ಸೀರೆಯ ಸೆರಗನ್ನು **ವಿಚ್ಯುತಾಂ** ಬಿಚ್ಚಿಹೋದ **ಕಬರೀಂ ಚ** ಕೂದಲಿನ ಗಂಟನ್ನು **ವಲ್ಗುನಾ** ಸುಂದರವಾದ **ವಾಮಕರೇಣ** ಎಡಗೈಯಿಂದ **ಸನ್ನಹ್ಯತೀಂ** ಸೆರಗನ್ನು ಸರಿಮಾಡಿಕೊಳ್ಳುತ್ತಿರುವ ಕೂದಲನ್ನು ಕಟ್ಟಿಕೊಳ್ಳುತ್ತಿರುವ **ಅನ್ಯಕರೇಣ** ಬಲಗೈಯಿಂದ **ಕಂದುಕಂ** ಚೆಂಡನ್ನು **ವಿನಿಘ್ನತೀಂ** ನೆಲದ ಕಡೆಗೆ ಹೊಡೆಯುತ್ತಿರುವ **ಆತ್ಮಮಾಯಯಾ** ತನ್ನ ಸ್ವರೂಪಕಾಂತಿವಿಶೇಷದಿಂದ, ತನ್ನ ಮೋಹಕಶಕ್ತಿಯಿಂದ **ಜಗತ್** ತನ್ನನ್ನು ಕಂಡವರನ್ನೆಲ್ಲ **ವಿಮೋಹಯಂತೀಂ** ಮುಗ್ಧರನ್ನಾಗಿ ಮಾಡುವ **ವರಸ್ತ್ರಿಯಂ ದದರ್ಶ** ಎಂದು ಅನ್ವಯ. ॥೨೦॥

**ತಾಂ ವೀಕ್ಷ್ಯ ದೇವ ಇತಿ ಕಂದುಕಲೀಲಯೇಷದ್-**
**ವ್ರೀಡಾಸ್ಫುಟಸ್ಮಿತವಿಸೃಷ್ಟಕಟಾಕ್ಷಮೂಢಃ ।**
**ಸ್ತ್ರೀಪ್ರೇಕ್ಷಣಪ್ರತಿಸಮೀಕ್ಷಣನಿರ್ವೃತಾತ್ಮಾ**
**ನಾತ್ಮಾನಮಂತಿಕ ಉಮಾಂ ಸ್ವಗಣಾಂಶ್ಚ ವೇದ ॥೨೧॥**

**ದೇವಃ** ರುದ್ರದೇವರು **ತಾಂ** ಆ ಸ್ತ್ರೀಯನ್ನು **ವೀಕ್ಷ್ಯ** ನೋಡಿ **ಇತಿ** ಮೇಲೆ ಹೇಳಿದಂತೆ **ಕಂದುಕಲೀಲಯಾ** ಚೆಂಡಾಟದಿಂದ **ಈಷತ್** ಸ್ವಲ್ಪ **ವ್ರೀಡಾ** ನಾಚಿಕೆ **ಸ್ಫುಟ** ಸ್ಪಷ್ಟವಾದ **ಸ್ಮಿತ** ಮುಗುಳನಗು ಮತ್ತು **ವಿಸೃಷ್ಟ** ಎಲ್ಲ ಕಡೆಗೆ ನೋಡುತ್ತಿರುವ **ಕಟಾಕ್ಷ** ಕುಡಿಗಣ್ಣಿನ ನೋಟಗಳಿಂದ **ಮೂಢಃ ಸನ್** ವಿವೇಕರಹಿತರಾಗಿ ಭ್ರಾಂತರಾಗಿ **ಸ್ತ್ರೀಪ್ರೇಕ್ಷಣ** ತಾವು ಸ್ತ್ರೀಯನ್ನು ನೋಡುವುದು **ಪ್ರತಿಸಮೀಕ್ಷಣ** ಸ್ತ್ರೀಯು ತಮ್ಮನ್ನು ತಿರುಗಿ ನೋಡುವುದು ಇವುಗಳಿಂದ **ನಿರ್ವೃತಾತ್ಮಾ ಸನ್** ಅತಿಶಯ ಸುಖವನ್ನು ಹೊಂದಿದ ಮನಸ್ಸುಳ್ಳವರಾಗಿ

**ಆತ್ಮಾನಂ** ತನ್ನನ್ನು **ಅಂತಿಕೇ** ಸಮೀಪದಲ್ಲಿದ್ದ **ಉಮಾಂ** ಪಾರ್ವತಿಯನ್ನು **ಚ** ಮತ್ತು **ಸ್ವಗಣಾನ್** ತನ್ನ ಸೇವಕರಾದ ಭೂತಗಣವನ್ನು **ನ ವೇದ** ತಿಳಿಯಲಿಲ್ಲ. ಎಲ್ಲವನ್ನು ಮರೆತರು ಎಂದು ಭಾವ. ।।೨೦।।

**ತಸ್ಯಾಃ ಕರಾಗ್ರಾತ್ ಸ ತು ಕಂದುಕೋ ಯದಾ**
**ಗತೋ ವಿದೂರಂ ತಮನುವ್ರಜಂತ್ಯಾಃ ।**
**ವಾಸಃ ಸಸೂತ್ರಂ ಲಘು ಮಾರುತೋಽಹರದ್**
**ಭವಸ್ಯ ದೇವಸ್ಯ ಕಿಲಾನುಪಶ್ಯತಃ** ।।೨೨।।

**ದೇವಸ್ಯ ಭವಸ್ಯ** ರುದ್ರದೇವರು **ಅನುಪಶ್ಯತಃ ಸತಃ** ನೋಡುತ್ತಿರಲು **ತಸ್ಯಾಃ** ಆ ನಾರಾಯಣಿಯ **ಕರಾಗ್ರಾತ್** ಕೈಗಳಿಂದ **ಸಃ ಕಂದುಕಃ** ಹೊಡೆಯಲ್ಪಟ್ಟ ಆ ಚೆಂಡು **ಯದಾ** ಯಾವಾಗ **ವಿದೂರಂ ಗತಃ** ಬಹಳ ದೂರ ಹಾರಿತೋ **ತದಾ** ಆಗ **ತಂ** ಆ ಚೆಂಡನ್ನು **ಅನುವ್ರಜಂತ್ಯಾಃ** ಅಟ್ಟಿಸಿ ಹೋಗುತ್ತಿದ್ದ ಅವಳ **ಸಸೂತ್ರಂ** ಕಾಂಚಿಯಿಂದ (ಕಟಿಸೂತ್ರ) ಸಹಿತವಾದ **ಲಘು** ಹಗುರವಾದ **ವಾಸಃ** ಉಟ್ಟಿದ್ದ ಬಟ್ಟೆಯನ್ನು **ಮಾರುತಃ** ಗಾಳಿಯು **ಅಪಾಹರತ್** ಹಾರಿಸಿಕೊಂಡು ಹೋಯಿತು. ಆಕೆಯು ಬೆತ್ತಲೆಯಾದಳು ಎಂದು ಅಭಿಪ್ರಾಯ. ।।೨೨।।

**ಏವಂ ತಾಂ ರುಚಿರಾಪಾಂಗೀಂ ದರ್ಶನೀಯಾಂ ಮನೋರಮಾಮ್ ।**
**ದೃಷ್ಟ್ವಾ ತಸ್ಯಾಂ ಮನಶ್ಚಕ್ರೇ ವಿಲಜ್ಜಂತ್ಯಾಂ ಭವಃ ಕಿಲ** ।।೨೩।।

**ರುಚಿರಾಪಾಂಗೀಂ** ಸುಂದರವಾದ ಕುಡಿನೋಟ ಉಳ್ಳ **ದರ್ಶನೀಯಾಂ** ಬಹು ಸುಂದರಳಾದ್ದರಿಂದ ನೋಡಬೇಕಾದವಳಾದ ಅಥವಾ ಕೇವಲ ತನ್ನಿಂದ ನೋಡಬೇಕಾದವಳಷ್ಟೇ ಮುಟ್ಟಲು ಯೋಗ್ಯಳಲ್ಲದ ಎಂದರ್ಥ **ಮನೋರಮಾಂ** ಮನಸ್ಸನ್ನು ಸಂತೋಷಪಡಿಸುವ **ತಾಂ** ಆ ಸ್ತ್ರೀಯನ್ನು **ಏವಂ** ಅಪಹೃತವಸ್ತ್ರಳನ್ನಾಗಿ **ದೃಷ್ಟ್ವಾ** ನೋಡಿ **ಭವಃ** ರುದ್ರದೇವರು **ವಿಲಜ್ಜಂತ್ಯಾಂ** ತನ್ನನ್ನು ರುದ್ರನು ನೋಡುತ್ತಿರುವನೆಂದು ನಾಚಿಕೆಗೊಳ್ಳುತ್ತಿದ್ದ **ತಸ್ಯಾಂ** ಆ ನಾರಾಯಣಿಯಲ್ಲಿ **ಮನಃ ಚಕ್ರೇ** ಹೊಂದಬೇಕೆಂದು ಮನಸ್ಸು ಮಾಡಿದರು **ಕಿಲ** ಇದು ಪುರಾಣಪ್ರಸಿದ್ಧ.

ಸತ್ಯ ಃ- ಅಥವಾ **ಯಃ ಭವಃ ಮನಃ ಚಕ್ರೇ** ಯಾವ ರುದ್ರದೇವರು ಮನಸ್ಸನ್ನು ಸವ್ಯಾಪರವನ್ನಾಗಿ ಮಾಡಿದರೋ **ಸಃ ಅಪಿ** ಆ ಮನೋಽಭಿಮಾನಿಯೂ ಕೂಡ **ಅರಮಾಂ** ರಮಾಭಿನ್ನಳಾದ ರುಚಿರಾಪಾಂಗಿಯಾದ ಆ ಸ್ತ್ರೀಯನ್ನು ಕಂಡು ಅವಳಲ್ಲಿ ಮನಸ್ಸು ಮಾಡಿದನು. ಮನೋನಿಯಾಮಕರಾದ ರುದ್ರದೇವರ ಪರಿಸ್ಥಿತಿಯಾದರೆ ಉಳಿದವರ ಪರಿಸ್ಥಿತಿ ಏನು? ಎಂದು ಭಾವ. ।।೨೩।।

**ತಯಾಽಪಹೃತವಿಜ್ಞಾನಸ್ತತ್ಕೃತಸ್ಮರವಿಹ್ವಲಃ ।**
**ಭವಾನ್ಯಾ ಅಪಿ ಪಶ್ಯಂತ್ಯಾ ಗತಹ್ರೀಸ್ತತ್ಪದಂ ಯಯೌ ॥೨೪॥**

**ಭವಃ** ರುದ್ರದೇವರು **ತಯಾ** ಆ ನಾರಾಯಣಿಯಿಂದ **ಅಪಹೃತವಿಜ್ಞಾನಃ** ಪರಸ್ತ್ರೀಯನ್ನು ಅಪೇಕ್ಷಿಸಬಾರದು ಎಂಬ ಮತ್ತು ತನ್ನ ಪರಿವಾರವಿದೆ ಎಂಬ ಪರಿವೆ ಇಲ್ಲದೆ **ತತ್ಕೃತಸ್ಮರವಿಹ್ವಲಃ** ಅವಳ ನಿಮಿತ್ತವಾಗಿ ಬಂದ ಮನ್ಮಥೇಚ್ಛೆಯಿಂದ ಕದಡಿದ ಮನಸ್ಕರಾಗಿ **ಗತಹ್ರೀಃ ಸನ್** ನಾಚಿಕೆಯನ್ನು ಬಿಟ್ಟವರಾಗಿ **ಭವಾನ್ಯಾಃ** ಪಾರ್ವತಿಯು **ಪಶ್ಯಂತ್ಯಾಃ ಅಪಿ** ನೋಡುತ್ತಲೇ ಇದ್ದರೂ **ತತ್ಪದಂ** ನಾರಾಯಣಿಯು ಇದ್ದ ಸ್ಥಳಕ್ಕೆ **ಯಯೌ ಕಿಲ** ಆಕೆಯನ್ನು ಹಿಡಿಯಲು ಹೋದರಷ್ಟೇ. ॥೨೪॥

**ಸಾ ತಮಾಯಾಂತಮಾಲೋಕ್ಯ ವಿವಸ್ತ್ರಾ ವ್ರೀಡಿತಾ ಭೃಶಮ್ ।**
**ನಿಲೀಯಮಾನಾ ವೃಕ್ಷೇಷು ಹಸಂತೀ ನಾನ್ವತಿಷ್ಠತ ॥೨೫॥**

**ವಿವಸ್ತ್ರಾ** ಬಟ್ಟೆಯಿಲ್ಲದಿದ್ದ **ಸಾ** ಆ ನಾರಾಯಣಿಯು **ಆಯಾಂತಂ** ತನ್ನನ್ನು ಹಿಡಿಯಲು ಬರುತ್ತಿದ್ದ **ತಂ** ರುದ್ರದೇವರನ್ನು **ಆಲೋಕ್ಯ** ನೋಡಿ **ಭೃಶಂ** ಬಹಳ **ವ್ರೀಡಿತಾ ಸತೀ** ನಾಚಿದವಳಾಗಿ **ಹಸಂತೀ** ತಾನು ಹೇಳಿದಂತೆ ಆಯಿತೆಂದು ನಗುತ್ತಾ ಅಥವಾ ಎಲೋ ಸ್ಥಾಣುವೇ ಬೇರೊಂದು ಸ್ಥಾಣುವನ್ನು (ವೃಕ್ಷವನ್ನು) ಹಿಡಿದುಕೊಂಡೇ ನಾನು ಇರುವೆನು. ನೀನು ನನ್ನಲ್ಲಿ ಸಿಟ್ಟಾಗಬೇಡ ಎಂದು ನಗುತ್ತಾ ಎಂದು ಭಾವ. **ವೃಕ್ಷೇಷು** ಗಿಡಗಳ ಹಿಂದೆ **ನಿಲೀಯಮಾನಾ** ತನ್ನ ದೇಹವನ್ನು ಮರೆಮಾಚಿಕೊಳ್ಳುತ್ತ **ನ ಅನ್ವತಿಷ್ಠತ** ಒಂದೆಡೆ ನಿಲ್ಲದಾದಳು. ರುದ್ರದೇವರ ಕೈಗೆ ಸಿಕ್ಕದೇ ತಪ್ಪಿಸಿಕೊಳ್ಳುತ್ತಿದ್ದಳು. ॥೨೫॥

**ತಾಮನ್ವಗಚ್ಛದ್ ಭಗವಾನ್ ಭವಃ ಪ್ರವ್ಯಥಿತೇಂದ್ರಿಯಃ ।**
**ಕಾಮಸ್ಯ ಚ ವಶಂ ನೀತಃ ಕರೇಣುಮಿವ ಯೂಥಪಃ ॥೨೬॥**

**ಭಗವಾನ್** ಐಶ್ವರ್ಯಸಂಪನ್ನರಾದ **ಭವಃ** ರುದ್ರದೇವರು **ಪ್ರವ್ಯಥಿತೇಂದ್ರಿಯಃ** ಅತ್ಯಂತ ಆಕಾಂಕ್ಷೆಗೊಳಗಾದ ಇಂದ್ರಿಯ ಉಳ್ಳವರಾಗಿ **ಕಾಮಸ್ಯ** ಮನ್ಮಥನ **ವಶಂ ನೀತಃ** ಅಧೀನರಾಗಿ **ಯೂಥಪಃ** ಸಲಗವು (ಗಂಡಾನೆಯು) **ಕರೇಣುಮಿವ** ಹೆಣ್ಣಾನೆಯನ್ನು ಹಿಂಬಾಲಿಸುವಂತೆ **ತಾಂ ಚ** ಅವಳನ್ನೇ **ಅನ್ವಗಚ್ಛತ್** ಹಿಂಬಾಲಿಸಿದನು. ॥೨೬॥

**ಸೋಽನುವ್ರಜ್ಯಾತಿವೇಗೇನ ಗೃಹಿತ್ವಾಽನಿಚ್ಛತೀಂ ಸ್ತ್ರಿಯಮ್ ।**
**ಕೇಶಬಂಧ ಉಪಾನೀಯ ಬಾಹುಭ್ಯಾಂ ಪರಿಷಸ್ವಜೇ ॥೨೭॥**

**ಸಃ** ಹೀಗೆ ಮನ್ಮಥಪೀಡಿತರಾದ ರುದ್ರದೇವರು **ಅತಿವೇಗೇನ** ಶೀಘ್ರಗತಿಯಿಂದ **ತಾಂ** ಅವಳನ್ನು **ಅನುವ್ರಜ್ಯ** ಹಿಂಬಾಲಿಸಿ **ಅನಿಚ್ಛಂತೀಂ ಇವ** ತನ್ನನ್ನು ಸೇರಲು ಇಚ್ಛಿಸದವಳಂತೆ ಇದ್ದ **ಸ್ತ್ರಿಯಂ** ನಾರಾಯಣಿಯನ್ನು **ಕೇಶಬಂಧೇ** ಕೂದಲು ಗಂಟಿನಲ್ಲಿ **ಗೃಹೀತ್ವಾ** ಹಿಡಿದು

**ಉಪಾನೀಯ** ಹತ್ತಿರ ಬರಸೆಳೆದುಕೊಂಡು **ಬಾಹುಭ್ಯಾಂ** ತೋಳುಗಳಿಂದ **ಪರಿಷಸ್ವಜೇ** ಗಾಢವಾಗಿ ಆಲಿಂಗಿಸಿದರು. ॥೨೭॥

**ಸೋಪಗೂಢಾ ಭಗವತಾ ಕರಿಣಾ ಕರಿಣೀ ಯಥಾ ।**
**ಇತಸ್ತತಃ ಪ್ರಸರ್ಪಂತೀ ವಿಪ್ರಕೀರ್ಣಶಿರೋರುಹಾ ॥೨೮॥**

**ಸಾ** ಆ ನಾರಾಯಣಿಯು **ಕರಿಣಾ** ಗಂಡಾನೆಯಿಂದ **ಕರಿಣೀ ಯಥಾ** ಹೆಣ್ಣಾನೆಯಂತೆ **ಭಗವತಾ** ರುದ್ರದೇವರಿಂದ **ಉಪಗೂಢಾ** ಆಲಿಂಗಿತಳಾಗಿ **ಇತಃ ತತಃ** ಆಲಿಂಗನದಿಂದ ತಪ್ಪಿಸಿಕೊಳ್ಳಲು ಇತ್ತ ಅತ್ತ **ಪ್ರಸರ್ಪಂತೀ** ತಾನೇ ಎಳದಾಡುವವಳಾಗಿ **ವಿಪ್ರಕೀರ್ಣ-ಶಿರೋರುಹಾ** ಬಿಚ್ಚಿಹೋಗಿ ಹರಡಿದ ಕೂದಲು ಉಳ್ಳವಳು **ಅಭೂತ್** ಆದಳು. ॥೨೮॥

**ಆತ್ಮಾನಂ ಮೋಚಯಿತ್ವಾಂಗ ಸುರರ್ಷಭಭುಜಾಂತರಾತ್ ।**
**ಪ್ರಾದ್ರವತ್ ಸಾ ಪೃಥುಶ್ರೋಣೀ ಮಾಯಾ ದೇವವಿನಿರ್ಮಿತಾ ॥೨೯॥**

**ಹೇ ಅಂಗ** ಪರಿಕ್ಷಿದ್ರಾಜನೇ **ಸುರರ್ಷಭಭುಜಾಂತರಾತ್** ಇಂದ್ರಾದಿಗಳಿಗಿಂತ ಉತ್ತಮರಾದ ರುದ್ರದೇವರ ತೋಳುಗಳ ಮಧ್ಯದಿಂದ **ಆತ್ಮಾನಂ** ತನ್ನನ್ನು **ಮೋಚಯಿತ್ವಾ** ಬಿಡಿಸಿಕೊಂಡು **ದೇವವಿನಿರ್ಮಿತಾ** ನಾರಾಯಣನಿಂದ ವ್ಯಕ್ತಗೊಳಿಸಿದ **ಮಾಯಾ** ಮೋಹಕರೂಪವಾದ **ಪೃಥುಶ್ರೋಣೀ** ದೊಡ್ಡ ನಿತಂಬಗಳುಳ್ಳ **ಸಾ** ನಾರಾಯಣಿಯು **ಪ್ರಾದ್ರವತ್** ಓಡಿದಳು. ॥೨೯॥

**ತಸ್ಯಾಸೌ ಪದವೀಂ ರುದ್ರೋ ವಿಷ್ಣೋರದ್ಭುತಕರ್ಮಣಃ ।**
**ಪ್ರತ್ಯಪದ್ಯತ ಕಾಮೇನ ವೈರಿಣೇವ ವಿನಿರ್ಜಿತಃ ॥೩೦॥**

**ಅಸೌ ರುದ್ರಃ** ಹೀಗೆ ನಾರಾಯಣಿಯಿಂದ ವಂಚಿತರಾದ ರುದ್ರದೇವರು **ಅದ್ಭುತಕರ್ಮಣಃ** ಲಕ್ಷ್ಮ್ಯಾದಿದೇವತೆಗಳಿಗೆ ಆಶ್ಚರ್ಯವನ್ನುಂಟು ಮಾಡುವ ಕ್ರಿಯೆಗಳುಳ್ಳ **ತಸ್ಯ ವಿಷ್ಣೋಃ** ಆ ಶ್ರೀಹರಿಯ (ನಾರಾಯಣೀರೂಪದ) **ಪದವೀಂ** ದಾರಿಯನ್ನು **ವೈರಿಣಾ** ಪುರುಷಾರ್ಥವಿರೋಧಿಯಾದ ವಿರುದ್ಧವಾಗಿ ಪ್ರೇರಿಸುವ **ಕಾಮೇನ** ಮನ್ಮಥನ ಇಚ್ಛೆಯಿಂದ (ಹಿಂದೆ ಸೂಚಿಸಿದ್ದರಿಂದ ಶತ್ರುವಾಗಿರುವ ಮನ್ಮಥನಿಂದ) **ವಿನಿರ್ಜಿತಃ ಸನ್** ಗೆಲ್ಲಲ್ಪಟ್ಟವರಾಗಿ (ಕಾಮಕ್ಕೆ ಒಳಗಾಗಿ) **ಪ್ರತ್ಯಪದ್ಯತ** ನಾರಾಯಣಿಯ ಹಿಂದೆಯೇ ಓಡಿದರು. ಅವಳನ್ನು ಬೆರೆಯಬೇಕೆಂಬ ಇಚ್ಛೆಯುಳ್ಳವರಾದರು ಎಂದು ಭಾವ. ॥೩೦॥

**ತಸ್ಯಾನುಧಾವತೋ ರೇತಶ್ಚಸ್ಕಂದಾಮೋಘರೇತಸಃ ।**
**ಶುಷ್ಮಿಣೋ ಯೂಥಪಸ್ಯೇವ ವಾಸಿತಾಮನುಧಾವತಃ ॥೩೧॥**

**ವಾಸಿತಾಂ** ಹೆಣ್ಣಾನೆಯನ್ನು **ಅನುಧಾವತಃ** ಅನುಸರಿಸಿ ಓಡುವ **ಶುಷ್ಮಿಣಃ** ಪ್ರಶಸ್ತ ವೀರ್ಯವುಳ್ಳ **ಯೂಥಪಸ್ಯ ಇವ** ಸಲಗದ ರೇತಸ್ಸು ದ್ರವಿಸುವಂತೆ **ಅನುಧಾವತಃ** ನಾರಾಯಣಿಯ ಹಿಂದೆಯೇ ಓಡುತ್ತಿದ್ದ **ಅಮೋಘರೇತಸಃ** ವ್ಯರ್ಥವಾಗದ ರೇತಸ್ಸುಳ್ಳ **ತಸ್ಯ** ರುದ್ರದೇವರ **ರೇತಃ** ವೀರ್ಯವು **ಚಸ್ಕಂದ** ಸ್ಖಲಿತವಾಯಿತು.

ಸತ್ಯ ಃ- ''ಶುಷ ಶೋಷಣೇ'' ಎಂಬ ಧಾತುವಿನಿಂದ ಶುಷ್ಮ ಎಂಬ ಪದವು ನಿಷ್ಪನ್ನವಾಗಿದೆ. ಶುಷ್ಮ ಎಂದರೆ ಬಲ ಎಂದು ಅರ್ಥ. ಶುಷ್ಮ ಅಸ್ಯ ಅಸ್ತೀತಿ ಶುಷ್ಮೀ ತಸ್ಮೈ ಶುಷ್ಮಿಣೇ. ಅಂದರೆ ಬಲಿಯಾದ ಎಂದು ಅರ್ಥ. ಶುಷ್ಮಶಬ್ದವು ಬಲವಾಚಕವಾಗಿದೆ ಎಂಬುದನ್ನು ಋಗ್ಭಾಷ್ಯದಲ್ಲಿ ಹೇಳಿದ್ದಾರೆ. ''ತಚ್ಚ ಬಲಂ ಯಥೋಕ್ತಂ ''ಸಂಯನ್ಮದಾಯ ಶುಷ್ಮಿಣೇ'' ಎಂಬ ಋಗ್ಭಾಷ್ಯ-ಟೀಕಾ- ಟಿಪ್ಪಣಿಗಳಲ್ಲಿ ಬಲಿನೇ ಅಸ್ಮೈ ''ಓಜೋ ವಾಜಃ ಶವಃ'' ಇತ್ಯಾದಿಷು ಅಷ್ಟಾವಿಂಷತಿಸಂಖ್ಯಾಕೇಷು ಬಲನಾಮಸು ಪಠಿತಸ್ಯ ಶುಷ್ಮಶಬ್ದಸ್ಯ ಬಲಮರ್ಥ ಇತಿ ಭಾವಃ'' ಎಂದು ಹೇಳಿರುವರು.

ವಾಸಿತಾ ಎಂಬ ಶಬ್ದಕ್ಕೆ ಹೆಣ್ಣಾನೆ ಎಂಬ ಅರ್ಥ. ಈ ವಿಷಯದಲ್ಲಿ ಕೋಶಗಳಿವೆ. ''ವಾಸಿತಾ ಕರಣೇನಾರ್ಯೋಃ'' ಎಂದು ವಿಶ್ವ. ''ವಾಸಿತಾ ಸ್ತ್ರೀಕರಿಣ್ಯೋಃ'' ಎಂದು ನಾನಾರ್ಥ ಅಮರ. ॥೩೧॥

**ಯತ್ರ ಯತ್ರಾಪತನ್ಮಹ್ಯಾಂ ರೇತಸ್ತಸ್ಯ ಮಹಾತ್ಮನಃ ।**
**ತಾನಿ ರುದ್ರಸ್ಯ ಹೇಮ್ನಶ್ಚ ಕ್ಷೇತ್ರಾಣ್ಯಾಸನ್ ಮಹೀಪತೇ ॥೩೨॥**

**ಮಹೀಪತೇ** ಹೇ ರಾಜನೇ **ಮಹಾತ್ಮನಃ** ಇಂದ್ರಾದಿಗಳಿಗಿಂತ ಮಹಿಮಾವಂತರಾದ **ತಸ್ಯ** ಆ ರುದ್ರದೇವರ **ರೇತಃ** ವೀರ್ಯವು **ಮಹ್ಯಾಂ** ಭೂಮಿಯಲ್ಲಿ **ಯತ್ರ ಯತ್ರ** ಎಲ್ಲಿ ಎಲ್ಲಿ **ಅಪತತ್** ಬಿದ್ದಿತೋ **ತಾನಿ** ಆಯಾ ಸ್ಥಳಗಳು **ರುದ್ರಸ್ಯ** ರುದ್ರದೇವರ **ಕ್ಷೇತ್ರಾಣಿ** ಕ್ಷೇತ್ರಗಳಾಗಿ **ಚ** ಮತ್ತು **ಹೇಮ್ನಃ** ಬಂಗಾರದ **ಕ್ಷೇತ್ರಾಣಿ** ಖನಿಗಳಾಗಿ **ಆಸನ್** ಆದವು. ॥೩೨॥

**ಸರಿತ್ಸರಸ್ಸು ಶೈಲೇಷು ವನೇಷೂಪವನೇಷು ಚ ।**
**ಯತ್ರ ಕ್ವಚಾಸನ್ ಋಷಯಸ್ತತ್ರ ಸನ್ನಿಹಿತೋ ಹರಃ ॥೩೩॥**

ಹೀಗೆ ವೀರ್ಯಸಂಪರ್ಕದಿಂದ ರುದ್ರಕ್ಷೇತ್ರಗಳಾದ **ಸರಿತ್ಸರಸ್ಸು** ನದಿಗಳಲ್ಲಿ ಸರೋವರಗಳಲ್ಲಿ **ಶೈಲೇಷು** ಬೆಟ್ಟಗಳಲ್ಲಿ **ವನೇಷು** ಕಾಡುಗಳಲ್ಲಿ **ಉಪವನೇಷು** ತೋಟಗಳಲ್ಲಿ **ಯತ್ರ ಕ್ವಚ** ಮತ್ತೆ ಎಲ್ಲೆಲ್ಲಿ **ಋಷಯಃ** ಜ್ಞಾನಿಗಳು **ಆಸನ್** ತಪಸ್ಸು ಮಾಡುತ್ತಿದ್ದರೋ **ತತ್ರ** ಅಲ್ಲಲ್ಲಿ **ಹರಃ** ರುದ್ರದೇವರು **ಸನ್ನಿಹಿತಃ ಅಭವತ್** ಸನ್ನಿಧಾನ ಉಳ್ಳವರಾದರು. ॥೩೩॥

**ಸ್ಕನ್ನೇ ರೇತಸಿ ಸೋಽಪಶ್ಯದಾತ್ಮಾನಂ ದೇವಮಾಯಯಾ ।**
**ಜಡೀಕೃತಂ ನೃಪಶ್ರೇಷ್ಠ ಸ ನ್ಯವರ್ತತ ಕಶ್ಮಲಾತ್ ॥೩೪॥**

**ಹೇ ನೃಪಶ್ರೇಷ್ಠ** ಉತ್ತಮ ರಾಜನಾದ ಪರೀಕ್ಷಿತನೇ **ರೇತಸಿ** ತನ್ನ ವೀರ್ಯವು **ಸ್ಕನ್ನೇ ಸತಿ** ಭೂಮಿಯ ಮೇಲೆ ಸುರಿದು ಹೋಗಲು **ಸಃ** ರುದ್ರದೇವರು **ದೇವಮಾಯಯಾ** ಶ್ರೀಹರಿಯ ಮೋಹಕವಾದ ಇಚ್ಛೆಯಿಂದ **ಜಡೀಕೃತಂ** ಮಂದಜನರಂತೆ ಮೈಥುನೇಚ್ಛೆಗೆ ಒಳಗಾದವರನ್ನಾಗಿ **ಆತ್ಮಾನಂ** ತಮ್ಮನ್ನು **ಅಪಶ್ಯತ್** ತಿಳಿದರು, ಅವರಿಗೆ ನಿಜಸ್ಥಿತಿ ಅರಿವಾಯಿತು. ಹೀಗೆ ಜ್ಞಾನೋದಯ ಹೊಂದಿದ ಆ ರುದ್ರದೇವರು **ಕಶ್ಮಲಾತ್** ಪರಸ್ತ್ರೀಯನ್ನು ಮೈಥುನೇಚ್ಛೆಯಿಂದ ಹಿಂಬಾಲಿಸುವ ದುಷ್ಟಕಾರ್ಯದಿಂದ **ನ್ಯವರ್ತತ** ನಿವೃತ್ತರಾದರು. ನಾರಾಯಣಿಯನ್ನು ಹಿಂಬಾಲಿಸುವುದನ್ನು ಬಿಟ್ಟರು. ॥೩೪॥

**ಅಥಾವಗತಮಾಹಾತ್ಮ್ಯ ಆತ್ಮನೋ ಜಗದಾತ್ಮನಃ ।**
**ಅಪರಿಜ್ಞೇಯವೀರ್ಯಸ್ಯ ನ ಮೇನೇ ತದುದಾಹೃತಮ್ ॥೩೫॥**

**ಅಥ** ರೇತಸ್ಸು ಬಿದ್ದಮೇಲೆ ಬುದ್ಧಿಭ್ರಂಶಕ್ಕೆ ಕಾರಣವಾದ ಪರದಾರಾನುಗಮನ ರೂಪಕಲ್ಮಷವು ಹೋದುದರಿಂದ (ಹೋದನಂತರ) **ಜಗದಾತ್ಮನಃ** ಇಡೀ ಜಗತ್ತಿಗೆ ಸ್ವಾಮಿಯಾದ **ಅಪರಿಜ್ಞೇಯವೀರ್ಯಸ್ಯ** ಸಂಪೂರ್ಣವಾಗಿ ತಿಳಿಯಲಾಗದ ಮಹಾಮಹಿಮೆಯುಳ್ಳ **ಆತ್ಮನಃ** ಪರಮಾತ್ಮನ **ಅವಗತಮಾಹಾತ್ಮ್ಯಃ** ಆ ಮಹಿಮೆಯನ್ನು ತಿಳಿದ ರುದ್ರದೇವರು **ತದುದಾಹೃತಂ** ಸ್ತ್ರೀರೂಪವನ್ನು ತೋರಿಸುತ್ತೇನೆಂದು ಮುಂಚೆ ಹೇಳಿದ ಮಾತನ್ನು ಮೊದಲು **ನ ಮೇನೇ** ತಿಳಿಯಲಿಲ್ಲ. ಈಗ ತನ್ನನ್ನು ಮೋಹಗೊಳಿಸಿದ ಮಹಾಮಹಿಮೆಯು ತನ್ನ ಅನುಭವಕ್ಕೆ ಬಂದಿದೆಯಾದ್ದರಿಂದ ಆಗ ಹೇಳಿದ್ದು ನಿಜವೆಂದು ಈಗ ತಿಳಿದರೆಂದರ್ಥ. ಆದ್ದರಿಂದಲೇ ಪ್ರಾರ್ಥನೆ ಮಾಡಿದ ಕಾಲದಲ್ಲಿ ಶ್ರೀಹರಿಯು ಹೇಳಿದ ಮಾತು **ಭಾವಗಂಭೀರಂ** ಎಂದು ಶುಕಾಚಾರ್ಯರು ವರ್ಣಿಸಿದ್ದಾರೆ.

ಸತ್ಯ ಃ- **ಆತ್ಮನಃ** ತನಗೂ **ಅಪರಿಜ್ಞೇಯವೀರ್ಯಸ್ಯ** ಎಂದೂ ಅನ್ವಯ ಮಾಡಿರುವರು. ತತ್, ಉತ್, ಆಹೃತಂ, ಎಂದು ಪದಚ್ಛೇದ ಮಾಡಿಕೊಂಡು ಅರ್ಥ ತಿಳಿಯಬೇಕು. **ಯತ್** ಯಾವ **ಆತ್ಮನಃ** ತನಗೆ **ಇತಃ ತತಃ** ಅತ್ತ ಇತ್ತ **ಆಹೃತಂ** ಆಹರಣವು ಏನಿದೆಯೋ ಪರವಶವಾಗಿ ಕರೆದೊಯ್ಯುವುದೇನಿದಯೋ **ತತ್** ಅದನ್ನು **ಉತ್** ಉತ್ಕೃಷ್ಟವೆಂದು **ನ ಮೇನೇ** ತಿಳಿಯಲಿಲ್ಲ. ನಾನೆಷ್ಟರವನು ಇದು ಯಾವ ಮಹಾ ಎಂದು ತಿಳಿದನು. ಮಹಾಮಾಹಾತ್ಮ್ಯ ಉಳ್ಳವನಿಗೆ ಇದೇನು ಆಶ್ಚರ್ಯವಲ್ಲವೆಂದು ಭಾವ. ॥೩೫॥

**ತಮವಿಕ್ಲವಮವ್ರೀಡಮಾಲಕ್ಷ್ಯ ಮಧೂಸೂದನಃ ।**
**ಉವಾಚ ಪರಮಪ್ರೀತೋ ಬಿಭ್ರತ್ ಸ್ವಾಂ ಪೌರುಷೀಂ ತನುಮ್ ॥೩೬॥**

**ಮಧುಸೂದನಃ** ಶ್ರೀಹರಿಯು **ತಂ** ರುದ್ರದೇವರನ್ನು **ಅವಿಕ್ಲವಂ** ಯಾವ ಬಗೆಯ ಮನಸಿನ ವೈಕ್ಲವ್ಯ (ಚಾಪಲ್ಯ)ವಿಲ್ಲದವರನ್ನು ಅಂದರೆ ಮತ್ತೆ ಮನಃಸ್ವಾಸ್ಥ್ಯ ಪಡೆದವರನ್ನು **ಅವ್ರೀಡಂ** ಮತ್ತೊಬ್ಬರಿಗೆ ವಶನಾಗಿ ನಾನು ತಿರುಗುವುದೇನು ಎಂದು ಲಜ್ಜೆಯಿಲ್ಲದವರನ್ನು **ಆಲಕ್ಷ್ಯ** ನೋಡಿ ಮೊದಲಿನಂತೆ ಭಕ್ತಿಯುಕ್ತರಾದುದನ್ನು ಕಂಡು **ಪರಮಪ್ರೀತಃ** ಬಹಳ ಸಂತುಷ್ಟನಾಗಿ **ಸ್ವಾಂ** ತನ್ನ ಸ್ವರೂಪವಾದ **ಪೌರುಷೀಂ ತನುಂ** ಪುರುಷರೂಪವನ್ನು **ಬಿಭ್ರತ್** ವ್ಯಕ್ತಗೊಳಿಸಿ **ಉವಾಚ** ರುದ್ರದೇವರಿಗೆ ಹೇಳಿದನು. ।।೩೬।।

**ಶ್ರೀಭಗವಾನುವಾಚ**

**ದಿಷ್ಟ್ಯಾ ತ್ವಂ ವಿಬುಧಶ್ರೇಷ್ಠ ಸ್ವಾಂ ನಿಷ್ಠಾಮಾತ್ಮನಾ ಸ್ಥಿತಃ ।**
**ಯತೋ ದುಸ್ತರಯಾ ಸ್ವೈರಂ ಮೋಹಿತೋಽಸ್ಯಂಗ ಮಾಯಯಾ ।।೩೭।।**

**ಹೇ ವಿಬುಧಶ್ರೇಷ್ಠ** ಇಂದ್ರಾದಿದೇವತೆಗಳಿಗಿಂತ ಶ್ರೇಷ್ಠನಾದ ರುದ್ರನೇ **ಆತ್ಮನಾ** ಮನಸ್ಸಿನಿಂದ **ಸ್ವಾಂ ನಿಷ್ಠಾಂ** ನಿನಗೆ ಯೋಗ್ಯವಾದ, ನನ್ನಲ್ಲಿ ಭಕ್ತಿಯೆಂಬ ನಿಷ್ಠೆಯನ್ನು **ಸ್ಥಿತಃ** ಹೊಂದಿದೆ **ದಿಷ್ಟ್ಯಾ** ಸಂತೋಷ ಇದು ನನ್ನ ಇಚ್ಛೆ (ದೈವಾತ್) **ಅಂಗ** ಪ್ರಿಯನೇ **ಯತಃ** ಏಕೆಂದರೆ **ದುಸ್ತರಯಾ** ನನ್ನ ಅನುಗ್ರಹವಿಲ್ಲದೇ ದಾಟಲಾಗದ **ಮಾಯಯಾ** ನನ್ನ ಮೋಹಕ ಇಚ್ಛೆಯಿಂದ **ಸ್ವೈರಂ** ಪೂರ್ತಿಯಾಗಿ (ಯಥೇಷ್ಟವಾಗಿ) **ಮೋಹಿತಃ ಅಸಿ** ಮುಗ್ಧಗೊಳಿಸಲ್ಪಟ್ಟಿರುವಿ.

ಸತ್ಯ ಃ- **ಅಂಗಮಾಯಯಾ** ಅಂದರೆ ಅಂಗನೆಯ ಅಂಗದಿಂದ ಪ್ರದರ್ಶಿತವಾದ ಮಾಯೆಯಿಂದ ಎಂದು ಹೀಗೂ ಅರ್ಥ.

ಲಿಂಗೇರೀ ಃ- **ಸ್ವೈರಂ ದುಸ್ತರಯಾ** ಎಂದೂ ಅನ್ವಯ. ತನ್ನ ಇಚ್ಛೆಯಿಂದ ದಾಟಲಾಗದ ಎಂದರ್ಥ. ''ಮಾಮೇವ ಯೇ ಪ್ರಪದ್ಯಂತೇ ಮಾಯಾಮೇತಾಂ ತರಂತಿ ತೇ'' ಎಂದು ಗೀತಾವಚನ ಈ ವಿಷಯದಲ್ಲಿ ಪ್ರಮಾಣವಾಗಿದೆ. ।।೩೭।।

ಅವತರಣಿಕಾ ಃ- ಅನಂತ ಜೀವರಾಶಿಗಳಲ್ಲಿ ಎಷ್ಟೋ ವೈಚಿತ್ರ್ಯವಿರುವುದರಿಂದ ಯಾವನಾದರೂ ಈ ಮಾಯೆಯನ್ನು ತಪ್ಪಿಸಿಕೊಳ್ಳಬಹುದು ಎಂದು ಶಂಕಿಸಿದರೇ ಹೇಳುತ್ತಾರೆ-

**ಕೋ ನು ಮೇಽತಿತರೇನ್ಮಾಯಾಂ ವಿಷಕ್ತಸ್ತ್ವದೃತೇ ಪುಮಾನ್ ।**
**ತಾಂಸ್ತಾನ್ ವಿಸೃಜತೀಂ ಭಾವಾನ್ ದುಸ್ತರಾಮಕೃತಾತ್ಮಭಿಃ ।।೩೮।।**

**ತ್ವತ್ತಃ ಋತೇ** ನಿನ್ನನ್ನು ಬಿಟ್ಟು **ವಿಷಕ್ತಃ** ವಿಷಯಗಳಲ್ಲಿ ವಿಶೇಷ ಆಸಕ್ತನಾದವನು **ಕಃ ಪುಮಾನ್** ಯಾವ ಪುರುಷನು **ತಾನ್ ತಾನ್** ವಿಷಯಪಾಶದಿಂದ ಬಂಧಕಗಳಾದ **ಭಾವಾನ್** ಮನೋಭಾವನೆಗಳನ್ನು ಶೃಂಗಾರಾದಿಗಳನ್ನು ತೋರಿಸಿ ಮಾನಸವಿಕಾರಗಳನ್ನು ಇತರ

ಮೋಹಕವಿಲಾಸಗಳನ್ನು **ವಿಸೃಜತೀಂ** ಹುಟ್ಟಿಸುವ **ಅಕೃತಾತ್ಮಭಿಃ** ನನ್ನ ಅನುಗ್ರಹವನ್ನು ಸಂಪಾದಿಸದಿರುವ ಆದ್ದರಿಂದಲೇ ಧನ್ಯರಲ್ಲದ ಪುರುಷರಿಂದ (ಅಶಿಕ್ಷಿತಮನಸ್ಕರಿಂದ) **ದುಸ್ತರಾಂ** ದಾಟಲಾಗದ **ಮೇ** ನನ್ನ **ಮಾಯಾಂ** ಬಂಧಕೇಚ್ಛೆಯನ್ನು **ಅತಿತರೇತ್ ನು** ದಾಟಿಯಾನು?

ನೀನು ನನ್ನ ಅನುಗ್ರಹಕ್ಕೆ ಪಾತ್ರನಾದ್ದರಿಂದ ಮತ್ತೆ ಯಥಾಸ್ಥಿತಿಗೆ ಬಂದಿರುವಿ ಎಂದರ್ಥ. ಇದರಿಂದ ''ಕಶ್ಚಿದ್ಧೀರಃ ಪ್ರತ್ಯಗಾತ್ಮಾನಮೈಕ್ಷತ್'' ಎಂದು ಶ್ರುತಿ ಇರುವುದರಿಂದ ''ಕೋ ನು ತರೇತ್'' ಎಂಬ ಆಕ್ಷೇಪ ಹೇಗೆ? ಎಂಬ ಶಂಕೆಗೆ ನನ್ನ ಅನುಗ್ರಹಕ್ಕೆ ಪಾತ್ರರಾದವರು ಮಾತ್ರ ಮಾಯಾತರಣ ಮಾಡಲು ಸಾಧ್ಯ ಎಂದು ಉತ್ತರ ಕೊಟ್ಟಂತಾಯಿತು. ।।೩೮।।

ಅವತರಣಿಕಾ :- ನನ್ನ ಅನುಗ್ರಹಕ್ಕೆ ಪಾತ್ರನಾದವನು ಈ ಮಾಯೆಯನ್ನೂ ಸುಖವಾಗಿ ದಾಟುವನೆಂದು ಹೇಳುತ್ತಿದ್ದಾರೆ-

**ಸೇಯಂ ಗುಣಮಯೀ ಮಾಯಾ ನ ತ್ವಾಮಭಿಭವಿಷ್ಯತಿ ।**
**ಮಯಾ ಸಮೇತಂ ಕಾಲೇನ ಕಾಲರೂಪೇಣ ಭಾಗಶಃ ।।೩೯।।**

**ಸಾ** ಎಲ್ಲರನ್ನು ಮೋಹಗೊಳಿಸುವ **ಇಯಂ** ಈ ನನ್ನ ಅಧೀನವಾದ **ಗುಣಮಯೀ** ಸತ್ವಾದಿಗುಣಸ್ವರೂಪವಾದ **ಮಾಯಾ** ಜಡಪ್ರಕೃತಿಯು **ಕಾಲರೂಪೇಣ** ಇಂದ್ರಾದಿಗಳ ಸಂಹಾರಕನೆಂಬ ಹೆಸರಿನ **ಕಾಲೇನ** ಕಾಲರೂಪನಾದ **ಮಯಾ** ನನ್ನಿಂದ **ಸಮೇತಂ** ನನ್ನ ಭಕ್ತನು ಇವನು ಭ್ರಾಂತನಾಗದಿರಲಿ ಎಂಬ ಇಚ್ಛೆಯಿಂದ ಅಂಗೀಕೃತನಾದ **ತ್ವಾಂ** ನಿನ್ನನ್ನು **ಭಾಗಶಃ** ಸ್ವಲ್ಪವಾದರೂ **ನ ಅಭಿಭವಿಷ್ಯತಿ** ಭ್ರಾಂತನನ್ನಾಗಿಸಿ ತಿರಸ್ಕರಿಸುವುದಿಲ್ಲ.

ಲಿಂಗೇರೀ :- ಕಾಲನಿಯಾಮಕನಾಗಿ, ಸಂಹಾರಕನಾಗಿ ನಿನ್ನಲ್ಲಿ ಶಿವರೂಪದಿಂದ ಇರುವ ನಾನು ಯಾವಾಗ ನಿನ್ನನ್ನು ಭಕ್ತನೆಂದು ಅನುಗ್ರಹಿಸುವೆನೋ ಆಗ ನೀನು ಈ ಬಗೆಯ ಭ್ರಾಂತಿಗೆ ಒಳಪಡುವುದಿಲ್ಲ. ಈಗ ನಾನು ನಿನಗೆ ನನ್ನ ಸಾಮರ್ಥ್ಯ ತೋರಿಸಬೇಕೆಂದು ಇಚ್ಛಿಸಿದ್ದೇನೆ. ಆದ್ದರಿಂದ ನೀನು ಹೀಗೆ ತಿರಸ್ಕೃತನಾಗಿರುವಿ. ಎಂದು ಅಭಿಪ್ರಾಯ. ಹಾಗಲ್ಲದಿದ್ದರೆ ಕಾಲರೂಪಿಯು ಯಾವಾಗಲೂ ರುದ್ರದೇವರಲ್ಲಿ ಇರುವುದರಿಂದ ಈಗ ಬಂದ ಭ್ರಾಂತಿಯೂ ಬರಬಾರದಿತ್ತು ಎಂದು ತಿಳಿಯಬೇಕು. ।।೩೯।।

**ಶ್ರೀಶುಕ ಉವಾಚ**

**ಏವಂ ಭಗವತಾ ರಾಜನ್ ಶ್ರೀವತ್ಸಾಂಕೇನ ಸತ್ಕೃತಃ ।**
**ಆಮಂತ್ರ್ಯ ತಂ ಪರಿಕ್ರಮ್ಯ ಸಗಣಃ ಸ್ವಾಲಯಂ ಯಯೌ ।।೪೦।।**

**ರಾಜನ್** ಪರೀಕ್ಷಿತನೇ **ಏವಂ** ಮೇಲೆ ಹೇಳಿದಂತೆ **ಶ್ರೀವತ್ಸಾಂಕೇನ** ಶ್ರೀವತ್ಸವೆಂಬ ಚಿಹ್ನೆಯುಳ್ಳ **ಭಗವತಾ** ಶ್ರೀಹರಿಯಿಂದ **ಸತ್ಕೃತಃ** ಸಮಾಧಾನಗೊಳಿಸಲ್ಪಟ್ಟ ರುದ್ರದೇವರು **ತಂ** ಶ್ರೀಹರಿಯನ್ನು **ಪರಿಕ್ರಮ್ಯ** ಪ್ರದಕ್ಷಿಣೆ ಮಾಡಿ **ಆಮಂತ್ರ್ಯ** ಪರಮಾತ್ಮನ ಅನುಜ್ಞೆ ಪಡೆದು **ಸಗಣಃ** ಪಾರ್ವತಿಯಿಂದ ಮತ್ತು ಭೂತಗಣದಿಂದ ಸಹಿತರಾಗಿ **ಸ್ವಾಲಯಂ** ತನ್ನ ವಾಸಸ್ಥಳವಾದ ಕೈಲಾಸಕ್ಕೆ **ಯಯೌ** ತೆರಳಿದರು. ।।೪೦।।

**ಆತ್ಮಾಂಶಭೂತಾಂ ತಾಂ ಮಾಯಾಂ ಭವಾನೀಂ ಭಗವಾನ್ ಭವಃ ।**
**ಶಂಸತಾಮೃಷಿಮುಖ್ಯಾನಾಂ ಪ್ರೀತ್ಯಾ ತುಷ್ಟಾವ ಭಾರತ ।।೪೧।।**

**ಹೇ ಭಾರತ** ಪರೀಕ್ಷಿದ್ರಾಜನೇ **ಭಗವಾನ್ ಭವಃ** ಪೂಜ್ಯರಾದ ರುದ್ರದೇವರು **ಋಷಿಮುಖ್ಯಾನಾಂ** ಋಷಿಗಳಲ್ಲಿ ಮುಖ್ಯರಾದವರು **ಶಂಸತಾಂ** ತನ್ನನ್ನು ಹೊಗಳುತ್ತಿರಲು **ಭವಾನೀಂ (ವಿಲಕ್ಷ್ಯ)** ಪಾರ್ವತಿಯ ಕಡೆ ನೋಡಿ ಅಥವಾ ಪಾರ್ವತಿಯನ್ನು ಕುರಿತು **ಪ್ರೀತ್ಯಾ** ಪ್ರೀತಿಯಿಂದ **ಆತ್ಮಾಂಶಭೂತಾಂ** ಪರಮಾತ್ಮನ ಸ್ವರೂಪಾಂಶವಾದ **ತಾಂ** ತನ್ನನ್ನು ಆ ರೀತಿ ಮೋಹಗೊಳಿಸಿದ ಆ ಮಾಯಾನಾರಾಯಣೀರೂಪವನ್ನು **ತುಷ್ಟಾವ** ಸ್ತೋತ್ರ ಮಾಡಿದರು.

ಇದರಲ್ಲಿ ನನ್ನ ಮಹಿಮೆ ಏನೂ ಇಲ್ಲ. ಇದೆಲ್ಲ ಪರಮಾತ್ಮನ ಮೋಹಕಶಕ್ತಿಯ ಪ್ರಭಾವವೆಂದು ಋಷಿಗಳಿಗೆ ತಿಳಿಯಪಡಿಸಿ ಶ್ರೀಹರಿಯನ್ನು ಸ್ತೋತ್ರಮಾಡಿರೆಂದು ಮನದಟ್ಟು ಮಾಡಿಕೊಟ್ಟರೆಂದು ಭಾವ. ।।೪೧।।

**ಅಯಿ ವ್ಯಪಶ್ಯಸ್ತ್ವಮಜಸ್ಯ ಮಾಯಾಂ**
**ಪರಸ್ಯ ಪುಂಸಃ ಪರದೇವತಾಯಾಃ ।**
**ಅಹಂ ಕಲಾನಾಮೃಷಭೋ ವಿಮುಹ್ಯೇ**
**ಯಯಾ ವಶೋಽನ್ಯೇ ಕಿಮುತಾಸ್ವತಂತ್ರಾಃ ।।೪೨।।**

**ಅಯಿ** ಎಲೇ ಪಾರ್ವತಿಯೇ **ತ್ವಂ** ನೀನು **ಪರಸ್ಯ ಪುಂಸಃ** ಪುರುಷೋತ್ತಮನಾದ **ಅಜಸ್ಯ** ಜನನರಹಿತನಾದ ಶ್ರೀಹರಿಯ **ಮಾಯಾಂ** ಮೋಹಕಶಕ್ತಿಯಾದ ನಾರಾಯಣೀ-ರೂಪವನ್ನು **ವ್ಯಪಶ್ಯಃ ಕಿಲ** ನೋಡಿದಿಯಷ್ಟೇ **ಪರದೇವತಾಯಾಃ** ನಮ್ಮೆಲ್ಲರಗಿಂತ ಶ್ರೇಷ್ಠನಾದ ಇಷ್ಟದೇವತೆಯಾದ ಶ್ರೀಹರಿಯ **ಕಲಾನಾಂ** ಭಿನ್ನಾಂಶರಾದ ವಿಭೂತಿಗಳಲ್ಲಿ ಬ್ರಹ್ಮದೇವರನ್ನು ಬಿಟ್ಟು **ಋಷಭಃ** ಶ್ರೇಷ್ಠನಾದ **ಅಹಂ** ಮನೋಽಭಿಮಾನಿಯಾದ ನಾನು **ವಶಃ ಅಪಿ** ಮನಸ್ಸನ್ನು ಹಿಡಿತದಲ್ಲಿ ಇಟ್ಟುಕೊಂಡವನಾದರೂ **ಯಯಾ** ಯಾವ ನಾರಾಯಣೀರೂಪದಿಂದ **ವಿಮುಹ್ಯೇ** ಭ್ರಾಂತನಾದೆನು. **ಅಸ್ವತಂತ್ರಾಃ** ಮನೋನಿಗ್ರಹದಲ್ಲಿ ನನ್ನ ಅಧೀನರಾದ **ಅನ್ಯೇ** ಇಂದ್ರಾದಿಗಳಾಗಲೀ ಮನುಷ್ಯರು ಮುಂತಾದವರಾಗಲೀ

**ಕಿಮುತ** ಮುಗ್ಧರಾಗುವರೆಂದು ಹೇಳುವುದೇನು? ಅಹಂ ಕಲಾನಾಂ ಋಷಭಃ ಎಂದರೆ ಪರಮಾತ್ಮತತ್ವಜ್ಞಾನಿಗಳಲ್ಲಿ ಉತ್ತಮನಾದ ನಾನು ಎಂದೂ ಅರ್ಥ ಮಾಡಿರುವರು. ವಿದ್ಯಾಸ್ವಾಮಿಯು ಎಂದೂ ಅರ್ಥ. ।।೪೨।।

**ಯಂ ಮಾಮಪೃಚ್ಛಸ್ತ್ವ ಮುಪೇತ್ಯ ಯೋಗಾತ್**
**ಸಮಾಸಹಸ್ರಾಂತ ಉಪಾರತಂ ವೈ ।**
**ಸ ಏಷ ಸಾಕ್ಷಾತ್ ಪುರುಷಃ ಪುರಾಣೋ**
**ನ ಯತ್ರ ಕಾಲೋ ವಿಶತೇ ನ ವೇದಃ** ।।೪೩।।

**ಹೇ ಭವಾನಿ** ಎಲೇ ಪಾರ್ವತಿಯೇ **ತ್ವಂ** ನೀನು **ಸಮಾಸಹಸ್ರಾಂತೇ** ಸಾವಿರ ವರ್ಷಗಳ ಕೊನೆಯಲ್ಲಿ **ಯೋಗಾತ್** ಶ್ರೀಹರಿಯ ಸಮಾಧಿಯಿಂದ **ಉಪಾರತಂ** ಎಚ್ಚತ್ತ **ಮಾಂ** ನನ್ನನ್ನು **ಉಪೇತ್ಯ** ಸಮೀಪಿಸಿ **ಯಂ** ಯಾವ ಶ್ರೀಹರಿಯ ಸ್ವರೂಪವನ್ನು ಉಪದೇಶಿಸು ಎಂದು ಕೇಳಿದೆಯೋ ಅಥವಾ ಹೇ ಪತಿಯೇ ನೀನು ಯಾರನ್ನು ಕುರಿತು ತಪಸ್ಸು ಮಾಡುವೆ ಎಂದು ಕೇಳಿದೆಯೋ **ಯತ್ರ** ಯಾವ ಶ್ರೀಹರಿಯ ವಿಷಯದಲ್ಲಿ **ಕಾಲಃ** ಪರಿಮಿತ ಆಯುಷ್ಯ ತಿಳಿಸುವ ಮುಪ್ಪನ್ನು ತಂದುಕೊಡುವ ಕಾಲವು **ನ ವಿಶತೇ** ಪ್ರವೇಶಿಸುವುದಿಲ್ಲವೋ (ಯಾವನಿಗೆ ಕಾಲಕೃತವಿಕಾರಗಳಿಲ್ಲವೋ) **ವೇದಃ ನ ವಿಶತೇ** ವೇದಗಳು ಸಂಪೂರ್ಣವಾಗಿ ತಿಳಿಸಲಾರವೋ **ಸಃ** ಆ **ಪುರಾಣಃ** ಎಲ್ಲರಿಗೂ ಮೊದಲಿಗನಾದ, ಎಲ್ಲರ ದೇಹಗಳಲ್ಲಿಯೂ ಇರುವ **ಸಾಕ್ಷಾತ್ ಪುರುಷಃ** ಸಾಕ್ಷಾತ್ ಶ್ರೀಹರಿಯೇ **ಏಷಃ** ಈ ನಾರಾಯಣೀರೂಪವು. ಬೇರೇ ಅಲ್ಲ. ।।೪೩।।

ಅವತರಣಿಕಾ ಃ- ಐದನೇ ಅಧ್ಯಾಯದಲ್ಲಿ ಆರಂಭವಾದ ಚಾಕ್ಷುಷಮನ್ವಂತರದಲ್ಲಿ ಅವತರಿಸಿದ ಅಜಿತನಾಮಕನಾದ ಶ್ರೀಹರಿಯು ಅಮೃತಮಥನಕ್ಕಾಗಿ ಮಾಡಿದ ಮಂದರೋದ್ಧರಣಾದಿ ವಿಕ್ರಮಗಳನ್ನು ಉಪಸಂಹರಿಸುವರು-

**ಶ್ರೀಶುಕ ಉವಾಚ**

**ಇತಿ ತೇಽಭಿಹಿತಸ್ತಾತ ವಿಕ್ರಮಃ ಶಾರ್ಙ್ಗಧನ್ವನಃ ।**
**ಸಿಂಧೋರ್ನಿರ್ಮಥನೇ ಯೇನ ಧೃತಃ ಪೃಷ್ಠೇ ಮಹಾಚಲಃ** ।।೪೪।।

**ತಾತ** ಪ್ರಿಯನಾದ ಪರೀಕ್ಷಿತನೇ **ಯೇನ** ಯಾವ ಶ್ರೀಹರಿಯಿಂದ **ಸಿಂಧೋಃ** ಅಮೃತಕ್ಕಾಗಿ ಸಮುದ್ರವನ್ನು ಕಡೆಯುವ ಸಮಯದಲ್ಲಿ **ಮಹಾಚಲಃ** ಕಡಗೋಲಾಗಿದ್ದ ಮಂದರಪರ್ವತವು **ಪೃಷ್ಠೇ** ಬೆನ್ನಿನ ಮೇಲೆ **ಧೃತಃ** ಕೂರ್ಮರೂಪದಿಂದ ಧರಿಸಲ್ಪಟ್ಟಿತೋ **ತಸ್ಯ** ಆ **ಶಾರ್ಙ್ಗಧನ್ವನಃ** ಶಾರ್ಙ್ಗ ಎಂಬ ಧನುಸ್ಸನ್ನು ಧರಿಸಿದ ವಿಷ್ಣುವಿನ **ವಿಕ್ರಮಃ** ಪರಾಕ್ರಮವು **ಇತಿ** ಮೇಲೆ ಹೇಳಿದಂತೆ **ಮಯಾ** ನನ್ನಿಂದ **ತೇ** ನಿನಗೆ **ಅಭಿಹಿತಃ** ಹೇಳಲ್ಪಟ್ಟಿತು. ।।೪೪।।

**ಏತನ್ಮುಹುಃ ಕೀರ್ತಯತೋಽನುಶ್ಶೃಣ್ವತೋ**
**ನ ರಿಷ್ಯತೇ ಜಾತು ಸಮುದ್ಯಮಃ ಕ್ವಚಿತ್ ।**
**ಯದುತ್ತಮಶ್ಲೋಕಗುಣಾನುವರ್ಣನಂ**
**ಸಮಸ್ತಸಂಸಾರಪರಿ(ಭ್ರ)ಶ್ರಮಾಪಹಮ್ ॥೪೫॥**

**ಯತ್** ಯಾವ ಕಾರಣ **ಉತ್ತಮಶ್ಲೋಕಗುಣಾನುವರ್ಣನಂ** ಅತ್ಯುತ್ತಮವಾದ ಕೀರ್ತಿಯುಳ್ಳ ಶ್ರೀಹರಿಯ ಗುಣಗಳ ನಿರಂತರವಾದ ವರ್ಣನೆಯು, ಬ್ರಹ್ಮಾದಿಗಳಿಂದ ಸ್ತುತ್ಯವಾದ ಗುಣಗಳುಳ್ಳ ಪರಮಾತ್ಮನ ವರ್ಣನೆಯು ಅನ್ಯಥಾಜ್ಞಾನ-ಅಜ್ಞಾನ-ಗ್ಲಾನಿಗಳಿಲ್ಲದ ಕೀರ್ತಿಯುಳ್ಳ **ಅನುಶೃಣ್ವತಃ** ಕೇಳುವವರಿಗೆ **ಸಮಸ್ತಸಂಸಾರಪರಿಶ್ರಮಾಪಹಂ** ಎಲ್ಲ ಸಾಂಸಾರಿಕಶ್ರಮವನ್ನು ಹೋಗಲಾಡಿಸುವುದೋ **ತತ್** ಆ ಕಾರಣ **ಏತತ್** ರುದ್ರದೇವರನ್ನು ಮೋಹಗೊಳಿಸಿದ ಶ್ರೀಹರಿಯ ಮಹಿಮೆಯನ್ನು **ಮುಹುಃ** ಮತ್ತೆ ಮತ್ತೆ ಯಾವಾಗಲೂ **ಕೀರ್ತಯತಃ** ಭಕ್ತಿಯಿಂದ ಹೇಳುವ ಮತ್ತು **ಅನುಶ್ರುಣ್ವತಃ** ಭಕ್ತಿಯಿಂದ ಕೇಳುವ ಸಾಧನಜೀವಿಯ **ಸಮುದ್ಯಮಃ** ಸಾಧನೆಯ ಪ್ರಯತ್ನವು **ಕ್ವಚಿತ್** ಯಾವ ವಿಷಯದಲ್ಲಿಯೂ **ನ ರಿಷ್ಯತೇ** ನಾಶವಾಗುವುದಿಲ್ಲ. ಸಫಲವಾಗುವುದೆಂದರ್ಥ.

ಸತ್ಯ :- ಪರಿಭ್ರಮ ಎಂಬ ಪಾಠದಲ್ಲಿ ಹುಟ್ಟು-ಸಾವುಗಳ ಮಧ್ಯೆ ಸಂಚಾರವೆಂದರ್ಥ. ಈ ಮಹಿಮೆಯನ್ನು ಅನುಸಂಧಾನ ಮಾಡುವವರಿಗೆ ವಿಷಯಗಳಿಂದ ಮೋಹಗೊಳಿಸದೆ ಶ್ರೀಹರಿಯು ಸಾಧನೆಗೆ ಅನುಕೂಲವಾಗುವನೆಂದು ತಾತ್ಪರ್ಯ. ॥೪೫॥

ಅವತರಣಿಕಾ :- ನಿರಂತರ ಭಕ್ತಿಪೂರ್ವಕವಾದ ಸ್ಮರಣೆಗಾಗಿ ಮೇಲೆ ಹೇಳಿದ ಮಹಿಮೆಗಳಿಂದ ವಿಶಿಷ್ಟನನ್ನಾಗಿ ಆ ನಾರಾಯಣನನ್ನು ನಮಸ್ಕರಿಸುತ್ತಾರೆ. ಇದರಿಂದ ಈ ವಿಷಯವನ್ನು ಹೇಳಿದ ಶುಕಾಚಾರ್ಯರಿಗೆ ಭಕ್ತಿ ಉದ್ರೇಕವಾಯಿತೆಂದು ತಿಳಿದು ಬರುವದು.

**ಅಸದವಿಷಯಮಂಘ್ರಿಂ ಭಾವಗಮ್ಯಂ ಪ್ರಪನ್ನಾನ್**
**ಅಮೃತಮಮರವರ್ಯಾನಾಶಯತ್ ಸಿಂಧುಮಥ್ಯಮ್ ।**
**ಕಪಟಯುವತಿವೇಷೋ ಮೋಹಯನ್ ಯಃ ಸುರಾರೀನ್**
**ತಮಹಮುಪಸೃತಾನಾಂ ಕಾಮಪೂರಂ ನತೋಽಸ್ಮಿ ॥೪೬॥**

**॥ ಇತಿ ಶ್ರೀಮದ್ಭಾಗವತೇ ಅಷ್ಟಮಸ್ಕಂಧೇ ಏಕಾದಶೋಽಧ್ಯಾಯಃ ॥**

**ಯಃ** ಯಾವ ಶ್ರೀಹರಿಯು **ಕಪಟಯುವತಿವೇಷಃ** ಯಾವುದೋ ನೆಪದಿಂದ ಹೆಣ್ಣುರೂಪವನ್ನು ಧರಿಸಿದವನಾಗಿ **ಸುರಾರೀನ್** ದೈತ್ಯರನ್ನು **ಮೋಹಯನ್** ಮೋಹಗೊಳಿಸಿದವನಾಗಿ **ಅಸದವಿಷಯಂ** ದೈತ್ಯರಿಗೆ ಸಿಗದಿರುವ ಆದರೆ **ಭಾವಗಮ್ಯಂ**

ಭಕ್ತಿಯಿಂದ ಸಿಗುವ **ಅಂಘ್ರಿಂ** ತನ್ನ ಪಾದವನ್ನು **ಪ್ರಪನ್ನಾನ್** ಶರಣುಹೊಕ್ಕ **ಅಮರವರ್ಯಾನ್** ಇಂದ್ರಾದಿದೇವತೆಗಳನ್ನು **ಸಿಂಧುಮಥ್ಯಂ** ಸಮುದ್ರಮಥನದಿಂದ ಹುಟ್ಟಿದ ಅಮೃತವನ್ನು **ಆಶಯತ್** ಕುಡಿಯುವಂತೆ ಮಾಡಿದನೋ **ಉಪಸೃತಾನಾಂ** ಶರಣು ಹೊಂದಿದ ಭಕ್ತರ **ಕಾಮಪೂರಂ** ಅಭೀಷ್ಟವನ್ನು ಪೂರೈಸುವ **ತಂ** ಭಕ್ತವತ್ಸಲನಾದ ಶ್ರೀಹರಿಯನ್ನು **ಅಹಂ** ಸಾಧನೆಯನ್ನು ಪೂರೈಸಿಕೊಳ್ಳಲಿರುವ ನಾನು (ಮೂಲರೂಪದಲ್ಲಿ ಮುಗ್ಧನಾಗಿ ಉಪಚಾರವೆಸಗಿದ ನಾನು) **ನತಃ ಅಸ್ಮಿ** ನಮಸ್ಕರಿಸುವವನಾಗಿದ್ದೇನೆ.

ಸತ್ಯ ಃ- ಕಪಟಯುವತಿವೇಷಃ ಲೋಕದಲ್ಲಿ ಕಪಟವಾದ ಕಾಮಿನೀವೇಷ ಉಳ್ಳವನಾಗಿ ಕಪಟಕ **ಕ** ಕುತ್ಸಿತವಾದ **ಪಟ** ವಸ್ತ್ರ **ಕಪಟ** ಎಂದರೆ ಗಜಚರ್ಮ ಅಥವಾ ದಿಕ್ಕುಗಳೇ ಪಟವಾಗಿ ಉಳ್ಳವರು ಕಪಟಕ ರುದ್ರದೇವರು. ಅವರಿಗೆ ಯುವತಿವೇಷವನ್ನು ತೋರಿಸಿದವನು ಹೀಗೂ ಅರ್ಥ. ''ಏಷಃ ಸ್ತ್ರೀ ಏಷ ಪುರುಷಃ'' ಎಂದಿರುವುದರಿಂದ ಭಗವಂತನಿಗೆ ಸ್ವಾಭಾವಿಕ ಕಾಮಿನೀ (ಸ್ತ್ರೀ) ಆಕಾರವಿದೆ. ಆದ್ದರಿಂದ ಈ ರೀತಿ ಅರ್ಥಮಾಡಿದರೆ ಅದರ ವಿರೋಧ ಬರುವುದಿಲ್ಲ.

**ಉಪ** ಸರ್ವಾಧಿಕನು ಎಂದು **ಸೃತಂ** ಜ್ಞಾನ ಉಳ್ಳವರಿಗೆ **ಕಾಮಪೂರಂ** ಅಭಿಷ್ಟಪೂರಕನಾದ ಎಂದು ಅರ್ಥ. **ಉಪಸೃತಂ** ಸಂಸಾರವು ಉಪಲಕ್ಷಣಯಾ ತಮಸ್ಸು ಯಾರಿಗೆ ಪ್ರಮಿತವಾಗಿದೆಯೋ ಅವರಿಗೆ **ಕಾಮಪೂರಂ** ಕಾಮಗಳನ್ನೇ ಕೊಡುವ (ಪೂರ್ತಿಮಾಡುವ) ಎಂದರ್ಥ. ನಿಷ್ಫಲವಾದ ಇಚ್ಛೆಯುಳ್ಳವರಿಗೆ ಒಂದಾದ ಮೇಲೊಂದು ಇಚ್ಛೆ ಕೊಡುವ ಎಂದು ಅರ್ಥ. ''ಇದಮದ್ಯ ಮಯಾ ಲಬ್ಧಂ ಇಮಂ ಪ್ರಾಪ್ಸ್ಯೇ ಮನೋರಥಂ'' ಎಂದಿದೆ. ಕಾಮಾನೇವ ಪೂರಯತೀತಿ ಕಾಮಪೂರಃ ಇಂಥ ಭಗವಂತನನ್ನು ನಮಸ್ಕರಿಸುವೆ. ಇದರಿಂದ ಇಂಥ ಭಗವಂತನಲ್ಲಿ ಭಕ್ತಿ ಮಾಡಬೇಕು ಎಂದು ಸೂಚಿತವಾಯಿತು. ।।೪೬।।

**ಇಲ್ಲಿಗೆ ಹನ್ನೊಂದನೇ ಅಧ್ಯಾಯವು ಮುಗಿಯಿತು.**

★★★

# ಅಥ ದ್ವಾದಶೋಽಧ್ಯಾಯಃ

ಅವತರಣಿಕಾ :- ಪ್ರಾಸಂಗಿಕವಿಷಯವನ್ನು ಹೇಳಿ ಪ್ರಕೃತವನ್ನು ಅನುಸರಿಸುತ್ತ ಶ್ರೀಹರಿಮಾಹಾತ್ಮ್ಯಸೂಚಕವಾದ ಶ್ರಾದ್ಧದೇವ ಮೊದಲಾದ ಎಂಟು ಮನ್ವಂತರಗಳನ್ನು ಕ್ರಮವಾಗಿ ಮುಂದಿನ ಅಧ್ಯಾಯಗಳಲ್ಲಿ ವರ್ಣಿಸುವರು.

**ಶ್ರೀಶುಕ ಉವಾಚ**

**ಮನುರ್ವಿವಸ್ವತಃ ಪುತ್ರಃ ಶ್ರಾದ್ಧದೇವ ಇತಿ ಶ್ರುತಃ ।**
**ಸಪ್ತಮೋ ವರ್ತಮಾನೋ ಯಸ್ತದಪತ್ಯಾನಿ ಮೇ ಶ್ರುಣು ॥೧॥**

ಹೇ ಪರೀಕ್ಷಿತರಾಜನೇ **ವರ್ತಮಾನಃ** ಈಗ ನಡೆಯುತ್ತಿರುವ **ಸಪ್ತಮಃ** ೧. ಸ್ವಾಯಂಭುವ, ೨. ಸ್ವಾರೋಚಿಷ, ೩. ಉತ್ತಮ, ೪. ತಾಪಸ, ೫. ರೈವತ, ೬. ಚಾಕ್ಷುಷ ಎಂಬ ಮನ್ವಂತರಗಳ ನಂತರದ ಏಳನೆಯ ಮನ್ವಂತರದ ಅಧಿಪತಿಯಾದ **ಯಃ** ಯಾವ **ಮನುಃ** ವೈವಸ್ವತಮನುವೋ **ಸಃ** ಅವನು **ವಿವಸ್ವತಃ** ಈ ಹೆಸರಿನ ಸೂರ್ಯದೇವನ **ಪುತ್ರಃ** ಮಗನು **ಶ್ರಾದ್ಧದೇವಃ ಇತಿ ಶ್ರುತಃ** ಶ್ರಾದ್ಧದೇವನೆಂದು ಪ್ರಸಿದ್ಧನು. **ತದಪತ್ಯಾನಿ** ಅವನ ಮಕ್ಕಳನ್ನು **ಮೇ** ನನ್ನಿಂದ **ಶ್ರುಣು** ಕೇಳು. ॥೧॥

**ಇಕ್ಷ್ವಾಕುಶ್ಚ ನಭಶ್ಚೈವ ಧೃಷ್ಟಃ ಶರ್ಯಾತಿರೇವ ಚ ।**
**ನರಿಷ್ಯಂತೋಽಥ ನಾಭಾಗಃ ಸಪ್ತಮೋ ದಿಷ್ಟ ಉಚ್ಯತೇ ॥೨॥**

**ಕರೂಷಶ್ಚ ವೃಷಧ್ರಶ್ಚ ದಶಮೋ ವಸುಮಾನ್ ಸ್ಮೃತಃ ।**
**ಮನೋರ್ವೈವಸ್ವತಸ್ಯೈತೇ ದಶ ಪುತ್ರಾಃ ಪರಂತಪ ॥೩॥**

**ಹೇ ಪರಂತಪ** ಶತ್ರುಗಳಿಗೆ ತಾಪವನ್ನುಂಟುಮಾಡುವ ಪರೀಕ್ಷಿತನೇ, **ಇಕ್ಷ್ವಾಕುಃ** ಇಕ್ಷ್ವಾಕುವು, **ನಭಃ** ನಭನು, **ಧೃಷ್ಟಃ** ಧೃಷ್ಟನು, **ಶರ್ಯಾತಿಃ** ಶರ್ಯಾತಿಯು, **ನರಿಷ್ಯಂತಃ** ನರಿಷ್ಯಂತನು **ನಾಭಾಗಃ** ನಾಭಾಗನು **ಸಪ್ತಮಃ** ಏಳನೆಯವನು **ದಿಷ್ಟಃ ಇತಿ** ದಿಷ್ಟನೆಂದು

**ಉಚ್ಯತೇ** ಕರೆಯಲ್ಪಡುವನು. **ಕರೂಷಃ** ಕರೂಷನೂ **ವೃಷಧ್ರಃ** ವೃಷಧ್ರನು **ದಶಮಃ** ಹತ್ತನೆಯವನು **ವಸುಮಾನ್** ವಸುಮಾನ್ ಎಂಬ ಹೆಸರಿನಿಂದ ಶಾಸ್ತ್ರಗಳಲ್ಲಿ ಸ್ಮೃತನಾಗಿರುವನು. **ಏತೇ ದಶ** ಈ ಹತ್ತು ಮಂದಿ ವೈವಸ್ವತಮನುವಿನ **ಪುತ್ರಾಃ** ಮಕ್ಕಳು. ।।೨.೩।।

**ಆದಿತ್ಯಾ ವಸವೋ ರುದ್ರಾ ವಿಶ್ವೇದೇವಾ ಮರುದ್ಗಣಾಃ ।**
**ಅಶ್ವಿನಾವೃಭವೋ ರಾಜನ್ನಿಂದ್ರಸ್ತೇಷಾಂ ಪುರಂದರಃ ।।೪।।**

ಈ ವೈವಸ್ವತಮನ್ವಂತರದಲ್ಲಿ **ಆದಿತ್ಯಾಃ** ಆದಿತ್ಯರು **ವಸವಃ** ವಸುಗಳು **ರುದ್ರಾಃ** ರುದ್ರರು **ವಿಶ್ವೇದೇವಾಃ** ವಿಶ್ವೇದೇವತೆಗಳು **ಮರುದ್ಗಣಾಃ** ಮರುದ್ಗಣಗಳು **ಅಶ್ವಿನೌ** ನಾಸತ್ಯ-ದಸ್ರರೆಂಬ ಅಶ್ವಿನೀದೇವತೆಗಳು **ಋಭವಃ** ಋಭುಗಳು ಅಂದರೆ ದೇವತೆಗಳು **ತೇಷಾಂ** ಆ ದೇವತೆಗಳಿಗೆ **ಇಂದ್ರಃ** ಇಂದ್ರನು ಸ್ವರ್ಗಾಧಿಪತಿಯು **ಪುರಂದರಃ** ಪುರಂದರನು (ಇವನ ಇಂದ್ರಪದವಿಯ ಜೀವ).

ಸತ್ಯ :- ಋ ಎಂಬುದು ಸ್ವರ್ಗ ಅಥವಾ ಅದಿತಿಯ ಹೆಸರು (ಅದಿತಿಯಿಂದ ಜನಿಸಿದವರು ಅಥವಾ ಸ್ವರ್ಗವಾಸಿಗಳಾದ್ದರಿಂದ ಋಭವಃ ಎಂದರೆ ದೇವತೆಗಳು. ಸ್ವರಾದಿಯಾದ್ದರಿಂದ ಋ ಎಂಬುದು ಅವ್ಯಯವಾಗಿದೆ. ''ಆದಿತ್ಯಾ ಋಭವೋऽಸ್ವಪ್ನಾಃ'' ಎಂದು ಅಮರ. ।।೪।।

**ಕಶ್ಯಪೋऽತ್ರಿರ್ವಸಿಷ್ಠಶ್ಚ ವಿಶ್ವಾಮಿತ್ರೋऽಥ ಗೌತಮಃ ।**
**ಜಮದಗ್ನಿರ್ಭರದ್ವಾಜ ಇತಿ ಸಪ್ತರ್ಷಯಃ ಸ್ಥಿತಾಃ ।।೫।।**

**ಕಶ್ಯಪಃ** ಕಶ್ಯಪರು **ಅತ್ರಿಃ** ಅತ್ರಿಗಳು **ವಸಿಷ್ಠಃ** ವಸಿಷ್ಠರು **ವಿಶ್ವಾಮಿತ್ರಃ** ವಿಶ್ವಾಮಿತ್ರರು **ಗೌತಮಃ** ಗೌತಮರು **ಜಮದಗ್ನಿಃ** ಜಮದಗ್ನಿಗಳು **ಭರದ್ವಾಜಃ** ಭರದ್ವಾಜರು **ಇತಿ** ಎಂಬ **ಸಪ್ತರ್ಷಯಃ** ಏಳು ಋಷಿಗಳು ವೈವಸ್ವತಮನ್ವಂತರದಲ್ಲಿ ಹೇಳಲ್ಪಟ್ಟಿದ್ದಾರೆ. ।।೫।।

**ಅತ್ರಾಪಿ ಭಗವಜ್ಜನ್ಮ ಕಶ್ಯಪಾದದಿತೇರಭೂತ್ ।**
**ಆದಿತ್ಯಾನಾಮವರಜೋ ವಿಷ್ಣುರ್ವಾಮನರೂಪಧೃಕ್ ।।೬।।**

**ಅತ್ರ ಅಪಿ** ಈ ವೈವಸ್ವತಮನ್ವಂತರದಲ್ಲಿಯೂ (ಹಿಂದಿನ ಮನ್ವಂತರದಂತೆ) **ಕಶ್ಯಪಾತ್** ಕಶ್ಯಪಋಷಿಗಳಿಂದ **ಅದಿತೇಃ** ಅದಿತಿ ಎಂಬ ಪತ್ನಿಯ ಮೂಲಕ **ಭಗವಜ್ಜನ್ಮ** ಶ್ರೀಮನ್ನಾರಾಯಣನ ಅವತಾರದ ಅಭಿವ್ಯಕ್ತಿಯು **ಅಭೂತ್** ಆಯಿತು **ಆದಿತ್ಯಾನಾಂ** ಅದಿತಿಯ ಮಕ್ಕಳಾದ ವಿವಸ್ವಾನ್, ಅರ್ಯಮಾ, ಪೂಷಾ, ತ್ವಷ್ಟಾ, ಸವಿತಾ, ಭಗ, ಧಾತಾ, ಪರ್ಜನ್ಯ, ವರುಣ, ಮಿತ್ರ, ಶಕ್ರ ಉರುಕ್ರಮ ಎಂದು ಹೇಳಿದ ದ್ವಾದಶಾದಿತ್ಯರಿಗಿಂತ **ಅವರಜಃ** ಅನಂತರ ವ್ಯಕ್ತನಾದ **ವಿಷ್ಣುಃ** ಶ್ರೀಹರಿಯು **ವಾಮನರೂಪಧೃಕ್** ವಾಮನನೆಂಬ

ಹೆಸರಿನ ಸಚ್ಚಿದಾನಂದ ಆಕಾರ ಧರಿಸಿದವನು. ಇದರಿಂದ ಮನುಪುತ್ರರು, ಮನ್ವಂತರ ದೇವತೆಗಳು, ಇಂದ್ರ, ಸಪ್ತಋಷಿಗಳು ಮತ್ತು ಶ್ರೀಹರಿಯ ಅವತಾರ ವಿಶೇಷವನ್ನು ಹೇಳಿದರೆಂದು ತಿಳಿಯಬೇಕು. ।।೬।।

**ಸಂಕ್ಷೇಪತೋ ಮಯೋಕ್ತಾನಿ ಸಪ್ತ ಮನ್ವಂತರಾಣಿ ತೇ ।**
**ಭವಿಷ್ಯಾಣ್ಯಥ ವಕ್ಷ್ಯಾಮಿ ವಿಷ್ಣೋಃ ಶಕ್ತ್ಯನ್ವಿತಾನಿ ಚ ।।೭।।**

ರಾಜನೇ **ತೇ** ನಿನಗೆ **ಮಯಾ** ನನ್ನಿಂದ **ಸಪ್ತ ಮನ್ವಂತರಾಣಿ** ಸ್ವಾಯಂಭುವ, ಸ್ವಾರೋಚಿಷ, ಉತ್ತಮ, ತಾಪಸ, ರೈವತ ಚಾಕ್ಷುಷ ಹೀಗೆ ಆರು ಆಗಿ ಹೋದ ನಡೆದಿರುವ ವೈವಸ್ವತ ಹೀಗೆ ಏಳು ಮನ್ವಂತರಗಳು **ಸಂಕ್ಷೇಪತಃ ಉಕ್ತಾನಿ** ಸಂಕ್ಷೇಪವಾಗಿ ಹೇಳಲ್ಪಟ್ಟಿವೆ. **ಅಥ** ಇನ್ನು ಮುಂದೆ **ವಿಷ್ಣೋಃ ಶಕ್ತ್ಯನ್ವಿತಾನಿ** ಶ್ರೀಹರಿಯ ಮಹಿಮೆಯಿಂದ ಕೂಡಿದ ಆದ್ದರಿಂದಲೇ ಕೇಳಲೇಬೇಕಾದ **ಭವಿಷ್ಯಾಣಿ ಚ** ಈ ಬ್ರಹ್ಮಕಲ್ಪದಲ್ಲಿ ಮುಂದೆ ಬರಲಿರುವ ಸಾವರ್ಣಿ, ದಕ್ಷಸಾವರ್ಣಿ, ಬ್ರಹ್ಮಸಾವರ್ಣಿ, ಧರ್ಮಸಾವರ್ಣಿ, ರುದ್ರಸಾವರ್ಣಿ, ದೇವಸಾವರ್ಣಿ, ಇಂದ್ರಸಾವರ್ಣಿ, ಎಂಬ ಏಳು ಮನ್ವಂತರಗಳನ್ನು **ವಕ್ಷ್ಯಾಮಿ** ಸಂಕ್ಷೇಪವಾಗಿ ಹೇಳುತ್ತೇನೆ. ಮನ್ವಂತರಗಳಲ್ಲಿನ ದೇವತೆಗಳು, ಇಂದ್ರ, ಸಪ್ತರ್ಷಿಗಳು ಭಗವದವತಾರ ವಿಶೇಷಗಳನ್ನು ಹೇಳುತ್ತೇನೆಂದು ಭಾವ.

ಸತ್ಯ ಃ- ಈ ಮನ್ವಂತರಗಳನ್ನು ತಿಳಿಯುವುದೂ ಅತ್ಯಂತ ಆವಶ್ಯಕ ಎಂಬುದನ್ನು ತಿಳಿಸಲು ವಿಷ್ಣೋಃ ಶಕ್ತ್ಯನ್ವಿತಾನಿ ಎಂದು ಹೇಳಿದ್ದಾರೆ. ।।೭।।

**ವಿವಸ್ವತಶ್ಚ ದ್ವೇ ಭಾರ್ಯೇ ವಿಶ್ವಕರ್ಮಸುತೇ ಉಭೇ ।**
**ಸಂಜ್ಞಾ ಛಾಯಾ ಚ ರಾಜೇಂದ್ರ ಯೇ ಪ್ರಾಗಭಿಹಿತೇ ತವ ।।೮।।**

**ಹೇ ರಾಜೇಂದ್ರ** ಪರೀಕ್ಷಿತನೇ **ಪ್ರಾಕ್** ಈ ಹಿಂದೆಯೇ ಷಷ್ಠಸ್ಕಂಧದಲ್ಲಿ **ಯೇ** ಯಾವ **ದ್ವೇ** ಇಬ್ಬರು **ವಿವಸ್ವತಃ ಭಾರ್ಯೇ** ವಿವಸ್ವಾನ್ ಎಂಬ ಸೂರ್ಯನ ಹೆಂಡತಿಯರು **ಅಭಿಹಿತೇ** ಹೇಳಲ್ಪಟ್ಟರೋ **ತೇ ಉಭೇ** ಅವರಿಬ್ಬರೂ **ಸಂಜ್ಞಾ ಛಾಯಾ ಚ** ಸಂಜ್ಞಾ ಛಾಯಾ ಎಂಬುವವರು **ವಿಶ್ವಕರ್ಮಸುತೇ** ವಿಶ್ವಕರ್ಮನ ಮಕ್ಕಳು.

ಸತ್ಯ ಃ- ಇವರಿಬ್ಬರೂ ಸೂರ್ಯನಿಗೆ ಹೆಂಡತಿಯಾಗಲು ಯೋಗ್ಯರೆಂಬುದನ್ನೂ ಉಭೇ ಎಂಬ ಶಬ್ದದಿಂದಲೇ ಹೇಳುತ್ತಿದ್ದಾರೆ ಎಂದು ತಿಳಿಯಬೇಕು. ಉತ್ಕೃಷ್ಟಾ ಭಾ ಯಯೋಃ ತೇ ಉಭೇ ಅಂದರೆ ಬಹಳ ಕಾಂತಿಯುಳ್ಳವರೆಂದರ್ಥ. ಕಾಂತಿಸಂಪನ್ನನಾದ ಸೂರ್ಯನಿಗೆ ಕಾಂತಿಮಂತರಾದ ಇವರೀರ್ವರು ಹೆಂಡತಿಯರಾಗಲು ಯೋಗ್ಯರೆಂದು ತಿಳಿದುಬರುತ್ತದೆ. ।।೮।।

**ತೃತೀಯಾಂ ವಡವಾಮೇಕೇ ತಾಸಾಂ ಸಂಜ್ಞಾಸುತಾಸ್ತ್ರಯಃ ।**
**ಯಮೋ ಯಮೀ ಶ್ರಾದ್ಧದೇವಶ್ಛಾಯಾಯಾಶ್ಚ ಸುತಾನ್ ಶೃಣು ॥೯॥**

**ತೃತೀಯಾ** ಮೂರನೆಯ ಹೆಂಡತಿಯು **ವಡವಾ ನಾಮ** ವಡವಾ ಎಂಬುವಳು ಇವಳು ಸಂಜ್ಞೆಯ ಮತ್ತೊಂದು ರೂಪವೆಂದು ಪುರಾಣಾಂತರದಲ್ಲಿ ಹೇಳಿದೆ. **ತಾಸಾಂ** ಆ ಮೂವರಲ್ಲಿ **ಸಂಜ್ಞಾಸುತಾಃ** ಸಂಜ್ಞಾಳ ಮಕ್ಕಳು ಯಮ ಯಮಿ (ಯಮುನೆ) ಮತ್ತು ಶ್ರಾದ್ಧದೇವರೆಂಬ **ತ್ರಯಃ** ಮೂವರು **ಛಾಯಾಯಾಃ** ಛಾಯೆಯ **ಸುತಾನ್** ಮಕ್ಕಳನ್ನು (ಅವರ ವಿಚಾರವನ್ನು) **ಶೃಣು** ಕೇಳು. ॥೯॥

**ಸಾವರ್ಣಿಸ್ತಪತೀ ಕನ್ಯಾ ಭಾರ್ಯಾ ಸಂವರಣಸ್ಯ ಯಾ ।**
**ಶನೈಶ್ಚರಸ್ತೃತೀಯೋಽಭೂದಶ್ವಿನೌ ವಡವಾತ್ಮಜೌ ॥೧೦॥**

**ಸಾವರ್ಣಿಃ** ಸಾವರ್ಣಿ ಎಂಬುವನೊಬ್ಬ ಮಗ **ಯಾ** ಯಾವಳು **ಸಂವರಣಸ್ಯ** ಸಂವರಣನೆಂಬ ರಾಜರ್ಷಿಯ **ಭಾರ್ಯಾ** ಹೆಂಡತಿಯಾದ **ತಪತೀ ಕನ್ಯಾ** ತಪತೀ ಎಂಬ ಹೆಣ್ಣು ಮಗು ಒಂದು **ಶನೈಶ್ಚರಃ** ಶನೈಶ್ಚರನು **ತೃತೀಯಃ** ಮೂರನೆಯವನು **ಅಭೂತ್** ಆದನು. ಇವರು ಛಾಯೆಯ ಮಕ್ಕಳು **ಅಶ್ವಿನೌ** ಅಶ್ವಿನೀದೇವತೆಗಳು **ವಡವಾತ್ಮಜೌ** ವಡವಾ ಎಂಬುವಳಲ್ಲಿ ಜನಿಸಿದವರು. (ಸಂಜ್ಞೆಯು ಕುದುರೆಯಾದಾಗ ಕುದುರೆಯ ರೂಪದ ಸೂರ್ಯನಿಂದ ಜನಿಸಿದವರು.) ॥೧೦॥

**ಅಷ್ಟಮೇ ಅಂತರೇ ಯಾತೇ ಸಾವರ್ಣಿರ್ಭವಿತಾ ಮನುಃ ।**
**ನಿರ್ಮೋಕವಿರಜಸ್ಕಾದ್ಯಾಃ ಸಾವರ್ಣಿಸ್ತನಯಾ ನೃಪ ॥೧೧॥**

**ಹೇ ನೃಪ** ರಾಜನೇ **ಅಂತರೇ** ವೈವಸ್ವತಮನ್ವಂತರವು **ಯಾತೇ ಸತಿ** ಹೋಗುತ್ತಿರಲು ಮುಗಿಯುತ್ತಿರಲು **ಅಷ್ಟಮೇ** ಎಂಟನೆಯ ಮನ್ವಂತರದಲ್ಲಿ **ಸಾವರ್ಣಿಃ** ಸಾವರ್ಣಿ ಎಂಬ ಸೂರ್ಯಪುತ್ರನು **ಮನುಃ ಭವಿತಾ** ಮನುವಾಗುವವನು ಮನ್ವಂತರಾಧಿಪತಿಯಾಗುವನು. **ನಿರ್ಮೋಕವಿರಜಸ್ಕಾದ್ಯಾಃ** ನಿರ್ಮೋಕ-ವಿರಜಸ್ಕ ಮುಂತಾದವರು **ಸಾವರ್ಣಿಃ** ಸಾವರ್ಣಿಯ **ತನಯಾಃ** ಮಕ್ಕಳು. ॥೧೧॥

**ತತ್ರ ದೇವಾಃ ಸುತಪಸೋ ವಿರಜಾ ಅಮಿತಪ್ರಜಾಃ ।**
**ತೇಷಾಂ ವಿರೋಚನಸುತೋ ಬಲಿರಿಂದ್ರೋ ಭವಿಷ್ಯತಿ ॥೧೨॥**

**ತತ್ರ** ಸಾವರ್ಣಿಮನ್ವಂತರದಲ್ಲಿ **ಸುತಪಸಃ** ಸುತಪಸರು **ವಿರಜಾಃ** ವಿರಜರು **ಅಮಿತಪ್ರಜಾಃ** ಅಮಿತಪ್ರಜರು ಎಂಬುವರು **ದೇವಾಃ** ದೇವತೆಗಳು **ತೇಷಾಂ** ಆ ದೇವತೆಗಳಿಗೆ **ವಿರೋಚನಸುತಃ** ಪ್ರಹ್ಲಾದನ ಮಗನಾದ ವಿರೋಚನನೆಂಬ ಅಸುರನ ಮಗನಾದ **ಬಲಿಃ** ಬಲಿಚಕ್ರವರ್ತಿಯು **ಇಂದ್ರಃ ಭವಿಷ್ಯತಿ** ಇಂದ್ರನಾಗುವನು. ॥೧೨॥

**ದತ್ವೇಮಾಂ ಯಾಚಮಾನಾಯ ವಿಷ್ಣವೇ ಯಃ ಪದತ್ರಯಮ್ ।**
**ರಾದ್ಧಮಿಂದ್ರಪದಂ ಹಿತ್ವಾ ತತಃ ಸಿದ್ಧಿಮವಾಪ್ಸ್ಯತಿ ॥೧೩॥**

**ಯಃ** ಯಾವ ಬಲಿಚಕ್ರವರ್ತಿಯು **ಪದತ್ರಯಂ** ಮೂರು ಹೆಜ್ಜೆಗಳಿಡುವಷ್ಟು ಭೂಮಿಯನ್ನು **ಯಾಚಮಾನಾಯ** ಬೇಡಿದ **ವಿಷ್ಣವೇ** ಶ್ರೀಹರಿಗೆ **ಇಮಾಂ** ಈ ಭೂಮಿಯನ್ನು **ದತ್ವಾ** ದಾನಮಾಡಿ **ರಾದ್ಧಂ** ಸಿದ್ಧವಾದ ಸಂಪಾದಿಸಿದ **ಇಂದ್ರಪದಂ** ಸಾವರ್ಣಿಮನ್ವಂತರದ ಇಂದ್ರಪದವಿಯನ್ನು **ಹಿತ್ವಾ** ಬಿಟ್ಟು **ತತಃ** ಅನಂತರ **ಸಿದ್ಧಿಂ** ಮೋಕ್ಷವನ್ನು **ಅವಾಪ್ಸ್ಯತಿ** ಹೋಂದುವನು. ಅಂತಹ ಬಲಿಚಕ್ರವರ್ತಿಯು ಇಂದ್ರನಾಗುವನು ಎಂದು ಅನ್ವಯ.

ಛಲಾರೀ ಃ- ವೈವಸ್ವತಮನ್ವಂತರದ ಅಮೃತಮಥನಕಾಲದಲ್ಲಿ ಬಲಿಯು ಇಂದ್ರನಿಂದ ಹತನಾದ. ಶುಕ್ರಾಚಾರ್ಯರು ತಮ್ಮ ವಿದ್ಯೆಯಿಂದ ಆ ಬಲಿಯನ್ನು ಬದುಕಿಸಿದರು. ಬಲಿಯು ಗುರುಗಳಾದ ಶುಕ್ರಾಚಾರ್ಯರನ್ನು ಒಲಿಸಿಕೊಂಡು ಇಂದ್ರನನ್ನು ಗೆದ್ದನು. ತಾನು ತ್ರಿಲೋಕಾಧಿಪತಿಯಾದನು. ಆ ಪ್ರಸಂಗದಲ್ಲಿ ಯಜ್ಞಮಾಡುವಾಗ ಪರಮಾತ್ಮ ವಾಮನರೂಪಿಯಾಗಿ ಬಂದು ಮೂರುಪಾದ ಭೂಮಿಯನ್ನು ಬೇಡಿದನು. ಆ ಪರಮಾತ್ಮನಿಗೆ ಭೂದಾನ ಮಾಡಿದನು. ಆ ಪುಣ್ಯದಿಂದ ಎಂಟನೆಯ ಸಾವರ್ಣಿ ಮನ್ವಂತರದಲ್ಲಿ ಇಂದ್ರಪದವಿಯನ್ನು ಪಡೆದನು. ಇಂದ್ರಪದವಿಯನ್ನು ಅನುಭವಿಸಿ ಕೊನೆಗೆ ಮುಕ್ತಿಗೆ ಹೋಗುವನೆಂದು ಭಾವ.

ಲಿಂಗೇರೀ ಃ- ಬಲಿಶಬ್ದವಾಚ್ಯರಾದವರು ಇಬ್ಬರಿದ್ದಾರೆ. ಕರ್ಮಜದೇವತೆ ಒಬ್ಬ. ಅಸುರ ಮತ್ತೊಬ್ಬ. ಇವರಿಬ್ಬರಲ್ಲಿ ಕರ್ಮಜದೇವತೆಯಾದ ಬಲಿಗೆ ಮುಕ್ತಿಯಾಗುತ್ತದೆ. ಅಸುರನಿಗೆ ಮುಕ್ತಿಯಾಗುವುದಿಲ್ಲ. ॥೧೩॥

ಅವತರಣಿಕಾ ಃ- ಎಲ್ಲ ಭೂಮಿಯನ್ನು ಕೊಟ್ಟು ಬಲಿಚಕ್ರವರ್ತಿಯು ಮುಂದೆ ಇಂದ್ರಪದವಿ ಬರುವವರೆಗೆ ಎಲ್ಲಿ ಹೇಗೆ ಇರುವನೆಂದು ಹೇಳುವರು-

**ಯೋಽಸೌ ಭಗವತಾ ಬದ್ಧಃ ಪ್ರೀತೇನ ಸುತಲೇ ಪುನಃ ।**
**ನಿವೇಶಿತೋಽಧಿಕೇ ಸ್ವರ್ಗಾದಧುನಾಽಽಸ್ತೇ ಸ್ವರಾಡಿವ ॥೧೪॥**

**ಯಃ ಅಸೌ** ಯಾವ ಈ ಬಲಿಚಕ್ರವರ್ತಿಯು ಮೊದಲು **ಭಗವತಾ** ವಾಮನರೂಪಿಯಾದ ಶ್ರೀಹರಿಯಿಂದ **ಬದ್ಧಃ ಸನ್** ವರುಣಪಾಶದಿಂದ ಕಟ್ಟಲ್ಪಟ್ಟವನಾಗಿ **ಪುನಃ** ಮತ್ತೆ **ಪ್ರೀತೇನ** ಆತ್ಮಾರ್ಪಣೆಯಿಂದ ಸಂತುಷ್ಟನಾದ ಶ್ರೀಹರಿಯಿಂದ **ಸ್ವರ್ಗಾತ್ ಅಧಿಕೇ** ಸ್ವರ್ಗಕ್ಕಿಂತ ಹೆಚ್ಚು ಸಮೃದ್ಧವಾದ **ಸುತಲೇ** ಸುತಲವೆಂಬ, ಭೂಮಿಯ ಕೆಳಗಿನ ಲೋಕದಲ್ಲಿ **ನಿವೇಶಿತಃ ಸನ್** ಇಡಲ್ಪಟ್ಟವನಾಗಿ **ಅಧುನಾ** ಈಗ ವೈವಸ್ವತಮನ್ವಂತರದಲ್ಲಿ **ವಿರಾಡ್ ಇವ** ಇಂದ್ರನಂತೆ **ಆಸ್ತೇ** ಇರುವನು. ॥೧೪॥

**ಗಾಲವೋ ದೀಪ್ತಿಮಾನ್ ರಾಮೋ ದ್ರೋಣಪುತ್ರಃ ಕೃಪಸ್ತಥಾ ।**
**ಋಷ್ಯಶೃಂಗಃ ಪಿತಾಽಸ್ಮಾಕಂ ಭಗವಾನ್ ಬಾದರಾಯಣಃ ॥೧೫॥**

**ಇಮೇ ಸಪ್ತರ್ಷಯಸ್ತತ್ರ ಭವಿಷ್ಯಂತಿ ಸ್ವಯೋಗತಃ ।**
**ಇದಾನೀಮಾಸತೇ ರಾಜನ್ ಸ್ವೇ ಸ್ವೇ ಆಶ್ರಮಮಂಡಲೇ ॥೧೬॥**

**ತತ್ರ** ಆ ಸಾವರ್ಣಿಮನ್ವಂತರದಲ್ಲಿ **ಸ್ವಯೋಗತಃ** ತಮ್ಮ ಸಮಾಧ್ಯಾದಿಗಳಿಂದ, ಸತ್ಕರ್ಮಾನುಷ್ಠಾನದೊಂದಿಗೆ, ಸ್ವತಂತ್ರನಾದ ಶ್ರೀಹರಿಯ ಭಕ್ತಿರೂಪವಾದ ಯೋಗದಿಂದ **ಇಮೇ** ಈ **ಗಾಲವಃ** ಗಾಲವರು **ದಿಪ್ತಿಮಾನ್** ದೀಪ್ತಿಮಂತನು **ರಾಮಃ** ಪರಶುರಾಮದೇವರು **ದ್ರೋಣಪುತ್ರಃ** ದ್ರೋಣಾಚಾರ್ಯರ ಮಕ್ಕಳಾದ ಅಶ್ವತ್ಥಾಮಾಚಾರ್ಯರು **ತಥಾ** ಹಾಗೆ **ಕೃಪಃ** ಕೃಪಾಚಾರ್ಯರು **ಋಷ್ಯಶೃಂಗಃ** ಋಷ್ಯಶೃಂಗರು ಮತ್ತು **ಅಸ್ಮಾಕಂ** ನಮ್ಮ **ಪಿತಾ** ತಂದೆಗಳಾದ **ಭಗವಾನ್ ಬಾದರಾಯಣಃ** ಶ್ರೀವೇದವ್ಯಾಸದೇವರು **ಸಪ್ತ ಋಷಯಃ** ಏಳು ಋಷಿಗಳು **ಭವಿಷ್ಯಂತಿ** ಆಗುವರು. **ರಾಜನ್** ಪರೀಕ್ಷಿತನೇ **ಇದಾನೀಂ** ಈಗ **ಸ್ವೇ ಸ್ವೇ** ತಮ್ಮ ತಮ್ಮ **ಆಶ್ರಮಮಂಡಲೇ** ಆಶ್ರಮಪ್ರದೇಶಗಳಲ್ಲಿ **ಆಸತೇ** ಇವರು ಇರುವರು. ॥೧೫-೧೬॥

**ದೇವಗುಹ್ಯಾತ್ ಸರಸ್ವತ್ಯಾಂ ಸಾರ್ವಭೌಮಪತಿಃ ಪ್ರಭುಃ ।**
**ಸ್ಥಾನಂ ಪುರಂದರಾದ್ ಹೃತ್ವಾ ಬಲಯೇ ದಾಸ್ಯತೀಶ್ವರಃ ॥೧೭॥**

ಆ ಸಾವರ್ಣಿಮನ್ವಂತರದಲ್ಲಿ **ದೇವಗುಹ್ಯಾತ್** ದೇವಗುಹ್ಯನೆಂಬ ಋಷಿಯಿಂದ **ಸರಸ್ವತ್ಯಾಂ** ಸರಸ್ವತಿ ಎಂಬ ಅವನ ಪತ್ನಿಯಲ್ಲಿ ಅವತರಿಸಿದ **ಸಾರ್ವಭೌಮಪತಿಃ** ಬ್ರಹ್ಮಾಂಡಪಾಲಕನಾದ **ಪ್ರಭುಃ** ಪ್ರಭುನಾಮಕನಾದ **ಈಶ್ವರಃ** ಶ್ರೀಹರಿಯು **ಸ್ಥಾನಂ** ಇಂದ್ರನ ಸ್ಥಾನವಾದ ಸ್ವರ್ಗವನ್ನು **ಪುರಂದರಾತ್** ಆ ಹೆಸರಿನ ಇಂದ್ರನಿಂದ **ಹೃತ್ವಾ** ತೆಗೆದುಕೊಂಡು **ಬಲಯೇ** ಬಲಿಚಕ್ರವರ್ತಿಗೆ **ದಾಸ್ಯತಿ** ಕೊಡುವನು.

ವಿಶೇಷ ಃ- ಇದರಿಂದ ಸಾವರ್ಣಿಮನ್ವಂತರದಲ್ಲಿ ಪ್ರಭುಃ ಅಥವಾ ಸಾರ್ವಭೌಮಃ ಎಂಬ ಹರಿಯ ಅವತಾರ ಹೇಳಿದಂತಾಯಿತು. ದೇವಗುಹ್ಯಾತ್ ಎಂದು ಆವೃತ್ತಿಮಾಡಿ ದೇವತಾರಹಸ್ಯವನ್ನು ನಿಮಿತ್ತಮಾಡಿಕೊಂಡು ಎಂದೂ ಅರ್ಥ ತಿಳಿಯಬೇಕು. ಲ್ಯಬ್ ಲೋಪನಿಮಿತ್ತಪಂಚಮೀ. ''ಸಾರ್ವಭೌಮ ಇತಿ'' ಎಂಬ ಪಾಠದಲ್ಲಿ ಸಾರ್ವಭೌಮನೆಂಬ ಎಂದು ಅರ್ಥ ತಿಳಿಯಬೇಕು. ॥೧೭॥

**ನವಮೋ ದಕ್ಷಸಾವರ್ಣಿರ್ಮನುರ್ವರುಣಸಂಭವಃ ।**
**ಭೂತಕೇತುರ್ದಿಪ್ತಿಕೇತುರಿತ್ಯಾದ್ಯಾಸ್ತತ್ಸುತಾ ನೃಪ ॥೧೮॥**

**ಹೇ ನೃಪ** ಪರೀಕ್ಷಿತನೇ **ವರುಣಸಂಭವಃ** ವರುಣನಿಂದ ಜನಿಸಿದ **ದಕ್ಷಸಾವರ್ಣಿಃ** ದಕ್ಷಸಾವರ್ಣಿಯು **ನವಮಃ ಮನುಃ** ಒಂಭತ್ತನೆಯ ಮನುವು ಆಗಿದ್ದಾನೆ. **ಭೂತಕೇತುಃ**

**ದೀಪ್ತಿಕೇತುः ಇತ್ಯಾದ್ಯಾः** ಭೂತಕೇತು ದೀಪ್ತಿಕೇತು ಇವರೇ ಮೊದಲಾದವರು **ತತ್ಸುತಾः** ಅವರ ಮಕ್ಕಳಾಗುವರು. ।।೧೮।।

**ಪರಾ ಮರೀಚಿಗರ್ಭಾದ್ಯಾ ದೇವಾ ಇಂದ್ರೋऽದ್ಭುತः ಸ್ಮೃತः ।**
**ದ್ಯುತಿಮತ್ಪ್ರಮುಖಾಸ್ತತ್ರ ಭವಿಷ್ಯಂತ್ಯೃಷಯಸ್ತತः ।।೧೯।।**

**ತತ್ರ** ಆ ದಕ್ಷಸಾವರ್ಣಿಮನ್ವಂತರದಲ್ಲಿ **ಪರಾः ಮರೀಚಿಗರ್ಭಾದ್ಯಾः** ಪರರು ಮರೀಚಿಗರ್ಭರು ಮೊದಲಾದವರು **ದೇವಾः** ದೇವತೆಗಳಾಗುತ್ತಾರೆ **ಅದ್ಭುತः ಇಂದ್ರः ಸ್ಮೃತः** ಅದ್ಭುತನೆಂಬುವವನು ಇಂದ್ರನಾಗುವನೆಂದು ಹೇಳಿದೆ. **ತತः** ಆಗ **ದ್ಯುತಿಮತ್ಪ್ರಮುಖಾः ಋಷಯः ಭವಿಷ್ಯಂತಿ** ದ್ಯುತಿಮಾನ್ ಮೊದಲಾದವರು ಸಪ್ತ ಋಷಿಗಳಾಗುವರು.

ಛಲಾರೀ ः- **ಪರಾः** ಹಿಂದಿನ ಮನ್ವಂತರದವರಿಗಿಂತ ಭಿನ್ನರಾದವರು ಎಂದು ಅರ್ಥ.

ಅವತರಣಿಕಾ ः- ಒಂಭತ್ತನೆಯ ಮನ್ವಂತರದ ಭಗವದವತಾರವನ್ನು ಹೇಳುವರು-

**ಆಯುಷ್ಮತೋऽಂಬುಧಾರಾಯಾಮೃಷಭೋ ಭಗವತ್ಕಲಃ ।**
**ಭವಿತಾ ಯೇನ ಸಂತ್ರಾತೋ ತ್ರಿಲೋಕೀಂ ಭೋಕ್ಷ್ಯತೇऽದ್ಭುತः ।।೨೦।।**

**ಆಯುಷ್ಮತः** ಆಯುಷ್ಮಂತನೆಂಬ ಪುರುಷನಿಂದ **ಅಂಬುಧಾರಾಯಾಂ** ಅಂಬುಧಾರಾ ಎಂಬ ಅವನ ಪತ್ನಿಯಲ್ಲಿ **ಭಗವತ್ಕಲः** ಭಗವದಂಶನಾದ **ಋಷಭः** ಋಷಭನೆಂಬುವವನು **ಭವಿತಾ** ಅವತರಿಸುವನು. **ಯೇನ** ಯಾವ ಈ ಋಷಭನಿಂದ **ಸಂತ್ರಾತः** ಚೆನ್ನಾಗಿ ರಕ್ಷಿತನಾದ **ಅದ್ಭುತः** ಅದ್ಭುತರೆಂಬ ಇಂದ್ರದೇವರು **ತ್ರಿಲೋಕೀಂ** ಮೂರು ಲೋಕಗಳನ್ನು **ಭೋಕ್ಷ್ಯತೇ** ಆಳುವರು.

ಲಿಂಗೇರೀ ः- ಋಷಭೋ ಭಗವಾನ್ ಕಿಲ ಎಂದು ಲಿಂಗೇರೀ ಆಚಾರ್ಯರು ಪಠಿಸಿದ್ದಾರೆ. ಈ ಪಾಠದಲ್ಲಿ **ಭಗವಾನ್** ವಿಷ್ಣುವು **ಋಷಭः ಭವಿತಾ ಕಿಲ** ಋಷಭನೆಂದು ವ್ಯಕ್ತನಾಗುವನೆಂದು ಪ್ರಸಿದ್ಧಿಯು ಎಂದರ್ಥ. ।।೨೦।।

**ದಶಮೋ ಬ್ರಹ್ಮಸಾವರ್ಣೀರುಪಶ್ಲೋಕಸುತೋ ಮಹಾನ್ ।**
**ತತ್ಸುತಾ ಭೂರಿಷೇಣಾದ್ಯಾ ಹವಿಷ್ಮತ್ಪ್ರಮುಖಾ ದ್ವಿಜಾः ।।೨೧।।**

**ಉಪಶ್ಲೋಕಸುತः** ಉಪಶ್ಲೋಕರೆಂಬುವವರ ಮಕ್ಕಳಾದ **ಮಹಾನ್** ಪೂಜ್ಯರಾದ **ಬ್ರಹ್ಮಸಾವರ್ಣಿः** ಬ್ರಹ್ಮಸಾವರ್ಣಿ ಎಂಬುವವರು **ದಶಮः ಮನುः** ಹತ್ತನೆಯ ಮನುಗಳಾಗುವರು. **ಭೂರಿಷೇಣಾದ್ಯಾः** ಭೂರಿಷೇಣ ಮೊದಲಾದವರು **ತತ್ಸುತಾः** ಆ ಬ್ರಹ್ಮಸಾವರ್ಣಿಯ ಪುತ್ರರು **ಹವಿಷ್ಮತ್ಪ್ರಮುಖಾः** ಹವಿಷ್ಮಂತ ಮೊದಲಾದವರು **ದ್ವಿಜಾः** ಸಪ್ತಋಷಿಗಳಾಗುವರು. ।।೨೧।।

ಅವತರಣಿಕಾ ಃ- ಸಪ್ತ ಋಷಿಗಳಲ್ಲಿ ಕೆಲವರ ಹೆಸರನ್ನು ಮಾತ್ರ ಹೇಳುವರು-

**ಹವಿಷ್ಮಾನ್ ಸುಕೃತಃ ಸತ್ಯೋ ಜಯೋ ಮೂರ್ತಿಸ್ತದಾ ದ್ವಿಜಾಃ ।**
**ಸುವಾಸನವಿರುದ್ಧಾದ್ಯಾ ದೇವಾಃ ಶಂಭುಃ ಸುರೇಶ್ವರಃ ॥೨೨॥**

**ತದಾ** ಆ ಹತ್ತನೆಯ ಮನ್ವಂತರದಲ್ಲಿ **ಹವಿಷ್ಮಾನ್** ಹವಿಷ್ಮಾನ್ ಎಂಬುವವನು **ಸುಕೃತಃ** ಸುಕೃತ ಎಂಬುವವನು, **ಸತ್ಯಃ** ಸತ್ಯ ಎಂಬುವವನು, **ಜಯಃ** ಜಯ ಎಂಬುವವನು, **ಮೂರ್ತಿಃ** ಮೂರ್ತಿ ಎಂಬುವವನು, ಇವರೇ ಮುಂತಾದವರು **ದ್ವಿಜಾಃ** ಸಪ್ತರ್ಷಿಗಳು, ಹಿಂದೆ ಪ್ರಮುಖಾ ಎಂದು ಹೇಳಿದ್ದನ್ನು ಕೆಲಮಟ್ಟಿಗೆ ವಿವರಿಸಿರುವರು. **ಸುವಾಸನವಿರುದ್ಧಾದ್ಯಾಃ** ಸುವಾಸನ ವಿರುದ್ಧ ಮೊದಲಾದ **ದೇವಾಃ** ದೇವತೆಗಳು **ಶಂಭುಃ** ಶಂಭು ಎಂಬುವವನು **ಸುರೇಶ್ವರಃ** ಇಂದ್ರನಾಗುವನು.

ವಿಶೇಷ ಃ- ಹಲವು ಕಡೆ ಇದು ೨೩ ನೆಯ ಶ್ಲೋಕ. ಇಲ್ಲಿಯ ೨೩ ನೆಯ ಶ್ಲೋಕ ೨೨ ನೆಯ ಶ್ಲೋಕವಾಗಿದೆ. ಇದನ್ನು ಗಮನಿಸಬೇಕು. ॥೨೨॥

**(ತತ್ರಾಪಿ ಜನ್ಮ ಭವಿತಾ ಹರೇರ್ವಿಶ್ವಸೃಜಾಂ ಗೃಹೇ ।**
**ಶ್ರೀಮೂರ್ತಿರಿತಿ ವಿಖ್ಯಾತೋ ಯೇನಾಪ್ಯಾಯೇತ ವೈ ಜಗತ್ ॥೨೩॥**

**ತತ್ರಾಪಿ** ಆ ಬ್ರಹ್ಮಸಾವರ್ಣಿಮನ್ವಂತರದಲ್ಲಿಯೂ **ವಿಶ್ವಸೃಜಾಂ ಗೃಹೇ** ಬ್ರಹ್ಮ ಮೊದಲಾದವರ ಮನೆಯಲ್ಲಿ **ಹರೇಃ** ಪರಮಾತ್ಮನ **ಜನ್ಮ** ಅವತಾರವು **ಭವಿತಾ** ಆಗುವುದು. **ಸಃ** ಆ ಅವತಾರದ ಶ್ರೀಹರಿಯು **ಶ್ರೀಮೂರ್ತಿಃ ಇತಿ** ಶ್ರೀಮೂರ್ತಿ ಎಂದು **ವಿಖ್ಯಾತಃ** ಪ್ರಸಿದ್ಧನಾಗುವನು. **ಯೇನ** ಯಾವ ಈ ರೂಪದಿಂದ **ಜಗತ್** ಪ್ರಪಂಚವು **ಆಪ್ಯಾಯೇತ** ಸಂತುಷ್ಟವಾಗುತ್ತದೆ. **ವೈ** ಇದು ಶಾಸ್ತ್ರಪ್ರಸಿದ್ಧ. ॥೨೩॥

ವಿಶೇಷ ಃ- ಬರೋಡಾದಿಂದ ಮುದ್ರಿತವಾದ ಅನೇಕವ್ಯಾಖ್ಯಾನದ ಪುಸ್ತಕದಲ್ಲಿ ಈ ಶ್ಲೋಕವನ್ನು ಸಂಗ್ರಹಿಸಿಲ್ಲ. ಅನೇಕ ಕಡೆ ಈ ಶ್ಲೋಕ ಮುದ್ರಿತವಾಗಿದೆ. ಆದರೆ ಈ ಶ್ಲೋಕಕ್ಕೆ ಯಾರೂ ವ್ಯಾಖ್ಯಾನ ಮಾಡಿಲ್ಲ ಎಂಬುದು ಗಮನಿಸಬೇಕಾದ ಅಂಶ.

**ವಿಷ್ವಕ್ಸೇನೋ ವಿಷೂಚ್ಯಾಂ ತು ಶಂಭೋಃ ಸಖ್ಯಂ ಕರಿಷ್ಯತಿ ।**
**ಜಾತಃ ಶಾಂತಸ್ತು ಭಗವಾನ್ ಗೃಹೇ ವಿಶ್ವಸೃಜಾಂ ವಿಭುಃ ॥೨೪॥**

**ವಿಶ್ವಸೃಜಾಂ ಗೃಹೇ** ಬ್ರಹ್ಮಾದಿ ಪ್ರಜಾಪತಿಗಳ ಮನೆಯಲ್ಲಿ **ವಿಷೂಚ್ಯಾಂ** ವಿಷೂಚಿ ಎಂಬುವವಳಲ್ಲಿ **ಜಾತಃ** ಅವತರಿಸಿದ **ವಿಭುಃ** ಸ್ವಾಮಿಯಾದ **ಶಾಂತಃ** ಶುದ್ಧ ಸಾತ್ವಿಕ ಪ್ರವೃತ್ತಿಯುಳ್ಳ **ಭಗವಾನ್** ಸಮಗ್ರ ಐಶ್ವರ್ಯಶಾಲಿಯಾದ **ವಿಷ್ವಕ್ಸೇನಃ** ಈ ಹೆಸರಿನ ಶ್ರೀಹರಿಯು **ಶಂಭೋಃ** ಇಂದ್ರದೇವರ **ಸಖ್ಯಂ ಕರಿಷ್ಯತಿ** ಸ್ನೇಹ ಮಾಡುವನು. ಇಂದ್ರದೇವರನ್ನು ರಕ್ಷಿಸುವನೆಂದರ್ಥ.

ವಿಜಯಧ್ವಜರು ಶಾಂತಃ ಎಂಬುದಕ್ಕೆ ಶಾಂತಾಖ್ಯಃ ಎಂದು ಅರ್ಥ ಹೇಳಿದ್ದಾರೆ. ಶಾಂತನೆಂಬ ಹೆಸರಿನ ಭಗವಂತನು ಅವತರಿಸುತ್ತಾನೆ ಎಂದು ಹೇಳುತ್ತಾರೆ. ಲಿಂಗೇರೀ ಆಚಾರ್ಯರು ಕೂಡಾ ಜಾತಃ ಶಾಂತನಾಮಾ ಎಂದು ವ್ಯಾಖ್ಯಾನಿಸುತ್ತಾರೆ.

ಲಿಂಗೇರೀ :- ವಿಶ್ವಕ್ಸೇನಾತ್ ಎಂದು ಲಿಂಗೇರೀ ಆಚಾರ್ಯರು ಪಠಿಸಿದ್ದಾರೆ. ವಿಷ್ವಕ್ಸೇನ ಎಂಬುವವನಿಂದ ವಿಷೂಚಿಯಲ್ಲಿ ಅವತರಿಸಿದ ಎಂದು ಅನ್ವಯಾರ್ಥ ತೋರಿಸಿದ್ದಾರೆ. ವಿಶ್ವಸೃಜಾಂ ವಿಭುಃ ಎಂದೂ ಅನ್ವಯಿಸಿ ಬ್ರಹ್ಮಾದಿಗಳಿಗೆ ಸ್ವಾಮಿಯಾದ ಎಂದು ಅರ್ಥವನ್ನು ಬರೆದಿದ್ದಾರೆ. ವಿಶ್ವಜಿತೋ ವಿಭುಃ ಎಂಬ ಪಾಠವನ್ನೂ ಲಿಂಗೇರೀ ಆಚಾರ್ಯರು ತಮ್ಮ ವ್ಯಾಖ್ಯಾನದಲ್ಲಿ ಸಂಗ್ರಹಿಸಿದ್ದಾರೆ. ವಿಶ್ವಜಿತೋ ಗೃಹೇ ಎಂದು ವೀರರಾಘವಾಚಾರ್ಯರು ಮತ್ತು ಭಗವತ್ಪ್ರಸಾದಾಚಾರ್ಯರು ಅನ್ವಯ ಮಾಡಿ ತೋರಿಸಿದ್ದಾರೆ.

ವಿಶೇಷ :- ಸತ್ಯಧರ್ಮರು, ಛಲಾರೀ ಆಚಾರ್ಯರು, ಗಂಗಾಸಹಾಯರು, ವೀರರಾಘವಾಚಾರ್ಯರು, ಗೋಸ್ವಾಮಿಗಿರಿಧರಲಾಲರು, ಮತ್ತು ಭಗವತ್ಪ್ರಸಾದಾಚಾರ್ಯರು ಹೀಗೆ ಅನೇಕ ವ್ಯಾಖ್ಯಾನಕಾರರು ತಮ್ಮ ತಮ್ಮ ವ್ಯಾಖ್ಯಾನಗಳಲ್ಲಿ ವಿಶ್ವಕ್ಸೇನಃ ಎಂದು ಪಠಿಸಿ ವಿಶ್ವಕ್ಸೇನನಾಮಕನಾದ ಭಗವಂತ ಎಂತಲೇ ಅರ್ಥವನ್ನು ಬರೆದಿದ್ದಾರೆ. ।।೨೪।।

**ಮನುರ್ವೈ ಧರ್ಮಸಾವರ್ಣಿರೇಕಾದಶಮ ಆತ್ಮವಾನ್ ।**
**ಅನಾಗತಸ್ತತ್ಸುತಾಶ್ಚ ಸತ್ಯಧರ್ಮಾದಯೋ ದಶ ।।೨೫।।**

**ಆತ್ಮವಾನ್** ಶ್ರೀಹರಿಯ ಧ್ಯಾನದಿಂದ ಪ್ರಶಸ್ತವಾದ ಮನಸ್ಸುಳ್ಳ **ಧರ್ಮಸಾವರ್ಣಿಃ** ಧರ್ಮಸಾವರ್ಣಿ ಎಂಬುವವರು **ಏಕಾದಶಮಃ ಮನುಃ** ಹನ್ನೊಂದನೆಯ ಮನುವಾಗಿ **ಅನಾಗತಃ** ಮುಂದೆ ಆಗುವನು **ವೈ** ಇದು ಪ್ರಸಿದ್ಧವು **ಸತ್ಯಧರ್ಮಾದಯಃ** ಸತ್ಯಧರ್ಮ ಮೊದಲಾದವರು **ತತ್ಸುತಾಃ** ಧರ್ಮಸಾವರ್ಣಿಯ ಮಕ್ಕಳು **ದಶ** ಹತ್ತು ಜನರು ಆಗುವರು.

**ವಿಹಂಗಮಾಃ ಕಾಮಗಮಾ ನಿರ್ವಾಣರುಚಯಃ ಸುರಾಃ ।**
**ಇಂದ್ರಶ್ಚ ವೈಧೃತಸ್ತೇಷಾಮೃಷಯಶ್ಚಾರುಣಾದಯಃ ।।೨೬।।**

**ವಿಹಂಗಮಾಃ** ವಿಹಂಗಮರು, **ಕಾಮಗಮಾಃ** ಕಾಮಗಮರು, **ನಿರ್ವಾಣರುಚಯಃ** ನಿರ್ವಾಣರುಚಿಗಳು ಎಂಬುವವರು **ಸುರಾಃ** ದೇವತೆಗಳು **ತೇಷಾಂ** ಆ ದೇವತೆಗಳಿಗೆ **ವೈಧೃತಃ** ವೈಧೃತ ಎಂಬುವವರು **ಇಂದ್ರಃ** ಇಂದ್ರರಾಗುವರು **ಅರುಣಾದಯಃ** ಅರುಣ ಮೊದಲಾದವರು **ಋಷಯಃ** ಸಪ್ತಋಷಿಗಳಾಗುವರು.

ಲಿಂಗೇರೀ :- ಇಂದ್ರಶ್ಚ ವೈಧೃತಿಃ ಎಂಬ ಪಾಠದಲ್ಲಿ ವೈಧೃತಿಃ ಎಂದು ಇಂದ್ರನ ಹೆಸರು ಎಂದು ತಿಳಿಯಬೇಕು. ।।೨೬।।

**ಆರ್ಯಕಸ್ಯ ಸುತಸ್ತತ್ರ ಧರ್ಮಸೇತುರಿತಿ ಸ್ಮೃತಃ ।**
**ವೈಧೃತಾಯಾಂ ಹರೇರಂಶಸ್ತ್ರಿಲೋಕೀಂ ಧಾರಯಿಷ್ಯತಿ ॥೨೭॥**

**ತತ್ರ** ಆ ಹನ್ನೊಂದನೆಯ ಧರ್ಮಸಾವರ್ಣಿಮನ್ವಂತರದಲ್ಲಿ **ಆರ್ಯಕಸ್ಯ** ಆರ್ಯಕನೆಂಬುವವನಿಗೆ **ವೈಧೃತಾಯಾಂ** ವೈಧೃತಾ ಎಂಬುವವಳಲ್ಲಿ **ಸುತಃ ಸನ್** ಮಗನಾಗಿ ಅವತರಿಸಿ **ಹರೇಃ ಅಂಶಃ** ಶ್ರೀಹರಿಯ ಅಂಶವು **ಧರ್ಮಸೇತುಃ ಇತಿ ಸ್ಮೃತಃ** ಧರ್ಮಸೇತು ಎಂದು ಕರೆಯಲ್ಪಟ್ಟು **ತ್ರಿಲೋಕೀಂ** ಮೂರು ಲೋಕಗಳನ್ನು **ಧಾರಯಿಷ್ಯತಿ** ರಕ್ಷಿಸುವನು.

**ಭವಿತಾ ರುದ್ರಸಾವರ್ಣೀ ರಾಜನ್ ದ್ವಾದಶಮೋ ಮನುಃ ।**
**ದೇವವಾನುಪದೇವಶ್ಚ ದೇವಶ್ರೇಷ್ಠಾದಯಃ ಸುತಾಃ ॥೨೮॥**

**ರಾಜನ್** ಪರೀಕ್ಷಿತನೇ **ರುದ್ರಸಾವರ್ಣಿಃ** ರುದ್ರಸಾವರ್ಣಿಯು **ದ್ವಾದಶಮಃ ಮನುಃ** ಹನ್ನೆರಡನೇ ಮನುವು **ಭವಿತಾ** ಆಗುವನು **ದೇವವಾನ್** ದೇವವಂತನು, **ಉಪದೇವಃ** ಉಪದೇವನು, **ದೇವಶ್ರೇಷ್ಠಾದಯಃ** ದೇವಶ್ರೇಷ್ಠ ಮೊದಲಾದವರು **ಸುತಾಃ** ರುದ್ರಸಾವರ್ಣಿಯ ಮಕ್ಕಳುಗಳಾಗುವರು. ॥೨೮॥

**ಋತಧಾಮಾ ಚ ತತ್ರೇಂದ್ರೋ ದೇವಾಶ್ಚ ಹರಿತಾದಯಃ ।**
**ಋಷಯಶ್ಚ ತಪೋಮೂರ್ತಿತಪಶ್ಚಾಗ್ನೀಧ್ರಕಾದಯಃ ॥೨೯॥**

**ತತ್ರ** ಆ ರುದ್ರಸಾವರ್ಣಿ ಮನ್ವಂತರದಲ್ಲಿ **ಋತಧಾಮಾ** ಋತಧಾಮ ಎಂಬುವವರು **ಇಂದ್ರಃ** ಇಂದ್ರನು **ಹರಿತಾದಯಃ** ಹರಿತ ಮೊದಲಾದವರು **ದೇವಾಃ** ದೇವತೆಗಳು **ತಪೋಮೂರ್ತಿತಪಶ್ಚಾಗ್ನೀಧ್ರಕಾದಯಃ** ತಪೋಮೂರ್ತಿ, ತಪ, ಆಗ್ನೀಧ್ರಕ ಮೊದಲಾದವರು **ಋಷಯಃ** ಸಪ್ತ ಋಷಿಗಳು ಆಗುವರು. ॥೨೯॥

**ಸ್ವಧಾಮಾಖ್ಯೋ ಹರೇರಂಶಃ ಸಾಧಯಿಷ್ಯತಿ ತನ್ಮನೋಃ ।**
**ಅಂತರಂ ಸತ್ಯಮಹಸಃ ಸೂನೃತಾಯಾಃ ಸುತೋ ವಿಭುಃ ॥೩೦॥**

**ಸತ್ಯಮಹಸಃ** ಸತ್ಯಮಹಸ್ ಎಂಬುವವರಿಂದ **ಸೂನೃತಾಯಾಃ** ಸುನೃತಾ ಎಂಬುವಳಲ್ಲಿ **ಸುತಃ** ಮಗನಾಗಿ ಅವತರಿಸಿದ **ವಿಭುಃ** ಸರ್ವಸಮರ್ಥನಾದ **ಸ್ವಧಾಮಾಖ್ಯಃ ಹರೇಃ ಅಂಶಃ** ಸ್ವಧಾಮನೆಂಬ ಹರಿಯ ರೂಪವು **ತನ್ಮನೋಃ ಅಂತರಂ ಚ** ರುದ್ರಸಾವರ್ಣಿಮನ್ವಂತರವನ್ನು **ಸಾಧಯಿಷ್ಯತಿ** ರಕ್ಷಿಸುವನು. ॥೩೦॥

**ಮನುಸ್ತ್ರಯೋದಶೋ ಭಾವ್ಯೋ ದೇವಸಾವರ್ಣಿರಾತ್ಮವಾನ್ ।**
**ಚಿತ್ರಸೇನವಿಚಿತ್ರಾದ್ಯಾ ದೇವಸಾವರ್ಣಿದೇಹಜಾಃ ॥೩೧॥**

**ಆತ್ಮವಾನ್** ಮನಸ್ವಿಯಾದ **ದೇವಸಾವರ್ಣಿಃ** ದೇವಸಾವರ್ಣಿ ಎಂಬುವವರು **ತ್ರಯೋದಶಃ ಮನುಃ ಭಾವ್ಯಃ** ಹದಿಮೂರನೇ ಮನುಗಳು ಆಗುವರು **ಚಿತ್ರಸೇನವಿಚಿತ್ರಾದ್ಯಾಃ** ಚಿತ್ರಸೇನ ವಿಚಿತ್ರ ಮುಂತಾದವರು **ದೇವಸಾವರ್ಣಿದೇಹಜಾಃ** ದೇವಸಾವರ್ಣಿಯ ಮಕ್ಕಳು. ||೩೧||

**ದೇವಾಃ ಸುಕರ್ಮಸುತ್ರಾಮಸಂಜ್ಞ ಇಂದ್ರೋ ದಿವಸ್ಪತಿಃ |**
**ನಿರ್ಮೋಕತತ್ತ್ವದರ್ಶಾದ್ಯಾ ಭವಿಷ್ಯಂತ್ಯ ೃಷಯಸ್ತದಾ ||೩೨||**

**ತದಾ** ಆ ದೇವಸಾವರ್ಣಿಮನ್ವಂತರದಲ್ಲಿ **ಸುಕರ್ಮಸುತ್ರಾಮಸಂಜ್ಞಾಃ** ಸುಕರ್ಮ ಸುತ್ರಾಮ ಎಂಬ ಹೆಸರಿನವರು **ದೇವಾಃ** ದೇವತೆಗಳು **ದಿವಸ್ಪತಿಃ** ದಿವಸ್ಪತಿ ಎಂಬುವವರು **ಇಂದ್ರಃ** ಇಂದ್ರದೇವರು **ನಿರ್ಮೋಕತತ್ತ್ವದರ್ಶಾದ್ಯಾಃ** ನಿರ್ಮೋಕ ತತ್ತ್ವದರ್ಶ ಮೊದಲಾದವರು **ಋಷಯಃ ಭವಿಷ್ಯಂತಿ** ಋಷಿಗಳಾಗುವರು. ''ಶತಮನ್ಯುರ್ದಿವಸ್ಪತಿಃ'' ಎಂದು ಅಮರವಿದೆ. ||೩೨||

**ದೇವಹೋತ್ರಸ್ಯ ತನಯ ಉಪಹರ್ತಾ ದಿವಸ್ಪತೇಃ |**
**ಯೋಗೇಶ್ವರೋ ಹರೇರಂಶೋ ಬೃಹತ್ಯಾಂ ಸಂಭವಿಷ್ಯತಿ ||೩೩||**

**ದೇವಹೋತ್ರಸ್ಯ** ದೇವಹೋತ್ರನೆಂಬುವವನಿಗೆ **ಬೃಹತ್ಯಾಂ** ಬೃಹತೀ ಎಂಬುವವಳಲ್ಲಿ **ತನಯಃ ಚ** ಮಗನಾಗಿ ಅವತರಿಸಿದ **ಹರೇಃ ಅಂಶಃ ಯೋಗೇಶ್ವರಃ** ಯೋಗೇಶ್ವರನೆಂಬ ಶ್ರೀಹರಿಯು **ದಿವಸ್ಪತೇಃ** ಇಂದ್ರನಿಗೆ **ಉಪಹರ್ತಾ** ಸಂಪತ್ತು ಮೊದಲಾದವುಗಳನ್ನು ತಂದುಕೊಡುವವನು ಆಗುವನು. ಉಪಕಾರಕನಾಗುವನು. ||೩೩||

**ಮನುರ್ವಾ ಇಂದ್ರಸಾವರ್ಣಿಶ್ಚತುರ್ದಶಮ ಏಷ್ಯತೇ |**
**ಜಂತುಭೀರವವರ್ಯಾದ್ಯಾ ಇಂದ್ರಸಾವರ್ಣಿವೀರ್ಯಜಾಃ ||೩೪||**

**ಇಂದ್ರಸಾವರ್ಣಿಃ ಚ** ಇಂದ್ರಸಾವರ್ಣಿಯು **ಚತುರ್ದಶಮಃ ಮನುಃ ಏಷ್ಯತೇ** ಹದಿನಾಲ್ಕನೆಯ ಮನುವು ಆಗುವನು. **ವೈ** ಇದು ಶಾಸ್ತ್ರಸಿದ್ಧವು. **ಜಂತುಭೀರವ(ಭಾರವ) ವರ್ಯಾದ್ಯಾಃ** ಜಂತು-ಭೀರವ-ವರ್ಯ ಮೊದಲಾದವರು **ಇಂದ್ರಸಾವರ್ಣಿವೀರ್ಯಜಾಃ** ಇಂದ್ರಸಾವರ್ಣಿಯ ರೇತಸ್ಸಿನಿಂದ ಜನಿಸಿದವರು. ಮಕ್ಕಳು ಎಂದು ಅರ್ಥ.

ಲಿಂಗೇರೀ :- ಚತುರ್ದಶಮಃ ಮುಂತಾದ ಪ್ರಯೋಗದಲ್ಲಿ ಮಪ್ರತ್ಯಯವು ಪೂರ್ಣಾರ್ಥಕವಾಗಿದೆ. ಹದಿನಾಲ್ಕನೇ ಸಂಖ್ಯಾಪೂರಕರು ಎಂದು ಅರ್ಥ. ||೩೪||

**ವಿಚಿತ್ರಾಶ್ಚಾಕ್ಷುಷಾ ದೇವಾಃ ಶುಚಿರಿಂದ್ರೋ ಭವಿಷ್ಯತಿ |**
**ಅಗ್ನಿರ್ಬಾಹುಃ ಶುಚಿಃ ಶುದ್ಧೋ ಮಾಗಧಾದ್ಯಾಸ್ತಪಸ್ವಿನಃ ||೩೫||**

ಈ ಹದಿನಾಲ್ಕನೇ ಮನ್ವಂತರದಲ್ಲಿ **ವಿಚಿತ್ರಾಃ ಚಾಕ್ಷುಷಾಃ** ವಿಚಿತ್ರ-ಚಾಕ್ಷುಷರೆಂಬ ಹೆಸರಿನ **ದೇವಾಃ** ದೇವತೆಗಳು **ಶುಚಿಃ** ಶುಚಿ ಎಂಬುವವರು **ಇಂದ್ರಃ** ಇಂದ್ರದೇವರು **ಭವಿಷ್ಯತಿ** ಆಗುವರು. **ಅಗ್ನಿಃ** ಅಗ್ನಿಯು **ಬಾಹುಃ** ಬಾಹುವು **ಶುಚಿಃ** ಶುಚಿಯು **ಶುದ್ಧಃ** ಶುದ್ಧನು **ಮಾಗಧಾದ್ಯಾಃ** ಮಾಗಧ ಮೊದಲಾದವರು **ತಪಸ್ವಿನಃ** ಸಪ್ತ ಋಷಿಗಳು ಆಗುವರು. ।।೩೫।।

**ಸತ್ರಾಯಣಸ್ಯ ತನಯೋ ಬೃಹಧ್ಭಾನುಸ್ತದಾ ಹರಿಃ ।**
**ವಿತಾನಾಯಾಂ ಮಹಾರಾಜ ಕ್ರಿಯಾತಂತೂನ್ ವಿತಾಯಿತಾ ।।೩೬।।**

**ಹೇ ಮಹಾರಾಜ** ಪರೀಕ್ಷಿತನೇ **ತದಾ** ಆ ಮನ್ವಂತರದಲ್ಲಿ **ವಿತಾನಾಯಾಂ** ವಿತಾನಾ ಎಂಬುವಳಲ್ಲಿ **ಸತ್ರಾಯಣಸ್ಯ** ಸತ್ರಾಯಣ ಎಂಬುವವನಿಗೆ **ತನಯಃ** ಮಗನಾಗಿ ಅವತರಿಸಿದ **ಹರಿಃ** ಶ್ರೀಹರಿಯು **ಬೃಹದ್ಭಾನುಃ** ಬೃಹಧ್ಭಾನು ಎಂಬ ಹೆಸರಿನವನು **ಕ್ರಿಯಾತಂತೂನ್** ಕರ್ಮಸಮುದಾಯವನ್ನು **ವಿತಾಯಿತಾ** ವಿಸ್ತಾರಗೊಳಿಸುವವನು.

ಲಿಂಗೇರೀ ಃ- ಸತ್ರಾಯಣಸ್ಯ ಎಂಬ ಸ್ಥಾನದಲ್ಲಿ ನಾರಾಯಣಸ್ಯ ಎಂದು ಪಠಿಸಿದ್ದಾರೆ.

**ರಾಜನ್ ಚತುರ್ದಶೈತಾನಿ ತ್ರಿಕಾಲಾನುಗತಾನಿ ತೇ ।**
**ಪ್ರೋಕ್ತಾನ್ಯೇಭಿರ್ಮಿತಃ ಕಲ್ಪೋ ಯುಗಸಾಹಸ್ರಪರ್ಯಯಃ ।।೩೭।।**

**।। ಇತಿ ಶ್ರೀಮದ್ಭಾಗವತೇ ಅಷ್ಟಮಸ್ಕಂಧೇ ದ್ವಾದಶೋಽಧ್ಯಾಯಃ ।।**

**ಹೇ ರಾಜನ್** ಪರೀಕ್ಷಿತನೇ **ತ್ರಿಕಾಲಾನುಗತಾನಿ** ಭೂತ-ವರ್ತಮಾನ-ಭವಿಷ್ಯಕಾಲಗಳಲ್ಲಿ ಸೇರಿಕೊಂಡಿರುವ (ಕಳೆದವು ಆರು, ನಡೆದುದು ಒಂದು, ಮುಂದೆ ಬರುವ ಏಳು) **ಏತಾನಿ** ಈ **ಚತುರ್ದಶ** ಹದಿನಾಲ್ಕು ಮನ್ವಂತರಗಳು **ತೇ** ನಿನಗೆ **ಪ್ರೋಕ್ತಾನಿ** ನನ್ನಿಂದ ಸಂಕ್ಷೇಪ-ವಿಸ್ತಾರಗಳಿಂದ ಹೇಳಲ್ಪಟ್ಟಿವೆ. **ಯುಗಸಾಹಸ್ರಪರ್ಯಯಃ** ಸಾವಿರ ಮಹಾಯುಗಗಳನ್ನು ಒಳಗೊಂಡ **ಕಲ್ಪಃ** ಬ್ರಹ್ಮದೇವರ ದಿನಕಲ್ಪವು **ಏಭಿಃ** ಈ ಹದಿನಾಲ್ಕು ಮನ್ವಂತರಗಳಿಂದ **ಮಿತಃ** ಪರಿಮಿತವು ಎಂಬುದು ಪ್ರಮಾಣಸಿದ್ಧ.

ವಿಶೇಷ ಃ- ಕೃತ-ತ್ರೇತಾ-ದ್ವಾಪರ-ಕಲಿಯುಗ ನಾಲ್ಕು ಸೇರಿದರೆ ಒಂದು ಮಹಾಯುಗ. ಬ್ರಹ್ಮದೇವರ ಒಂದು ಹಗಲಿನಲ್ಲಿ ಹದಿನಾಲ್ಕು ಮನುಗಳು ಆಳುವರೆಂದರ್ಥ. ಎಪ್ಪತ್ತೊಂದು ಮಹಾಯುಗ ಮತ್ತು ಐದು ಸಾವಿರದ ನೂರನಲವತ್ತು ಎರಡು ದೇವವರ್ಷಗಳ ವರೆಗೆ ಒಬ್ಬೊಬ್ಬ ಮನುಗಳು ಆಳುತ್ತಾರೆ.

ತ್ರಿಲೋಕಾನುಗತಾನಿ ಎಂಬ ಪಾಠದಲ್ಲಿ ಭೂ ಭುವಃ ಸ್ವಃ ಎಂಬ ಮೂರು ಲೋಕಗಳಲ್ಲಿ ವ್ಯಾಪ್ತವಾದ ಎಂದರ್ಥ. ಮಹರಾದಿ ಲೋಕಗಳಲ್ಲಿ ದಿನಕಲ್ಪ ಪ್ರಯುಕ್ತ ವ್ಯತ್ಯಾಸಗಳು ಆಗುವುದಿಲ್ಲವೆಂದರ್ಥ. ।।೩೭।।

**ಇಲ್ಲಿಗೆ ಹನ್ನೆರಡನೇ ಅಧ್ಯಾಯವು ಮುಗಿಯಿತು.**

# ಅಥ ತ್ರಯೋದಶೋಽಧ್ಯಾಯಃ

ಆಯಾ ಮನುಗಳು, ಆಯಾ ಋಷಿಗಳು, ಆಯಾ ದೇವೇಂದ್ರರು, ಆಯಾ ಅವತಾರಗಳನ್ನು ಧರಿಸಿದ ಭಗವಂತನು ಏನೇನು ಮಾಡಿದರೆಂದು ಶುಕಮುನಿಗಳನ್ನು ಅವನೀಶನಾದ ಪರೀಕ್ಷಿತನು ಕೇಳುವನು. ಅದಕ್ಕೆ ಉತ್ತರವಾಗಿ ಶ್ರೀಶುಕಾಚಾರ್ಯರು ಆ ಹದಿನಾಲ್ಕು ಮನ್ವಂತರದ ಮನು ಮುಂತಾದವರ ಪ್ರತ್ಯೇಕಕಾರ್ಯಗಳನ್ನು ಈ ಅಧ್ಯಾಯದಲ್ಲಿ ತಿಳಿಸುವರು.

**ರಾಜೋವಾಚ**

**ಮನ್ವಂತರೇಷು ಭಗ(ವ)ವಾನ್ ಯಥಾ ಮನ್ವಾದಯಸ್ತ್ವಿಮೇ ।**
**ಯಸ್ಮಿನ್ ಕರ್ಮಣಿ ಯೇ ಯೇನ ನಿಯುಕ್ತಸ್ತದ್ವದಸ್ವ ಮೇ ॥೧॥**

**ಭಗವಾನ್** ಶ್ರೀಹರಿಯು **ಮನ್ವಂತರೇಷು** ಮನ್ವಂತರಗಳಲ್ಲಿ (ಸ್ವಾಯಂಭುವಾದಿ ಇಂದ್ರಸಾವರ್ಣಿ ಪರ್ಯಂತ ಹದಿನಾಲ್ಕು ಮನ್ವಂತರಗಳಲ್ಲಿ) **ಯಥಾ** ಯಾವ ರೀತಿಯಿಂದ ಪ್ರವೃತ್ತನಾಗುವನು **ಯೇ ಇಮೇ** ಯಾವ ಈ **ಮನ್ವಾದಯಃ** ಮನುಗಳು ಅವರ ಮಕ್ಕಳು ಆಗಿನ ದೇವತೆಗಳು, ಇಂದ್ರರು, ಸಪ್ತಋಷಿಗಳು ಇವರೆಲ್ಲ **ಯಸ್ಮಿನ್ ಕರ್ಮಣಿ** ಯಾವ ಕೆಲಸದಲ್ಲಿ **ಯೇನ** ಯಾರಿಂದ **ನಿಯುಕ್ತಾಃ ಭವಂತಿ** ನಿಯೋಜಿಸಲ್ಪಡುವರು **ತತ್** ಅದೆಲ್ಲವನ್ನು **ಮೇ** ನನಗೆ **ವದಸ್ವ** ಹೇಳಿರಿ.

ಸತ್ಯ ಃ- ಹೇ ಭಗವನ್ ಎಂಬ ಪಾಠದಲ್ಲಿ ಶುಕಾಚಾರ್ಯರಿಗೆ ಸಂಬೋಧನ ಎಂದು ತಿಳಿಯಬೇಕು. ॥೧॥

ಅವತರಣಿಕಾ ಃ- ಈ ರೀತಿ ಪ್ರಶ್ನಿಸಲ್ಪಟ್ಟ ಶುಕಾಚಾರ್ಯರು **ಯೇನ ನಿಯುಕ್ತಾಃ** ಎಂಬುದಕ್ಕೆ ಉತ್ತರಿಸುವರು-

**ಋಷಿರುವಾಚ**

**ಮನವೋ ಮನುಪುತ್ರಾಶ್ಚ ಮುನಯಶ್ಚ ಮಹೀಪತೇ ।**
**ಇಂದ್ರಾಃ ಸುರಗಣಾಶ್ಚೈವ ಸರ್ವೇ ಪುರುಷಶಾಸನಾಃ ॥೨॥**

**ಹೇ ಮಹೀಪತೇ** ರಾಜನೇ **ಮನವಃ ಚ** ಮನುಗಳು **ಮನುಪುತ್ರಾಃ** ಮನುಗಳ ಮಕ್ಕಳು **ಮುನಯಃ** ಸಪ್ತ ಋಷಿಗಳು **ಇಂದ್ರಾಃ** ಇಂದ್ರರು **ಸುರಗಣಾಃ** ದೇವತಾಗಣಗಳು **ಸರ್ವೇ ಚ** ಎಲ್ಲರೂ **ಪುರುಷಶಾಸನಾಃ** ಪೂರ್ಣಷಡ್ಗುಣನಾದ ಶ್ರೀಹರಿಯ ಆಜ್ಞೆಗೆ ಬದ್ಧರಾಗಿದ್ದಾರೆ.

ಅವತರಣಿಕಾ :- ಹಿಂದೆ ಪ್ರಕೃತರಾದ ಸ್ವಾಯಂಭುವಾದಿಗಳು ಯಜ್ಞಾದಿರೂಪಗಳಿಂದ ಅವತರಿಸಿದ ಭಗವಂತನ ಆಜ್ಞೆಯಂತೆ ನಡೆದರೆಂದು ಹೇಳಿದ್ದಾರೆ. ಈಗ ಹೀಗೆ ಪುರುಷಾಜ್ಞಾನುವರ್ತಿಗಳೆಂದು ಹೇಳಿದರೆ ವಿರೋಧ ಬರುತ್ತದೆ ಎಂಬ ಮಂದಾಶಂಕೆಯನ್ನು ಪರಿಹರಿಸುತ್ತಿದ್ದಾರೆ-

**ಯಜ್ಞಾದಯೋ ಯಾಃ ಕಥಿತಾಃ ಪೌರುಷ್ಯಸ್ತನವೋ ನೃಪ ।**
**ಮನ್ವಾದಯೋ ಜಗದ್ಯಾತ್ರಾಂ ನಯಂತ್ಯಾಭಿಃ ಪ್ರಚೋದಿತಾಃ ॥೩॥**

**ಹೇ ನೃಪ** ಎಲೋ ರಾಜನೇ **ಕಥಿತಾಃ ಚ** ಆಯಾ ಮನ್ವಂತರಗಳಲ್ಲಿ ಹೇಳಿದ **ಯಜ್ಞಾದಯಃ** ಯಜ್ಞ ಮೊದಲಾದ ಭಗವದ್ರೂಪಗಳು **ಯಾಃ** ಯಾವುಗಳೋ **ತಾಃ** ಅವುಗಳು **ಪೌರುಷ್ಯಃ ತನವಃ** ಪೂರ್ಣಷಡ್ಗುಣನಾದ್ದರಿಂದ ಪುರುಷಶಬ್ದವಾಚ್ಯನಾದ ಭಗವಂತನ ಸಂಬಂಧಿಗಳಾದ ರೂಪಗಳು **ಆಭಿಃ** ಆಯಾ ಭಗವದ್ರೂಪಗಳಿಂದ **ಪ್ರಚೋದಿತಾಃ** ಪ್ರೇರಿಸಲ್ಪಟ್ಟು **ಮನ್ವಾದಯಃ** ಮನು ಮೊದಲಾದವರು **ಜಗದ್ಯಾತ್ರಾಂ** ಜಗತ್ತಿನ ಜೀವನೋಪಾಯವನ್ನು **ನಯಂತಿ** ಮಾಡುವರು.

ಸತ್ಯ :- ''ಯಾತ್ರಾ ತು ಯಾಪನೋಪಾಯೇ ಗತೌ ದೇವಾರ್ಚನೋತ್ಸವೇ'' ಎಂದು ವಿಶ್ವವಿದೆ.

ವಿಶೇಷ :- ಯಜ್ಞಾದಿಗಳು ಬೇರೆ. ನೀವು ಹೇಳಿದ ಶಾಸಕಪುರುಷ ಬೇರೆಯೆಂಬ ಅಜ್ಞಾನಿಗಳ ಶಂಕಾಪರಿಹಾರಕವಾಗಿ ''ಪೌರುಷ್ಯಸ್ತನವಃ'' ಎಂದು ಹೇಳಿದ್ದಾರೆ. ಆದಿಪದದಿಂದ ಮನುಪುತ್ರರು, ಋಷಿಗಳು ಇಂದ್ರರು ದೇವತೆಗಳನ್ನೂ ಸ್ವೀಕರಿಸಬೇಕು. ಇವರೆಲ್ಲರ ಜೀವನೋಪಾಯವೂ ಭಗವಂತನಿಂದಲೇ ಆಗುತ್ತದೆಂದು ಅಭಿಪ್ರಾಯ.

ಲಿಂಗೇರೀ :- ಯೇನ ಯಸ್ಮಿನ್ ಕರ್ಮಣಿ ನಿಯುಕ್ತಾಃ ಎಂಬುವ ಪ್ರಶ್ನೆಗೂ ಸಾಮಾನ್ಯವಾದ ಉತ್ತರವು ಇದೆಂದು ತಿಳಿಯಬೇಕು. ॥೩॥

ಅವತರಣಿಕಾ :- ಈಗ ವಿವರವಾಗಿ ಪ್ರತ್ಯೇಕವಾಗಿ ಋಷಿಗಳ ಕಾರ್ಯವನ್ನು ಹೇಳುತ್ತಿದ್ದಾರೆ-

**ಚತುರ್ಯುಗಾಂತೇ ಕಾಲೇನ ಗ್ರಸ್ತಾನ್ ಶ್ರುತಿಗಣಾನ್ ಯಥಾ ।**
**ತಪಸಾ ಋಷಯೋಽಪಶ್ಯನ್ ಯತೋ ಧರ್ಮಃ ಸನಾತನಃ ॥೪॥**

**ಯತಃ** ಯಾವ ಶ್ರುತಿಗಳಿಂದ **ಸನಾತನಃ** ಯಾವಾಗಲೂ ಇರುವ **ಧರ್ಮಃ** ಮೋಕ್ಷಸಾಧನವಾದ ಧರ್ಮವು ಸಿದ್ಧಿಸುವುದೋ, **ಕಾಲೇನ** ಕಾಲಬಲದಿಂದ **ಗ್ರಸ್ತಾನ್** ಪ್ರವರ್ತಕರಿಲ್ಲದ್ದರಿಂದ ಮರೆಯಾಗಿರುವ **ತಾನ್** ಆ ಶ್ರುತಿಗಳನ್ನು **ತಪಸಾ** ಶ್ರೀಹರಿಯನ್ನು ಕುರಿತು ತಪಸ್ಸು ಮಾಡಿ **ಚತುರ್ಯುಗಾಂತೇ** ಚತುರ್ಯುಗವೆಂದು ಕರೆಸಿಕೊಳ್ಳುವ ದೈನಂದಿನ ಕಲ್ಪದ ಮಹಾಯುಗದ ಕೊನೆಗೆ ಹರಿಯಿಂದ ಆಜ್ಞಪ್ತರಾಗಿ **ಯಥಾ** ಯಥಾವತ್ತಾಗಿ ಹಿಂದೆ ಇದ್ದಂತೆಯೇ ಅದೇ ಕ್ರಮದಲ್ಲಿ **ಅಪಶ್ಯನ್** ನೋಡಿದರು.

ದಿನಕಲ್ಪ ಮುಗಿದಾಗ ಪ್ರಲಯಕಾಲದಿಂದ ಕಾಣದಾದವುಗಳನ್ನು ಎಂದೂ ಅನ್ವಯ ಮಾಡಿರುವರು. ಪ್ರಲಯವು ಮುಗಿದು ದಿನಕಲ್ಪದ ಪ್ರಾರಂಭದಲ್ಲಿ ಆ ವೇದಗಳನ್ನು ಋಷಿಗಳು ಕಂಡರು ಎಂದು ಅರ್ಥ. ॥೪॥

**ತತೋ ಧರ್ಮಂ ಚತುಷ್ಪಾದಂ ಮನವೋ ಹರಿಣೋದಿತಾಃ ।**
**ಯುಕ್ತಾಃ ಸಂಚಾರಯಂತ್ಯದ್ಧಾ ಸ್ವೇ ಸ್ವೇ ಕಾಲೇ ಮಹೀಂ ನೃಪಾಃ ॥೫॥**

**ತತಃ** ಋಷಿಗಳು ವೇದಗಳನ್ನು ಕಂಡು ಉಪದೇಶಿಸಿದ ನಂತರ **ಮನವಃ** ಆಯಾ ಮನ್ವಂತರಾಧಿಪತಿಗಳು **ತತಃ** ವೇದದಲ್ಲಿ ಹೇಳಿದ ರೀತಿಯಲ್ಲಿ **ಹರಿಣಾ** ಆಯಾ ಮನ್ವಂತರಕ್ಕೆ ನಿಯಾಮಕವಾದ ಅವತಾರರೂಪದಿಂದ **ಉದಿತಾಃ** ಇದು ಧರ್ಮ ಇದು ಅಧರ್ಮವೆಂದು ಉಪದಿಷ್ಟರಾಗಿ **ಯುಕ್ತಾಃ** ಆ ರೂಪದಲ್ಲಿಯೇ ಮನಸ್ಸಿಟ್ಟವರಾಗಿ, ಧರ್ಮದಲ್ಲಿ ಆಸಕ್ತರಾಗಿ **ಚತುಷ್ಪಾದಂ ಧರ್ಮಂ** ಸತ್ಯ, ತಪಸ್ಸು, ದಯಾ, ಶೌಚ, ಎಂಬ ನಾಲ್ಕು ಪಾದಗಳುಳ್ಳ ಧರ್ಮವನ್ನು **ಅದ್ಧಾ** ಸಂಪೂರ್ಣವಾಗಿ ಚೆನ್ನಾಗಿ (ನ್ಯೂನ್ಯತೆ ಇಲ್ಲದೆ) ಎಲ್ಲರೂ ತಪ್ಪದೇ ಅನುಸರಿಸುವಂತೆ **ಸಂಚಾರಯಂತಿ** ಪ್ರವರ್ತಿಸುವರು. ಆಯಾ ಮನುಗಳನ್ನು ಶ್ರೀಹರಿಯು ನಿಯೋಗಿಸುವನೆಂದರ್ಥ. ॥೫॥

**ಪಾಲಯಂತಿ ಪ್ರಜಾಪಾಲಾ ಯಾವದಂತಂ ವಿಭಾಗಶಃ ।**
**ಯಜ್ಞಭಾಗಯುಜೋ ದೇವಾ ಯೇ ಚ ತತ್ರಾನುಕೀರ್ತಿತಾಃ ॥೬॥**

**ಪ್ರಜಾಪಾಲಾಃ ನೃಪಾಃ** ಪ್ರಜೆಗಳ ರಕ್ಷಕರಾಗಿ ನಿಯುಕ್ತರಾದ ಆ ಮನುಪುತ್ರರೇ ಮೊದಲಾದ ರಾಜರು **ಸ್ವೇ ಸ್ವೇ ಕಾಲೇ** ತಮ್ಮ ತಮ್ಮ ಆಳ್ವಿಕೆಯ ಕಾಲದಲ್ಲಿ **ವಿಭಾಗಶಃ** ತಾವು ತಾವು ಆಳುವ ಭೂಭಾಗಗಳಲ್ಲಿ **ಯಾವದಂತಂ** ತಮ್ಮ ತಮ್ಮ ರಾಜ್ಯದ ಎಲ್ಲೆಯವರೆಗೂ,

ತಮ್ಮ ಕರ್ತವ್ಯಕರ್ಮ ಮುಗಿಯುವವರೆಗೂ, ಆಯಾ ಮನ್ವಂತರ ಮುಗಿಯುವವರೆಗೂ **ವಿಭಾಗಶಃ** ಪುತ್ರ-ಪೌತ್ರಪರಂಪರೆಯಾಗಿ **ಮಹೀಂ ಪಾಲಯಂತಿ** ಭೂಮಿಯನ್ನು ಆಳುವರು. ಮನುಪುತ್ರರ ಕಾರ್ಯವನ್ನು ಹೇಳಿಯಾಯಿತು. ದೇವತೆಗಳ ವ್ಯಾಪಾರವನ್ನು ಹೇಳುವರು. **ತತಃ** ಆಯಾ ಮನ್ವಂತರದಲ್ಲಿ **ಅನುಕೀರ್ತಿತಾಃ** ಹೇಳಲ್ಪಟ್ಟ **ಯೇ ದೇವಾಃ** ಯಾವ ದೇವತೆಗಳುಂಟೋ **ತೇ** ಅವರು **ಯಜ್ಞಭಾಗಭುಜಃ** ಯಜ್ಞದಲ್ಲಿ ಕೊಡುವ ಹವಿಸ್ಸಿನ ಭಾಗವನ್ನು ಸ್ವೀಕರಿಸುವರು. ಶ್ರೀಹರಿಯು ಅವರಿಂದ ಈ ಕಾರ್ಯವನ್ನು ಮಾಡಿಸುತ್ತಾನೆ ಎಂದು ಅರ್ಥ. ।।೬।।

**ಇಂದ್ರೋ ಭಗವತಾ ದತ್ತಾಂ ತ್ರೈಲೋಕ್ಯಶ್ರಿಯಮೂರ್ಜಿತಾಮ್ ।**
**ಭುಂಜಾನಃ ಪಾತಿ ಲೋಕಾನ್ ತ್ರೀನ್ ಕಾಮಂ ಲೋಕೇ ಪ್ರವರ್ಷತಿ ।।೭।।**

**ತತ್ರ** ಆಯಾ ಮನ್ವಂತರದಲ್ಲಿ **ಅನುಕೀರ್ತಿತಃ** ಹೇಳಲ್ಪಟ್ಟ **ಇಂದ್ರಃ** ಪ್ರತಿಯೊಬ್ಬ ಇಂದ್ರನು **ಭಗವತಾ ದತ್ತಾಂ** ಶ್ರೀಹರಿಯಿಂದ ಕೊಡಲ್ಪಟ್ಟ **ಊರ್ಜಿತಾಂ** ಸಂಪದ್ಭರಿತವಾದ **ತ್ರೈಲೋಕ್ಯಶ್ರಿಯಂ** ಮೂರು ಲೋಕಗಳ ಸಂಪತ್ತನ್ನು **ಭುಂಜಾನಃ** ಶ್ರೀಹರಿಯ ಸೇವೆ ಎಂದು ಅನುಭವಿಸುವವನಾಗಿ **ತ್ರೀನ್ ಲೋಕಾನ್** ಭೂಃ ಭುವಃ, ಸ್ವರ್ಲೋಕಗಳನ್ನು **ಪಾತಿ** ರಕ್ಷಿಸುವನು **ಕಾಮಂ** ಶ್ರೀಹರಿಯ ಇಚ್ಛೆಯಂತೆ ರೈತರ-ಪ್ರಜೆಗಳ ಇಚ್ಛೆ ಪೂರ್ತಿಯಾಗುವಂತೆ **ಲೋಕೇ ಪ್ರವರ್ಷತಿ** ಮೇಘಗಳ ದ್ವಾರಾ ಭೂಮಿಯಲ್ಲಿ ಮಳೆ ಗರೆಯುವನು. ।।೭।।

ಅವತರಣಿಕಾ :- ಪ್ರಾಸಂಗಿಕವಾಗಿ ಬೇರೆ ರೂಪಗಳಿಂದ ಶ್ರೀಹರಿಯು ಮಾಡಿದ ಜಗತ್ಪ್ರವರ್ತನೆಯನ್ನು ಹೇಳುವರು.

**ಜ್ಞಾನಂ ಚಾನುಯುಗಂ ಬ್ರೂತೇ ಹರಿಃ ಸಿದ್ಧಸ್ವರೂಪಧೃಕ್ ।**
**ಋಷಿರೂಪಧರಃ ಕರ್ಮಯೋಗಂ ಯೋಗೇಶರೂಪಧೃಕ್ ।।೮।।**

**ಹರಿಃ** ಶ್ರೀಹರಿಯು **ಸಿದ್ಧಸ್ವರೂಪಧೃಕ್** ಕಪಿಲಾದಿ ಸಾಕ್ಷಾದ್ರೂಪಗಳನ್ನು ಹಾಗೂ ಸನಕಾದ್ಯಂತರ್ಗತವಾದ ರೂಪಗಳನ್ನು ಧರಿಸಿ **ಅನುಯುಗಂ** ಯುಗಾನುಸಾರವಾಗಿ **ಜ್ಞಾನಂ** ಜ್ಞಾನಸಾಧನವನ್ನು **ಬ್ರೂತೇ** ಉಪದೇಶಿಸುವನು. **ಋಷಿರೂಪಧೃಕ್** ಪರಶುರಾಮ ಪಾರಾಶರ(ವೇದವ್ಯಾಸ) ರೂಪಗಳನ್ನು ಧರಿಸಿ **ಕರ್ಮಯೋಗಂ** ಕರ್ಮಮಾರ್ಗದ ಉಪಾಯವನ್ನು ಹೇಳುವನು. **ಯೋಗೇಶರೂಪಧೃಕ್** ದತ್ತಾತ್ರೇಯಾದಿ ರೂಪಗಳನ್ನು ಧರಿಸಿ **ಯೋಗಂ** ಅಣಿಮಾದಿಸಾಧನವನ್ನು ಹೇಳುವನು. ಪ್ರಾಣಾಯಾಮಾದಿ ಪ್ರತಿಪಾದಕವಾದ ಶಾಸ್ತ್ರವನ್ನು ಹೇಳುವನು.

ಲಿಂಗೇರೀ :- ಚಾತುರ್ಯುಗಂ ಎಂಬ ಪಾಠದಲ್ಲಿ ಕೃತ ಮುಂತಾದ ನಾಲ್ಕು ಯುಗಗಳಲ್ಲಿ ಎಂದು ಅರ್ಥ. ।।೮।।

**ಸರ್ಗೇ ಪ್ರಜೇಶರೂಪೇಣ ದಸ್ಯೂನ್ ಹಂತಿ ಸ್ವರಾಡ್ವಪುಃ ।**
**ಕಾಲರೂಪೇಣ ಸರ್ವೇಷಾಮಭವಾಯ ಪೃಥಗ್ಗುಣಃ ॥೯॥**

**ಪ್ರಜೇಶರೂಪೇಣ** ದಕ್ಷ-ಮರೀಚಿ ಮುಂತಾದ ಪ್ರಜೇಶ್ವರರಲ್ಲಿದ್ದು **ಸರ್ಗಂ** ಸೃಷ್ಟಿಯನ್ನು ಮಾಡುವನು **ಸ್ವರಾಡ್ವಪುಃ** ಇಂದ್ರನಲ್ಲಿದ್ದು, ರಾಜರಲ್ಲಿದ್ದು ಪೃಥು ಮೊದಲಾದ ರೂಪಗಳಿಂದ **ದಸ್ಯೂನ್** ಲೋಕಕಂಟಕರಾದ ಕಳ್ಳರನ್ನು, ಅಸುರರನ್ನು **ಹಂತಿ** ಕೊಲ್ಲುವನು **ಕಾಲರೂಪೇಣ** ಕಲ್ಕಿ ಮುಂತಾದ ಕಾಲಾಂತರ್ಗತವಾದ ರೂಪದಿಂದ, ಸರ್ವಸಂಹಾರಕವಾದ ನರಸಿಂಹಾದಿರೂಪಗಳಿಂದ **ಸರ್ವೇಷಾಂ ಅಭವಾಯ** ಎಲ್ಲ ವಸ್ತುಗಳ ನಾಶಕ್ಕಾಗಿ, ಎಲ್ಲ ದುಷ್ಟರ ನಾಶಕ್ಕಾಗಿ **ಪೃಥಗ್ಗುಣಃ** ತಮೋಗುಣಪ್ರವರ್ತಕನಾಗುವನು. ಕಾರ್ಯಾರ್ಥವಾಗಿ ಸತ್ವಾದಿಗುಣಗಳನ್ನು ಸ್ವೀಕರಿಸುವನು. ಅಥವಾ ಅಯಥಾರ್ಥಜ್ಞಾನಜನಕವಾದ ತಮೋಗುಣವನ್ನು ಸ್ವೀಕರಿಸುವನು ಪ್ರವರ್ತಿಸುವನೆಂದು ಅರ್ಥ. ॥೯॥

**ಸ್ತೂಯಮಾನೋ ಜನೈರೇಭಿರ್ಮಾಯಯಾಽನಾಮರೂಪಯಾ ।**
**ವಿಮೋಹಿತಾತ್ಮಭಿರ್ನಾನಾದರ್ಶನೈರ್ನ ಚ ದೃಶ್ಯತೇ ॥೧೦॥**

**ಏಭಿಃ ಜನೈಃ** ಸಾತ್ವಿಕರಾದ ಬ್ರಹ್ಮಾದಿಗಳಿಂದ, ಋಷ್ಯಾದಿಗಳಿಂದ **ಸ್ತೂಯಮಾನಃ** ಸ್ತೋತ್ರ ಮಾಡಿಸಿಕೊಳ್ಳಲ್ಪಟ್ಟವನಾಗಿ **ದೃಶ್ಯತೇ** ಅವರಿಗೆ ಕಾಣಿಸಿಕೊಳ್ಳುವನು **ಅನಾಮರೂಪಯಾ** ಪ್ರಾಕೃತ ನಾಮ-ರೂಪಗಳಿಲ್ಲದ ಅದೃಶ್ಯತ್ವ ಮೊದಲಾದ ಸ್ವಭಾವದಿಂದ ಕೂಡಿದ **ಮಾಯಯಾ** ತನ್ನ ಮೋಹಕಶಕ್ತಿಯಿಂದ ನಾರಾಯಣ್ಯಾದಿ ರೂಪದಿಂದ ಅವ್ಯಕ್ತಶಬ್ದವಾಚ್ಯವಾದ ಚೇತನಪ್ರಕೃತಿಯಿಂದ **ವಿಮೋಹಿತಾತ್ಮಭಿಃ** ವಿವೇಕರಹಿತರಾಗಿ ಮೋಹಿತರಾಗಿ ಮಾಡಲ್ಪಟ್ಟ ಬುದ್ಧಿಯುಳ್ಳ ದೈತ್ಯಜನರಿಂದ **ನಾನಾದರ್ಶನೈಃ** ತಮ್ಮ ಬುದ್ಧಿಗೆ ತೋರಿದಂತೆ ರಚಿಸಿದ ಅದ್ವೈತಾದಿ ದುರ್ಮತಗಳಿಂದ **ಸ್ತೂಯಮಾನಃ** ಸ್ತುತಿಸಲ್ಪಟ್ಟು **ನ ದೃಶ್ಯತೇ** ಸರಿಯಾಗಿ ತಿಳಿಯಲಾರನು. **ಚ** ಜೀವೇಶರು ಭಿನ್ನರೆಂಬ ದ್ವೈತಜ್ಞಾನಿಯಿಂದ ಅಪರೋಕ್ಷ ವಿಷಯನಾಗುವನು. ''ದೃಶ್ಯತೆ ತ್ವಗ್ರ್ಯಯಾ ಬುದ್ಧ್ಯಾ'' ''ಪ್ರೋಕ್ತಾಽನ್ಯೇನ್ಯೆವ ಸುಜ್ಞಾನಾಯ ಪ್ರೇಷ್ಠ'' ಮುಂತಾದ ಶ್ರುತಿಗಳೂ ಈ ವಿಷಯದಲ್ಲಿ ಪ್ರಮಾಣವಾಗಿವೆ.

ಅವತರಣಿಕಾ ಃ- ಇಲ್ಲಿಗೆ ಮನ್ವಂತರ ವಿಚಾರವನ್ನು ಮುಗಿಸುತ್ತಾರೆ-

**ಏತತ್ಕಲ್ಪವಿಕಲ್ಪಸ್ಯ ಪ್ರಮಾಣಂ ಪರಿಕೀರ್ತಿತಮ್ ।**
**ಯತ್ರ ಮನ್ವಂತರಾಣ್ಯಾಹುಶ್ಚತುರ್ದಶ ಪುರಾವಿದಃ ॥೧೧॥**

**॥ ಇತಿ ಶ್ರೀಮದ್ಭಾಗವತೇ ಅಷ್ಟಮಸ್ಕಂಧೇ ತ್ರಯೋದಶೋಽಧ್ಯಾಯಃ ॥**

**ಪುರಾವಿದಃ** ಹಿಂದೆ ಹೀಗಿತ್ತೆಂದು ತಿಳಿದ ಜ್ಞಾನಿಗಳು **ಯತ್ರ** ಯಾವ ಬ್ರಹ್ಮದೇವರ ದಿನಕಲ್ಪದಲ್ಲಿ **ಚತುರ್ದಶ ಮನ್ವಂತರಾಣಿ ಆಹುಃ** ಹದಿನಾಲ್ಕು ಮನ್ವಂತರಗಳನ್ನು ಹೇಳಿರುವರೋ **ಕಲ್ಪವಿಕಲ್ಪಸ್ಯ** ಆ ದಿನಕಲ್ಪವೆಂಬ ಕಲ್ಪವಿಶೇಷದ (ಬ್ರಹ್ಮದೇವರ ಪರವೆಂಬ ನೂರು ವರ್ಷಕ್ಕೂ ಕಲ್ಪವೆಂದು ಹೆಸರು. ಆದ್ದರಿಂದ ಹೀಗೆ ಹೇಳಿದ್ದು) **ಏತತ್** ಶಾಸ್ತ್ರಸಿದ್ಧವಾದ ಮಹಾಯುಗಸಹಸ್ರವೆಂಬ **ಪ್ರಮಾಣಂ** ಪರಿಮಿತಿಯು **ಪರಿಕೀರ್ತಿತಂ** ಶಾಸ್ತ್ರಗಳಲ್ಲಿ ಉಕ್ತವಾಗಿದೆ. ನನ್ನಿಂದ ನಿನಗೆ ಹೇಳಲ್ಪಟ್ಟಿದೆ. ಇನ್ನು ಯಾವುದರಲ್ಲಿ ಅವಾಂತರಮನ್ವಂತರಗಳನ್ನು ಹೇಳಿರುವರೋ ಆ ವಿಕಲ್ಪದ ಪ್ರಮಾಣವು ಎಪ್ಪತ್ತೊಂದು ಮಹಾಯುಗವೆಂದು ಶಾಸ್ತ್ರಾಂತರದಲ್ಲಿ (ಬೇರೆ ಪುರಾಣ) ಹೇಳಿದೆ. ।।೧೧।।

**ಇಲ್ಲಿಗೆ ಹದಿಮೂರನೇ ಅಧ್ಯಾಯವು ಮುಗಿಯಿತು.**

★★★



# ಅಥ ಚತುರ್ದಶೋಽಧ್ಯಾಯಃ

ಈ ಅಧ್ಯಾಯದಲ್ಲಿಯೂ ಬಲಿಬಂಧನ ಮೊದಲಾದ ಶ್ರೀಹರಿಯ ಮಹಿಮೆಯನ್ನೇ ಹೇಳುತ್ತಾರೆ. ಮೊದಲಿಗೆ ಪರೀಕ್ಷಿದ್ರಾಜರು ೧೨ನೇ ಅಧ್ಯಾಯದ ೧೩ನೇ ಶ್ಲೋಕದಲ್ಲಿ ಸಾವರ್ಣಿಮನ್ವಂತರವನ್ನು ಹೇಳುವಾಗ ''ದತ್ವೇಮಾಂ ಯಾಚಮಾನಾಯ'' ಎಂದು ಬಲಿಯನ್ನು ಕುರಿತು ವಾಮನನು ಯಾಚನೆ ಮಾಡಿದನು ಎಂದು ಹೇಳಿದೆ. ಮತ್ತು ''ಯೋಽಸೌ ಭಗವತಾ ಬದ್ಧಃ'' ಎಂದು ವಾಮನನಿಂದ ಬಲಿಬಂಧನವೂ ಉಕ್ತವಾಗಿದೆ. ಈ ಯಾಚನೆ ಮತ್ತು ಬಂಧನಗಳ ನಿಮಿತ್ತವನ್ನು ವಿಸ್ತಾರವಾಗಿ ಕೇಳಬಯಸಿ ಪರೀಕ್ಷಿತರಾಜರು ಪ್ರಶ್ನಿಸುತ್ತಾರೆ-

**ರಾಜೋವಾಚ**

**ಬಲೇಃ ಪಾದತ್ರಯಂ ಭೂಮೇಃ ಕಸ್ಮಾದ್ಧರಿರಯಾಚತ ।**
**ಭೂತ್ವೇಶ್ವರಃ ಕೃಪಣವಲ್ಲಬ್ಧಾರ್ಥೋಽಪಿ ಬಬಂಧ ತಮ್ ॥೧॥**

**ಹರಿಃ** ಶ್ರೀಮನ್ನಾರಾಯಣನು **ಈಶ್ವರಃ ಭೂತ್ವಾ** ಸ್ವಯಂ ಶ್ರೀಪತಿಯಾಗಿದ್ದರೂ **ಕೃಪಣವತ್** ದರಿದ್ರನಂತೆ **ಬಲೇಃ** ಬಲಿಚಕ್ರವರ್ತಿಯಿಂದ **ಭೂಮೇಃ** ಭೂಮಿಯ **ಪಾದತ್ರಯಂ** ತನ್ನ ಮೂರು ಹೆಜ್ಜೆಯಷ್ಟನ್ನು **ಕಸ್ಮಾತ್** ಯಾವ ಕಾರಣ **ಅಯಾಚತ** ಬೇಡಿದನು. **ಲಬ್ಧಾರ್ಥಃ ಅಪಿ** ತನಗಿಷ್ಟವಾದ ತ್ರೈಲೋಕ್ಯವು ದೊರೆತ ಮೇಲೂ **ತಂ** ಬಲಿಯನ್ನು **ಕಸ್ಮಾತ್ ಬಬಂಧ** ಏಕೆ ಬಂಧನ ಮಾಡಿಸಿದನು? ॥೧॥

**ಏತದ್ ವೇದಿತುಮಿಚ್ಛಾಮೋ ಮಹತ್ ಕೌತೂಹಲಂ ಹಿ ನಃ ।**
**ಯಾಂಚೇಶ್ವರಸ್ಯ ಪೂರ್ಣಸ್ಯ ಬಂಧನಂ ವಾಪ್ಯನಾಗಸಃ ॥೨॥**

**ಪೂರ್ಣಸ್ಯ** ಯಾವಾಗಲೂ ಸರ್ವಗುಣಪೂರ್ಣನಾದ, ಸರ್ವಾಭೀಷ್ಟಪೂರ್ಣನಾದ **ಈಶ್ವರಸ್ಯ** ಸರ್ವಜೀವನಿಯಾಮಕನಾದ ಶ್ರೀಹರಿಯ **ಯಾಂಚಾ** ಯಾಚನೆಯು **ವಾ** ಮತ್ತು **ಅನಾಗಸಃ** ಪ್ರತಿಜ್ಞೆ ಮಾಡಿದ್ದನ್ನು ಕೊಟ್ಟು ನಿರಪರಾಧಿಯಾದ ಬಲಿಯ **ಬಂಧನಂ** ನಿಗ್ರಹವು

**ಯತ್** ಎನಿದೆಯೋ **ಏತತ್** ಇದನ್ನು **ವೇದಿತುಂ** ಸಕಾರಣವಾಗಿ ತಿಳಿಯಲು **ಇಚ್ಛಾಮಃ** ಇಚ್ಛಿಸುವೆವು. **ಹಿ** ಏಕೆಂದರೆ **ನಃ** ನಮಗೆ **ಮಹತ್ ಕೌತೂಹಲಂ** ಬಹಳ ಉತ್ಸುಕತೆ ಇದೆ. ''ಆಗೋಽಪರಾಧೋ ಮಂತುಶ್ಚ'' ಎಂದು ಅಮರಕೋಶವಿದೆ. ।।೨।।

**ಶ್ರೀಶುಕ ಉವಾಚ**

**ಪರಾಜಿತಶ್ರೀರಸುಭಿಶ್ಚ ಹಾಪಿತೋ**
**ಇಂದ್ರೇಣ ರಾಜನ್ ಗುರುಭಿಃ ಸ ಜೀವಿತಃ ।**
**ಸರ್ವಾತ್ಮನಾ ತಾನಭಜದ್ ಭೃಗೂನ್ ಬಲಿಃ**
**ಶಿಷ್ಯೋ ಮಹಾನ್ ಸ್ವಾರ್ಥನಿವೇದನೇನ ।।೩।।**

**ಹೇ ರಾಜನ್** ಪರೀಕ್ಷಿತನೇ **ಇಂದ್ರೇಣ** ಇಂದ್ರನಿಂದ **ಪರಾಜಿತಶ್ರೀಃ** ಗೆಲ್ಲಲ್ಪಟ್ಟ ಸಂಪತ್ತುಳ್ಳ **ಅಸುಭಿಃ** ಪ್ರಾಣಗಳಿಂದ **ಹಾಪಿತಃ** ಬಿಡಿಸಲ್ಪಟ್ಟ ಮೃತನಾದ ಎಂದು ಅರ್ಥ **ಸಃ ಬಲಿಃ** ಆ ಬಲಿಚಕ್ರವರ್ತಿಯು **ಭೃಗುಭಿಃ** ಶುಕ್ರಾಚಾರ್ಯರಿಂದ **ಜೀವಿತಃ** ಮತ್ತೆ ಬದುಕಿಸಲ್ಪಟ್ಟನು. **ಮಹಾನ್ ಶಿಷ್ಯಃ** ಶುಕ್ರಾಚಾರ್ಯರ ಪ್ರೀತಿಪಾತ್ರನಾದ ಬಲಿಚಕ್ರವರ್ತಿಯು **ತಾನ್** ಗುರುಗಳಾದ ತನ್ನನ್ನು ಬದುಕಿಸಿದ **ಭೃಗೂನ್** ಆ ಶುಕ್ರಾಚಾರ್ಯರನ್ನು **ಸರ್ವಾತ್ಮನಾ** ಎಲ್ಲ ರೀತಿಯಿಂದಲೂ **ಸ್ವಾರ್ಥನಿವೇದನೇನ** ತನ್ನ ಸರ್ವಸ್ವವನ್ನು ಸಮರ್ಪಿಸುವುದರಿಂದ **ಅಭಜತ್** ಸೇವಿಸಿದನು. ।।೩।।

ಈ ಶ್ಲೋಕದಿಂದ ಪ್ರಾರಂಭಿಸಿ ಅಧ್ಯಾಯ ಮುಗಿಯುವವರೆಗೆ, ಬ್ರಾಹ್ಮಣರ ಆರಾಧನೆಯ ಬಲದಿಂದ ಬಲಿಯು ಸ್ವರ್ಗವನ್ನು ಗೆದ್ದಿರುವ ರೀತಿಯನ್ನು ತಿಳಿಸುತ್ತಾರೆ.

**ತಂ ಬ್ರಾಹ್ಮಣಾ ಭೃಗವಃ ಪ್ರೀಯಮಾಣಾ**
**ಅಯಾಜಯನ್ ವಿಶ್ವಜಿತಾ ತ್ರಿಲೋಕಮ್ ।**
**ಜಿಗೀಷಮಾಣಂ ವಿಧಿನಾಽಭಿಷಿಚ್ಯ**
**ಮಹಾಭಿಷೇಕೇಣ ಮಹಾನುಭಾವಾಃ ।।೪।।**

**ಪ್ರೀಯಮಾಣಾಃ** ಬಲಿಯು ಮಾಡಿದ ಸರ್ವಸಮರ್ಪಣದಿಂದ ಬಲಿಯ ವಿಷಯದಲ್ಲಿ ಪ್ರೀತರಾದ **ಮಹಾನುಭಾವಾಃ** ಮಹಾಸಮರ್ಥರಾದ ಅಭೀಷ್ಟಸಾಧಕವಾದ ಮಂತ್ರಸಾಮರ್ಥ್ಯ ಉಳ್ಳ ಅಥವಾ ನಿಶ್ಚಿತವಾದ, ಸತ್ಯವಾದ ಅಭಿಪ್ರಾಯ ಉಳ್ಳ **ಬ್ರಾಹ್ಮಣಾಃ** ಬ್ರಹ್ಮ ಅಣಂತಿ ಇತಿ ಬ್ರಾಹ್ಮಣಾಃ ವೇದಗಳನ್ನು ಮತ್ತು ಭಗವಂತನನ್ನು ತಿಳಿದಿರುವ ಬ್ರಹ್ಮಜ್ಞಾನಿಗಳಾದ **ಭೃಗವಃ** ಶುಕ್ರಾಚಾರ್ಯರು **ತ್ರಿಲೋಕಂ** ಮೂರು ಲೋಕಗಳನ್ನು **ಜಿಗೀಷಮಾಣಂ** ಗೆಲ್ಲಲು ಇಚ್ಛಿಸಿದ **ತಂ** ಆ ಬಲಿಚಕ್ರವರ್ತಿಯನ್ನು **ಮಹಾಭಿಷೇಕೇಣ** ಅಭಿಷಿಚ್ಯತೇ ಅನೇನ ಇತ್ಯಭಿಷೇಕಃ ತೇನ ಮಂತ್ರಪೂತವಾದ ಅಭಿಷೇಕಸಾಧನಗಳಿಂದ

**ವಿಧಿನಾ** ಶಾಸ್ತ್ರದಲ್ಲಿ ಹೇಳಿದ ರೀತಿಯಿಂದ **ಅಭಿಷಿಚ್ಯ** ಅಭಿಷೇಕಮಾಡಿದವರಾಗಿ **ವಿಶ್ವಜಿತಾ** ಸರ್ವಸ್ವದಕ್ಷಿಣಾಕವಾದ (ಎಲ್ಲವನ್ನು ದಕ್ಷಿಣೆಯಾಗಿ ಕೊಡುವ) ವಿಶ್ವಜಿತ್ ಎಂಬ ಹೆಸರಿನ ಯಾಗದಿಂದ **ಅಯಾಜಯನ್** ಯಜ್ಞ ಮಾಡಿಸಿದರು. ದೇವರ ಪೂಜೆ ಮಾಡುವಂತೆ ಮಾಡಿದರು. ''ಅನುಭಾವಃ ಪ್ರಭಾವೇ ಸ್ಯಾನ್ನಿಶ್ಚಯೇ ಭಾವಸೂಚನೇ'' ಎಂದು ವಿಶ್ವವಿದೆ.

**ತತೋ ರಥಃ ಕಾಂಚನಪಟ್ಟಬದ್ಧೋ**
**ಹಯಾಶ್ಚ ಹರ್ಯಶ್ವತುರಂಗವರ್ಣಾಃ ।**
**ಧ್ವಜಶ್ಚ ಸಿಂಹೇನ ವಿರಾಜಮಾನೋ**
**ಹುತಾಶನಾದಾಸ ಹವಿರ್ಭಿರಿದ್ಧಾತ್ ॥೫॥**

**ತತಃ ಚ** ವಿಶ್ವಜಿದ್‌ಯಾಗ ಮಾಡಿದ ನಂತರ **ಹವಿರ್ಭಿಃ** ಶುಕ್ರಾದಿಗಳಿಂದ ಕೊಡಲ್ಪಟ್ಟ ಹವಿಸ್ಸಿನಿಂದ **ಇದ್ಧಾತ್** ಪ್ರಜ್ವಲಿಸುವ ಅಭಿವೃದ್ಧವಾದ **ಹುತಾಶನಾತ್** ಯಜ್ಞದ ಅಗ್ನಿಯಿಂದ **ಕಾಂಚನಪಟ್ಟಬದ್ಧಃ** ಬಂಗಾರದ ಒಳಗಿನ ಪೀಠಾದಿಗಳಿಂದ ಸಂಬದ್ಧವಾದ (ರಥಿಕನು ಕೂಡುವ ಪೀಠ) **ರಥಃ** ರಥವೂ **ಹರ್ಯಶ್ವತುರಂಗವರ್ಣಾಃ ಹಯಾಃ ಚ** ಇಂದ್ರನ ಕುದುರೆಗಳಂತೆ ಬಿಳಿಯಾದ ಬಣ್ಣವುಳ್ಳ ಕುದುರೆಗಳು **ಸಿಂಹೇನ ವಿರಾಜಮಾನಃ ಚ** ಸಿಂಹದಿಂದ ಶೋಭಿಸುವ **ಧ್ವಜಃ** ಧ್ವಜವೂ **ಆಸ** ವ್ಯಕ್ತವಾದವು ಹೊರಬಂದವು. ''ಪಟ್ಟೋ ರಾಜಶಾಸನಾಂತರಪೀಠಯೋಃ'' ಎಂದು ವಿಶ್ವವಿದೆ. ॥೫॥

**ಧನುಶ್ಚ ದಿವ್ಯಂ ಪುರಟೋಪನದ್ಧಂ**
**ತೂಣಾವರಿಕ್ತೌ ಕವಚಂ ಚ ದಿವ್ಯಮ್ ।**
**ಪಿತಾಮಹಸ್ತಸ್ಯ ದದೌ ಚ ಮಾಲಾ-**
**ಮಮ್ಲಾನಪುಷ್ಪಾಂ ಜಲಜಂ ಚ ಶುಕ್ರಃ ॥೬॥**

**ಚ** ಮತ್ತು **ಪುರಟೋಪನದ್ಧಂ** ಬಂಗಾರದ ಕಟ್ಟು ಹಾಕಿದ **ದಿವ್ಯಂ** ಅಲೌಕಿಕವಾದ **ಧನುಃ** ಬಿಲ್ಲು **ಅರಿಕ್ತೌ** ಯಾವಾಗಲೂ ಬಾಣಗಳಿಂದ ತುಂಬಿಯೇ ಇರುವ **ತೂಣೌ** ಎರಡು ಬತ್ತಳಿಕೆಗಳು **ದಿವ್ಯಂ** ಶ್ರೇಷ್ಠವಾದ **ಕವಚಂ ಚ** ಕವಚವೂ **ಹುತಾಶನಾತ್ ಆಸ** ಅಗ್ನಿಯಿಂದ ಹೊರ ಬಂದವು. **ಪಿತಾಮಹಃ** ಅಜ್ಜಂದಿರಾದ ಪ್ರಹ್ಲಾದರಾಜರು **ಅಮ್ಲಾನಪುಷ್ಪಾಂ** ಒಣಗದ ಹೂಗಳುಳ್ಳ **ಮಾಲಾಂ** ಹಾರವನ್ನು **ದದೌ** ಕೊಟ್ಟರು. **ಶುಕ್ರಃ** ಶುಕ್ರಾಚಾರ್ಯರು **ಜಲಜಂ** ಶಂಖವನ್ನು **ದದೌ** ಕೊಟ್ಟರು. ॥೬॥

ಲಿಂಗೇರೀ :- ಪಿತಾಮಹಃ ಚತುರ್ಮುಖಃ ಬ್ರಹ್ಮದೇವರು ಎಂದು ಲಿಂಗೇರೀ ಆಚಾರ್ಯರು ವ್ಯಾಖ್ಯಾನಿಸಿದ್ದಾರೆ.

**ಏವಂ ಸ ವಿಪ್ರಾರ್ಜಿತಯೋಧನಾರ್ಥಃ ತೈಃ ಕಲ್ಪಿತಸ್ವಸ್ತ್ಯಯನೋಽಥ ವಿಪ್ರಾನ್ ।**
**ಪ್ರದಕ್ಷಣೀಕೃತ್ಯ ಕೃತಪ್ರಣಾಮಃ ಪ್ರಹ್ಲಾದಮಾಮಂತ್ರ್ಯ ನಮಶ್ಚಕಾರ ॥೭॥**

**ಏವಂ** ಮೇಲೆ ಹೇಳಿದಂತೆ **ವಿಪ್ರಾರ್ಜಿತಯೋಧನಾರ್ಥಃ** ಶುಕ್ರಾಚಾರ್ಯರೇ ಮೊದಲಾದ ಬ್ರಾಹ್ಮಣರಿಂದ ಯಜ್ಞದ ಮೂಲಕ ಸಂಪಾದಿಸಿಕೊಳ್ಳಲ್ಪಟ್ಟ ಯುದ್ಧಸಾಧನಗಳುಳ್ಳ **ತೈಃ** ಆ ಬ್ರಾಹ್ಮಣರಿಂದ **ಕೃತಸ್ವಸ್ತ್ಯಯನಃ** ಮಂಗಳಕರಗಳಾದ ಪುಣ್ಯಾಹ ಮೊದಲಾದ ಕಾರ್ಯಗಳುಳ್ಳ **ಸಃ** ಬಲಿಚಕ್ರವರ್ತಿಯು **ಅಥ** ಅನಂತರ **ವಿಪ್ರಾನ್** ಪುರೋಹಿತರಾದ ಶುಕ್ರಾಚಾರ್ಯರೇ ಮೊದಲಾದ ಬ್ರಾಹ್ಮಣರನ್ನು **ಪ್ರದಕ್ಷಣೀಕೃತ್ಯ ಚ** ಪ್ರದಕ್ಷಿಣೆ ಮಾಡಿ **ಕೃತಪ್ರಣಾಮಃ** ನಮಸ್ಕಾರ ಮಾಡಿದವನಾಗಿ **ಪ್ರಹ್ಲಾದಂ** ತಾತಂದಿರಾದ ಪ್ರಹ್ಲಾದರಾಜರನ್ನು **ಆಮಂತ್ರ್ಯ** ನಾನು ತ್ರಿಲೋಕವಿಜಯಕ್ಕೆ ಹೋಗುತ್ತಿದ್ದೇನೆ ಅನುಗ್ರಹಿಸಬೇಕೆಂದು ಪ್ರಾರ್ಥಿಸಿ **ನಮಃ ಚಕಾರ** ನಮಸ್ಕಾರ ಮಾಡಿದನು. ॥೭॥

**ಅಥಾರುಹ್ಯ ರಥಂ ದಿವ್ಯಂ ಭೃಗುದತ್ತಂ ಮಹಾರಥಃ ।**
**ಸುಸ್ರಗ್ಧರೋಽಥ ಸನ್ನದ್ಧೋ ಧನ್ವೀ ಖಡ್ಗೀ ಧೃತೇಷುಧಿಃ ॥೮॥**

**ಹೇಮಾಂಗದಲಸದ್ಬಾಹುಃ ಸ್ಫುರನ್ಮಕರಕುಂಡಲಃ ।**
**ರರಾಜ ರಥಮಾರೂಢೋ ಧಿಷ್ಣ್ಯಸ್ಥ ಇವ ಹವ್ಯವಾಟ್ ॥೯॥**

**ಅಥ** ಅನಂತರ **ಮಹಾರಥಃ ಚ** ಮಹಾರಥಿಕನಾದ ಬಲಿಚಕ್ರವರ್ತಿಯು **ಭೃಗುದತ್ತಂ** ಶುಕ್ರಾಚಾರ್ಯರು ಯಜ್ಞದ ಮೂಲಕ ಕೊಟ್ಟಿರುವ **ದಿವ್ಯಂ** ದಿವ್ಯವಾದ **ರಥಂ** ರಥವನ್ನು **ಆರುಹ್ಯ** ಹತ್ತಿ **ಸುಸ್ರಗ್ಧರಃ** ಪ್ರಹ್ಲಾದರಾಜರಿತ್ತ ಬಾಡದ ಮಾಲೆಯನ್ನು ಧರಿಸಿ **ಅಥ** ಮತ್ತು **ಖಡ್ಗೀ** ಕತ್ತಿಯನ್ನು ಧರಿಸಿ **ಧನ್ವೀ** ಧನುಸ್ಸನ್ನು ಹಿಡಿದುಕೊಂಡು **ಹೇಮಾಂಗದಲಸದ್ಬಾಹುಃ** ಬಂಗಾರದ ಭುಜಾಭರಣಗಳಿಂದ ಪ್ರಕಾಶಮಾನವಾದ ತೋಳುಗಳುಳ್ಳವನಾಗಿ **ಸ್ಫುರನ್ಮಕರಕುಂಡಲಃ** ಹೊಳೆಯುತ್ತಿರುವ ಕಿವಿಯ ಆಭರಣ ಉಳ್ಳವನಾಗಿ **ರಥಂ ಆರೂಢಃ** ರಥವನ್ನೇರಿದವನಾಗಿ **ಧಿಷ್ಣ್ಯಸ್ಥಃ** ತನ್ನ ಸ್ಥಳದಲ್ಲಿರುವ **ಹವ್ಯವಾಟ್** ಇವ ಅಗ್ನಿಯಂತೆ ರರಾಜ ಶೋಭಿಸಿದನು. ॥೮, ೯॥

**ತುಲ್ಯೈಶ್ವರ್ಯವಯಃಶ್ರೀಭಿಃ ಸ್ವಯೂಥೈರ್ದೈತ್ಯಯೂಥಪೈಃ ।**
**ಪಿಬದ್ಭಿರಿವ ಖಂ ದೃಗ್ಭಿರ್ದಹದ್ಭಿಃ ಪರಿಧೀನಿವ ॥೧೦॥**

**ವೃತೋ ವಿಕರ್ಷನ್ ಮಹತೀಮಾಸುರೀಂ ಧ್ವಜಿನೀಂ ವಿಭುಃ ।**
**ಯಯಾವಿಂದ್ರಪುರೀಮೃದ್ಧಾಂ ಕಂಪಯನ್ನಿವ ರೋದಸೀ ॥೧೧॥**

**ಸಃ** ಯುದ್ಧಸನ್ನದ್ಧನಾದ ಬಲಿಚಕ್ರವರ್ತಿಯು **ತುಲ್ಯೈಶ್ವರ್ಯವಯಃಶ್ರೀಭಿಃ** ಸಮಾನವಾದ ಐಶ್ವರ್ಯ, ವಯಸ್ಸು ಸಂಪತ್ತುಗಳುಳ್ಳ **ಸ್ವಯೂಥೈಃ** ತಮ್ಮ ತಮ್ಮ ಸೈನ್ಯಗಳಿಂದ

ಸಹಿತರಾದ **ದೃಗ್ಭಿಃ** ಕಣ್ಣುಗಳಿಂದ **ಖಂ** ಆಕಾಶವನ್ನು **ಪಿಬದ್ಭಿಃ ಇವ** ಕುಡಿದು ಬಿಡುವವರಂತೆ ಇರುವ **ಪರಿಧೀನ್ ಇವ** ಜ್ವಲಿಸುವ ಅಗ್ನಿಯು ಸುತ್ತಲೂ ಇಟ್ಟಿರುವ ದರ್ಭೆಗಳನ್ನು, ಅಥವಾ ಯಜ್ಞಸಂಬಂಧಿಯಾದ ಗಿಡಗಳನ್ನು, ಗಿಡದ ಟೊಂಗೆಗಳನ್ನು, ಅಥವಾ ಸಮಿತ್ತುಗಳನ್ನು ಸುಡುವಂತೆ **ಲೋಕಾನ್** ಲೋಕಗಳನ್ನು **ದಹದ್ಭಿಃ** ಸುಡುವಂತೆ ಇರುವ **ದೈತ್ಯಯೂಥಪೈಃ** ದೈತ್ಯಸೇನಾನಾಯಕರಿಂದ **ವೃತಃ** ಸುತ್ತುವರೆದವನಾಗಿ **ಮಹತೀಂ** ಸಂಖ್ಯೆಯಿಂದ ದೊಡ್ಡದಾಗಿರುವ **ಆಸುರೀಂ** ಅಸುರರ **ಧ್ವಜಿನೀಂ** ಸೇನೆಯನ್ನು **ವಿಕರ್ಷಯನ್** ಜೊತೆಗೆ ಕರೆದುಕೊಂಡು **ವಿಭುಃ** ಆ ಸೇನೆಯನ್ನು ನಿಯಮಿಸಲು ಸಮರ್ಥನಾದ ಬಲಿಯು **ರೋದಸೀ** ಭೂಮಿ-ಆಕಾಶಗಳನ್ನು **ಕಂಪಯನ್ ಇವ** ನಡುಗಿಸುವಂತೆ **ಋದ್ಧಾಂ** ಸಮಸ್ತವಾದ ಸಂಪತ್ತಿನಿಂದ ಸಮೃದ್ಧವಾದ **ಇಂದ್ರಪುರೀಂ** ಅಮರಾವತಿಯನ್ನು ಕುರಿತು **ಯಯೌ** ಹೋದನು. ''ಪರಿಧಿರ್ಯಜ್ಞತರೌ ಶಾಖಾಯಾಂ ಚ'' ಎಂದು ವಿಶ್ವವಿದೆ. ''ದ್ಯಾವಾಭೂಮೀ ತು ರೋದಸೀ'' ಎಂದು ಅಮರವಿದೆ. ।।೧೦-೧೧।।

ಅವತರಣಿಕಾ ಃ- ಇಂದ್ರಪುರದ ಸಮೃದ್ಧಿಯನ್ನು ಮುಂದಿನ ಶ್ಲೋಕಗಳಿಂದ ಹೇಳುವರು-

**ರಮ್ಯಾಮುಪವನೋದ್ಯಾನೈಃ ಶ್ರೀಮದ್ಭಿರ್ನಂದನಾದಿಭಿಃ ।**
**ಕೂಜದ್ವಿಹಂಗಮಿಥುನೈರ್ಗಾಯನ್ಮತ್ತಮಧುವ್ರತೈಃ ।**
**ಪ್ರವಾಲಫಲಪುಷ್ಪೋರುಭಾರಶಾಖಾಮರದ್ರುಮೈಃ ।।೧೨।।**

**ಕೂಜತ್** ತಮ್ಮ ತಮ್ಮ ಜಾತಿಗೆ ತಕ್ಕಂತೆ ಶಬ್ದ ಮಾಡುವ **ವಿಹಂಗಮಿಥುನೈಃ** ಹೆಣ್ಣು-ಗಂಡು ಹಕ್ಕಿಗಳಿಂದ ಕೂಡಿದ **ಗಾಯನ್ಮತ್ತಮಧುವ್ರತೈಃ** ಝೇಂಕರಿಸುತ್ತಿರುವ ಪುಷ್ಪರಸಪಾನದಿಂದ ಮದವೇರಿದ ದುಂಬಿಗಳಿಂದ ಕೂಡಿದ **ಪ್ರವಾಲ** ಚಿಗುರು **ಫಲ** ಹಣ್ಣು **ಪುಷ್ಪ** ಹೂ ಇವುಗಳ **ಉರುಭಾರ** ಅತಿಶಯವಾದ ಭಾರವುಳ್ಳ **ಶಾಖಾ** ಟೊಂಗೆಗಳುಳ್ಳ **ಅಮರದ್ರುಮೈಃ** ಪಾರಿಜಾತ ಮೊದಲಾದ ದೇವವೃಕ್ಷಗಳುಳ್ಳ **ಶ್ರೀಮದ್ಭಿಃ** ಸಂಪದ್ಯುಕ್ತವಾದ **ನಂದನಾದಿಭಿಃ** ನಂದನ ಮೊದಲಾದ **ಉಪವನೋದ್ಯಾನೈಃ** ನಗರದ ಸಮೀಪದ ಒಳ ಮತ್ತು ಹೊರ ಉದ್ಯಾನವನಗಳಿಂದ **ರಮ್ಯಾಂ** ಮನೋಹರವಾದ **ಇಂದ್ರಪುರೀಂ ಯಯೌ** ಎಂದು ಅನ್ವಯ. ''ಮಧುವ್ರತೋ ಮಧುಕರೋ ಮಧುಲಿಣ್ಮಧುಪಾಲಿನಃ'' ಎಂದು ಅಮರವಿದೆ.

ಭಲಾರೀ ಃ- ಉಪವನ ಎಂದರೆ ಫಲಪ್ರಧಾನವಾದ ಭೂಮಿ. ಇದು ಊರಿಗೆ ಸಮೀಪದಲ್ಲಿಯೇ ಇರುತ್ತದೆ. ಉದ್ಯಾನವೆಂದರೆ ಪುಷ್ಪಪ್ರಧಾನವಾದ ಭೂಮಿ. ಇದು ಊರಿಗೆ ದೂರವಿರುತ್ತದೆ. ।।೧೨।।

**ಹಂಸಸಾರಸಚಕ್ರಾಹ್ವಕಾರಂಡವಕುಲಾಕುಲಾಮ್ ।**
**ನಲಿನ್ಯೋ ಯತ್ರ ಕ್ರೀಡಂತಿ ಪ್ರಮದಾಃ ಸುರಸೇವಿತಾಃ ।।೧೩।।**

**ಯತ್ರ** ಯಾವ ಇಂದ್ರನಗರಿಯಲ್ಲಿ ಉದ್ಯಾನವನಗಳಲ್ಲಿ **ಹಂಸಸಾರಸ-ಚಕ್ರಾಹ್ವಕಾರಂಡವಕುಲಾಕುಲಂ** ಹಂಸ, ಸಾರಸ, ಚಕ್ರವಾಕ, ಕಾರಂಡವ (ಬಕ) ಈ ಹಕ್ಕಿಗಳ **ಕುಲ** ಸಮೂಹಗಳಿಂದ **ಆಕುಲಾಂ** ತುಂಬಿದ **ನಲಿನ್ಯಃ ಚ** ಕಮಲಗಳಿಂದ ಕೂಡಿದ ಸರೋವರಗಳು **(ಸಂತಿ)** ಇವೆಯೋ **ಯತ್ರ** ಯಾವ ಸರೋವರಗಳಲ್ಲಿ **ಸುರಸೇವಿತಾಃ** ದೇವತೆಗಳಿಂದ ಆದೃತರಾದ **ಪ್ರಮದಾಃ** ದೇವಸ್ತ್ರೀಯರು **ಕ್ರೀಡಂತಿ** ಜಲಕ್ರೀಡೆ ಆಡುವರೋ **ತಾಂ ಇಂದ್ರಪುರೀಂ ಯಯೌ** ಎಂದನ್ವಯ. ।।೧೩।।

**ಆಕಾಶಗಂಗಯಾ ದೇವ್ಯಾ ವೃತಾಂ ಪರಿಖಭೂತಯಾ** ।।೧೪।।
**ಪ್ರಾಕಾರೇಣಾಗ್ನಿವರ್ಣೇನ ಸಾಟ್ಟಾಲೇನೋನ್ನತೇನ ಚ ।**
**ರುಗ್ಮಪಟ್ಟಕಪಾಟೈಶ್ಚ ದ್ವಾರೈಃ ಸ್ಫಾಟಿಕಗೋಪುರೈಃ** ।।೧೫।।

**ಜುಷ್ಟಾಂ ವಿಭಕ್ತಪ್ರಪಥಾಂ ವಿಶ್ವಕರ್ಮವಿನಿರ್ಮಿತಾಮ್ ।**
**ಸಭಾಚತ್ವರರಥ್ಯಾಢ್ಯಾಂ ವಿಮಾನೈರ್ನ್ಯರ್ಬುದೈರ್ಯುತಾಮ್** ।।೧೬।।

**ಪರಿಖಭೂತಯಾ** ಕೋಟೆಗೋಡೆಯ ಸುತ್ತಲೂ ಇರುವ ಕಂದುಕವಾಗಿರುವ **ದೇವ್ಯಾ** ದೇವತಾಸೇವ್ಯವಾದ **ಆಕಾಶಗಂಗಯಾ** ಆಕಾಶಗಂಗೆಯಿಂದ **ವೃತಾಂ** ಸುತ್ತುವರಿದ **ಸಾಟ್ಟಾಲೇನ** ಒಳಗಡೆ ಸುತ್ತಲೂ ಸಂಚರಿಸಲು ಅನುಕೂಲವಾದ ಗೋಡೆ ಎಂಬ ಅಟ್ಟದಿಂದ ಕೂಡಿದ **ಉನ್ನತೇನ** ಎತ್ತರವಾದ **ಅಗ್ನಿವರ್ಣೇನ** ಅಗ್ನಿಯಂತೆ ಕೆಂಪಗೆ ಹೊಳೆಯುವ (ಅಗ್ನಿವರ್ಣೇನ ಸೌವರ್ಣೇನ ಎಂದೂ ವ್ಯಾಖ್ಯಾನವಿದೆ). **ಪ್ರಾಕಾರೇಣ ಚ** ಕೋಟೆಗೊಡೆಯಿಂದಲೂ **ವೃತಾಂ** ಸುತ್ತುವರೆದ **ರುಕ್ಮಪಟ್ಟಕಪಾಟೈಃ ಚ** ಬಂಗಾರದ ಕಟ್ಟುಗಳುಳ್ಳ ಬಾಗಿಲುಗಳಿಂದ **ದ್ವಾರೈಃ** ಪ್ರವೇಶದ್ವಾರಗಳಿಂದ **ಚ** ಮತ್ತು **ಸ್ಫಟಿಕಗೋಪುರೈಃ** ಸ್ಫಟಿಕಶಿಲೆಗಳ ಹೊರಹೆಬ್ಬಾಗಿಲುಗಳಿಂದ **ವೃತಾಂ** ಕೂಡಿದ **ಜುಷ್ಟಾಂ** ನಾನಾರೀತಿಯ ಜನರಿಂದ ಸೇವಿತವಾದ **ವಿಭಕ್ತಪ್ರಪಥಾಂ** ವಿಭಾಗಿಸಿದ ಹೆದ್ದಾರಿಗಳುಳ್ಳ **ಸಭಾಚತ್ವರರಥ್ಯಾಢ್ಯಾಂ ಸಭಾ** ಮಂದಿರಗಳು **ಚತ್ವರ** ಅಂಗಳ ಅಥವಾ ನಾಲ್ಕು ರಸ್ತೆಗಳು ಸೇರುವ ಸ್ಥಳ **ರಥ್ಯಾಢ್ಯಾಂ** ರಥಗಳು ಓಡಾಡುವ ವಿಸ್ತಾರವಾದ ಬೀದಿಗಳಿಂದ ಸಂಪನ್ನವಾದ **ನ್ಯರ್ಬುದೈಃ** ನೂರುಕೋಟಿಸಂಖ್ಯಾಕವಾದ (ಅನೇಕವಾದ) **ವಿಮಾನೈಃ ಯುತಾಂ** ವಿಮಾನಗಳಿಂದ ಕೂಡಿದ **ವಿಶ್ವಕರ್ಮವಿನಿರ್ಮಿತಾಂ** ವಿಶ್ವಕರ್ಮನೆಂಬ ದೇವಶಿಲ್ಪಿಯಿಂದ ನಿರ್ಮಿತವಾದ **ಇಂದ್ರಪುರೀಂ ಯಯೌ** ಎಂದನ್ವಯ. ''ಅಂಗಣಂ ಚತ್ವರಾಜಿರೇ'' ಎಂದು ಅಮರ. ''ರಥ್ಯಾ ಪ್ರತೋಲೀ ವಿಶಿಖಾ'' ಎಂದು ಅಮರ. ।।೧೪-೧೫-೧೬।।

**ಶೃಂಗಾಟಕೈರ್ಮಣಿಮಯೈರ್ವಜ್ರವಿದ್ರುಮವೇದಿಭಿಃ ।**
**ಯತ್ರ ನಿತ್ಯವಯೋರೂಪಾ ಶ್ಯಾಮಾ ವಿರಜವಾಸಸಃ ।**
**ಭ್ರಾಜಂತೇ ರೂಪವನ್ನಾರ್ಯ ಅರ್ಚಿರ್ಭಿರಿವ ವಹ್ನಯಃ** ।।೧೭।।

**ಮಣಿಮಯ್ಯೈಃ** ರತ್ನಗಳೇ ಹೆಚ್ಚಾಗಿರುವ **ವಜ್ರವಿದ್ರುಮವೇದಿಭಿಃ** ವಜ್ರ ಮತ್ತು ಹವಳಗಳಿಂದ ಮಾಡಿದ ಜಗುಲಿಗಳುಳ್ಳ (ಕೂಡುವ ಕಟ್ಟೆಗಳು) **ಶೃಂಗಾಟಕೈಃ** ನಾಲ್ಕು ರಸ್ತೆಗಳು ಸೇರುವ ಪ್ರದೇಶದಿಂದ ಯುಕ್ತವಾದ (**ಇಂದ್ರಪುರೀಂ ಯಯೌ**) ಇಂದ್ರಪುರಿಗೆ ಹೋದರು ಎಂದು ಹಿಂದಕ್ಕೆ ಅನ್ವಯ. **ಯತ್ರ** ಯಾವ ಇಂದ್ರಪುರದಲ್ಲಿ **ನಿತ್ಯವಯೋರೂಪಾಃ** ಯಾವಾಗಲೂ ತಾರುಣ್ಯ-ಸೌಂದರ್ಯಗಳಿಂದ ಯುಕ್ತರಾದ **ಶ್ಯಾಮಾಃ** ಹದಿನಾರು ವರ್ಷ ವಯಸ್ಸಿನ (ಶ್ಯಾಮವರ್ಣದ) **ವಿರಜವಾಸಸಃ** ನಿರ್ಮಲವಾದ ವಸ್ತ್ರಗಳುಳ್ಳ **ರೂಪವನ್ನಾರ್ಯಃ** ಸುಂದರಿಯರಾದ ಸ್ತ್ರೀಯರು ಪ್ರಕಾಶಿಸುತ್ತಿರುವರೋ ಆ ಇಂದ್ರಪುರಿಯಲ್ಲಿ ನಿತ್ಯವಯೋರೂಪವಂತರೂ, ಶುಭ್ರವಸ್ತ್ರಧಾರಿಗಳೂ ಆದ ಪುರುಷರು ಮೇಲೆ ಹೇಳಿದ ಸ್ತ್ರೀಯರೊಡನೆ, **ಅರ್ಚಿಭಿಃ** ತಮ್ಮ ಜ್ವಾಲೆಗಳೊಂದಿಗೆ **ವಹ್ನಯಃ ಇವ** ಅಗ್ನಿಗಳಂತೆ **ಭ್ರಾಜಂತೇ** ಪ್ರಕಾಶಿಸುವರೋ ಅಂತಹ ಇಂದ್ರಪುರಿಗೆ ಹೋದರು. ।।೧೭।।

''ಪ್ರವಾಲಂ ವಿದ್ರುಮೋಽಸ್ತ್ರಿಯಾಂ'' ಎಂದು ಅಮರವಿದೆ. ''ಶ್ಯಾಮಾಃ ಷೋಡಶವಾರ್ಷಿಕಾಃ'' ಎಂದು ಅಭಿಧಾನವಿದೆ. ''ಶ್ಯಾಮಃ ಷೋಡಶವರ್ಷಃ ಸ್ಯಾತ್ ಶ್ಯಾಮವರ್ಣೇ ಚ ತದ್ವತಿ'' ಎಂದು ನಾನಾರ್ಥರತ್ನಮಾಲಾಕೋಶವಿದೆ. ।।೧೭।।

**ಸುರಸ್ತ್ರೀಕೇಶವಿಭ್ರಷ್ಟನವಸೌಗಂಧಿಕಸ್ರಜಾಮ್ ।**
**ಯತ್ರಾಮೋದಮುಪಾದಾಯ ಮಾರ್ಗ ಆವಾತಿ ಮಾರುತಃ ।।೧೮।।**

**ಯತ್ರ** ಯಾವ ಅಮರಾವತಿಯಲ್ಲಿ **ಮಾರುತಃ** ಗಾಳಿಯು **ಸುರಸ್ತ್ರೀಕೇಶವಿಭ್ರಷ್ಟ-ನವಸೌಗಂಧಿಕಸ್ರಜಾಂ ಸುರಸ್ತ್ರೀ** ದೇವತಾಸ್ತ್ರೀಯರ **ಕೇಶ** ಕೂದಲುಗಳಿಂದ **ವಿಭ್ರಷ್ಟ** ಕೆಳಗೆ ಬಿದ್ದ **ನವ** ಹೊಸದಾದ **ಸೌಗಂಧಿಕಸ್ರಜಾಂ** ಕಲ್ಹಾರ (ನೀಲ ಸಂಪಿಗೆ) ಹೂಗಳ ಮಾಲೆಗಳ **ಆಮೋದಂ** ಸುವಾಸನೆಯನ್ನು **ಉಪಾದಾಯ** ತೆಗೆದುಕೊಂಡು **ಮಾರ್ಗೇ** ದಾರಿಯಲ್ಲಿ **ಆವಾತಿ** ಪ್ರವಹಿಸುವುದೋ ಅಂಥ ಇಂದ್ರನ ಪಟ್ಟಣಕ್ಕೆ ಹೋದರು ಎಂದು ಅನ್ವಯ. ''ನೂತನಂ ನವಂ'' ''ಸೌಂಗಂಧಿಕಂ ತು ಕಲ್ಹಾರಂ'' ಎಂದು ಅಮರವಿದೆ. ।।೧೮।।

**ಹೇಮಜಾಲಾಕ್ಷನಿರ್ಗಚ್ಛದ್ಧೂಮೇನಾಗರುಗಂಧಿನಾ ।**
**ಪಾಂಡುರೇಣ ಪ್ರತಿಚ್ಛನ್ನಮಾರ್ಗೇ ಯಾಂತಿ ಸುರಸ್ತ್ರಿಯಃ ।।೧೯।।**

**ಯತ್ರ** ಯಾವ ಇಂದ್ರನಗರಿಯಲ್ಲಿ **ಅಗರುಗಂಧಿನಾ** ಕೃಷ್ಣಾಗರುವಾಸನೆಯುಳ್ಳ **ಪಾಂಡುರೇಣ** ಶುಭ್ರವಾದ **ಹೇಮಜಾಲಾಕ್ಷನಿರ್ಗಚ್ಛದ್ಧೂಮೇನ ಹೇಮಜಾಲಾಕ್ಷ** ಬಂಗಾರದ ಗವಾಕ್ಷಿ ಕಿಡಿಕೆಗಳಿಂದ **ನಿರ್ಗಚ್ಛತ್** ಹೊರಬರುತ್ತಿರುವ **ಧೂಮೇನ** ಹೊಗೆಯಿಂದ **ಪ್ರತಿಚ್ಛನ್ನಮಾರ್ಗೇ** ಆವೃತವಾದ ದಾರಿಯಲ್ಲಿ **ಸುರಸ್ತ್ರಿಯಃ** ದೇವತಾಸ್ತ್ರೀಯರು **ಯಾಂತಿ** ಸಂಚರಿಸುವರೋ ಆ ಪಟ್ಟಣಕ್ಕೆ ನಡೆದರು ಎಂದನ್ವಯ. '' ವಂಶಕಾಗುರು

ರಾಜಾರ್ಹಲೋಹಕ್ರಿಮಿಜಜೋಂಗಕಮ್ । ಕಾಲಾಗುರ್ವಗುರು ಸ್ಯಾತ್ತನ್ಮಂಗಲ್ಯಂ ಮಲ್ಲಿಗಂಧಿ ಯತ್ ॥ ಎಂದು ಅಮರ. ॥೧೯॥

**ಮುಕ್ತಾವಿತಾನೈರ್ಮಣಿಹೇಮಕೇತುಭಿಃ**
**ನಾನಾಪತಾಕಾವಲಭೀಭಿರಾವೃತಮ್ ।**
**ಶಿಖಂಡಿಪಾರಾವತಭೃಂಗನಾದಿತಾಂ**
**ವೈಮಾನಿಕಸ್ತ್ರೀಕಲಗೀತಮಂಗಲಾಮ್ ॥೨೦॥**

**ಮುಕ್ತಾವಿತಾನೈಃ** ಮಣಿಗಳ ಹಾರಗಳನ್ನು ಇಳಿ ಬಿಟ್ಟಿರುವ ಮೇಲ್ಹಾವಣಿಯ ಬಟ್ಟೆಗಳಿಂದ **ಮಣಿಹೇಮಕೇತುಭಿಃ** ರತ್ನಗಳ ಬಂಗಾರದ ಧ್ವಜಗಳಿಂದ **ನಾನಾಪತಾಕಾ-ವಲಭೀಭಿಃ** ಅನೇಕ ರೀತಿಯ ಪತಾಕೆಗಳು ಮತ್ತು ಸೂರುಗಳಿಂದ **ಆವೃತಾಂ** ವ್ಯಾಪ್ತವಾದ **ಶಿಖಂಡಿ** ನವಿಲು **ಪಾರಾವತ** ಪಾರಿವಾಳ ಮತ್ತು **ಭೃಂಗ** ದುಂಬಿಗಳಿಂದ **ನಾದಿತಾಂ** ಶಬ್ದಮಾಡಲ್ಪಡುತ್ತಿರುವ **ವೈಮಾನಿಕಸ್ತ್ರೀ** ದೇವತಾಸ್ತ್ರೀಯರ **ಕಲಗೀತ** ಇಂಪಾದ ಗಾನದಿಂದ **ಮಂಗಲಾಂ** ಶುಭಕರವಾದ ಇಂದ್ರನಗರಿಯ ಕಡೆಗೆ ಹೊರಟರು ಎಂದನ್ವಯ. ॥೨೦॥

**ಮೃದಂಗಶಂಖಾನಕದುಂದುಭಿಸ್ವನೈಃ**
**ಸತಾಲವೀಣಾಮುರಜರ್ಷ್ಟಿವೇಣುಭಿಃ ।**
**ನೃತ್ಯೈಃ ಸವಾದ್ಯೈ ರುಪದೇವಗೀತಕೈಃ**
**ಮನೋರಮಾಂ ಸ್ವಪ್ರಭಯಾ ಜಿತಗ್ರಹಾಮ್ ॥೨೧॥**

**ಮೃದಂಗಶಂಖಾನಕದುಂದುಭಿಸ್ವನೈಃ** ಮೃದಂಗ, ಶಂಖ, ಪಣ, ಭೇರಿಗಳ ಶಬ್ದಗಳಿಂದ **ಸತಾಲವೀಣಾಮುರಜರ್ಷ್ಟಿವೇಣುಭಿಃ** ತಾಳದಿಂದ ಸಹಿತವಾದ ವೀಣೆ, ಮುರಜ, ಮದ್ದಳೆ, ಬಾಯಿಯಿಂದ ನುಡಿಸುವ ಕಹಳೆ ವಾದ್ಯ, ಕೊಳಲುಗಳಿಂದ **ಸವಾದ್ಯೈಃ** ವಾದ್ಯಸಹಿತವಾದ **ನೃತ್ಯೈಃ** ನರ್ತನಗಳಿಂದ **ಉಪದೇವಗೀತಕೈಃ** ಗಂಧರ್ವಗಾನದಿಂದ **ಮನೋರಮಾಂ** ಮನಸ್ಸಿಗೆ ಸಂತೋಷ ಕೊಡುವ **ಸ್ವಪ್ರಭಯಾ** ತನ್ನ ಪ್ರಕಾಶದಿಂದ **ಜಿತಗ್ರಹಾಂ** ಸೂರ್ಯಾದಿ ನವಗ್ರಹಗಳ ಪ್ರಕಾಶವನ್ನು ಗೆದ್ದ ಇಂದ್ರಪುರಿಯತ್ತ ಸಾಗಿದರೆಂದು ಅನ್ವಯ. ॥೨೧॥

**ಯಾಂ ನ ವ್ರಜಂತ್ಯಧರ್ಮಿಷ್ಠಾಃ ಖಲಾ ಭೂತದ್ರುಹಃ ಶಠಾಃ ।**
**ಮಾನಿನಃ ಕಾಮಿನೋ ಲುಬ್ಧಾ ಏಭಿರ್ಹೀನಾ ವ್ರಜಂತ್ಯುತ ॥೨೨॥**

**ಯಾಂ** ಯಾವ ಪಟ್ಟಣವನ್ನು **ಖಲಾಃ** ಗೂಢದ್ವೇಷಿಗಳು (ದುರ್ಜನರು) **ಭೂತದ್ರುಹಃ** ಪ್ರಾಣಿಹಿಂಸಕರು **ಶಠಾಃ** ಗರ್ವಿಷ್ಠರು **ಮಾನಿನಃ** ಅಹಂಕಾರಿಗಳು **ಕಾಮಿನಃ** ನಿಷಿದ್ಧವಾದುದನ್ನು ಬಯಸುವ ಕಾಮುಕರು **ಲುಬ್ಧಾಃ** ಸತ್ಪಾತ್ರರಿಗೆ ದಾನ ಮಾಡದ ಲೋಭಿಗಳು ಮುಂತಾದ **ಅಧರ್ಮಿಷ್ಠಾಃ** ಪಾಪಮಾಡುವವರು **ನ ವ್ರಜಂತಿ**

ಹೊಂದುವುದಿಲ್ಲವೋ **ಉತ** ಮತ್ತೇನೆಂದರೆ **ಏಭಿಃ** ಮೇಲೆ ಹೇಳಿದ ಪಾಪ ಕರ್ಮಗಳಿಂದ **ಹೀನಾಃ** ರಹಿತರಾದವರು **ವ್ರಜಂತಿ** ಹೊಂದುವರೋ ಅಂಥ ಇಂದ್ರನಗರಿಯನ್ನು ಕುರಿತು ಹೋದರು ಎಂದು ಅನ್ವಯ. ||೨೨||

**ತಾಂ ದೇವಧಾನೀಂ ಸ ವಿರೋಧಿನೀಪತಿಃ**
**ಬಹಿಃ ಸಮಂತಾದ್ರುರುಧೇ ಪೃತನ್ಯಯಾ ।**
**ಆಚಾರ್ಯದತ್ತಂ ಜಲಜಂ ಮಹಾಸ್ವನಂ**
**ದಧ್ಮೌ ಪ್ರಯುಂಜನ್ ಭಯಮಿಂದ್ರಯೋಷಿತಾಮ್** ||೨೩||

**ತಾಂ** ಆ **ದೇವಧಾನೀಂ** ದೇವತೆಗಳ ಆವಾಸಸ್ಥಾನವಾದ ರಾಜಧಾನಿಯನ್ನು **ವಿರೋಧಿನೀಪತಿಃ** ದೈತ್ಯಸೇನಾಪಾಲಕನಾದ **ಸಃ** ಆ ಬಲಿಯು **ಪೃತನ್ಯಯಾ** ಸೈನ್ಯದಿಂದ **ಬಹಿಃ** ಹೊರಗೆ **ಸಮಂತಾತ್** ಸುತ್ತಲೂ **ರುರುಧೇ** ಮುತ್ತಿದನು. **ಇಂದ್ರಯೋಷಿತಾಂ** ಇಂದ್ರದೇವರ ಹೆಂಡತಿಯರಿಗೆ **ಭಯಂ ಪ್ರಯುಂಜನ್** ಹೆದರಿಕೆಯನ್ನು ಹುಟ್ಟಿಸುವವರಾಗಿ **ಆಚಾರ್ಯದತ್ತಂ** ಶುಕ್ರಾಚಾರ್ಯರು ಕೊಟ್ಟ **ಮಹಾಸ್ವನಂ** ಭಾರೀ ಶಬ್ದವನ್ನು ಮಾಡುವ **ಜಲಜಂ** ಶಂಖವನ್ನು **ದಧ್ಮೌ** ಊದಿದನು.

ಸತ್ಯ ಃ- ಯೋಷಿತಾಂ ಎಂಬ ಬಹುವಚನದಿಂದ ಶಚಿ ಮೊದಲಾದ ಬಹುಜನ ಪತ್ನಿಯರು ಇಂದ್ರದೇವರಿಗೆ ಎಂದು ತಿಳಿಯುವುದು. ಶ್ರುತಿಯಲ್ಲಿಯೂ ''ಸಪತ್ನೀಂ ಮೇ ಪರಾಧಮ'' ಎಂದು ಇಂದ್ರನಿಗೆ ಬಹುಪತ್ನಿಯರಿದ್ದರೆಂದು ಹೇಳಲಾಗಿದೆ. ||೨೩||

**ಮಘವಾಂಸ್ತದಭಿಪ್ರೇತ್ಯ ಬಲೇಃ ಪರಮಮುದ್ಯಮಮ್ ।**
**ಸರ್ವದೇವಗಣೋಪೇತೋ ಗುರುಮೇತದುವಾಚ ಹ** ||೨೪||

**ಮಘವಾನ್** ಇಂದ್ರದೇವರು **ಬಲೇಃ** ಬಲಿಚಕ್ರವರ್ತಿಯ **ತತ್** ಆ **ಪರಮಂ** ಹಿಂದಿನಕ್ಕಿಂತಲೂ ಅತಿಶಯವಾದ **ಉದ್ಯಮಂ** ಯುದ್ಧಪ್ರಯತ್ನವನ್ನು **ಅಭಿಪ್ರೇತ್ಯ** ಚೆನ್ನಾಗಿ ತಿಳಿದು **ಸರ್ವದೇವಗಣೋಪೇತಃ ಸನ್** ಎಲ್ಲ ದೇವಗಣಗಳಿಂದ ಕೂಡಿದವರಾಗಿ **ಗುರುಂ** ಬೃಹಸ್ಪತ್ಯಾಚಾರ್ಯರನ್ನು ಕುರಿತು **ಏತತ್** ಮುಂದೆ ಹೇಳುವ ಮಾತುಗಳನ್ನು **ಉವಾಚ** ಹೇಳಿದರು. **ಹ** ಇದು ಪುರಾಣಪ್ರಸಿದ್ಧವಾಗಿದೆ. ||೨೪||

**ಭಗವನ್ನುದ್ಯಮೋ ಭೂಯಾನ್ ಬಲೇರ್ನಃ ಪೂರ್ವವೈರಿಣಃ ।**
**ಅವಿಷಹ್ಯಮಿದಂ ಮನ್ಯೇ ಕೇನಾಸೀತ್ ತೇಜಸಾ ಸಮಃ** ||೨೫||

**ಹೇ ಭಗವನ್** ಪೂಜ್ಯರಾದ ಬೃಹಸ್ಪತಿಗಳೇ **ನಃ** ನಮ್ಮ **ಪೂರ್ವವೈರಿಣಂ** ಹಿಂದಿನ ಶತ್ರುವಾದ **ಬಲೇಃ** ಬಲಿಚಕ್ರವರ್ತಿಯ **ಉದ್ಯಮಃ** ಈ ಯುದ್ಧಪ್ರಯತ್ನವು **ಭೂಯಾನ್** ಬಹಳವಾಗಿದೆ **ಇಮಂ** ಈ ಬಲಿಯನ್ನು **ಅವಿಷಹ್ಯಂ** ಈಗ ಯುದ್ಧದಲ್ಲಿ ಸಹಿಸಲು

ಅಶಕ್ಯನನ್ನಾಗಿ **ಮನ್ಯೇ** ಭಾವಿಸುತ್ತೇನೆ. **ಅಸೌ** ಇವನು **ಕೇನ** ಯಾವ ಕಾರಣದಿಂದ **ತೇಜಸಾ** ಯಾವ ತಪಸ್ಸಿನ ಸಾಮರ್ಥ್ಯದಿಂದ **ಅಸಮಃ** ಅಸದೃಶನಾಗಿದ್ದಾನೆ. ।।೨೫।।

**ನೈನಂ ಕಶ್ಚಿತ್ ಕುತೋ ವಾಪಿ ಪ್ರತಿವ್ಯೋಢುಮಧೀಶ್ವರಃ ।**
**ಪಿಬನ್ನಿವ ಮುಖೇನೇದಂ ಲಿಹನ್ನಿವ ದಿಶೋ ದಶ** ।।೨೬।।

**ದಹನ್ನಿವ ದಿಶೋ ದೃಗ್ಭಿಃ ಸಂವರ್ತಾಗ್ನಿರಿವೋತ್ಥಿತಃ** ।।೨೭।।

**ಏನಂ** ಈ ಬಲಿಯನ್ನು **ಕಶ್ಚಿದಪಿ** ಯಾವನೂ **ಪ್ರತಿವ್ಯೋಢುಂ** ಯುದ್ಧದಲ್ಲಿ ಎದುರಿಸಲು **ಕುತೋ ವಾ** ಯಾವ ಕಾರಣದಿಂದಲೂ ಯಾವ ಆಯುಧದಿಂದಲೂ **ಅಧೀಶ್ವರಃ** ತಡೆಯಲು **ಸಮರ್ಥಃ ನ** ಸಮರ್ಥನಾದವನು ಇಲ್ಲ, ಇವನು **ಮುಖೇನ** ಬಾಯಿಯಿಂದ **ಇದಂ** ಈ ಜಗತ್ತನ್ನು **ಪಿಬನ್ ಇವ** ಕುಡಿಯುವವನಂತೆ **ದಶ ದಿಶಃ** ಹತ್ತು ದಿಕ್ಕುಗಳನ್ನು **ಲಿಹನ್ ಇವ** ನಾಲಿಗೆಯಿಂದ ನೆಕ್ಕುವವನಂತೆ **ದೃಗ್ಭಿಃ** ನೋಟಗಳಿಂದ **ದಿಶಃ** ದಿಕ್ಕುಗಳನ್ನು **ದಹನ್ ಇವ** ಸುಡುವವನಂತೆ **ಸಂವರ್ತಾಗ್ನಿಃ ಇವ ಉತ್ಥಿತಃ** ಪ್ರಳಯಕಾಲದ ಅಗ್ನಿಯಂತೆ ಎದ್ದಿರುವನು. ಅಥವಾ **ಉತ್ಥಿತಃ** ಚೆನ್ನಾಗಿ ಜ್ವಲಿಸುವ **ಸಂವರ್ತಾಗ್ನಿಃ ಇವ ಆಸ್ತೇ** ಪ್ರಲಯಕಾಲದ ಅಗ್ನಿಯಂತೆ ಇದ್ದಾನೆ ಎಂದು ಅನ್ವಯಿಸಿರುವರು. ''ಸಂವರ್ತಃ ಪ್ರಲಯಃ'' ಎಂದು ಅಮರಕೋಶ. ।।೨೬, ೨೭।।

**ಬ್ರೂಹಿ ಕಾರಣಮೇತಸ್ಯ ದುರ್ಧರ್ಷತ್ವಸ್ಯ ಮದ್ರಿಪೋಃ ।**
**ಓಜಃ ಸಹೋ ಬಲಂ ತೇಜೋ ಯತ ಏಷ ಸಮುದ್ಯಮಃ** ।।೨೮।।

**ಮದ್ರಿಪೋಃ** ನನ್ನ ಶತ್ರುವಿನ **ಓಜಃ** ಶತ್ರುವನ್ನು ಎದುರಿಸುವ ಸಾಮರ್ಥ್ಯವು **ಸಹಃ** ಇನ್ನೊಬ್ಬರು ಮಾಡಿದ ತೊಂದರೆಯನ್ನು ಸಹಿಸುವ ಶಕ್ತಿಯು **ಬಲಂ** ಶಾರೀರಿಕ ಬಲವು **ತೇಜಃ** ಪರಾಕ್ರಮವು **ಏಷಃ ಸಮುದ್ಯಮಃ** ಈ ಪ್ರಯತ್ನವು **ಯತಃ** ಯಾವ ಬಲದಿಂದ ಬಂದಿದೆ? **ಏತಸ್ಯ** ಈ ಸಾಮರ್ಥ್ಯ ಮುಂತಾದವುಗಳಿಗೆ **ಕಾರಣಂ** ಕಾರಣವನ್ನು **ಬ್ರೂಹಿ** ತಿಳಿಸಿರಿ. ।।೨೮।।

ಈ ರೀತಿ ಇಂದ್ರನಿಂದ ಪ್ರಶ್ನಿಸಲ್ಪಟ್ಟ ಬೃಹಸ್ಪತ್ಯಾಚಾರ್ಯರು ಹೇಳುವರು-

**ಗುರುರುವಾಚ**

**ಜಾನಾಮಿ ಮಘವನ್ ಶತ್ರೋರುನ್ನತೇರಸ್ಯ ಕಾರಣಮ್ ।**
**ಶಿಷ್ಯಾಯೋಪಭೃತಂ ತೇಜೋ ಗುರುಭಿಃ ಬ್ರಹ್ಮವಾದಿಭಿಃ** ।।೨೯।।

**ಹೇ ಮಘವನ್** ಇಂದ್ರನೇ **ಅಸ್ಯ ಶತ್ರೋಃ** ವೈರಿಯಾದ ಈ ಬಲಿಯ **ಉನ್ನತೇಃ** ಯುದ್ಧಸಮೃದ್ಧಿಗೆ (ಉತ್ಕರ್ಷಕ್ಕೆ) **ಕಾರಣಂ** ಕಾರಣವು **ಬ್ರಹ್ಮವಾದಿಭಿಃ** ಬ್ರಹ್ಮಜ್ಞಾನಿಗಳಾದ,

ಮಂತ್ರಸಿದ್ಧಿಯುಳ್ಳ **ಗುರುಭಿಃ** ಶುಕ್ರಾಚಾರ್ಯರಿಂದ **ಶಿಷ್ಯಾಯ** ಪ್ರಿಯಶಿಷ್ಯನಾದ ಬಲಿಗೆ **ತೇಜಃ** ಸಾಮರ್ಥ್ಯವು **ಉಪಭೃತಂ** ವಿದ್ಯೋಪದೇಶಾದಿಗಳಿಂದ ಚೆನ್ನಾಗಿ ಪೂರಿತವಾಗಿದೆ. **ಜಾನಾಮಿ** ಇದನ್ನೇ ಕಾರಣವೆಂದು ನಾನು ತಿಳಿದಿದ್ದೇನೆ. ।।೨೯।।

**ಭವದ್ವಿಧೋ ಭವಾನ್ ವಾಪಿ ವರ್ಜಯಿತ್ವೇಶ್ವರಂ ಹರಿಮ್ ।**
**ನಾಸ್ಯ ಶಕ್ತಃ ಪುರಃ ಸ್ಥಾತುಂ ಕೃತಾಂತಸ್ಯ ಯಥಾ ಜನಃ ।।೩೦।।**

**ಯಥಾ** ಹೇಗೆ **ಜನಾಃ** ಜೀವರು **ಕೃತಾಂತಸ್ಯ ಚ** ಯಮನ **ಪುರಃ** ಎದುರಿನಲ್ಲಿ **ಸ್ಥಾತುಂ** ನಿಲ್ಲಲು **ನ ಶಕ್ತಾಃ ಚ** ಸಮರ್ಥರಲ್ಲವೋ **ತಥಾ** ಹಾಗೆ **ಈಶ್ವರಂ** ಸರ್ವೋತ್ತಮನಿಯಾಮಕನಾದ **ಹರಿಂ ವಿನಾ** ಶ್ರೀಹರಿಯನ್ನು ಬಿಟ್ಟು (ಬ್ರಹ್ಮ-ವಾಯು-ರುದ್ರರನ್ನು ಬಿಟ್ಟು) **ಭವದ್ವಿಧಃ** ನಿನಗೆ ಸದೃಶರಾದವರು ಯಾವ ದೇವತೆಯಾಗಲಿ **ಅಪಿ** ಮತ್ತು **ಭವಾನ್ ವಾ** ನೀನೇ ಆಗಲಿ **ಅಸ್ಯ** ಈ ಬಲಿಯ **ಪುರಃ ಸ್ಥಾತುಂ** ಎದುರು ನಿಲ್ಲಲು **ನ ಶಕ್ತಃ** ಸಮರ್ಥನಲ್ಲ. ''ಕೃತಾಂತೋ ಯಮುನಾಭ್ರಾತಾ ಶಮನೋ ಯಮರಾಡ್ಯಮಃ'' ಎಂದು ಅಮರ. ।।೩೦।।

ಸತ್ಯಾಭಿ ಃ- ಶ್ರೀಸತ್ಯಾಭಿನವತೀರ್ಥರು ದುರ್ಘಟಭಾವದೀಪಿಕಾ ಎಂಬ ಭಾಗವತವ್ಯಾಖ್ಯಾನದಲ್ಲಿ ಈ ವಿಶೇಷ ವಿಚಾರವನ್ನು ತಿಳಿಸಿದ್ದಾರೆ.

ಭವದ್ವಿಧಃ ಎಂಬಲ್ಲಿ ಭವತಾಂ ವಿಶೇಷೇಣ ಧಾರಕಃ ಇಂದ್ರನಿಗೆ ವಿಶೇಷವಾಗಿ ಧಾರಕರು ಎಂದು ಅರ್ಥ ಮಾಡಿಕೊಳ್ಳಬೇಕು. ವಿಪೂರ್ವಕವಾದ ಧಾರಣಾರ್ಥಕವಾದ ಧಾ ಎಂಬ ಧಾತುವಿಗೆ ಕ ಪ್ರತ್ಯಯ ಮಾಡಿದಾಗ ವಿಧಃ ಎಂಬ ರೂಪವು ನಿಷ್ಪನ್ನವಾಗುತ್ತದೆ. ವಿಶೇಷವಾಗಿ ಧಾರಕ ಎಂಬ ಅರ್ಥವು ಬರುತ್ತದೆ. ಹೀಗೆ ಮಾಡುವುದರಿಂದ, ನಿನ್ನಂತಹ ಎಂಬ ಅರ್ಥ ಉಳ್ಳ ಭವಿದ್ವಿಧಃ ಎಂಬುದರಿಂದಲೇ ಹರಿಯ ಪ್ರಸಕ್ತಿ ಇಲ್ಲದ್ದರಿಂದ ''ಈಶ್ವರಂ ಹರಿಂ ವರ್ಜಯಿತ್ವಾ'' ಎಂದು ಹೇಳುವುದು ಸರಿಯಲ್ಲವೆಂಬ ದೂಷಣವು ದೂರವಾಗುತ್ತದೆ.

ತಾತ್ಪರ್ಯ ಇಷ್ಟು. ಭವದ್ವಿಧಃ ನಿನ್ನಂಥವರು ಬಲಿಯ ಎದುರು ಯುದ್ಧಕ್ಕೆ ನಿಲ್ಲಲು ಸಮರ್ಥರಲ್ಲ ಎಂದು ಬೃಹಸ್ಪತಿಗಳು ಇಂದ್ರನಿಗೆ ಹೇಳುತ್ತಿದ್ದಾರೆ. ಇಲ್ಲಿ ಪರಮಾತ್ಮ ಬಲಿಯ ಜೊತೆ ಯುದ್ಧಮಾಡಲು ಸಮರ್ಥನೋ? ಅಸಮರ್ಥನೋ? ಎಂಬ ಶಂಕೆಗೆ ಅವಕಾಶವೇ ಇಲ್ಲ. ಯಾಕೆಂದರೆ ಪರಮಾತ್ಮ ಇಂದ್ರನಂಥವನಲ್ಲ. ಇಂದ್ರನಿಗಿಂತಲೂ ವಿಲಕ್ಷಣ. ಬ್ರಹ್ಮ-ರಮಾದಿಗಳಿಗಿಂತಲೂ ವಿಲಕ್ಷಣ. ಬ್ರಹ್ಮ-ರಮಾದಿಗಳಿಗಿಂತಲೂ ಉತ್ತಮ. ಆದ್ದರಿಂದ ಮೇಲಿನ ಶಂಕೆಗೆ ಇಲ್ಲಿ ಅವಕಾಶವೇ ಇಲ್ಲ. ಹೀಗಿರುವಾಗ ಪರಮಾತ್ಮನನ್ನು ಬಿಟ್ಟು ನಿನ್ನಂಥವರು ಯಾರೂ ಬಲಿಯ ಜೊತೆ ಯುದ್ಧ ಮಾಡಲು ಸಮರ್ಥರಲ್ಲ ಎಂದು ಹೇಳಿದ್ದು ಯಾಕೆ? ಎಂಬ ಸಂಶಯವು ಬಂದೇ ಬರುತ್ತದೆ.

ಆದರೆ ಪ್ರಕೃತ ಭವದ್ವಿಧಃ ಎಂಬುದಕ್ಕೆ ನಿಮ್ಮನ್ನು (ಇಂದ್ರನನ್ನು) ವಿಶೇಷವಾಗಿ ಧರಿಸಿದವರು ಎಂದು ಅರ್ಥ ಮಾಡುತ್ತಿದ್ದೇವೆ. ಪರಮಾತ್ಮ ಇಂದ್ರನನ್ನು ವಿಶೇಷವಾಗಿ ಧರಿಸಿರುವುದರಿಂದ ಭವದ್ವಿಧನಾದ ಪರಮಾತ್ಮ ಬಲಿಯ ಜೊತೆ ಯುದ್ಧ ಮಾಡಲು ಸಮರ್ಥನೋ? ಅಸಮರ್ಥನೋ? ಎಂಬ ಶಂಕೆಯು ಬಂದೇ ಬರುತ್ತದೆ. ಇದನ್ನು ಪರಿಹರಿಸುವುದಕ್ಕಾಗಿಯೇ ''ವರ್ಜಯಿತ್ವಾ ಹರಿಂ ವಿನಾ'' ಎಂದು ಹೇಳಿದ್ದಾರೆ. ಎನ್ನುವುದು ಯುಕ್ತವಾಗುತ್ತದೆ.

ಹಾಗಾದರೆ ಬ್ರಹ್ಮ-ವಾಯು-ರುದ್ರರೂ ಇಂದ್ರನಿಗೆ ವಿಶೇಷವಾಗಿ ಧಾರಕರಾಗಿದ್ದಾರೆ. ಆ ಬ್ರಹ್ಮ-ವಾಯು-ರುದ್ರರು ಕೂಡಾ ಬಲಿಯ ಜೊತೆ ಯುದ್ಧ ಮಾಡಲು ಸಮರ್ಥರಲ್ಲವೇ? ಈ ಶಂಕೆಯನ್ನು ಪರಿಹರಿಸಲಿಲ್ಲವಲ್ಲಾ? ಎಂಬ ಶಂಕೆಯು ಬರುತ್ತದೆ. ಇದಕ್ಕೆ ಉತ್ತರವನ್ನು ಹೀಗೆ ತಿಳಿಯಬೇಕು.

ಯದ್ಯಪಿ ಬ್ರಹ್ಮ-ವಾಯು-ರುದ್ರರು ಬಲಿಗಿಂತಲೂ ಬಲಾಢ್ಯರಾಗಿದ್ದಾರೆ. ಆದರೆ ಈಗ ಬಲಿಯನ್ನು ನಿಗ್ರಹಿಸಲು ಶ್ರೀಹರಿಯ ಆಜ್ಞೆ ಇವರಾರಿಗೂ ಇಲ್ಲ. ಆದ್ದರಿಂದ ಬಲಿಯ ಎದುರು ನಿಂತು ಬಲಿನಿಗ್ರಹ ಮಾಡಲು ಅಶಕ್ಯ . ಆದ್ದರಿಂದ ಇಂದ್ರನಿಗೆ ವಿಶೇಷವಾಗಿ ಧಾರಕರಾಗಿರುವ ಬ್ರಹ್ಮ-ವಾಯು-ರುದ್ರರು ಕೂಡಾ ಬಲಿಯನ್ನು ನಿಗ್ರಹಿಸಲು ಅಸಮರ್ಥರೆಂದು ಹೇಳುತ್ತಿದ್ದಾರೆಯೇ ಹೊರತು ಸ್ವಾಭಾವಿಕವಾಗಿಯೇ ಬ್ರಹ್ಮ-ವಾಯು-ರುದ್ರರು ಕೂಡಾ ಅಸಮರ್ಥರೆಂದು ಅಭಿಪ್ರಾಯವಲ್ಲ. ಹೀಗೆ ಈ ವಿಷಯವನ್ನು ಸ್ಪಷ್ಟಪಡಿಸಿಕೊಳ್ಳಬೇಕು. ।।೩೦।।

ಅವತರಣಿಕಾ :- ಗುರುಗಳಾದ ಬೃಹಸ್ಪತ್ಯಾಚಾರ್ಯರೇ! ಇದು ಅರಣ್ಯರೋದನವಾಯಿತಲ್ಲವೇ? ಇನ್ನು ಮುಂದೆ ನಾವೆಲ್ಲರೂ ಏನು ಮಾಡಬೇಕೆಂದು ಇಂದ್ರನ ಮನಸ್ಸಿನಲ್ಲಿಯ ಪ್ರಶ್ನೆಗೆ ಬೃಹಸ್ಪತ್ಯಾಚಾರ್ಯರು ಸಮಾಧಾನ ನೀಡುತ್ತಿದ್ದಾರೆ-

**ತಸ್ಮಾನ್ನಿಲಯಮುತ್ಸೃಜ್ಯ ಯೂಯಂ ಸರ್ವೇ ತ್ರಿವಿಷ್ಟಪಮ್ ।**
**ಯಾತ ಕಾಲಂ ಪ್ರತೀಕ್ಷಂತೋ ಯತಃ ಶತ್ರೋರ್ವಿಪರ್ಯಯಃ** ।।೩೧।।

**ಯತಃ** ಯಾವ ಕಾರಣ **ಶತ್ರೋಃ** ಶತ್ರುವಾದ ಬಲಿಗೆ **ವಿಪರ್ಯಯಃ** ನಿನಗಿಂತ ಹೆಚ್ಚು ಸಾಮರ್ಥ್ಯವು ಈಗ ಬಂದಿದೆಯೋ **ತಸ್ಮಾತ್** ಆ ಕಾರಣ **ಯೂಯಂ ಸರ್ವೇ** ನಿವೆಲ್ಲರೂ **ಕಾಲಂ** ನಿಮ್ಮ ಉನ್ನತಿಯ ಕಾಲವನ್ನು **ಪ್ರತೀಕ್ಷಂತಃ** ನಿರೀಕ್ಷಿಸುವವರಾಗಿ **ನಿಲಯಂ** ನಿಮ್ಮ ವಾಸಸ್ಥಾನವಾದ **ತ್ರಿವಿಷ್ಟಪಂ** ಸ್ವರ್ಗವನ್ನು **ಉತ್ಸೃಜ್ಯ** ಬಿಟ್ಟು **ಯಾತ** ಹೊರಡಿರಿ.

ಛಲಾರೀ :- **ತ್ರಿವಿಷ್ಟಪಂ ಉತ್ಸೃಜ್ಯ ನಿಲಯಂ ಯಾತ** ಅದೃಶ್ಯರಾಗಿರಿ ಎಂದು ಅನ್ವಯಾರ್ಥ ತಿಳಿಯಬೇಕು. **ಯತಃ ಶತ್ರೋಃ ವಿಪರ್ಯಯಃ ತಂ ಕಾಲಂ ಪ್ರತೀಕ್ಷಮಾಣಃ** ಅಂದರೆ ಶತ್ರುಗಳ ಅವನತಿ ಕಾಲವನ್ನು ನಿರೀಕ್ಷಿಸುತ್ತಾ ಎಂದೂ ಅರ್ಥ. ।।೩೧।।

**ಏಷ ವಿಪ್ರಬಲೋದರ್ಕಃ ಸಂಪ್ರತ್ಯೂರ್ಜಿತವಿಕ್ರಮಃ ।**
**ಏಷಾಮೇವಾವಮಾನೇನ ಸಾನುಬಂಧೋ ವಿನಂಕ್ಷ್ಯತಿ ॥೩೨॥**

**ಏಷಃ** ಈ ಬಲಿಯು **ಸಂಪ್ರತಿ** ಈಗ **ಊರ್ಜಿತವಿಕ್ರಮಃ** ಯಾವ ಶುಕ್ರಾಚಾರ್ಯರ ಅನುಗ್ರಹಬಲದಿಂದ ಬಹುವಾಗಿ ಬೆಳೆದ ಪರಾಕ್ರಮ ಉಳ್ಳವನಾಗಿದ್ದಾನೆ. **ವಿಪ್ರಬಲೋದರ್ಕಃ** ಬ್ರಾಹ್ಮಣರ ಬಲದಿಂದ ಅಭಿವೃದ್ಧನಾಗಿದ್ದಾನೆ. **ಏಷಾಂ** ಈ ಬ್ರಾಹ್ಮಣರ **ಅವಮಾನೇನ ಏವ** ತಾನು ಮಾಡುವ ಅಗೌರವದಿಂದಲೇ **ಸಾನುಬಂಧಃ** ದೇಹಸಂಬಂಧಿಗಳೊಂದಿಗೆ **ವಿನಂಕ್ಷ್ಯತಿ** ವಿನಾಶ ಹೊಂದುತ್ತಾನೆ. ॥೩೨॥

**ಶ್ರೀಶುಕ ಉವಾಚ**

**ಏವಂ ಸುಮಂತ್ರಿತಾರ್ಥಾಸ್ತೇ ಗುರುಣಾಽರ್ಥಾನುದರ್ಶಿನಾ ।**
**ಹಿತ್ವಾ ತ್ರಿವಿಷ್ಟಪಂ ಜಗ್ಮುರ್ಗೀರ್ವಾಣಾಃ ಕಾಮರೂಪಿಣಃ ॥೩೩॥**

**ತೇ ಗೀರ್ವಾಣಾಃ** ಆ ದೇವತೆಗಳು **ಅರ್ಥಾನುದರ್ಶಿನಾ** ಮುಂದೆ ಆಗುವ ಪ್ರಯೋಜನವನ್ನು ಯೋಗದೃಷ್ಟಿಯಿಂದ ಕಂಡ **ಗುರುಣಾ** ಬೃಹಸ್ಪತ್ಯಾಚಾರ್ಯರಿಂದ **ಏವಂ** ಮೇಲೆ ಹೇಳಿದಂತೆ **ಸುಮಂತ್ರಿತಾರ್ಥಾಃ (ಸಂತಃ)** ಆ ಕಾಲದಲ್ಲಿ ಅನುಸರಿಸಬೇಕಾದ ನೀತಿಯನ್ನು ವಿಚಾರ ಮಾಡಿದವರಾಗಿ **ಕಾಮರೂಪಿಣಃ ಸಂತಃ** ತಮಗಿಷ್ಟ ಬಂದ ರೂಪವನ್ನು ತೆಗೆದುಕೊಂಡು **ತ್ರಿವಿಷ್ಟಪಂ** ಸ್ವರ್ಗವನ್ನು **ಹಿತ್ವಾ** ಬಿಟ್ಟು **ಜಗ್ಮುಃ** ಬೇರೇ ಸ್ಥಳಕ್ಕೆ ಹೋದರು. ॥೩೩॥

**ದೇವೇಷ್ವತಿವಿಲೀನೇಷು ಬಲಿರ್ವೈರೋಚನಃ ಪುರೀಮ್ ।**
**ದೇವಧಾನೀಮಧಿಷ್ಠಾಯ ವಶಂ ನಿನ್ಯೇ ಜಗತ್ತ್ರಯಮ್ ॥೩೪॥**

**ಇತಿ** ಮೇಲೆ ಹೇಳಿದಂತೆ **ದೇವೇಷು** ದೇವತೆಗಳೆಲ್ಲರೂ **ಅತಿವಿಲೀನೇಷು** ಅತ್ಯಂತವಾಗಿ ಕಾಣದಾಗಲು (ಅಡಗಿರಲು) **ವೈರೋಚನಃ** ವಿರೋಚನನ ಮಗನಾದ ಬಲಿಚಕ್ರವರ್ತಿಯು **ದೇವಧಾನೀಂ** ದೇವತೆಗಳ ರಾಜಧಾನಿಯಾದ **ಪುರೀಂ ಚ** ಅಮರಾವತಿಯಲ್ಲಿ **ಅಧಿಷ್ಠಾಯ** ಇದ್ದುಕೊಂಡು **ಜಗತ್ತ್ರಯಂ** ಭೂಃ ಭುವಃ ಸ್ವಃ ಎಂಬ ಲೋಕಗಳನ್ನು **ವಶಂ** ತನ್ನ ಅಧೀನಗಳನ್ನಾಗಿ **ನಿನ್ಯೇ** ಮಾಡಿಕೊಂಡನು.

**ತಂ ವಿಶ್ವಜಯಿನಂ ಶಿಷ್ಯಂ ಭೃಗವಃ ಶಿಷ್ಯವತ್ಸಲಾಃ ।**
**ಶತೇನ ಹಯಮೇಧಾನಾಮನುವ್ರತಮಯಾಜಯನ್ ॥೩೫॥**

**ಶಿಷ್ಯವತ್ಸಲಾಃ** ಶಿಷ್ಯನಾದ ಬಲಿಯಲ್ಲಿ ಪ್ರೀತಿಯುಳ್ಳ **ಭೃಗವಃ** ಶುಕ್ರಾಚಾರ್ಯರೇ ಮೊದಲಾದ ಬ್ರಾಹ್ಮಣರು **ವಿಶ್ವಜಯಿನಂ** ಮೂರು ಲೋಕಗಳನ್ನು ಗೆದ್ದ **ಅನುವ್ರತಂ** ತಮ್ಮನ್ನು

ಆದರೆ ಪ್ರಕೃತ ಭವದ್ವಿಧಃ ಎಂಬುದಕ್ಕೆ ನಿಮ್ಮನ್ನು (ಇಂದ್ರನನ್ನು) ವಿಶೇಷವಾಗಿ ಧರಿಸಿದವರು ಎಂದು ಅರ್ಥ ಮಾಡುತ್ತಿದ್ದೇವೆ. ಪರಮಾತ್ಮ ಇಂದ್ರನನ್ನು ವಿಶೇಷವಾಗಿ ಧರಿಸಿರುವುದರಿಂದ ಭವದ್ವಿಧನಾದ ಪರಮಾತ್ಮ ಬಲಿಯ ಜೊತೆ ಯುದ್ಧ ಮಾಡಲು ಸಮರ್ಥನೋ? ಅಸಮರ್ಥನೋ? ಎಂಬ ಶಂಕೆಯು ಬಂದೇ ಬರುತ್ತದೆ. ಇದನ್ನು ಪರಿಹರಿಸುವುದಕ್ಕಾಗಿಯೇ ''ವರ್ಜಯಿತ್ವಾ ಹರಿಂ ವಿನಾ'' ಎಂದು ಹೇಳಿದ್ದಾರೆ. ಎನ್ನುವುದು ಯುಕ್ತವಾಗುತ್ತದೆ.

ಹಾಗಾದರೆ ಬ್ರಹ್ಮ-ವಾಯು-ರುದ್ರರೂ ಇಂದ್ರನಿಗೆ ವಿಶೇಷವಾಗಿ ಧಾರಕರಾಗಿದ್ದಾರೆ. ಆ ಬ್ರಹ್ಮ-ವಾಯು-ರುದ್ರರು ಕೂಡಾ ಬಲಿಯ ಜೊತೆ ಯುದ್ಧ ಮಾಡಲು ಸಮರ್ಥರಲ್ಲವೇ? ಈ ಶಂಕೆಯನ್ನು ಪರಿಹರಿಸಲಿಲ್ಲವಲ್ಲಾ? ಎಂಬ ಶಂಕೆಯು ಬರುತ್ತದೆ. ಇದಕ್ಕೆ ಉತ್ತರವನ್ನು ಹೀಗೆ ತಿಳಿಯಬೇಕು.

ಯದ್ಯಪಿ ಬ್ರಹ್ಮ-ವಾಯು-ರುದ್ರರು ಬಲಿಗಿಂತಲೂ ಬಲಾಢ್ಯರಾಗಿದ್ದಾರೆ. ಆದರೆ ಈಗ ಬಲಿಯನ್ನು ನಿಗ್ರಹಿಸಲು ಶ್ರೀಹರಿಯ ಆಜ್ಞೆ ಇವರಾರಿಗೂ ಇಲ್ಲ. ಆದ್ದರಿಂದ ಬಲಿಯ ಎದುರು ನಿಂತು ಬಲಿನಿಗ್ರಹ ಮಾಡಲು ಅಶಕ್ಯ. ಆದ್ದರಿಂದ ಇಂದ್ರನಿಗೆ ವಿಶೇಷವಾಗಿ ಧಾರಕರಾಗಿರುವ ಬ್ರಹ್ಮ-ವಾಯು-ರುದ್ರರು ಕೂಡಾ ಬಲಿಯನ್ನು ನಿಗ್ರಹಿಸಲು ಅಸಮರ್ಥರೆಂದು ಹೇಳುತ್ತಿದ್ದಾರೆಯೇ ಹೊರತು ಸ್ವಾಭಾವಿಕವಾಗಿಯೇ ಬ್ರಹ್ಮ-ವಾಯು-ರುದ್ರರು ಕೂಡಾ ಅಸಮರ್ಥರೆಂದು ಅಭಿಪ್ರಾಯವಲ್ಲ. ಹೀಗೆ ಈ ವಿಷಯವನ್ನು ಸ್ಪಷ್ಟಪಡಿಸಿಕೊಳ್ಳಬೇಕು. ।।೩೦।।

ಅವತರಣಿಕಾ :- ಗುರುಗಳಾದ ಬೃಹಸ್ಪತ್ಯಾಚಾರ್ಯರೇ! ಇದು ಅರಣ್ಯರೋದನವಾಯಿತಲ್ಲವೇ? ಇನ್ನು ಮುಂದೆ ನಾವೆಲ್ಲರೂ ಏನು ಮಾಡಬೇಕೆಂದು ಇಂದ್ರನ ಮನಸ್ಸಿನಲ್ಲಿಯ ಪ್ರಶ್ನೆಗೆ ಬೃಹಸ್ಪತ್ಯಾಚಾರ್ಯರು ಸಮಾಧಾನ ನೀಡುತ್ತಿದ್ದಾರೆ-

**ತಸ್ಮಾನ್ನಿಲಯಮುತ್ಸೃಜ್ಯ ಯೂಯಂ ಸರ್ವೇ ತ್ರಿವಿಷ್ಟಪಮ್ ।**
**ಯಾತ ಕಾಲಂ ಪ್ರತೀಕ್ಷಂತೋ ಯತಃ ಶತ್ರೋರ್ವಿಪರ್ಯಯಃ** ।।೩೧।।

**ಯತಃ** ಯಾವ ಕಾರಣ **ಶತ್ರೋಃ** ಶತ್ರುವಾದ ಬಲಿಗೆ **ವಿಪರ್ಯಯಃ** ನಿನಗಿಂತ ಹೆಚ್ಚು ಸಾಮರ್ಥ್ಯವು ಈಗ ಬಂದಿದೆಯೋ **ತಸ್ಮಾತ್** ಆ ಕಾರಣ **ಯೂಯಂ ಸರ್ವೇ** ನಿವೆಲ್ಲರೂ **ಕಾಲಂ** ನಿಮ್ಮ ಉನ್ನತಿಯ ಕಾಲವನ್ನು **ಪ್ರತೀಕ್ಷಂತಃ** ನಿರೀಕ್ಷಿಸುವವರಾಗಿ **ನಿಲಯಂ** ನಿಮ್ಮ ವಾಸಸ್ಥಾನವಾದ **ತ್ರಿವಿಷ್ಟಪಂ** ಸ್ವರ್ಗವನ್ನು **ಉತ್ಸೃಜ್ಯ** ಬಿಟ್ಟು **ಯಾತ** ಹೊರಡಿರಿ.

ಛಲಾರೀ :- **ತ್ರಿವಿಷ್ಟಪಂ ಉತ್ಸೃಜ್ಯ ನಿಲಯಂ ಯಾತ** ಅದೃಶ್ಯರಾಗಿರಿ ಎಂದು ಅನ್ವಯಾರ್ಥ ತಿಳಿಯಬೇಕು. **ಯತಃ ಶತ್ರೋಃ ವಿಪರ್ಯಯಃ ತಂ ಕಾಲಂ ಪ್ರತೀಕ್ಷಮಾಣಃ** ಅಂದರೆ ಶತ್ರುಗಳ ಅವನತಿ ಕಾಲವನ್ನು ನಿರೀಕ್ಷಿಸುತ್ತಾ ಎಂದೂ ಅರ್ಥ. ।।೩೧।।

**ಏಷ ವಿಪ್ರಬಲೋದರ್ಕಃ ಸಂಪ್ರತ್ಯೂರ್ಜಿತವಿಕ್ರಮಃ ।**
**ಏಷಾಮೇವಾವಮಾನೇನ ಸಾನುಬಂಧೋ ವಿನಂಕ್ಷ್ಯತಿ ॥೩೨॥**

**ಏಷಃ** ಈ ಬಲಿಯು **ಸಂಪ್ರತಿ** ಈಗ **ಊರ್ಜಿತವಿಕ್ರಮಃ** ಯಾವ ಶುಕ್ರಾಚಾರ್ಯರ ಅನುಗ್ರಹಬಲದಿಂದ ಬಹುವಾಗಿ ಬೆಳೆದ ಪರಾಕ್ರಮ ಉಳ್ಳವನಾಗಿದ್ದಾನೆ. **ವಿಪ್ರಬಲೋದರ್ಕಃ** ಬ್ರಾಹ್ಮಣರ ಬಲದಿಂದ ಅಭಿವೃದ್ಧನಾಗಿದ್ದಾನೆ. **ಏಷಾಂ** ಈ ಬ್ರಾಹ್ಮಣರ **ಅವಮಾನೇನ ಏವ** ತಾನು ಮಾಡುವ ಅಗೌರವದಿಂದಲೇ **ಸಾನುಬಂಧಃ** ದೇಹಸಂಬಂಧಿಗಳೊಂದಿಗೆ **ವಿನಂಕ್ಷ್ಯತಿ** ವಿನಾಶ ಹೊಂದುತ್ತಾನೆ. ॥೩೨॥

**ಶ್ರೀಶುಕ ಉವಾಚ**

**ಏವಂ ಸುಮಂತ್ರಿತಾರ್ಥಾಸ್ತೇ ಗುರುಣಾಽರ್ಥಾನುದರ್ಶಿನಾ ।**
**ಹಿತ್ವಾ ತ್ರಿವಿಷ್ಟಪಂ ಜಗ್ಮುರ್ಗೀರ್ವಾಣಾಃ ಕಾಮರೂಪಿಣಃ ॥೩೩॥**

**ತೇ ಗೀರ್ವಾಣಾಃ** ಆ ದೇವತೆಗಳು **ಅರ್ಥಾನುದರ್ಶಿನಾ** ಮುಂದೆ ಆಗುವ ಪ್ರಯೋಜನವನ್ನು ಯೋಗದೃಷ್ಟಿಯಿಂದ ಕಂಡ **ಗುರುಣಾ** ಬೃಹಸ್ಪತ್ಯಾಚಾರ್ಯರಿಂದ **ಏವಂ** ಮೇಲೆ ಹೇಳಿದಂತೆ **ಸುಮಂತ್ರಿತಾರ್ಥಾಃ (ಸಂತಃ)** ಆ ಕಾಲದಲ್ಲಿ ಅನುಸರಿಸಬೇಕಾದ ನೀತಿಯನ್ನು ವಿಚಾರ ಮಾಡಿದವರಾಗಿ **ಕಾಮರೂಪಿಣಃ ಸಂತಃ** ತಮಗಿಷ್ಟ ಬಂದ ರೂಪವನ್ನು ತೆಗೆದುಕೊಂಡು **ತ್ರಿವಿಷ್ಟಪಂ** ಸ್ವರ್ಗವನ್ನು **ಹಿತ್ವಾ** ಬಿಟ್ಟು **ಜಗ್ಮುಃ** ಬೇರೇ ಸ್ಥಳಕ್ಕೆ ಹೋದರು. ॥೩೩॥

**ದೇವೇಷ್ವತಿವಿಲೀನೇಷು ಬಲಿರ್ವೈರೋಚನಃ ಪುರೀಮ್ ।**
**ದೇವಧಾನೀಮಧಿಷ್ಠಾಯ ವಶಂ ನಿನ್ಯೇ ಜಗತ್ತ್ರಯಮ್ ॥೩೪॥**

**ಇತಿ** ಮೇಲೆ ಹೇಳಿದಂತೆ **ದೇವೇಷು** ದೇವತೆಗಳೆಲ್ಲರೂ **ಅತಿವಿಲೀನೇಷು** ಅತ್ಯಂತವಾಗಿ ಕಾಣದಾಗಲು (ಅಡಗಿರಲು) **ವೈರೋಚನಃ** ವಿರೋಚನನ ಮಗನಾದ ಬಲಿಚಕ್ರವರ್ತಿಯು **ದೇವಧಾನೀಂ** ದೇವತೆಗಳ ರಾಜಧಾನಿಯಾದ **ಪುರೀಂ ಚ** ಅಮರಾವತಿಯಲ್ಲಿ **ಅಧಿಷ್ಠಾಯ** ಇದ್ದುಕೊಂಡು **ಜಗತ್ತ್ರಯಂ** ಭೂಃ ಭುವಃ ಸ್ವಃ ಎಂಬ ಲೋಕಗಳನ್ನು **ವಶಂ** ತನ್ನ ಅಧೀನಗಳನ್ನಾಗಿ **ನಿನ್ಯೇ** ಮಾಡಿಕೊಂಡನು.

**ತಂ ವಿಶ್ವಜಯಿನಂ ಶಿಷ್ಯಂ ಭೃಗವಃ ಶಿಷ್ಯವತ್ಸಲಾಃ ।**
**ಶತೇನ ಹಯಮೇಧಾನಾಮನುವ್ರತಮಯಾಜಯನ್ ॥೩೫॥**

**ಶಿಷ್ಯವತ್ಸಲಾಃ** ಶಿಷ್ಯನಾದ ಬಲಿಯಲ್ಲಿ ಪ್ರೀತಿಯುಳ್ಳ **ಭೃಗವಃ** ಶುಕ್ರಾಚಾರ್ಯರೇ ಮೊದಲಾದ ಬ್ರಾಹ್ಮಣರು **ವಿಶ್ವಜಯಿನಂ** ಮೂರು ಲೋಕಗಳನ್ನು ಗೆದ್ದ **ಅನುವ್ರತಂ** ತಮ್ಮನ್ನು

ಅನುಸರಿಸಿ ನಡೆಯುತ್ತಿರುವ **ತಂ ಶಿಷ್ಯಂ** ಆ ಬಲಿಚಕ್ರವರ್ತಿಯನ್ನು **ಹಯಮೇಧಾನಾಂ** ಅಶ್ವಮೇಧಗಳ **ಶತೇನ** ನೂರರಿಂದ **ಅಯಾಜಯನ್** ದೇವಪೂಜಕನನ್ನಾಗಿ ಮಾಡಿದರು.

ಸತ್ಯ ಃ- ಇಂದ್ರಮುಖ್ಯಲಕ್ಷಣತ್ವಾತ್ತಸ್ಯೇತಿ ಭಾವಃ । ದೊರೆತ ಇಂದ್ರಪದವಿಯು ಸ್ಥಿರವಾಗಲು ಇಂದ್ರನ ಮುಖ್ಯಲಕ್ಷಣವಾದ ನೂರು ಅಶ್ವಮೇಧಗಳನ್ನು ಮಾಡಿಸಿದರು ಎಂದು ಭಾವ.

ಲಿಂಗೇರೀ ಃ- ದೇವಪೂಜಾರೂಪವಾದ ನೂರು ಅಶ್ವಮೇಧಯಾಗಗಳನ್ನು ಬಲಿಯಿಂದ ಮಾಡಿಸಿದರೆಂದರ್ಥ. ।।೩೫।।

**ತತಸ್ತದನುಭಾವೇನ ಭುವನತ್ರಯವಿಶ್ರುತಾಮ್ ।**
**ಕೀರ್ತಿಂ ದಿಕ್ಷು ವಿತನ್ವಾನಃ ಸ ರೇಜ ಉಡುರಾಡಿವ ।।೩೬।।**

**ತತಃ** ಅನಂತರ **ಸಃ** ಬಲಿಯು **ತದನುಭಾವೇನ** ಆ ಬ್ರಾಹ್ಮಣರ ಸಂಪೂರ್ಣ ಅನುಗ್ರಹ ಸಾಮರ್ಥ್ಯದಿಂದ, ಯಾಗಗಳಿಂದ ಪ್ರೀತನಾದ ಹರಿಯ ಅನುಗ್ರಹದಿಂದ **ಭುವನತ್ರಯವಿಶ್ರುತಾಂ** ಮೂರುಲೋಕಗಳಲ್ಲಿ ಪ್ರಸಿದ್ಧವಾದ **ಕೀರ್ತಿಂ** ಕೀರ್ತಿಯನ್ನು **ದಿಕ್ಷು** ದಿಕ್ಕುಗಳಲ್ಲಿ **ವಿತನ್ವಾನಃ** ವಿಸ್ತರಿಸುವವನಾಗಿ **ಉಡುರಾಡಿವ** ನಕ್ಷತ್ರಾಧಿಪತಿಯಾದ ಚಂದ್ರನಂತೆ **ರೇಜೆ** ಪ್ರಕಾಶಿಸಿದನು. ।।೩೬।।

**ಬುಭುಜೇ ಚ ಶ್ರಿಯಂ ಋದ್ಧಾಂ ದ್ವಿಜದೇವೋಪಲಂಭಿತಾಮ್ ।**
**ಕೃತಕೃತ್ಯಮಿವಾತ್ಮಾನಂ ಮನ್ಯಮಾನೋ ಮಹಾಮನಾಃ ।।೩೭।।**

**।। ಇತಿ ಶ್ರೀಮದ್ಭಾಗವತೇ ಅಷ್ಟಮಸ್ಕಂಧೇ ಚತುರ್ದಶೋऽಧ್ಯಾಯಃ ।।**

**ಮಹಾಮನಾಃ** ಶ್ರೀಹರಿಯು ಸರ್ವೋತ್ತಮನೆಂದು ಮನನ ಮಾಡುವ **ಸಃ** ಆ ಬಲಿಚಕ್ರವರ್ತಿಯು **ಆತ್ಮಾನಂ** ತನ್ನನ್ನು **ಕೃತಕೃತ್ಯಂ ಇವ** ತಾವು ಬಯಸಿದ ಸ್ವರ್ಗರಾಜ್ಯವನ್ನು ಸಾಧಿಸಿದವನನ್ನಾಗಿ **ಮನ್ಯಮಾನಃ** ತಿಳಿದವರಾಗಿ **ದ್ವಿಜದೇವೋಪಲಭಿಂತಾಂ** ಬ್ರಾಹ್ಮಣಶ್ರೇಷ್ಠರಾದ ಶುಕ್ರಾಚಾರ್ಯರಿಂದ ಹೊಂದಿಸಲ್ಪಟ್ಟ **ಋದ್ಧಾಂ** ಸಮೃದ್ಧವಾದ **ಶ್ರಿಯಂ** ತ್ರೈಲೋಕ್ಯಸಂಪತ್ತನ್ನು **ಬುಭುಜೇ** ಅನುಭವಿಸಿದನು. ।।೩೭।।

ಸತ್ಯ ಃ- ಇವ ಮಹಾಮನಾಃ ಎಂಬ ಶಬ್ದಗಳಿಂದ ಈ ಇಂದ್ರಪದವಿಯು ಹರಿಯ ಕರುಣೆಯಿಂದ ಸಂಪಾದಿತವಾದುದಲ್ಲ. ಆದ್ದರಿಂದ ಅಸ್ಥಿರವಾಗಿದೆ. ಎಂದೂ ಬಲಿಯು ತಿಳಿದಿದ್ದ ಎಂಬುದನ್ನು ಸೂಚಿಸುತ್ತಿದ್ದಾರೆ.

**ಇಲ್ಲಿಗೆ ಹದಿನಾಲ್ಕನೇ ಅಧ್ಯಾಯವು ಮುಗಿಯಿತು.**

★★★

# ಅಥ ಪಂಚದಶೋಽಧ್ಯಾಯಃ

''ಪರಿತ್ರಾಣಾಯ ಸಾಧೂನಾಂ ವಿನಾಶಾಯ ಚ ದುಷ್ಕೃತಾಮ್ । ಧರ್ಮ ಸಂಸ್ಥಾಪಾನಾರ್ಥಾಯ ಸಂಭವಾಮಿ ಯುಗೇ ಯುಗೇ'' ಎಂಬ ತನ್ನ ಮಾತನ್ನು ಸತ್ಯಮಾಡಲು ದೇವತೆಗಳಿಗೆ ಸಂಕಟಬಂದಾಗ ಶ್ರೀಹರಿಯು ವಾಮನಾವತಾರ ಮಾಡಿದನೆಂದು ಹೇಳಲು ಅದಕ್ಕೆ ಉಪಯುಕ್ತವಾದ ಕಥಾವನ್ನು ಹೇಳುವರು.

ಇಲ್ಲಿಯೂ ಮಕ್ಕಳು ಕಾಣದಿರುವಾಗ ವ್ಯಥೆಯಿಂದ ಅದಿತಿಗೆ ಕಶ್ಯಪರು ಮಾಡಿದ ಉಪದೇಶವನ್ನು ಹೇಳುವ ನೆಪದಿಂದ ಭಗವನ್ಮಹಿಮೆಯನ್ನೇ ಹೇಳುವರು. ಮೊದಲಿಗೆ ಇಂದ್ರಾದಿಗಳು ಹೋದ ಮೇಲೆ ಅದಿತಿಯ ಸ್ಥಿತಿಯನ್ನು ಹೇಳುವರು.

**ಶ್ರೀಶುಕ ಉವಾಚ**

**ಏವಂ ಪುತ್ರೇಷು ನಷ್ಟೇಷು ದೇವಮಾತಾಽದಿತಿಸ್ತದಾ ।**
**ಹೃತೇ ತ್ರಿವಿಷ್ಟಪೇ ದೈತ್ಯೈಃ ಪರ್ಯತಪ್ಯದನಾಥವತ್ ॥೧॥**

ಹೇ ರಾಜನೇ **ಏವಂ** ಹಿಂದೆ ಹೇಳಿದಂತೆ **ಪುತ್ರೇಷು** ತನ್ನ ಮಕ್ಕಳಾದ ಇಂದ್ರಾದಿಗಳು **ನಷ್ಟೇಷು ಸತ್ಸು** ಕಾಣದಾಗುತ್ತಿರಲು **ತದಾ** ಆಗ **ದೇವಮಾತಾ ಅದಿತಿಃ** ದೇವತೆಗಳ ತಾಯಿಯಾದ ಅದಿತಿದೇವಿಯು **ದೈತ್ಯೈಃ** ದೈತ್ಯರಿಂದ **ತ್ರಿವಿಷ್ಟಪೇ** ಸ್ವರ್ಗವು **ಹೃತೇ ಸತಿ** ಅಪಹರಿಸಲ್ಪಡುತ್ತಿರಲು **ಅನಾಥವತ್** ರಕ್ಷಕರಿಲ್ಲದವಳಂತೆ **ಪರ್ಯತಪ್ಯತ್** ದುಃಖಪಟ್ಟಳು.

**ಏಕದಾ ಕಶ್ಯಪಸ್ತಸ್ಯಾ ಆಶ್ರಮಂ ಭಗವಾನಗಾತ್ ।**
**ನಿರುತ್ಸವಂ ನಿರಾನಂದಂ ಸಮಾಧೇರ್ವಿರತಶ್ಚಿರಾತ್ ॥೨॥**

**ಏಕದಾ** ಒಂದು ಸಲ (ಕಾಲದಲ್ಲಿ) **ಚಿರಾತ್** ಬಹುಕಾಲದ **ಸಮಾಧೇಃ** ಸತತಧ್ಯಾನದಿಂದ (ಚಿತ್ತೈಕಾಗ್ರ್ಯರೂಪವಾದ ತಪಸ್ಸಿನಿಂದ) **ವಿರತಃ** ಶಾಂತರಾದ ಧ್ಯಾನವನ್ನು ಮುಗಿಸಿದ **ಭಗವಾನ್ ಕಶ್ಯಪಃ** ಪೂಜ್ಯರಾದ ಕಶ್ಯಪಋಷಿಗಳು **ನಿರುತ್ಸವಂ** ಉತ್ಸಾಹವಿಲ್ಲದ

**ನಿರಾನಂದಂ** ಸುಖವಿಲ್ಲದ **ತಸ್ಯಾಃ** ಅದಿತಿಯ **ಆಶ್ರಮಂ** ಆಶ್ರಮವನ್ನು ಕುರಿತು **ಆಗಾತ್** ಬಂದರು. ।।೨।।

**ಸಪತ್ನೀಂ ದೀನವದನಾಂ ಕೃತಾಸನಪರಿಗ್ರಹಃ ।**
**ಸಭಾಜಿತೋ ಯಥಾನ್ಯಾಯಮಿದಮಾಹ ಕುರೂದ್ವಹ ।।೩।।**

**ಹೇ ಕುರೂದ್ವಹ** ಕುರುಕುಲ ಉದ್ಧಾರಕನಾದ ಪರೀಕ್ಷಿತನೇ **ಕೃತಾಸನಪರಿಗ್ರಹಃ** ಆಸನವನ್ನು ಸ್ವೀಕರಿಸಿದ **ಸಃ** ಕಶ್ಯಪರು **ಯಥಾನ್ಯಾಯಂ** ಶಾಸ್ತ್ರವಿಧಿಗೆ ಅನುಸಾರವಾಗಿ **ಸಭಾಜಿತಃ** ಅದಿತಿದೇವಿಯಿಂದ ಸತ್ಕೃತರಾಗಿ **ದೀನವದನಾಂ** ದೈನ್ಯಯುತವಾದ ಮುಖವುಳ್ಳ **ಪತ್ನೀಂ** ಹೆಂಡತಿಯನ್ನು ಕುರಿತು **ಇದಂ ಆಹ** ಮುಂದೆ ಹೇಳುವ ಮಾತುಗಳನ್ನಾಡಿದರು.

**ಅಪ್ಯಭದ್ರಂ ನ ವಿಪ್ರಾಣಾಂ ಭದ್ರೇ ಲೋಕೇಽಧುನಾಽಽಗತಮ್ ।**
**ನ ಧರ್ಮಸ್ಯ ನ ಲೋಕಸ್ಯ ಮೃತ್ಯೋಶ್ಛಂದಾನುವರ್ತಿನಃ ।।೪।।**

**ಹೇ ಭದ್ರೇ** ಮಂಗಳಕರಳಾದ ಅದಿತಿಯೇ **ಅಧುನಾ** ಈಗ **ಲೋಕೇ** ನಮ್ಮ ಲೋಕದಲ್ಲಿ **ವಿಪ್ರಾಣಾಂ** ಆಚಾರಶೀಲರಾದ ಬ್ರಾಹ್ಮಣರಿಗೆ **ಅಭದ್ರಂ** ಅನಿಷ್ಟವು **ನ ಆಗತಂ ಅಪಿ** ಬಂದಿಲ್ಲವಷ್ಟೇ (ಅನಿಷ್ಟವು ಬಂದಿದೆಯೇ ಎಂದು ಅಭಿಪ್ರಾಯ) **ಧರ್ಮಸ್ಯ** ಧರ್ಮಕ್ಕೆ **ಅಭದ್ರಂ** ಹಾನಿಯು **ನ ಆಗತಂ ಅಪಿ** ಬಂದಿಲ್ಲವಷ್ಟೇ? **ಛಂದಾನುವರ್ತಿನಃ** ಸ್ವೇಚ್ಛೆಯಾಗಿ (ಹರಿಯ ಇಚ್ಛೆಯಂತೆ) ಬರುವ **ಮೃತ್ಯೋಃ ಸಕಾಶಾತ್** ಮಾರಕ ದೇವತೆಯಿಂದ **ಲೋಕಸ್ಯ** ಜನರಿಗೆ **ಅಭದ್ರಂ** ಅಕಾಲಮರಣವು **ನ ಆಗತಂ ಅಪಿ** ಬಂದಿಲ್ಲವಲ್ಲವೇ? ।।೪।।

**ಅಪಿ ವಾಽಕುಶಲಂ ಕಿಂ ವಾ ಗೃಹೇಷು ಗೃಹಮೇಧಿನಿ ।**
**ಧರ್ಮಸ್ಯಾರ್ಥಸ್ಯ ಕಾಮಸ್ಯ ಯತ್ರ ಯೋಗೋ ಹ್ಯಯೋಗಿನಾಮ್ ।।೫।।**

**ಹೇ ಗೃಹಮೇಧಿನಿ** ಗೃಹಸ್ಥಾಶ್ರಮೋಪಯುಕ್ತವಾದ ಧರ್ಮಗಳಿಗೆ ಸಾಧಕಳೇ **ಅಯೋಗಿನಾಂ** ಹರಿಧ್ಯಾನರಹಿತರಾದ, ಸಂಸಾರಿಗಳಾದ **ಹಿ** ಯಾವ ಕಾರಣ **ಯತ್ರ** ಯಾವ ಮನೆಗಳಲ್ಲಿ **ಧರ್ಮಸ್ಯ ಅರ್ಥಸ್ಯ ಕಾಮಸ್ಯ** ಧರ್ಮದ ಅರ್ಥದ ಮತ್ತು ಕಾಮದ **ಯೋಗಃ** ಪ್ರಾಪ್ತಿಯು ಆಗುವದೋ **ತತ್ರ ಗೃಹೇಷು** ಆ ಮನೆಗಳಲ್ಲಿ **ಕಿಂ ಅಪಿ ವಾ ಅಕುಶಲಂ** ಯಾವ ದುಃಖವೂ ಬಂದಿಲ್ಲವಲ್ಲವೇ? ಏಕೆ ಹೀಗೆ ಕಾಣುವೆ ಎಂದು ಭಾವ. ।।೫।।

**ಗೃಹಮೇಧಿನಾಂ** ಎಂಬ ಪಾಠದಲ್ಲಿ ಗೃಹಸ್ಥಾಶ್ರಮಿಗಳಿಗೆ ಎಂದು ಅರ್ಥ ತಿಳಿಯಬೇಕು.

**ಅಪಿ ವಾಽತಿಥಯೋಽಭ್ಯೇತ್ಯ ಕುಟುಂಬಾಸಕ್ತಯಾ ತ್ವಯಾ ।**
**ಗೃಹಾದಪೂಜಿತಾ ಯಾತಾಃ ಪ್ರತ್ಯುತ್ಥಾನೇನ ವಾ ಕ್ವಚಿತ್ ।।೬।।**

**ವಾ** ಅಥವಾ **ಕ್ವಚಿತ್** ಎಂದಾದರೂ **ಅತಿಥಯಃ** ದೇಹಸಂಬಂಧಿಗಳೂ, ಸ್ವಗ್ರಾಮದವರೂ, ಉಪಕಾರ ಮಾಡಿದವರೂ ಅಲ್ಲದ ತತ್ಕಾಲಕ್ಕೆ ಬಂದ ಹೊಸಬರಾದ ಅನ್ನಾಪೇಕ್ಷಿಗಳಾದ ಅತಿಥಿಗಳು **ಅಭ್ಯೇತ್ಯ** ನಿನ್ನ ಮನೆಗೆ ಬಂದು **ಕುಟುಂಬಾಸಕ್ತಯಾ** ಗೃಹಕಾರ್ಯಗಳಲ್ಲಿ ನಿರತಳಾದ (ಮಕ್ಕಳ ಪಾಲನ ಪೋಷಣದಲ್ಲಿ ತೊಡಗಿದ) **ತ್ವಯಾ** ನಿನ್ನಿಂದ **ಪ್ರತ್ಯುತ್ಥಾನೇನ ವಾ** ಎದುರಿಗೆ ಎದ್ದು ಹೋಗುವದರಿಂದಲೂ **ಅಪೂಜಿತಾಃ ಸಂತಃ** ಸತ್ಕೃತರಾಗದೇ **ಗೃಹಾತ್** ನಿನ್ನ ಮನೆಯಿಂದ **ಯಾತಾಃ ಅಪಿ** ಅಸಂತುಷ್ಟರಾಗಿ ಹಿಂತಿರುಗಿದರೇ? ಅನಂತರ ಅದನ್ನು ಮನಸ್ಸಿಗೆ ತಂದುಕೊಂಡು ಹೀಗಾಗಿರುವೆಯಾ ಎಂದು ಭಾವ. ।।೬।।

ಹಾಗೆ ಹೋದರೇನು ದೋಷ. ಏಕೆ ಹೀಗೆ ಮಾತಾಡುವಿರಿ ಎಂದರೆ ಹೇಳುವರು.

**ಗೃಹೇಷು ಯೇಷ್ವತಿಥಯೋ ನಾರ್ಚಿತಾಃ ಸಲಿಲೈರಪಿ ।**
**ಯದಿ ನಿರ್ಯಾಂತಿ ತೇ ನೂನಂ ಪ್ರೇತರಾಜಗೃಹೋಪಮಾಃ ।।೭।।**

**ಅತಿಥಯಃ** ಅತಿಥಿಗಳು **ಯೇಷು ಗೃಹೇಷು** ಯಾವ ಮನೆಗಳಲ್ಲಿ **ಸಲಿಲೈಃ ಅಪಿ** ಸಾಕಷ್ಟು ಸಂಪತ್ತಿಲ್ಲದಿದ್ದಲ್ಲಿ ನೀರಿನಿಂದಾದರೂ **ನ ಅರ್ಚಿತಾಃ** ಪೂಜಿತರಾಗದೇ **ಯದಿ** ಯಾವಾಗ **ನಿರ್ಯಾಂತಿ** ಅಸಂತುಷ್ಟರಾಗಿ ಹೋಗುವರೋ **ತದಾ** ಆಗ **ತೇ** ಆ ಮನೆಗಳು **ನೂನಂ** ನಿಶ್ಚಯವಾಗಿ **ಪ್ರೇತರಾಜಗೃಹೋಪಮಾಃ** ಯಮನ ಮನೆಯಾದ ಸ್ಮಶಾನ ಸಮಾನಗಳಾಗುವವು.

''ಗೃಹಾಃ ಪುಂಸಿ ಚ ಭೂಮ್ನ್ಯೇವ'' ಎಂದು ಬಹುವಚನದಲ್ಲಿ ಪುಲ್ಲಿಂಗ ಹೇಳಿರುವದರಿಂದ ತೇ ಎಂಬ ಪುಲ್ಲಿಂಗದಿಂದ ಗೃಹಪರಾಮರ್ಶ ಮಾಡಬಹುದು. ।।೭।।

**ಅಥಾಗ್ನಯಸ್ತು ವೇಲಾಯಂ ನ ಹುತಾ ಹವಿಷಾ ಸತಿ ।**
**ತ್ವಯೋದ್ವಿಗ್ನಧಿಯಾ ಭದ್ರೇ ಪ್ರೋಷಿತೇ ಮಯಿ ಕರ್ಹಿಚಿತ್ ।।೮।।**

**ಅಥ** ಅಥವಾ **ಹೇ ಭದ್ರೇ** ಮಂಗಳಕರಳೇ **ಸತಿ** ಪತಿವ್ರತೆಯೇ **ಕರ್ಹಿಚಿತ್** ಯಾವಗಲಾದರೂ **ಮಯಿ** ನಾನು **ಪ್ರೋಷಿತೇ ಸತಿ** ಪ್ರವಾಸಕ್ಕೆ ಹೋಗಿರಲು **ಉದ್ವಿಗ್ನಧಿಯಾ** ಉದ್ವೇಗಗೊಂಡ ಬುದ್ಧಿಯುಳ್ಳ **ತ್ವಯಾ** ನಿನ್ನಿಂದ **ಅಗ್ನಯಃ** ಗಾರ್ಹಪತ್ಯ-ಆಹವನೀಯ-ದಕ್ಷಿಣಾಗ್ನಿಗಳು **ವೇಲಾಯಾಂ** ಆಯಾ ಕಾಲದಲ್ಲಿ **ಹವಿಷಾ** ಹಾಲು ಮೊದಲಾದ ಹವಿರ್ದ್ರವ್ಯಗಳಿಂದ **ನ ಹುತಾಃ** ಹೋಮಿಸಲ್ಪಡಲಿಲ್ಲವೇ? ।।೮।।

**ಯತಿಪೂಜಯಾ ಕಾಮದುಘಾನ್ ಯಾಂತಿ ಲೋಕಾನ್ ಗೃಹಾನ್ವಿತಾಃ ।**
**ಬ್ರಾಹ್ಮಣೋಽಗ್ನಿಶ್ಚ ವೈ ವಿಷ್ಣೋಃ ಸರ್ವದೇವಾತ್ಮನೋ ಮುಖಮ್ ।।೯।।**

**ನಿರಾನಂದಂ** ಸುಖವಿಲ್ಲದ **ತಸ್ಯಾಃ** ಅದಿತಿಯ **ಆಶ್ರಮಂ** ಆಶ್ರಮವನ್ನು ಕುರಿತು **ಆಗಾತ್** ಬಂದರು. ।।೨।।

**ಸಪತ್ನೀಂ ದೀನವದನಾಂ ಕೃತಾಸನಪರಿಗ್ರಹಃ ।**
**ಸಭಾಜಿತೋ ಯಥಾನ್ಯಾಯಮಿದಮಾಹ ಕುರೂದ್ವಹ ।।೩।।**

**ಹೇ ಕುರೂದ್ವಹ** ಕುರುಕುಲ ಉದ್ಧಾರಕನಾದ ಪರೀಕ್ಷಿತನೇ **ಕೃತಾಸನಪರಿಗ್ರಹಃ** ಆಸನವನ್ನು ಸ್ವೀಕರಿಸಿದ **ಸಃ** ಕಶ್ಯಪರು **ಯಥಾನ್ಯಾಯಂ** ಶಾಸ್ತ್ರವಿಧಿಗೆ ಅನುಸಾರವಾಗಿ **ಸಭಾಜಿತಃ** ಅದಿತಿದೇವಿಯಿಂದ ಸತ್ಕೃತರಾಗಿ **ದೀನವದನಾಂ** ದೈನ್ಯಯುತವಾದ ಮುಖವುಳ್ಳ **ಪತ್ನೀಂ** ಹೆಂಡತಿಯನ್ನು ಕುರಿತು **ಇದಂ ಆಹ** ಮುಂದೆ ಹೇಳುವ ಮಾತುಗಳನ್ನಾಡಿದರು.

**ಅಪ್ಯಭದ್ರಂ ನ ವಿಪ್ರಾಣಾಂ ಭದ್ರೇ ಲೋಕೇಽಧುನಾಽಽಗತಮ್ ।**
**ನ ಧರ್ಮಸ್ಯ ನ ಲೋಕಸ್ಯ ಮೃತ್ಯೋಶ್ಛಂದಾನುವರ್ತಿನಃ ।।೪।।**

**ಹೇ ಭದ್ರೇ** ಮಂಗಳಕರಳಾದ ಅದಿತಿಯೇ **ಅಧುನಾ** ಈಗ **ಲೋಕೇ** ನಮ್ಮ ಲೋಕದಲ್ಲಿ **ವಿಪ್ರಾಣಾಂ** ಆಚಾರಶೀಲರಾದ ಬ್ರಾಹ್ಮಣರಿಗೆ **ಅಭದ್ರಂ** ಅನಿಷ್ಟವು **ನ ಆಗತಂ ಅಪಿ** ಬಂದಿಲ್ಲವಷ್ಟೇ (ಅನಿಷ್ಟವು ಬಂದಿದೆಯೇ ಎಂದು ಅಭಿಪ್ರಾಯ) **ಧರ್ಮಸ್ಯ** ಧರ್ಮಕ್ಕೆ **ಅಭದ್ರಂ** ಹಾನಿಯು **ನ ಆಗತಂ ಅಪಿ** ಬಂದಿಲ್ಲವಷ್ಟೇ? **ಛಂದಾನುವರ್ತಿನಃ** ಸ್ವೇಚ್ಛೆಯಾಗಿ (ಹರಿಯ ಇಚ್ಛೆಯಂತೆ) ಬರುವ **ಮೃತ್ಯೋಃ ಸಕಾಶಾತ್** ಮಾರಕ ದೇವತೆಯಿಂದ **ಲೋಕಸ್ಯ** ಜನರಿಗೆ **ಅಭದ್ರಂ** ಅಕಾಲಮರಣವು **ನ ಆಗತಂ ಅಪಿ** ಬಂದಿಲ್ಲವಲ್ಲವೇ? ।।೪।।

**ಅಪಿ ವಾಽಕುಶಲಂ ಕಿಂ ವಾ ಗೃಹೇಷು ಗೃಹಮೇಧಿನಿ ।**
**ಧರ್ಮಸ್ಯಾರ್ಥಸ್ಯ ಕಾಮಸ್ಯ ಯತ್ರ ಯೋಗೋ ಹ್ಯಯೋಗಿನಾಮ್ ।।೫।।**

**ಹೇ ಗೃಹಮೇಧಿನಿ** ಗೃಹಸ್ಥಾಶ್ರಮೋಪಯುಕ್ತವಾದ ಧರ್ಮಗಳಿಗೆ ಸಾಧಕಳೇ **ಅಯೋಗಿನಾಂ** ಹರಿಧ್ಯಾನರಹಿತರಾದ, ಸಂಸಾರಿಗಳಾದ **ಹಿ** ಯಾವ ಕಾರಣ **ಯತ್ರ** ಯಾವ ಮನೆಗಳಲ್ಲಿ **ಧರ್ಮಸ್ಯ ಅರ್ಥಸ್ಯ ಕಾಮಸ್ಯ** ಧರ್ಮದ ಅರ್ಥದ ಮತ್ತು ಕಾಮದ **ಯೋಗಃ** ಪ್ರಾಪ್ತಿಯು ಆಗುವದೋ **ತತ್ರ ಗೃಹೇಷು** ಆ ಮನೆಗಳಲ್ಲಿ **ಕಿಂ ಅಪಿ ವಾ ಅಕುಶಲಂ** ಯಾವ ದುಃಖವೂ ಬಂದಿಲ್ಲವಲ್ಲವೇ? ಏಕೆ ಹೀಗೆ ಕಾಣುವೆ ಎಂದು ಭಾವ. ।।೫।।

**ಗೃಹಮೇಧಿನಾಂ** ಎಂಬ ಪಾಠದಲ್ಲಿ ಗೃಹಸ್ಥಾಶ್ರಮಿಗಳಿಗೆ ಎಂದು ಅರ್ಥ ತಿಳಿಯಬೇಕು.

**ಅಪಿ ವಾಽತಿಥಯೋಽಭ್ಯೇತ್ಯ ಕುಟುಂಬಾಸಕ್ತಯಾ ತ್ವಯಾ ।**
**ಗೃಹಾದಪೂಜಿತಾ ಯಾತಾಃ ಪ್ರತ್ಯುತ್ಥಾನೇನ ವಾ ಕ್ವಚಿತ್ ।।೬।।**

**ವಾ** ಅಥವಾ **ಕ್ವಚಿತ್** ಎಂದಾದರೂ **ಅತಿಥಯಃ** ದೇಹಸಂಬಂಧಿಗಳೂ, ಸ್ವಗ್ರಾಮದವರೂ, ಉಪಕಾರ ಮಾಡಿದವರೂ ಅಲ್ಲದ ತತ್ಕಾಲಕ್ಕೆ ಬಂದ ಹೊಸಬರಾದ ಅನ್ನಾಪೇಕ್ಷಿಗಳಾದ ಅತಿಥಿಗಳು **ಅಭ್ಯೇತ್ಯ** ನಿನ್ನ ಮನೆಗೆ ಬಂದು **ಕುಟುಂಬಾಸಕ್ತಯಾ** ಗೃಹಕಾರ್ಯಗಳಲ್ಲಿ ನಿರತಳಾದ (ಮಕ್ಕಳ ಪಾಲನ ಪೋಷಣದಲ್ಲಿ ತೊಡಗಿದ) **ತ್ವಯಾ** ನಿನ್ನಿಂದ **ಪ್ರತ್ಯುತ್ಥಾನೇನ ವಾ** ಎದುರಿಗೆ ಎದ್ದು ಹೋಗುವದರಿಂದಲೂ **ಅಪೂಜಿತಾಃ ಸಂತಃ** ಸತ್ಕೃತರಾಗದೇ **ಗೃಹಾತ್** ನಿನ್ನ ಮನೆಯಿಂದ **ಯಾತಾಃ ಅಪಿ** ಅಸಂತುಷ್ಟರಾಗಿ ಹಿಂತಿರುಗಿದರೇ? ಅನಂತರ ಅದನ್ನು ಮನಸ್ಸಿಗೆ ತಂದುಕೊಂಡು ಹೀಗಾಗಿರುವೆಯಾ ಎಂದು ಭಾವ. ।।೬।।

ಹಾಗೆ ಹೋದರೇನು ದೋಷ. ಏಕೆ ಹೀಗೆ ಮಾತಾಡುವಿರಿ ಎಂದರೆ ಹೇಳುವರು.

**ಗೃಹೇಷು ಯೇಷ್ವತಿಥಯೋ ನಾರ್ಚಿತಾಃ ಸಲಿಲೈರಪಿ ।**
**ಯದಿ ನಿರ್ಯಾಂತಿ ತೇ ನೂನಂ ಪ್ರೇತರಾಜಗೃಹೋಪಮಾಃ ।।೭।।**

**ಅತಿಥಯಃ** ಅತಿಥಿಗಳು **ಯೇಷು ಗೃಹೇಷು** ಯಾವ ಮನೆಗಳಲ್ಲಿ **ಸಲಿಲೈಃ ಅಪಿ** ಸಾಕಷ್ಟು ಸಂಪತ್ತಿಲ್ಲದಿದ್ದಲ್ಲಿ ನೀರಿನಿಂದಾದರೂ **ನ ಅರ್ಚಿತಾಃ** ಪೂಜಿತರಾಗದೇ **ಯದಿ** ಯಾವಾಗ **ನಿರ್ಯಾಂತಿ** ಅಸಂತುಷ್ಟರಾಗಿ ಹೋಗುವರೋ **ತದಾ** ಆಗ **ತೇ** ಆ ಮನೆಗಳು **ನೂನಂ** ನಿಶ್ಚಯವಾಗಿ **ಪ್ರೇತರಾಜಗೃಹೋಪಮಾಃ** ಯಮನ ಮನೆಯಾದ ಸ್ಮಶಾನ ಸಮಾನಗಳಾಗುವವು.

''ಗೃಹಾಃ ಪುಂಸಿ ಚ ಭೂಮ್ನ್ಯೇವ'' ಎಂದು ಬಹುವಚನದಲ್ಲಿ ಪುಲ್ಲಿಂಗ ಹೇಳಿರುವದರಿಂದ ತೇ ಎಂಬ ಪುಲ್ಲಿಂಗದಿಂದ ಗೃಹಪರಾಮರ್ಶ ಮಾಡಬಹುದು. ।।೭।।

**ಅಥಾಗ್ನಯಸ್ತು ವೇಲಾಯಂ ನ ಹುತಾ ಹವಿಷಾ ಸತಿ ।**
**ತ್ವಯೋದ್ವಿಗ್ನಧಿಯಾ ಭದ್ರೇ ಪ್ರೋಷಿತೇ ಮಯಿ ಕರ್ಹಿಚಿತ್ ।।೮।।**

**ಅಥ** ಅಥವಾ **ಹೇ ಭದ್ರೇ** ಮಂಗಳಕರಳೇ **ಸತಿ** ಪತಿವ್ರತೆಯೇ **ಕರ್ಹಿಚಿತ್** ಯಾವಗಲಾದರೂ **ಮಯಿ** ನಾನು **ಪ್ರೋಷಿತೇ ಸತಿ** ಪ್ರವಾಸಕ್ಕೆ ಹೋಗಿರಲು **ಉದ್ವಿಗ್ನಧಿಯಾ** ಉದ್ವೇಗಗೊಂಡ ಬುದ್ಧಿಯುಳ್ಳ **ತ್ವಯಾ** ನಿನ್ನಿಂದ **ಅಗ್ನಯಃ** ಗಾರ್ಹಪತ್ಯ-ಆಹವನೀಯ-ದಕ್ಷಿಣಾಗ್ನಿಗಳು **ವೇಲಾಯಾಂ** ಆಯಾ ಕಾಲದಲ್ಲಿ **ಹವಿಷಾ** ಹಾಲು ಮೊದಲಾದ ಹವಿರ್ದ್ರವ್ಯಗಳಿಂದ **ನ ಹುತಾಃ** ಹೋಮಿಸಲ್ಪಡಲಿಲ್ಲವೇ? ।।೮।।

**ಯತಿಪೂಜಯಾ ಕಾಮದುಘಾನ್ ಯಾಂತಿ ಲೋಕಾನ್ ಗೃಹಾನ್ವಿತಾಃ ।**
**ಬ್ರಾಹ್ಮಣೋಽಗ್ನಿಶ್ಚ ವೈ ವಿಷ್ಣೋಃ ಸರ್ವದೇವಾತ್ಮನೋ ಮುಖಮ್ ।।೯।।**

**ಗೃಹಾನ್ವಿತಾಃ** ಗೃಹಸ್ಥರು **ಯತ್ಪೂಜಯಾ** ಯಾವ ಬ್ರಾಹ್ಮಣರ ಮತ್ತು ಅಗ್ನಿಗಳ ಪೂಜೆಯಿಂದ **ಕಾಮದುಘಾನ್** ಅಭೀಷ್ಟವನ್ನು ಕೊಡುವ **ಲೋಕಾನ್** ಸ್ವರ್ಗಾದಿಲೋಕಗಳನ್ನು **ಯಾಂತಿ** ಹೊಂದುವರು. ಆ ಬ್ರಾಹ್ಮಣರು ಅಗ್ನಿಯೂ **ಸರ್ವದೇವಾತ್ಮನಃ ಚ** ಲಕ್ಷ್ಮೀ-ಬ್ರಹ್ಮಾದಿ ಎಲ್ಲ ದೇವತೆಗಳಿಗೂ ಸ್ವಾಮಿಯಾದ ಅಂತರ್ಯಾಮಿಯಾದ **ವಿಷ್ಣೋಃ** ಶ್ರೀಹರಿಯ **ಮುಖಂ** ಮುಖಸ್ಥಾನೀಯರಾಗಿದ್ದಾರೆ. **ವೈ** ಇದು ''ಸ್ವರ್ಗಕಾಮೋ ಯಜೇತ'' ಮುಂತಾದ ಶ್ರುತಿಸಿದ್ಧವು. ಆದ್ದರಿಂದ ಪೂಜ್ಯರು ಎಂದರ್ಥ. ||೯||

ಎಲ್ಲ ಗೋತ್ತಿದ್ದರೂ ಲೌಕಿಕರೀತಿಯನ್ನು ಅನುಸರಿಸಿ ಕೊನೆಯದಾಗಿ ಅವಳ ಮನಃಸ್ಥಿತಿಯನ್ನು ಪ್ರಶ್ನಿಸುವರು.

**ಅಪಿ ಸರ್ವೇ ಕುಶಲಿನಸ್ತವ ಪುತ್ರಾ ಮನಸ್ವಿನಿ ।**
**ಲಕ್ಷಯೇಽಸ್ವಸ್ಥಮಾತ್ಮಾನಂ ಭವತ್ಯಾ ಲಕ್ಷಣೈರಹಮ್ ||೧೦||**

**ಹೇ ಮನಸ್ವಿನಿ** ಪ್ರಶಸ್ತಮನಸ್ಸುಳ್ಳ ಅದಿತಿಯೇ **ಸರ್ವೇ** ಎಲ್ಲ **ತವ ಪುತ್ರಾಃ** ಇಂದ್ರ ಮೊದಲಾದ ನಿನ್ನ ಮಕ್ಕಳು **ಅಪಿ ಕುಶಲಿನಃ** ಕ್ಷೇಮದಿಂದ ಇರುವರೇ? **ಅಹಂ** ನಾನು **ಭವತ್ಯಾಃ** ನಿನ್ನ **ಲಕ್ಷಣೈಃ** ಮುಖ ಬಾಡಿರುವದೇ ಮೊದಲಾದ ಚಿಹ್ನೆಗಳಿಂದ **ಆತ್ಮಾನಂ** ನಿನ್ನನ್ನು ನಿನ್ನ ಮನಸ್ಸನ್ನು **ಅಸ್ವಸ್ಥಂ** ಚಂಚಲವಾದುದನ್ನಾಗಿ **ಲಕ್ಷಯೇ** ಊಹಿಸುತ್ತೇನೆ. ||೧೦||

''ಕುಶಲಂ ಕ್ಷೇಮಮಸ್ತ್ರಿಯಾಮ್'' ''ಆತ್ಮಾ ಜೀವೇ ಧೃತೌ ಚಿತ್ತೇ ದೇಹೇ ಚ ಪರಮಾತ್ಮನಿ'' ಎಂದು ನಾನಾರ್ಥಮುಕ್ತಿಮಾಲಾ. ''ಚಿಹ್ನಂ ಲಕ್ಷ್ಮ ಚ ಲಕ್ಷಣಮ್'' ಎಂದು ಅಮರ.

**ಅದಿತಿರುವಾಚ**

**ಭದ್ರಂ ದ್ವಿಜಗವಾಂ ಬ್ರಹ್ಮನ್ ಧರ್ಮಸ್ಯಾಸ್ಯ ಜನಸ್ಯ ಚ ।**
**ತ್ರಿವರ್ಗಸ್ಯ ಪರಂ ಕ್ಷೇತ್ರಂ ಗೃಹಮೇಧಿನ್ ಗೃಹಾ ಇಮೇ ||೧೧||**

**ಹೇ ಬ್ರಹ್ಮನ್** ಬ್ರಹ್ಮಜ್ಞಾನಿಗಳೇ **ದ್ವಿಜಗವಾಂ** ಬ್ರಾಹ್ಮಣರಿಗೂ ಗೋವುಗಳಿಗೂ **ಧರ್ಮಸ್ಯ** ಧರ್ಮಕ್ಕೂ ಮತ್ತು **ಅಸ್ಯ ಜನಸ್ಯ** ಈ ಜನಕ್ಕೂ (ನನಗೂ) **ಭದ್ರಂ** ಮಂಗಳವು ಕ್ಷೇಮವು. **ಗೃಹಮೇಧಿನ್** ಗೃಹಸ್ಥಾಶ್ರಮೋಚಿತವಾದ ಕರ್ಮಗಳನ್ನು ಮಾಡುವ ಸಮರ್ಥರೇ ! ಈ ಮನೆಗೆ ಯಜಮಾನರೇ ! **ಇಮೇ ಗೃಹಾಃ** ಈ ನಿಮ್ಮ ಮನೆಯು **ತ್ರಿವರ್ಗಸ್ಯ** ಧರ್ಮಾರ್ಥಕಾಮಗಳನ್ನು ಸಂಪಾದಿಸುವದಕ್ಕೆ **ಪರಂ** ಉತ್ತಮವಾದ **ಕ್ಷೇತ್ರಂ** ಉತ್ಪಾದಕ ಭೂಮಿಯಾಗಿದೆ. ||೧೧||

**ಅಗ್ನಯೋಽತಿಥಯೋ ಭೃತ್ಯಾ ಭಿಕ್ಷವೋ ಯೇ ಚ ಲಿಪ್ಸವಃ ।**
**ಸರ್ವಂ ಭಗವತೋ ಬ್ರಹ್ಮನ್ನನುಧ್ಯಾನಾನ್ನ ರಿಷ್ಯತಿ ||೧೨||**

**ಅಗ್ನಯಃ** ಅಗ್ನಿಗಳು **ಅತಿಥಯಃ** ಅತಿಥಿಗಳು **ಭೃತ್ಯಾಃ** ಸೇವಕರು **ಭಿಕ್ಷವಃ** ಸನ್ಯಾಸಿಗಳು **ಚ** ಮತ್ತು **ಯೇ ಲಿಪ್ಸವಃ** ಫಲಾಪೇಕ್ಷಿಗಳಾರೋ **ಸರ್ವೇ** ಇವರೆಲ್ಲರೂ **ಹೇ ಬ್ರಹ್ಮನ್** ಕಶ್ಯಪರೇ **ಭಗವತಃ ಚ** ಪೂಜ್ಯರಾದ ತಮ್ಮ **ಅನುಧ್ಯಾನಾತ್** ನಿಮ್ಮ ಸ್ಮರಣರೂಪವಾದ ಸೇವೆಯಿಂದ **ನ ರಿಷ್ಯತಿ** ಯಾವುದಕ್ಕೂ ಕಡಿಮೆಯಿಲ್ಲ. ॥೧೨॥

**ಕೊ ನು ಮೇ ಭಗವನ್ ಕಾಮೋ ನ ಸಂಪದ್ಯೇತ ಮಾನಸಃ ।**
**ಯಸ್ಯಾ ಭವಾನ್ ಪ್ರಜಾಧ್ಯಕ್ಷ ಏವಂ ಧರ್ಮಾನ್ ಪ್ರಭಾಷತೇ ॥೧೩॥**

**ಹೇ ಭಗವನ್** ಪೂಜ್ಯರೇ **ಯಸ್ಯಾಃ ಮೇ** ಯಾವ ನನಗೆ **ಭವಾನ್** ತಾವು **ಪ್ರಜಾಧ್ಯಕ್ಷಃ** ಸಂತಾನ ನೀಡಿದ ಪತಿಗಳು, ಮಕ್ಕಳ ಕ್ಷೇಮ-ಅಕ್ಷೇಮಗಳನ್ನು ಸಾಕ್ಷಿಯಂತೆ ಕಾಣುತ್ತಿರುವರು. **ಏವಂ** ಮೇಲೆ ಹೇಳಿದಂತೆ **ಧರ್ಮಾನ್** ಗೃಹಸ್ಥಧರ್ಮಗಳನ್ನು **ಪ್ರಭಾಷತೇ** ಉಪದೇಶಿಸುತ್ತಿರುವಿರಿ. ಆ ಕಾರಣದಿಂದ **ಮೇ** ನನ್ನ **ಮಾನಸಃ** ಮನಸ್ಸಿನಲ್ಲಿ ಮಾಡಿದ **ಕಾಮಃ** ಇಚ್ಛೆಯು **ಕಃ ನು** ಯಾವುದು ತಾನೇ **ನ ಸಂಪದ್ಯೇತ ಚ** ನೆರವೇರುವದಿಲ್ಲ. ಎಲ್ಲವೂ ನೆರವೇರುತ್ತವೆ ಎಂದರ್ಥ. ॥೧೩॥

ಹೀಗೆ ಪತಿಯನ್ನು ಸಮಾಧಾನ ಪಡಿಸಿದ್ದರೂ ತನ್ನ ಮನಸ್ಸಿನ ಉದ್ವೇಗಕ್ಕೆ ಕಾರಣವನ್ನು ಶ್ರೀಹರಿಯೇ ಹೋಗಲಾಡಿಸಲು ಸಮರ್ಥನು. ಆದರೂ ಅದನ್ನು ತಮಗೆ ತಿಳಿಸುತ್ತೇನೆ ಎಂದು ಅದಿತಿಯು ಹೇಳುತ್ತಾಳೆ.

**ತವೈವ ಮಾರೀಚ ಮನಃಶರೀರಜಾಃ**
**ಪ್ರಜಾ ಇಮಾಃ ಸತ್ವರಜಸ್ತಮೋಜುಷಃ ।**
**ಮನೋರಥಂ ತಾಸು ಸುರಾದಿಷು ಪ್ರಭೋ**
**ಯಥಾವಿಭಾಗಂ ಭಜತೇ ಮಹೇಶ್ವರಃ ॥೧೪॥**

**ಹೇ ಮಾರೀಚ** ಮರೀಚಿಪುತ್ರರಾದ ಕಶ್ಯಪರೇ **ಇಮಾಃ** ಈ **ಸತ್ವರಜಸ್ತಮೋಜುಷಃ** ಸತ್ವ-ರಜಸ್ಸು-ತಮೋಗುಣಗಳನ್ನು ಹೊಂದಿರುವ ದೇವ-ಮಾನವ-ದಾನವರೆಂಬ **ಪ್ರಜಾಃ** ಪ್ರಜೆಗಳು **ತವ** ನಿಮ್ಮ **ಮನಃಶರೀರಜಾಃ ಏವ** ಮನಃಪೂರ್ವಕ ಶರೀರದಿಂದ ಹುಟ್ಟಿದವರು ಅಥವಾ ಕೆಲವರು ಮನಸ್ಸಿನಿಂದ ಕೆಲವರು ದೇಹದಿಂದ ಹುಟ್ಟಿದವರು **ಹೇ ಪ್ರಭೋ** ಇಷ್ಟಾರ್ಥ ಕೊಡಲು ಸಮರ್ಥರೇ **ತಾಸು** ಸತ್ವಾದಿಗುಣವುಳ್ಳ **ಸುರಾದಿಷು** ದೇವ-ಮಾನವ-ದಾನವರಲ್ಲಿ **ಮನೋರಥಂ** ಅವರವರ ಇಷ್ಟವನ್ನು **ಮಹೇಶ್ವರಃ** ಸರ್ವೋತ್ತಮನಾದ ಶ್ರೀಹರಿಯು **ಯಥಾವಿಭಾಗಂ** ಸತ್ವಾದಿಗುಣೋನ್ನಾಹಕ್ಕೆ ತಕ್ಕಂತೆ ಅವರವರಿಗೆ ಯಾವ ಯಾವ ಕಾಲದಲ್ಲಿ ಏನೇನು ಆಗಬೇಕೆಂದು ತನ್ನ ಸಂಕಲ್ಪವಿದೆಯೋ ಅದಕ್ಕೆ ತಕ್ಕಂತೆ ಅವರವರ ಯೋಗ್ಯತೆಗೆ ಮೀರದಂತೆ **ಭಜತೇ** ಕೊಡುವನು. ॥೧೪॥

ಈಗ ದೈತ್ಯರ ಉನ್ನಾಹಕಾಲವಾದುದರಿಂದ ಶ್ರೀಹರಿಯು ಅವರ ಇಷ್ಟವನ್ನು ನೆರವೇರಿಸುತ್ತಿದ್ದಾನೆ ಎಂದು ಅದಿತಿಯ ಭಾವ. ||೧೪||

**ತಸ್ಮಾದಂಶಂ ಭಜಂತ್ಯಾ ಮೇ ಶ್ರೇಯಶ್ಚಿಂತಯ ಸುವ್ರತ |**
**ಹೃತಶ್ರಿಯೋ ಹೃತಸ್ಥಾನಾಃ ಸಪತ್ನೈಃ ಪಾಹಿ ನಃ ಪ್ರಭೋ ||೧೫||**

**ಹೇ ಸುವ್ರತ** ಶ್ರೀಹರಿಪ್ರೀತಿಕರವಾದ ವ್ರತ ಉಳ್ಳ ಪತಿದೇವರೇ **ತಸ್ಮಾತ್** ನಿನ್ನ ಪತ್ನಿಯಾದ ನನಗೆ ಯಾವುದಕ್ಕೂ ಕಡಿಮೆ ಇಲ್ಲವಾದ್ದರಿಂದ **ಅಂಶಂ** ದೇವತಾಭಾಗವನ್ನು ನಿನ್ನ ಸಂಪಾದನೆಯ ಒಂದು ಭಾಗವನ್ನು ನಿನ್ನ ದೇಹಾರ್ಧವನ್ನು (ಸುಕೃತಾಂಶದಾಯಂ ವಾ) **ಭಜಂತ್ಯಾಃ** ಅನುಭವಿಸಲು ಯೋಗ್ಯಳಾದ **ಮೇ** ನನ್ನ **ಶ್ರೇಯಃ ಚ** ಮೋಕ್ಷೋಪಾಯವನ್ನು **ಚಿಂತಯ** ಆಲೋಚಿಸಿರಿ **ಹೇ ಪ್ರಭೋ** ಆಪತ್ತನ್ನು ಪರಿಹರಿಸುವ ಸಾಮರ್ಥ್ಯವುಳ್ಳವರೇ **ಸಪತ್ನೈಃ** ಸವತಿಯ ಮಕ್ಕಳಿಂದ (ದೈತ್ಯರಿಂದ) **ಹೃತಶ್ರಿಯಃ** ಅಪಹಾರ ಮಾಡಿದ ಸಂಪತ್ತುಳ್ಳ **ಹೃತಸ್ಥಾನಾಃ** ಆಕ್ರಮಿಸಲ್ಪಟ್ಟ ಸ್ವರ್ಗಾದಿ ಸ್ಥಾನವುಳ್ಳ **ನಃ** ಇಂದ್ರಾದಿ ನನ್ನ ಮಕ್ಕಳನ್ನು **ಪಾಹಿ** ರಕ್ಷಿಸರಿ ಮತ್ತು ಅವರು ಸಂಪತ್ತನ್ನು ಸ್ವರ್ಗಾದಿಸ್ಥಾನವನ್ನು ಹೊಂದುವಂತೆ ಮಾಡಿರಿ ಎಂದು ಭಾವ. ||೧೫||

ಮನವನ್ನು ಒಲಿಸಲು ಮತ್ತೆ ಹೇಳಿದ್ದನ್ನೇ ಹೇಳುತ್ತಾಳೆ.

**ಪರೈರ್ವಿವಾಸಿತಾ ಸಾಽಹಂ ಮಗ್ನಾ ವ್ಯಸನಸಾಗರೇ |**
**ಐಶ್ವರ್ಯಂ ಶ್ರೀರ್ಯಶಸ್ಥಾನಂ ಹೃತಾನಿ ಪ್ರಬಲೈರ್ಮಮ ||೧೬||**

**ಪರೈಃ** ಶತ್ರುಗಳಿಂದ **ವಿವಾಸಿತಾ** ಸ್ಥಾನದಿಂದ ಹೊರಹಾಕಲ್ಪಟ್ಟ **ಸಾ ಅಹಂ** ಆ ನಾನು **ವ್ಯಸನಸಾಗರೇ** ದುಃಖಸಮುದ್ರದಲ್ಲಿ **ಮಗ್ನಾ** ಮುಳಿಗಿರುವೆನು **ಪ್ರಬಲೈಃ** ಶ್ರೀಹರಿಯ ಇಚ್ಛೆಯಿಂದ ತತ್ಕಾಲದಲ್ಲಿ ಬಲಿಷ್ಠರಾದ ದೈತ್ಯರಿಂದ **ಮಮ** ನನ್ನ ಮಕ್ಕಳ **ಐಶ್ವರ್ಯಂ** ಅಧಿಕಾರ **ಶ್ರೀಃ** ಸಂಪತ್ತು **ಯಶಃ** ಕೀರ್ತಿಯು **ಸ್ಥಾನಂ** ಸ್ಥಾನವೂ **ಹೃತಾನಿ** ಅಪಹರಿಸಲ್ಪಟ್ಟಿವೆ.

**ಯಥಾ ತಾನಿ ಪುನಃ ಸಾಧೋ ಪ್ರಪದ್ಯೇರನ್ ಮಮಾತ್ಮಜಾಃ |**
**ತಥಾ ವಿಧೇಹಿ ಕಲ್ಯಾಣಂ ಧಿಯಾ ಕಲ್ಯಾಣಕೃತ್ತಮ ||೧೭||**

**ಸಾಧೋ** ಭಗವಂತನ ಭಕ್ತರೇ **ಕಲ್ಯಾಣಕೃತ್ತಮ** ನಮಗೆ ಕಲ್ಯಾಣ ಮಾಡುವವರಲ್ಲಿ ಶ್ರೇಷ್ಠರೇ **ಮಮ ಆತ್ಮಜಾಃ** ನನ್ನ ಮಕ್ಕಳು ಪುನಃ ಮತ್ತೆ **ತಾನಿ** ಆ ಐಶ್ವರ್ಯಾದಿಗಳನ್ನು **ಯಥಾ** ಯಾವ ರೀತಿಯಿಂದ **ಪ್ರಪದ್ಯೇರನ್** ಹೊಂದುವರೋ **ತಥಾ** ಹಾಗೆ **ಧಿಯಾ** ಬುದ್ಧಿಯಿಂದ ತಿಳಿದು **ಕಲ್ಯಾಣಂ ವಿಧೇಹಿ** ಮಂಗಳವನ್ನು ಮಾಡಿರಿ. **ಧಿಯಾ** ಅಂತಃಕರಣಪೂರ್ವಕವಾಗಿ ಎಂದೂ ಅರ್ಥ. ||೧೭||

**ಶ್ರೀಶುಕ ಉವಾಚ**

**ಏವಮಭ್ಯರ್ಥಿತೋऽದಿತ್ಯಾ ಕಸ್ತಾಮಾಹ ಸ್ಮಯನ್ನಿವ ।**
**ಅಹೋ ಮಾಯಾ ಬಲಂ ವಿಷ್ಣೋಃ ಸ್ನೇಹಬದ್ಧಮಿದಂ ಜಗತ್ ॥೧೮॥**

**ಅದಿತ್ಯಾ** ಅದಿತಿದೇವಿಯಿಂದ **ಏವಂ** ಈ ರೀತಿಯಾಗಿ **ಅಭ್ಯರ್ಥಿತಃ** ಪ್ರಾರ್ಥಿತರಾದ **ಕಃ** ಪ್ರಜೇಶ್ವರರಾದ ಕಶ್ಯಪರು **ಸ್ಮಯನ್ ಇವ** ಮುಗುಳು ನಗೆಯನ್ನು ಸೂಸುತ್ತ **ತಾಂ** ಅವಳನ್ನು ಕುರಿತು **ಆಹ** ಹೇಳಿದರು. **ವಿಷ್ಣೋಃ** ಶ್ರೀಹರಿಯ **ಮಾಯಾಬಲಂ** ಬಂಧಕವಾದ ಇಚ್ಛೆಯು, ಸಾಮರ್ಥ್ಯವೂ **ಅಹೋ** ಆಶ್ಚರ್ಯಕರವಾದುದು **ಇದಂ** ಈ ಅಸ್ವತಂತ್ರವಾದ **ಜಗತ್** ಚೇತನಸಮೂಹವು **ಸ್ನೇಹಬದ್ಧಂ** ಪರಸ್ಪರ ಪ್ರೀತಿಪಾಶದಿಂದ ಮಕ್ಕಳು ಮೊದಲಾದವುಗಳಲ್ಲಿ ಆಸಕ್ತವಾಗಿದೆ. ಜ್ಞಾನಿಗಳೂ ಸಹ ದೇಹಾನುಬಂಧಿಗಳಲ್ಲಿ ಪ್ರೀತಿ ಮಾಡುವಂತೆ ಶ್ರೀಹರಿಯು ಮುಗ್ಧರನ್ನು ಮಾಡಿರುವನು ಎಂದು ಭಾವ.

ಇಲ್ಲಿ ಕಃ ಎಂಬುದು ಪ್ರಜಾಪತಿಸಾಮಾನ್ಯವಾಚಕವಾದ ಕಶಬ್ದವೆನ್ನುತ್ತಾರೆ ಕೆಲವರು. ವಸ್ತುತಸ್ತು ಕಶ್ಯಪ ಎಂಬಲ್ಲಿ ಶ್ಯಪ ಎಂಬ ಎರಡು ವರ್ಣಗಳು ಲೋಪವಾಗಿ ಕ ಎಂದಾಗಿದೆ. ಬೃಹದ್ದೇವತಾದಲ್ಲಿ ''ವರ್ಣಸ್ಯ ವರ್ಣಯೋರ್ವಾ ಲೋಪಃ'' ಎಂದು ವಿಶೇಷವಾಗಿ ಹೇಳಿರುವದು ಕಂಡದ್ದರಿಂದ ಕ ಎಂದರೆ ಕಶ್ಯಪರೆಂದೇ ಅರ್ಥ.

ಸ್ನೇಹವು ಎಷ್ಟು ದೊಡ್ಡದು. ದೊಡ್ಡವರೂ ಆ ಸ್ನೇಹಪಾಶದಿಂದ ಬದ್ಧರಾಗುತ್ತಾರೆ. ಇದನ್ನು ನೋಡುತ್ತಿರುವ ಕಶ್ಯಪರಿಗೆ ನಗು ಬರುತ್ತಿದೆ. ಎಂದು ತಿಳಿಯಬೇಕು. ॥೧೮॥

**ಕ್ವ ದೇಹೋ ಭೌತಿಕೋऽನಾತ್ಮಾ ಕ್ವ ಚಾತ್ಮಾ ಪ್ರಕೃತೇಃ ಪರಃ ।**
**ಕಸ್ಯ ಕೇ ಪತಿಪುತ್ರಾದ್ಯಾ ಮೋಹ ಏವ ಹಿ ಕಾರಣಮ್ ॥೧೯॥**

**ಭೌತಿಕಃ** ಪಂಚಭೂತಗಳಿಂದ ನಿರ್ಮಿತವಾದ ಆದ್ದರಿಂದಲೇ **ಅನಾತ್ಮಾ** ಜಡವಾದ **ದೇಹಃ** ಚೇತನರ ಬಾಹ್ಯಶರೀರವು **ಕ್ವ** ಎಲ್ಲಿಯದು **ಪ್ರಕೃತೇಃ** ಆ ಜಡವಾದ ಭೂತಗಳಿಂದ (ದೇಹೋಪಾದಾನವಾದ ಪ್ರಕೃತಿಯಿಂದ) **ಪರಃ** ಅತ್ಯಂತಭಿನ್ನವಾದ **ಆತ್ಮಾ ಚ** ಜೀವನು **ಕ್ವ** ಎಲ್ಲಿ ಇವೆರಡಕ್ಕೂ ಯಾವ ಸಂಬಂಧವೂ ಇಲ್ಲವೆಂದರ್ಥ. ಆದ್ದರಿಂದ **ಕಸ್ಯ** ಯಾವ ಜೀವನಿಗೆ **ಕೇ** ಯಾವ ಜೀವರು **ಪತಿಪುತ್ರಾದ್ಯಾಃ** ಗಂಡ, ಹೆಂಡತಿ, ಮಕ್ಕಳು ಆಗಿದ್ದಾರೆ? ಯಾರೂ ಅಲ್ಲ ಎಂದು ಅರ್ಥ. ಇವರು ದೇಹಾನುಬಂಧಿಗಳೇ ಹೊರತು ಜೀವಾನುಬಂಧಿಗಳಲ್ಲವೆಂದರ್ಥ. ಹಾಗಾದರೆ ಹೀಗೆ ತಿಳಿಯಲು ಕಾರಣವೇನೆಂದರೆ ಹೇಳುತ್ತಾರೆ. **ಮೋಹ ಏವ ಕಾರಣಂ** ನಾನು ಕಪ್ಪು, ನಾನು ಕೆಂಪು, ನನ್ನ ಹೆಂಡತಿ ಮುಂತಾದ ವ್ಯವಹಾರಗಳಿಗೆ ಅಜ್ಞಾನವೇ ಕಾರಣ **ಹಿ** ಇದು ಶ್ರುತಿಸಿದ್ಧ. ಶ್ರೀಹರಿಯ ಬಂಧಕಶಕ್ತಿಯಿಂದ ಜೀವನನ್ನು ಅಜ್ಞಾನವು ಆವರಿಸಿರುವದು. ''ಬಂಧಕೋ ಭವಪಾಶೇನ'' ಎಂಬ ವಾಕ್ಯವು ಈ ವಿಷಯದಲ್ಲಿ ಪ್ರಮಾಣವಾಗಿದೆ. ॥೧೯॥

ನೀನೂ ಸಹ ಶ್ರೀಹರಿಯ ಇಚ್ಛೆಯಿಂದ ಸ್ನೇಹಬದ್ಧಳಾಗಿರುವಿ. ಪುತ್ರರಿಗಾಗಿ ಪರಿತಪಿಸುತ್ತಿರುವಿ. ಈ ಬಂಧಕ ಇಚ್ಛೆಯಿಂದ ಮುಕ್ತಳಾಗಲು ಶ್ರೀಹರಿಯನ್ನೇ ಭಕ್ತಿಯಿಂದ ಸೇವಿಸೆಂದು ಹೇಳುತ್ತಾರೆ.

**ಉಪತಿಷ್ಠಸ್ವ ಪುರುಷಂ ಭಗವಂತಂ ಜನಾರ್ದನಮ್ ।**
**ಸರ್ವಭೂತಗುಹಾವಾಸಂ ವಾಸುದೇವಂ ಜಗದ್ಗುರುಮ್ ॥೨೦॥**

ಎಲೇ ಅದಿತಿಯೇ **ಪುರುಷಂ** ಸರ್ವಾಭೀಷ್ಟಗಳನ್ನು ಕೊಡುವ **ಜನಾರ್ದನಂ** ಅಭೀಷ್ಟಪ್ರತಿಬಂಧಕರಾದ ಜನರನ್ನು ನಾಶ ಮಾಡುವ **ಸರ್ವಭೂತಗುಹಾವಾಸಂ** ಎಲ್ಲರ ಹೃದಯಗುಹೆಯಲ್ಲಿ ನಿಯಾಮಕನಾಗಿ ನೆಲೆಸಿರುವ ಆದ್ದರಿಂದಲೇ **ವಾಸುದೇವಂ** ವಾಸುದೇವನೆಂದು ಶ್ರುತಿಪ್ರಸಿದ್ಧನಾದ **ಜಗದ್ಗುರುಂ** ಬ್ರಹ್ಮಾದಿ ಸಕಲರಿಗೂ ಹಿತಾಹಿತೋಪದೇಶಕನಾದ **ಭಗವಂತಂ** ನಾರಾಯಣನನ್ನು **ಉಪತಿಷ್ಠಸ್ವ** ಭಕ್ತಿಯಿಂದ ಪೂಜಿಸು. ॥೨೦॥

**ಸ ವಿಧಾಸ್ಯತಿ ತೇ ಕಾಮಾನ್ ಹರಿರ್ದೀನಾನುಕಂಪನಃ ।**
**ಅಮೋಘಾ ಭಗವದ್ಭಕ್ತಿರ್ನೇತರೇತಿ ಮತಿರ್ಮಮ ॥೨೧॥**

ಅದಿತಿಯೇ **ದೀನಾನುಕಂಪನಃ** ಅಸಹಾಯಕರಾದ ಭಕ್ತರಲ್ಲಿ ಕನಿಕರವುಳ್ಳ **ಸಃ ಹರಿಃ** ಸರ್ವನಿಯಾಮಕನಾದ ಶ್ರೀಹರಿಯು ನಿನ್ನಿಂದ ಭಕ್ತಿಯಿಂದ ಪೂಜಿತನಾಗಿ **ತೇ** ನಿನ್ನ **ಕಾಮಾನ್** ಅಭೀಷ್ಟಗಳನ್ನು **ವಿಧಾಸ್ಯತಿ** ವಿಶೇಷವಾಗಿ ನಡೆಸಿಕೊಟ್ಟು ಕಾಪಾಡುವನು. **ಭಗವದ್ಭಕ್ತಿಃ** ಶ್ರೀಹರಿಯಲ್ಲಿ ಮಾಡುವ ಭಕ್ತಿಯು ಮಾತ್ರ **ಅಮೋಘಾ** ಸಾರ್ಥಕವಾದುದು. ಕಾರ್ಯಸಾಧನ ಸಮರ್ಥವು **ಇತರಾ** ಬೇರೆಯವರಲ್ಲಿ ಮಾಡುವ ಭಕ್ತಿಯು **ನ** ಅಮೋಘವಲ್ಲ **ಇತಿ** ಎಂದು **ಮಮ ಮತಿಃ** ಶಾಸ್ತ್ರಜ್ಞಾನಿಯಾದ ನನ್ನ ನಿಶ್ಚಯವು. ॥೨೧॥

**ಅದಿತಿರುವಾಚ**

**ಕೇನಾಽಹಂ ವಿಧಿನಾ ಬ್ರಹ್ಮನ್ ಉಪಸ್ಥಾಸ್ಯೇ ಜಗತ್ಪತಿಮ್ ।**
**ಯಥಾ ಮೇ ಸತ್ಯಸಂಕಲ್ಪೋ ವಿದಧ್ಯಾತ್ಸ ಮನೋರಥಮ್ ॥೨೨॥**

**ಹೇ ಬ್ರಹ್ಮನ್** ನನ್ನ ಪ್ರಶ್ನೆಗಳಿಗೆ ಉತ್ತರಿಸುವ ಜ್ಞಾನಿಗಳೇ **ಜಗತ್ಪತಿಂ** ಜಗದೊಡೆಯನಾದ ರಕ್ಷಕನಾದ ಶ್ರೀಹರಿಯನ್ನು **ಕೇನ ವಿಧಿನಾ** ಯಾವ ರೀತಿಯಿಂದ **ಅಹಂ** ನಾನು **ಉಪಸ್ಥಾಸ್ಯೇ** ಪೂಜಿಸಲಿ **ಸತ್ಯಸಂಕಲ್ಪಃ** ಸತ್ಯವಾದ ಸಂಕಲ್ಪವುಳ್ಳ **ಸಃ** ಶ್ರೀಹರಿಯು **ಮೇ** ನನ್ನ **ಮನೋರಥಂ** ಅಭೀಷ್ಟವನ್ನು **ಯಥಾ ವಿದಧ್ಯಾತ್** ಹೇಗೆ ಮಾಡಿದರೆ ಪೂರೈಸುವನು. ॥೨೨॥

**ಆದಿಶ ತ್ವಂ ದ್ವಿಜಶ್ರೇಷ್ಠ ವಿಧಿಂ ತದುಪಧಾವನಮ್ ।**
**ಆಶು ತುಷ್ಯತಿ ಮೇ ದೇವಃ ಸೀದಂತ್ಯಾಃ ಸಹ ಪುತ್ರಕೈಃ ॥೨೩॥**

**ಹೇ ದ್ವಿಜಶ್ರೇಷ್ಠ** ಬ್ರಾಹ್ಮಣಶ್ರೇಷ್ಠರೇ **ಯಥಾ** ಹೇಗೆ **ಪುತ್ರಕೈಃ ಸಹ** ಮಕ್ಕಳೊಂದಿಗೆ **ಸೀದಂತ್ಯಾಃ** ಕಷ್ಟಕ್ಕೆ ಸಿಲುಕಿರುವ **ಮೇ** ನನಗೆ **ದೇವಃ** ಶ್ರೀಹರಿಯು **ಆಶು** ಬೇಗನೇ **ತುಷ್ಯತಿ** ಸಂತುಷ್ಟನಾಗುವನೋ **ತಥಾ** ಆ ರೀತಿಯಾದ **ತದುಪಧಾವನಂ** ಶ್ರೀಹರಿಯ ಸೇವೆಯ ವಿಷಯವನ್ನು **ವಿಧಿಂ** ವಿಧಾನವನ್ನು ಯಥಾವತ್ತಾಗಿ **ಆದಿಶ** ಉಪದೇಶಿಸಿರಿ. ।।೨೩।।

ಈ ರೀತಿ ಪ್ರಶ್ನಿಸಲ್ಪಟ್ಟ ಕಶ್ಯಪರು ಹೇಳುವರು-

**ಕಶ್ಯಪ ಉವಾಚ**

**ಏತನ್ಮೇ ಭಗವಾನ್ ಪೃಷ್ಟಃ ಪ್ರಜಾಕಾಮಸ್ಯ ಪದ್ಮಜಃ ।**
**ಯದಾಹ ತೇ ಪ್ರವಕ್ಷ್ಯಾಮಿ ವ್ರತಂ ಕೇಶವತೋಷಣಮ್ ।।೨೪।।**

ಹೇ ಅದಿತಿಯೇ **ಪೃಷ್ಟಃ** ನನ್ನಿಂದ ಪ್ರಶ್ನಿಸಲ್ಪಟ್ಟ **ಭಗವಾನ್ ಪದ್ಮಜಃ** ಪೂಜ್ಯರಾದ ಬ್ರಹ್ಮದೇವರು **ಪ್ರಜಾಕಾಮಸ್ಯ ಮೇ** ಮಕ್ಕಳನ್ನು ಪಡೆಯಲಿಚ್ಛಿಸುವ ನನಗೆ **ಯತ್ ವ್ರತಂ** ಯಾವ ವ್ರತವನ್ನು **ಅವೋಚತ್** ಉಪದೇಶಿಸಿದರೋ ಆ **ಕೇಶವತೋಷಣಂ** ಬ್ರಹ್ಮರುದ್ರಾದಿನಿಯಾಮಕನಾದ ಶ್ರೀಹರಿಯ ಪ್ರೀತಿಗೆ ಕಾರಣವಾದ **ಏತತ್ ವ್ರತಂ** ಈ ವ್ರತವನ್ನು **ಅಹಂ** ನಾನು **ತೇ** ನಿನಗೆ **ಪ್ರವಕ್ಷ್ಯಾಮಿ** ಚೆನ್ನಾಗಿ ವಿಧಿಪೂರ್ವಕವಾಗಿ ಹೇಳುವೆನು. ।।೨೪।।

**ಫಾಲ್ಗುನಸ್ಯಾಮಲೇ ಪಕ್ಷೇ ದ್ವಾದಶಾಹಂ ಪಯೋವ್ರತಃ ।**
**ಅರ್ಚಯೇದರವಿಂದಾಕ್ಷಂ ಭಕ್ತ್ಯಾ ಪರಮಯಾಽನ್ವಿತಃ ।।೨೫।।**

ಈ ವ್ರತವನ್ನು ಮಾಡಬೇಕಾದವನು **ಪರಮಯಾ** ಅತ್ಯುತ್ತಮವಾದ **ಭಕ್ತ್ಯಾ** ಭಕ್ತಿಯಿಂದ **ಅನ್ವಿತಃ** ಕೂಡಿದವನಾಗಿ **ಪಯೋವ್ರತಃ** ಹಾಲನ್ನು ಮಾತ್ರ ಸೇವಿಸುವ ನಿಯಮಯುಕ್ತನಾಗಿ **ಫಾಲ್ಗುನಸ್ಯ ಅಮಲೇ ಪಕ್ಷೇ** ಫಾಲ್ಗುಣ ಮಾಸದ ಶುಕ್ಲಪಕ್ಷದಲ್ಲಿ **ದ್ವಾದಶಾಹಂ** ಪ್ರತಿಪದಾದಿಂದ ಹನ್ನೆರಡು ದಿವಸ ದ್ವಾದಶೀ ಪರ್ಯಂತ **ಅರವಿಂದಾಕ್ಷಂ ಅರ್ಚಯೇತ್** ಕಮಲದಂತಿರುವ ಕಣ್ಣುಳ್ಳ ಶ್ರೀಹರಿಯನ್ನು ಪೂಜಿಸಬೇಕು.

ಬ್ರಹ್ಮದೇವರು ಸಾಕ್ಷಾತ್ ತಮಗೆ ಉಪದೇಶ ಮಾಡಿದಂತೆಯೇ ಹೇಳಲು ಇಚ್ಛಿಸಿದ್ದರಿಂದ ಪಯೋವ್ರತಃ ಎಂದು ಪುಲ್ಲಿಂಗಪ್ರಯೋಗವು ಸಂಭವಿಸುವುದು. ಪುರುಷರಿಗೆ ಉಪದೇಶಿಸಿದ ಈ ವ್ರತವನ್ನು ಅದಿತಿಗೆ ಉಪದೇಶಿಸಿದ್ದರಿಂದ ಈ ವ್ರತವು ಸ್ತ್ರೀ-ಪುರುಷ ಸಾಧಾರಣವೆಂದು ತಿಳಿಯುವದು. ।।೨೫।।

ಇಲ್ಲಿಂದ ೪೫ ನೇ ಶ್ಲೋಕದವರೆಗೆ, ವ್ರತಾರಂಭ ಮಾಡುವ ಮೊದಲಿನ ದಿನದ ಕಾರ್ಯವನ್ನು ಹೇಳುವರು-

**ಸಿನೀವಾಲ್ಯಾಂ ಮೃದಾಽಽಲಿಪ್ಯ ಸ್ನಾಯಾತ್ ಕ್ರೋಡವಿದೀರ್ಣಯಾ ।**
**ಯದಿ ಲಭ್ಯೇತ ವೈ ಸ್ರೋತಸ್ಯೇತಂ ಮಂತ್ರಮುದೀರಯೇತ್ ॥೨೬॥**

**ಸಿನೀವಲ್ಯಾಂ** ಚತುರ್ದಶೀಯುಕ್ತವಾದ ಮಾಘ ಅಮಾವಾಸ್ಯೆಯಲ್ಲಿ **ಕಿಂಚಿತ್** ಚಂದ್ರದರ್ಶನೋಪೇತವಾದ (ಚಂದ್ರಕಲಾಯುಕ್ತವಾದ್ದರಲ್ಲಿ) **ಯದಿ ಲಭ್ಯೇತ** ದೊರೆತರೆ **ಸ್ರೋತಸಿ** ಹರಿಯು ಶುದ್ಧವಾದ ನದೀಮುಂತಾದವುಗಳಲ್ಲಿ ಇಲ್ಲವಾದರೆ ಸರೋವರ-ಭಾವಿ ಮುಂತಾದವುಗಳಲ್ಲಿ **ಕ್ರೋಡವಿದೀರ್ಣಯಾ** ಅಡವಿಯ ಹಂದಿಯು ಕೆದರಿ ಹಾಕಿದ **ಮೃದಾ** ಶುದ್ಧಮಣ್ಣಿನಿಂದ ತನ್ನ ದೇಹವನ್ನು **ಆಲಿಪ್ಯ** ಲೇಪಿಸಿಕೊಂಡು **ಸ್ನಾಯಾತ್** ಸ್ನಾನ ಮಾಡಬೇಕು. ಆಗ **ಏತಂ ಮಂತ್ರಂ** ಈ ಮಂತ್ರವನ್ನು **ಉದೀರಯೇತ್** ಹೇಳಬೇಕು.

''ಕ್ರೋಡಃ ಸೂರಕಮಾತಂಗ್ಯೋಃ'' ಎಂದು ವಿಶ್ವ. ''ಸ್ರೋತೋಽಂಬು ವೇಗಾದ್ರಿಪಯೋಃ'' ಎಂದು ಅಭಿಧಾನ. ''ಸಾ ದೃಷ್ಟೇಂದುಃ ಸಿನೀವಾಲೀ'' ''ಮೃತ್ ಮೃತ್ತಿಕಾ'' ''ಕ್ರೋಡೋ ಭೂಧರಃ'' ''ಸ್ರೋತೋಂಬುಸರಣಂ'' ''ಪಾಪ್ಮಾ ಪಾಪಂ ಕಿಲ್ಬಿಷಂ'' ಎಂದೂ ಅಮರವಿದೆ. ॥೨೬॥

ಸ್ನಾನ ಮಾಡಿದ ಮೇಲೆ ಈ ಮಂತ್ರವನ್ನು ಉಚ್ಚರಿಸಬೇಕು.

**ತ್ವಂ ದೇವ್ಯಾದಿವರಾಹೇಣ ರಸಾಯಾಃ ಸ್ಥಾನಮಿಚ್ಛತಾ ।**
**ಉದ್ಧೃತಾಸಿ ನಮಸ್ತುಭ್ಯಂ ಪಾಪ್ಮಾನಂ ಮೇ ಪ್ರಣಾಶಯ ॥೨೭॥**

**ಹೇ ದೇವಿ** ಭೂದೇವಿಯೇ **ಭೂತಾನಾಂ** ಪ್ರಾಣಿಗಳಿಗೆ ವಾಸಸ್ಥಾನವನ್ನು **ಇಚ್ಛತಾ** ಕಲ್ಪಿಸಿಕೊಡಬೇಕೆಂಬ ಇಚ್ಛೆಯುಳ್ಳ **ಆದಿವರಾಹೇಣ** ಆದಿಸೂಕರನಾದ ಶ್ರೀಹರಿಯಿಂದ **ರಸಾಯಾಃ** ರಸಾತಳದಿಂದ (ನೀರಿನಿಂದ) **ತ್ವಂ** ನೀನು **ಉದ್ಧೃತಾ ಅಸಿ** ಮೇಲಕ್ಕೆ ತರಲ್ಪಟ್ಟಿರುವೆ **ತುಭ್ಯಂ** ನಿನಗೆ **ನಮಃ** ನಮಸ್ಕಾರವು **ಮೇ** ನನ್ನ **ಪಾಪ್ಮಾನಂ** ಪಾಪವನ್ನು **ಪ್ರಣಾಶಯ** ನಾಶಮಾಡು. ॥೨೭॥

**ನಿರ್ವರ್ತಿತಾತ್ಮನಿಯಮೋ ದೇವಮರ್ಚೇತ್ ಸಮಾಹಿತಃ ।**
**ಅರ್ಚಾಯಾಂ ಸ್ಥಂಡಿಲೇ ಸೂರ್ಯೇ ಜಲೇ ವಹ್ನೌ ಗುರಾವಪಿ ॥೨೮॥**

**ನಿವರ್ತಿತಾತ್ಮನಿಯಮಃ** ಸಂಧ್ಯಾವಂದನ-ಔಪಾಸನ ಮೊದಲಾದ ನಿತ್ಯಾಹ್ನಿಕಗಳನ್ನು ವರ್ಣಾಶ್ರಮಕರ್ಮಗಳನ್ನು ಮುಗಿಸಿ **ಸಮಾಹಿತಃ ಸನ್** ಏಕಾಗ್ರಚಿತ್ತನಾಗಿ **ದೇವಂ ಅರ್ಚಯೇತ್** ಶ್ರೀಹರಿಯನ್ನು ಪೂಜಿಸಬೇಕು. ಪೂಜಾಸ್ಥಾನವನ್ನು ಹೇಳುತ್ತಾರೆ. **ಅರ್ಚಾಯಾಂ** ಶಾಲಗ್ರಾಮ ಮುಂತಾದ ಅಥವಾ ಬಂಗಾರ-ಬೆಳ್ಳಿ ಮುಂತಾದ ಲೋಹಗಳಿಂದ ನಿರ್ಮಿತವಾದ ಪ್ರತಿಮೆಯಲ್ಲಿ **ಸ್ಥಂಡಿಲೇ** ಕಸಗೂಡಿಸಿ ಸಾರಿಸಿದ ಶುದ್ಧವಾದ

ಸ್ಥಳದಲ್ಲಿ **ಸೂರ್ಯೇ** ಸೂರ್ಯನಲ್ಲಿ **ಜಲೇ** ನೀರಿನಲ್ಲಿ **ವಹ್ನೌ** ಅಗ್ನಿಯಲ್ಲಿ **ಅಪಿ** ಮತ್ತು **ಗುರೌ** ಗುರುಗಳಲ್ಲಿ ಶ್ರೀಹರಿಯನ್ನು ಪೂಜಿಸಬೇಕು. ।।೨೮।।

೨೯ನೇ ಶ್ಲೋಕದಿಂದ ಪ್ರಸೀದತಾಂ ಎಂಬುವ ೩೭ ನೇ ಶ್ಲೋಕದ ವರೆಗೆ ಧ್ಯಾನ-ಆವಾಹನಾದಿಗಳಿಗೆ ಉಪಯುಕ್ತವಾದ ೯ ಮಂತ್ರಗಳನ್ನು ಹೇಳುವರು-

**ನಮಸ್ತುಭ್ಯಂ ಭಗವತೇ ಪುರುಷಾಯ ಮಹೀಯಸೇ ।**
**ಸರ್ವಭೂತನಿವಾಸಾಯ ವಾಸುದೇವಾಯ ಸಾಕ್ಷಿಣೇ ।।೨೯।।**

**ಸರ್ವಭೂತನಿವಾಸಾಯ** ಎಲ್ಲ ಪ್ರಾಣಿಗಳಲ್ಲಿ ವಾಸಿಸುವ **ಸಾಕ್ಷಿಣೇ** ಎಲ್ಲರ ಕರ್ಮಗಳನ್ನು ಕಣ್ಣಾರೆ ಕಾಣುತ್ತಿರುವ **ಮಹೀಯಸೇ ಪುರುಷಾಯ** ಸರ್ವೋತ್ತಮ ಪುರುಷನಾದ **ಭಗವತೇ** ಸಮಗ್ರ ಐಶ್ವರ್ಯಸಂಪನ್ನನಾದ **ವಾಸುದೇವಾಯ** ವಾಸುದೇವನಾದ **ತುಭ್ಯಂ** ನಿನಗೆ **ನಮಃ** ನಮಸ್ಕಾರವು.

''ವಾಸನಾದ್ ವಾಸುದೇವೋಽಸಿ ವಾಸಿತಂ ತೇ ಜಗತ್ರಯಮ್ । ಸರ್ವಭೂತ-ನಿವಾಸೋಽಸಿ ವಾಸುದೇವ ನಮೋಸ್ತು ತೇ'' ಎಂದು ಸ್ಮೃತಿ. ಶಶ್ವದೇಕ ಪ್ರಕಾರನಾಗಿ-ರುವದರಿಂದಲೂ, ಮೂರುಲೋಕಗಳ ಸ್ಥಿತಿಗೆ ಕಾರಣನಾದ್ದರಿಂದಲೂ, ಎಲ್ಲ ಪ್ರಾಣಿಗಳಿಗೆ ಆಶ್ರಯನಾದ್ದರಿಂದಲೂ ವಾಸುದೇವನೆನಿಸುವ ನಿನಗೆ ನಮಸ್ಕಾರವೆಂದು ಭಾವ. ।।೨೯।।

**ನಮೋಽವ್ಯಕ್ತಾಯ ಸೂಕ್ಷ್ಮಾಯ ಪ್ರಧಾನಪುರುಷಾಯ ಚ ।**
**ಚತುರ್ವಿಂಶದ್ಗುಣಜ್ಞಾಯ ಗುಣಸಂಖ್ಯಾನಹೇತವೇ ।।೩೦।।**

**ಅವ್ಯಕ್ತಾಯ** ತನ್ನ ಅನುಗ್ರಹವಿಲ್ಲದೇ ಚೇತನರ ಪ್ರಯತ್ನದಿಂದ ಕಣ್ಣಿಗೆ ಕಾಣದಿರುವ **ಸೂಕ್ಷ್ಮಾಯ** ಅವ್ಯಕ್ತನಾಗಲು ಉಪಯುಕ್ತವಾದ ಸ್ಥೂಲದೃಷ್ಟಿಗೆ ಗೋಚರವಾಗದ ಶಕ್ತಿಯುಳ್ಳವನೇ (ಅತ್ಯಂತ ಸೂಕ್ಷ್ಮವಾದವನೇ) **ಪ್ರಧಾನಪುರುಷಾಯ** ಸರ್ವೋತ್ತಮ ಪುರುಷನಾದ ಅಥವಾ **ಪ್ರಧಾನಸ್ಯ** ಚೇತನ ಪ್ರಕೃತಿಯ **ಪುರಿ** ಶರೀರದಲ್ಲಿ ಅಚೇತನವಾದ ಶರೀರಸ್ಥಾನೀಯವಾದ ಜಡದಲ್ಲಿಯೂ ನಿಯಮನಕ್ಕಾಗಿ **ಶೇತೇ** ಇರುವದರಿಂದ ಪ್ರಧಾನಪುರುಷನೆನಿಸಿದ **ಚತುರ್ವಿಂಶದ್ಗುಣಜ್ಞಾಯ** ಇಪ್ಪತ್ನಾಲ್ಕು ತತ್ವಗಳ ಗುಣವನ್ನು ತಿಳಿದ **ಗುಣಸಂಸ್ಥಾನಹೇತವೇ** ಗುಣಸಂಸ್ಥಾನವೆಂಬ ಗ್ರಂಥಕ್ಕೆ ಕಾರಣನಾದ ಗುಣಸಂಖ್ಯಾನ-ಹೇತವೇ ಎಂಬ ಪಾಠದಲ್ಲಿ ಸಮೀಚಿನ ಸಾಂಖ್ಯಶಾಸ್ತ್ರಕ್ಕೆ ಕಾರಣನಾದ (ಕರ್ತೃ) ಕಪಿಲನಾಮಕನಾದ ನಿನಗೆ **ನಮಃ** ನಮಸ್ಕಾರವು. ।।೩೦।।

''ತದವ್ಯಕ್ತಮಾಹ ಹಿ'' ''ಸೂಕ್ಷ್ಮಂ ತು ತದರ್ಹತ್ವಾತ್'' ''ಶರೀರರೂಪಕ-ವಿನ್ಯಸ್ತಗೃಹಿತೇಃ'' ''ಪ್ರಕೃತಿಂ ಪ್ರವಿಶ್ಯ ಭಗವಾನ್'' ಮುಂತಾದ ಸೂತ್ರ-ಸ್ಮೃತಿಗಳು ಮೇಲೆ ಹೇಳಿದ ಅರ್ಥಕ್ಕೆ ಪೋಷಕವಾಗಿವೆ. ಗುಣಗಳು ಎಂದರೆ ತತ್ತ್ವಗಳು ಅವುಗಳ

**ಸಿನೀವಾಲ್ಯಾಂ ಮೃದಾऽऽಲಿಪ್ಯ ಸ್ನಾಯಾತ್ ಕ್ರೋಡವಿದೀರ್ಣಯಾ ।**
**ಯದಿ ಲಭ್ಯೇತ ವೈ ಸ್ರೋತಸ್ಯೇತಂ ಮಂತ್ರಮುದೀರಯೇತ್ ॥೨೬॥**

**ಸಿನೀವಲ್ಯಾಂ** ಚತುರ್ದಶೀಯುಕ್ತವಾದ ಮಾಘ ಅಮಾವಾಸ್ಯೆಯಲ್ಲಿ **ಕಿಂಚಿತ್** ಚಂದ್ರದರ್ಶನೋಪೇತವಾದ (ಚಂದ್ರಕಲಾಯುಕ್ತವಾದ್ದರಲ್ಲಿ) **ಯದಿ ಲಭ್ಯೇತ** ದೊರೆತರೆ **ಸ್ರೋತಸಿ** ಹರಿಯು ಶುದ್ಧವಾದ ನದೀಮುಂತಾದವುಗಳಲ್ಲಿ ಇಲ್ಲವಾದರೆ ಸರೋವರ-ಭಾವಿ ಮುಂತಾದವುಗಳಲ್ಲಿ **ಕ್ರೋಡವಿದೀರ್ಣಯಾ** ಅಡವಿಯ ಹಂದಿಯು ಕೆದರಿ ಹಾಕಿದ **ಮೃದಾ** ಶುದ್ಧಮಣ್ಣಿನಿಂದ ತನ್ನ ದೇಹವನ್ನು **ಆಲಿಪ್ಯ** ಲೇಪಿಸಿಕೊಂಡು **ಸ್ನಾಯಾತ್** ಸ್ನಾನ ಮಾಡಬೇಕು. ಆಗ **ಏತಂ ಮಂತ್ರಂ** ಈ ಮಂತ್ರವನ್ನು **ಉದೀರಯೇತ್** ಹೇಳಬೇಕು.

''ಕ್ರೋಡಃ ಸೂರಕಮಾತಂಗ್ಯೋಃ'' ಎಂದು ವಿಶ್ವ. ''ಸ್ರೋತೋಽಂಬು ವೇಗಾದ್ರಿಪಯೋಃ'' ಎಂದು ಅಭಿಧಾನ. ''ಸಾ ದೃಷ್ಟೇಂದುಃ ಸಿನೀವಾಲೀ'' ''ಮೃತ್ ಮೃತ್ತಿಕಾ'' ''ಕ್ರೋಡೋ ಭೂಧರಃ'' ''ಸ್ರೋತೋಂಬುಸರಣಂ'' ''ಪಾಪ್ಮಾ ಪಾಪಂ ಕಿಲ್ಬಿಷಂ'' ಎಂದೂ ಅಮರವಿದೆ. ॥೨೬॥

ಸ್ನಾನ ಮಾಡಿದ ಮೇಲೆ ಈ ಮಂತ್ರವನ್ನು ಉಚ್ಚರಿಸಬೇಕು.

**ತ್ವಂ ದೇವ್ಯಾದಿವರಾಹೇಣ ರಸಾಯಾಃ ಸ್ಥಾನಮಿಚ್ಛತಾ ।**
**ಉದ್ಧೃತಾಸಿ ನಮಸ್ತುಭ್ಯಂ ಪಾಪ್ಮಾನಂ ಮೇ ಪ್ರಣಾಶಯ ॥೨೭॥**

**ಹೇ ದೇವಿ** ಭೂದೇವಿಯೇ **ಭೂತಾನಾಂ** ಪ್ರಾಣಿಗಳಿಗೆ ವಾಸಸ್ಥಾನವನ್ನು **ಇಚ್ಛತಾ** ಕಲ್ಪಿಸಿಕೊಡಬೇಕೆಂಬ ಇಚ್ಛೆಯುಳ್ಳ **ಆದಿವರಾಹೇಣ** ಆದಿಸೂಕರನಾದ ಶ್ರೀಹರಿಯಿಂದ **ರಸಾಯಾಃ** ರಸಾತಳದಿಂದ (ನೀರಿನಿಂದ) **ತ್ವಂ** ನೀನು **ಉದ್ಧೃತಾ ಅಸಿ** ಮೇಲಕ್ಕೆ ತರಲ್ಪಟ್ಟಿರುವೆ **ತುಭ್ಯಂ** ನಿನಗೆ **ನಮಃ** ನಮಸ್ಕಾರವು **ಮೇ** ನನ್ನ **ಪಾಪ್ಮಾನಂ** ಪಾಪವನ್ನು **ಪ್ರಣಾಶಯ** ನಾಶಮಾಡು. ॥೨೭॥

**ನಿರ್ವರ್ತಿತಾತ್ಮನಿಯಮೋ ದೇವಮರ್ಚೇತ್ ಸಮಾಹಿತಃ ।**
**ಅರ್ಚಾಯಾಂ ಸ್ಥಂಡಿಲೇ ಸೂರ್ಯೇ ಜಲೇ ವಹ್ನೌ ಗುರಾವಪಿ ॥೨೮॥**

**ನಿರ್ವರ್ತಿತಾತ್ಮನಿಯಮಃ** ಸಂಧ್ಯಾವಂದನ-ಔಪಾಸನ ಮೊದಲಾದ ನಿತ್ಯಾಹ್ನಿಕಗಳನ್ನು ವರ್ಣಾಶ್ರಮಕರ್ಮಗಳನ್ನು ಮುಗಿಸಿ **ಸಮಾಹಿತಃ ಸನ್** ಏಕಾಗ್ರಚಿತ್ತನಾಗಿ **ದೇವಂ ಅರ್ಚಯೇತ್** ಶ್ರೀಹರಿಯನ್ನು ಪೂಜಿಸಬೇಕು. ಪೂಜಾಸ್ಥಾನವನ್ನು ಹೇಳುತ್ತಾರೆ. **ಅರ್ಚಾಯಾಂ** ಶಾಲಗ್ರಾಮ ಮುಂತಾದ ಅಥವಾ ಬಂಗಾರ-ಬೆಳ್ಳಿ ಮುಂತಾದ ಲೋಹಗಳಿಂದ ನಿರ್ಮಿತವಾದ ಪ್ರತಿಮೆಯಲ್ಲಿ **ಸ್ಥಂಡಿಲೇ** ಕಸಗೂಡಿಸಿ ಸಾರಿಸಿದ ಶುದ್ಧವಾದ

ಸ್ಥಳದಲ್ಲಿ **ಸೂರ್ಯೇ** ಸೂರ್ಯನಲ್ಲಿ **ಜಲೇ** ನೀರಿನಲ್ಲಿ **ವಹ್ನೌ** ಅಗ್ನಿಯಲ್ಲಿ **ಅಪಿ** ಮತ್ತು **ಗುರೌ** ಗುರುಗಳಲ್ಲಿ ಶ್ರೀಹರಿಯನ್ನು ಪೂಜಿಸಬೇಕು. ॥೨೮॥

೨೯ನೇ ಶ್ಲೋಕದಿಂದ ಪ್ರಸೀದತಾಂ ಎಂಬುವ ೩೭ ನೇ ಶ್ಲೋಕದ ವರೆಗೆ ಧ್ಯಾನ-ಆವಾಹನಾದಿಗಳಿಗೆ ಉಪಯುಕ್ತವಾದ ೯ ಮಂತ್ರಗಳನ್ನು ಹೇಳುವರು-

**ನಮಸ್ತುಭ್ಯಂ ಭಗವತೇ ಪುರುಷಾಯ ಮಹೀಯಸೇ ।**
**ಸರ್ವಭೂತನಿವಾಸಾಯ ವಾಸುದೇವಾಯ ಸಾಕ್ಷಿಣೇ ॥೨೯॥**

**ಸರ್ವಭೂತನಿವಾಸಾಯ** ಎಲ್ಲ ಪ್ರಾಣಿಗಳಲ್ಲಿ ವಾಸಿಸುವ **ಸಾಕ್ಷಿಣೇ** ಎಲ್ಲರ ಕರ್ಮಗಳನ್ನು ಕಣ್ಣಾರೆ ಕಾಣುತ್ತಿರುವ **ಮಹೀಯಸೇ ಪುರುಷಾಯ** ಸರ್ವೋತ್ತಮ ಪುರುಷನಾದ **ಭಗವತೇ** ಸಮಗ್ರ ಐಶ್ವರ್ಯಸಂಪನ್ನನಾದ **ವಾಸುದೇವಾಯ** ವಾಸುದೇವನಾದ **ತುಭ್ಯಂ** ನಿನಗೆ **ನಮಃ** ನಮಸ್ಕಾರವು.

''ವಾಸನಾದ್ ವಾಸುದೇವೋಽಸಿ ವಾಸಿತಂ ತೇ ಜಗತ್ರಯಮ್ । ಸರ್ವಭೂತ-ನಿವಾಸೋಽಸಿ ವಾಸುದೇವ ನಮೋಸ್ತು ತೇ'' ಎಂದು ಸ್ಮೃತಿ. ಶಶ್ವದೇಕ ಪ್ರಕಾರನಾಗಿ-ರುವದರಿಂದಲೂ, ಮೂರುಲೋಕಗಳ ಸ್ಥಿತಿಗೆ ಕಾರಣನಾದ್ದರಿಂದಲೂ, ಎಲ್ಲ ಪ್ರಾಣಿಗಳಿಗೆ ಆಶ್ರಯನಾದ್ದರಿಂದಲೂ ವಾಸುದೇವನೆನಿಸುವ ನಿನಗೆ ನಮಸ್ಕಾರವೆಂದು ಭಾವ. ॥೨೯॥

**ನಮೋಽವ್ಯಕ್ತಾಯ ಸೂಕ್ಷ್ಮಾಯ ಪ್ರಧಾನಪುರುಷಾಯ ಚ ।**
**ಚತುರ್ವಿಂಶದ್ಗುಣಜ್ಞಾಯ ಗುಣಸಂಖ್ಯಾನಹೇತವೇ ॥೩೦॥**

**ಅವ್ಯಕ್ತಾಯ** ತನ್ನ ಅನುಗ್ರಹವಿಲ್ಲದೇ ಚೇತನರ ಪ್ರಯತ್ನದಿಂದ ಕಣ್ಣಿಗೆ ಕಾಣದಿರುವ **ಸೂಕ್ಷ್ಮಾಯ** ಅವ್ಯಕ್ತನಾಗಲು ಉಪಯುಕ್ತವಾದ ಸ್ಥೂಲದೃಷ್ಟಿಗೆ ಗೋಚರವಾಗದ ಶಕ್ತಿಯುಳ್ಳವನೇ (ಅತ್ಯಂತ ಸೂಕ್ಷ್ಮವಾದವನೇ) **ಪ್ರಧಾನಪುರುಷಾಯ** ಸರ್ವೋತ್ತಮ ಪುರುಷನಾದ ಅಥವಾ **ಪ್ರಧಾನಸ್ಯ** ಚೇತನ ಪ್ರಕೃತಿಯ **ಪುರಿ** ಶರೀರದಲ್ಲಿ ಅಚೇತನವಾದ ಶರೀರಸ್ಥಾನೀಯವಾದ ಜಡದಲ್ಲಿಯೂ ನಿಯಮನಕ್ಕಾಗಿ **ಶೇತೇ** ಇರುವದರಿಂದ ಪ್ರಧಾನಪುರುಷನೆನಿಸಿದ **ಚತುರ್ವಿಂಶದ್ಗುಣಜ್ಞಾಯ** ಇಪ್ಪತ್ನಾಲ್ಕು ತತ್ವಗಳ ಗುಣವನ್ನು ತಿಳಿದ **ಗುಣಸಂಸ್ಥಾನಹೇತವೇ** ಗುಣಸಂಸ್ಥಾನವೆಂಬ ಗ್ರಂಥಕ್ಕೆ ಕಾರಣನಾದ ಗುಣಸಂಖ್ಯಾನ-ಹೇತವೇ ಎಂಬ ಪಾಠದಲ್ಲಿ ಸಮೀಚಿನ ಸಾಂಖ್ಯಶಾಸ್ತ್ರಕ್ಕೆ ಕಾರಣನಾದ (ಕರ್ತೃ) ಕಪಿಲನಾಮಕನಾದ ನಿನಗೆ **ನಮಃ** ನಮಸ್ಕಾರವು. ॥೩೦॥

''ತದವ್ಯಕ್ತಮಾಹ ಹಿ'' ''ಸೂಕ್ಷ್ಮಂ ತು ತದರ್ಹತ್ವಾತ್'' ''ಶರೀರರೂಪಕ-ವಿನ್ಯಸ್ತಗೃಹಿತೇಃ'' ''ಪ್ರಕೃತಿಂ ಪ್ರವಿಶ್ಯ ಭಗವಾನ್'' ಮುಂತಾದ ಸೂತ್ರ-ಸ್ಮೃತಿಗಳು ಮೇಲೆ ಹೇಳಿದ ಅರ್ಥಕ್ಕೆ ಪೋಷಕವಾಗಿವೆ. ಗುಣಗಳು ಎಂದರೆ ತತ್ತ್ವಗಳು ಅವುಗಳ

ಸಂಖ್ಯಾ ಎಂದರೆ ಪ್ರತಿಪಾದನ ಯಾವುದರಲ್ಲಿದೆಯೋ ಅದು ಗುಣಸಂಖ್ಯಾನ ಸಾಂಖ್ಯಶಾಸ್ತ್ರ. ಅದರ ಹೇತು ಅಂದರೆ ಕರ್ತಾ ಕಪಿಲನಾಮಕನಾದ ಪರಮಾತ್ಮನೆಂದು ಭಾವ.

''ಚತ್ವಾರಿ ಶೃಂಗಾ'' ಎಂಬ ಮಂತ್ರದಿಂದ ಸ್ಫೋಟವೆ ಪ್ರತಿಪಾದ್ಯ ಎಂದು ಪಾತಂಜಲರು ಹೇಳುವರು. ಆದ್ದರಿಂದ ಅದನ್ನು ಖಂಡನ ಮಾಡಿ ಹರಿಪರತಯಾ ವ್ಯಾಖ್ಯಾನಿಸುವರು.

**ನಮೋ ದ್ವಿಶೀರ್ಷ್ಣೇ ತ್ರಿಪದೇ ಚತುಃಶೃಂಗಾಯ ತಂತವೇ ।**
**ಸಪ್ತಹಸ್ತಾಯ ಯಜ್ಞಾಯ ತ್ರಯೀವಿದ್ಯಾತ್ಮನೇ ನಮಃ ॥೩೦॥**

**ದ್ವೇ ಶೀರ್ಷೇ** ಪ್ರಾಯಣೀಯ ಉದಯನೀಯ ಎಂಬ ಹೆಸರಿನ ಎರಡು ಶಿರಸ್ಸುಳ್ಳ **ತ್ರಿಪದೇ** ಪ್ರಾತಃ-ಮಾಧ್ಯಂದಿನ-ಸಾಯಂ ಸವನಗಳೆಂಬ ಮೂರು ಪಾದಗಳುಳ್ಳ **ಚತುಃಶೃಂಗಾಯ** ಋಕ್-ಯಜುಃ-ಸಾಮ-ಅಥರ್ವವೆಂಬ ನಾಲ್ಕು ವೇದಗಳೇ ಕೊಂಬುಗಳಾಗಿವುಳ್ಳ **ತಂತವೇ** ವ್ಯಾಪ್ತನಾದ ಕರ್ಮಸಂತತಿಗೆ ಕಾರಣನಾದ (ಯಜ್ಞಾತ್ಮಕನಾದ) ಪ್ರಸ್ತುತವಾದ್ದರಿಂದ ಸಂತತಿಯ ಅಭಿವೃದ್ಧಿಗೆ, ವಂಶದ ಅಭಿವೃದ್ಧಿಗೆ ಕಾರಣನಾದ **ಸಪ್ತಹಸ್ತಾಯ** ಗಾಯತ್ರೀ, ಉಷ್ಣಿಕ್, ಬೃಹತೀ, ತ್ರಿಷ್ಟುಪ್, ಅನುಷ್ಟುಪ್, ಜಗತೀ, ಶಕ್ವರೀ ಎಂಬ ಏಳು ಛಂದಸ್ಸುಗಳೇ ಕೈಗಳಾಗಿವುಳ್ಳ **ತ್ರಯೀವಿದ್ಯಾತ್ಮನೇ** ವೇದತ್ರಯಗಳಲ್ಲಿ ವಿದ್ಯಾವಂತರಾದ ಸೋಮರಸಪಾನ ಮಾಡುವ ಯಜ್ಞಕರ್ತೃಗಳ ಅಂತರ್ಯಾಮಿಯಾದ, ಮೂರು ವೇದಗಳೆಂಬ ವಿದ್ಯೆಗಳಿಂದ ಪ್ರತಿಪಾದ್ಯವಾದ ಸ್ವರೂಪವುಳ್ಳ (**ಯಜ್ಞಾಯ** ಯಜ್ಞನಾಮಕನಾಗಿ) ಯಜ್ಞಾಂತರ್ಯಾಮಿಯಾದ ನಿನಗೆ **ನಮೋ ನಮಃ** ನಮಸ್ಕಾರವು.

**ಚತ್ವಾರಿ ಶೃಂಗಾ ತ್ರಯೋ ಅಸ್ಯ ಪಾದಾ ದ್ವೇ ಶೀರ್ಷೇ ಸಪ್ತಹಸ್ತಾಸೋ ಅಸ್ಯ । ತ್ರಿಧಾ ಬದ್ಧೋ ವೃಷಭೋ ರೋರವೀತಿ ಮಹೋ ದೇವೋ ಮರ್ತ್ಯಾಂ ಆವಿವೇಶ**

ಎಂಬ ಶ್ರುತ್ಯರ್ಥವನ್ನೇ ಮೇಲಿನ ಶ್ಲೋಕದಲ್ಲಿ ಹೇಳಿರುವರು. ಇದರ ಅರ್ಥ ಹೇಳುವ ಪ್ರಮಾಣ ಹೀಗಿದೆ.

**ಚತ್ವಾರಿ ಶೃಂಗಾ ವೇದಾಸ್ತು ಪಾದಾಸ್ತ್ರಿಸವನಾನಿ ಚ ।**
**ಪ್ರಾಯಣೀಯಂ ಶಿರಸ್ತ್ವೇಕಮನ್ಯಚ್ಚೋದನೀಯಕಮ್ ॥**

**ಹಸ್ತಾಸ್ತು ಸಪ್ತ ಛಂದಾಸಿ ತೈರ್ಗೃಹ್ಣಾತಿ ಫಲಾನ್ಯಸೌ ।**
**ಮಂತ್ರಬ್ರಾಹ್ಮಣಕಲ್ಪೈಸ್ತು ತ್ರಿಧಾ ಬದ್ಧ ಇತೀರ್ಯತೇ ॥**

**ಶಾಸ್ತೋದ್ಗಾತೃಸ್ತುತಿರವೈ ರೋರವೀತ್ಯೃತ್ವಿಜೋ ಮುಖಾತ್ ।**
**ವೃಷಭೋ ಮಹಾನ್ ಸ್ವಧರ್ಮತ್ವಾತ್ ದೇವಸ್ತು ಫಲಭಾವನಾತ್ ॥**

ಇಲ್ಲಿ ಹೇಳಿದ ಅರ್ಥ ಹೀಗಿದೆ. ಮಂತ್ರ, ಬ್ರಾಹ್ಮಣ, ಕಲ್ಪಸೂತ್ರಗಳಿಂದ ಬದ್ಧನು ಅಂದರೆ ಅವುಗಳಲ್ಲಿ ಹೇಳಿದಂತೆ ಯಜ್ಞ ಮಾಡಬೇಕೆಂದರ್ಥ. ಶಾಸ್ತಾ, ಉದ್ಗಾತೃ, ಸ್ತುತಿ ಮುಂತಾದ ರವ ಶಬ್ದಗಳಿಂದ ಋತ್ವಿಕ್‌ಗಳ ಮುಖದಿಂದ ಅತಿಶಯವಾಗಿ ಶಬ್ದ ಮಾಡುವನು ವೃಷಭಃ ಧರ್ಮಸ್ವರೂಪವು. ಮಹಾನ್ ದೇವಃ ಕರ್ಮಗಳಲ್ಲಿದ್ದು ಮೋಕ್ಷಾದಿ ಫಲದಾತನು. ಆದ್ದರಿಂದ ಮಹಾದೇವನು ಇಂತಹ ಶ್ರೀಹರಿಯು ಯಜ್ಞ ನಿಯಾಮಕನಾಗಿ ಮರ್ತ್ಯಲೋಕಕ್ಕೆ ಪ್ರವೇಶಿಸಿದನು. ಅಂದರೆ ಮರ್ತ್ಯರು ಯಜ್ಞ ಮಾಡಿ ಫಲ ಹೊಂದುವಂತೆ ಮಾಡಿದನು. ಎಂದು ಶ್ರುತ್ಯರ್ಥವನ್ನು ಪ್ರಮಾಣದಲ್ಲಿ ಹೇಳಿದೆ. ।।೩೧।।

**ನಮಃ ಶಿವಾಯ ರುದ್ರಾಯ ನಮಃ ಶಕ್ತಿಧರಾಯ ಚ ।**
**ಸರ್ವವಿದ್ಯಾಧಿಪತಯೇ ಭೂತಾನಾಂ ಪತಯೇ ನಮಃ ।।೩೨।।**

**ಶಿವಾಯ** ಸುಖರೂಪನಾಗಿ ಮಂಗಲನಾದ ಶಿವಾಂತರ್ಯಾಮಿಯಾದ **ರುದ್ರಾಯ** ರೋಗನಾಶಕನಾದ ಸಂಸಾರವೆಂಬ ರೋಗವನ್ನೂ ಕಳೆಯುವ, ನಿನಗೆ **ನಮಃ** ನಮಸ್ಕಾರವು **ಸರ್ವವಿದ್ಯಾಧಿಪತಯೇ** ಎಲ್ಲ ವಿದ್ಯೆಗಳಿಗೂ ಮುಖ್ಯ ಸ್ವಾಮಿಯಾದ **ಶಕ್ತಿಧರಾಯ** ಲಕ್ಷ್ಮೀದೇವಿಯನ್ನು ಧರಿಸಿದ ''ಶಕ್ಯತ್ವಾತ್ ಶಕ್ತಯೋ ಭಾರ್ಯಾಃ'' ಎಂದಿದೆ. ಅಥವಾ ಶಕ್ತ್ಯಾಯುಧ ಧರಿಸಿದ ಎಂದೂ ಅರ್ಥ **ಭೂತಾನಾಂ ಪತಯೇ** ರಮಾ-ಬ್ರಹ್ಮಾದಿ ಸಕಲಚೇತನರಿಗೂ, ಆಕಾಶ ಮುಂತಾದ ಪಂಚಭೂತಗಳಿಗೂ ಪಾಲಕನಾದ ಸ್ವಾಮಿಯಾದ ನಿನಗೆ **ನಮಃ** ನಮಸ್ಕಾರವು.

''ಋಜಂ ದ್ರಾವಯತೇ ಯಸ್ಮಾತ್ ರುದ್ರಸ್ತಸ್ಮಾಜ್ಜನಾರ್ದನಃ । ಈಶನಾದೇವ ಚೇಶಾನಃ'' ಮುಂತಾದ ಬ್ರಹ್ಮಾಂಡಪುರಾಣ, ಐತರೇಯ ಮತ್ತು ತೈತ್ತಿರೀಯ ಶ್ರುತಿಗಳಿಂದ ನಾವು ಹೇಳಿದುದೇ ಸರಿಯಾದ ಅರ್ಥ. ಹೀಗೆ ಹೇಳುವುದರಿಂದ, ಪಾರ್ವತೀಪತಿಯಾದ ರುದ್ರನಿಂದ ವಿಷ್ಣುವು ಅಭಿನ್ನನಾದದ್ದರಿಂದ ವಿಷ್ಣುವಿಗೆ ಶಿವಾದಿಶಬ್ದವಾಚ್ಯತ್ವವು ಉಪಪನ್ನವಾಗುತ್ತದೆಂಬ ವಾದವನ್ನು ನಿರಾಕರಿಸಿದಂತಾಗುತ್ತದೆ. ಅವರೆಲ್ಲರ ಹೆಸರುಗಳೂ ವಿಷ್ಣುವಿಗೆ ಉಂಟು. ''ತತ್ತನ್ನಾಮ್ನೋಚ್ಯತೇ ವಿಷ್ಣುಃ ಸರ್ವಶಾಸ್ತ್ರತ್ವಹೇತುತಃ । ನ ಕ್ವಾಪಿ ಕಿಂಚಿನ್ನಾಮಾಸ್ತಿ ತಮೃತೇ ಪುರುಷೋತ್ತಮಮ್ ।। ಇತ್ಯಾದಿ ಪ್ರಮಾಣಗಳಿವೆ. ।।೩೨।।

ಸಾಧಾರಣಾಯ ಎಂಬ ಪಾಠದಲ್ಲಿ ಎಲ್ಲ ಪ್ರಾಣಿಗಳಲ್ಲಿ ಇರುವ ರೂಪಗಳಲ್ಲಿ ಗುಣ, ಶಕ್ತಿ ಮುಂತಾದವುಗಳಿಂದ ಸಮನಾದ ನಿನಗೆ **ನಮಃ** ನಮಸ್ಕಾರವು ಎಂದು ಅರ್ಥ.

**ನಮೋ ಹಿರಣ್ಯಗರ್ಭಾಯ ಪ್ರಾಣಾಯ ಜಗದಾತ್ಮನೇ ।**
**ಯೋಗೈಶ್ವರ್ಯಶರೀರಾಯ ನಮಸ್ತೇ ಯೋಗಹೇತವೇ ॥೩೩॥**

**ಹಿರಣ್ಯಗರ್ಭಾಯ ಹಿ** ದುಃಖಗಳನ್ನು ಕಳೆವ, ರ ಸುಖಗಳನ್ನು ಕೊಡುವ, **ಣ್ಯಂ** ಸ್ತುತ್ಯನಾದ ಬಲ-ಜ್ಞಾನಾತ್ಮಕನಾದ, ಬ್ರಹ್ಮಾಂಡೋತ್ಪಾದಕವಾದ ವೀರ್ಯವುಳ್ಳ ಬ್ರಹ್ಮಾಂಡಾಂತರ್ಯಾಮಿಯಾದ **ಪ್ರಾಣಾಯ** ಮುಖ್ಯಚೇಷ್ಟಕನಾದ ವಾಯ್ವಂತರ್ಯಾಮಿಯಾದ **ಜಗದಾತ್ಮನೇ** ಚೇತನಾಚೇತನಪ್ರಪಂಚಕ್ಕೆ ಸ್ವಾಮಿಯಾದ ಅಂತರ್ಯಾಮಿಯಾದ **ಯೋಗೈಶ್ವರ್ಯಶರೀರಾಯ** ಅಣಿಮಾದಿ ಯೋಗಸಿದ್ಧಿಗಳೇ ಶರೀರವಾಗಿ ಉಳ್ಳ **ಯೋಗಹೇತವೇ** ಅಷ್ಟಾಂಗಯೋಗಕ್ಕೆ ಕಾರಣನಾದ (ಜನರ ಅಣಿಮಾದಿಗಳ ಉಪಾಯಕ್ಕೆ ಕಾರಣನಾದ) ಪ್ರಾಣಾಯಾಮಾದಿಪ್ರತಿಪಾದಕವಾದ ಯೋಗಶಾಸ್ತ್ರಕರ್ತೃವಾದ ದತ್ತಾತ್ರೇಯಾದಿ ರೂಪನಾದ **ತೇ** ನಿನಗೆ **ನಮಃ** ನಮಸ್ಕಾರವು.

''ಹಿರಣ್ಯಗರ್ಭಃ ಸಮವರ್ತತಾಗ್ರೇ'' ''ಅತ ಏವ ಪ್ರಾಣಃ'' ಮುಂತಾದ ಪ್ರಮಾಣಗಳು. ಹಿನೋತಿ ಪರಿಹರತಿ ದುಃಖಂ ರಾತಿ ದದಾತಿ ಸುಖಂ ಇತಿ ಹಿರಂ, ಬಲಜ್ಞಾನಾತ್ಮಕತ್ವಾತ್ ಣ್ಯಂ ಹಿರಂ ಚತ್ ಣ್ಯಂ ಚ ಹಿರಣ್ಯಂ ವೀರ್ಯಂ ಬ್ರಹ್ಮಾಂಡೋತ್ಪಾದಕಂ ಯಸ್ಯ ಗರ್ಭೇ ಸಃ ಹಿರಣ್ಯಗರ್ಭಃ ತಸ್ಮೈ ಹಿರಣ್ಯಗರ್ಭಾಯ ಎಂದು ವಿಗ್ರಹವನ್ನು ತಿಳಿಯಬೇಕು. ॥೩೩॥

**ನಮಸ್ತೇ ಆದಿದೇವಾಯ ದೇವದೇವಾಯ ತೇ ನಮಃ ।**
**ನಾರಾಯಣಾಯ ಋಷಯೇ ನರಾಯ ಹರಯೇ ನಮಃ ॥೩೪॥**

**ಆದಿದೇವಾಯ** ಚತುರ್ಮುಖ ಮೊದಲಾದ ಚೇತನರು ಮಹತ್ತತ್ತ್ವ ಮೊದಲಾದ ಅಚೇತನಗಳು ಸೃಷ್ಟವಾಗುವ ಮೊದಲೇ ಕ್ರೀಡಾದಿಗುಣ ವಿಶಿಷ್ಟನಾದ, **ದೇವದೇವಾಯ** ಬ್ರಹ್ಮಾದಿಗಳಿಗೂ **ದೇವದೇವಾಯ** ದೇವತೆಗಳಿಂದ ಸ್ತುತ್ಯನಾದ ನಿನಗೆ ನಮಸ್ಕಾರ, **ಋಷಯೇ** ಜ್ಞಾನರೂಪನಾದ **ನಾರಾಯಣಾಯ** ಜ್ಞಾನಾನಂದಾದಿಗುಣ ಉಳ್ಳ **ನರಾಯ** ನಾಶ ರಹಿತನಾದ್ದರಿಂದ ನರ ಶಬ್ದವಾಚ್ಯನಾದ **ಹರಯೇ** ಅರಿಷ್ಟಪರಿಹಾರಕನಾದ ಇಷ್ಟ ಪ್ರಾಪಕನಾದ ನಿನಗೆ **ನಮಃ** ನಮಸ್ಕಾರವು. ''ಏಕೋ ನಾರಾಯಣ ಆಸೀತ್ ನ ಬ್ರಹ್ಮಾ ನ ಚ ಶಂಕರಃ'' ''ಆನೀದವಾತಂ ಸ್ವಧಯಾ ತದೇಕಂ'' ಮುಂತಾದ ಶ್ರುತಿಗಳು ಈ ವಿಷಯದಲ್ಲಿ ಇವೆ. ॥೩೪॥

**ನಮೋ ಮರಕತಶ್ಯಾಮವಪುಷೇಽಧಿಗತಶ್ರಿಯೇ ।**
**ಕೇಶವಾಯ ನಮಸ್ತುಭ್ಯಂ ನಮಸ್ತೇ ಪೀತವಾಸಸೇ ॥೩೫॥**

**ಮರಕತಶ್ಯಾಮವಪುಷೇ** ಮರಕತಮಣಿಯಂತೆ ಶ್ಯಾಮವರ್ಣದಿಂದ ಕೂಡಿದ

ಶರೀರವುಳ್ಳ **ಅಧಿಗತಶ್ರಿಯೇ** ಎಲ್ಲರಿಗಿಂತ ಹೆಚ್ಚಾಗಿ ಸರ್ವದಾ ಸಂಪತ್ತನ್ನು ಹೊಂದಿದ ಲಕ್ಷ್ಮೀಯನ್ನು ವಕ್ಷಸ್ಥಳದಲ್ಲಿ ಧರಿಸಿರುವ ನಿನಗೆ **ನಮಃ** ನಮಸ್ಕಾರವು. **ಕೇಶವಾಯ** ಬ್ರಹ್ಮ-ರುದ್ರಪ್ರೇರಕನಾದ್ದರಿಂದ ಕೇಶವ ಶಬ್ದವಾಚ್ಯನಾದ **ತುಭ್ಯಂ** ನಿನಗೆ **ನಮಃ** ನಮಸ್ಕಾರ **ಪೀತವಾಸಸೇ** ಪೀತಾಂಬರಧಾರಿಯಾದ **ತೇ** ನಿನಗೆ **ನಮಃ** ನಮಸ್ಕಾರ.

ಅಧಿಗತಾ ಶ್ರೀಃ ಯಂ ಸಃ ತಸ್ಮೈ ಹೀಗಿ ವಿಗ್ರಹ ಮಾಡಿ, ಲಕ್ಷ್ಮೀದೇವಿಯು ಯಾವನನ್ನು ತಿಳಿದಿರುವಳೋ ಅಥವಾ ಹೊಂದಿರುವಳೋ ಅವನು ಎಂದು ಅರ್ಥ ಮಾಡಿದ್ದಾರೆ.. ।।೩೫।।

**ತ್ವಂ ಸರ್ವವರದಃ ಪುಂಸಾಂ ವರೇಣ್ಯ ವರದರ್ಷಭ ।**
**ಅತಸ್ತೇ ತಪಸಾ ಧೀರಾಃ ಪಾದರೇಣುಮುಪಾಸತೇ ।।೩೬।।**

**ತ್ವಂ** ನೀನು **ಸರ್ವವರದಃ** ಎಲ್ಲರಿಗೂ ಎಲ್ಲ ವರಗಳನ್ನು ಕೊಡುವವನು **ವರದರ್ಷಭ** ವರ ಕೊಡುವದರಲ್ಲಿ ಅತಿಶ್ರೇಷ್ಠನು ಆದ್ದರಿಂದಲೇ **ಪುಂಸಾಂ** ಪುರುಷರಿಂದ **ವರೇಣ್ಯಃ** ಭಜನೀಯನು **ಅತಃ** ಆದ್ದರಿಂದ **ಧೀರಾಃ** ಜ್ಞಾನಿಗಳು **ತೇ** ನಿನ್ನ **ಪಾದರೇಣುಂ ಚ** ಪಾದಧೂಳಿಯನ್ನು **ತಪಸಾ** ತಪಸ್ಸಿನಿಂದ ಮೋಕ್ಷಕ್ಕಾಗಿ **ಉಪಾಸ್ತೇ** ಭಜಿಸುವರು. ।।೩೬।।

**ಅನ್ವವರ್ತಂತ ಯಂ ದೇವಾಃ ಶ್ರೀವಿನಿರ್ಜಿತಪದ್ಮಯೋಃ ।**
**ಸ್ಪೃಹಯಂತ ಇವಾಮೋದಂ ಭಗವಾನ್ ಮೇ ಪ್ರಸೀದತಾಮ್ ।।೩೭।।**

**ಶ್ರೀವಿನಿರ್ಜಿತಪದ್ಮಯೋಃ (ಪಾದಯೋಃ)** ತನ್ನ ಕಾಂತಿಯಿಂದ ಕಮಲಗಳನ್ನು ಗೆದ್ದ ನಿನ್ನ ಪಾದಗಳ **ಆಮೋದಂ** ಸುವಾಸನೆಯನ್ನು **ಸ್ಪೃಹಯಂತಃ** ಇವ ಆಶಿಸುವವರಂತೆ **ದೇವಾಃ** ಬ್ರಹ್ಮಾದಿದೇವತೆಗಳು **ಯಂ** ಯಾವ ಶ್ರೀಹರಿಯನ್ನು **ಅನ್ವವರ್ತಂತ** ಅನುಸರಿಸುತ್ತಿರುವರೋ **ಸಃ ಭಗವಾನ್** ಆ ಶ್ರೀಮನ್ನಾರಾಯಣನು **ಮೇ** ನನ್ನ ವಿಷಯದಲ್ಲಿ **ಪ್ರಸೀದತಾಂ** ಪ್ರಸನ್ನನಾಗಲಿ. ।।೩೭।।

**ಏತೈರ್ಮಂತ್ರೈರ್ಹೃಷಿಕೇಶಮಾವಾಹನಪುರಸ್ಸರಮ್ ।**
**ಅರ್ಚಯೇಚ್ಛ್ರದ್ಧಯಾ ಯುಕ್ತಃ ಪಾದ್ಯೋಪಸ್ಪರ್ಶನಾದಿಭಿಃ ।।೩೮।।**

**ಏತೈಃ ಮಂತ್ರೈಃ** ಮೇಲೆ ಹೇಳಿದ ಒಂಭತ್ತು ಮಂತ್ರಗಳಿಂದ **ಆವಾಹನಪುರಸ್ಸರಂ** ಆವಾಹನ ಮೊದಲು ಮಾಡಿ **ಹೃಷಿಕೇಶಂ** ಮನಸ್ಸು ಮೊದಲಾದ ಇಂದ್ರಿಯಗಳಿಗೆ ನಿಯಾಮಕನಾದ ಶ್ರೀಹರಿಯನ್ನು **ಪಾದ್ಯೋಪಸ್ಪರ್ಶನಾದಿಭಿಃ ಚ** ಪಾದ್ಯ-ಅರ್ಘ್ಯ-ಆಚಮನ-ಸ್ನಾನ ಮುಂತಾದ ಷೋಡಶೋಪಚಾರಗಳಿಂದ **ಶ್ರದ್ಧಯಾ ಯುಕ್ತಃ ಅರ್ಚಯೇತ್** ಶ್ರದ್ಧೆಯಿಂದ ಕೂಡಿದವನಾಗಿ ಪೂಜಿಸಬೇಕು. ''ಯದೇವ ಶ್ರದ್ಧಯಾ ಕರೋತಿ ತದೇವ ವೀರ್ಯವತ್ತರಂ ಭವತಿ'' ಎಂದು ಪ್ರಮಾಣವಿದೆ. ।।೩೮।।

**ಅರ್ಚಿತಂ ಗಂಧಮಾಲ್ಯಾದ್ಯೈಃ ಪಯಸಾ ಸ್ನಾಪಯೇದ್ವಿಭುಮ್ ।**
**ವಸ್ತ್ರೋಪವೀತಾಭರಣಪಾದ್ಯೋಪಸ್ಪರ್ಶನೈಸ್ತತಃ ॥೩೯॥**

**ವಿಭುಂ** ಆವಾಹಿತನಾದ ಶ್ರೀಹರಿಯನ್ನು **ಪಯಸಾ** ಹಾಲಿನಿಂದ, ನೀರಿನಿಂದ **ಸ್ನಾಪಯೇತ್** ಸ್ನಾನ ಮಾಡಿಸಬೇಕು. **ತತಃ** ಅನಂತರ **ಗಂಧಮಾಲ್ಯಾದ್ಯೈಃ** ಗಂಧ-ಹೂವು-ತುಳಸೀದಳ ಯುಕ್ತವಾದ ವಸ್ತ್ರ -ಉಪವೀತ-ಜನಿವಾರ-ಆಭರಣ-ಪಾದ್ಯ-ಉಪಸ್ಪರ್ಶನ-ಆಚಮನಗಳಿಂದ **ಅರ್ಚಿತಂ ಕುರ್ಯಾತ್** ಪೂಜಿತನನ್ನಾಗಿ ಮಾಡಬೇಕು. ತುಳಿಸಿ ಇಲ್ಲದೇ ಶ್ರೀಹರಿಯನ್ನು ಪೂಜಿಸಬಾರದು ''ತುಲಸೀರಹಿತೈಃ ಪುಷ್ಪೈಃ'' ಎಂದು ಶತಾಪರಾಧಗಳಲ್ಲಿ ತುಳಸಿ ಇಲ್ಲದ ಪೂಜೆ ಪರಿಗಣಿತವಾಗಿದೆ. ॥೩೯॥

**ಗಂಧಧೂಪಾದಿಭಿಶ್ಚಾರ್ಚೇತ್ ದ್ವಾದಶಾಕ್ಷರವಿದ್ಯಯಾ ।**
**ಶೃತಂ ಪಯಸಿ ನೈವೇದ್ಯಂ ಶಾಲ್ಯನ್ನಂ ವಿಭವೇ ಸತಿ ॥೪೦॥**

**ಸಸರ್ಪಿಃ ಸಗುಡಂ ದತ್ವಾ ಜುಹುಯಾನ್ಮೂಲವಿದ್ಯಯಾ ।**
**ನಿವೇದಿತಂ ತದ್ಭಕ್ತಾಯ ದದ್ಯಾದ್ಭುಂಜೀತ ವಾ ಸ್ವಯಮ್ ॥೪೧॥**

**ಗಂಧಧೂಪಾದಿಭಿಃ ಚ** ಗಂಧ-ಧೂಪ ಮೊದಲಾದವುಗಳಿಂದಲೂ **ಅರ್ಚೇತ್** ಪೂಜಿಸಬೇಕು **ವಿಭವೇ ಸತಿ** ಐಶ್ವರ್ಯವಿದ್ದಲ್ಲಿ **ಸಸರ್ಪಿಃ** ತುಪ್ಪದಿಂದ ಸಹಿತವಾದ **ಸಗುಡಂ** ಬೆಲ್ಲದಿಂದ ಸಹಿತವಾದ **ಪಯಸಿ** ಹಾಲಿನಲ್ಲಿ **ಶೃತಂ** ಪಕ್ವವಾದ **ಶಾಲ್ಯನ್ನಂ** ಸಣ್ಣಕ್ಕಿ ಅನ್ನವನ್ನು ಪಾಯಸವನ್ನು ಎಂದು ಅರ್ಥ. **ದ್ವಾದಶಾಕ್ಷರವಿದ್ಯಯಾ** ''ಓಂ ನಮೋ ಭಗವತೇ ವಾಸುದೇವಾಯ'' ಎಂಬ ಮಂತ್ರದಿಂದ **ನೈವೇದ್ಯಂ ದತ್ವಾ** ನೈವೇದ್ಯ ಮಾಡಿ **ಮೂಲವಿದ್ಯಯಾ** ಲಿಂಗೇರಿ ಆಚಾರ್ಯರ ಪ್ರಕಾರ ನಾರಾಯಣಾಷ್ಟಾಕ್ಷರಮಂತ್ರದಿಂದ, ಶ್ರೀಸತ್ಯಧರ್ಮರು ಹಾಗೂ ಛಲಾರೀ ಆಚಾರ್ಯರ ಪ್ರಕಾರ ಪ್ರಸ್ತುತವಾದ ವಾಸುದೇವದ್ವಾದಶಾಕ್ಷರಮಂತ್ರದಿಂದ **ಜುಹುಯಾತ್** ಪಾಯಸವನ್ನು ಅಗ್ನಿಯಲ್ಲಿ ಹೋಮ ಮಾಡಬೇಕು **ನಿವೇದಿತಂ** ನೈವೇದ್ಯ ಮಾಡಿದ ಪಾಯಸವನ್ನು **ತದ್ಭಕ್ತಾಯ** ವೈಷ್ಣವನಿಗೆ **ದದ್ಯಾತ್** ಕೊಡಬೇಕು. **ವಾ** ಮತ್ತು **ಸ್ವಯಂ** ತಾನೂ ಕುಟುಂಬದವರೊಂದಿಗೆ **ಭುಂಜೀತ** ಊಟ ಮಾಡಬೇಕು.

ವಾಶಬ್ದವು ಸಮುಚ್ಚಾಯಕವಾಗಿದೆ. ಭಕ್ತರ ಭೋಜನವಾದ ಮೇಲೆ ತಾನೂ ಭೋಜನ ಮಾಡಬೇಕೆಂದು ಅರ್ಥವಾಗುತ್ತದೆ. ವಿಕಲ್ಪಾರ್ಥಕವೆಂದರೇ ಭಕ್ತರಿಗಾದರೂ ಕೊಡಬೇಕು, ತಾನಾದರೂ ಉಣ್ಣಬೇಕು ಎಂದರ್ಥವಾಗುತ್ತದೆ. ಹೀಗೆ ಅರ್ಥ ಮಾಡಿದರೆ ನಾಹಂ ತಥಾ ಅದ್ಮಿ ಎಂಬುದಕ್ಕೆ ಅನನುಗುಣವಾಗುವದು. ಅಸಾಕ್ಷಿಕ ಭೋಜನ ವಿಹಿತವಲ್ಲವಾದ್ದರಿಂದ ದೋಷ ಬರುವದು. ಕಾರಣ ಬ್ರಾಹ್ಮಣರಿಗೆ ಬಡಿಸಿ ಶೇಷವನ್ನು ತಾನು ಉಣ್ಣಬೇಕು ಎಂದೇ ಅರ್ಥ ಮಾಡಬೇಕು. ॥೪೦,೪೧॥

**ದತ್ತ್ವಾಚಮನಮರ್ಚಿತ್ವಾ ತಾಂಬೂಲಂ ಚ ನಿವೇದಯೇತ್ ।**
**ಜಪೇದಷ್ಟೋತ್ತರಶತಂ ಸ್ತುವೀತ ಸ್ತುತಿಭಿಃ ಪ್ರಭುಮ್ ॥೪೨॥**

ನೈವೇದ್ಯವನ್ನು ಸಮರ್ಪಿಸಿದ ನಂತರ **ಆಚಮನಂ ದತ್ತ್ವಾ** ಆಚಮನವಿತ್ತು **ಅರ್ಚಿತ್ವಾ** ಪುಷ್ಪಾದಿಗಳಿಂದ ಪೂಜಿಸಿ **ತಾಂಬೂಲಂ ಚ ನಿವೇದಯೇತ್** ತಾಂಬೂಲವನ್ನು ಸಮರ್ಪಿಸಬೇಕು. **ಅಷ್ಟೋತ್ತರಶತಂ ಜಪೇತ್** ದ್ವಾದಶಾಕ್ಷರಮಂತ್ರವನ್ನು ೧೦೮ ಬಾರಿ ಜಪಿಸಬೇಕು. **ಪ್ರಭುಂ** ಶ್ರೀಮನ್ನಾರಾಯಣನನ್ನು **ಸ್ತುತಿಭಿಃ ಸ್ತುವೀತ** ಜಿತಂ ತೇ ಇತ್ಯಾದಿ ಸ್ತೋತ್ರಗಳಿಂದ ಸ್ತುತಿಸಬೇಕು. ''ನಾರಾಯಣೋ ನರಃ ಶೌರಿಃ'' ಮುಂತಾದ ೧೦೮ ಭಗವನ್ನಾಮಗಳನ್ನು ಜಪಿಸಬೇಕು. ॥೪೨॥

**ಕೃತ್ವಾ ಪ್ರದಕ್ಷಿಣಂ ಭೂಮೌ ಪ್ರಣಮೇದ್ದಂಡವನ್ಮುದಾ ।**
**ಕೃತ್ವಾ ಶಿರಸಿ ತಚ್ಛೇಷಂ ದೇವಮುದ್ವಾಸಯೇತ್ ತತಃ ॥೪೩॥**

**ಪ್ರದಕ್ಷಿಣಂ ಕೃತ್ವಾ** ಪ್ರದಕ್ಷಿಣೆ ಮಾಡಿ **ಮುದಾ** ಸಂತೋಷದಿಂದ **ಭೂಮೌ** ಭೂಮಿಯಲ್ಲಿ **ದಂಡವತ್ ಪ್ರಣಮೇತ್** ನಿರಭಿಮಾನದಿಂದ ದಂಡದಂತೆ ಉದ್ದಕ್ಕೆ ನಮಸ್ಕರಿಸಬೇಕು. **ತಚ್ಛೇಷಂ** ಶ್ರೀಹರಿಗೆ ಸಮರ್ಪಿಸಿದ ತುಳಸಿ-ಹೂವು ಮುಂತಾದ ನಿರ್ಮಾಲ್ಯವನ್ನು **ಶಿರಸಿ ಕೃತ್ವಾ** ತಲೆಯಲ್ಲಿ ಧರಿಸಿ **ದೇವಂ ಉದ್ವಾಸಯೇತ್** ಆವಾಹಿಸಲ್ಪಟ್ಟ ದೇವರನ್ನು ಉದ್ವಾಸನೆ ಮಾಡಬೇಕು. ಹೃದ್ಗುಹೆಯಲ್ಲಿ ನೆಲಿಸಿದಂತೆ ಧ್ಯಾನಿಸಬೇಕು. ॥೪೩॥

**ದ್ವ್ಯವರಾನ್ ಭೋಜಯೇದ್ ವಿಪ್ರಾನ್ ಪಾಯಸೇನ ಯಥೋಚಿತಮ್ ।**
**ಭುಂಜೀತ ತೈರನುಜ್ಞಾತೋ ಹುತಶೇಷಂ ಸಭಾಜಿತೈಃ ॥೪೪॥**

**ದ್ವ್ಯವರಾನ್** ಇಬ್ಬರಿಗೆ ಕಡಿಮೆಯಾಗದಂತೆ **ವಿಪ್ರಾನ್** ಸದಾಚಾರಿಗಳಾದ ವೈಷ್ಣವರನ್ನು, ಸಾಧ್ಯವಾದರೆ ಹನ್ನೆರಡು ಜನ ಬ್ರಾಹ್ಮಣರನ್ನು **ಯಥೋಚಿತಂ** ಶಕ್ತ್ಯನುಸಾರವಾಗಿ **ಪಾಯಸೇನ** ಪಾಯಸದಿಂದ **ಭೋಜಯೇತ್** ಊಟ ಮಾಡಿಸಬೇಕು. **ಸಭಾಜಿತೈಃ** ತಾಂಬೂಲ-ದಕ್ಷಿಣೆಗಳಿಂದ ಸತ್ಕೃತರಾದ **ತೈಃ** ಆ ಬ್ರಾಹ್ಮಣರಿಂದ **ಅನುಜ್ಞಾತಃ** ಅಪ್ಪಣೆ ಪಡೆದವನಾಗಿ **ಹುತಶೇಷಂ ಭುಂಜೀತ** ಅಗ್ನಿಯಲ್ಲಿ, ವಿಪ್ರರ ಮುಖದಲ್ಲಿ ಹೋಮಿಸಿ ಉಳಿದುದನ್ನು ಪರಿವಾರದೊಂದಿಗೆ ಉಣ್ಣಬೇಕು. ॥೪೪॥

**ಬ್ರಹ್ಮಚಾರ್ಯಥ ತದ್ರಾತ್ರ್ಯಾಂ ಶ್ವೋಭೂತೇ ಪ್ರಥಮೇಽಹನಿ ।**
**ಪ್ರಾತಃ ಶುಚಿರ್ಯಥೋಕ್ತೇನ ವಿಧಿನಾ ಸುಸಮಾಹಿತಃ ॥೪೫॥**

**ಅಥ** ಅನಂತರ **ತದ್ರಾತ್ರ್ಯಾಂ** ವ್ರತಾರಂಭದ ಹಿಂದಿನ ದಿನದ ರಾತ್ರಿಯಲ್ಲಿ ಬ್ರಹ್ಮಚಾರಿಯಾಗಿ ಗುಹ್ಯೇಂದ್ರಿಯ ನಿಯಮ ಉಳ್ಳವನಾಗಿ **ಶಯೀತ** ಮಲಗಬೇಕು. ಈ ವರೆಗೆ ವ್ರತಾರಂಭದ ಹಿಂದಿನ ದಿನದ ಕೃತ್ಯವನ್ನು ಹೇಳಿ, ವ್ರತದಿನದ ಕೃತ್ಯವನ್ನು

ಹೇಳುವರು. **ಶ್ವೋಭೂತೇ** ಮಾರನೆಯ ದಿನ **ಪ್ರಾತಃ** ಬೆಳಿಗ್ಗೆ **ಯಥೋಕ್ತೇನ ವಿಧಿನಾ** ಶಾಸ್ತ್ರದಲ್ಲಿ ಹೇಳಿದ ರೀತಿಯಿಂದ **ಶುಚಿಃ ಸನ್** ಸ್ನಾನಾದಿಗಳಿಂದ ಶುದ್ಧನಾಗಿ **ಸುಸಮಾಹಿತಃ** ಏಕಾಗ್ರಚಿತ್ತನಾಗಿ ।।೪೫।।

**ಪಯಸಾ ಸ್ನಾಪಯಿತ್ವಾರ್ಚೇದ್ ಯಾವದ್ ವ್ರತಸಮಾಪನಮ್ ।**
**ಪಯೋಭಕ್ಷೋ ವ್ರತಮಿದಂ ಚರೇದ್ ವಿಷ್ಣ್ವರ್ಚನಾದೃತಃ ।।೪೬।।**

**ಯಾವದ್ವ್ರತಸಮಾಪನಂ** ವ್ರತ ಮುಗಿಯುವ ವರೆಗೆ ಅಂದರೆ ಹನ್ನೆರಡು ದಿವಸ ಪರ್ಯಂತ ಶ್ರೀಹರಿಯನ್ನು **ಪಯಸಾ** ಹಾಲಿನಿಂದ **ಸ್ನಾಪಯಿತ್ವಾ** ಸ್ನಾನ ಮಾಡಿಸಿ (ಅಭಿಷೇಕ ಮಾಡಿ) **ಅರ್ಚೇತ್** ಪೂಜಿಸಬೇಕು. **ಪಯೋಭಕ್ಷಃ** ಹಾಲು ಮಾತ್ರ ಆಹಾರ ಉಳ್ಳವನಾಗಿ **ವಿಷ್ಣ್ವರ್ಚನಾದೃತಃ** ಶ್ರೀಹರಿಯ ಪೂಜೆಯಲ್ಲಿ ಆದರ ಉಳ್ಳವನಾಗಿ **ಇದಂ ವ್ರತಂ ಚರೇತ್** ಈ ವ್ರತವನ್ನು ಮಾಡಬೇಕು. ।।೪೬।।

**ಪೂರ್ವವಜ್ಜುಹುಯಾದಗ್ನಿಂ ಬ್ರಾಹ್ಮಣಾಂಶ್ಚಾಪಿ ಭೋಜಯೇತ್ ।**
**ಏವಂ ತ್ವಹರಹಃ ಕುರ್ಯಾತ್ ದ್ವಾದಶಾಹಂ ಪಯೋವ್ರತಮ್ ।।೪೭।।**

**ಏವಂ** ಈ ರೀತಿಯಾಗಿ **ದ್ವಾದಶಾಹಂ** ಹನ್ನೆರಡು ದಿವಸವೂ **ಅಹರಹಃ** ಪ್ರತಿದಿನವೂ **ಪೂರ್ವವತ್** ಹಿಂದಿನಂತೆ **ಅಗ್ನಿಂ ಜುಹುಯಾತ್** ಅಗ್ನಿಯಲ್ಲಿ ಹೋಮಿಸಬೇಕು. **ಚ** ಮತ್ತು **ಬ್ರಾಹ್ಮಣಾನ್ ಭೋಜಯೇತ್** ಬ್ರಾಹ್ಮಣರ ಭೋಜನ ಮಾಡಿಸಬೇಕು. ಹೀಗೆ **ಪಯೋವ್ರತಂ ಕುರ್ಯಾತ್** ಪಯೋವ್ರತ ಮಾಡಬೇಕು.

**ಹರೇರಾರಾಧನಂ ಹೋಮಮರ್ಹಣಂ ದ್ವಿಜತರ್ಪಣಮ್ ।**
**ಪ್ರತಿಪದ್ದಿನಮಾರಭ್ಯ ಯಾವಚ್ಛುಕ್ಲತ್ರಯೋದಶೀ ।।೪೮।।**

**ಪ್ರತಿಪದ್ದಿನಮಾರಭ್ಯ** ಪ್ರತಿಪತ್ ತಿಥಿಯಿಂದ ಪ್ರಾರಂಭಿಸಿ **ಯಾವತ್ ಶುಕ್ಲತ್ರಯೋದಶೀ** ಶುಕ್ಲಪಕ್ಷದ ತ್ರಯೋದಶೀ ಬರುವವರೆಗೆ **ಹರೇಃ** ಶ್ರೀಹರಿಯ **ಆರಾಧನಂ** ಪೂಜೆಯನ್ನು **ಹೋಮಂ** ಹೋಮವನ್ನು **ಅರ್ಹಣಂ** ಬ್ರಾಹ್ಮಣಪೂಜೆ **ದ್ವಿಜತರ್ಪಣಂ** ಅನ್ನಾದಿಗಳಿಂದ ಬ್ರಾಹ್ಮಣರನ್ನು ತೃಪ್ತಿಪಡಿಸುವದು , ।।

ಯಾವತ್ ಶುಕ್ಲತ್ರಯೋದಶೀ ಎಂದು ದೀರ್ಘಾಂತಪಾಠದಲ್ಲಿ ಯಾವತ್ ತ್ರಯೋದಶೀ ಭವತಿ ತಾವತ್ಪರ್ಯಂತಂ ಎಂದು ಅನ್ವಯ ಮಾಡಬೇಕು. ಯಾವತ್ ಶುಕ್ಲತ್ರಯೋದಶಿ ಎಂಬ ಹ್ರಸ್ವಾಂತ ಪಾಠದಲ್ಲಿ ಯಾವತ್ ಶುಕ್ಲತ್ರಯೋದಶಿ ಎಂಬುದು ಅವ್ಯಯೀಭಾವ. ।।೪೮।।

**ಬ್ರಹ್ಮಚರ್ಯಮಧಃ ಸ್ವಾಪಂ ಸ್ನಾನಂ ತ್ರಿಷವಣಂ ಚರೇತ್ ।**
**ವರ್ಜಯೇದಸದಾಲಾಪಂ ಭೋಗಾನುಚ್ಚಾವಚಾಂಸ್ತಥಾ ।।೪೯।।**

**ಸರ್ವಭೂತಾನಾಂ** ಎಲ್ಲ ಪ್ರಾಣಿಗಳಿಗೂ **ಅಹಿಂಸ್ರಃ ಸನ್** ಹಿಂಸೆಮಾಡದವನಾಗಿ **ವಾಸುದೇವಪರಾಯಣಃ** ಶ್ರೀಹರಿಯಲ್ಲಿ ಆಸಕ್ತನಾಗಿ **ಬ್ರಹ್ಮಚರ್ಯಂ** ಬ್ರಹ್ಮಚರ್ಯವು **ಅಧಃ ಸ್ವಾಪಂ** ನೆಲದಲ್ಲಿ (ಚಾಪೆಯಲ್ಲಿ) ಮಲಗುವದು **ತ್ರಿಷವಣಂ ಸ್ನಾನಂ ಚರೇತ್** ತ್ರಿಕಾಲದಲ್ಲಿ ಸ್ನಾನವನ್ನು ಮಾಡಬೇಕು. **ತಥಾ** ಹಾಗೂ **ಅಸದಾಲಾಪಂ** ಅಸಜ್ಜನರ ಜೊತೆ ಮಾತನಾಡುವದನ್ನು **ಉಚ್ಚಾವಚಾನ್ ಭೋಗಾನ್** ದೊಡ್ಡ ಮತ್ತು ಸಣ್ಣ ಭೋಗಗಳನ್ನು **ವರ್ಜಯೇತ್** ಬಿಡಬೇಕು. ।।೪೯।।

**ಅಹಿಂಸ್ರಃ ಸರ್ವಭೂತಾನಾಂ ವಾಸುದೇವಪರಾಯಣಃ ।**
**ತ್ರಯೋದಶ್ಯಾಮಥೋ ವಿಷ್ಣೋಃ ಸ್ನಾಪನಂ ಸ್ನಾಪಕೈರ್ವಿಭೋಃ** ।।೫೦।।

**ಕಾರಯೇಚ್ಛಾಸ್ತ್ರದೃಷ್ಟೇನ ವಿಧಿನಾ ವಿಧಿಕೋವಿದೈಃ ।**
**ಪೂಜಾಂ ಚ ಮಹತೀಂ ಕುರ್ಯಾತ್ ವಿತ್ತಶಾಠ್ಯವಿವರ್ಜಿತಃ** ।।೫೧।।

**ಅಥೋ** ಮತ್ತು **ತ್ರಯೋದಶ್ಯಾಂ** ಫಾಲ್ಗುಣ ಶುಕ್ಲ ತ್ರಯೋದಶಿಯಲ್ಲಿ **ವಿಭೋಃ** ಸರ್ವಸಮರ್ಥನಾದ **ವಿಷ್ಣೋಃ** ವಿಷ್ಣುವಿಗೆ **ಸ್ನಾಪಕೈಃ** ಅಭಿಷೇಕ ಸಾಮಗ್ರಿಗಳಾದ ಹಾಲು ಮೊದಲಾದವುಗಳಿಂದ **ಶಾಸ್ತ್ರದೃಷ್ಟೇನ ವಿಧಿನಾ** ಶಾಸ್ತ್ರದಲ್ಲಿ ಕಂಡ (ಹೇಳಿದ) ವಿಧಾನದಿಂದ **ವಿಧಿಕೋವಿದೈಃ** ಶಾಸ್ತ್ರದ ವಿಧಿಯನ್ನು ಚೆನ್ನಾಗಿ ತಿಳಿದ ಬ್ರಾಹ್ಮಣರಿಂದ **ಸ್ನಾಪನಂ ಕಾರಯೇತ್** ಅಭಿಷೇಕ ಮಾಡಿಸಬೇಕು. **ವಿತ್ತಶಾಠ್ಯವಿವರ್ಜಿತಃ** ಹಣದಲ್ಲಿ ಲೋಭ ಮಾಡದೇ ಯಥಾಶಕ್ತಿ **ಮಹತೀಂ ಪೂಜಾಂ ಕುರ್ಯಾತ್** ಮಹಾಪೂಜೆಯನ್ನು ಮಾಡಬೇಕು. ।।೫೦, ೫೧।।

**ಚರುಂ ನಿರೂಪ್ಯ ಪಯಸಿ ಶಿಪಿವಿಷ್ಟಾಯ ವಿಷ್ಣವೇ ।**
**ಶೃತೇನ ತೇನ ಪುರುಷಂ ಯಜೇತ ಸುಸಮಾಹಿತಃ** ।।೫೨।।

**ಚರುಂ** ಹೋಮ ಮಾಡಲಿರುವ ಹವಿಸ್ಸನ್ನು **ಶಿಪಿವಿಷ್ಟಾಯ** ಕಿರಣಗಳಲ್ಲಿರುವ, ಗರುಡಾರೂಢನಾದ **ವಿಷ್ಣವೇ** ವಿಷ್ಣುವಿಗೆ **ನಿರೂಪ್ಯ** ನಿವೇದಿಸಿ **ಸುಸಮಾಹಿತಃ** ಅತ್ಯಂತ ಶುದ್ಧಾಂತಃಕರಣನಾಗಿ **ಪಯಸಿ** ಹಾಲಿನಲ್ಲಿ **ಶೃತೇನ** ಬೇಯಿಸಿದ (ಪಕ್ವವಾದ) **ತೇನ** ಆ ಚರುವಿನಿಂದ **ಪುರುಷಂ** ಪೂರ್ಣಷಡ್ಗುಣನಾದ ಸರ್ವಫಲಪ್ರದನಾದ ವಾಸುದೇವನನ್ನು ಉದ್ದೇಶಿಸಿ **ಯಜೇತ** ಹೋಮ ಮಾಡಬೇಕು. ।।೫೨।।

**ನೈವೇದ್ಯಂ ಚಾಽಪಿ ಗುಣವದ್ ದದ್ಯಾತ್ ಪುರುಷತುಷ್ಟಿದಮ್ ।**
**ಆಚಾರ್ಯಂ ಜ್ಞಾನಸಂಪನ್ನಂ ವಸ್ತ್ರಾಭರಣಧೇನುಭಿಃ** ।।೫೩।।

**ತೋಷಯೇದೃತ್ವಿಜಶ್ಚೈವ ತದ್ವಿದ್ಧ್ಯಾರಾಧನಂ ಹರೇಃ ।**
**ಭೋಜಯೇತ್ತಾನ್ ಗುಣವತಾ ಸದನ್ನೇನ ಶುಚಿಸ್ಮಿತೇ** ।।೫೪।।

**ಪುರುಷತುಷ್ಟಿದಂ** ಶ್ರೀಹರಿಗೆ ಸಂತೋಷಕರವಾದ **ಗುಣವತ್** ಮಾಧುರ್ಯ ಮೊದಲಾದ ಷಡ್ರಸೋಪೇತವಾದ **ನೈವೇದ್ಯಂ** ನೈವೇದ್ಯವನ್ನು **ದದ್ಯಾತ್** ಗುರುಗಳಿಗೆ ಪುರೋಹಿತರಿಗೆ ಉಣಬಡಿಸಬೇಕು. **ಜ್ಞಾನಸಂಪನ್ನಂ** ಜ್ಞಾನದಿಂದ ಕೂಡಿದ **ಆಚಾರ್ಯಂ** ಆಚಾರ್ಯರನ್ನು **ವಸ್ತ್ರಾಭರಣಧೇನುಭಿಃ ಚ** ವಸ್ತ್ರ-ಭೂಷಣ ಮತ್ತು ಗೋವುಗಳನ್ನು ದಾನಮಾಡುವ ಮೂಲಕ **ತೋಷಯೇತ್** ಸಂತೋಷಪಡಿಸಬೇಕು. **ಋತ್ವಿಜಾನ್ ಚ** ಋತ್ವಿಜರನ್ನೂ ಸಂತೋಷಪಡಿಸಬೇಕು. **ತತ್** ಆಚಾರ್ಯ ಮತ್ತು ಋತ್ವಿಜರನ್ನು ಸಂತೋಷಪಡಿಸುವುದು **ಹರೇಃ ಚ** ಅವರ ಅಂತರ್ಯಾಮಿಯಾದ ಪರಮಾತ್ಮನ **ಆರಾಧನಂ ವಿದ್ಧಿ** ಪೂಜೆ ಎಂದು ತಿಳಿ. **ಹೇ ಶುಚಿಸ್ಮಿತೇ** ಮಂಗಳಕರ ಮುಗುಳು ನಗು ಉಳ್ಳ ಅದಿತಿಯೇ **ತಾನ್ ಋತ್ವಿಜಾನ್** ಆ ಋತ್ವಿಜರನ್ನು **ಗುಣವತಾ** ಷಡ್ರಸೋಪೇತವಾದ **ಸದನ್ನೇನ** ಕೂದಲು ಮುಂತಾದ ಕಾಲುಷ್ಯವಿಲ್ಲದ ಉತ್ತಮವಾದ ವೃಷ್ಟಾನ್ನದಿಂದ **ಭೋಜಯೇತ್** ಊಟಮಾಡಿಸಬೇಕು. ।।೫೩, ೫೪।।

**ಅನ್ಯಾಂಶ್ಚ ಬ್ರಾಹ್ಮಣಾನ್ ಶಕ್ತ್ಯಾ ಯೇ ಚ ತತ್ರ ಸಮಾಗತಾಃ ।**
**ದಕ್ಷಿಣಾಂ ಗುರವೇ ದದ್ಯಾದ್ ಋತ್ವಿಗ್ಭ್ಯಶ್ಚ ಯಥಾರ್ಹತಃ ।।೫೫।।**

**ತತ್ರ** ಪಯೋವ್ರತಮಾಡುವಲ್ಲಿ **ಯೇ ಚ** ಯಾರು **ಸಮಾಗತಾಃ ಚ** ಬಂದಿರುವರೋ ಅಂತಹ **ಅನ್ಯಾನ್ ಬ್ರಾಹ್ಮಣಾನ್** ಋತ್ವಿಜರಲ್ಲದ ಬ್ರಾಹ್ಮಣರನ್ನೂ **ಶಕ್ತ್ಯಾ** ಶಕ್ತಿಗೆ ತಕ್ಕಂತೆ **ಭೋಜಯೇತ್** ಉಣ್ಣಿಸಬೇಕು **ಗುರವೇ** ಗುರುಗಳಿಗೂ **ಋತ್ವಿಗ್ಭ್ಯಃ ಚ** ಋತ್ವಿಜರಿಗೂ **ಯಥಾರ್ಹತಃ** ಅವರವರ ಯೋಗ್ಯತೆಗೆ ತಕ್ಕಂತೆ **ದಕ್ಷಿಣಾಂ ದದ್ಯಾತ್** ದಕ್ಷಿಣೆಯನ್ನು ಕೊಡಬೇಕು. ।।೫೫।।

**ಅನ್ನಾದ್ಯೇನಾಶ್ವಪಾಕಾಂಶ್ಚ ಪ್ರೀಣಯೇತ್ ಸಮುಪಾಗತಾನ್ ।**
**ಭುಕ್ತವತ್ಸು ಚ ವಿಪ್ರೇಷು ದೀನಾಂಧಕೃಪಣಾದಿಷು ।।೫೬।।**

**ವಿಷ್ಣೋಸ್ತತ್ಪ್ರೀಣನಂ ವಿದ್ವಾನ್ ಸಹ ಭುಂಜೀತ ಬಂಧುಭಿಃ ।**

**ಸಮುಪಾಗತಾನ್** ಬಂದಿರುವ **ಆಶ್ವಪಾಕಾನ್** ಚಂಡಾಲರ ವರೆಗಿನ ಎಲ್ಲರನ್ನೂ **ಅನ್ನಾದ್ಯೇನ** ಅನ್ನವಸ್ತ್ರಾದಿಗಳಿಂದ **ಪ್ರೀಣಯೇತ್** ಪ್ರೀತಿಪಡಿಸಬೇಕು. **ತತ್** ಹೀಗೆ ಎಲ್ಲರನ್ನೂ ಅನ್ನದಿಂದ ತೃಪ್ತಿಪಡಿಸುವುದು **ವಿಷ್ಣೋಃ ಪ್ರೀಣನಂ** ಸರ್ವತ್ರ ವ್ಯಾಪ್ತನಾದ ಶ್ರೀಹರಿಯ ಪ್ರೀತಿಪಡಿಸದ್ದೆಂದು **ವಿದ್ವಾನ್** ತಿಳಿದ ವ್ರತ ಮಾಡುವವನು **ವಿಪ್ರೇಷು** ಬ್ರಾಹ್ಮಣರು **ದಿನಾಂಧಕೃಪಣಾದಿಷು** ದೀನರು ಕುರುಡರು, ಕೃಪಾಪಾತ್ರರು ಮೊದಲಾದವರು **ಭುಕ್ತವತ್ಸು ಸತ್ಸು** ಊಟ ಮಾಡಿದ ಮೇಲೆ **ಬಂಧುಭಿಃ ಸಹ ಭುಂಜೀತ** ಬಂಧುಗಳೊಡನೆ ಊಟ ಮಾಡಬೇಕು. ।।೫೬।।

**ನೃತ್ಯವಾದಿತ್ರಗೀತೈಶ್ಚ ಸ್ತುತಿಭಿಃ ಸ್ವಸ್ತಿವಾಚಕೈಃ** ||೫೭||

**ಕಾರಯೇತ್ ತತ್ಕಥಾಭಿಶ್ಚ ಪೂಜಾಂ ಭಗವತೋಽನ್ವಹಮ್ ।**
**ಏತತ್ ಪಯೋವ್ರತಂ ನಾಮ ಪುರುಷಾರಾಧನಂ ಪರಮ್** ||೫೮||

**ನೃತ್ಯವಾದಿತ್ರಗೀತೈಃ ಚ** ನರ್ತನ-ವಾದ್ಯ-ಸಂಗೀತಗಳಿಂದಲೂ **ಸ್ತುತಿಭಿಃ** ಸ್ತೋತ್ರಗಳಿಂದಲೂ **ತತ್ಕಥಾಭಿಃ ಚ** ಶ್ರೀಹರಿಯ ಕಥೆಗಳಿಂದಲೂ **ಅನ್ವಹಂ** ಪ್ರತಿದಿನವೂ **ಪೂಜಾಂ ಕಾರಯೇತ್** ಪೂಜೆ ಮಾಡಿಸಬೇಕು. **ಏತತ್ ಪಯೋವ್ರತಂ ನಾಮ** ಈ ಪಯೋವ್ರತವೆಂಬುದು **ಪರಂ** ಅತ್ಯುತ್ತಮವಾದ **ಪುರುಷಾರಾಧನಂ** ಪುರುಷನಾಮಕನಾದ ವಾಸುದೇವನ ಆರಾಧನೆಯು. ||೫೭, ೫೮||

**ಪಿತಾಮಹೇನಾಽಭಿಹಿತಂ ಮಮ ತೇ ಸಮುದಾಹೃತಮ್ ।**
**ತ್ವಂ ಚಾನೇನ ಮಹಾಭಾಗೇ ಸಮ್ಯಕ್ ಚೀರ್ಣೇನ ಕೇಶವಮ್** ||೫೯||

**ಆತ್ಮನಾ ಶುದ್ಧಭಾವೇನ ಭಜನೀಯಂ ಭಜಾವ್ಯಯಮ್ ।**
**ಅಯಂ ವೈ ಸರ್ವಯಜ್ಞಾಖ್ಯಃ ಸರ್ವವ್ರತಮಿದಂ ಶ್ರುತಮ್** ||೬೦||

**ಮಮ** ನನಗೆ **ಪಿತಾಮಹೇನ** ನನ್ನ ಅಜ್ಜನಾದ ಬ್ರಹ್ಮದೇವರಿಂದ **ಅಭಿಹಿತಂ** ಹೇಳಲ್ಪಟ್ಟಿದ್ದು **ತೇ** ನಿನಗೆ **ಸಮುದಾಹೃತಂ** ನನ್ನಿಂದ ಹೇಳಲ್ಪಟ್ಟಿದೆ **ಹೇ ಮಹಾಭಾಗೇ** ಮಹಾಭಾಗ್ಯವಂತಳೇ **ತ್ವಂ ಚ** ನೀನೂ ಕೂಡ **ಶುದ್ಧಭಾವೇನ** ಶುದ್ಧ ಸ್ವಭಾವವುಳ್ಳ **ಆತ್ಮನಾ** ಮನಸ್ಸಿನಿಂದ **ಅವ್ಯಯಂ** ನಾಶರಹಿತನಾದ **ಭಜನೀಯಂ** ಲಕ್ಷ್ಮೀ-ಬ್ರಹ್ಮಾದಿಗಳಿಂದಲೂ ಸೇವಿಸಲ್ಪಡಬೇಕಾದವನಾದ **ಕೇಶವಂ** ಬ್ರಹ್ಮ-ರುದ್ರ ಪ್ರವರ್ತಕನಾದ ವಾಸುದೇವರೂಪಿಯನ್ನು **ಸಮ್ಯಕ್** ವಿಧಿಗೆ ಅನುಸಾರವಾಗಿ **ಚೀರ್ಣೇನ** ಆಚರಿಸಿದ **ಅನೇನ** ಈ ಪಯೋವ್ರತದಿಂದ **ಭಜ** ಸೇವಿಸು. ||೫೯,೬೦||

**ತಪಃಸ್ಸಾರಮಿದಂ ಭದ್ರೇ ದಾನಂ ಚೇಶ್ವರತರ್ಪಣಮ್ ।**
**ತ ಏವ ನಿಯಮಾಃ ಸಾಕ್ಷಾತ್ ತ ಏವ ಚ ಯಮೋತ್ತಮಾಃ** ||೬೧||

**ಹೇ ಭದ್ರೇ** ಮಂಗಳಕರಳೇ **ಅಯಂ** ನಾನು ಹೇಳಿದ ವ್ರತವಿಶೇಷವು **ಸರ್ವಯಜ್ಞಾಖ್ಯಃ** ಸರ್ವಯಜ್ಞವೆಂಬ ಹೆಸರುಳ್ಳದ್ದು (ಎಲ್ಲ ಯಜ್ಞಗಳ ಸಮಾನ ಬಲವುಳ್ಳದ್ದು) **ಇದಂ** ಈ ಪಯೋವ್ರತವು **ಸರ್ವವ್ರತಂ** ಎಲ್ಲ ವ್ರತಗಳ ಸಮಾನ ಬಲ ಉಳ್ಳದ್ದೆಂದು **ಶ್ರುತಂ** ಶಾಸ್ತ್ರದಲ್ಲಿ ಪ್ರಸಿದ್ಧವು. **ಇದಂ** ಇದು **ತಪಃಸಾರಂ** ತಪಸ್ಸುಗಳಲ್ಲಿ ಶ್ರೇಷ್ಠವಾದುದು. **ಈಶ್ವರತರ್ಪಣಂ** ಶ್ರೀಹರಿಗೆ ತೃಪ್ತಿಕರವಾದ **ದಾನಂ** ದಾನವು **ಯೇನ** ಯಾವ ನಿಯಮ-ಯಮ-ತಪಸ್ಸು-ದಾನ-ವ್ರತ-ಯಜ್ಞಗಳಿಂದ **ಅಧೋಕ್ಷಜಃ** ತನ್ನ ಅನುಗ್ರಹವಿಲ್ಲದೇ ಅಧಿಕಾರಿಗಳಿಗೆ ಇಂದ್ರಿಯ ಗೋಚರನಲ್ಲದ ಶ್ರೀಹರಿಯು **ತುಷ್ಯತಿ** ಸಂತುಷ್ಟನಾಗುವನೋ **ತೇ ಏವ** ಅವೇ

**ಸಾಕ್ಷಾತ್** ಮುಖ್ಯವಾಗಿ **ನಿಯಮಾಃ** ನಿಯಮಗಳು **ತೇ ಏವ** ಅವೇ **ಸಾಕ್ಷಾತ್** ಮುಖ್ಯವಾಗಿ **ಯಮೋತ್ತಮಾಃ** ಉತ್ತಮ ಯಮಗಳು **ದಾನಂ** ಅದೇ ಮುಖ್ಯವಾದ ದಾನವು **ವ್ರತಂ** ಅದೇ ಮುಖ್ಯವಾದ ವ್ರತವು **ಯಜ್ಞಃ** ಅದೇ ಮುಖ್ಯವಾದ ಯಜ್ಞವು ಶ್ರೀಹರಿ ಪ್ರೀತಿಕಾರಣವಾಗದ ಯಮಾದಿಗಳು ಅಭಾಸಗಳೆಂದರ್ಥ. ॥

**''ತಪಃ ಸಂತೋಷ ಆಸ್ತಿಕ್ಯಂ ದಾನಮೀಶ್ವರಪೂಜನಮ್ ।**
**ಸಿದ್ಧಾಂತಶ್ರವಣಂ ಚೈವ ಹ್ರೀರ್ಮತಿಶ್ಚ ಜಪೋ ವ್ರತಮ್ ॥**

**ಏತೇ ತು ನಿಯಮಾಃ ಪ್ರೋಕ್ತಾಸ್ತಾಂಶ್ಚ ಸರ್ವಾನ್ ಪೃಥಕ್ ಶ್ರುಣು ।**
**ಅಹಿಂಸಾ ಸತ್ಯಮಸ್ತೇಯಂ ಬ್ರಹ್ಮಚರ್ಯಂ ದಯಾರ್ಜವಮ್ ॥**
**ಕ್ಷಮಾ ಧೃತಿರ್ಮಿತಾಹಾರಃ ಶೌಚಂ ವೈತೇ ಯಮಾಃ ಸ್ಮೃತಾಃ ॥**

ಈ ವಚನದಲ್ಲಿ ಉಕ್ತವಾದ ಯಮ-ನಿಯಮಗಳನ್ನು ತಿಳಿಯಬೇಕು. ''ನ ಚಕ್ಷುಷಾ ಪಶ್ಯತಿ'' ''ನ ಶ್ರೋತ್ರೇಣ ಶ್ರುಣೋತಿ ನ ಮನಸಾ ಮನುತೇ'' ಇತ್ಯಾದಿ ಶ್ರುತಿಗಳು ಹೇಳುವಂತೆ ಭಗವಂತನು ಅಧೋಕ್ಷಜನಾಗಿದ್ದಾನೆ. ॥೬೦॥

**ತಸ್ಮಾದೇವಂ ವ್ರತಂ ಭದ್ರೇ ಪ್ರಯತಾ ಶ್ರದ್ಧಯಾ ಚರ ।**
**ಭಗವಾನ್ ಪರಿತುಷ್ಟಸ್ತೇ ವರಾನಾಶು ವಿಧಾಸ್ಯತಿ ॥೬೨॥**

**॥ ಇತಿ ಶ್ರೀಮದ್ಭಾಗವತೇ ಅಷ್ಟಮಸ್ಕಂದೇ ಪಂಚದಶೋಽಧ್ಯಾಯಃ ॥**

**ತಸ್ಮಾತ್** ಶ್ರೀಹರಿ ಪ್ರೀತಿಕರವಾದುದೇ ಸರಿಯಾದ ವ್ರತವಾದ್ದರಿಂದ ಯಾವ ಕಾರಣ ಈ ಪಯೋವ್ರತವು ಶ್ರೀಹರಿ ಪ್ರೀತಿಕಾರಣವೋ ಆದ್ದರಿಂದ **ಭದ್ರೇ** ಮಂಗಳಕರಳೇ **ಪ್ರಯತಾ** ಶುಚಿಯಾಗಿ **ಶ್ರದ್ಧಯಾ** ಹೇಳಿದ ವಿಧಾನಗಳಲ್ಲಿ ಶ್ರದ್ಧೆಯುಳ್ಳವಳಾಗಿ **ಏವಂ** ನಾನು ಉಪದೇಶಿಸಿದ ರೀತಿಯಲ್ಲಿ **ವ್ರತಂ ಚರ** ವ್ರತವನ್ನು ಶ್ರೀಹರಿಯು ಸಂತುಷ್ಟನಾಗುವಂತೆ ಮಾಡು **ತುಷ್ಟಃ** ಈ ವ್ರತಾಚರಣೆಯಿಂದ ಬಹಳ ಸಂತುಷ್ಟನಾದ **ಭಗವಾನ್** ಶ್ರೀಹರಿಯು **ತೇ** ನಿನಗೆ **ವರಾನ್** ಅಭಿಲಾಷೆಗಳನ್ನು **ಆಶು** ಬೇಗನೇ **ವಿಧಾಸ್ಯತಿ** ಪೂರೈಸುವನು. ॥೬೨॥

**ಇಲ್ಲಿಗೆ ಹದಿನೈದನೇ ಅಧ್ಯಾಯವು ಮುಗಿಯಿತು.**

★★★

# ಅಥ ಷೋಡಶೋऽಧ್ಯಾಯಃ

ನಾವು ಏನೇ ಪ್ರಯತ್ನಗಳನ್ನು ಮಾಡಿದರೂ ಪರಮಾತ್ಮ ನಮಗೆ ಕಾಣಿಸುವುದಿಲ್ಲ. ಪರಮಾತ್ಮ ಅವ್ಯಕ್ತಸ್ವಭಾವ. ವ್ಯಕ್ತನಾಗದಿರುವುದೇ ಪರಮಾತ್ಮನ ಸ್ವಭಾವ. ಆದರೆ ಉನ್ನತವಾದ ಭಕ್ತಿಯಿಂದಲೇ ಪರಮಾತ್ಮನ ಪ್ರಸಾದವನ್ನು ಪಡೆಯಬೇಕು. ಆ ಅತ್ಯರ್ಥಪ್ರಸಾದದಿಂದಲೇ ಪರಮಾತ್ಮನ ಸಾಕ್ಷಾತ್ಕಾರವಾಗುತ್ತದೆ. ಇತ್ಯಾದಿ ಮಹಿಮೆಗಳನ್ನು ಮುಂದಿನ ಎರಡು ಅಧ್ಯಾಯಗಳಿಂದ ತಿಳಿಸುತ್ತಿದ್ದಾರೆ. ಅದರಲ್ಲಿಯೂ ಪ್ರಥಮದಲ್ಲಿ ಅದಿತಿದೇವಿಯ ಪಯೋವ್ರತಾಚರಣೆಯ ಪ್ರಕಾರವನ್ನು ಹೇಳುತ್ತಿದ್ದಾರೆ-

**ಶ್ರೀಶುಕ ಉವಾಚ**

**ಇತ್ಯುಕ್ತಾ ಸಾऽದಿತೀ ರಾಜನ್ ಸ್ವಭರ್ತ್ರಾ ಕಶ್ಯಪೇನ ವೈ ।**
**ಅನ್ವತಿಷ್ಠದ್ ವ್ರತಮಿದಂ ದ್ವಾದಶಾಹಮತಂದ್ರಿತಾ ॥೧॥**

**ಹೇ ರಾಜನ್** ಪರೀಕ್ಷಿತನೇ **ಸ್ವಭರ್ತ್ರಾ ಕಶ್ಯಪೇನ** ತನ್ನ ಪತಿಯಾದ ಕಶ್ಯಪರಿಂದ **ಇತಿ ಉಕ್ತಾ** ಹೀಗೆ ಉಪದೇಶಿಸಲ್ಪಟ್ಟ **ಸಾ ಅದಿತಿಃ** ಆ ಅದಿತಿಯು **ಅತಂದ್ರಿತಾ** ಆಲಸ್ಯ ಇಲ್ಲದವಳಾಗಿ **ಇದಂ ವ್ರತಂ** ಈ ಪಯೋವ್ರತವನ್ನು **ದ್ವಾದಶಾಹಂ** ಹನ್ನೆರಡು ದಿವಸ **ಅನ್ವತಿಷ್ಠತ್** ಅನುಷ್ಠಾನ ಮಾಡಿದಳು **ವೈ** ಇದು ಪ್ರಮಾಣಸಿದ್ಧವಾಗಿದೆ. ॥೧॥

**ಚಿಂತಯಂತ್ಯೇಕಯಾ ಬುದ್ಧ್ಯಾ ಭಗವಂತಮಧೋಕ್ಷಜಮ್ ।**
**ಪ್ರಗೃಹ್ಯೇಂದ್ರಿಯದುಷ್ಟಾಶ್ವಾನ್ ಮನಸಾ ಬುದ್ಧಿಸಾರಥಿಃ ॥೨॥**

**ಮನಶ್ಚೈಕಾಗ್ರಯಾ ಬುದ್ಧ್ಯಾ ಭಗವತ್ಯಖಿಲಾತ್ಮನಿ ।**
**ವಾಸುದೇವೇ ಸಮಾಧಾಯ ಚಚಾರ ಹ ಪಯೋವ್ರತಮ್ ॥೩॥**

ಆ ಅದಿತಿಯು **ಬುದ್ಧಿಸಾರಥಿಃ** ತನ್ನ ದೇಹವೆಂಬ ರಥಕ್ಕೆ ಬುದ್ಧಿಯನ್ನೇ ಸಾರಥಿಯನ್ನು ಮಾಡಿಕೊಂಡವಳಾಗಿ **ಮನಸಾ** ಮನಸ್ಸಿನಿಂದ **ಇಂದ್ರಿಯದುಷ್ಟಾಶ್ವಾನ್** ಇಂದ್ರಿಯಗಳೆಂಬ

ಕೆಟ್ಟ ವಿಷಯಗಳ ಕಡೆಗೆ ಓಡುವ ಕುದುರೆಗಳನ್ನು **ಪ್ರಗೃಹ್ಯ** ನಿಗ್ರಹಿಸಿ, ವಿಷಯಗಳ ಕಡೆಗೆ ಹೋಗದಂತೆ ಮಾಡಿ **ಏಕಯಾ ಬುದ್ಧ್ಯಾ** ಶ್ರೀಹರಿಯೊಬ್ಬನೇ ಸರ್ವೋತ್ತಮನೆಂಬ ಬುದ್ಧಿಯಿಂದ **ಅಧೋಕ್ಷಜಂ** ಇಂದ್ರಿಯಗಳಿಗೆ ವಿಷಯನಲ್ಲದ ಶ್ರೀಹರಿಯನ್ನು **ಚಿಂತಯಂತೀ** ಧ್ಯಾನ ಮಾಡುವವಳಾಗಿ **ಏಕಾಗ್ರಯಾ** ಪರಮಾತ್ಮನೊಬ್ಬನೇ ವಿಷಯವಾಗಿರುವ **ಬುದ್ಧ್ಯಾ** ಬುದ್ಧಿಯಿಂದ **ಮನಃ** ಮನಸ್ಸನ್ನು **ಅಖಿಲಾತ್ಮನಿ** ಎಲ್ಲ ಚೇತನಾಚೇತನಾತ್ಮಕ ಜಗತ್ತಿಗೆ ಅಂತರ್ಯಾಮಿಯೂ ಸ್ವಾಮಿಯೂ ಆದ **ವಾಸುದೇವೇ** ವಾಸುದೇವನಲ್ಲಿ **ಸಮಾಧಾಯ** ಚೆನ್ನಾಗಿ ನಿಲ್ಲಿಸಿದವಳಾಗಿ **ಪಯೋವ್ರತಂ ಚಚಾರ** ಪ್ರಯೋವ್ರತವನ್ನು ಮಾಡಿದಳು. **ಹ** ಇದು ಪ್ರಮಾಣಸಿದ್ಧವಾಗಿದೆ. ।।೨-೩।।

ಪಯೋವ್ರತವನ್ನು ಆಚರಿಸುವುದರಿಂದ ಲಭ್ಯವಾಗುವ ಪ್ರಯೋಜನವನ್ನು ಹೇಳುತ್ತಿದ್ದಾರೆ-

**ತಸ್ಯಾ ಪ್ರಾದುರಭೂತ್ತಾತ ಭಗವಾನಾದಿಪೂರುಷಃ ।**
**ಪೀತವಾಸಾಶ್ಚತುರ್ಬಾಹುಃ ಶಂಖಚಕ್ರಗದಾಧರಃ ।।೪।।**

**ಹೇ ತಾತ** ಮಗುವೇ ಪರಿಕ್ಷಿದ್ರಾಜನೇ **ಭಗವಾನ್ ಆದಿಪೂರುಷಃ** ಆದಿಪುರುಷನಾದ ಶ್ರೀಹರಿಯು **ಪೀತವಾಸಾಃ** ಪೀತಾಂಬರಧಾರಿಯಾಗಿ **ಚತುರ್ಭುಜಃ** ನಾಲ್ಕು ಕೈಗಳುಳ್ಳವನಾಗಿ **ಶಂಖಚಕ್ರಗದಾಧರಃ** ಶಂಖ-ಚಕ್ರ-ಗದಾ-ಪದ್ಮಾದಿಗಳನ್ನು ಧರಿಸಿದವನಾಗಿ **ತಸ್ಯಾಃ** ಆ ಅದಿತಿದೇವಿಗೆ **ಪ್ರಾದುರಭೂತ್** ಕಾಣಿಸಿಕೊಂಡನು. ।।೪।।

**ತಂ ನೇತ್ರಗೋಚರಂ ವೀಕ್ಷ್ಯ ಸಹಸೋತ್ಥಾಯ ಸಾದರಮ್ ।**
**ನನಾಮ ಭುವಿ ಕಾಯೇನ ದಂಡವತ್ ಪ್ರೀತಿವಿಹ್ವಲಾ ।।೫।।**

ಆ ಅದಿತಿಯು **ನೇತ್ರಗೋಚರಂ** ತನ್ನ ಕಣ್ಣಿಗೆ ಕಾಣಿಸಿದ ಶ್ರೀಹರಿಯನ್ನು **ವೀಕ್ಷ್ಯ** ನೋಡಿ **ಸಹಸಾ** ಕೂಡಲೇ **ಸಾದರಂ** ಭಕ್ತಿಯಿಂದ **ಉತ್ಥಾಯ** ಮೇಲಕ್ಕೆ ಎದ್ದು **ಪ್ರೀತಿವಿಹ್ವಲಾ** ಭಕ್ತಿಯಿಂದ ಪರವಶಳಾಗಿ **ಭುವಿ** ಭೂಮಿಯಲ್ಲಿ **ಕಾಯೇನ** ಶರೀರದಿಂದ **ದಂಡವತ್** ದಂಡದಂತೆ **ನನಾಮ** ನಮಸ್ಕಾರ ಮಾಡಿದಳು.

ಸತ್ಯ ಃ- **ಸಾದರಂ** ಪತಿಯು ಹೇಳಿದ್ದರ ಸ್ಮರಣ ಇರುವುದರಿಂದ ಭಯವಿಲ್ಲದೇ ಎಂದರ್ಥ. ಹಸಃ ಎಂದು ಅಕಾರಾಂತಪುಲ್ಲಿಂಗಶಬ್ದವೂ ನಗು ಎಂಬ ಅರ್ಥದಲ್ಲಿ ಇದೆ. ಹೀಗಾಗಿ ಹಸೇನ ಸಹಿತಾ ಸಹಸಾ ಎಂದು ವಿಗ್ರಹಮಾಡಿಕೊಳ್ಳಬೇಕು. ನನ್ನ ಅಭೀಷ್ಟವು ಫಲಿಸಿತು ಎಂದು ಸಂತೋಷದಿಂದ ಯುಕ್ತಳಾಗಿ ನಮಸ್ಕರಿಸಿದಳು ಎಂದು ಅರ್ಥ ತಿಳಿಯಬೇಕು. ।।೫।।

ಅದಿತಿದೇವಿಯಲ್ಲಿರುವ ಭಕ್ತಿಯ ಚಿಹ್ನೆಯನ್ನು ಹೇಳುತ್ತಿದ್ದಾರೆ-

**ಸೋತ್ಥಾಯ ಬದ್ಧಾಂಜಲಿರೀಡಿತುಂ ಸ್ಥಿತಾ**
**ನೋತ್ಸೇಹ ಆನಂದಜಲಾಕುಲೇಕ್ಷಣಾ ।**
**ಬಭೂವ ತೂಷ್ಣೀಂ ಪುಲಕಾಕುಲಾಕೃತಿ-**
**ಸ್ತದ್ದರ್ಶನಾತ್ಯುತ್ಸವಗಾತ್ರವೇಪಥುಃ ॥೬॥**

**ಸಾ** ಆ ಅದಿತಿಯು **ಉತ್ಥಾಯ** ಭೂಮಿಯಿಂದ ಎದ್ದು **ಬದ್ಧಾಂಜಲಿಃ** ಕೈ ಮುಗಿದು **ಈಡಿತುಂ** ಸ್ತೋತ್ರಮಾಡಲು **ಸ್ಥಿತಾ ಅಪಿ** ನಿಂತಿದ್ದರೂ **ತದ್ದರ್ಶನಾತ್ಯುತ್ಸವಜಾತವೇಪಥುಃ** ಹರಿಯ ದರ್ಶನದಿಂದ ಉಂಟಾದ ಅತಿಶಯವಾದ ಸಂತೋಷದಿಂದ ಶರೀರದಲ್ಲಿ ನಡುಕ ಉಳ್ಳವಳಾಗಿ **ಪುಲಕಾಕುಲಾಕೃತಿಃ** ರೋಮಾಂಚನದಿಂದ ವ್ಯಾಪ್ತವಾದ ದೇಹ ಉಳ್ಳವಳಾಗಿ **ಆನಂದಜಲಾಕುಲೇಕ್ಷಣಾ** ಆನಂದಬಾಷ್ಪದಿಂದ ತುಂಬಿದ ಕಣ್ಣುಗಳುಳ್ಳವಳಾಗಿ **ನ ಉತ್ಸೇಹೇ** ಸ್ತೋತ್ರಮಾಡಲು ಸಮರ್ಥಳಾಗಲಿಲ್ಲ **ತೂಷ್ಣೀಂ ಬಭೂವ** ಸುಮ್ಮನೇ ನಿಂತಳು. ॥೬॥

**ಪ್ರೀತ್ಯಾ ಶನೈರ್ಗದ್ಗದಯಾ ಗಿರಾ ಹರಿಂ**
**ತುಷ್ಟಾವ ಸಾ ದೇವ್ಯದಿತಿಃ ಕುರೂದ್ವಹ ।**
**ಉದ್ವೀಕ್ಷತೀ ಸಾ ಪಿಬತೀವ ಚಕ್ಷುಷಾ**
**ರಮಾಪತಿಂ ಯಜ್ಞಪತಿಂ ಜಗತ್ಪತಿಮ್ ॥೭॥**

**ಹೇ ಕುರೂದ್ವಹ** ಪರೀಕ್ಷಿತನೇ **ದೇವೀ** ಕಾಂತಿಮತಿಯಾದ **ಸಾ ಅದಿತಿಃ** ಆ ಅದಿತಿಯು **ಶನೈಃ ಚ** ಸ್ವಲ್ಪ ಕಾಲಾನಂತರ **ಗದ್ಗದಯಾ ಗಿರಾ** ಗದ್ಗದವಾದ ಮಾತುಗಳಿಂದ **ಪ್ರೀತ್ಯಾ** ಭಕ್ತಿಯಿಂದ **ತುಷ್ಟಾವ** ಸ್ತೋತ್ರ ಮಾಡಿದಳು. ಅವಳ ಮುಗ್ಧಭಾವವನ್ನು ತೋರಿಸುತ್ತಾರೆ. **ಸಾ** ಆ ಅದಿತಿಯು ಭಕ್ತಿಯಿಂದ **ಯಜ್ಞಪತಿಂ** ಸಕಲಯಜ್ಞಪಾಲಕನಾದ **ಜಗತ್ಪತಿಂ** ಸರ್ವಜಗದ್ರಕ್ಷಕನಾದ **ರಮಾಪತಿಂ** ಲಕ್ಷ್ಮೀಪತಿಯನ್ನು **ಉದ್ವೀಕ್ಷತೀ** ತಲೆಯೆತ್ತಿ ನೋಡುತ್ತ **ಚಕ್ಷುಷಾ** ಕಣ್ಣಿನಿಂದ **ಪಿಬತೀ ಇವ** ಕುಡಿಯುತ್ತಿರುವವಳಂತೆ ಇದ್ದಳು. ॥೭॥

ತನ್ನ ಅಭೀಷ್ಟಕಾರಣಗಳಾದ ಗುಣಗಳಿಂದ ಯುಕ್ತನನ್ನಾಗಿ ಸ್ತುತಿಸುವಳು ಎಂದು ಹೇಳುವರು-

**ಯಜ್ಞೇಶ ಯಜ್ಞಪುರುಷಾಚ್ಯುತ ತೀರ್ಥಪಾದ**
**ತೀರ್ಥಶ್ರವ ಶ್ರವಣಮಂಗಲನಾಮಧೇಯ ।**
**ಆಪನ್ನಲೋಕವೃಜಿನೋಪಶಮೋದಯಾದ್ಯ**
**ಶಂ ನಃ ಕೃಧೀಶ ಭಗವನ್ನವಸನ್ನನಾಥ ॥೮॥**

**ಹೇ ಯಜ್ಞೇಶ** ಅಶ್ವಮೇಧಾದಿ ಎಲ್ಲ ಯಜ್ಞಗಳಿಗೆ ನಿಯಾಮಕನೇ **ಯಜ್ಞಪುರುಷ** ಯಜ್ಞಗಳಿಗೆ ಮುಖ್ಯ ಉದ್ದೇಶ್ಯನೇ (ಯಜ್ಞಗಳನ್ನು ಮಾಡಿಸಿ ಅನಂತ ಫಲ ಕೊಡುವವನೇ) **ಅಚ್ಯುತ** ದೇಶ-ಕಾಲ-ಗುಣಗಳಿಂದ ಚ್ಯುತಿರಹಿತನೇ **ತೀರ್ಥಪಾದ** ಭಾಗೀರಥೀ ಮೊದಲಾದ ತೀರ್ಥಗಳಿಗೆ ಜನಕವಾದ ಮತ್ತು ಆಶ್ರಯವಾದ ಪಾದ ಉಳ್ಳವನೇ **ತೀರ್ಥಶ್ರವ** ಪವಿತ್ರವಾದ ಕೀರ್ತಿಯುಳ್ಳವನೇ, **ಶ್ರವಣಮಂಗಳನಾಮಧೇಯ** ಕಿವಿಗಳಿಗೆ ಮಂಗಲಕರವಾದ ನಾಮಗಳುಳ್ಳವನೇ **ಆಪನ್ನಲೋಕ** ಕಷ್ಟಕ್ಕೀಡಾದ ಭಕ್ತಜನರ **ವೃಜಿನೋಪಶಮೋದಯ** ಪಾಪಗಳ ಪರಿಹಾರಕ್ಕಾಗಿ ಅವತರಿಸಿದವನೇ **ಆದ್ಯ** ಉಪಜೀವ್ಯನೇ **ಅವಸನ್ನನಾಥ** ಜ್ಞಾನ ಮೊದಲಾದ ಸಾಧನಸಾಮಗ್ರಿಯಿಂದ ಕ್ಷೀಣರಾದ ಅಜ್ಞಾನಾದಿಗಳಿಂದ ನಷ್ಟರಾದ ಭಕ್ತರಿಗೆ ಸ್ವಾಮಿಯಾದವನೇ **ಈಶ** ಸರ್ವನಿಯಾಮಕನೇ **ಭಗವನ್** ನಾರಾಯಣನೇ **ನಃ** ನಮಗೆ **ಶಂ** ಸುಖವನ್ನು **ಕೃಧಿ** ಉಂಟುಮಾಡು.

ಯಥಾ ಆಪತ್ ನ ಭವೇತ್ ತಥಾ ಶಂ ಕುರು ನಮಗೆ ಆಪತ್ತುಗಳು ಬರದಂತೆ ಶಾಶ್ವತವಾದ ಸುಖವನ್ನು ನೀಡು.

ಸತ್ಯ :- **ಆಪನ್ನಲೋಕವೃಜಿನೋಪಶಮೋದಯಾದ್ಯ** ಎಂಬುದನ್ನು ಆಪನ್ನಲೋಕವೃಜಿನೋಪಶಮ ಉದಯಾದ್ಯ ಎಂದು ಬಿಡಿಸಿಕೊಂಡು ಅರ್ಥ ತಿಳಿಯಬೇಕು. **ಆಪನ್ನಲೋಕವೃಜಿನೋಪಶಮ** ದೀನರಾದ ಜನರ ಪಾಪಗಳನ್ನು ನಾಶಮಾಡುವವನೇ **ಉದಯಾದ್ಯ** ಹುಟ್ಟಿದವರಿಗೆ ಉಪಜೀವ್ಯನೇ ಎಂದು ಅರ್ಥ ಮಾಡಿಕೊಳ್ಳಬೇಕು.

**ಯಜ್ಞೇಶ** ಈ ಚ ಅಜ್ಞಾಶ್ಚ ಯಜ್ಞಾಃ ತೇಷಾಂ ಈಶಃ ತತ್ಸಂಬುದ್ಧಿಃ ಎಂದು ವಿಗ್ರಹಮಾಡಿಕೊಂಡು ಮತ್ತೊಂದು ಅರ್ಥವನ್ನು ತಿಳಿಯಬೇಕು. **ಈ** ಲಕ್ಷ್ಮೀದೇವಿ. ಉಪಲಕ್ಷಣಯಾ ಎಲ್ಲ ಪ್ರೇಕ್ಷಾವಂತರನ್ನು ತೆಗೆದುಕೊಳ್ಳಬೇಕು. ಹೀಗಾಗಿ **ಈ** ಎಂದರೆ ಲಕ್ಷ್ಮೀಮುಂತಾದ ಎಲ್ಲ ಪ್ರೇಕ್ಷಾವಂತರು ಎಂದು ಅರ್ಥ. **ಅಜ್ಞ** ನಾನೇ ಮೊದಲಾದ ಅಜ್ಞಾನಿಗಳು ಇವರಿಗೆಲ್ಲ **ಈಶ** ಸ್ವಾಮಿಯಾದವನೇ ಎಂದು ಅರ್ಥವನ್ನು ತಿಳಿಯಬೇಕು.

**ಯಜ್ಞಪುರುಷ** ಎಂಬಲ್ಲಿಯೂ **ಯಜ್ಞ** ಯಜ್ಞನಾಮಕನೇ **ಪುರುಷ** ಪೂರ್ಣಷಡ್ಗುಣನೇ ಎಂಬುದಾಗಿ ಬಿಡಿಸಿಕೊಂಡು ಅರ್ಥವನ್ನು ತಿಳಿಯಬೇಕು.

**ತೀರ್ಥಶ್ರವಶ್ರವಣಮಂಗಲನಾಮಧೇಯ** ಎಂಬುದಕ್ಕೆ ಮತ್ತೊಂದು ರೀತಿಯಾಗಿಯೂ ಅರ್ಥವನ್ನು ತಿಳಿಯಬಹುದು. **ತೀರ್ಥ** ಶಾಸ್ತ್ರದ **ಶ್ರವ** ಶ್ರವಣಕ್ಕೆ ಕಾರಣಗಳಾದ **ಶ್ರವಣ** ಕಿವಿಗಳಿಗೆ ಮಂಗಳವನ್ನುಂಟು ಮಾಡುವ **ನಾಮಧೇಯ** ಹೆಸರುಳ್ಳವನೇ ಎಂದೂ ಅರ್ಥ ತಿಳಿಯಬೇಕು. ।।೮।।

**ವಿಶ್ವಾಯ ವಿಶ್ವಭವನಸ್ಥಿತಿಸಂಯಮಾಯ**
**ಸ್ವೈರಂ ಗೃಹೀತಪುರುಶಕ್ತಿಗುಣಾಯ ಭೂಮ್ನೇ**
**ಸ್ವಚ್ಛಾಯ ಶಶ್ವದುಪಬೃಂಹಿತಪೂರ್ಣಬೋಧ**
**ವ್ಯಾಪಾದಿತಾತ್ಮತಮಸೇ ಹರಯೇ ನಮಸ್ತೇ** ॥೯॥

**ವಿಶ್ವಾಯ** ವಿಶ್ವನೆಂಬ ಹೆಸರುಳ್ಳ **ವಿಶ್ವಭವನಸ್ಥಿತಿಸಂಯಮಾಯ** ಜಗತ್ತಿನ ಉತ್ಪತ್ತಿ-ಸ್ಥಿತಿ-ನಾಶಗಳನ್ನು ಮಾಡುವ **ಸ್ವೈರಂ** ಸ್ವೇಚ್ಛೆಯಿಂದ **ಗೃಹೀತಪುರುಶಕ್ತಿಗುಣಾಯ** ಸೃಷ್ಟ್ಯಾದಿವಿಷಯಕವಾದ ಶಕ್ತಿಗಳನ್ನು ಸ್ವೀಕರಿಸಿದ ಅಥವಾ ಸತ್ವಾದಿ ಗುಣಗಳುಳ್ಳ **ಭೂಮ್ನೇ** ಸುಖಾದಿಗುಣಪೂರ್ಣನಾದ **ಸ್ವಚ್ಛಾಯ** ಪಾರತಂತ್ರ್ಯಾದಿದೋಷರಹಿತನಾದ್ದರಿಂದ ಶುದ್ಧನಾದ **ಶಶ್ವತ್** ಎಲ್ಲ ಕಾಲದಲ್ಲಿಯೂ **ಉಪಬೃಂಹಿತ** ತನ್ನ ಮತ್ತು ಇತರರ ಎಲ್ಲ ವಿಷಯಗಳಿಂದ ಅತ್ಯಂತ ಅಭಿವೃದ್ಧವಾದ ಆದ್ದರಿಂದಲೇ **ಪೂರ್ಣ** ಸಂಪೂರ್ಣನಾದ **ಬೋಧ** ಜ್ಞಾನದಿಂದ **ವ್ಯಾಪಾದಿತಾತ್ಮತಮಸೇ** ಅಜ್ಞಾನವನ್ನು ದೂರ ಅಟ್ಟಿದ **ಹರಯೇ** ಬಿಂಬನಾದ **ತೇ** ನಿನಗೆ **ನಮಃ ಚ** ನಮಸ್ಕಾರವು.

ಸತ್ಯ :- **ಶಶ್ವದುಪಬೃಂಹಿತಪೂರ್ಣಬೋಧ** ಯಾವಾಗಲೂ ಪೂರ್ಣಜ್ಞಾನವಿರುವುದ-ರಿಂದ **ವ್ಯಾಪಾದಿತಾತ್ಮತಮಸೇ** ಅನಂಕುರಿತವಾದ (ಹುಟ್ಟದಿರುವ) ತನ್ನ ಹಾಗೂ ತನ್ನವರ ಅಜ್ಞಾನವುಳ್ಳ (ತನ್ನ ಬಗ್ಗೆ ತನ್ನವರ ಬಗ್ಗೆ ಎಂದಿಗೂ ಅಜ್ಞಾನವಿಲ್ಲದಿರುವ) ಎಂದೂ ಅರ್ಥವನ್ನು ತಿಳಿಯಬೇಕು.

ಇಲ್ಲಿ ಉಪಬೃಂಹಿತ ಎಂಬ ಪದವು ಪೂರ್ಣ ಎಂಬ ಪದದಿಂದ ಬೇರೆಯಾಗಿ ವಿಶ್ವವೆಂಬ ರೂಪವನ್ನು ತಿಳಿಸಿಕೊಡುತ್ತದೆ. ''ಮಧ್ಯಮಂ ತು ಗಜಾಕಾರಮ್'' ಎಂದು ಹೇಳಿದೆ. ವಿಶ್ವನಿಗೆ ಹತ್ತೊಂಭತ್ತು ಮುಖಗಳು. ಅದರಲ್ಲಿ ಮಧ್ಯದ್ದು ಆನೆಯಮುಖ. ''ಬೃಂಹಿತಂ ಕರಿಗರ್ಜಿತಮ್'' ಎಂದಿದೆ. ಹೀಗಾಗಿ ಉಪಬೃಂಹಿತಂ ಎಂಬಲ್ಲಿಯ ಬೃಂಹಿತಪದದ ಸ್ಮರಣೆಯಿಂದ ಆನೆಯ ಮುಖದ ನೆನಪಾಗುತ್ತದೆ. ಬೃಂಹಿತೇನ ಸ್ವಸ್ವರೇಣ ಜಾತೋ ಯಃ ಪೂರ್ಣೋ ಬೋಧಃ ತೇನ ವ್ಯಾಪಾದಿತಂ ಆತ್ಮೀಯತಮಃ ಯೇನ ಸಃ ತಸ್ಮೈ ಎಂದಾದರೂ ಮಾಡಬಹುದು. ತನ್ನ ಸ್ವರದಿಂದ ಉಂಟಾದ ಜ್ಞಾನದಿಂದ ನಾಶಮಾಡಲ್ಪಟ್ಟ ತನ್ನ ಅಜ್ಞಾನವುಳ್ಳ ಎಂದರ್ಥ. ಇದರಿಂದ ಐರಾವತಾರೂಢನಾದ ಇಂದ್ರನ ದರ್ಶನ ಬೇಗ ಆಗಬೇಕು ಎಂದು ಸೂಚಿಸುವಳು. ಅರ್ಥಾತ್ ನನ್ನ ಮಗ ಮತ್ತೆ ಸ್ವರ್ಗಾಧಿಪತಿಯಾಗಬೇಕು. ಅವನು ಸಂಪನ್ನನಾಗಬೇಕೆಂದು ಈ ಮೂಲಕ ಅದಿತಿಯು ತಿಳಿಸುತ್ತಿದ್ದಾಳೆ.

ಸ್ವಚ್ಛಾಯಶಶ್ವದುಪಬೃಂಹಿತಪೂರ್ಣಬೋಧವ್ಯಾಪಾದಿತಾತ್ಮತಮಸೇ ಎಂಬುದು ಒಂದೇ ಪದವೆಂದು ಮಾಡಿಕೊಂಡು ಹೀಗೆ ಅರ್ಥವನ್ನು ತಿಳಿಯಬೇಕು.

ಸ್ವಸ್ಯ ಛ್ಛಾಯಾಃ ಸ್ವಚ್ಛಾಯಾಃ ಶಶ್ವತ್ ಉಪಬೃಂಹಿತಃ ಶಶ್ವದುಪಬೃಂಹಿತಃ ಪೂರ್ಣಶ್ಚಾಸೌ ಬೋಧಶ್ಚ ಪೂರ್ಣಬೋಧಃ ಶಶ್ವದುಪಬೃಂಹಿತಶ್ಚಾಸೌ ಪೂರ್ಣಬೋಧಶ್ಚ ಶಶ್ವದುಪಬೃಂಹಿತಪೂರ್ಣಬೋಧಃ ಶಶ್ವದುಪಬೃಂಹಿತಪೂರ್ಣ- ಬೋಧೇನ ವ್ಯಾಪಾದಿತಂ ಆತ್ಮತಮಃ ಯೇಷಾಂ ತೇ ಶಶ್ವದುಪಬೃಂಹಿತಪೂರ್ಣ- ಬೋಧವ್ಯಾಪಾದಿತಾತ್ಮತಮಸಃ ಸ್ವಚ್ಛಾಯಾಃ ಶಶ್ವದುಪಬೃಂಹಿತಪೂರ್ಣಬೋಧ- ವ್ಯಾಪಾದಿತಾತ್ಮತಮಸಃ ಯೇನ ಸಃ ತಸ್ಮೈ ಎಂದು ವಿಗ್ರಹ ಮಾಡಿಕೊಂಡು ಹೀಗೆ ಅರ್ಥವನ್ನು ತಿಳಿಯಬೇಕು. ಸ್ವಚ್ಛಾಯಾಃ ''ಛಾಯಾ ರೀತಿಃ ಪ್ರಕಾರಶ್ಚ'' ಎಂದು ತಾತ್ಪರ್ಯಾಂತರದಲ್ಲಿರುವುದರಿಂದ ತನ್ನ ಪ್ರತಿಬಿಂಬರಾದ ಎಂದು ಅರ್ಥ ತಿಳಿಯಬೇಕು. ಮುಕ್ತಿಯಲ್ಲಿ ಶಶ್ವದುಪಬೃಂಹಿತೇನ ಯೋಗ್ಯತಾನುಸಾರ ಪೂರ್ಣವಾದ ಪೂರ್ಣಬೋಧೇನ ಜ್ಞಾನದಿಂದ ವ್ಯಾಪಾದಿತ ನಾಶಮಾಡಲ್ಪಟ್ಟ ಆತ್ಮತಮ ತನ್ನ ಅಜ್ಞಾನವುಳ್ಳ ಹೀಗೂ ಅರ್ಥವನ್ನು ತಿಳಿಯಬೇಕು.

ಪುರುಶಕ್ತಿಯ ಬದಲಾಗಿ ಪುರಶಕ್ತಿ ಎಂದು ಹಲವು ಕಡೆ ಪಾಠವಿದೆ. ಆ ಪಾಠದಲ್ಲಿ ಪುರ ಎಂದರೆ ಶರೀರಗಳೆಂದರ್ಥ.

**ಸ್ವಚ್ಛಾಯ** ಎಂಬುದಕ್ಕೆ ಬದಲಾಗಿ **ಸ್ವಸ್ಥಾಯ** ಎಂಬ ಪಾಠದಲ್ಲಿ ಅಪ್ರಚ್ಯುತ ಸ್ವರೂಪನಾದವನು ಎಂದು ಅರ್ಥ. ||೯||

**ಆಯುಃ ಪರಂ ವಪುರಭೀಷ್ಟಮತುಲ್ಯಲಕ್ಷ್ಮೀ-**
**ರ್ದ್ಯೌರ್ಭೂರಸಾಃ ಸಕಲಯೋಗಗುಣಸ್ತ್ರಿವರ್ಗಃ ।**
**ಜ್ಞಾನಂ ಚ ಕೇವಲಮನಂತ ಭವಂತಿ ತುಷ್ಟಾತ್**
**ತ್ವತ್ತೋ ನೃಣಾಂ ಕಿಮುಪಸನ್ನಜನಾಧಿನಾಶಃ ||೧೦||**

**ಹೇ ಅನಂತ** ದೇಶ-ಕಾಲ-ಗುಣಗಳಿಂದ ಅಂತ್ಯವಿಲ್ಲದ ಶ್ರೀಹರಿಯೇ **ತುಷ್ಟಾತ್** ಭಕ್ತಿಯಿಂದ ಸಂತುಷ್ಟನಾದ **ತ್ವತ್ತಃ** ನಿನ್ನಿಂದ **ನೃಣಾಂ** ಅಧಿಕಾರಿಗಳಾದ ಬ್ರಹ್ಮಾದಿಚೇತನರಿಗೆ **ಪರಂ ಆಯುಃ** ಎರಡು ಪರಾರ್ಧದಷ್ಟು ದೀರ್ಘ ಆಯುಷ್ಯ ಅಥವಾ ನಿತ್ಯಾಯುವಾದ ಮುಕ್ತಿಯು **ಅಭೀಷ್ಟಂ ವಪುಃ** ಅವರವರಿಗೆ ಇಷ್ಟವಾದ ಶರೀರವು **ಅತುಲ್ಯಲಕ್ಷ್ಮೀಃ** ಅಸದೃಶವಾದ ಸಂಪತ್ತು **ದ್ಯೌಃ ಭೂಃ ರಸಾಃ** ಅಂತರಿಕ್ಷಲೋಕ-ಭೂಲೋಕ-ರಸಾತಲಾದಿ ಲೋಕಗಳು **ಸಕಲಯೋಗಗುಣಃ** ಎಲ್ಲ ಅಣಿಮಾದಿಸಿದ್ಧಿಗಳು ಅಥವಾ ವಿದ್ಯಾಗಳಿಂದ ಸಹಿತವಾದ ಅಣಿಮಾದಿ ಅಷ್ಟೈಶ್ವರ್ಯಗಳು ಅವುಗಳ **ಗುಣತ್ರಿವರ್ಗಃ** ಧರ್ಮಾರ್ಥ-ಕಾಮಗಳು **ಕೇವಲಂ** ಜಡಮಿಶ್ರವಾಗದ ಅಜ್ಞಾನ-ಸಂಶಯ-ವಿಪರೀತಜ್ಞಾನಗಳಿಲ್ಲದ **ಜ್ಞಾನಂ ಚ** ಅವರವರಿಗೆ ಯೋಗ್ಯವಾದ ಶುದ್ಧಜ್ಞಾನವೂ **ಭವಂತಿ** ಆಗುವವು. ಅಂದಮೇಲೆ **ಉಪಸನ್ನಜನಾದಿನಾಶಃ** ನಿನ್ನನ್ನು ಶರಣು ಹೊಂದಿದ ಜನರ ಮನೋವ್ಯಥೆಯ ಪರಿಹಾರವು ಆಗಿಯೇ ಆಗುತ್ತದೆ ಎಂದು ಅರ್ಥ. ||೧೦||

**ಶ್ರೀಶುಕ ಉವಾಚ**

**ಅದಿತ್ಯೈವಂ ಸ್ತುತೋ ರಾಜನ್ ಭಗವಾನ್ ಪುಷ್ಕರೇಕ್ಷಣಃ ।**
**ಕ್ಷೇತ್ರಜ್ಞಃ ಸರ್ವಭೂತಾನಾಮಿತಿ ಹೋವಾಚ ಭಾರತ ॥೧೧॥**

**ಹೇ ಭಾರತ ರಾಜನ್** ಭರತ ವಂಶದಲ್ಲಿ ಹುಟ್ಟಿದ ಪರೀಕ್ಷಿದ್ರಾಜನೇ **ಸರ್ವಭೂತಾನಾಂ** ಎಲ್ಲ ಪ್ರಾಣಿಗಳ **ಕ್ಷೇತ್ರಜ್ಞಃ** ಶರೀರದಲ್ಲಿ ಆಗುವ ಕರ್ಮಗಳನ್ನೆಲ್ಲ ತಿಳಿದಿರುವ **ಪುಷ್ಕರೇಕ್ಷಣಃ ಚ** ಕಮಲನೇತ್ರನಾದ **ಭಗವಾನ್** ಶ್ರೀಹರಿಯು **ಅದಿತ್ಯಾ** ಅದಿತಿದೇವಿಯಿಂದ **ಏವಂ** ಹೀಗೆ **ಸ್ತುತಃ** ಸ್ತೋತ್ರಮಾಡಲ್ಪಟ್ಟವನಾಗಿ **ಇತಿ** ಮುಂದೆ ಹೇಳುವಂತೆ **ಉವಾಚ ಹ** ಮಾತನಾಡಿದನು. ಇದು ಪ್ರಮಾಣಸಿದ್ಧ. ॥೧೧॥

**ಶ್ರೀಭಗವಾನುವಾಚ**

**ದೇವಮಾತರ್ಭವತ್ಯಾ ಮೇ ವಿಜ್ಞಾತಂ ಚಿರಕಾಂಕ್ಷಿತಮ್ ।**
**ಯತ್ಸಪತ್ನೈರ್ಹೃತಶ್ರೀಣಾಂ ಚ್ಯಾವಿತಾನಾಂ ಸ್ವಧಾಮತಃ ॥೧೨॥**

**ಹೇ ದೇವಮಾತಃ** ದೇವತೆಗಳ ತಾಯಿಯಾದ ಅದಿತಿಯೇ **ಯತ್** ಯಾವ **ಸಪತ್ನೈಃ ಚ** ಶತ್ರುಗಳಾದ ದೈತ್ಯ-ದಾನವರಿಂದ **ಹೃತಶ್ರೀಣಾಂ** ಅಪಹರಿಸಲ್ಪಟ್ಟ ಸಂಪತ್ತುಳ್ಳ **ಸ್ವಧಾಮತಃ** ತಮ್ಮ ವಾಸಸ್ಥಳವಾದ ಸ್ವರ್ಗದಿಂದ **ಚ್ಯಾವಿತಾನಾಂ** ಹೊರದೂಡಲ್ಪಟ್ಟ ಮಕ್ಕಳಾದ ದೇವತೆಗಳ ವಿಷಯದಲ್ಲಿ **ಭವತ್ಯಾ** ತಾಯಿಯಾದ ನಿನ್ನಿಂದ **ಚಿರಕಾಂಕ್ಷಿತಂ** ಬಹುಕಾಲದಿಂದ ಅಪೇಕ್ಷಿತವಾದ ಸಂಪತ್ತಿನ ಪುನಃ ಪ್ರಾಪ್ತಿಯು **ಮೇ** ನನ್ನಿಂದ **ವಿಜ್ಞಾತಂ** ಚೆನ್ನಾಗಿ ತಿಳಿಯಲ್ಪಟ್ಟಿದೆ. (ನಾನು ನಿನ್ನ ಮನೋರಥ ಬಲ್ಲೆನೆಂದರ್ಥ.)

ಛಲಾರೀ ಃ- ಬಾಧಿತಾನಾಂ ಎಂಬ ಪಾಠವನ್ನು ಗ್ರಹಣ ಮಾಡಿ ಭ್ರಂಶಿತಾನಾಂ ತಮ್ಮ ವಾಸಸ್ಥಳದಿಂದ ಭ್ರಂಶಗೊಳಿಸಲ್ಪಟ್ಟ ಎಂದು ಅರ್ಥ ಮಾಡಿರುವರು. ॥೧೨॥

ಅವಳ ಇಷ್ಟವನ್ನೇ ಮೂರು ಶ್ಲೋಕಗಳಿಂದ ಹೇಳುವರು-

**ತಾನ್ ವಿನಿರ್ಜಿತ್ಯ ಸಮರೇ ದುರ್ಮದಾನಸುರರ್ಷಭಾನ್ ।**
**ಪ್ರತಿಲಬ್ಧಜಯಶ್ರೀಭಿಃ ಪುತ್ರೈರಿಚ್ಛಸ್ಯುಪಾಸಿತುಮ್ ॥೧೩॥**

**ಸಮರೇ** ಯುದ್ಧದಲ್ಲಿ **ದುರ್ಮದಾನ್** ದುರಹಂಕಾರಿಗಳಾದ **ತಾನ್ ಅಸುರರ್ಷಭಾನ್** ಆ ದೈತ್ಯಶ್ರೇಷ್ಠರನ್ನು **ವಿನಿರ್ಜಿತ್ಯ** ಗೆದ್ದು **ಪ್ರತಿಲಬ್ಧಜಯಶ್ರೀಭಿಃ** ಮರಳಿ ಸಂಪಾದಿಸಿದ ಜಯ ಮತ್ತು ಸಂಪತ್ತುಳ್ಳ **ಪುತ್ರೈಃ ಸಹ** ಮಕ್ಕಳೊಡನೆ **ಉಪಾಸಿತುಂ ಇಚ್ಛಸಿ** ನನ್ನನ್ನು ಸೇವಿಸಲು ಇಚ್ಛಿಸುವಿ. ॥೧೩॥

**ಇಂದ್ರಜ್ಯೇಷ್ಠೈಶ್ಚ ತನಯೈರ್ಹತಾನಾಂ ಯುಧಿ ವಿದ್ವಿಷಾಮ್ ।**
**ಸ್ತ್ರಿಯೋ ರುದಂತೀರಾಸಾದ್ಯ ದ್ರಷ್ಟುಮಿಚ್ಛಸಿ ದುಃಖಿತಾಃ ॥೧೪॥**

**ಯುಧಿ** ಯುದ್ಧದಲ್ಲಿ **ಇಂದ್ರಜ್ಯೇಷ್ಠೈಃ** ಇಂದ್ರನೇ ಹಿರಿಯನಾಗಿರುವ **ತನಯೈಃ** ಮಕ್ಕಳಾದ ದೇವತೆಗಳಿಂದ **ಹತಾನಾಂ** ಮೃತರಾದ **ವಿದ್ವಿಷಾಂ** ನಿಮ್ಮನ್ನು ಸ್ವಾಭಾವಿಕವಾಗಿ ದ್ವೇಷಿಸುವ ದೈತ್ಯರ **ಸ್ತ್ರಿಯಃ** ಹೆಂಡತಿಯರನ್ನು **ಪತೀನ್** ತಮ್ಮ ತಮ್ಮ ಪತಿಯರ ಮೃತವಾದ ದೇಹಗಳನ್ನು **ಆಸಾದ್ಯ** ಸಮೀಪಿಸಿ **ದುಃಖಿತಾಃ** ದುಃಖಿತರಾಗಿ **ರುದಂತೀಃ ಚ** ಅಳುತ್ತಿರುವುದನ್ನು **ದ್ರಷ್ಟುಂ ಚ** ಕಾಣಲೂ ಕೂಡ **ಇಚ್ಛಸಿ** ಅಪೇಕ್ಷಿಸುವಿ. ॥೧೪॥

**ಆತ್ಮಜಾನ್ ಸುಸಮೃದ್ಧಾನ್ ಸ್ವಾನ್ ಪ್ರತ್ಯಾಹೃತಯಶಃಶ್ರಿಯಃ ।**
**ನಾಕಪೃಷ್ಠಮಧಿಷ್ಠಾಯ ಕ್ರೀಡತೋ ದ್ರಷ್ಟುಮಿಚ್ಛಸಿ ॥೧೫॥**

**ಪ್ರತ್ಯಾಹೃತಯಶಃಶ್ರಿಯಃ** ಅಸುರರಿಂದ ಮತ್ತೆ ತಿರುಗಿ ಪಡೆದ ಕೀರ್ತಿ ಮತ್ತು ಸಂಪತ್ತುಳ್ಳ **ಸುಸಮೃದ್ಧಾನ್** ಬಲಾದಿಗಳಿಂದ ಚೆನ್ನಾಗಿ ಅಭಿವೃದ್ಧರಾದ **ನಾಕಪೃಷ್ಠಂ** ಸ್ವರ್ಗದಲ್ಲಿ **ಅಧಿಷ್ಠಾಯ** ಇದ್ದುಕೊಂಡು **ಕ್ರೀಡತಃ** ವಿಹರಿಸುವ **ಸ್ವಾನ್** ನಿನ್ನ **ಆತ್ಮಜಾನ್** ಮಕ್ಕಳನ್ನು **ದ್ರಷ್ಟುಂ ಇಚ್ಛಸಿ** ನೋಡಲು ಅಪೇಕ್ಷಿಸಿರುವಿ. ॥೧೫॥

ಈ ನಿನ್ನ ಅಪೇಕ್ಷೆಗಳು ಕೂಡಲೇ ಇಡೇರುವುದಿಲ್ಲವೆನ್ನುತ್ತಾರೆ-

**ಪ್ರಾಯೋಽಧುನಾ ತೇಽಸುರಯೂಥನಾಥಾ**
**ಅವಾರಣೀಯಾ ಇತಿ ದೇವಿ ಮೇ ಮತಿಃ ।**
**ಯತ್ತೇಽನುಕೂಲೇಶ್ವರವಿಪ್ರಗುಪ್ತಾ**
**ನ ವಿಕ್ರಮಸ್ತತ್ರ ಸುಖಂ ದದಾತಿ ॥೧೬॥**

**ಹೇ ದೇವಿ** ಅದಿತಿದೇವಿಯೇ **ಅಧುನಾ** ಈಗ **ಅಸುರಯೂಥನಾಥಾಃ** ದೈತ್ಯಸೇನಾನಾಯಕರಾದ ಆ ಬಲ್ಯಾದಿ ಅಸುರರು **ಪ್ರಾಯಃ** ಬಹುಮಟ್ಟಿಗೆ **ದೈವೈಃ** ನಿನ್ನ ಮಕ್ಕಳಾದ ದೇವತೆಗಳಿಂದ **ಅವಾರಣೀಯಾಃ** ಜಯಿಸಲಾಗದವರು **ಇತಿ** ಎಂದು **ಮೇ ಮತಿಃ** ನನಗೆ ಅನಿಸುತ್ತದೆ. ಇದು ನನ್ನ ನಿಶ್ಚಯವಾಗಿದೆ. **ಯತ್** ಯಾವ ಕಾರಣ **ತೇ** ಅವರು **ಅನುಕೂಲೇಶ್ವರವಿಪ್ರಗುಪ್ತಾಃ ಚ** ಪರಮಾತ್ಮನಾದ ನನ್ನ ಆನುಕೂಲ್ಯವಿರುವ ಶುಕ್ರಾಚಾರ್ಯ ಮುಂತಾದ ಬ್ರಾಹ್ಮಣರಿಂದ ಸುರಕ್ಷಿತರಾಗಿದ್ದಾರೆಯೋ **ತತ್** ಆ ಕಾರಣ **ತತ್ರ** ಆ ಅಸುರರ ಮೇಲೇ **ವಿಕ್ರಮಃ ಚ** ಬಲಪ್ರಯೋಗವು **ಸುಖಂ ನ ದದಾತಿ** ದೇವತೆಗಳಿಗೆ ಸುಖವನ್ನು ಕೊಡಲಾರದು. ಅವರನ್ನು ಜಯಿಸಲಾರರೆಂದರ್ಥ. ॥೧೬॥

ಹಾಗಾದರೆ ದೈತ್ಯರನ್ನು ಗೆಲ್ಲಲು ಯಾವ ಉಪಾಯವೂ ಇಲ್ಲದೇ ಇರುವುದರಿಂದ ಸುಮ್ಮನೇ ಇರುವುದೇ ಲೇಸೇನು? ಎಂದರೆ ಹೇಳುತ್ತಾರೆ-

**ಅಥಾಪ್ಯುಪಾಯೋ ಮಮ ದೇವಿ ಚಿಂತ್ಯಃ**
**ಸಂತೋಷಿತಸ್ಯ ವ್ರತಚರ್ಯಯಾ ತೇ ।**
**ಮಮಾರ್ಚನಂ ನಾರ್ಹತಿ ಗಂತುಮನ್ಯಥಾ**
**ಶ್ರದ್ಧಾನುರೂಪಂ ಫಲಹೇತುಕತ್ವಾತ್** ॥೧೭॥

**ಅಥಾಽಪಿ** ವಸ್ತುಸ್ಥಿತಿ ಹೀಗೆ ಇದ್ದರೂ **ಹೇ ದೇವಿ** ಅದಿತಿದೇವಿಯೇ **ತೇ** ನಿನ್ನ **ವ್ರತಚರ್ಯಯಾ** ಪಯೋವ್ರತಾಚರಣೆಯಿಂದ **ಸಂತೋಷಿತಸ್ಯ** ಸಂತುಷ್ಟನಾದ **ಮಮ** ನನ್ನಿಂದ **ಉಪಾಯಃ** ದೇವತೆಗಳಾದ ನಿನ್ನ ಮಕ್ಕಳಿಗೆ ಮತ್ತೆ ಸ್ವರ್ಗ ಸಂಪತ್ತು ದೊರೆಯುವ ಉಪಾಯವು, ದೈತ್ಯರ ಸೋಲಿಗೆ ಉಪಾಯವು **ಚಿಂತ್ಯಃ ಚ** ಯೋಚಿಸಲ್ಪಡಬೇಕು **ಯತಃ** ಏಕೆಂದರೆ **ಮಮ ಅರ್ಚನಂ** ನನ್ನ ಪೂಜೆಯು **ಶ್ರದ್ಧಾನುರೂಪಂ** ಮಾಡುವವರ ಶ್ರದ್ಧೆಗೆ ತಕ್ಕಂತೆ **ಫಲಹೇತುಕತ್ವಾತ್** ಫಲ ಕೊಡುವುದಾದ್ದರಿಂದ ಫಲಕ್ಕೆ ಕಾರಣವಾದ ಜ್ಞಾನಕ್ಕೆ ಕಾರಣವಾಗಿದೆ **ಅನ್ಯಥಾ ಗಂತುಂ** ನಿಷ್ಫಲವಾಗಲು **ನ ಅರ್ಹತಿ** ಯೋಗ್ಯವಲ್ಲ. ॥೧೭॥

**ತ್ವಯಾರ್ಚಿತಶ್ಚಾಹಮಪತ್ಯಗುಪ್ತಯೇ**
**ಪಯೋವ್ರತೇನಾಽನುಗುಣಂ ಸಮೀಡಿತಃ ।**
**ಸ್ವಾಂಶೇನ ಪುತ್ರತ್ವಮುಪೇತ್ಯ ತೇ ಸುತಾನ್**
**ಪಾತಾಽಸ್ಮಿ ಮಾರೀಚತಪಸ್ಯವಸ್ಥಿತಃ** ॥೧೮॥

ಹೇ ಅದಿತಿಯೇ **ಅಪತ್ಯಗುಪ್ತಯೇ** ನಿನ್ನ ಮಕ್ಕಳಾದ ದೇವತೆಗಳ ರಕ್ಷಣೆಗಾಗಿ **ತ್ವಯಾ** ನಿನ್ನಿಂದ **ಪಯೋವ್ರತೇನ** ಪಯೋವ್ರತದಿಂದ **ಅಹಂ** ನಾನು **ಅರ್ಚಿತಃ** ಪೂಜಿತನಾಗಿದ್ದೇನೆ **ಅನುಗುಣಂ** ನೀನು ತಿಳಿದಷ್ಟು ಗುಣಗಳಿಂದ **ಸಮೀಡಿತಃ** ಸ್ತುತನಾಗಿದ್ದೇನೆ ಆದ್ದರಿಂದ **ಅಹಂ** ನಾನು **ಸ್ವಾಂಶೇನ** ನನ್ನ ಅಂಶದಿಂದ **ಪುತ್ರತ್ವಂ ಉಪೇತ್ಯ** ಮಗನಾಗಿ **ತೇ ಸುತಾನ್** ನಿನ್ನ ಮಕ್ಕಳನ್ನು **ಪಾತಾ ಅಸ್ಮಿ** ರಕ್ಷಿಸುವವನಿದ್ದೇನೆ **ಚ** ಮತ್ತು **ಅಹಂ** ನಾನು **ಮಾರೀಚತಪಸಿ** ಮರಿಚಿಗಳ ಮಕ್ಕಳಾದ ಕಶ್ಯಪರ ತಪಸ್ಸಿನಲ್ಲಿ **ಅವಸ್ಥಿತಃ** ಇದ್ದೇನೆ.

ದೇವತೆಗಳ ರಕ್ಷಣೆಗಾಗಿ ಕಶ್ಯಪರು ಮಾಡುತ್ತಿರುವ ತಪಸ್ಸಿನಿಂದಲೂ ನಾನು ಸಂತುಷ್ಟನಾಗಿದ್ದೇನೆ. ಆದ್ದರಿಂದ ನಿನ್ನ ಮಕ್ಕಳನ್ನು ರಕ್ಷಿಸುತ್ತೇನೆ ಎಂಬುದರಲ್ಲಿ ಸಂದೇಹ ಬೇಡ ಎಂದರ್ಥ. ॥೧೮॥

**ಉಪಧಾವ ಪತಿಂ ಭದ್ರೇ ಪ್ರಜಾಪತಿಮಕಲ್ಮಷಮ್ ।**
**ಮಾಂ ಚ ಭಾವಯ ತೇಽಪತ್ಯಮೇವಂ ರೂಪಮವಸ್ಥಿತಮ್** ॥೧೯॥

**ಭದ್ರೇ** ಮಂಗಳಕರಳೇ **ಅಕಲ್ಮಷಂ** ಪಾಪರಹಿತನಾದ **ಪ್ರಜಾಪತಿಂ** ಪ್ರಜೇಶ್ವರನಾದ **ಪತಿಂ** ಗಂಡನಾದ ಕಶ್ಯಪನನ್ನು **ಉಪಧಾವ** ಮಗನಾಗಲೆಂದು ಹೊಂದು ಸೇವಿಸು. **ಏವಂ**

ನೀನು ನೋಡುತ್ತಿರುವ **ರೂಪಂ ಅವಸ್ಥಿತಂ** ರೂಪದಿಂದ ಇರುವ **ಮಾಂ** ನನ್ನನ್ನು **ತೇ** ನಿನ್ನ **ಅಪತ್ಯಂ ಚ** ಮಗನನ್ನಾಗಿ **ಭಾವಯ** ಚಿಂತಿಸು. ।।೧೯।।

**ನೈತತ್ಪರಸ್ಮಾ ಆಖ್ಯೇಯಂ ದೇವಗುಹ್ಯಂ ಕಥಂಚನ ।**
**ಸರ್ವಂ ಸಂಪದ್ಯತೇ ದೇವಿ ದೇವಗುಹ್ಯಾತ್ಸುಸಂವೃತಾತ್ ।।೨೦।।**

**ಹೇ ದೇವಿ** ಅದಿತಿದೇವಿಯೇ **ಏತತ್** ನಾನು ಹೇಳಿದ ವಿಷಯವು **ದೇವಗುಹ್ಯಂ** ದೇವರಹಸ್ಯವಾಗಿದೆ ಆದ್ದರಿಂದ **ಕಥಂಚನ** ಯಾವ ರೀತಿಯಿಂದಲೂ **ಪರಸ್ಮೈ** ಶತ್ರುಗಳಿಗೆ **ನ ಆಖ್ಯೇಯಂ** ಹೇಳತಕ್ಕದ್ದಲ್ಲ **ಸುಸಂವೃತಾತ್** ಚೆನ್ನಾಗಿ ಗುಟ್ಟಾಗಿ ಇಡಲ್ಪಟ್ಟ **ದೇವಗುಹ್ಯಾತ್** ದೇವಗುಹ್ಯದಿಂದ **ಸರ್ವಂ ಸಂಪದ್ಯತೇ** ನಿನ್ನ ಎಲ್ಲ ಇಷ್ಟವೂ ಸಿದ್ಧಿಸುತ್ತದೆ. ಆದ್ದರಿಂದ ಈ ವಿಷಯವನ್ನು ರಹಸ್ಯವಾಗಿ ಇಡಬೇಕೆಂದು ಅಭಿಪ್ರಾಯ. ।।೨೦।।

**ಶ್ರೀಶುಕ ಉವಾಚ**

**ಏತಾವದುಕ್ತ್ವಾ ಭಗವಾನ್ ತತ್ರೈವಾಂತರಧೀಯತ ।**
**ಅದಿತಿರ್ದುರ್ಲಭಂ ಲಬ್ಧ್ವಾ ಹರೇರ್ಜನ್ಮಾತ್ಮನಿ ಪ್ರಭೋಃ ।।**
**ಉಪಾಧಾವತ್ ಪತಿಂ ಭಕ್ತ್ಯಾ ಪರಯಾ ಕೃತಕೃತ್ಯವತ್ ।।೨೧।।**

**ಏತಾವತ್** ಇಷ್ಟು ವಿಷಯವನ್ನು **ಉಕ್ತ್ವಾ** ಹೇಳಿ **ಭಗವಾನ್** ಶ್ರೀಹರಿಯು **ತತ್ರೈವ** ಅಲ್ಲಿಯೇ **ಅಂತರಧೀಯತ** ಕಣ್ಣಿಗೆ ಕಾಣದಾದನು. **ಅದಿತಿಃ** ಅದಿತಿಯಾದರೋ **ದುರ್ಲಭಂ** ಅಯೋಗ್ಯರಿಗೆ ದೊರೆಯದ **ಪ್ರಭೋಃ** ಸರ್ವಸಮರ್ಥನಾದ **ಹರೇಃ** ಶ್ರೀಹರಿಯ **ಜನ್ಮ** ಅವತಾರವು **ಆತ್ಮನಿ** ತನ್ನಲ್ಲಿ ಆಗುವಂತೆ **ಲಬ್ಧ್ವಾ** ವರವನ್ನು ಪಡೆದು **ಕೃತಕೃತ್ಯವತ್** ಕೃತಕೃತ್ಯಳಂತೆ **ಪರಯಾ ಭಕ್ತ್ಯಾ** ಬಹಳ ಭಕ್ತಿಯಿಂದ **ಪತಿಂ** ಕಶ್ಯಪರನ್ನು **ಉಪಾಧಾವತ್** ಸೇವಿಸಿದಳು. ।।೨೧।।

**ಸ ವೈ ಸಮಾಧಿಯೋಗೇನ ಕಶ್ಯಪಸ್ತದಬುಧ್ಯತ ।**
**ಪ್ರವಿಷ್ಟಮಾತ್ಮನಿ ಹರೇರಂಶಂ ಹ್ಯವಿತಥೇಕ್ಷಣಃ ।।೨೨।।**

**ಅವಿತಥೇಕ್ಷಣಃ** ಯಥಾರ್ಥಜ್ಞಾನಿಗಳಾದ **ಸಃ ಕಶ್ಯಪಃ** ಆ ಕಶ್ಯಪರು **ಸಮಾಧಿ-ಯೋಗೇನ ವೈ** ಶ್ರೀಹರಿಯ ಧ್ಯಾನಸಾಮರ್ಥ್ಯದಿಂದಲೇ **ತತ್** ಶ್ರೀಹರಿಯು ತಮ್ಮಲ್ಲಿ ವ್ಯಕ್ತನಾಗಲಿರುವನು ಎಂದು **ಆತ್ಮನಿ** ತಮ್ಮಲ್ಲಿ **ಪ್ರವಿಷ್ಟಂ** ವಿಶೇಷರೂಪದಿಂದ ಪ್ರವೇಶಿಸಿದ **ಹರೇಃ ಅಂಶಂ** ಶ್ರೀಹರಿಯ ಅಂಶವನ್ನು **ಅಬುಧ್ಯತ** ತಿಳಿದರು. ।।೨೨।।

**ಸೋಽದಿತ್ಯಾಂ ವೀರ್ಯಮಾಧತ್ತ ತಪಸಾ ಚಿರಸಂಚಿತಮ್ ।**
**ಸಮಾಹಿತಮನಾ ರಾಜನ್ ದಾರುಣ್ಯಗ್ನಿಂ ಯಥಾಽನಿಲಃ ।।೨೩।।**

**ತಪಸಾ** ತಪಸ್ಸಿನಿಂದ **ಚಿರಸಂಚಿತಂ** ಬಹುಕಾಲದಿಂದ ಸಂಪಾದಿಸಿದ, ಊರ್ಧ್ವ ರೇತಸ್ಕರಾದ್ದರಿಂದ ತಪಸ್ಸು ಮಾಡುವ ಕಾಲದಲ್ಲಿ ಸಂಚಿತವಾದ **ವೀರ್ಯಂ** ವೀರ್ಯವನ್ನು **ಸಮಾಹಿತಮನಾಃ ಸನ್** ಶ್ರೀಹರಿಯ ಧ್ಯಾನದಿಂದ ಯುಕ್ತವಾದ ಮನಸ್ಸುಳ್ಳವರಾಗಿ (ಈ ವೀರ್ಯವು ದೈತ್ಯನಾಶಕರವಾಗಲಿ ಎಂಬ ಮನಸ್ಸುಳ್ಳವರಾಗಿ) **ಅನಿಲಃ** ವಾಯುವು **ದಾರುಣಿ** ಅರಣಿಯಲ್ಲಿ ಕಟ್ಟಿಗೆಯಲ್ಲಿ **ಅಗ್ನಿಂ ಯಥಾ** ಪರಸ್ಪರಸಂಘರ್ಷದಿಂದ ಅಗ್ನಿಯನ್ನು ಇಟ್ಟಂತೆ (**ಅದಿತ್ಯಾಂ** ಅದಿತಿಯಲ್ಲಿ) **ಆಧತ್ತ** ಇಟ್ಟರು. ।।೨೩।।

**ಅದಿತ್ಯಾಂ ನಿಹಿತಂ ಗರ್ಭಂ ಭಗವಂತಂ ಸನಾತನಮ್ ।**
**ಹಿರಣ್ಯಗರ್ಭೋ ವಿಜ್ಞಾಯ ಸಮಿಡೇ ಗುಹ್ಯನಾಮಭಿಃ ।।೨೪।।**

**ಹಿರಣ್ಯಗರ್ಭಃ** ಬ್ರಹ್ಮದೇವರು **ಸನಾತನಂ** ಸನಾತನನಾದ **ಭಗವಂತಂ** ಶ್ರೀಹರಿಯನ್ನು **ಅದಿತ್ಯಾಂ** ಅದಿತಿಯಲ್ಲಿ **ಗರ್ಭಂ** ವೀರ್ಯದ ಮೂಲಕ **ನಿಹಿತಂ** ಕಶ್ಯಪರಿಂದ ಇಡಲ್ಪಟ್ಟವನನ್ನಾಗಿ **ವಿಜ್ಞಾಯ** ತಿಳಿದು **ಗುಹ್ಯನಾಮಭಿಃ** ಮಹಾಜ್ಞಾನಿಗಳಾದ ಬ್ರಹ್ಮಾದಿಗಳು ರೂಢಿಯಿಂದ ಬಳಿಸುವ ಇತರರಿಗೆ ತಿಳಿಯದ ನಾಮಗಳಿಂದ **ಸಮೀಡೇ** ಭಕ್ತಿಯಿಂದ ಸ್ತುತಿಸಿದರು. ।।೨೪।।

**ಬ್ರಹ್ಮೋವಾಚ**

**ಜಯೋರುಗಾಯ ಭಗವನ್ನುರುಕ್ರಮ ನಮೋಽಸ್ತು ತೇ ।**
**ನಮೋ ಬ್ರಹ್ಮಣ್ಯದೇವಾಯ ತ್ರಿಗುಣಾಯ ನಮೋಽಸ್ತು ತೇ ।।೨೫।।**

**ಹೇ ಉರುಗಾಯ** ಸರ್ವೋತ್ತಮನೆಂದು ವೇದಾದಿಶಾಸ್ತ್ರಗಳಿಂದ ಪ್ರತಿಪಾದ್ಯನಾದ **ಉರುಕ್ರಮ** ಉತ್ಕೃಷ್ಟವಾದ ಪಾದವಿಕ್ಷೇಪ ಉಳ್ಳ **ಭಗವನ್** ನಾರಾಯಣನೇ **ತ್ವಂ** ನೀನು **ಜಯ** ಶತ್ರುಗಳನ್ನು ಸೋಲಿಸು ಗೆಲ್ಲು **ತೇ ನಮಃ** ನಿನಗೆ ನಮಸ್ಕಾರ. **ಬ್ರಹ್ಮಣ್ಯದೇವಾಯ** ಬ್ರಾಹ್ಮಣರಲ್ಲಿ ದಯೆಯುಳ್ಳ ಕ್ರೀಡಾದಿಗುಣವಂತನಾದ ನಿನಗೆ **ನಮಃ** ನಮಸ್ಕಾರ. **ತ್ರಿಗುಣಾಯ** ಮೂರು ಲೋಕಗಳೂ ಅಪ್ರಧಾನವಾಗಿರುವ ಅಥವಾ ಸತ್ವಾದಿಗುಣ-ಪ್ರವರ್ತಕನಾದ **ತೇ ನಮಃ ಅಸ್ತು** ನಿನಗೆ ನಮಸ್ಕಾರವಿರಲಿ.

ಸತ್ಯ ಃ- ಉರುಕ್ರಮ ಎಂದುದರಿಂದ ಮುಂದೆ ಆಗುವ ತ್ರಿವಿಕ್ರಮತೆಯ ಜ್ಞಾನ ತಮಗಿದೆ ಎಂದು ಸೂಚಿಸುತ್ತಿದ್ದಾರೆ. **ಜಯೋರುಗಾಯ** ಎಂಬುದು ಸಮಸ್ತಪದವೆಂದು ತಿಳಿಯಬೇಕು. **ಜಯಃ** ಜಯನಾಮಕನಾದ ಅರ್ಜುನನು **ಉರುಗಾಯಃ** ಮಹಾತ್ಮರಿಂದ ಸ್ತುತ್ಯನಾದವನು **ಯೇನ** ಯಾವ ಕೃಷ್ಣನಿಂದ ಅಂಥ ಕೃಷ್ಣನು **ಜಯೋರುಗಾಯ** ಎಂದು ಅರ್ಥ ತಿಳಿಯಬೇಕು.

ನೀನು ನೋಡುತ್ತಿರುವ **ರೂಪಂ ಅವಸ್ಥಿತಂ** ರೂಪದಿಂದ ಇರುವ **ಮಾಂ** ನನ್ನನ್ನು **ತೇ** ನಿನ್ನ **ಅಪತ್ಯಂ ಚ** ಮಗನನ್ನಾಗಿ **ಭಾವಯ** ಚಿಂತಿಸು. ।।೧೯।।

**ನೈತತ್ಪರಸ್ಮಾ ಆಖ್ಯೇಯಂ ದೇವಗುಹ್ಯಂ ಕಥಂಚನ ।**
**ಸರ್ವಂ ಸಂಪದ್ಯತೇ ದೇವಿ ದೇವಗುಹ್ಯಾತ್ಸುಸಂವೃತಾತ್ ।।೨೦।।**

**ಹೇ ದೇವಿ** ಅದಿತಿದೇವಿಯೇ **ಏತತ್** ನಾನು ಹೇಳಿದ ವಿಷಯವು **ದೇವಗುಹ್ಯಂ** ದೇವರಹಸ್ಯವಾಗಿದೆ ಆದ್ದರಿಂದ **ಕಥಂಚನ** ಯಾವ ರೀತಿಯಿಂದಲೂ **ಪರಸ್ಮೈ** ಶತ್ರುಗಳಿಗೆ **ನ ಆಖ್ಯೇಯಂ** ಹೇಳತಕ್ಕದ್ದಲ್ಲ **ಸುಸಂವೃತಾತ್** ಚೆನ್ನಾಗಿ ಗುಟ್ಟಾಗಿ ಇಡಲ್ಪಟ್ಟ **ದೇವಗುಹ್ಯಾತ್** ದೇವಗುಹ್ಯದಿಂದ **ಸರ್ವಂ ಸಂಪದ್ಯತೇ** ನಿನ್ನ ಎಲ್ಲ ಇಷ್ಟವೂ ಸಿದ್ಧಿಸುತ್ತದೆ. ಆದ್ದರಿಂದ ಈ ವಿಷಯವನ್ನು ರಹಸ್ಯವಾಗಿ ಇಡಬೇಕೆಂದು ಅಭಿಪ್ರಾಯ. ।।೨೦।।

**ಶ್ರೀಶುಕ ಉವಾಚ**

**ಏತಾವದುಕ್ತ್ವಾ ಭಗವಾನ್ ತತ್ರೈವಾಂತರಧೀಯತ ।**
**ಅದಿತಿರ್ದುರ್ಲಭಂ ಲಬ್ಧ್ವಾ ಹರೇರ್ಜನ್ಮಾತ್ಮನಿ ಪ್ರಭೋಃ ।।**
**ಉಪಾಧಾವತ್ ಪತಿಂ ಭಕ್ತ್ಯಾ ಪರಯಾ ಕೃತಕೃತ್ಯವತ್ ।।೨೧।।**

**ಏತಾವತ್** ಇಷ್ಟು ವಿಷಯವನ್ನು **ಉಕ್ತ್ವಾ** ಹೇಳಿ **ಭಗವಾನ್** ಶ್ರೀಹರಿಯು **ತತ್ರೈವ** ಅಲ್ಲಿಯೇ **ಅಂತರಧೀಯತ** ಕಣ್ಣಿಗೆ ಕಾಣದಾದನು. **ಅದಿತಿಃ** ಅದಿತಿಯಾದರೋ **ದುರ್ಲಭಂ** ಅಯೋಗ್ಯರಿಗೆ ದೊರೆಯದ **ಪ್ರಭೋಃ** ಸರ್ವಸಮರ್ಥನಾದ **ಹರೇಃ** ಶ್ರೀಹರಿಯ **ಜನ್ಮ** ಅವತಾರವು **ಆತ್ಮನಿ** ತನ್ನಲ್ಲಿ ಆಗುವಂತೆ **ಲಬ್ಧ್ವಾ** ವರವನ್ನು ಪಡೆದು **ಕೃತಕೃತ್ಯವತ್** ಕೃತಕೃತ್ಯಳಂತೆ **ಪರಯಾ ಭಕ್ತ್ಯಾ** ಬಹಳ ಭಕ್ತಿಯಿಂದ **ಪತಿಂ** ಕಶ್ಯಪರನ್ನು **ಉಪಾಧಾವತ್** ಸೇವಿಸಿದಳು. ।।೨೧।।

**ಸ ವೈ ಸಮಾಧಿಯೋಗೇನ ಕಶ್ಯಪಸ್ತದಬುಧ್ಯತ ।**
**ಪ್ರವಿಷ್ಟಮಾತ್ಮನಿ ಹರೇರಂಶಂ ಹ್ಯವಿತಥೇಕ್ಷಣಃ ।।೨೨।।**

**ಅವಿತಥೇಕ್ಷಣಃ** ಯಥಾರ್ಥಜ್ಞಾನಿಗಳಾದ **ಸಃ ಕಶ್ಯಪಃ** ಆ ಕಶ್ಯಪರು **ಸಮಾಧಿಯೋಗೇನ ವೈ** ಶ್ರೀಹರಿಯ ಧ್ಯಾನಸಾಮರ್ಥ್ಯದಿಂದಲೇ **ತತ್** ಶ್ರೀಹರಿಯು ತಮ್ಮಲ್ಲಿ ವ್ಯಕ್ತನಾಗಲಿರುವನು ಎಂದು **ಆತ್ಮನಿ** ತಮ್ಮಲ್ಲಿ **ಪ್ರವಿಷ್ಟಂ** ವಿಶೇಷರೂಪದಿಂದ ಪ್ರವೇಶಿಸಿದ **ಹರೇಃ ಅಂಶಂ** ಶ್ರೀಹರಿಯ ಅಂಶವನ್ನು **ಅಬುಧ್ಯತ** ತಿಳಿದರು. ।।೨೨।।

**ಸೋಽದಿತ್ಯಾಂ ವೀರ್ಯಮಾಧತ್ತ ತಪಸಾ ಚಿರಸಂಚಿತಮ್ ।**
**ಸಮಾಹಿತಮನಾ ರಾಜನ್ ದಾರುಣ್ಯಗ್ನಿಂ ಯಥಾಽನಿಲಃ ।।೨೩।।**

**ತಪಸಾ** ತಪಸ್ಸಿನಿಂದ **ಚಿರಸಂಚಿತಂ** ಬಹುಕಾಲದಿಂದ ಸಂಪಾದಿಸಿದ, ಊರ್ಧ್ವ ರೇತಸ್ಕರಾದ್ದರಿಂದ ತಪಸ್ಸು ಮಾಡುವ ಕಾಲದಲ್ಲಿ ಸಂಚಿತವಾದ **ವೀರ್ಯಂ** ವೀರ್ಯವನ್ನು **ಸಮಾಹಿತಮನಾಃ ಸನ್** ಶ್ರೀಹರಿಯ ಧ್ಯಾನದಿಂದ ಯುಕ್ತವಾದ ಮನಸ್ಸುಳ್ಳವರಾಗಿ (ಈ ವೀರ್ಯವು ದೈತ್ಯನಾಶಕರವಾಗಲಿ ಎಂಬ ಮನಸ್ಸುಳ್ಳವರಾಗಿ) **ಅನಿಲಃ** ವಾಯುವು **ದಾರುಣಿ** ಅರಣಿಯಲ್ಲಿ ಕಟ್ಟಿಗೆಯಲ್ಲಿ **ಅಗ್ನಿಂ ಯಥಾ** ಪರಸ್ಪರಸಂಘರ್ಷದಿಂದ ಅಗ್ನಿಯನ್ನು ಇಟ್ಟಂತೆ (**ಅದಿತ್ಯಾಂ** ಅದಿತಿಯಲ್ಲಿ) **ಆಧತ್ತ** ಇಟ್ಟರು. ।।೨೩।।

**ಅದಿತ್ಯಾಂ ನಿಹಿತಂ ಗರ್ಭಂ ಭಗವಂತಂ ಸನಾತನಮ್ ।**
**ಹಿರಣ್ಯಗರ್ಭೋ ವಿಜ್ಞಾಯ ಸಮಿಡೇ ಗುಹ್ಯನಾಮಭಿಃ ।।೨೪।।**

**ಹಿರಣ್ಯಗರ್ಭಃ** ಬ್ರಹ್ಮದೇವರು **ಸನಾತನಂ** ಸನಾತನನಾದ **ಭಗವಂತಂ** ಶ್ರೀಹರಿಯನ್ನು **ಅದಿತ್ಯಾಂ** ಅದಿತಿಯಲ್ಲಿ **ಗರ್ಭಂ** ವೀರ್ಯದ ಮೂಲಕ **ನಿಹಿತಂ** ಕಶ್ಯಪರಿಂದ ಇಡಲ್ಪಟ್ಟವನನ್ನಾಗಿ **ವಿಜ್ಞಾಯ** ತಿಳಿದು **ಗುಹ್ಯನಾಮಭಿಃ** ಮಹಾಜ್ಞಾನಿಗಳಾದ ಬ್ರಹ್ಮಾದಿಗಳು ರೂಢಿಯಿಂದ ಬಳಿಸುವ ಇತರರಿಗೆ ತಿಳಿಯದ ನಾಮಗಳಿಂದ **ಸಮೀಡೇ** ಭಕ್ತಿಯಿಂದ ಸ್ತುತಿಸಿದರು. ।।೨೪।।

**ಬ್ರಹ್ಮೋವಾಚ**

**ಜಯೋರುಗಾಯ ಭಗವನ್ನುರುಕ್ರಮ ನಮೋಽಸ್ತು ತೇ ।**
**ನಮೋ ಬ್ರಹ್ಮಣ್ಯದೇವಾಯ ತ್ರಿಗುಣಾಯ ನಮೋಽಸ್ತು ತೇ ।।೨೫।।**

**ಹೇ ಉರುಗಾಯ** ಸರ್ವೋತ್ತಮನೆಂದು ವೇದಾದಿಶಾಸ್ತ್ರಗಳಿಂದ ಪ್ರತಿಪಾದ್ಯನಾದ **ಉರುಕ್ರಮ** ಉತ್ಕೃಷ್ಟವಾದ ಪಾದವಿಕ್ಷೇಪ ಉಳ್ಳ **ಭಗವನ್** ನಾರಾಯಣನೇ **ತ್ವಂ** ನೀನು **ಜಯ** ಶತ್ರುಗಳನ್ನು ಸೋಲಿಸು ಗೆಲ್ಲು **ತೇ ನಮಃ** ನಿನಗೆ ನಮಸ್ಕಾರ. **ಬ್ರಹ್ಮಣ್ಯದೇವಾಯ** ಬ್ರಾಹ್ಮಣರಲ್ಲಿ ದಯೆಯುಳ್ಳ ಕ್ರೀಡಾದಿಗುಣವಂತನಾದ ನಿನಗೆ **ನಮಃ** ನಮಸ್ಕಾರ. **ತ್ರಿಗುಣಾಯ** ಮೂರು ಲೋಕಗಳೂ ಅಪ್ರಧಾನವಾಗಿರುವ ಅಥವಾ ಸತ್ವಾದಿಗುಣ-ಪ್ರವರ್ತಕನಾದ **ತೇ ನಮಃ ಅಸ್ತು** ನಿನಗೆ ನಮಸ್ಕಾರವಿರಲಿ.

ಸತ್ಯ ಃ- ಉರುಕ್ರಮ ಎಂದುದರಿಂದ ಮುಂದೆ ಆಗುವ ತ್ರಿವಿಕ್ರಮತೆಯ ಜ್ಞಾನ ತಮಗಿದೆ ಎಂದು ಸೂಚಿಸುತ್ತಿದ್ದಾರೆ. **ಜಯೋರುಗಾಯ** ಎಂಬುದು ಸಮಸ್ತಪದವೆಂದು ತಿಳಿಯಬೇಕು. **ಜಯಃ** ಜಯನಾಮಕನಾದ ಅರ್ಜುನನು **ಉರುಗಾಯಃ** ಮಹಾತ್ಮರಿಂದ ಸ್ತುತ್ಯನಾದವನು **ಯೇನ** ಯಾವ ಕೃಷ್ಣನಿಂದ ಅಂಥ ಕೃಷ್ಣನು **ಜಯೋರುಗಾಯ** ಎಂದು ಅರ್ಥ ತಿಳಿಯಬೇಕು.

**ಉರುಭಿಃ** ಎಂದರೇ ಶ್ರೇಷ್ಠರಾದ ರಮಾ-ಬ್ರಹ್ಮಾದಿಗಳಿಂದ **ಗಾಯ (ಗೀಯತೇ)** ಸ್ತುತ್ಯನೇ, **ಉರು ಗಚ್ಛತೀತಿ** ಉರುಗಾಯ ಎಲ್ಲ ಪದಾರ್ಥಗಳನ್ನೂ ತಿಳಿದ ಭಗವಂತನೇ ಎಂದೂ ಅರ್ಥ ಮಾಡಬಹುದು. ।।೨೫।।

**ಪೃಶ್ನಿಗರ್ಭಾಯ ದೇವಾಯ ವೇದಗರ್ಭಾಯ ವೇಧಸೇ ।**
**ತ್ರಿಗುಣಾಯ ತ್ರಿಪೃಷ್ಠಾಯ ಶಿಪಿವಿಷ್ಟಾಯ ವಿಷ್ಣವೇ** ।।೨೬।।

**ಪೃಶ್ನಿಗರ್ಭಾಯ** ಪೃಶ್ನಿ ಎಂಬುವವಳ ಮಗನಾಗಿ ವ್ಯಕ್ತನಾದ **ದೇವಾಯ** ಎಲ್ಲರಿಗೂ ದೇವನಾದ **ವೇದಗರ್ಭಾಯ** ವೇದವನ್ನು ಗರ್ಭದಂತೆ ಧರಿಸಿ ಪೋಷಿಸುವ, ವೇದರಹಸ್ಯನಾದ **ವೇಧಸೇ** ಜ್ಞಾನಸ್ವರೂಪನಾದ **ತ್ರಿಗುಣಾಯ** ಸತ್ವಾದಿಗುಣನಿಯಾಮಕ-ನಾದ **ತ್ರಿಪೃಷ್ಠಾಯ** ವೈಕುಂಠ-ಶ್ವೇತದ್ವೀಪ-ಅನಂತಾಸನಗಳೆಂಬ ಮೂರು ಸ್ಥಾನಗಳುಳ್ಳ ಮೂರು ಲೋಕಗಳ ಮೇಲೆ ಇರುವ **ಶಿಪಿವಿಷ್ಟಾಯ** ಗರುಡಾರೂಢನಾದ **ವಿಷ್ಣವೇ ನಮಃ** ವ್ಯಾಪ್ತನಾದ ನಿನಗೆ ನಮಸ್ಕಾರ.

ಸತ್ಯ ಃ- **ಶಿಪಿಶಬ್ದವು ಪಶುವಾಚಕವಾಗಿದೆ. ಇಲ್ಲಿ ಪಶುಗಳು ಎಂದರೆ ದೇವಾದಿಗಳು ಅವರಲ್ಲಿ ವಿಷ್ಟ** ಪ್ರವಿಷ್ಟನಾದವನು. ''ಯಜ್ಞೋ ವೈ ವಿಷ್ಣುಃ ಪಶವಃ ಶಿಪಿರ್ಯಜ್ಞ ಏವ ಪಶುಷು ಪ್ರತಿತಿಷ್ಠತಿ'' ಎಂದು ಶ್ರುತಿ ಇದೆ. **ಶಿಪಯಃ** ಜ್ಞಾನಕಲೆಗಳು **ವಿಷ್ಟಾಃ** ಪ್ರವಿಷ್ಟಾಃ ಯಂ ತಸ್ಮೈ ಜ್ಞಾನರಶ್ಮಿಮತೇ ಜ್ಞಾನರಶ್ಮಿಗಳುಳ್ಳವನು ಎಂದರ್ಥ. ಪೃಶ್ನಿಗರ್ಭ ಪೃಶ್ನಿಯ ಮಗ ಎಂದರ್ಥ. ''ಗರ್ಭೋ ಭ್ರೂಣೇಽರ್ಭಕೇ ಕಕ್ಷೌ'' ಎಂದು ವಿಶ್ವ ।।೨೬।।

**ದೇವಗರ್ಭಾಯ** ಎಂಬ ಪಾಠದಲ್ಲಿ ದೇವತೆಗಳನ್ನು ಗರ್ಭದಲ್ಲಿರಿಸಿದ ಎಂದು ಅರ್ಥ.

**ತ್ವಮಾದಿರಂತೋ ಭುವನಸ್ಯ ಮಧ್ಯ-**
**ಮನಂತಶಕ್ತಿಂ ಪುರುಷಂ ಯಮಾಹುಃ ।**
**ಕಾಲೋ ಭವಾನಾಕ್ಷಿಪತೀಶ ವಿಶ್ವಂ**
**ಸ್ರೋತೋ ಯಥಾಂಭಃ ಪತಿತಂ ಗಭೀರಮ್** ।।೨೭।।

**ತ್ವಂ** ನೀನು **ಭುವನಸ್ಯ** ಈ ಬ್ರಹ್ಮಾಂಡದ **ಆದಿಃ** ಉತ್ಪಾದಕನು **ಮಧ್ಯಂ** ಪಾಲಕನು **ಅಂತಃ** ನಾಶಕನು ಎಂದು **ಅನಂತಶಕ್ತಿಂ** ಅನಂತಶಕ್ತಿಯುಳ್ಳ **ಪುರುಷಂ** ಪೂರ್ಣಷಡ್ಗುಣನಾದ **ಯಂ** ಯಾವ ನಿನ್ನನ್ನು **ಆಹುಃ** ವೇದಗಳು ಹೇಳುತ್ತವೆ ಜ್ಞಾನಿಗಳು ಹೇಳುತ್ತಾರೆ **ಗಭೀರಂ** ಆಳವಾದ **ಸ್ರೋತಃ** ಪ್ರವಾಹವು **ಯಥಾ** ಹೇಗೆ **ಅಂಭಃಪತಿತಂ** ನೀರಿನಲ್ಲಿ ಬಿದ್ದ ಹುಲ್ಲು ಕಡ್ಡಿ ಮುಂತಾದುವನ್ನು **ಆಕ್ಷಿಪತಿ** ದಡಕ್ಕೆ ತಂದು ಹಾಕುತ್ತದೋ **ತಥಾ** ಹಾಗೆ **ಹೇ ಈಶ** ಸ್ವಾಮಿಯೇ **ಕಾಲಃ** ಕಾಲನಾಮಕನಾದ **ಭವಾನ್** ನೀನು **ವಿಶ್ವಂ** ನಿನ್ನ ಪ್ರವಾಹಕ್ಕೆ ಸಿಕ್ಕಿರುವ ಬ್ರಹ್ಮಾದಿ ಜಗತ್ತನ್ನು **ಆಕ್ಷಿಪತಿ** ಅವರವರ ಗತಿಯನ್ನು ಹೊಂದಿಸುವಿ. ।।೨೭।।

**ತ್ವಂ ವೈ ಪ್ರಜಾನಾಂ ಸ್ಥಿರಜಂಗಮಾನಾಂ**
**ಪ್ರಜಾಪತೀನಾಮಸಿ ಸಂಪ್ರವಿಷ್ಟಃ ।**
**ದಿವೌಕಸಾಂ ದೇವ ದಿವಶ್ಚ್ಯುತಾನಾಂ**
**ಪರಾಯಣಂ ನೌರಿವ ಮಜ್ಜತೋಽಪ್ಸು ॥೨೮॥**

**॥ ಇತಿ ಶ್ರೀಮದ್ಭಾಗವತೇ ಅಷ್ಟಮಸ್ಕಂಧೇ ಷೋಡಶೋಽಧ್ಯಾಯಃ ॥**

**ಹೇ ದೇವ** ದೇವನೇ **ತ್ವಂ** ನೀನು **ಪ್ರಜಾನಾಂ** ಎಲ್ಲ ಜನರಲ್ಲಿ **ಸ್ಥಿರಜಂಗಮಾನಾಂ** ಸ್ಥಾವರ-ಜಂಗಮಗಳಲ್ಲಿ **ಪ್ರಜಾಪತೀನಾಂ** ಪ್ರಜೇಶ್ವರರಲ್ಲಿ **ಸಂಪ್ರವಿಷ್ಟಃ** ಪ್ರವೇಶಮಾಡಿರುವಿ. ಆದ್ದರಿಂದ **ಅಪ್ಸು** ನೀರಿನಲ್ಲಿ **ಮಜ್ಜತಃ** ಮುಳುಗುತ್ತಿರುವವರಿಗೆ **ನೌಃ ಇವ** ದೋಣಿಯಂತೆ **ದಿವಃ ಚ್ಯುತಾನಾಂ** ಪ್ರಕೃತ ಸ್ವರ್ಗದಿಂದ ಭ್ರಷ್ಟರಾದ **ದಿವೌಕಸಾಂ** ದೇವತೆಗಳಿಗೆ **ಪರಾಯಣಂ** ಮುಖ್ಯ ಆಶ್ರಯನಾಗಿರುವಿ. ॥೨೮॥

**ಇಲ್ಲಿಗೆ ಹದಿನಾರನೇ ಅಧ್ಯಾಯವು ಮುಗಿಯಿತು.**

★★★





## ಅಥ ಸಪ್ತದಶೋಽಧ್ಯಾಯಃ

ಈ ಅಧ್ಯಾಯದಲ್ಲಿ ಬ್ರಹ್ಮದೇವರು ಮಾಡಿದ ಸ್ತುತಿಯಿಂದ ಪ್ರಸನ್ನನಾದ ಶ್ರೀಹರಿಯು ಅದಿತಿಯಿಂದ ವ್ಯಕ್ತನಾದನೆಂಬ ಮಾಹಾತ್ಮ್ಯವನ್ನು ಹೇಳುತ್ತಿದ್ದಾರೆ.

**ಇತ್ಥಂ ವಿರಿಂಚಿಸ್ತುತಕರ್ಮವೀರ್ಯಃ**
**ಪ್ರಾದುರ್ಬಭೂವಾಮೃತಭೂರದಿತ್ಯಾಮ್ ।**
**ಚತುರ್ಭುಜಃ ಶಂಖಗದಾಬ್ಜಚಕ್ರಃ**
**ಪಿಶಂಗವಾಸಾ ನಲಿನಾಯತೇಕ್ಷಣಃ** ॥೧॥

**ಶ್ಯಾಮಾವದಾತೋ ಝಷರಾಜಕುಂಡಲ-**
**ತ್ವಿಷೋಲ್ಲಸಚ್ಛ್ರೀವದನಾಂಬುಜಃ ಪುಮಾನ್ ।**
**ಶ್ರೀವತ್ಸವಕ್ಷಾ ವಲಯಾಂಗದೋಲ್ಲಸತ್ಕಿ-**
**ರೀಟಕಾಂಚೀಗುಣಚಾರುನೂಪುರಃ** ॥೨॥

**ಮಧುವ್ರತವ್ರಾತವಿಘುಷ್ಟಯಾ ಸ್ವಯಾ**
**ವಿರಾಜಿತಶ್ರೀವನಮಾಲಯಾ ಹರಿಃ ।**
**ಪ್ರಜಾಪತೇರ್ವೇಶ್ಮತಮಃ ಸ್ವರೋಚಿಷಾ**
**ವಿನಾಶಯನ್ ಕಂಠನಿವಿಷ್ಟಕೌಸ್ತುಭಃ** ॥೩॥

**ಇತ್ಥಂ** ಹಿಂದಿನ ಅಧ್ಯಾಯದ ಕೊನೆಗೆ ಹೇಳಿದಂತೆ **ವಿರಿಂಚಿಸ್ತುತಕರ್ಮವೀರ್ಯಃ** ಬ್ರಹ್ಮದೇವರಿಂದ ಸ್ತುತಿಸಲ್ಪಟ್ಟ ಕ್ರಿಯೆಗಳು ಮತ್ತು ದೇವತಾಕಾರ್ಯ ಸಮರ್ಥವಾದ ಪರಾಕ್ರಮ ಉಳ್ಳ **ಅಮೃತಭೂಃ** ಮುಕ್ತರಿಗೆ ಆಶ್ರಯನಾದ, **ಹರಿಃ** ವಿಷ್ಣುವು **ಅದಿತ್ಯಾಂ** ಅದಿತಿದೇವಿಯಲ್ಲಿ **ಚತುರ್ಭುಜಃ** ನಾಲ್ಕು ಭುಜಗಳುಳ್ಳವನೂ **ಶಂಖಗದಾಬ್ಜಚಕ್ರಃ** ಶಂಖ-ಗದಾ-ಪದ್ಮ-ಚಕ್ರಗಳುಳ್ಳವನೂ **ಪಿಶಂಗವಾಸಾಃ** ಪೀತಾಂಬರವುಳ್ಳವನು **ನಲಿನಾಯತೇಕ್ಷಣಃ** ಕಮಲದಂತೆ ವಿಶಾಲವಾದ ಕಣ್ಣುಗಳುಳ್ಳವನೂ **ಶ್ಯಾಮಾವದಾತಃ** ಶುದ್ಧ

ಶ್ಯಾಮವರ್ಣನೂ **ಝಷರಾಜಕುಂಡಲತ್ವಿಷಾ** (ಮೀನುಗಳ ರಾಜ ಮಕರ) ಅಂದರೆಮಕರ ಕುಂಡಲದ ಕಾಂತಿಯಿಂದ **ಉಲ್ಲಸತ್‌ಶ್ರೀವದನಾಂಬುಜಃ** ಪ್ರಕಾಶಿಸುವ ಕಾಂತಿಯುಕ್ತವಾದ ಮುಖಕಮಲ ಉಳ್ಳವನೂ **ಪುಮಾನ್** ಪುರುಷನೂ **ಶ್ರೀವತ್ಸವಕ್ಷಾಃ** ಶ್ರೀವತ್ಸಚಿಹ್ನೆಯಿಂದ ಕೂಡಿದ ವಕ್ಷಸ್ಥಲ ಉಳ್ಳವನೂ **ವಲಯ** ಕಡಗಗಳು **ಅಂಗದ** ತೋಳಿನ ಆಭರಣಗಳು **ಉಲ್ಲಸತ್‌ಕಿರೀಟ** ಹೊಳೆಯುವ ಕಿರೀಟ **ಕಾಂಚೀಗುಣ** ನಡುಪಟ್ಟಿಯ ಎಳೆಗಳು (ಉಡುದಾರ) **ಚಾರುನೂಪುರಃ** ಸುಂದರವಾದ ಕಾಲಿನ ಆಭರಣಗಳುಳ್ಳವನು **ಮಧುವ್ರತವ್ರಾತವಿಘುಷ್ಟಯಾ** ದುಂಬಿಗಳ ಸಮೂಹದ ಧ್ವನಿಯಿಂದ ಕೂಡಿದ **ಸ್ವಯಾ** ತನ್ನ ವೈಜಯಂತೀಮಾಲೆಯಿಂದ **ವನಮಾಲಯಾ** ವನಮಾಲೆಯಿಂದ **ವಿರಾಜಿತಶ್ರೀಃ** ಶೋಭಿಸುವ ಕಾಂತಿಯುಳ್ಳವನು **ಕಂಠನಿವಿಷ್ಟಕೌಸ್ತುಭಃ** ಕುತ್ತಿಗೆಯಲ್ಲಿ ಹಾಕಿಕೊಂಡಿರುವ ಕೌಸ್ತುಭರತ್ನ ಉಳ್ಳವನೂ ಆಗಿ **ಪ್ರಜಾಪತೇಃ** ಪ್ರಜಾಪತಿಗಳಾದ ಕಶ್ಯಪರ **ವೇಶ್ಮತಮಃ** ಮನೆಯ ಕತ್ತಲೆಯನ್ನು **ವಿನಾಶಯನ್** ನಾಶಪಡಿಸುತ್ತ **ಪ್ರಾದುರ್ಬಭೂವ** ವ್ಯಕ್ತನಾದನು. ||೧-೨-೩||

ವಿಶೇಷ :- ಅಮೃತಭೂಃ **ಅಮೃತಂ** ಮುಕ್ತಿ **ಭೂಃ** ಸಂಸಾರ ಇವುಗಳು ಯಾರಿಂದ ಆಗುತ್ತವೋ ಅಂಥ ಪರಮಾತ್ಮ ಅಮೃತಭೂಃ ಎಂದು ಅರ್ಥ. ಚೇತನರಿಗೆ **ಅಮೃತಂ** ಮುಕ್ತಿಯನ್ನೂ ಭಾವಯತಿ ವ್ಯಕ್ತಗೊಳಿಸುತ್ತಾನೆ ಎಂದು ಅರ್ಥ. ಅಮೃತಂ ಭಾವಯತಿ ಉತ್ಪಾದಯತಿ ಇತಿ ಅಮೃತವನ್ನು ಉತ್ಪಾದಿಸುವ, ಅಥವಾ ಅಮೃತಸ್ಯ ಭೂಃ ದೇವತೆಗಳ ಅಮೃತಪ್ರಾಪ್ತಿಗೆ ಆಶ್ರಯನಾದ ಎಂದು ಅರ್ಥ. **ಮೃತ** ಮರಣ **ಭೂಃ** ಜನನ ನ ಇವುಗಳಿಲ್ಲದ ಜನನಮರಣಶೂನ್ಯನಾದ ಎಂದೂ ಅರ್ಥವನ್ನು ಹೇಳಬಹುದು.

**ದಿಶಃ ಪ್ರಸೇದುಃ ಸಲಿಲಾಶಯಾಸ್ತದಾ**
**ಪ್ರಜಾಃ ಪ್ರಹೃಷ್ಟಾ ಋತವೋ ಗುಣಾನ್ವಿತಾಃ ।**
**ದ್ಯೌರಂತರಿಕ್ಷಂ ಕ್ಷಿತಿರಗ್ನಿಜಿಹ್ವಾ**
**ಗಾವೋ ದ್ವಿಜಾ ಸಂಜಹೃಷುರ್ನಗಾಶ್ಚ** ||೪||

**ತದಾ** ಶ್ರೀಹರಿಯು ವ್ಯಕ್ತನಾದ ಕಾಲದಲ್ಲಿ **ದಿಶಃ** ದಿಕ್ಕುಗಳು **ಪ್ರಸೇದುಃ** ಪ್ರಸನ್ನವಾದವು **ಸಲಿಲಾಶಯಾಃ** ಸರೋವರ ಮುಂತಾದವುಗಳು **ಪ್ರಸೇದುಃ** ಪ್ರಸನ್ನವಾದವು **ಪ್ರಜಾಃ** ಪ್ರಜೆಗಳು **ಪ್ರಹೃಷ್ಟಾಃ** ಹರ್ಷಗೊಂಡರು **ಋತವಃ ಗುಣಾನ್ವಿತಾಃ** ಎಲ್ಲ ಋತುಗಳು ತಮ್ಮ ತಮ್ಮ ಕಾಲದಲ್ಲಿ ಇರಬೇಕಾದ ಹೂವು ಹಣ್ಣುಗಳಿಂದ ತುಂಬಿದವು **ದ್ಯೌಃ** ದ್ಯುಲೋಕವು **ಅಂತರಿಕ್ಷಂ** ಅಂತರಿಕ್ಷಲೋಕವು **ಕ್ಷಿತಿಃ** ಭೂಮಿಯು **ಅಗ್ನಿಜಿಹ್ವಾಃ** ಅಗ್ನಿಯೇ ನಾಲಿಗೆಯಾಗಿ ಉಳ್ಳ, ಅಗ್ನಿಯಿಂದ ಆಹುತಿಗಳನ್ನು ಸ್ವೀಕರಿಸುವ ದೇವತೆಗಳು **ಗಾವಃ** ಆಕಳುಗಳು **ದ್ವಿಜಾಃ** ಬ್ರಾಹ್ಮಣರು, ಪಕ್ಷಿಗಳು **ನಗಾಃ** ಪರ್ವತಗಳು, ಗಿಡಗಳು **ಸಂಜಹೃಷುಃ** ಸಂತೋಷಪಟ್ಟರು.

ಸತ್ಯ ಃ- ದಿಕ್ಕುಗಳು, ಸರೋವರಗಳು, ಲೋಕಗಳು ಇವುಗಳು ಜಡವಾಗಿವೆ. ಇವುಗಳು ಸಂತೋಷಪಟ್ಟವು ಎಂದು ಹೇಳುವುದು ಅನುಪಪನ್ನ. ಇಂಥ ಕಡೆ ದಿಕ್ಕು ಮುಂತಾದ ದೇವತೆಗಳು ಸಂತೋಷಪಟ್ಟರು ಎಂದು ಹೇಳಬೇಕು. ॥೪॥

ವಾಮನಾವತಾರದ ಕಾಲವನ್ನು ಹೇಳುವರು.

**ಶ್ರೋಣಾಯಾಂ ಶ್ರವಣದ್ವಾದಶ್ಯಾಂ ಮುಹೂರ್ತೇಽಭಿಜಿತಿ ಪ್ರಭುಃ ।**
**ಸರ್ವೇ ನಕ್ಷತ್ರತಾರಾದ್ಯಾಶ್ಚಕ್ರುಸ್ತಜ್ಜನ್ಮ ದಕ್ಷಿಣಮ್ ॥೫॥**

**ಶ್ರೋಣಾಯಾಂ** ಭಾದ್ರಪದಮಾಸದಲ್ಲಿ **ಶ್ರವಣದ್ವಾದಶ್ಯಾಂ** ಶ್ರವಣನಕ್ಷತ್ರಯುಕ್ತವಾದ ದ್ವಾದಶಿಯಲ್ಲಿ **ಅಭಿಜಿತಿ ಮುಹೂರ್ತೇ** ಅದರಲ್ಲಿಯೂ ಶ್ರವಣ ನಕ್ಷತ್ರದ ಮೊದಲನೇ ಪಾದದಲ್ಲಿ ಅಭಿಜತ್ ಎಂಬ ನಕ್ಷತ್ರದಲ್ಲಿ ಅಂದರೆ ಉತ್ತರಾಷಾಢಾ ಕೊನೆಯ ಎರಡು ಪಾದಗಳು ಶ್ರವಣಾ ಮೊದಲನೇ ಎರಡು ಪಾದಕ್ಕೆ ಅಭಿಜಿತ್ ಎಂದು ಹೆಸರು. ಸೂರ್ಯನು ಅಂತರಿಕ್ಷಮಧ್ಯದಲ್ಲಿರುವಾಗ (ನಡು ಹಗಲಿನಲ್ಲಿ) **ಪ್ರಭುಃ** ಸರ್ವಸಮರ್ಥನಾದ ವಾಮನನು **ಪ್ರಾದುರ್ಬಭೂವ** ವ್ಯಕ್ತನಾದನು. **ಸರ್ವೇ** ಎಲ್ಲ **ನಕ್ಷತ್ರತಾರಾದ್ಯಾಃ** ಅಶ್ವಿನಿ ಮೊದಲಾದ ೨೭ ನಕ್ಷತ್ರಗಳು, ಉಳಿದ ತಾರಾಗಳು **ತಜ್ಜನ್ಮ** ಹರಿಯ ಜನ್ಮವನ್ನು **ದಕ್ಷಿಣಂ ಚಕ್ರುಃ** ಉದಾರವನ್ನಾಗಿ ಮಾಡಿದವು (ಉತ್ಕೃಷ್ಟವನ್ನಾಗಿ ಮಾಡಿದವು).

ಸತ್ಯ ಃ- ಅಥವಾ ತಾರಾ ಎಂದರೇ ಲಕ್ಷಣಯಾ ತಾರಾರಮಣನಾದ ಬೃಹಸ್ಪತಿ ಎಂದು ಅರ್ಥ ಹೇಳಿ, ಆದ್ಯ ಪದದಿಂದ ಶುಕ್ರಾದಿಗಳನ್ನು ತೆಗೆದುಕೊಳ್ಳಬಹುದು. ಹೀಗಾಗಿ ಬೃಹಸ್ಪತಿ-ಶುಕ್ರಮುಂತಾದ ಎಲ್ಲ ಗ್ರಹಗಳು ವಾಮನನ ಜನ್ಮವು ಉದಾರವಾಗುವಂತೆ ಮಾಡಿದರು ಎಂಬ ಅರ್ಥವನ್ನು ತಿಳಿಯಬೇಕು.

ಸತ್ಯ,ಛಲಾರೀ ಃ- ಶ್ರಾವಣ ಮಾಸದ ದ್ವಾದಶಿಯಲ್ಲಿ ಶ್ರವಣನಕ್ಷತ್ರವು ಬರುವುದೇ ಇಲ್ಲ. ಆದ್ದರಿಂದ ಶ್ರೋಣಾ ಎಂದರೆ ಭಾದ್ರಪದ ಎಂಬ ಅರ್ಥವನ್ನು ತಿಳಿಯಬೇಕು.

ಲಿಂಗೇರೀ ಃ- **ಜನ್ಮ** ಜನ್ಮರಾಶಿಂ **ದಕ್ಷಿಣಂ ಚಕ್ರುಃ** ಪ್ರದಕ್ಷಿಣೀಚಕ್ರುಃ ವಾಮನನ ಜನ್ಮರಾಶಿಯನ್ನು ಪ್ರದಕ್ಷಿಣೆ ಮಾಡಿದವು ಎಂದು ಅರ್ಥ.

◆ ಶ್ರೋಣಾಯಾಂ ಎಂದರೆ ಶ್ರವಣಮಾಸದಲ್ಲಿ ಎಂದೇ ಶ್ರೀವಿಜಯಧ್ವಜತೀರ್ಥರು ಮತ್ತು ಲಿಂಗೇರೀ ಆಚಾರ್ಯರು ವ್ಯಾಖ್ಯಾನಿಸಿದ್ದಾರೆ. ಉಳಿದ ಶ್ರೀಧರೀ, ಅನ್ವಿತಾರ್ಥಪ್ರಕಾಶಿಕಾ ಮುಂತಾದ ಎಲ್ಲ ವ್ಯಾಖ್ಯಾನಗಳಲ್ಲಿಯೂ ಭಾದ್ರಪದಮಾಸ ಎಂತಲೇ ಇದೆ.

◆ ''ದಕ್ಷಿಣಃ ಸರಲೋದಾರೇ'' ಎಂದು ಅಭಿಧಾನವಿದೆ.

**ದ್ವಾದಶ್ಯಾಂ ಸವಿತಾಽತಿಷ್ಠನ್ಮಧ್ಯಂದಿನಗತೋ ನೃಪ ।**
**ವಿಜಯಾ ನಾಮ ಸಾ ಪ್ರೋಕ್ತಾ ಯಸ್ಯಾಂ ಜನ್ಮ ವಿದುರ್ಹರೇಃ ॥೬॥**

**ಹೇ ನೃಪ** ಪರೀಕ್ಷಿತನೇ **ಯಸ್ಯಾಂ ದ್ವಾದಶ್ಯಾಂ** ಯಾವ ದ್ವಾದಶಿಯಲ್ಲಿ **ಹರೇಃ ಚ** ವಾಮನರೂಪಿಯ **ಜನ್ಮ** ಪ್ರಾದುರ್ಭಾವವು ಆಯಿತೆಂದು **ವಿದುಃ** ಜನರು ತಿಳಿದರೋ ಆ ದ್ವಾದಶಿಯಲ್ಲಿ ಆ ಕಾಲದಲ್ಲಿ **ಸವಿತಾ** ಸೂರ್ಯನು **ಮಧ್ಯಂದಿನಗತಃ** ನಡು ಹಗಲಿನಲ್ಲಿ **ಅತಿಷ್ಠತ್** ಇದ್ದನು ಮಧ್ಯಾಹ್ನವಾಗಿತ್ತು ಎಂದು ಅಭಿಪ್ರಾಯ. **ಸಾ** ಆ ದ್ವಾದಶಿಯು **ವಿಜಯಾ ನಾಮ ಪ್ರೋಕ್ತಾ** ವಿಜಯಾ ಎಂದು ಹೇಳಲ್ಪಟ್ಟಿದೆ. ಶ್ರವಣದ್ವಾದಶಿಗೆ ವಿಜಯಾ ಎಂದು ಮತ್ತೊಂದು ಹೆಸರು ಹೇಳಿದಂತಾಯಿತು. ॥೬॥

**ಶಂಖದುಂದುಭಯೋ ಭೇರ್ಯೋ ಮೃದಂಗಪಣವಾನಕಾಃ ।**
**ಚಿತ್ರವಾದಿತ್ರತೂರ್ಯಾಣಾಂ ನಿರ್ಘೋಷಸ್ತುಮುಲೋಽಭವತ್ ॥೭॥**

**ಶಂಖದುಂದುಭಯಃ** ಶಂಖ ಮತ್ತು ದುಂದುಭಿಗಳು, **ಭೇರ್ಯಃ** ನಗಾರಿಗಳು **ಮೃದಂಗಪಣವಾನಕಾಃ** ಮೃದಂಗ ಪಣವ ಮತ್ತು ಪಟಹಗಳು **ನೇದುಃ** ಶಬ್ದ ಮಾಡಿದವು. **ಚಿತ್ರವಾದಿತ್ರತೂರ್ಯಾಣಾಂ** ಅನೇಕ ಬಗೆಯ ವಾದ್ಯಗಳ ಮತ್ತು ಕಹಳೆಗಳ **ನಿರ್ಘೋಷಃ** ಶಬ್ದವು **ತುಮುಲಃ ಅಭವತ್** ಸೇರಿಕೊಂಡಿತು. ಅತಿಶಯವಾಯಿತು. ॥೭॥

**ಪ್ರೀತಾಶ್ಚಾಪ್ಸರಸೋಽನೃತ್ಯನ್ ಗಂಧರ್ವಪತಯೋ ಜಗುಃ ।**
**ತುಷ್ಟುವುರ್ಮುನಯೋ ದೇವಾ ಮನವಃ ಪಿತರೋಽಗ್ನಯಃ ॥೮॥**

**ಅಪ್ಸರಸಃ** ಅಪ್ಸರಾಸ್ತ್ರೀಯರಾದ ಊರ್ವಶಿ ಮುಂತಾದವರು **ಪ್ರೀತಾಃ ಚ** ಸಂತೋಷಗೊಂಡು **ಅನೃತ್ಯನ್** ಕುಣಿದರು. **ಗಂಧರ್ವಪತಯಃ** ಗಂಧರ್ವಶ್ರೇಷ್ಠರು **ಜಗುಃ** ಗಾನ ಮಾಡಿದರು **ಮುನಯಃ** ನಾರದಾದಿ ಮುನಿಗಳು **ದೇವಾಃ** ಬ್ರಹ್ಮಾದಿದೇವತೆಗಳು **ಮನವಃ** ಸ್ವಾಯಂಭುವಮನುಗಳು **ಪಿತರಃ** ಅಗ್ನಿಷ್ವಾತ್ತಾದಿಪಿತೃಗಳು **ಅಗ್ನಯಃ** ಆಹವನೀಯಾದಿ ಅಗ್ನಿಗಳೂ **ತುಷ್ಟುವುಃ** ಸ್ತೋತ್ರ ಮಾಡಿದರು.

**ದೇವಾಃ** ಇತ್ಯಾದಿಗಳಿಗೆ **ಕುಸುಮೈಃ ಸಮವಾಕಿರನ್** ಎಂಬ ಮೂರನೇ ಶ್ಲೋಕದಿಂದಲೂ ಅನ್ವಯ ಮಾಡಬಹುದು. ॥೮॥

**ಸಿದ್ಧವಿದ್ಯಾಧರಗಣಾಃ ಸಕಿಂಪುರುಷಕಿನ್ನರಾಃ ।**
**ಚಾರಣಾ ಯಕ್ಷರಕ್ಷಾಂಸಿ ಸುಪರ್ಣಭುಜಗೋತ್ತಮಾಃ ॥೯॥**

**ಸಕಿಂಪುರುಷಕಿನ್ನರಾಃ** ಕಿಂಪುರುಷರು ಕಿನ್ನರರಿಂದ ಕೂಡಿದ **ಸಿದ್ಧವಿದ್ಯಾಧರಗಣಾಃ** ಸಿದ್ಧರ-ವಿದ್ಯಾಧರರ ಸಮೂಹಗಳು **ಚಾರಣಾಃ** ಚಾರಣರು **ಯಕ್ಷರಕ್ಷಾಂಸಿ** ಯಕ್ಷರು ಮತ್ತು

ರಾಕ್ಷಸರು **ಸುಪರ್ಣಭುಜಗೋತ್ತಮಾಃ** ಗರುಡ ಮತ್ತು ನಾಗಶ್ರೇಷ್ಠರು **ತುಷ್ಟುವುಃ** ವಾಮನನನ್ನು ಸ್ತೋತ್ರ ಮಾಡಿದರು. ।।೯।।

**ಗಾಯಂತೋಽಭಿಪ್ರಶಂಸಂತೋ ನೃತ್ಯಂತೋ ವಿಬುಧಾನುಗಾಃ ।**
**ಅದಿತ್ಯಾ ಆಶ್ರಮಪದಂ ಕುಸುಮೈಃ ಸಮವಾಕಿರನ್ ।।೧೦।।**

**ವಿಬುಧಾನುಗಾಃ** ದೇವತೆಗಳ ಅನುಚರರಾದ ಗಂಧರ್ವರು **ಗಾಯಂತಃ** ಹಾಡುವವರಾಗಿ **ಅಭಿಪ್ರಶಂಸಂತಃ** ಹೊಗಳುವವರಾಗಿ **ನೃತ್ಯಂತಃ** ಕುಣಿಯುವವರಾಗಿ **ಅದಿತ್ಯಾಃ** ಅದಿತಿದೇವಿಯ **ಆಶ್ರಮಪದಂ** ಆಶ್ರಮಸ್ಥಳವನ್ನು **ಕುಸುಮೈಃ** ಹೂಗಳಿಂದ **ಸಮವಾಕಿರನ್** ಮಳೆಗರೆದರು.

ಲಿಂಗೇರೀ :- ಅದಿತ್ಯಾಃ ಎಂಬುದರ ಬದಲಾಗಿ ಆದಿತ್ಯಾಃ ಎಂಬುದಾಗಿ ಲಿಂಗೇರೀ ಆಚಾರ್ಯರು ಪಠಿಸಿ ಅದಿತಿಪುತ್ರರಾದ ದೇವತೆಗಳು ಎಂದು ಅರ್ಥವನ್ನು ಹೇಳಿದ್ದಾರೆ. ಆ ದೇವತೆಗಳು ಕಶ್ಯಪರ ಆಶ್ರಮವನ್ನು ಹೂಗಳಿಂದ ಮಳೆಗರೆದರೆಂದರ್ಥ.

♦ ವಿಬುಧಾನುಗಾಃ ಎಂಬಲ್ಲಿ ವಿಬುಧಾಃ ನರಾಃ ಎಂದು ಲಿಂಗೇರೀ ಆಚಾರ್ಯರ ಪಠಿಸುತ್ತಾರೆ. ದೇವತೆಗಳು ಮತ್ತು ಮನುಷ್ಯರು ಎಂದು ಅರ್ಥ. ।।೧೦।।

**ದೃಷ್ಟ್ವಾಽದಿತಿಸ್ತಂ ನಿಜಗರ್ಭಸಂಭವಂ**
**ಪರಂ ಪುಮಾಂಸಂ ಮುದಮಾಪ ವಿಸ್ಮಿತಾ ।**
**ಗೃಹೀತದೇಹಂ ನಿಜಯೋಗಮಾಯಯಾ**
**ಪ್ರಜಾಪತಿಶ್ಚಾಹ ಜಯೇತಿ ವಿಸ್ಮಿತಃ ।।೧೧।।**

**ಅದಿತಿಃ** ಅದಿತಿದೇವಿಯು **ನಿಜಗರ್ಭಸಂಭವಂ** ತನ್ನ ಉದರದಿಂದ ವ್ಯಕ್ತನಾದ **ಪರಂ** ಸರ್ವೋತ್ತಮನಾದ **ಪುಮಾಂಸಂ** ಪುರುಷನನ್ನು **ದೃಷ್ಟ್ವಾ** ನೋಡಿ **ವಿಸ್ಮಿತಾ** ವಿಶಿಷ್ಟವಾದ ಮಂದಹಾಸ ಮಾಡುತ್ತ (ಆಶ್ಚರ್ಯಚಕಿತಳಾಗಿ) **ಮುದಂ ಆಪ** ಸಂತೋಷವನ್ನು ಹೊಂದಿದಳು. **ಪ್ರಜಾಪತಿಃ ಚ** ಕಶ್ಯಪರೂ ಕೂಡ **ನಿಜಯೋಗಮಾಯಯಾ** ಬಲಿಯನ್ನು ನಿಗ್ರಹಿಸಬೇಕೆಂಬ ತನ್ನ ಇಚ್ಛೆಯಿಂದಲೇ ಅಘಟಿತಘಟನೋಪಾಯಭೂತವಾದ ಇಚ್ಛೆಯಿಂದ **ಗೃಹೀತದೇಹಂ** ವಾಮನರೂಪವನ್ನು ಸ್ವೀಕರಿಸಿದ ಶ್ರೀಹರಿಯನ್ನು ಕಂಡು **ವಿಸ್ಮಿತಃ** ಆಶ್ಚರ್ಯಚಕಿತರಾಗಿ ನಗುತ್ತಾ **ಜಯ ಇತಿ ಆಹ** ಉತ್ಕೃಷ್ಟನಾಗು ಎಂದು ಹೇಳಿದರು.

ಸತ್ಯ :- **ನಿಜಗರ್ಭಸಂಭವಂ** ಎಂದು ಹೇಳಿದ್ದರಿಂದ ಪರಮಾತ್ಮನಿಗೆ ಶುಕ್ಲಶೋಣಿತವಿಕಾರವಾದ ದೇಹ ಇದೆ ಎಂದು ತೋರುತ್ತದೆ. ಆದರೆ ಇದು ಪ್ರಮಾಣವಿರುದ್ಧವಾಗಿದೆ. **ನಿಜಮಾಯಯಾ ಗೃಹೀತದೇಹಂ** ಎಂಬುದರಿಂದ ಈ ಶುಕ್ಲಶೋಣಿತವಿಕಾರವು ಪರಮಾತ್ಮನಿಗೆ ಇಲ್ಲವೆಂದು ನಿಷೇಧಿಸುತ್ತಿದ್ದಾರೆ. ।।೧೧।।

**ಯತ್ತದ್ವಪುರ್ಭಾತಿ ವಿಭೂಷಣಾಯುಧೈಃ**
**ಅವ್ಯಕ್ತವದ್ ವ್ಯಕ್ತಮಧಾರಯದ್ ಹರಿಃ ।**
**ಬಭೂವ ತೇನೈವ ಸ ವಾಮನೋ ವಟುಃ**
**ಸಂಪಶ್ಯತೋರ್ದಿವ್ಯಗತಿರ್ಯಥಾ ನಟಃ** ॥೧೨॥

**ಹರಿಃ** ಶ್ರೀಹರಿಯು **ಯದ್ ವಪುಃ** ಯಾವ ತನ್ನ ರೂಪವು **ಅವ್ಯಕ್ತವತ್** ತನ್ನ ಅನುಗ್ರಹವಿಲ್ಲದೇ ಕಾಣಿಸಲಾರದೋ **ತತ್** ಆ ರೂಪವನ್ನು **ವಿಭೂಷಣಾಯುಧೈಃ** ಕೌಸ್ತುಭಾದಿ ಆಭರಣಗಳು ಚಕ್ರಾದಿ ಆಯುಧಗಳು ಇವುಗಳೊಂದಿಗೆ **ವ್ಯಕ್ತಂ** ಭಕ್ತರ ಮೇಲಿನ ದಯೆಯಿಂದ ಕಾಣುವುದಾಗಿ **ಭಾತಿ** ಪ್ರಕಾಶಿಸುತ್ತದೋ ಅಂತಹ **ವಪುಃ** ದೇಹವನ್ನು **ಅಧಾರಯತ್** ವ್ಯಕ್ತನಾದಾಗ ಧರಿಸಿದನು. ಅಥವಾ ಯಾವ ದೇಹವು ವ್ಯಕ್ತವಾಗಿರುವುದೋ ಅದನ್ನೇ ಭೂಷಣಾಯುಧಗಳಿಂದ ವ್ಯಕ್ತವಾಗಿ ಧರಿಸಿದನು. **ದಿವ್ಯಗತಿಃ** ಅಭಿಭೂತವಾಗದ ಜ್ಞಾನದಿಂದ ಸಂಪನ್ನನಾದ **ಸಃ** ಆ ಹರಿಯು **ತೇನೈವ** ಅದೇ ದೇಹದಿಂದಲೇ **ಸಂಪಶ್ಯತೋಃ** ಅದಿತಿ-ಕಶ್ಯಪರು ನೋಡುತ್ತಿರುವಾಗಲೇ **ಯಥಾ ನಟಃ** ವೇಷ ಬದಲಾಯಿಸುವ ನಟನಂತೆ **ವಟುಃ** ಬ್ರಹ್ಮಚಾರಿಯಾದ **ವಾಮನಃ** ಗಿಡ್ಡನಾಗಿಯು **ಬಭೂವ** ಆದನು.

ಸತ್ಯ ಃ- ಒಬ್ಬನೇ ನಟ ಸ್ತ್ರೀ-ಪುರುಷ ಮುಂತಾದ ಅನೇಕ ಆಕಾರಗಳನ್ನು ತೋರಿಸುತ್ತಾನೆ. ಆದರೆ ಅವನು ಬೇರೆ ಬೇರೆ ಅಲ್ಲ. ಒಬ್ಬನೇ ಆಗಿದ್ದಾನೆ. ಅದರಂತೆ ಹರಿಯು ಅನೇಕ ಆಕಾರಗಳನ್ನು ತೋರಿಸುತ್ತಾನೆ. ಆದರೆ ಸ್ವರೂಪತಃ ಒಬ್ಬನೇ ಆಗಿದ್ದಾನೆ ಎಂದು ಭಾವ. ''ವಾಮನೋ ವಟುವೈಕುಂಠಖರ್ವದಕ್ಷಿಣದಿಗ್ಗಜೇ'' ಎಂದು ವಿಶ್ವ.

ಲಿಂಗೇರೀ ಃ- ನಟನ ದೃಷ್ಟಾಂತದಿಂದ ಮೂಲರೂಪ ಮತ್ತು ಅವತಾರರೂಪಗಳಿಗೆ ನಿರ್ವಿಶೇಷಾಭೇದ ಇದೆ ಎಂದು ತಿಳಿಯಬೇಕು. ॥೧೨॥

**ದಿವ್ಯಗತಿಃ** ಅಲೌಕಿಕವಾದ ಮಾರ್ಗ ಉಳ್ಳ, ತಡೆಯಿಲ್ಲದ ಜ್ಞಾನದಿಂದ ಯುಕ್ತನಾದ, ಎಂದು ಸತ್ಯಧರ್ಮರು ವ್ಯಾಖ್ಯಾನಿಸಿದ್ದಾರೆ. ಅದ್ಭುತವಾದ ವ್ಯಾಪಾರ ಉಳ್ಳ ಎಂದು ಛಲಾರೀ ಆಚಾರ್ಯರು ವ್ಯಾಖ್ಯಾನಿಸಿದ್ದಾರೆ. ಲೋಕವಿಲಕ್ಷಣವಾದ ಸ್ಥಿತಿ ಉಳ್ಳ ಎಂದು ಲಿಂಗೇರೀ ಆಚಾರ್ಯರು ವ್ಯಾಖ್ಯಾನಿಸಿದ್ದಾರೆ.

**ತಂ ವಟುಂ ವಾಮನಂ ದೃಷ್ಟ್ವಾ ಮೋದಮಾನಾ ಮಹರ್ಷಯಃ ।**
**ಕರ್ಮಾಣಿ ಕಾರಯಾಮಾಸುಃ ಪುರಸ್ಕೃತ್ಯ ಪ್ರಜಾಪತಿಮ್** ॥೧೩॥

**ತಂ ವಟುಂ** ಆ ವಟುವಾದ **ವಾಮನಂ** ವಾಮನನನ್ನು **ದೃಷ್ಟ್ವಾ** ನೋಡಿ **ಮೋದಮಾನಾಃ** ಸಂತೋಷಯುಕ್ತರಾದ **ಮಹರ್ಷಯಃ** ವಸಿಷ್ಠ-ಭೃಗು ಮುಂತಾದ

ಮಹರ್ಷಿಗಳು **ಪ್ರಜಾಪತಿಂ** ಕಶ್ಯಪರನ್ನು **ಪುರಸ್ಕೃತ್ಯ** ಮುಂದೆ ಮಾಡಿಕೊಂಡು **ಕರ್ಮಾಣಿ** ಜಾತಕರ್ಮಾದಿ ಸಂಸ್ಕಾರಗಳನ್ನು **ಕಾರಯಾಮಾಸುಃ** ಮಾಡಿಸಿದರು. ||೧೩||

**ತಸ್ಯೋಪನೀಯಮಾನಸ್ಯ ಸಾವಿತ್ರೀಂ ಸವಿತಾಽಬ್ರವೀತ್ ।**
**ಬೃಹಸ್ಪತಿರ್ಬ್ರಹ್ಮಸೂತ್ರಂ ಮೇಖಲಾಂ ಕಶ್ಯಪೋ ದದೌ ||೧೪||**

**ಉಪನೀಯಮಾನಸ್ಯ** ಉಪನಯನ ಸಂಸ್ಕಾರ ಪಡೆಯುತ್ತಿದ್ದ **ತಸ್ಯ** ಆ ವಾಮನನಿಗೆ **ಸವಿತಾ** ಸೂರ್ಯನು **ಸಾವಿತ್ರೀಂ** ತಾನೇ ದೇವತೆಯಾಗಿ ಉಳ್ಳ ಗಾಯತ್ರಿಯನ್ನು **ಅಬ್ರವೀತ್** ವಿಜ್ಞಾಪಿಸಿಕೊಂಡನು. **ಬೃಹಸ್ಪತಿಃ** ಬೃಹಸ್ಪತ್ಯಾಚಾರ್ಯರು **ಬ್ರಹ್ಮಸೂತ್ರಂ** ಯಜ್ಞೋಪವೀತವನ್ನು **ಕಶ್ಯಪಃ** ಕಶ್ಯಪರು **ಮೇಖಲಾಂ** ಮೌಂಜಿಯನ್ನು **ದದೌ** ಒಪ್ಪಿಸಿದರು.

**ದದೌ ಕೃಷ್ಣಾಜಿನಂ ಭೂಮಿರ್ದಂಡಂ ಸೋಮೋ ವನಸ್ಪತಿಃ ।**
**ಕೌಪೀನಾಚ್ಛಾದನಂ ಮಾತಾ ದ್ಯೌಶ್ಛತ್ರಂ ಜಗತಃ ಪತೇಃ ||೧೫||**

**ಜಗತಃ ಪತೇಃ** ಜಗದೊಡೆಯನಾದ ವಾಮನನಿಗೆ **ಭೂಮಿಃ** ಭೂದೇವಿಯು **ಕೃಷ್ಣಾಜಿನಂ** ಕೃಷ್ಣಾಜಿನವನ್ನು **ವನಸ್ಪತಿಃ** ಔಷಧಿಗಳಿಗೆ ಒಡೆಯನಾದ **ಸೋಮಃ** ಚಂದ್ರನು **ದಂಡಂ** ಪಲಾಶದಂಡವನ್ನು **ಮಾತಾ** ತಾಯಿಯಾದ ಅದಿತಿಯು **ಕೌಪೀನಾಚ್ಛಾದನಂ** ಕೌಪೀನರೂಪವಾದ ಆಚ್ಛಾದನವನ್ನು **ದ್ಯೌಃ** ದ್ಯುಲೋಕಾಭಿಮಾನಿಯು **ಛತ್ರಂ** ಛತ್ರವನ್ನು **ದದೌ** ಕೊಟ್ಟರು. ||೧೫||

**ಕಮಂಡಲುಂ ವೇದಗರ್ಭಃ ಕುಶಾನ್ ಸಪ್ತರ್ಷಯೋ ದದುಃ ।**
**ಅಕ್ಷಮಾಲಾಂ ಮಹಾರಾಜ ಸರಸ್ವತ್ಯಕ್ಷಯಾತ್ಮನಃ ||೧೬||**

**ಮಹಾರಾಜ** ರಾಜನೇ **ವೇದಗರ್ಭಃ** ಬ್ರಹ್ಮದೇವರು **ಕಮಂಡಲುಂ** ನೀರಿನ ಕಮಂಡಲುವನ್ನು **ಸಪ್ತರ್ಷಯಃ** ಸಪ್ತ ಋಷಿಗಳು **ಕುಶಾನ್** ದರ್ಭಗಳನ್ನು **ಅಕ್ಷಯಾತ್ಮನಃ** ನಾಶವಿಲ್ಲದ ಸ್ವರೂಪ-ದೇಹ ಉಳ್ಳವನಿಗೆ **ಸರಸ್ವತೀ** ಸರಸ್ವತಿಯು **ಅಕ್ಷಮಾಲಾಂ** ಜಪಮಾಲೆಯನ್ನೂ **ದದುಃ** ಇತ್ತರು. ||೧೬||

**ತಸ್ಮಾ ಇತ್ಯುಪನೀತಾಯ ಯಕ್ಷರಾಟ್ ಪಾತ್ರಿಕಾಮದಾತ್ ।**
**ಭಿಕ್ಷಾಂ ಭಗವತೀ ಸಾಕ್ಷಾದುಮಾಽದಾದಂಬಿಕಾ ಸತೀ ||೧೭||**

**ಯಕ್ಷರಾಟ್** ಕುಬೇರನು **ಇತಿ** ಮೇಲೆ ಹೇಳಿದ ರೀತಿಯಲ್ಲಿ **ಉಪನೀತಾಯ** ಉಪನಯನ ಸಂಸ್ಕಾರ ಹೊಂದಿದ **ತಸ್ಮೈ** ಆ ವಾಮನನಿಗೆ **ಪಾತ್ರಿಕಾಂ** ಭಿಕ್ಷಾಪಾತ್ರೆಯನ್ನು **ಅದಾತ್** ಸಮರ್ಪಿಸಿದನು. **ಸತೀ** ಸಾಧ್ವಿಯಾದ ಪತಿವ್ರತೆಯಾದ **ಭಗವತೀ** ಐಶ್ವರ್ಯಾದಿ ಗುಣವಂತಳಾದ **ಅಂಬಿಕಾ** ಜಗನ್ಮಾತೆಯಾದ **ಉಮಾ** ವಾಗಭಿಮಾನಿನಿಯಾದ

ಪಾರ್ವತಿಯು **ಸಾಕ್ಷಾತ್** ಎಲ್ಲರೂ ಕಾಣುವಂತೆ **ಭಿಕ್ಷಾಂ** ಭಿಕ್ಷೆಯನ್ನು **ಅದಾತ್** ಸಮರ್ಪಿಸಿದಳು.

ಸತ್ಯ ಃ- **ಸತೀ** ಎಂದರೆ ಯಾವಳೊ ಒಬ್ಬ ಸ್ತ್ರೀ ಅಲ್ಲ ಎಂದು ತಿಳಿಸಲು ಅಂಬಿಕಾ ಎಂದಿರುವರು. ಅವಳು ಸಹ ಅಂಬೈವ ಅಂಬಿಕಾ ಎಂದು ಮಾಡಿ ಯಾವಳೋ ಒಬ್ಬ ತಾಯಿ ಅಲ್ಲ ಎಂಬುದನ್ನು ಸಾಕ್ಷಾದುಮಾ ಎಂಬುದರಿಂದ ಹೇಳಿರುವರು.

ತ್ರ್ಯಕ್ಷನಾದ ರುದ್ರದೇವರೇ ಸ್ವಯಂ ಭಿಕ್ಷುಕರಾಗಿದ್ದಾರೆ. ಇಂಥ ಭಿಕ್ಷುಕರ ಹೆಂಡತಿಯಾದ ಉಮಾದೇವಿಯು ತಾನು ಭಿಕ್ಷೆಯನ್ನು ಹೇಗೆ ಕೊಟ್ಟಳು? ಎಂಬ ಶಂಕೆಗೆ ಭಗವತೀ ಎಂದು ಉತ್ತರ ಹೇಳಿರುವರು. ಭಗವತೀ ಎಂದರೆ ಐಶ್ವರ್ಯವಂತಳು ಎಂದು ಅರ್ಥ. ರುದ್ರದೇವರು ಮಾಡುವ ಭಿಕ್ಷಾಟನವು ನಟನೆ ಎಂದು ಭಾವ. ಮಿಕ್ಕ ವಿಶೇಷಣಗಳು ಸ್ವರೂಪನಿರೂಪಕಗಳಾಗಿವೆ. ।।೧೭।।

**ಸ ಬ್ರಹ್ಮವರ್ಚಸೇನೈವ ಸಭಾಂ ಸಂಭಾವಿತೋ ವಟುಃ ।**
**ಬ್ರಹ್ಮರ್ಷಿಗಣಸಂಜುಷ್ಟಾಮತ್ಯರೋಚತ ಮಾರಿಷಃ ।।೧೮।।**

**ಮಾರಿಷಃ** ಆರ್ಯನಾದ ಪೂಜ್ಯನಾದ **ಸಂಭಾವಿತಃ** ಬ್ರಹ್ಮಾದಿಗಳಿಂದ ಪೂಜಿತನಾದ **ಸಃ ವಟುಃ** ಆ ವಾಮನನಾದ ವಟುವು **ಬ್ರಹ್ಮರ್ಷಿಗಣಸಂಜುಷ್ಟಾಂ** ಬ್ರಹ್ಮಜ್ಞಾನಿಗಳ ಸಮೂಹದಿಂದ ತುಂಬಿದ **ಸಭಾಂ** ಆ ಉಪನಯನ ಮಹೋತ್ಸವದ ಸಭೆಯನ್ನು **ಅತ್ಯರೋಚತ** ಅತ್ಯಂತವಾಗಿ ಶೋಭಾಯಮಾನವಾಗುವಂತೆ ಮಾಡಿದನು. ।।೧೮।।

ಸತ್ಯ ಃ- ಮಾರಿಷ ಎಂಬ ಸಂಬುದ್ಧ್ಯಂತವಾದ ಪಾಠದಲ್ಲಿ ಆರ್ಯನಾದ ಪರೀಕ್ಷಿತನೇ ಎಂದರ್ಥ. ''ಮಾರಿಷಶ್ಚಾರ್ಯೇ ಮಾರಿಷಃ ಕನಕೇಽಂಬುಧೌ'' ಎಂದು ವಿಶ್ವ. ''ಆರ್ಯಸ್ತು ಮಾರಿಷಃ'' ಎಂದು ಅಮರವಿದೆ. ।।೧೮।।

**ಸಮಿದ್ಧಮಾಹಿತಂ ವಹ್ನಿಂ ಕೃತ್ವಾ ಪರಿಸಮೂಹನಮ್ ।**
**ಪರಿಸ್ತೀರ್ಯ ಸಮಭ್ಯರ್ಚ್ಯ ಸಮಿದ್ಭಿರಜುಹೋದ್ ದ್ವಿಜಃ ।।೧೯।।**

**ದ್ವಿಜಃ** ಉಪನೀತನಾದ ವಾಮನನು **ಆಹಿತಂ** ವಿಹಿತರೀತಿಯಿಂದ ಸ್ಥಾಪಿಸಿದ ''ಏಹ್ಯಗ್ನೇ...ಮಮ ಸಮ್ಮುಖೋ ಭವ'' ಎಂದು ಆವಾಹಿಸಿದ **ವಹ್ನಿಂ** ಅಗ್ನಿಯನ್ನು **ಸಮಿದ್ಧಂ ಕೃತ್ವಾ** ಪ್ರಜ್ವಲಿಸುವಂತೆ ಮಾಡಿ **ಪರಿಸಮೂಹನಂ** ನೀರಿನಿಂದ ಪರೀಷೇಕಾದಿಗಳನ್ನು **ಕೃತ್ವಾ** ಮಾಡಿ **ಪರಿಸ್ತೀರ್ಯ** ಸುತ್ತ ದರ್ಭೆಗಳ ಪರಿಸ್ತರಣಗಳನ್ನು ಹಾಕಿ **ಸಮಭ್ಯರ್ಚ್ಯ** ಅಕ್ಷತೆಗಳಿಂದ ಅಗ್ನಿಯನ್ನು ಅಲಂಕರಿಸಿ **ಸಮಿದ್ಭಿಃ** ಸಮಿತ್ತುಗಳಿಂದ **ಅಜುಹೋತ್** ಹೋಮ ಮಾಡಿದನು. ಅಗ್ನಿಕಾರ್ಯ ಮಾಡಿದನೆಂದರ್ಥ.

**ಲಿಂಗೇರೀ :- ಯದಾ ಲೇಲಾಯತೇ ಹ್ಯರ್ಚಿಃ ಸಮಿದ್ಧೇ ಹವ್ಯವಾಹನೇ ।**
**ತದಾಽಽಜ್ಯಭಾಗಾವಂತರೇಣಾಹುತೀಃ ಪ್ರತಿಪಾದಯೇತ್ ॥**

ಎಂಬ ಸ್ಮೃತಿಯಂತೆ ಪ್ರಜ್ವಲಿಸುವ ಅಗ್ನಿಯಲ್ಲಿ ಹೋಮಿಸಬೇಕು ಎಂದು ತಿಳಿದುಬರುತ್ತದೆ. ''ಸಮಿದ್ಧೋಮೋ ವಟುಃ'' ಎಂಬ ಸ್ಮೃತಿಯಂತೆ ಬ್ರಹ್ಮಚಾರಿಯು ಸಮಿತ್ತನ್ನು ಹೋಮಿಸಬೇಕು ಎಂಬುದು ಸಿದ್ಧವಾಗುತ್ತದೆ.

ಇಲ್ಲಿ ಎಲ್ಲರೂ ಲಕ್ಷ್ಮೀದ್ವಾರಾ ಪದಾರ್ಥಗಳನ್ನು ಸಮರ್ಪಿಸಿದರು ಎಂದು ತಿಳಿಯಬೇಕು. ಶ್ರೀಹರಿಯ ಅಗ್ನಿಕಾರ್ಯ ಮುಂತಾದವುಗಳು ಲೋಕಶಿಕ್ಷಾರ್ಥ ಎಂದು ತಿಳಿಯಬೇಕು. ।।೧೯।।

**ಶ್ರುತ್ವಾಽಶ್ವಮೇಧೈರ್ಯಜಮಾನಮೂರ್ಜಿತಂ**
**ಬಲಿಂ ಭೃಗೂಣಾಮುಪಕಲ್ಪಿತೈಸ್ತತಃ ।**
**ಜಗಾಮ ತತ್ರಾಽಖಿಲಸಾರಸಂಭೃತೋ**
**ಭಾರೇಣ ಗಾಂ ಸನ್ನಮಯನ್ ಪದೇ ಪದೇ ।।೨೦।।**

**ತತಃ** ಉಪನಯನಾನಂತರ **ಭೃಗೂಣಾಂ** ಶುಕ್ರಾಚಾರ್ಯರೇ ಮೊದಲಾದ ಭೃಗುವಂಶದವರಿಂದ **ಉಪಕಲ್ಪಿತೈಃ** ವಿಧ್ಯುಕ್ತವಾಗಿ ಮಾಡಿಸಲ್ಪಟ್ಟ **ಅಶ್ವಮೇಧೈಃ** ಅಶ್ವಮೇಧಗಳಿಂದ **ಊರ್ಜಿತಂ** ಸಂಪತ್ಸಮೃದ್ಧನಾಗಿದ್ದ **ಯಜಮಾನಂ** ಯಾಗದೀಕ್ಷಿತನಾದ **ಬಲಿಂ** ಬಲಿಚಕ್ರವರ್ತಿಯನ್ನು **ಶ್ರುತ್ವಾ** ಜನರ ಬಾಯಿಂದ ಕೇಳಿ **ಅಖಿಲಸಾರಸಂಭೃತಃ** ಎಲ್ಲವಿಧವಾದ ಬಲದಿಂದ ಸಂಪನ್ನನಾದ **ಭಾರೇಣ** ತನ್ನ ಭಾರದಿಂದ **ಪದೇ ಪದೇ** ಹೆಜ್ಜೆಹೆಜ್ಜೆಗೂ **ಗಾಂ** ಭೂಮಿಯನ್ನು **ಸನ್ನಮಯನ್** ಬಾಗಿಸುತ್ತ **ತತ್ರ** ಯಾಗಶಾಲೆಗೆ **ಜಗಾಮ** ಹೋದನು. ।।೨೦।।

ಅಖಿಲಸಾರಸಂಭೃತಃ ಎಂಬುದಕ್ಕೆ ಲಿಂಗೇರೀ ಆಚಾರ್ಯರು ಹೀಗೆ ಅನೇಕ ಅರ್ಥಗಳನ್ನು ವ್ಯಾಖ್ಯಾನಿಸಿದ್ದಾರೆ.

೧. **ಅಖಿಲಸಾರಸಂಭೃತಃ** ಬ್ರಹ್ಮಚಾರಿಗಳ ಎಲ್ಲ ಕೌಪಿನಾದಿ ಆಶ್ರಮ ಗುಣಗಳಿಂದ ಕೂಡಿದವನಾಗಿ,

೨. ಎಲ್ಲ ಶಬ್ದಗಳ ಸಾರಗಳಾದ ಋಗಾದಿವೇದಗಳಿಂದ ಸಂಪೂರ್ಣನಾಗಿ ಅಂದರೆ ಅವುಗಳ ಪ್ರವಚನ ಸಮರ್ಥನಾಗಿ ಎಂದು ಅರ್ಥ. ''ನಿಗಮವಾಕ್ಪಟವೇ ವಟವೇ ನಮಃ'' ಎಂಬ ಶ್ಲೋಕ ಈ ವಿಷಯವನ್ನು ತಿಳಿಸುತ್ತದೆ.

೩. ಸಕಲ ಜಗತ್ತಿನಲ್ಲಿ ಸಾರಭೂತವಾದ ಜ್ಞಾನಾನಂದಾದಿಗುಣಗಳಿಂದ ಪರಿಪೂರ್ಣನಾಗಿ ಎಂಬುದಾಗಿ ಅರ್ಥಗಳನ್ನು ತಿಳಿಯಬೇಕು. ।।೨೦।।

**ತಂ ನರ್ಮದಾಯಾಸ್ತಟ ಉತ್ತರೆ ಬಲೇ-**
**ರ್ಯಜ್ಞರ್ತ್ವಿಜಸ್ತೇ ಭೃಗುವತ್ಸಸಂಜ್ಞಕೇ ।**
**ಪ್ರವರ್ತಯಂತೋ ಭೃಗವಃ ಕ್ರತೂತ್ತಮಂ**
**ವ್ಯಚಕ್ಷತಾರಾದುದಿತಂ ಯಥಾ ರವಿಮ್ ॥೨೦॥**

**ಭೃಗುವತ್ಸಸಂಜ್ಞಕೇ** ಭೃಗುವತ್ಸವೆಂಬ ಹೆಸರುಳ್ಳ **ನರ್ಮದಾಯಾಃ ಉತ್ತರೇ ತಟೇ** ನರ್ಮದಾನದಿಯ ಉತ್ತರ ದಡದಲ್ಲಿ **ಬಲೇಃ** ಬಲಿಚಕ್ರವರ್ತಿಯ **ಯಜ್ಞರ್ತ್ವಿಜಃ** ಯಜ್ಞದ ಋತ್ವಿಜರಾದ **ಕ್ರತೂತ್ತಮಂ ಪ್ರವರ್ತಯಂತಃ** ಕ್ರತುಶ್ರೇಷ್ಠವಾದ ಅಶ್ವಮೇಧವನ್ನು ಮಾಡಿಸುತ್ತಿರುವ **ಭೃಗವಃ** ಶುಕ್ರಾಚಾರ್ಯರೇ ಮೊದಲಾದವರು **ಆರಾತ್** ಸಮೀಪದಿಂದ **ತಂ** ಯಜ್ಞಶಾಲೆಗೆ ಬಂದ ವಾಮನನನ್ನು **ಉದಿತಂ ರವಿಂ ಯಥಾ** ಉದಯಿಸಿದ ಸೂರ್ಯನನ್ನು ನೋಡುವಂತೆ **ವ್ಯಚಕ್ಷತ** ನೋಡಿದರು. ॥೨೦॥

**ತತ್ರರ್ತ್ವಿಜೋ ಯಜಮಾನಃ ಸದಸ್ಯಾ**
**ಹತತ್ವಿಷೋ ವಾಮನತೇಜಸಾ ನೃಪ ।**
**ಸೂರ್ಯಃ ಕಿಮಾಯಾತ್ಯಥವಾ ವಿಭಾವಸುಃ**
**ಸನತ್ಕುಮಾರೋಽಥ ದಿದೃಕ್ಷಯಾ ಕ್ರತೋಃ ॥೨೨॥**

**ಹೇ ನೃಪ** ರಾಜನೇ **ತತ್ರ** ಆ ಯಜ್ಞಶಾಲೆಯಲ್ಲಿ, ಆ ಕಾಲದಲ್ಲಿ **ಋತ್ವಿಜಃ** ಋತ್ವಿಜರು **ಯಜಮಾನಃ ಚ** ದೀಕ್ಷಿತನಾದ ಬಲಿಚಕ್ರವರ್ತಿಯು **ಸದಸ್ಯಾಃ** ಉಳಿದ ಸಭಿಕರು **ವಾಮನತೇಜಸಾ** ವಾಮನರೂಪಿಯಾದ ಶ್ರೀಹರಿಯ ತೇಜಸ್ಸಿನಿಂದ **ಹತತ್ವಿಷಃ** ಕಾಂತಿಯನ್ನು ಕಳೆದುಕೊಂಡವರಾಗಿ **ಕ್ರತೋಃ** ಆ ಯಾಗವನ್ನು **ದಿದೃಕ್ಷಯಾ** ನೋಡಬೇಕೆಂಬ ಇಚ್ಛೆಯಿಂದ **ಸೂರ್ಯಃ** ಸೂರ್ಯನು **ಆಯಾತಿ ಕಿಂ** ಬರುತ್ತಿರುವನೇ ಅಥವಾ **ವಿಭಾವಸುಃ** ಅಗ್ನಿಯು ಬರುತ್ತಿರುವನೇ **ಅಥ** ಅಥವಾ **ಸನತ್ಕುಮಾರಃ** ಸನತ್ಕುಮಾರರು ಬರುತ್ತಿರುವರೇ ಎಂಬುದಾಗಿ ತರ್ಕಿಸಿದರು. ॥೨೨॥

**ಇತ್ಥಂ ಸಶಿಷ್ಯೇಷು ಭೃಗುಷ್ವನೇಕಧಾ**
**ವಿತರ್ಕಮಾಣೋ ಭಗವಾನ್ ಸ ವಾಮನಃ ।**
**ಸದಂಡಛತ್ರಂ ಸಜಲಂ ಕಮಂಡಲುಂ**
**ವಿವೇಶ ಬಿಭ್ರದ್ ಹಯಮೇಧವಾಟಮ್ ॥೨೩॥**

**ಇತ್ಥಂ** ಈ ರೀತಿಯಾಗಿ **ಸಶಿಷ್ಯೇಷು** ಶಿಷ್ಯನಾದ ಬಲಿಯಿಂದ ಕೂಡಿದ **ಭೃಗುಷು** ಶುಕ್ರಾಚಾರ್ಯರೇ ಮೊದಲಾದವರಿಂದ **ಅನೇಕಧಾ** ಅನೇಕರೀತಿಯಿಂದ **ವಿತರ್ಕಮಾಣಃ ಚ** ಊಹಿಸಲ್ಪಡುತ್ತಿದ್ದ **ಭಗವಾನ್ ಸಃ ವಾಮನಃ** ಐಶ್ವರ್ಯಶಾಲಿಯಾದ ಆ ವಾಮನನು

**ಸದಂಡಛತ್ರಂ** ದಂಡಸಹಿತವಾದ ಛತ್ರಿಯನ್ನು **ಸಜಲಂ ಕಮಂಡಲುಂ** ನೀರಿನಿಂದ ಕೂಡಿದ ಕಮಂಡಲುವನ್ನೂ **ಬಿಭ್ರತ್** ಧರಿಸಿದವನಾಗಿ **ಹಯಮೇಧವಾಟಂ** ಅಶ್ವಮೇಧಯಾಗದ ಶಾಲೆಯನ್ನು **ವಿವೇಶ** ಪ್ರವೇಶಿಸಿದನು.

ಸತ್ಯ ಃ- ''ವಾಟಂ ಶಾಲಾ ವಾಟಿಕಾ ಚ'' ಎಂದು ನಾಮಮಹೋದಧಿಯಲ್ಲಿ ಉಕ್ತವಾಗಿದೆ. ಹಯಮೇಧವು ನಡೆಯುತ್ತಿದ್ದ ಸ್ಥಳಕ್ಕೆ ಎಂದಾದರೂ ಅರ್ಥ. ಹಯಮೇಧಸ್ಯ ವಾಟಃ ವೃತ್ತಿಃ ಯತ್ರ ತತ್ಸ್ಥಲಂ । ''ವಾಟೌ ವೃತ್ತೌ ಚ ಮಾರ್ಗೇ ಚ'' ಎಂದು ವಿಶ್ವವಿದೆ.

**ಮೌಂಜ್ಯಾ ಮೇಖಲಯಾ ವೀತಮುಪವೀತಾಜಿನೋತ್ತರಮ್ ।**
**ಜಟಿಲಂ ವಾಮನಂ ವಿಪ್ರಂ ಮಾಯಾಮಾಣವಕಂ ಹರಿಮ್ ॥೨೪॥**

**ಪ್ರವಿಷ್ಟಂ ವೀಕ್ಷ್ಯ ಭೃಗವಃ ಸಶಿಷ್ಯಾಸ್ತೇ ಸಹಾಗ್ನಿಭಿಃ ।**
**ಪ್ರತ್ಯಗೃಹ್ಣನ್ ಸಮುತ್ಥಾಯ ಸಂಕ್ಷಿಪ್ತಾಸ್ತಸ್ಯ ತೇಜಸಾ ॥೨೫॥**

**ಸಶಿಷ್ಯಾಃ** ಬಲಿಯಿಂದ ಸಹಿತರಾದ **ಭೃಗವಃ** ಶುಕ್ರಾಚಾರ್ಯ ಮೊದಲಾದವರು **ಮೌಂಜ್ಯಾ ಮೇಖಲಯಾ** ಮೌಂಜಿ ಎಂಬ ಹುಲ್ಲಿನಿಂದ ಮಾಡಿದ ಉಡುದಾರದಿಂದ **ಆವೀತಂ** ಟೊಂಕದಲ್ಲಿ ಸುತ್ತಿರುವ **ಜಟಿಲಂ** ಜಟಾಧಾರಿಯಾದ **ಉಪವೀತಾಜಿನೋತ್ತರಂ** ಯಜ್ಞೋಪವೀತ-ಕೃಷ್ಣಾಜಿನಗಳನ್ನು ಧರಿಸಿ ಉತ್ಕೃಷ್ಟನಾದ ಅಥವಾ **ವಾಮನಂ** ವಾಮನನಾಮಕನಾದ (ಗಿಡ್ಡಾಗಿರುವ) **ಮಾಯಾಮಾಣವಕಂ** ತನ್ನ ಇಚ್ಛೆಯಿಂದ (ಬಲಿಯನ್ನು ನಿಗ್ರಹಿಸಬೇಕೆಂಬ ಇಚ್ಛೆಯಿಂದ) ಸಣ್ಣಬಾಲಕನಾದ **ಹರಿಂ** ಶ್ರೀಹರಿಯನ್ನು **ಪ್ರವಿಷ್ಟಂ** ಯಜ್ಞಶಾಲೆಯಲ್ಲಿ ಪ್ರವೇಶಿಸಿದವನನ್ನು **ವೀಕ್ಷ್ಯ** ನೋಡಿ **ತಸ್ಯ** ಅವನ **ತೇಜಸಾ** ಕಾಂತಿಯಿಂದ **ಸಂಕ್ಷಿಪ್ತಾಃ** ತಿರಸ್ಕೃತರಾಗಿ ಸೆಳೆಯಲ್ಪಟ್ಟವರಾಗಿ **ಅಗ್ನಿಭಿಃ ಸಹ** ಆಹವನೀಯಾದಿ ಅಗ್ನಿಗಳೊಡನೆ **ಸಮುತ್ಥಾಯ** ಎದ್ದು ನಿಂತು **ಪ್ರತ್ಯಗೃಹ್ಣನ್** ಇತ್ತ ಬನ್ನಿ ಎಂದು ಎದುರುಗೊಂಡರು. ॥೨೪-೨೫॥

**ಯಜಮಾನಃ ಪ್ರಮುದಿತೋ ದರ್ಶನೀಯಂ ಮನೋರಮಮ್ ।**
**ರೂಪಾನುರೂಪಾವಯವಂ ತಸ್ಮಾ ಆಸನಮಾಹರತ್ ॥೨೬॥**

**ದರ್ಶನೀಯಂ** ನೋಡಲೇಬೇಕೆನ್ನುವಂಥ ಸೌಂದರ್ಯ ಉಳ್ಳ **ಮನೋರಮಂ** ಮನಸ್ಸಿಗೆ ಸಂತೋಷಜನಕವಾದ **ರೂಪಾನುರೂಪಾವಯವಂ** ಆಕಾರಕ್ಕೆ ತಕ್ಕ ಆವಯವಗಳುಳ್ಳ ಆ ವಾಮನನ್ನು ದೃಷ್ಟ್ವಾ ನೋಡಿ **ಪ್ರಮುದಿತಃ ಚ** ಅತ್ಯಂತಸಂತುಷ್ಟನಾಗಿ **ಯಜಮಾನಃ** ಬಲಿಚಕ್ರವರ್ತಿಯು **ತಸ್ಮೈ** ಆ ವಾಮನನಿಗೆ **ಆಸನಂ ಆಹರತ್** ಆಸನವನ್ನು ತಂದು ಕೊಟ್ಟನೆಂದರ್ಥ.

ಸತ್ಯ :- ದರ್ಶನೀಯಂ ಮನೋಹರಂ ಎಂಬ ಪದಗಳು ಅಸನಕ್ಕೂ ವಿಶೇಷಣವಾಗಿವೆ ಎಂಬುದನ್ನು ತಿಳಿಯಬೇಕು. ।।೨೬।।

**ಸ್ವಾಗತೇನಾಭಿನಂದ್ಯಾಥ ಪಾದೌ ಭಗವತೋ ಬಲಿಃ ।**
**ಅವನಿಜ್ಯಾರ್ಚಯಾಮಾಸ ಮುಕ್ತಸಂಗಂ ಮನೋರಮಮ್ ।।೨೭।।**

**ಅಥ** ಆಸನವನ್ನಿತ್ತ ನಂತರ **ಬಲಿಃ** ಬಲಿಚಕ್ರವರ್ತಿಯು **ಸ್ವಾಗತೇನ ಅಭಿನಂದ್ಯ** ತಾವು ಬಂದುದರಿಂದ ತುಂಬ ಸಂತೋಷವಾಯಿತು ನಿಮಗೆ ಸ್ವಾಗತ ಮುಂತಾದ ಗೌರವಪೂರ್ವಕವಾದ ಮಾತುಗಳಿಂದ ಪ್ರಶಂಸಿಸಿ, ಸಂತೋಷಪಡಿಸಿ **ಭಗವತಃ** ಶ್ರೀಹರಿಯ **ಪಾದೌ** ಕಾಲುಗಳನ್ನು **ಅವನಿಜ್ಯ** ತೊಳೆದು **ಮುಕ್ತಸಂಗಂ** ವಿಷಯಾಸಕ್ತಿಯಿಲ್ಲದ (ವಿವಾಹಾದಿಗಳಿಲ್ಲದ್ದರಿಂದ) **ಮನೋರಮಂ** ಬ್ರಹ್ಮವರ್ಚಸ್ಸಿನಿಂದ ಎಲ್ಲರ ಮನಸ್ಸನ್ನು ಸೆಳೆಯುವ ಭಗವಂತನನ್ನು **ಅರ್ಚಯಾಮಾಸ** ಅರ್ಘ್ಯ ಮೊದಲಾದವುಗಳಿಂದ ಪೂಜಿಸಿದನು.

ಲಿಂಗೇರೀ :- ದರ್ಶನೀಯಂ ಮನೋರಮಂ ಎಂಬ ಈ ಎರಡು ವಿಶೇಷಣಗಳಿಂದ ವಿಷಯವೈರಾಗ್ಯ ಮತ್ತು ಬ್ರಹ್ಮವರ್ಚಸ್ಸುಗಳು ಪೂಜ್ಯತೆಗೆ ಕಾರಣಗಳೆಂದು ಸೂಚಿಸುವರು. ಈ ವಿಷಯವನ್ನೇ ಮುಂದೆ ವಾಮನನು ''ಯದೃಚ್ಛಾಲಾಭತುಷ್ಟಸ್ಯ ತೇಜೋ ವಿಪ್ರಸ್ಯ ವರ್ಧತೇ'' ಎಂಬ ಮಾತುಗಳಿಂದ ಸ್ಪಷ್ಟಪಡಿಸುತ್ತಿರುವನು. ।।೨೭।।

ಪರಮಾತ್ಮನ ಪಾದ ತೊಳೆದ ನೀರಿನ ಮಹಿಮೆಯನ್ನು ಹೇಳುವರು-

**ತತ್ಪಾದಶೌಚಂ ಕಲಿಕಲ್ಮಷಾಪಹಂ**
**ಸ ಧರ್ಮವಿನ್ಮೂರ್ಧ್ನ್ಯದಧಾತ್ ಸುಮಂಗಲಮ್ ।**
**ಯದ್ದೇವದೇವೋ ಗಿರಿಶಶ್ಚಂದ್ರಮೌಲಿ-**
**ರ್ದಧಾರ ಮೂರ್ಧ್ನಾ ಪರಯಾ ಚ ಭಕ್ತ್ಯಾ ।।೨೮।।**

**ಧರ್ಮವಿತ್** ಬ್ರಾಹ್ಮಣರ ಪಾದೋದಕ ಧಾರಣದಿಂದ ಬರುವ ಪುಣ್ಯವನ್ನರಿತ **ಸಃ** ಆ ಬಲಿಯು **ಕಲಿಕಲ್ಮಷಾಪಹಂ** ಕಲಿಕೃತವಾದ ಪಾಪಗಳನ್ನು ನಾಶಮಾಡುವ **ಸುಮಂಗಲಂ** ಅತ್ಯಂತಮಂಗಳಕರವಾದ **ತತ್ಪಾದಶೌಚಂ** ಆ ಭಗವಂತನ ಕಾಲು ತೊಳೆದ ನೀರನ್ನು **ಮೂರ್ಧ್ನಿ** ತನ್ನ ತಲೆಯ ಮೇಲೆ **ಅದಧಾತ್** ಧರಿಸಿದನು. **ಯತ್** ಯಾವ ಬ್ರಹ್ಮದೇವರು ಶ್ರೀಹರಿಯ ಪಾದ ತೊಳೆದ ನೀರನ್ನು ಭಾಗೀರಥಿಯನ್ನು **ದೇವದೇವಃ** ಇಂದ್ರಾದಿಗಳಿಗೆ ದೇವನೆನಿಸಿದ ಅವರಿಂದ ಸ್ತುತ್ಯನಾದ **ಗಿರಿಶಃ** ಕೈಲಾಸ ಪರ್ವತದಲ್ಲಿರುವ **ಚಂದ್ರಮೌಲಿಃ** ಚಂದ್ರನ ಕಲೆಯನ್ನು ತಲೆಯಲ್ಲಿ ಧರಿಸಿರುವ ರುದ್ರದೇವರೂ ಕೂಡ **ಪರಯಾ** ಅತಿಶಯವಾದ **ಭಕ್ತ್ಯಾ** ಭಕ್ತಿಯಿಂದ **ಮೂರ್ಧ್ನಾ** ತಲೆಯಿಂದ **ದಧಾರ** ಧರಿಸಿದರೋ ಅಂತಹ ಪಾದಪ್ರಕ್ಷಾಲನ ಉದಕವನ್ನು ಧರಿಸಿದರು ಎಂದನ್ವಯ. ।।೨೮।।

ಲಿಂಗೇರೀ ಃ- ಹೀಗೆ ಹೇಳುವುದರಿಂದ ಭಗವಂತನ ಪಾದೋದಕವು ಮಹಾಮಹಿಮೋಪೇತವಾಗಿದೆ ಎಂಬ ವಿಷಯದಲ್ಲಿ ಸಂಪ್ರದಾಯರೂಪವಾದ ಪ್ರಮಾಣವನ್ನು ತಿಳಿಸುತ್ತಿದ್ದಾರೆ. ''ಯಚ್ಛೌಚನಿಃಸೃತಸರಿತ್ಪ್ರವರೋದಕೇನ ತೀರ್ಥೇನ ಮೂರ್ಧ್ನ್ಯಧಿಧೃತೇನ ಶಿವಃ ಶಿವೋऽಭೂತ್'' ''ಅಥಾಪಿ ಯತ್ಪಾದನಖಾವಸೃಷ್ಟಂ ಜಗದ್ವಿರಿಂಚೋಪಹೃತಾರ್ಹಣಾಂಭಃ ಸೇಶಂ ಪುನಾತ್ಯನ್ಯತಮೋ ಮುಕುಂದಾತ್ ಕೋ ನಾಮ ಲೋಕೇ ಭಗವತ್ಪಾದಾರ್ಥಃ'' ಎಂಬ ವಚನಗಳು ಕೂಡಾ ಭಗವಂತನ ಪಾದೋದಕದ ಮಹಿಮೆಯನ್ನೇ ಕೊಂಡಾಡುತ್ತಲಿವೆ. ।।೨೮।।

ಬಲಿಯು ವಾಮನನನ್ನು ಸ್ವಾಗತಿಸಿದ ರೀತಿಯನ್ನು ಹೇಳುತ್ತಾರೆ-

**ಬಲಿರುವಾಚ**

**ಸ್ವಾಗತಂ ತೇ ನಮಸ್ತುಭ್ಯಂ ಬ್ರಹ್ಮನ್ ಕಿಂ ಕರವಾಮ ತೇ ।**
**ಬ್ರಹ್ಮರ್ಷೀಣಾಂ ತಪಃ ಸಾಕ್ಷಾನ್ಮನ್ಯೇ ತ್ವಾऽऽರ್ಯವಪುರ್ಧರಮ್ ।।೨೯।।**

**ಹೇ ಬ್ರಹ್ಮನ್** ಬ್ರಾಹ್ಮಣರೇ **ತೇ** ನಿಮಗೆ **ಸ್ವಾಗತಂ** ಸುಖಾಗಮನವಿರಲಿ ಕುಶಲ ತಾನೇ? **ತುಭ್ಯಂ** ನಿಮಗೆ **ನಮಃ** ನಮಸ್ಕಾರವು **ತೇ** ನಿಮಗೆ **ಕಿಂ ಕರವಾಮ** ನಾನೇನು ಮಾಡಲಿ? **ಹೇ ಆರ್ಯ** ಪೂಜ್ಯರೇ **ತ್ವಾ** ತಮ್ಮನ್ನು **ಸಾಕ್ಷಾತ್** ಕಣ್ಣಿಗೆ ಕಾಣುವ **ವಪುರ್ಧರಂ** ದೇಹವನ್ನು ಧರಿಸಿರುವ **ಬ್ರಹ್ಮರ್ಷೀಣಾಂ** ಬ್ರಹ್ಮಜ್ಞಾನಿಗಳ **ತಪಃ** ತಪಸ್ಸೆಂದು **ಮನ್ಯೇ** ತಿಳಿಯುತ್ತೇನೆ.

**ಅದ್ಯ ನಃ ಪಿತರಸ್ತೃಪ್ತಾ ಅದ್ಯ ನಃ ಪಾವಿತಂ ಕುಲಮ್ ।**
**ಅದ್ಯ ಸ್ವಿಷ್ಟಃ ಕ್ರತುರಯಂ ಯದ್ಭವಾನಾಗತೋ ಗೃಹಾನ್ ।।೩೦।।**

**ಯತ್** ಯಾವ ಕಾರಣದಿಂದ **ಭವಾನ್** ತಾವು **ಗೃಹಾನ್** ಮನೆಗೆ **ಆಗತಃ** ಬಂದಿರುವಿರೋ ಆ ಕಾರಣದಿಂದ **ಅದ್ಯ** ಈಗ **ನಃ** ನಮ್ಮ **ಪಿತರಃ** ಪಿತೃದೇವತೆಗಳು **ತೃಪ್ತಾಃ** ತೃಪ್ತರಾದರು **ನಃ** ನಮ್ಮ **ಕುಲಂ** ವಂಶವು **ಅದ್ಯ** ಈಗ **ಪಾವಿತಂ** ಪವಿತ್ರವಾಯಿತು **ಅದ್ಯ** ಈಗ **ಅಯಂ** ನಾನು ಮಾಡುತ್ತಿರುವ **ಕ್ರತುಃ ಚ** ಯಾಗವು **ಸ್ವಿಷ್ಟಃ** ಸಾಂಗವಾಗಿ ಮಾಡಲ್ಪಟ್ಟಿತು.

**ಅದ್ಯಾಗ್ನಯೋ ಮೇ ಸುಹುತಾ ಯಥಾವಿಧಿ**
**ದ್ವಿಜಾತ್ಮಜ ತ್ವಚ್ಚರಣಾವನೇಜನೈಃ ।**
**ಹತಾಂಹಸೋ ವಾರ್ಭಿರಿಯಂ ಚ ಭೂಮಿ-**
**ರದ್ಧಾ ಪುನೀತಾ ತನುಭಿಃ ಪದೈಸ್ತವ ।।೩೧।।**

**ಹೇ ದ್ವಿಜಾತ್ಮಜ** ಬ್ರಾಹ್ಮಣಪುತ್ರನೇ **ಅದ್ಯ** ಈಗ **ತ್ವಚ್ಚರಣಾವನೇಜನೈಃ** ನಿನ್ನ ಪಾದ ತೊಳೆದ **ವಾರ್ಭಿಃ** ನೀರುಗಳಿಂದ **ಹತಾಂಹಸಃ** ಪಾಪಗಳನ್ನು ಕಳೆದುಕೊಂಡ **ಮೇ** ನನ್ನ

**ಅಗ್ನಯಃ** ಅಗ್ನಿಗಳು **ಯಥಾವಿಧಿ** ಶಾಸ್ತ್ರವಿಧಿಗೆ ಅನುಸಾರವಾಗಿ **ಸುಹುತಾಃ** ಮೋಕ್ಷಸಾಧನವಾಗುವಂತೆ, ಹರಿಪ್ರೀತಿಯಾಗುವಂತೆ ಹೋಮಿಸಲ್ಪಟ್ಟವು. **ಇಯಂ ಭೂಮಿಃ** ಈ ಯಜ್ಞಶಾಲೆಯು **ಚ** ಮತ್ತು ನಿನ್ನ ಆಶ್ರಮದಿಂದ ಇಲ್ಲಿಯ ವರೆಗಿನ ಭೂಮಿಯು **ತವ** ನಿನ್ನ **ತನುಭಿಃ** ಪುಟ್ಟದಾದ ಕೋಮಲವಾದ ಪಾದಗಳಿಂದ **ಅದ್ಧಾ** ಪ್ರತ್ಯಕ್ಷವಾಗಿ **ಪುನೀತಾ** ಪವಿತ್ರವಾಗಿದೆ. ॥೩೧॥

**ಯದ್ಯದ್ ವಟೋ ವಾಂಛಸಿ ತತ್ ಪ್ರತೀಚ್ಛ ಮೇ**
**ತ್ವಾಮರ್ಥಿನಂ ವಿಪ್ರಸುತಾನುತರ್ಕಯೇ ।**
**ಗಾಂ ಕಾಂಚನಂ ಗುಣವದ್ ವಾಽಥ ಧಾಮ**
**ಮೃಷ್ಟಂ ತಥಾಽನ್ನಮುತ ವಾ ವಿಪ್ರ ಕನ್ಯಾಮ್ ।**
**ಗ್ರಾಮಾನ್ ಸಮೃದ್ಧಾನ್ ತುರಗಾನ್ ಗಜಾನ್ ವಾ**
**ರಥಾಂಸ್ತಥಾರ್ಹತ್ತಮ ಸಂಪ್ರತೀಚ್ಛ** ॥೩೨॥

**॥ ಇತಿ ಶ್ರೀಮದ್ಭಾಗವತೇ ಅಷ್ಟಮಸ್ಕಂದೇ ಸಪ್ತದಶೋಽಧ್ಯಾಯಃ ॥**

**ಹೇ ಅರ್ಹತ್ತಮ** ಅತ್ಯಂತಪೂಜ್ಯನಾದ **ವಿಪ್ರಸುತ** ಬ್ರಾಹ್ಮಣಪುತ್ರನೇ (ಇದರಿಂದ ದಾನಪಾತ್ರತೆಯನ್ನು ತಿಳಿಸುವರು) **ವಟೋ** ಬ್ರಹ್ಮಚಾರಿಯೇ **ಯದ್ಯತ್** ಏನೇನು **ವಾಂಛಸಿ** ಇಚ್ಛಿಸುವಿಯೋ **ತತ್‌ತತ್** ಅವೆಲ್ಲವನ್ನೂ **ಮೇ** ನನ್ನಿಂದ **ಪ್ರತೀಚ್ಛ** ಸ್ವೀಕರಿಸು. **ಹೇ ವಿಪ್ರ** ಬ್ರಾಹ್ಮಣನೇ **ತ್ವಾಂ** ನಿನ್ನನ್ನು **ಅರ್ಥಿನಂ** ಏನನ್ನೋ ಅಪೇಕ್ಷಿಸಿ ಬಂದವನೆಂದು **ಅನುತರ್ಕಯೇ** ಊಹಿಸುತ್ತೇನೆ. ಯದ್ಯತ್ ಎಂದುದನ್ನೇ ಬಿಡಿಸಿ ಹೇಳುವನು. **ಗಾಂ** ಭೂಮಿಯನ್ನೋ ಆಕಳನ್ನೋ **ಗುಣವತ್** ಪುಟಕ್ಕೆ ಹಾಕಿ ಉತ್ತಮವಾದ **ಕಾಂಚನಂ** ಬಂಗಾರವನ್ನೋ ಅಥವಾ **ಗುಣವತ್ ಧಾಮ** ಧನ-ಧಾನ್ಯ-ಪಾತ್ರೆ ಮುಂತಾದ ಎಲ್ಲ ಸಮೃದ್ಧಿಯುಳ್ಳ ಮನೆಯನ್ನೋ **ತಥಾ** ಹಾಗೆಯೇ **ಮೃಷ್ಟಂ ಅನ್ನಂ** ಶುದ್ಧವೂ ರುಚಿಕರವೂ ಆದ ಪ್ರಶಸ್ತವಾದ ಅನ್ನವನ್ನೋ **ಉತ ವಾ** ಅಥವಾ **ಕನ್ಯಾಂ** ವಧುವನ್ನೋ **ಸಮೃದ್ಧಾನ್ ಗ್ರಾಮಾನ್** ಸಂಪತ್ಸಮೃದ್ಧವಾದ ಗ್ರಾಮಗಳನ್ನೋ **ತಥಾ** ಹಾಗೂ **ರಥಾನ್** ತೇರುಗಳನ್ನಾಗಲೀ **ಮೇ** ನನ್ನಿಂದ **ಸಂಪ್ರತೀಚ್ಛ** ನಿಸ್ಸಂಕೋಚವಾಗಿ ಸ್ವೀಕರಿಸು. ॥೩೨॥

ಸತ್ಯ ಃ- **ಪ್ರತೀಚ್ಛ** ಎಂದು ಹೇಳಿ ಮತ್ತೆ **ಸಂಪ್ರತೀಚ್ಛ** ಎಂದು ಹೇಳುತ್ತಿರುವುದರಿಂದ ಸಂದೇಹ ಮಾಡಬೇಡವೆಂದು ಧ್ವನಿತವಾಗುವದು.

**ಇಲ್ಲಿಗೆ ಹದಿನೇಳನೇ ಅಧ್ಯಾಯವು ಮುಗಿಯಿತು.**

★★★



# ಅಥ ಅಷ್ಟಾದಶೋಽಧ್ಯಾಯಃ

ಮುಂದಿನ ಎರಡು ಅಧ್ಯಾಯಗಳಿಂದ ಬಲಿಯ ಭಕ್ತಿಯನ್ನು ತಿಳಿಸುತ್ತಿದ್ದಾರೆ. ಅದಕ್ಕೂ ಪೂರ್ವದಲ್ಲಿ, ದಾನ ತೆಗೆದುಕೊಳ್ಳುವವನು ಈ ರೀತಿ ನಡೆದು ಕೊಳ್ಳಬೇಕು ಎಂದು ಲೋಕಾನುಕರಣ ಮಾಡುವ ಲೋಕೇಶನಾದ ವಾಮನನು ಹೀಗೆ ಮಾಡಿದನೆಂದು ಹೇಳುತ್ತಿದ್ದಾರೆ. ಇಲ್ಲಿಯೂ ಶ್ರೀಹರಿಯಲ್ಲಿ ಭಕ್ತಿ ಬೆಳೆಯುವುದಕ್ಕಾಗಿ ವರಾಹದೇವರು ಭೂಮಿಯನ್ನು ಉದ್ಧಾರ ಮಾಡಿ ಎಲ್ಲ ಪ್ರಜೆಗಳನ್ನು ಪಾಲನೆ ಮಾಡಿದ ಮಹಿಮೆಯನ್ನು ಹೇಳುತ್ತಿದ್ದಾರೆ. ಮೊದಲಿಗೆ ಬಲಿ ಮಾಡಿದ ಸ್ತುತಿಯಿಂದ ಪ್ರಸನ್ನನಾದ ವಾಮನನ ವಾಗ್ಮಿತೆಯನ್ನು ತಿಳಿಸುತ್ತಿದ್ದಾರೆ.

**ಶ್ರೀಶುಕ ಉವಾಚ**

**ಇತಿ ವೈರೋಚನೇರ್ವಾಕ್ಯಂ ಧರ್ಮಯುಕ್ತಂ ಸುಸೂನೃತಮ್ ।**
**ನಿಶಮ್ಯ ಭಗವಾನ್ ಪ್ರೀತಃ ಪ್ರತಿನಂದ್ಯೇದಮಬ್ರವೀತ್ ॥೧॥**

**ಇತಿ** ಈ ರೀತಿಯಾಗಿ ತನ್ನ ಮಹಿಮೆಯನ್ನು ಸೂಚಿಸುವ **ಧರ್ಮಯುಕ್ತಂ** ಧರ್ಮದಿಂದ ಕೂಡಿದ **ಸುಸೂನೃತಂ** ಯಥಾರ್ಥವಾದದ್ದರಿಂದ ಕೇಳುವವರ ಮನಸ್ಸಿಗೆ ಪ್ರೀತಿಯನ್ನುಂಟುಮಾಡುವ **ವೈರೋಚನೇಃ** ವಿರೋಚನನ ಪುತ್ರನಾದ ಬಲಿಯ **ವಾಕ್ಯಂ** ಮಾತನ್ನು **ನಿಶಮ್ಯ** ಕೇಳಿ **ಪ್ರೀತಃ** ಸಂತುಷ್ಟನಾದ **ಭಗವಾನ್** ವಾಮನರೂಪಿಯಾದ ಪರಮಾತ್ಮನು **ಪ್ರತಿನಂದ್ಯ** ಮಹಾವಂಶದಲ್ಲಿ ಜನಿಸಿದವನಿಗೆ ಇದು ಯುಕ್ತವೇ ಎಂದು ಪ್ರಶಂಸಿಸಿ, ಬಲಿಯನ್ನು ಸಂತೋಷಪಡಿಸಿ **ಇದಂ** ಮುಂದೆ ಹೇಳುವ ಮಾತನ್ನು **ಅಬ್ರವೀತ್** ಹೇಳಿದನು. ॥೧॥

ಛಲಾರೀ :- ಛಲಾರೀ ಆಚಾರ್ಯರು ಸಸೂನೃತಂ ಎಂದು ಪಠಿಸಿ ಸೂನೃತೇನ ಕುಶಲಪ್ರಶ್ನೇನ ಸಹಿತಂ ಕುಶಲಪ್ರಶ್ನೆಯಿಂದ ಸಹಿತವಾದ ಎಂದು ಅರ್ಥವನ್ನು ಹೇಳಿದ್ದಾರೆ.

ದಾನಮಾಡುವವನ ಸ್ತುತಿಯನ್ನು ಮಾಡಬೇಕು. ಪ್ರಸಂಗಾನುಗುಣವಾಗಿ ಮಾತನಾಡಬೇಕು. ಎಂದು ಭಿಕ್ಷುಕರಿಗೆ ಶಿಕ್ಷಿಸುತ್ತ ಸ್ತುತಿಸುವ ರೀತಿಯನ್ನು ಹದಿನಾರು ಶ್ಲೋಕಗಳಿಂದ ತಿಳಿಸುವರು-

**ಶ್ರೀಭಗವಾನುವಾಚ**

**ವಚಸ್ತವೈತಜ್ಜನದೇವ ಸೂನೃತಂ**
**ಕುಲೋಚಿತಂ ಧರ್ಮಯುತಂ ಯಶಸ್ಕರಮ್ ।**
**ಯಸ್ಯ ಪ್ರಮಾಣಂ ಭೃಗವಃ ಸಾಂಪರಾಯೇ**
**ಪಿತಾಮಹಃ ಕುಲವೃದ್ಧಃ ಪ್ರಶಾಂತಃ ॥೨॥**

**ಹೇ ಜನದೇವ** ರಾಜನಾದ ಬಲಿಯೇ **ತವ** ನೀನು ಆಡಿದ **ಏತತ್ ವಚಃ** ಏನು ಬೇಕಾದರೂ ನನ್ನಿಂದ ಸ್ವೀಕರಿಸು ಎಂಬ ಮಾತು **ಸೂನೃತಂ** ಅತ್ಯಂತ ಪ್ರೀತಿಕರವಾದುದು **ಕುಲೋಚಿತಂ** ನಿನ್ನ ವಂಶಕ್ಕೆ ಯೇಗ್ಯವಾಗಿದೆ **ಧರ್ಮಯುತಂ** ಪುಣ್ಯಯುತವಾಗಿದೆ **ಯಶಸ್ಕರಂ** ಕೀರ್ತಿದಾಯಕವೂ ಆಗಿದೆ **ಯಸ್ಯ** ಯಾವ ನಿನಗೆ **ಸಾಂಪರಾಯೇ** ಮೋಕ್ಷಾದಿಶ್ರೇಯಸ್ಸಿಗೆ **ಭೃಗವಃ** ಶುಕ್ರಾಚಾರ್ಯರೇ ಮೊದಲಾದ ಬ್ರಹ್ಮಜ್ಞಾನಿಗಳು **ಪ್ರಮಾಣಂ** ಕಾರಣರಾಗಿದ್ದಾರೆ ಮತ್ತು **ಕುಲವೃದ್ಧಃ** ನಿಮ್ಮ ವಂಶದಲ್ಲಿ ಹಿರಿಯರಾದ **ಪ್ರಶಾಂತಃ** ಪರಮಾತ್ಮನಲ್ಲಿಯೇ ನಿಷ್ಠೆಯುಳ್ಳ **ಪಿತಾಮಹಃ** ನಿನ್ನ ತಾತಂದಿರಾದ ಪ್ರಹ್ಲಾದರಾಜರು **ಪ್ರಮಾಣಂ** ಮಾರ್ಗದರ್ಶಕರಾಗಿದ್ದಾರೆ.

ಲಿಂಗೇರೀ :- ನರಹರಿಯ ಚರಣಾರವಿಂದಗಳ ಭಕ್ತರಾದ ಪ್ರಹ್ಲಾರಾಜರ ಮೊಮ್ಮಗನೂ, ಶುಕ್ರಾಚಾರ್ಯರ ಶಿಷ್ಯನೂ ಆದ ನಿನಗೆ ಮೋಕ್ಷಾದಿ ಪುರುಷಾರ್ಥಗಳು ನಿಶ್ಚಿತವೆಂದು ಭಾವ. ॥೨॥

ಮುಂದಿನ ಕಾರ್ಯಕ್ಕೆ ಅನುಗುಣವಾಗಿ ಪ್ರೋತ್ಸಾಹಿಸುತ್ತಿದ್ದಾನೆ-

**ನ ಹ್ಯೇತಸ್ಮಿನ್ ಕುಲೇ ಕಶ್ಚಿನ್ನಿಸ್ಸತ್ವಃ ಕೃಪಣಃ ಪುಮಾನ್ ।**
**ಪ್ರತ್ಯಾಖ್ಯಾತಾ ಪ್ರತಿಶ್ರುತ್ಯ ಯೋ ವಾಽದಾತಾ ದ್ವಿಜಾತಯೇ ॥೩॥**

ಎಲೋ ಬಲಿಯೇ **ಏತಸ್ಮಿನ್ ಕುಲೇ** ಈ ನಿನ್ನ ವಂಶದಲ್ಲಿ **ಯಃ ಕಶ್ಚಿತ್ ಪುಮಾನ್** ಯಾವನೊಬ್ಬ ಪುರುಷನಾದರೂ **ನಿಸ್ಸತ್ವಃ** ಬಲಹೀನನು **ಕೃಪಣಃ** ಲೋಭಿಯು, ದೀನನು **ದ್ವಿಜಾತಯೇ** ಬ್ರಾಹ್ಮಣನಿಗೆ **ಪ್ರತಿಶ್ರುತ್ಯ** ಕೊಡುವೆನೆಂದು ಮಾತುಕೊಟ್ಟು **ಪ್ರತ್ಯಾಖ್ಯಾತಾ** ಕೊಡುವುದಿಲ್ಲವೆಂದು ನಿರಾಕರಿಸಿದವನು **ಅದಾತಾ** ದಾನಿಯಾಗದವನು **ನ** ಹುಟ್ಟಿಲ್ಲ **ಹ** ಇದು ಅನುಭವಸಿದ್ಧವಾಗಿದೆ. ॥೩॥

**ನ ಸಂತಿ ತೀರ್ಥೇ ಯುಧಿ ವಾಽರ್ಥಿನಾಽರ್ಥಿತಾಃ**
**ಪರಾಙ್ಮುಖಾ ಯೇ ತ್ವಮನಸ್ವಿನೋ ನೃಪ ।**
**ಯುಷ್ಮತ್ಕುಲೇ ಯದ್ಯಶಸಾಮಲೇನ**
**ಪ್ರಹ್ಲಾದ ಉದ್ಭಾತಿ ಯಥೋಡುಪಃ ಖೇ** ॥೪॥

**ಹೇ ನೃಪ** ರಾಜನಾದ ಬಲಿಯೇ ನಿಮ್ಮ ವಂಶದಲ್ಲಿ **ತೀರ್ಥೇ** ಯೋಗ್ಯರಾದ ಪಾತ್ರರಲ್ಲಿ, ಪವಿತ್ರವಾದ ಗಂಗಾದಿತೀರ್ಥಸ್ಥಳಗಳಲ್ಲಿ **ಅರ್ಥಿನಾ** ಯಾಚಕನಿಂದ **ಅರ್ಥಿತಾಃ** ಪ್ರಾರ್ಥಿತರಾಗಿ **ಯೇ** ಯಾರು **ಅಮನಸ್ವಿನಃ** ಕೊಡಲು ಮನಸ್ಸಿಲ್ಲದವರು **ಪರಾಙ್ಮುಖಾಃ** ದಾನವಿಮುಖರಾದವರು **ತೇ ತು** ಅಂಥವರು **ನ ಸಂತಿ** ಇಲ್ಲ. **ವಾ** ಮತ್ತು **ಯುಧಿ** ಯುದ್ಧದಲ್ಲಿ **ಅರ್ಥಿನಾ** ಯುದ್ಧಾಪೇಕ್ಷೆಯಿಂದ **ಅರ್ಥಿತಾಃ** ಯುದ್ಧಮಾಡಲು ಪ್ರೇರಿತರಾಗಿ **ಅಮನಸ್ವಿನಃ** ಯುದ್ಧಮಾಡಲು ಮನಸ್ಸಿಲ್ಲದವರಾಗಿ **ಪರಾಙ್ಮುಖಾಃ** ಯುದ್ಧಕ್ಕೆ ವಿಮುಖರಾದವರು ಯಾರೂ **ನ ಸಂತಿ** ಇಲ್ಲ. **ಯತ್** ಏಕೆಂದರೆ **ಖೇ** ಆಕಾಶದಲ್ಲಿ **ಉಡುಪಃ ಯಥಾ** ಚಂದ್ರನಂತೆ **ಯುಷ್ಮತ್ಕುಲೇ** ನಿನ್ನ ಕುಲದಲ್ಲಿ **ಪ್ರಹ್ಲಾದಃ** ಪ್ರಹ್ಲಾದರಾಜನು **ಅಮಲೇನ ಯಶಸಾ** ಶುದ್ಧವಾದ ದಾನವೀರ ಮತ್ತು ಯುದ್ಧವೀರನೆಂಬ ಕೀರ್ತಿಯಿಂದ **ಉದ್ಭಾತಿ** ಉತ್ಕೃಷ್ಟವಾಗಿ ಪ್ರಕಾಶಿಸುತ್ತಿರುವನು. ॥೪॥

ಈಗ ಬಲಿಯ ಪ್ರಪಿತಾಮಹರಾದ ಹಿರಣ್ಯಾಕ್ಷ-ಹಿರಣ್ಯಕಶಿಪುರನ್ನು ಸ್ತುತಿಸುವರು.

**ಯತೋ ಜಾತೋ ಹಿರಣ್ಯಾಕ್ಷಶ್ಚರನ್ನೇಕ ಇಮಾಂ ಮಹೀಮ್ ।**
**ಪ್ರತಿವೀರಂ ದಿಗ್ವಿಜಯೇ ನಾವಿಂದತ ಗದಾಯುಧಃ** ॥೫॥

**ಯತಃ** ಯಾವ ನಿಮ್ಮ ವಂಶದಲ್ಲಿ **ಜಾತಃ** ಹುಟ್ಟಿದ **ಹಿರಣ್ಯಾಕ್ಷಃ** ಹಿರಣ್ಯಾಕ್ಷನು **ಏಕಃ** ಒಬ್ಬನೇ **ಗದಾಯುಧಃ** ಗದೆಯನ್ನು ಆಯುಧವಾಗಿ ಮಾಡಿಕೊಂಡು **ಇಮಾಂ ಮಹೀಂ** ಈ ಭೂಮಿಯನ್ನು **ಚರನ್** ಸಂಚರಿಸುತ್ತ **ದಿಗ್ವಿಜಯೇ** ದಿಕ್ಕುಗಳನ್ನು ಗೆಲ್ಲುವ ಕಾಲದಲ್ಲಿ **ಪ್ರತಿವೀರಂ** ಪ್ರತಿಭಟನನ್ನು **ನ ಅವಿಂದತ್** ಹೊಂದಲಿಲ್ಲ. ॥೫॥

**ಯಂ ವಿನಿರ್ಜಿತ್ಯ ಕೃಚ್ಛ್ರೇಣ ವಿಷ್ಣುಃ ಕ್ಷ್ಮೋದ್ಧಾರ ಆಗತೇ ।**
**ನಾತ್ಮಾನಂ ಜಯಿನಂ ಮೇನೇ ತದ್ವೀರ್ಯಂ ಭೂರ್ಯನುಸ್ಮರನ್** ॥೬॥

**ವಿಷ್ಣುಃ** ಶ್ರೀಹರಿಯು **ಕ್ಷ್ಮೋದ್ಧಾರೇ ಆಗತೇ** ಭೂಮಿಯನ್ನು ಮೇಲೆತ್ತಿ ತರುವ ಕಾಲ ಬಂದಾಗ **ಯಂ** ಯಾವ ನಿನ್ನ ಮುತ್ತಜ್ಜನಾದ ಹಿರಣ್ಯಾಕ್ಷನನ್ನು ಬಹಳ ಪ್ರಯಾಸದಿಂದ **ವಿನಿರ್ಜಿತ್ಯ** ಗೆದ್ದು **ತದ್ವೀರ್ಯಂ** ಬಹಳವಾದ ಅವನ ಪರಾಕ್ರಮವನ್ನು **ಅನುಸ್ಮರನ್** ಸ್ಮರಿಸುವವನಾಗಿ **ಆತ್ಮಾನಂ** ತನ್ನನ್ನು **ಜಯಿನಂ** ಗೆದ್ದವನನ್ನಾಗಿ **ನ ಮೇನೇ** ತಿಳಿಯಲಿಲ್ಲವೋ ಅಂತಹ ಹಿರಣ್ಯಾಕ್ಷನು ಎಂದನ್ವಯ.

ವಿಜಯ :- **ಆಗತೇ** ಭೂಮಿಯ ಉದ್ಧಾರ ಕಾಲ ಬಂದಾಗ **ಕ್ಷ್ಮೋದ್ಧಾರಃ** ಭೂಮಿಯನ್ನು ಉದ್ಧರಿಸಿದ **ಸಾ** ಪುರುಷೋತ್ತಮನಾದ ವಿಷ್ಣುವು **ಯಂ** ಯಾವ ಹಿರಣ್ಯಾಕ್ಷನನ್ನು **ವಿನಿರ್ಜಿತ್ಯ** ಗೆದ್ದು **ತದ್ವೀರ್ಯಂ** ತನ್ನ ಆ ಪರಾಕ್ರಮವನ್ನು **ಕೃಚ್ಛ್ರೇಣ** ಸಂಪೂರ್ಣವಾಗಿ **ಭೂರಿ** ಅನಂತವೆಂದು **ಅನುಸ್ಮರನ್** ಸ್ಮರಿಸುತ್ತ **ಆತ್ಮಾನಂ** ತನ್ನನ್ನು **ಜಯಿನಂ** ಜಯಿಸುವ ಸ್ವಭಾವವುಳ್ಳವನೆಂದು **ಮೇನೇ** ತಿಳಿದನು ಎಂದಾದರೂ ಅನ್ವಯ ಮಾಡಿಕೊಳ್ಳಬೇಕು.

ಅಥವಾ **ಅನುಸ್ಮರನ್ ಅಪಿ** ಸ್ಮರಿಸುತ್ತಿದ್ದರೂ **ಆತ್ಮಾನಂ** ತನ್ನನ್ನು (ತದಾನೀಂ ಏವ) ಆಗ ಮಾತ್ರ **ಜಯಿನಂ ನ ಮೇನೇ** ಜಯಶೀಲನೆಂದು ತಿಳಿಯಲಿಲ್ಲ. ಅಂದರೆ ಯಾವಾಗಲೂ ತಾನು ಜಯಶೀಲನೆಂದು ತಿಳಿದನು ಎಂದು ಭಾವ.

ಸತ್ಯ :- ಸ್ತುತಿಸಮಯತ್ವಾದ್ವಾ ನಟನಂ ದೇವಸ್ಯೇತಿ ಜ್ಞೇಯಮ್ ॥ ಭಗವಂತ ಹಿರಣ್ಯಾಕ್ಷನನ್ನು ಕಷ್ಟದಿಂದ ಗೆದ್ದನು ಎಂದು ಹೇಳಿದ್ದಾರೆ. ಹಿರಣ್ಯಾಕ್ಷನ ಸ್ತುತಿಯ ಪ್ರಸಂಗವಾದ್ದರಿಂದ ಹೀಗೆ ಹೇಳಿದ್ದಾರೆ ಎಂದು ತಿಳಿಯಬೇಕು. ಮತ್ತು ತಮೋಯೋಗ್ಯರ ಮೋಹನಕ್ಕಾಗಿ ಹೀಗೆ ವಾಮನನು ನಟನೆಗಾಗಿ ಹೇಳುತ್ತಿದ್ದಾನೆ ಎಂದು ತಿಳಿಯಬೇಕು.

ಅಥವಾ ಜನರು ನಿರಾಶ್ರಯರಾಗಿ **(ನಿರಾಲಂಬಾಃ)** ತನ್ನನ್ನೇ ಅವಲಂಬಿಸಿರುವರು (ಸ್ವಾವಲಂಬಾ) ಎಂದು **ತತ್ಕೃಚ್ಛ್ರೇಣ** ಅವರ ಕಷ್ಟವನ್ನು ನೋಡಿ ಮೊದಲು ಆ ಹಿರಣ್ಯಾಕ್ಷನನ್ನು ಗೆದ್ದು **ನಾತ್ಮಾನಂ** ನಿರ್ಜೀವನಾಗಿರುವನೆಂದು **ಅನುಸ್ಮರನ್** ಸ್ಮರಿಸಿ **ತದ್ವೀರ್ಯಂ** ಅವನು ತನ್ನ ಪ್ರತಿಭಟನಾಗಲು ಯೋಗ್ಯವಾದ ಸಾಮರ್ಥ್ಯ ಉಳ್ಳ **ಜಯಿನಂ** ವಿಜಯಾವೇಶವುಳ್ಳವನನ್ನಾಗಿ **ಭೂರಿ ಮೇನೇ** ಬಹುಮೇನೇ ಬಹಳವಾಗಿ ತಿಳಿದನು ಹೀಗೂ ಅರ್ಥ. ಈ ಅರ್ಥ ಆಂತರಂಗಿಕವಾಗಿದೆ ಎಂದು ಶ್ರೀಸತ್ಯಧರ್ಮರು ತಿಳಿಸುತ್ತಾರೆ. ॥೬॥

**ನಿಶಮ್ಯ ತದ್ವಧಂ ಭ್ರಾತಾ ಹಿರಣ್ಯಕಶಿಪುಃ ಪುರಾ ।**
**ಹಂತುಂ ಭ್ರಾತೃಹಣಂ ಕ್ರುದ್ಧೋ ಜಗಾಮ ನಿಲಯಂ ಹರೇಃ ॥೭॥**

**ಪುರಾ** ಹಿಂದೆ **ಭ್ರಾತಾ** ಆ ಹಿರಣ್ಯಾಕ್ಷನ ಅಣ್ಣನಾದ ಹಿರಣ್ಯಕಶಿಪುವು **ತದ್ವಧಂ** ವರಾಹರೂಪಿಯಾದ ವಿಷ್ಣುವು ಹಿರಣ್ಯಾಕ್ಷನನ್ನು ಕೊಂದದ್ದನ್ನು **ನಿಶಮ್ಯ** ಕೇಳಿ **ಕ್ರುದ್ಧಃ** ಕುಪಿತನಾಗಿ **ಭ್ರಾತೃಹಣಂ** ತಮ್ಮನನ್ನು ಕೊಂದ ವಿಷ್ಣುವನ್ನು **ಹಂತುಂ** ಕೊಲ್ಲಲು **ಹರೇಃ ನಿಲಯಂ** ವಿಷ್ಣುವು ವ್ಯಕ್ತನಾಗಿ ಇರುವ ಅಮುಕ್ತಸ್ಥಾನವಾದ ವೈಕುಂಠಲೋಕಕ್ಕೆ **ಜಗಾಮ** ಹೋದನು. ॥೭॥

**ತಮಾಯಾಂತಂ ಸಮಾಲೋಕ್ಯ ಶೂಲಪಾಣಿಂ ಕೃತಾಂತವತ್ ।**
**ಚಿಂತಯಾಮಾಸ ಕಾಲಜ್ಞೋ ವಿಷ್ಣುರ್ಮಾಯಾವಿನಾಂ ವರಃ ॥೮॥**

**ಮಾಯಾವಿನಾಂ ವರಃ** ಸಹಜಶಕ್ತಿಯುಳ್ಳವರಲ್ಲಿ ಶ್ರೇಷ್ಠನಾದ, ಜ್ಞಾನಿಗಳಲ್ಲಿ ಶ್ರೇಷ್ಠನಾದ, ಜ್ಞಾನಿಗಳಿಗೆ ಮೋಕ್ಷಾದಿ ವರಗಳನ್ನು ಕೊಡುವ ಮತ್ತೊಬ್ಬರನ್ನು ಮೋಹಗೊಳಿಸುವ ಶಕ್ತಿಯುಳ್ಳವರಲ್ಲಿ ಶ್ರೇಷ್ಠನಾದ **ವಿಷ್ಣುಃ** ಶ್ರೀಹರಿಯು **ಯತಃ** ಯಾವ ಕಾರಣ **ಕಾಲಜ್ಞಃ** ಯಾವ ಯಾವ ಕಾಲದಲ್ಲಿ ಏನೇನು ಮಾಡಬೇಕೆಂಬುದನ್ನು ಸಂಪೂರ್ಣವಾಗಿ ಬಲ್ಲನೋ **ಅತಃ** ಆದ್ದರಿಂದ ಇದು ಇವನನ್ನು ಕೊಲ್ಲುವ ಕಾಲವಲ್ಲ ಕಿಂತು ಮುಂದೆ ನೃಸಿಂಹಾವತಾರ ಕಾಲದಲ್ಲಿ ಇವನನ್ನು ಕೊಲ್ಲಬೇಕು ಎಂಬ ಜ್ಞಾನ ಉಳ್ಳವನು **ಕೃತಾಂತವತ್** ಯಮನಂತೆ **ಆಯಾಂತಂ** ತನ್ನನ್ನು ಕೊಲ್ಲಲು ಬರುತ್ತಿರುವ **ಶೂಲಪಾಣಿಂ** ತನ್ನ ಕೈಯಲ್ಲಿ ಶೂಲವನ್ನು ಹಿಡಿದಿರುವ **ತಂ** ಆ ಹಿರಣ್ಯಕಶಿಪುವನ್ನು **ಸಮಾಲೋಕ್ಯ** ನೋಡಿ **ಚಿಂತಯಾಮಾಸ** ಮುಂದೆ ಹೇಳುವ ರೀತಿಯಲ್ಲಿ ಆಲೋಚಿಸಿದನು. ।।೮।।

ವಿಷ್ಣುವು ಆಲೋಚಿಸಿದ ರೀತಿಯನ್ನು ಹೇಳುತ್ತಾರೆ-

**ಯತೋ ಯತೋಽಹಂ ತತ್ರಾಸೌ ಮೃತ್ಯುಃ ಪ್ರಾಣಭೃತಾಮಿವ ।**
**ಅತೋಽಹಮಸ್ಯ ಹೃದಯಂ ಪ್ರವೇಕ್ಷ್ಯಾಮಿ ಪರಾಗ್ದೃಶಃ ।।೯।।**

**ಪ್ರಾಣಭೃತಾಂ** ಜೀವರಿಗೆ **ಮೃತ್ಯುಃ** ಇವ ಮೃತ್ಯುದೇವತೆಯಂತೆ **ಅಸೌ** ಈ ಹಿರಣ್ಯಕಶಿಪುವು **ಅಹಂ** ನಾನು **ಯತಃ ಯತಃ** ಎಲ್ಲೆಲ್ಲಿಗೆ ಹೋಗುವೆನೋ **ತತ್ರ** ಅಲ್ಲಲ್ಲಿಗೆ ಹಿಂಬಾಲಿಸುವನು **ಅತಃ** ಆದ್ದರಿಂದ **ಪರಾಗ್ದೃಶಃ** ಬಾಹ್ಯದೃಷ್ಟಿ ಇರುವ ಅಥವಾ ಬಹಳದೂರದ ಪದಾರ್ಥವನ್ನು ನೋಡುವ (ಹತ್ತಿರದ್ದನ್ನು ನೋಡದ) **ಅಸ್ಯ ಚ** ಈ ಹಿರಣ್ಯಕಶಿಪುವಿನ **ಹೃದಯಂ** ಮನಸ್ಸನ್ನು **ಪ್ರವೇಕ್ಷ್ಯಾಮಿ** ಪ್ರವೇಶಿಸುವೆನು ಎಂದು ಆಲೋಚಿಸಿದನು. ।।೯।।

ಸತ್ಯ ಃ- ''ಪ್ರಾಣಭೃತಾಂ ಮೃತ್ಯುರಿವ ಅಹಂ ಅಪರಿಹಾರ್ಯಃ'' ಜನರಿಗೆ ಮೃತ್ಯುವಿನಂತೆ ನಾನು ಅಪರಿಹಾರ್ಯನೆಂದು ಆಂತರಂಗಿಕ ಭಾವ. ।।೯।।

**ಏವಂ ಸ ನಿಶ್ಚಿತ್ಯ ರಿಪೋಃ ಶರೀರಂ**
**ಆಧಾವತೋ ನಿರ್ವಿವಿಶೇಽಸುರೇಂದ್ರ ।**
**ಶ್ವಾಸಾನಿಲಾಂತರ್ಹಿತಸೂಕ್ಷ್ಮದೇಹ-**
**ಸ್ತತ್ಪ್ರಾಣರಂಧ್ರೇಣ ವಿವಿಗ್ನಚೇತಾಃ ।।೧೦।।**

**ಹೇ ಅಸುರೇಂದ್ರ** ಬಲಿಚಕ್ರವರ್ತಿಯೇ **ವಿವಿಗ್ನಚೇತಾಃ** ಉದ್ವಿಗ್ನವಾಗದಿರುವ ಮನಸ್ಸುಳ್ಳ **ಸಃ** ವಿಷ್ಣುವು **ಏವಂ** ಮೇಲೆ ಹೇಳಿದಂತೆ ಬಹಿರ್ದೃಷ್ಟಿಯಾದ ಈ ಅಸುರನು ಹೃದಯದಲ್ಲಿರುವ ನನ್ನನ್ನು ತಿಳಿಯಲಾರನೆಂದು **ನಿಶ್ಚಿತ್ಯ** ನಿಶ್ಚಯಮಾಡಿಕೊಂಡು **ಶ್ವಾಸಾನಿಲಾಂತರ್ಹಿತಃ** ಶ್ವಾಸವಾಯುವಿನಲ್ಲಿ ಅಡಗಿದ ಸೂಕ್ಷ್ಮದೇಹ ಉಳ್ಳವನಾಗಿ

**ಆಧಾವತಃ** ತನ್ನನ್ನು ಕುರಿತು ಓಡಿ ಬರುತ್ತಿದ್ದ **ರಿಪೋಃ** ಹಿರಣ್ಯಕಶಿಪುವಿನ **ಶರೀರಂ** ದೇಹವನ್ನು **ತದ್‌ಘ್ರಾಣರಂಧ್ರೇಣ** ಆ ಹಿರಣ್ಯಕಶಿಪುವಿನ ಮೂಗಿನ ಹೊರಳೆಗಳಿಂದ **ನಿರ್ವಿವೇಶ** ಒಳಗೆ ಹೊಕ್ಕನು. ।।೧೦।।

ಲಿಂಗೇರೀ ಃ- ವಿವಿಗ್ನಚೇತಾಃ ಎಂಬ ಸ್ಥಳದಲ್ಲಿ ವಿವಿಕ್ತಚೇತಾಃ ಎಂದು ಲಿಂಗೇರೀ ಆಚಾರ್ಯರು ಪಠಿಸಿದ್ದಾರೆ. ಕರ್ತವ್ಯಾಕರ್ತವ್ಯ ಜ್ಞಾನ ಉಳ್ಳ ಎಂದು ವ್ಯಾಖ್ಯಾನಿಸಿದ್ದಾರೆ.

♦ **ಮಾಯಾವತಃ** ಎಂಬ ಪಾಠದಲ್ಲಿ ಮಾಯಾಯುದ್ಧ ಚತುರನಾದ ಎಂದರ್ಥ-

**ಸ ತನ್ನಿಕೇತಂ ಪರಿಮೃಶ್ಯ ಶೂನ್ಯಂ**
**ಅಪಶ್ಯಮಾನಃ ಕುಪಿತೋ ನನಾದ ।**
**ಕ್ಷ್ಮಾಂ ದ್ಯಾಂ ದಿಶಃ ಖಂ ವಿವರಾನ್ ಸಮುದ್ರಾನ್**
**ವಿಷ್ಣುಂ ವಿಚಿನ್ವನ್ ನ ದದರ್ಶ ವೀರಃ** ।।೧೧।।

**ವೀರಃ** ವೀರನಾದ ಹಿರಣ್ಯಕಶಿಪುವು **ತತ್** ಆ ವೈಕುಂಠವನ್ನು **ಪರಿಮೃಶ್ಯ** ಶೋಧಿಸಿ **ಶೂನ್ಯಂ ಪರಿಮೃಶ್ಯ** ಹರಿವಿರಹಿತವೆಂದು ತಿಳಿದು **ನಿಕೇತಂ** ಪ್ರಪಂಚಕ್ಕೆ ಆಶ್ರಯನಾದ ಶ್ರೀಹರಿಯನ್ನು ಅಥವಾ **ತನ್ನಿಕೇತಂ** ಶ್ರೀಹರಿಯ ವಾಸಸ್ಥಾನವಾದ ವೈಕುಂಠವನ್ನು ಎಂದು ಹಿಂದೆ ಅನ್ವಯ. **ಅಪಶ್ಯಮಾನಃ** ಕಾಣದೇ **ಕುಪಿತಃ** ಸಿಟ್ಟಾಗಿ **ನನಾದ** ಸಿಂಹಗರ್ಜನೆ ಮಾಡಿದನು. **ಕ್ಷ್ಮಾಂ** ಭೂಮಿಯನ್ನು **ದ್ಯಾಂ** ಅಂತರಿಕ್ಷವನ್ನೂ **ದಿಶಃ** ದಿಕ್ಕುಗಳನ್ನು **ಖಂ** ಆಕಾಶವನ್ನೂ **ವಿವರಾನ್** ರಸಾತಲ-ಪಾತಾಲಾದಿ ಕೆಳಗಿನ ಲೋಕಗಳನ್ನು (ಬಿಲಗಳನ್ನು) **ಸಮುದ್ರಾನ್** ಸಮುದ್ರಗಳನ್ನೂ **ವಿಚಿನ್ವನ್** ಹುಡುಕಿಯೂ **ನ ದದರ್ಶ** ಕಾಣಲಿಲ್ಲ. ।।೧೧।।

**ಅಪಶ್ಯನ್ನಿತಿ ಹೋವಾಚ ಮಯಾಽನ್ವಿಷ್ಟಮಿದಂ ಜಗತ್ ।**
**ಭ್ರಾತೃಹಾ ಮೇ ಗತೋ ನೂನಂ ಯತೋ ನಾಽವರ್ತತೇ ಪುಮಾನ್** ।।೧೨।।

**ಅಪಶ್ಯನ್** ವಿಷ್ಣುವನ್ನು ಕಾಣದೇ **ಮಯಾ** ನನ್ನಿಂದ **ಇದಂ ಜಗತ್** ಈ ಪ್ರಪಂಚವೆಲ್ಲವೂ **ಅನ್ವಿಷ್ಟಂ** ಹುಡುಕಲ್ಪಟ್ಟಿತು. **ಮೇ** ನನ್ನ **ಭ್ರಾತೃಹಾ** ಸಹೋದರ ಹಂತಕನಾದ **ಪುಮಾನ್** ವಿಷ್ಣುವು **ಯತಃ** ಯಾವ ಲೋಕಕ್ಕೆ ಹೋದರೆ **ತತಃ ನ ಆವರ್ತತೇ** ಅಲ್ಲಿಂದ ತಿರುಗಿ ಬರುವುದಿಲ್ಲವೋ **ತಂ ಲೋಕಂ** ಆ ಲೋಕಕ್ಕೆ **ಗತಃ** ಹೋಗಿರುವನು. **ನೂನಂ** ನಿಶ್ಚಯ **ಇತಿ** ಎಂದು **ಉವಾಚ ಹ** ತನಗೆ ತಾನೇ ಹೇಳಿಕೊಂಡನು. ।।೧೨।।

**ವೈರಾನುಬಂಧ ಏತಾವಾನಾಮೃತ್ಯೋರಿಹ ದೇಹಿನಾಮ್ ।**
**ಅಜ್ಞಾನಪ್ರಭವೋ ಮನ್ಯುರಹಂಮಾನೋಪಬೃಂಹಿತಃ** ।।೧೩।।

**ದೇಹಿನಾಂ** ಜೀವರಿಗೆ **ಇಹ** ಶತ್ರುಗಳಲ್ಲಿ **ವೈರಾನುಬಂಧಃ** ದ್ವೇಷದ ಅನುವೃತ್ತಿಯು **ಆಮೃತ್ಯೋಃ** ಮರಣದವರೆಗೆ **ಏತಾವಾನ್** ಅಷ್ಟೇ ಅವನು ಸತ್ತ ಮೇಲೆ ಅವನ ವಿಷಯದಲ್ಲಿ ದ್ವೇಷವು ಕಡಿಮೆಯಾಗುತ್ತ ಬರುವುದೆಂದರ್ಥ. ವೈರಾನುಬಂಧಕ್ಕೆ ಕೋಪವೇ ಕಾರಣವೆನ್ನುತ್ತಾರೆ. **ಮನ್ಯುಃ** ಕೋಪವು **ಅಜ್ಞಾನಪ್ರಭವಃ** ಅಜ್ಞಾನದಿಂದ ಹುಟ್ಟುತ್ತದೆ. ಮತ್ತು **ಅಹಂಮಾನೋಪಬೃಂಹಿತಃ** ಅಹಂಕಾರದಿಂದ ಅಭಿವೃದ್ಧವಾಗುತ್ತದೆ.

ಲಿಂಗೇರೀ ಃ- ಶ್ರೀಹರಿಯು ಸರ್ವಜ್ಞನಾಗಿದ್ದಾನೆ. ಸ್ವತಂತ್ರನಾಗಿದ್ದಾನೆ. ಅವನಲ್ಲಿ ವೈಷಮ್ಯ-ನೈರ್ಘೃಣ್ಯಗಳಿಲ್ಲ. ಅವನು ಅವರವರ ಕರ್ಮಕ್ಕೆ ಅನುಸಾರವಾಗಿ ಫಲವನ್ನು ಕೊಡುತ್ತಾನೆ. ಹೀಗಿರುವಾಗ ಹಿರಣ್ಯಕಶಿಪುವಿಗೆ ಶ್ರೀಹರಿಯ ವಿಷಯದಲ್ಲಿ ದ್ವೇಷರೂಪವಾದ ಕೋಪವಾದರೂ ಏಕೆ? ಎಂಬ ಶಂಕೆಗೆ ಅಜ್ಞಾನಪ್ರಭವಃ ಅಹಂಮಾನೋಪಬೃಂಹಿತಃ ಎಂಬುದಾಗಿ ಉತ್ತರ ನೀಡುತ್ತಿದ್ದಾರೆ. ಅಜ್ಞಾನ ಅಹಂಕಾರಗಳೇ ದ್ವೇಷಕ್ಕೆ, ದ್ವೇಷದ ಅಭಿವೃದ್ಧಿಗೆ ಕಾರಣ ಎಂದು ಅರ್ಥ. ||೧೩||

ಅವತರಣಿಕಾ- ಅಜ್ಜ-ಮುತ್ತಜ್ಜರನ್ನು ಹೊಗಳಿ ಈಗ ತಂದೆಯನ್ನು ಹೊಗಳುತ್ತಿದ್ದಾನೆ. ನಿನ್ನ ಪೂರ್ವಜರು ಯಾರೂ ಯುದ್ಧವಿಮುಖರಲ್ಲ. ದಾನವಿಮುಖರಲ್ಲವೆಂದು ವಾಮನರೂಪಿಯಾದ ಶ್ರೀಹರಿಯು ಹಿಂದೆ ಬಲಿಗೆ ಹೇಳಿದ್ದನು. ಅದರಲ್ಲಿ ಮೊದಲನೆಯದಾದ ಯುದ್ಧವಿಮುಖರಲ್ಲ ಎಂಬುದನ್ನು ಇದುವರೆಗೆ ವರ್ಣಿಸಿ ಈಗ ಎರಡನೆಯದಾದ ದಾನವಿಮುಖರಲ್ಲ ಎಂಬುದನ್ನು ವರ್ಣಿಸುತ್ತಾರೆ-

**ಪಿತಾ ಪ್ರಹ್ಲಾದಪುತ್ರಸ್ತೇ ತದ್ವಿದ್ವಾನ್ ದ್ವಿಜವತ್ಸಲಃ |**
**ಸ್ವಮಾಯುರ್ದ್ವಿಜಲಿಂಗೇಭ್ಯೋ ದೇವೇಭ್ಯೋಽದಾತ್ ಸ ಯಾಚಿತಃ ||೧೪||**

ಹೇ ಬಲಿಯೇ **ತೇ** ನಿನ್ನ **ಪಿತಾ** ತಂದೆಯಾದ **ದ್ವಿಜವತ್ಸಲಃ** ಬ್ರಾಹ್ಮಣರಲ್ಲಿ ಪ್ರೀತಿಯುಳ್ಳ **ಸಃ** ಪ್ರಸಿದ್ಧನಾದ **ಪ್ರಹ್ಲಾದಪುತ್ರಃ** ಪ್ರಹ್ಲಾದನ ಮಗನಾದ ವಿರೋಚನನು **ಯಾಚಿತಃ ಸನ್** ದೇವತೆಗಳಿಂದ ಯಾಚಿಸಲ್ಪಟ್ಟವನಾಗಿ **ತತ್** ದೇವತೆಗಳು ಬ್ರಾಹ್ಮಣವೇಷದಿಂದ ಬಂದಿರುವುದನ್ನು **ವಿದ್ವಾನ್ ಅಪಿ** ತಿಳಿದಿದ್ದರೂ **ದ್ವಿಜಲಿಂಗೇಭ್ಯಃ ಚ** ಬ್ರಾಹ್ಮಣವೇಷಧಾರಿಗಳಾದ **ದೇವೇಭ್ಯಃ** ದೇವತೆಗಳಿಗೆ **ಸ್ವಂ** ತನ್ನ **ಆಯುಃ** ಆಯುಷ್ಯವನ್ನು **ಅದಾತ್** ದಾನ ಮಾಡಿದನು.

ಲಿಂಗೇರೀ ಃ- ದಾನಶೀಲನು ತನಗೆ ಅತ್ಯಂತ ಇಷ್ಟವಾದ ತನ್ನ ಆಯುಷ್ಯದ ಅಭಿವೃದ್ಧಿಗಾಗಿ ಬೇರೆ ಬೇರೆ ವಸ್ತುಗಳನ್ನು ದಾನ ಮಾಡುತ್ತಾನೆ. ನಿಮ್ಮ ತಂದೆಯಾದರೋ ಆಯುಷ್ಯವನ್ನೇ ದಾನ ಮಾಡಿದ್ದಾನೆ. ಆದ್ದರಿಂದ ನಿಮ್ಮ ಹಿರಿಯರು ದಾನವಿಮುಖರಲ್ಲ ಎಂಬುದನ್ನು ಪ್ರತ್ಯೇಕವಾಗಿ ಹೇಳಬೇಕಿಲ್ಲವೆಂದು ಭಾವ. ||೧೪||

**ಭವಾನಾಚರಿತಾ ಧರ್ಮಾನಾಸ್ಥಿತಾನ್ ಗೃಹಮೇಧಿಭಿಃ ।**
**ಬ್ರಾಹ್ಮಣೈಃ ಪೂರ್ವಜೈಃ ಶೂರೈರನ್ಯೈಶ್ಚೋದ್ದಾಮಕೀರ್ತಿಭಿಃ ॥೧೫॥**

**ಉದ್ದಾಮಕೀರ್ತಿಭಿಃ** ಉತ್ಕೃಷ್ಟವಾದ ಕೀರ್ತಿಯುಳ್ಳ **ಪೂರ್ವಜೈಃ** ಹಿರಿಯರಾದ **ಗೃಹಮೇಧಿಭಿಃ** ಗೃಹಸ್ಥಾಶ್ರಮಿಗಳಾದ **ಬ್ರಾಹ್ಮಣೈಃ** ಬ್ರಾಹ್ಮಣರಿಂದ **ಚ** ಮತ್ತು **ಶೂರೈಃ ಅನ್ಯೈಃ** ಶೂರರಾದ ರಾಜರೇ ಮೊದಲಾದವರಿಂದ **ಆಸ್ಥಿತಾನ್** ಭಕ್ತಿಯಿಂದ ಆಚರಿಸಲ್ಪಟ್ಟ **ಧರ್ಮಾನ್** ಧರ್ಮಗಳನ್ನು **ಭವಾನ್** ನೀನೂ ಸಹ **ಆಚರಿತಾ** ಮಾಡುತ್ತಿರುವಿ. ॥೧೫॥

**ತಸ್ಮಾತ್ ತ್ವತ್ತೋ ಮಹೀಮೀಷದ್ ವೃಣೇಽಹಂ ವರದರ್ಷಭ ।**
**ಪದಾನಿ ತ್ರೀಣಿ ದೈತ್ಯೇಂದ್ರ ಸಮ್ಮಿತಾನಿ ಪದಾ ಮಮ ॥೧೬॥**

**ಹೇ ವರದರ್ಷಭ** ದಾನಿಗಳಲ್ಲಿ ಶ್ರೇಷ್ಠನೇ **ಹೇ ದೈತ್ಯೇಂದ್ರ** ದೈತ್ಯರಲ್ಲಿ ಶ್ರೇಷ್ಠನಾದ ಬಲಿಯೇ **ತಸ್ಮಾತ್** ನೀನು ಪುಣ್ಯವಂತರ ವಂಶದಲ್ಲಿ ಹುಟ್ಟಿದವನು ಧರ್ಮಾನುಷ್ಠಾನ-ಪರನೂ ಆಗಿರುವುದರಿಂದ **ತ್ವತ್ತಃ** ನಿನ್ನಿಂದ **ಅಹಂ** ನಾನು **ಈಷತ್** ಅತ್ಯಲ್ಪಪರಿಮಾಣದ **ಮಹೀಂ** ಭೂಮಿಯನ್ನು **ವೃಣೇ** ಇಚ್ಛಿಸುತ್ತೇನೆ. ಎಷ್ಟೆಂದರೆ ವಿಶದಪಡಿಸುವನು **ಮಮ** ನನ್ನ **ಪದಾ** ಹೆಜ್ಜೆಯಿಂದ **ಸಮ್ಮಿತಾನಿ** ಅಳೆದ **ತ್ರೀಣಿ ಪದಾನಿ** ಮೂರು ಹೆಜ್ಜೆಗಳನ್ನು **ವೃಣೇ** ಬೇಡುವೆನು.

ಸತ್ಯ ಃ- ಪದಾನಿ ಎಂಬಲ್ಲಿಯ ಬಹುವಚನದಿಂದ ಎಷ್ಟು ಪಾದಗಳ ಭೂಮಿಯೋ ಎಂದು ಹೆದರುವ ಕಾರಣವಿಲ್ಲ ಎಂದು ತಿಳಿಸಲು ತ್ರೀಣಿ ಎಂದು ಹೇಳಿರುವರು.

ಏತೇನ ಎಂದು ಹೇಳದಿರುವುದರಿಂದ ಅಂದರೆ ಈಗ ತೋರುವಷ್ಟು ಪಾದಗಳಿಂದ ಎಂದು ಹೇಳದೇ ಇದ್ದುದರಿಂದ, ದೊಡ್ಡವಾದ ತ್ರಿವಿಕ್ರಮನ ಪಾದಗಳು ನನ್ನವೇ ಆದ್ದರಿಂದ ನನ್ನ ಪಾದದಿಂದ ಅಳೆದ ಮೂರು ಪಾದ ಎಂಬ ಮಾತು ಸುಳ್ಳಾಗಲಾರದು ಎಂದು ಅಂತರಂಗಾಭಿಪ್ರಾಯ. ॥೧೬॥

**ನಾನ್ಯಂ ತೇ ಕಾಮಯೇ ರಾಜನ್ ವದಾನ್ಯಾಜ್ಜಗದೀಶ್ವರಾತ್ ।**
**ನೈನಃ ಪ್ರಾಪ್ನೋತಿ ವೈ ವಿದ್ವಾನ್ಯಾವದರ್ಥಪ್ರತಿಗ್ರಹಾತ್ ॥೧೭॥**

**ಹೇ ರಾಜನ್** ರಾಜನಾದ ಬಲಿಯೇ **ವದಾನ್ಯಾತ್** ದಾನಶೂರನಾದ **ಜಗದೀಶ್ವರಾತ್** ಚಕ್ರವರ್ತಿಯಾದ **ತೇ** ನಿನ್ನಿಂದ **ಅನ್ಯಂ** ಮತ್ತೆ ಯಾವ ಇಷ್ಟವನ್ನೂ **ನ ಕಾಮಯೇ** ಅಪೇಕ್ಷಿಸುವುದಿಲ್ಲ. ರಾಜರು ಕೊಟ್ಟ ದಾನವನ್ನು ತೆಗೆದುಕೊಂಡರೆ ಪಾಪವು ಬರುವುದಿಲ್ಲವೇ? ಎಂದರೆ ಇಲ್ಲವೆನ್ನುತ್ತಾರೆ. **ವಿದ್ವಾನ್** ಜ್ಞಾನಿಯಾದ ಯಾಚಕನು **ಯಾವದರ್ಥಪ್ರತಿಗ್ರಹಾತ್** ತನ್ನ ಉಪಯೋಗಕ್ಕೆ ಅಗತ್ಯವಾದದ್ದನ್ನು ಮಾತ್ರ ಸ್ವೀಕರಿಸುವುದರಿಂದ **ಏನಃ** ಪಾಪವನ್ನು **ನ ಪ್ರಾಪ್ನೋತಿ** ಹೊಂದುವುದಿಲ್ಲ **ವೈ** ಇದು ಶ್ರುತಿಸಿದ್ಧವಾಗಿದೆ.

ಲಿಂಗೇರೀ ಃ- **ವಿದ್ವಾನ್** ಎಂಬುದರಿಂದ ಬರುವ ಪಾಪವನ್ನು ಜ್ಞಾನವು ಸುಡಬಲ್ಲುದೆಂದು ತಿಳಿಸಿರುವರು. ಬ್ರಾಹ್ಮಣನೊಬ್ಬನು ತನ್ನ ಪ್ರಾಣಹೋಗುತ್ತಿದ್ದಾಗ ಚರ್ಮಕಾರನ ಚರ್ಮಚೀಲದಲ್ಲಿಯ ಬೆಂದ ಹುರಳಿಕಾಳುಗಳನ್ನು ಬೇಡಿ ತಿಂದನು. ಅದರಿಂದ ಆ ಬ್ರಾಹ್ಮಣನಿಗೆ ಬಲವು ಬಂದಿತು. ನಂತರ ಆ ಚರ್ಮಕಾರನು ಕುಡಿಯಲು ನೀರನ್ನು ಕೊಟ್ಟರೆ ಅಶುದ್ಧವಾದ ಆ ನೀರನ್ನು ಬೇಡವೆಂದನು. ನನಗೆ ಬೇಕಾದಷ್ಟು ಮಾತ್ರ ನಾನು ತೆಗೆದುಕೊಂಡದ್ದರಿಂದ ನನಗೆ ಯಾವುದೇ ರೀತಿಯಾದ ಪಾಪವು ಬರುವುದಿಲ್ಲ. ಬಲವು ಬಂದಮೇಲೂ ಅಶುದ್ಧವಾದುದನ್ನು ಸ್ವೀಕರಿಸಿದರೆ ಅದರಿಂದ ಪಾಪವು ಬರುತ್ತದೆ. ಆದ್ದರಿಂದ ನೀರನ್ನು ಬೇಡವೆಂದ. ''ಅಜೀವಿಷ್ಯನ್ನಿಮಾನಖಾದನ್ ಕಾಮಮುದಕಮ್'' ಇತ್ಯಾದಿ ಶ್ರುತಿಯು ಈ ವಿಷಯದಲ್ಲಿ ಪ್ರಸಿದ್ಧವೆಂದು ಸೂಚಿಸಿರುವರು. ।।೧೭।।

**ಬಲಿರುವಾಚ**

**ಅಹೋ ಬ್ರಾಹ್ಮಣದಾಯಾದ ವಾಚಸ್ತೇಽವೃದ್ಧಸಮ್ಮತಾಃ ।**
**ತ್ವಂ ಬಾಲೋ ಬಾಲಿಶಮತಿಃ ಸ್ವಾರ್ಥಂ ಪ್ರತ್ಯಬುಧೋ ಯಥಾ ।।೧೮।।**

**ಅಹೋ** ಆಶ್ಚರ್ಯ **ಹೇ ಬ್ರಾಹ್ಮಣದಾಯಾದ** ಬ್ರಾಹ್ಮಣಪುತ್ರನೇ **ತೇ** ನಿನ್ನ **ವಾಚಃ** ಮೂರು ಹೆಜ್ಜೆ ಭೂಮಿಯು ಬೇಕೆಂಬ ಮಾತುಗಳು **ಅವೃದ್ಧಸಮ್ಮತಾಃ** ದ್ರವ್ಯವನ್ನು ಸಂಪಾದಿಸಬೇಕೆಂಬ ಮನಸ್ಸುಳ್ಳ ಹಿರಿಯರಿಗೆ ಸಮ್ಮತವಲ್ಲ **ಯಥಾ** ಏಕೆಂದರೆ **ತ್ವಂ** ನೀನು **ಬಾಲಃ** ಹುಡುಗನಾಗಿರುವಿ, ಬಾಲಕರಾಗಿದ್ದರೂ ಧ್ರುವ ಮುಂತಾದವರು ಬುದ್ಧಿವಂತರೇ ಆಗಿದ್ದಾರೆ, ಆದ್ದರಿಂದ ಬಾಲ್ಯವು ಪ್ರಯೋಜಕವಲ್ಲ ಎಂದರೇ ಹೇಳುತ್ತಾರೆ **ಬಾಲಿಶಮತಿಃ ಚ** ಹುಡುಗಬುದ್ಧಿ ಮೂರ್ಖಬುದ್ಧಿಯವನು ನೀನು **ಸ್ವಾರ್ಥಂ ಪ್ರತಿ** ನಿನ್ನ ಪ್ರಯೋಜನವನ್ನು **ಅಬುಧಃ** ತಿಳಿಯದ ಅಜ್ಞಾನಿಯು ನಿನ್ನ ಬುದ್ಧಿಯು ಸ್ವಾರ್ಥವನ್ನು ಅರಿಯಲಾಗದು ಎಂದರ್ಥ.

ಸತ್ಯ ಃ- ಹೀಗೆ ಬಲಿಯು ಈಶ್ವರನ ತಿರಸ್ಕಾರ ಮಾಡುವುದರಿಂದ ತನ್ನ ಬಂಧನಕ್ಕೆ ತಾನೇ ಬೀಜವನ್ನು ಬಿತ್ತಿಕೊಂಡಂತಾಯಿತು ಎಂದು ತಿಳಿಯಬೇಕು.

''ದಾಯಾದೌ ಸುತಬಾಂಧವೌ'' ಎಂದು ಕೋಶವಿದೆ. ''ಬಾಲಿಶಃ ಶಾವಕೇ ಮೂರ್ಖೇ'' ಎಂದು ವಿಶ್ವವಿದೆ. ।।೧೮।।

ನನ್ನದು ಹುಡುಗ ಬುದ್ಧಿ ನನಗೆ ನನ್ನ ಪ್ರಯೋಜನದ ಅರಿವಿಲ್ಲವೆಂಬುದು ನಿನಗೆ ಹೇಗೆ ತಿಳಿಯಿತು ಎಂದರೆ ಹೇಳುತ್ತಾರೆ-

**ಮಾಂ ವಚೋಭಿಃ ಸಮಾರಾಧ್ಯ ಲೋಕಾನಾಮೇಕಮೀಶ್ವರಮ್ ।**
**ಪದತ್ರಯಂ ವೃಣೀತೇ ಯೋಽಬುದ್ಧಿಮಾನ್ ದ್ವೀಪದಾಶುಷಮ್ ।।೧೯।।**

**ಲೋಕಾನಾಂ** ಮೂರು ಲೋಕಗಳಿಗೂ **ಏಕಂ** ಪ್ರತಿದ್ವಂದ್ವಿ ಇಲ್ಲದ **ಈಶ್ವರಂ** ಚಕ್ರವರ್ತಿಯಾದ **ದ್ವೀಪದಾಶುಷಂ** ದ್ವೀಪಗಳನ್ನೇ ಕೊಡುವ **ಮಾಂ** ನನ್ನನ್ನು **ವಚೋಭಿಃ** ಕುಲಪ್ರಶಂಸಕವಾದ ಮಾತುಗಳಿಂದ **ಸಮಾರಾಧ್ಯ** ಸಂತೋಷಪಡಿಸಿ **ಯಃ** ಯಾವ ನೀನು **ಪದತ್ರಯಂ ವೃಣೀತೇ** ಮೂರು ಹೆಜ್ಜೆ ಭೂಮಿ ಬೇಡುವಿಯೋ **ಸಃ** ಆ ನೀನು **ಅಬುದ್ಧಿಮಾನ್** ಅಜ್ಞಾನಿಯು ಎಂದು ತಿಳಿಯಿತು.

ವಿಶೇಷ :- ಬುದ್ಧಿಮಾನಿವ ದಾಶುಷಂ ಎಂಬ ಪಾಠದಲ್ಲಿ **ದಾಶುಷಂ** ದಾನಶೀಲನಾದ ನನ್ನನ್ನು ಮೂರುಪಾದ ಭೂಮಿ ಕೇಳುವ ನೀನು **ಬುದ್ಧಿಮಾನ್ ಇವ** ತುಂಬ ಬುದ್ಧಿವಂತನಂತೆ. ಎಂದು ಅಪಹಾಸಮಾಡುತ್ತಿರುವನು. ಅಜ್ಞಾನಿ ಎಂದು ಅರ್ಥ. ।।೧೯।।

ಅವತರಣಿಕಾ- ನಿನ್ನಿಂದ ಇಷ್ಟು ಸಾಕು. ಮತ್ತು ಬೇರೆಯವರಿಂದ ಬೇರೆಯದನ್ನು ತೆಗೆದುಕೊಳ್ಳುತ್ತೇನೆ. ಅಥವಾ ಸಮಯಾಂತರದಲ್ಲಿ ನಿನ್ನಿಂದಲೇ ತೆಗೆದುಕೊಳ್ಳುವೆ ಎನ್ನಬೇಡ ಎಂದು ಬಲಿಯು ಹೇಳುತ್ತಾನೆ-

**ನ ಪುಮಾನ್ ಮಾಮನುವ್ರಜ್ಯ ಭೂಯೋ ಯಾಚಿತುಮರ್ಹತಿ ।**
**ತಸ್ಮಾದ್ ವೃತ್ತಿಕರೀಂ ಭೂಮಿಂ ವಟೋ ಕಾಮಂ ಪ್ರತೀಚ್ಛ ಮೇ ।।೨೦।।**

**ಪುಮಾನ್** ಯಾಚಕನಾದ ಪುರುಷನು **ಮಾಂ** ಚಕ್ರವರ್ತಿಯೂ ದಾನಶೂರನೂ ಆದ ನನ್ನನ್ನು **ಅನುವ್ರಜ್ಯ** ತನ್ನ ಜೀವನಕ್ಕಾಗಿ ಬೇಡಲು ಬಂದು **ಭೂಯಃ** ಮತ್ತೆ **ಯಾಚಿತುಂ** ನನ್ನನ್ನಾಗಲಿ ಇತರರನ್ನಾಗಲಿ **ಯಾಚಿತುಂ ನ ಅರ್ಹತಿ** ಬೇಡಲು ಯೋಗ್ಯನಾಗಲಾರ. **ತಸ್ಮಾತ್** ಒಂದೇ ಸಲ ಮತ್ತೆ ಯಾಚಿಸದಿರುವಷ್ಟು ಕೊಡಬಲ್ಲೆನಾದ್ದರಿಂದ **ಹೇ ವಟೋ** ಬ್ರಹ್ಮಚಾರಿಯೇ **ಕಾಮಂ** ಯಥೇಚ್ಛವಾಗಿ **ವೃತ್ತಿಕರೀಂ** ನೀನು ಬದುಕಿರುವಷ್ಟು ಕಾಲವೂ ಜೀವನಕ್ಕೆ ಸಾಕಾಗುವ **ಭೂಮಿಂ** ಭೂಮಿಯನ್ನು **ಮೇ** ನನ್ನಿಂದ **ಪ್ರತೀಚ್ಛ** ಪಡೆದುಕೋ ನಿನ್ನ ಮೂರ್ಖತನ ಬಿಡು ಎಂದಭಿಪ್ರಾಯ. ।।೨೦।।

ಸತ್ಯ :- ಹೀಗೆ ಬಲಿಯು ಹೇಳಿದ ನಂತರ ವೃತ್ತಿಕರಿಯಾದ ಭೂಮಿಯನ್ನು ಪಡೆಯುವುದರಿಂದಲೂ ಮನಸ್ಸು ತೃಪ್ತವಾಗುವುದಿಲ್ಲ ಎಂದು ಹೇಳುತ್ತಿದ್ದಾನೆ.

ಛಲಾರೀ :- ಮತ್ತೆ ನಿಸ್ಪೃಹತೆಯನ್ನೇ ಆವಿಷ್ಕಾರ ಮಾಡುತ್ತಾ ವಾಮನನು ಮಾತನಾಡುತ್ತಿದ್ದಾನೆ.

ಲಿಂಗೇರೀ :- ಹೀಗೆ ಬಲಿಯು ಹೇಳಿದ ಮೇಲೆಯೂ ವಾಮನನು ಅಲಂಬುದ್ಧಿ-ರಹಿತನಾದವನಿಗೆ ತನ್ನ ಉಪಜೀವನಕ್ಕೆ ಸಾಕಾಗುವಷ್ಟು ಭೂಮಿಯಿಂದಲೂ ತೃಪ್ತಿಯಾಗುವುದಿಲ್ಲ ಎಂಬುದನ್ನು ಕೈಮುತ್ಯದಿಂದ ಹೇಳುತ್ತಿದ್ದಾನೆ.

**ಶ್ರೀಭಗವಾನುವಾಚ**

**ಯಾವಂತೋ ವಿಷಯಾಃ ಪ್ರೇಷ್ಠಾಸ್ತ್ರಿಲೋಕ್ಯಾಮಜಿತೇಂದ್ರಿಯಮ್ ।**
**ನ ಶಕ್ನುವಂತಿ ತೇ ಸರ್ವೇ ಪ್ರತಿಪೂರಯಿತುಂ ನೃಪ ॥೨೦॥**

**ಹೇ ನೃಪ** ಬಲಿಯೇ **ತ್ರಿಲೋಕ್ಯಾಂ** ಮೂರು ಲೋಕಗಳಲ್ಲಿ **ಪ್ರೇಷ್ಠಾಃ** ಅತ್ಯಂತ ಪ್ರಿಯವಾದ **ಯಾವಂತಃ ವಿಷಯಾಃ** ಭೋಗಸಾಮಗ್ರಿಗಳು ಎಷ್ಟು ಇವೆಯೋ **ತೇ ಸರ್ವೇ** ಅವೆಲ್ಲವೂ **ಅಜಿತೇಂದ್ರಿಯಂ ಪ್ರತಿ** ಅಲಂಬುದ್ಧಿಯಿಲ್ಲದ ಮನೋನಿಗ್ರಹವಿಲ್ಲದ ಪುರುಷನನ್ನು **ಪೂರಯಿತುಂ** ತೃಪ್ತಿಪಡಿಸಲು **ನ ಶಕ್ನುವಂತಿ** ಸಮರ್ಥವಾಗಲಾರವು. ತೃಪ್ತಿ ಇಲ್ಲದವನಿಗೆ ಎಷ್ಟು ಕೊಟ್ಟರೂ ಸಾಕೆನಿಸುವುದಿಲ್ಲವೆಂದು ಭಾವ. ॥೨೦॥

**ತ್ರಿಭಿಃ ಕ್ರಮೈರಸಂತುಷ್ಟೋ ದ್ವೀಪೇನಾಽಪಿ ನ ಪೂರ್ಯತೇ ।**
**ನವವರ್ಷಸಮೇತೇನ ಸಪ್ತದ್ವೀಪಧರೇಚ್ಛಯಾ ॥೨೧॥**

**ಹೇ ನೃಪ** ಬಲಿಯೇ **ತ್ರಿಭಿಃ ಕ್ರಮೈಃ** ತನಗೆ ಬೇಕಾದ ಮೂರು ಹೆಜ್ಜೆ ಭೂಮಿಯಿಂದ **ಅಸಂತುಷ್ಟಃ** ಸಂತೋಷಪಡದ ಪುರುಷನು **ಸಪ್ತದ್ವೀಪಧರೇಚ್ಛಯಾ** ಏಳು ದ್ವೀಪಗಳುಳ್ಳ ಭೂಮಿಯ ಆಸೆಯಿಂದ **ನವವರ್ಷಸಮೇತೇನ** ಭರತವರ್ಷ ಮೊದಲಾದ ಒಂಭತ್ತು ಖಂಡಗಳಿಂದ ಕೂಡಿದ **ದ್ವೀಪೇನ ಅಪಿ** ಜಂಬೂದ್ವೀಪದಿಂದಲೂ **ನ ಪೂರ್ಯತೇ** ತೃಪ್ತಿಯಾಗುವುದಿಲ್ಲ.

♦ ನವವರ್ಷಸಮೇತೇನ ಎಂಬುದರಿಂದ ಜಂಬೂದ್ವೀಪವು ನದಿಯ ಮಧ್ಯದಲ್ಲಿರುವ ಸಣ್ಣದಾದ ದ್ವೀಪವಲ್ಲ ಎಂದು ತಿಳಿಸುತ್ತಿದ್ದಾರೆ.

♦ ಯಾಕೆ ತೃಪ್ತನಾಗುವದಿಲ್ಲ ಎಂಬುದನ್ನು ಸಪ್ತದ್ವೀಪಧರೇಚ್ಛಯಾ ಎಂಬುದರಿಂದ ತಿಳಿಸುತ್ತಿದ್ದಾರೆ. ಏಳುದ್ವೀಪಗಳ ಆಸೆ ಅವನಿಗಿರುವುದರಿಂದ ಒಂದು ದ್ವೀಪ ಸಿಕ್ಕಮಾತ್ರಕ್ಕೆ ಅವನು ತೃಪ್ತನಾಗುವುದಿಲ್ಲ ಎಂದು ಅಭಿಪ್ರಾಯ. ॥೨೧॥

ಏಳು ದ್ವೀಪಗಳು ಸಿಕ್ಕರೂ ತೃಪ್ತಿ ಪಡುವದಿಲ್ಲವೆಂದು ತಿಳಿಸುತ್ತಾರೆ-

**ಸಪ್ತದ್ವೀಪಾಧಿಪತಯೋ ನೃಪಾ ವೈನ್ಯಗದಾದಯಃ ।**
**ಅರ್ಥೈಃ ಕಾಮೈರ್ಗತಾ ನಾಂತಂ ತೃಷ್ಣಾಯಾ ಇತಿ ನಃ ಶ್ರುತಮ್ ॥೨೩॥**

**ಸಪ್ತದ್ವೀಪಾಧಿಪತಯಃ** ಏಳು ದ್ವೀಪಗಳಿಗೆ ರಾಜರಾಗಿದ್ದ **ವೈನ್ಯಗದಾದಯಃ** ವೇನನ ಮಗನಾದ ಪೃಥು-ಗದ ಮೊದಲಾದ **ನೃಪಾಃ** ರಾಜರು **ಅರ್ಥೈಃ** ಹಣದಿಂದ **ಕಾಮೈಃ ಚ** ವಿಷಯಭೋಗಗಳಿಂದ **ತೃಷ್ಣಾಯಾಃ** ಆಸೆಯ **ಅಂತಂ** ಕೊನೆಯನ್ನು **ನ ಗತಾಃ** ಹೊಂದಲಿಲ್ಲ **ಇತಿ** ಎಂದು **ನಃ** ನಮ್ಮಿಂದ **ಶ್ರುತಂ** ಕೇಳಲ್ಪಟ್ಟಿದೆ. ಆದ್ದರಿಂದ ಆಸೆಗೆ ಕೊನೆ ಇಲ್ಲವೆಂದು ಭಾವ. ॥೨೩॥

ಸಂತೋಷ ಎಂಬ ಶಬ್ದದ ಅರ್ಥವನ್ನು ತಿಳಿಸುತ್ತ ಅಲಂಬುದ್ಧಿಯೇ ಸುಖಕ್ಕೆ ಸಾಧನವೆನ್ನುತ್ತಾರೆ-

**ಯದೃಚ್ಛಯೋಪಪನ್ನೇನ ಸಂತುಷ್ಟೋ ವರ್ತತೇ ಸುಖಮ್ ।**
**ನಾಽಸಂತುಷ್ಟಸ್ತ್ರಿಭಿರ್ಲೋಕೈರಜಿತಾತ್ಮೋಪಸಾದಿತೈಃ ॥೨೪॥**

**ಯದೃಚ್ಛಯಾ** ಶ್ರೀಹರಿಯ ಇಚ್ಛೆಯಿಂದ **ಉಪಪನ್ನೇನ** ಒದಗಿಬಂದದ್ದರಿಂದ **ಸಂತುಷ್ಟಃ** ತೃಪ್ತನಾದ ಮನುಷ್ಯನು **ಸುಖಂ ವರ್ತತೇ** ಸುಖವಾಗಿ ಇರುವನು. **ಉಪಸಾದಿತೈಃ** ಸಂಪಾದಿಸಿದ **ತ್ರಿಭಿಃ ಲೋಕೈಃ** ಮೂರು ಲೋಕಗಳಿಂದಲೂ **ಅಸಂತುಷ್ಟಃ** ತೃಪ್ತಿ ಇಲ್ಲದವನು **ಅಜಿತಾತ್ಮಾ** ಮನಸ್ಸನ್ನು ಗೆಲ್ಲದವನು **ನ ಸುಖಂ ವರ್ತತೇ** ಸುಖದಿಂದ ಇರುವುದಿಲ್ಲ.

ಲಿಂಗೇರೀ ಃ- ''ಯದೃಚ್ಛಾ ಹಿ ತದಿಚ್ಛಾ ಸ್ಯಾತ್'' ಎಂಬ ಪ್ರಮಾಣದಂತೆ ಯದೃಚ್ಛಾ ಎಂಬುದಕ್ಕೆ ಶ್ರೀಹರಿಯ ಇಚ್ಛೆ ಎಂದು ಅರ್ಥ.

ಈ ಸಂತೋಷ ಎಂಬ ಧರ್ಮವು ''ಈಶಾವಾಸ್ಯಮಿದಂ ಸರ್ವಂ'' ''ತೇನ ತ್ಯಕ್ತೇನ ಭುಂಜೀಥಾಃ'' ಎಂಬ ಈಶಾವ್ಯಾಸ್ಯೋಪನಿಷತ್ತಿನಿಂದ ವಿಹಿತವಾಗಿದೆಯಾದ್ದರಿಂದ ಐಹಿಕ-ಪಾರತ್ರಿಕ ಆನಂದಕ್ಕೆ ಕಾರಣವೆಂಬುದನ್ನು ಭಗವಂತನು ಸ್ಪಷ್ಟಪಡಿಸಿರುವನು. ॥೨೪॥

**ಪುಂಸೋಽಯಂ ಸಂಸೃತೇರ್ಹೇತುರಸಂತೋಷೋಽರ್ಥಕಾಮಯೋಃ ।**
**ಯದೃಚ್ಛಯೋಪಪನ್ನೇನ ಸಂತೋಷೋ ಮುಕ್ತಯೇ ಸ್ಮೃತಃ ॥೨೫॥**

**ಅಯಂ** ಈ **ಅರ್ಥಕಾಮಯೋಃ** ಅರ್ಥಕಾಮಗಳ **ಅಸಂತೋಷಃ** ಅಸಂತೃಪ್ತಿಯು **ಪುಂಸಃ** ಮನುಷ್ಯನಿಗೆ **ಸಂಸೃತೇಃ ಹೇತುಃ** ಸಂಸಾರಕ್ಕೆ ಕಾರಣವು **ಯದೃಚ್ಛಯಾ** ಶ್ರೀಹರಿಯ ಇಚ್ಛೆಯಿಂದ **ಉಪಪನ್ನೇನ** ದೊರೆತದ್ದರಿಂದ **ಸಂತೋಷಃ** ಅರ್ಥ-ಕಾಮುಗಳಲ್ಲಿ ಅಲಂಬುದ್ಧಿಯು **ಮುಕ್ತಿಯೇ ಸ್ಮೃತಃ** ಮೋಕ್ಷಕ್ಕೆ ಕಾರಣವೆಂದು ಶಾಸ್ತ್ರದಲ್ಲಿ ಹೇಳಿದೆ.

**ಯದೃಚ್ಛಾಲಾಭತುಷ್ಟಸ್ಯ ತೇಜೋ ವಿಪ್ರಸ್ಯ ವರ್ಧತೇ ।**
**ತತ್ ಪ್ರಶಾಮ್ಯತ್ಯಸಂತೋಷಾದಂಭಸೇವಾಶುಶುಕ್ಷಣಿಃ ॥೨೬॥**

**ಯದೃಚ್ಛಾಲಾಭತುಷ್ಟಸ್ಯ** ಶ್ರೀಹರಿಯ ಇಚ್ಛೆಯಿಂದ ಲಬ್ಧವಾದ ಪದಾರ್ಥಗಳಿಂದ ಸಂತುಷ್ಟನಾದ **ವಿಪ್ರಸ್ಯ** ಬ್ರಾಹ್ಮಣನ **ತೇಜಃ** ಬ್ರಹ್ಮವರ್ಚಸ್ಸು **ವರ್ಧತೇ** ಅಭಿವೃದ್ಧಿ ಹೊಂದುತ್ತದೆ **ಅಸಂತೋಷಾತ್** ಅತೃಪ್ತಿಯಿಂದ **ತತ್** ಆ ಬ್ರಹ್ಮವರ್ಚಸ್ಸು **ಅಂಭಸಾ** ನೀರಿನಿಂದ **ಆಶುಶುಕ್ಷಣಿಃ** ಇವ ಬೆಂಕಿಯಂತೆ **ಪ್ರಶಾಮ್ಯತಿ** ನಷ್ಟವಾಗುತ್ತದೆ.

ಲಿಂಗೇರೀ ಃ- ವೈರಾಗ್ಯವು ಅಲಂಬುದ್ಧಿಗೆ ಕಾರಣವಾಗಿದೆ. ಅಂಥ ವೈರಾಗ್ಯವು ಇಲ್ಲದಿದ್ದುದರಿಂದ ಅದರ ಕಾರ್ಯವಾದ ಭಕ್ತಿ, ಜ್ಞಾನ ಮೊದಲಾದವುಗಳು

ಹೋಗುವವೆಂದರ್ಥ. ಅವರವರ ಅದೃಷ್ಟಕ್ಕೆ ಪ್ರೇರಕನಾದ ಶ್ರೀಹರಿಯು ಒದಗಿಸಿದ ದ್ರವ್ಯಾದಿಗಳಲ್ಲಿ ಅಲಂಬುದ್ಧಿಯೇ ಜ್ಞಾನ-ಭಕ್ತಿ-ಬ್ರಹ್ಮವರ್ಚಸ್ಸು ಮುಂತಾದ ಗುಣಗಳಿಗೆ ಕಾರಣವಾಗುತ್ತದೆ. ಆದ್ದರಿಂದ ಅತೃಪ್ತಿಯು ಅನರ್ಥಕ್ಕೆ ಕಾರಣ ಎಂದು ತಿಳಿಸಿದಂತಾಯಿತು.

**ತಸ್ಮಾತ್ ತ್ರೀಣಿ ಪದಾನ್ಯೇವ ವೃಣೇ ತ್ವದ್ವರದರ್ಷಭಾತ್ ।**
**ಏತಾವತೈವ ಸಿದ್ಧೋಽಹಂ ವಿತ್ತಂ ಯಾವತ್ಪ್ರಯೋಜನಮ್ ॥೨೭॥**

**ತಸ್ಮಾತ್** ಶ್ರೀಹರಿಯ ಇಚ್ಛೆಯಿಂದ ದೊರೆತದ್ದೇ ನಮ್ಮ ಪ್ರಯೋಜನಕ್ಕೆ ಸಾಕಾಗುವುದರಿಂದ ಅಷ್ಟು ಪಡೆಯುವುದರಿಂದ ಬ್ರಹ್ಮವರ್ಚಸ್ಸು ಅಭಿವೃದ್ಧವಾಗು-ವುದರಿಂದ **ವರದರ್ಷಭಾತ್** ದಾನಿಗಳಲ್ಲಿ ಶ್ರೇಷ್ಠನಾದ **ತ್ವತ್** ನಿನ್ನಿಂದಲಾದರೂ **ತ್ರೀಣಿ ಏವ** ಮೂರೇ **ಪದಾನಿ** ಹೆಜ್ಜೆಗಳನ್ನು **ವೃಣೇ** ಸ್ವೀಕರಿಸುತ್ತೇನೆ. **ಏತಾವತಾ ಏವ** ಇಷ್ಟರಿಂದಲೇ **ಅಹಂ** ನಾನು **ಸಿದ್ಧಃ** ತೃಪ್ತನು ಕೃತಕೃತ್ಯನು **ಯಾವತ್ ಪ್ರಯೋಜನಂ** ಎಷ್ಟರಿಂದ ಪ್ರಯೋಜನವಾಗುವುದೋ **ತಾವತ್ ವಿತ್ತಂ** ಅಷ್ಟು ದ್ರವ್ಯವನ್ನು ಮಾತ್ರ **ಸ್ವೀಕುರ್ಯಾತ್** ತೆಗೆದುಕೊಳ್ಳಬೇಕು.

ಸತ್ಯ ಃ- ''ಪದಾನಿ ತ್ರೀಣಿ ದೇತ್ಯೇಂದ್ರ'' ಎಂದು ಆರಂಭಿಸಿ ''ತಸ್ಮಾತ್ ತ್ರೀಣಿ ಪದಾನ್ಯೇವ ವೃಣೇ'' ಎಂಬಲ್ಲಿಯ ವರೆಗೆ ಎಲ್ಲೆಲ್ಲಿ ಕಾಲುಗಳಿಗೆ ವಾಚಕವಾದ ಶಬ್ದವನ್ನು ಪ್ರಯೋಗಿಸುವ ಪ್ರಸಂಗ ಬಂದಿದೆಯೋ ಆ ಎಲ್ಲ ಪ್ರಸಂಗಗಳಲ್ಲಿ ಪಾ ಎಂಬಲ್ಲಿ ದೀರ್ಘವಿರುವ ಪಾದ ಎಂಬ ಶಬ್ದವನ್ನು ಪ್ರಯೋಗಿಸದೇ ಪದ ಎಂಬ ಹ್ರಸ್ವ ಇರುವ ಶಬ್ದವನ್ನು ಪ್ರಯೋಗಿಸುತ್ತಾ ಶಬ್ದದಲ್ಲಿಯೂ ವಾಮನತೆಯನ್ನು (ಹ್ರಸ್ವತೆ) ವಾಮನನು ತಿಳಿಸಿರುವನು ಎಂಬುದು ಅವನ ಚಾತುರ್ಯ.

''ತ್ರೀಣಿ ಪದಾ ವಿಚಕ್ರಮೇ'' ''ತ್ರೇಧಾ ನಿದಧೇ ಪದಮ್'' ಎಂಬ ಶ್ರುತಿಗಳು ಕೂಡಾ ಪದಪದವನ್ನು ಪ್ರಯೋಗಿಸುತ್ತಾ ಈ ವಿಷಯದಲ್ಲಿ ತಲೆ ಆಡಿಸುತ್ತವೆ. ಶ್ರುತಿಗಳು ಕೂಡಾ ಈ ವಿಷಯವನ್ನು ಆಮೋದಿಸುತ್ತವೆ ಎಂದು ತಾತ್ಪರ್ಯ.

**ಶ್ರೀಶುಕ ಉವಾಚ**

**ಇತ್ಯುಕ್ತಃ ಸ ಹಸನ್ನಾಹ ವಾಂಛಿತಂ ಪ್ರತಿಗೃಹ್ಯತಾಮ್ ।**
**ವಾಮನಾಯ ಮಹೀಂ ದಾತುಂ ಜಗ್ರಾಹ ಜಲಭಾಜನಮ್ ॥೨೮॥**

**ಇತಿ** ಈ ರೀತಿಯಾಗಿ **ಉಕ್ತಃ** ವಾಮನನಿಂದ ಹೇಳಿಸಿಕೊಂಡ **ಸಃ** ಬಲಿರಾಜನು **ಹಸನ್** ನಗುತ್ತ **ವಾಂಛಿತಂ** ನೀನು ಅಪೇಕ್ಷಿಸಿದಷ್ಟು ಭೂಮಿಯನ್ನೇ **ಪ್ರತಿಗೃಹ್ಯತಾಂ** ಸ್ವೀಕರಿಸು **ಇತಿ** ಎಂದು **ಆಹ** ಹೇಳಿದನು. ಅನಂತರ **ವಾಮನಾಯ** ವಾಮನನಿಗೆ **ಮಹೀಂ ದಾತುಂ**

ಭೂಮಿಯನ್ನು ದಾನಮಾಡಲು **ಜಲಭಾಜನಂ** ನೀರಿನ ಪಾತ್ರೆಯನ್ನು **ಜಗ್ರಾಹ** ತೆಗೆದುಕೊಂಡನು. ।।೨೮।।

ಸತ್ಯ ಃ- **ಸಹಸನ್ನಾಹ** ದಾನೋಪಯೋಗಿಯಾದ ಸನ್ನಾಹಗಳಿಂದ ಪ್ರಯತ್ನಗಳಿಂದ ಸಹಿತನಾದ ವಾಮನನೇ ಎಂದೂ ಅರ್ಥ ಮಾಡಬೇಕು. ।।೨೮।।

ವಿಷಯವನ್ನು ಬಲ್ಲ ಗುರುಗಳು ಶಿಷ್ಯನಿಗೆ ಎಚ್ಚರಿಕೆ ಕೊಡುವುದು ಆವಶ್ಯಕವೆಂದು ಜನರಿಗೆ ತಿಳಿಸಲು ಶುಕ್ರಾಚಾರ್ಯರು ಹೇಳಿದರು ಎನ್ನುತ್ತಾರೆ-

**ವಿಷ್ಣವೇ ಕ್ಷ್ಮಾಂ ಪ್ರದಾಸ್ಯಂತಮುಶನಾ ಅಸುರೇಶ್ವರಮ್ ।**
**ಜಾನಂಶ್ಚಿಕೀರ್ಷಿತಂ ವಿಷ್ಣೋಃ ಶಿಷ್ಯಂ ಪ್ರಾಹ ವಿದಾಂ ವರಃ ।।೨೯।।**

**ವಿದಾಂವರಃ** ಜ್ಞಾನಿಶ್ರೇಷ್ಠರಾದ **ಉಶನಾಃ** ಶುಕ್ರಾಚಾರ್ಯರು **ವಿಷ್ಣೋಃ** ಶ್ರೀಹರಿಯ **ಚಿಕೀರ್ಷಿತಂ** ದೇವತೆಗಳಿಗಾಗಿ ಸ್ವರ್ಗವನ್ನು ಬಲಿಯಿಂದ ಕಸಿದುಕೊಳ್ಳುವ ಅಭಿಪ್ರಾಯವನ್ನು **ಜಾನನ್** ತಿಳಿದವರಾಗಿ **ವಿಷ್ಣವೇ** ದೇವತೆಗಳ ಪಕ್ಷ ವಹಿಸಿ ಬಂದ ವಾಮನರೂಪಿಯಾದ ಶ್ರೀಹರಿಗೆ **ಕ್ಷ್ಮಾಂ** ಭೂಮಿಯನ್ನು **ಪ್ರದಾಸ್ಯಂತಂ** ಕೊಡಲು ಸಿದ್ಧನಾದ **ಅಸುರೇಶ್ವರಂ** ದೈತ್ಯರಾಜನಾದ **ಶಿಷ್ಯಂ** ಶಾಸನಕ್ಕೆ ಅರ್ಹನಾದ ಬಲಿಯನ್ನು ಕುರಿತು **ಪ್ರಾಹ** ಸಂದರ್ಭವನ್ನು ವಿವರಿಸಿ ಹೇಳಿದರು. ।।೨೯।।

**ಉಶನಾ ಉವಾಚ**

**ಏಷ ವೈರೋಚನೇ ಸಾಕ್ಷಾದ್ ಭಗವಾನ್ ವಿಷ್ಣುರವ್ಯಯಃ ।**
**ಕಶ್ಯಪಾದದಿತೇರ್ಜಾತೋ ದೇವಾನಾಂ ಕಾರ್ಯಸಾಧಕಃ ।।೩೦।।**

**ಹೇ ವೈರೋಚನೇ** ವಿರೋಚನನ ಮಗನಾದ ಬಲಿಯೇ **ಏಷಃ** ಮೂರು ಹೆಜ್ಜೆಗಳನ್ನು ಮಾತ್ರ ಕೊಡು ಎಂದು ಬೇಡುತ್ತಿರುವ ವಟುವು **ಸಾಕ್ಷಾತ್** ಉಪಚಾರವಲ್ಲದ ಪರಮಮುಖ್ಯವೃತ್ತಿಯಿಂದ **ಭಗವಾನ್** ಭಗವಚ್ಛಬ್ದವಾಚ್ಯನಾದ **ಅವ್ಯಯಃ** ಯಾವಾಗಲೂ ಪೂರ್ಣೈಶ್ವರ್ಯನಾದ **ವಿಷ್ಣುಃ** ಶ್ರೀಹರಿಯು **ಕಶ್ಯಪಾತ್** ಕಶ್ಯಪರಿಂದ **ಅದಿತೇಃ** ಅದಿತಿಯಿಂದ **ಜಾತಃ** ವ್ಯಕ್ತನಾಗಿ **ದೇವಾನಾಂ** ದೇವತೆಗಳಿಗೆ **ಕಾರ್ಯಸಾಧಕಃ** ಸ್ವರ್ಗಪ್ರಾಪ್ತಿರೂಪವಾದ ಕಾರ್ಯವನ್ನು ಸಾಧಿಸಿಕೊಡಲು ಇಲ್ಲಿಗೆ ಬಂದಿರುವನು. ।।೩೦।।

**ಪ್ರತಿಶ್ರುತಂ ತ್ವಯೈತಸ್ಮೈ ಯದನರ್ಥಮಜಾನತಾ ।**
**ನ ಸಾಧು ಮನ್ಯೇ ದೈತ್ಯಾನಾಂ ಮಹಾನುಪಗತೋಽನಯಃ ।।೩೧।।**

**ಅನರ್ಥಂ** ಈ ವಟುವಿಗೆ ಕೊಡುವ ದಾನದಿಂದ ಮುಂದೆ ಆಗಲಿರುವ ಐಶ್ವರ್ಯನಾಶ ಮತ್ತು ಬಂಧನರೂಪವಾದ ಅನರ್ಥಗಳನ್ನು **ಅಜಾನತಾ** ತಿಳಿಯದಿರುವ **ತ್ವಯಾ** ನಿನ್ನಿಂದ

**ಏತಸ್ಮೈ** ಈ ದೇವಕಾರ್ಯಸಾಧಕನಾದ ವಿಷ್ಣುವಿಗೆ **ಯತ್** ಭೂಮಿದಾನ ಮಾಡುವೆನೆಂದು ಯಾವುದು **ಪ್ರತಿಶ್ರುತಂ** ಪ್ರತಿಜ್ಞೆ ಮಾಡಲ್ಪಟ್ಟಿತ್ತೋ **ತತ್** ಅದು **ಸಾಧು ನ ಮನ್ಯೇ** ಸರಿ ಎಂದು ನಾನು ತಿಳಿಯಲಾರೆ. ಏಕೆಂದರೆ **ದೈತ್ಯಾನಾಂ** ದೈತ್ಯರಿಗೆ **ಮಹಾನ್** ಬಹುದೊಡ್ಡ **ಅನಯಃ** ಅನ್ಯಾಯವು ದುಃಖಕಾರಣವು **ಉಪಗತಃ** ಬಂದೊದಗಿರುವುದು. ।।೩೧।।

ಅನ್ಯಾಯವನ್ನೇ ಉಪಪಾದಿಸುವರು-

**ಏಷ ತೇ ಸ್ಥಾನಮೈಶ್ವರ್ಯಂ ಶ್ರುತಂ ತೇಜೋ ಯಶಸ್ಕರಮ್ ।**
**ದಾಸ್ಯತ್ಯಾಚ್ಛಿದ್ಯ ಶಕ್ರಾಯ ಮಾಯಾಮಾಣವಕೋ ಹರಿಃ** ।।೩೨।।

**ಮಾಯಾಮಾಣವಕಃ** ನಿನ್ನನ್ನು ವಂಚಿಸಬೇಕೆಂದೇ ವಟುವಾಗಿ ಬಂದಿರುವ **ಏಷಃ ಹರಿಃ** ಮೂರು ಹೆಜ್ಜೆ ಭೂಮಿ ಬೇಡಿದ ವಿಷ್ಣುವು **ತೇ** ನಿನ್ನ **ಸ್ಥಾನಂ** ಸ್ವರ್ಗವನ್ನು **ಐಶ್ವರ್ಯಂ** ಸ್ವರ್ಗಾಧಿಪತ್ಯವನ್ನು **ಶ್ರುತಂ** ಶ್ರವಣಮಾಡಿದ ಜ್ಞಾನವನ್ನು **ತೇಜಃ** ಪರಾಕ್ರಮವನ್ನು **ಯಶಸ್ಕರಂ** ಕೀರ್ತಿಜನಕವಾದುದನ್ನು **ಆಚ್ಛಿದ್ಯ** ನಿನ್ನಿಂದ ಕಿತ್ತುಕೊಂಡು **ಶಕ್ರಾಯ ದಾಸ್ಯತಿ** ಇಂದ್ರನಿಗೆ ಕೊಡುವನು. ।।೩೨।।

**ತ್ರಿಭಿಃ ಕ್ರಮೈರಿಮಾಂಲ್ಲೋಕಾನ್ ವಿಶ್ವಕಾಯಃ ಕ್ರಮಿಷ್ಯತಿ ।**
**ಸರ್ವಸ್ವಂ ವಿಷ್ಣವೇ ದತ್ವಾ ಮೂಢ ವರ್ತಿಷ್ಯಸೇ ಕಥಮ್** ।।೩೩।।

**ಹೇ ಮೂಢ** ಮುಂದಾಲೋಚನೆಯಿಲ್ಲದ ಮೂರ್ಖನೇ **ಏಷಃ** ಈ ವಾಮನನು **ವಿಶ್ವಕಾಯಃ ಸನ್** ಬ್ರಹ್ಮಾಂಡದಲ್ಲಿ ವ್ಯಾಪ್ತವಾದ ದೇಹ ಉಳ್ಳವನಾಗಿ **ತ್ರಿಭಿಃ ಕ್ರಮೈಃ** ಮೂರು ಹೆಜ್ಜೆಗಳಿಂದ **ಇಮಾನ್ ಲೋಕಾನ್** ಈ ಮೂರು ಲೋಕಗಳನ್ನು **ಕ್ರಮಿಷ್ಯತಿ** ಆಕ್ರಮಿಸುವನು **ಸರ್ವಸ್ವಂ** ನಿನ್ನದೆಲ್ಲವನ್ನೂ **ವಿಷ್ಣವೇ ದತ್ವಾ** ವಿಷ್ಣುವಿಗೆ ದಾನ ಮಾಡಿ **ಕಥಂ ವರ್ತಿಷ್ಯಸೇ** ಹೇಗೆ ಜೀವಿಸುವಿ?

ಸತ್ಯ ಃ- ಜೀವನೋಪಾಯವೇ ಇಲ್ಲದಂತಾಗುವುದು ಎಂದು ಅರ್ಥ. ಅಕಥಂ ಎಂದು ಪದಚ್ಛೇದ ಮಾಡಿಕೊಳ್ಳಬೇಕು. ಕಂ ಚ ಥಂ ಚ ಕಥೇ ನ ಸ್ತಃ ಯಸ್ಮಿನ್ ಕರ್ಮಣಿ ಅಸುಖಾನ್ನಂ ಯಥಾ ತಥಾ ವರ್ತಸೇ । ಅನ್ನವೂ ಇಲ್ಲದೇ ಸುಖವೂ ಇಲ್ಲದೇ ಇರಬೇಕಾಗುತ್ತದೆ ಎಂದು ಅರ್ಥ. ಇಷ್ಟೂ ತಿಳಿಯದ್ದರಿಂದ ಮೂಢ ಎಂದಿರುವರು.

ಮೂರು ಹೆಜ್ಜೆಯಿಂದ ಆಕ್ರಮಿಸುವ ರೀತಿಯನ್ನು ಹೇಳುವರು-

**ಕ್ರಮತೋ ಗಾಂ ಪದೈಕೇನ ದ್ವಿತೀಯೇನ ದಿವಂ ವಿಭೋಃ ।**
**ಖಂ ಚ ಕಾಯೇನ ಮಹತಾ ತಾರ್ತೀಯಸ್ಯ ಕುತೋ ಗತಿಃ** ।।೩೪।।

**ಹೇ ವಿಭೋ** ಮೂರು ಹೆಜ್ಜೆ ದಾನ ಮಾಡಲು ಸಮರ್ಥನೆಂದು ತಿಳಿದಿರುವ ಬಲಿಯೇ

**ಏಕೇನ ಪದಾ** ಒಂದು ಹೆಜ್ಜೆಯಿಂದ **ಗಾಂ** ಭೂಲೋಕವನ್ನೂ ಕೆಳಗಿನ ಲೋಕಗಳನ್ನೂ **ದ್ವಿತೀಯೇನ** ಎರಡನೆಯ ಹೆಜ್ಜೆಯಿಂದ **ದಿವಂ** ಸ್ವರ್ಗಲೋಕವನ್ನೂ ಮೇಲಿನ ಲೋಕಗಳನ್ನೂ **ಮಹತಾ** ಅತಿದೊಡ್ಡದಾದ **ವಿಭೋಃ** ವಾಮನನ **ಕಾಯೇನ** ಮಧ್ಯದೇಹದಿಂದ **ಖಂ ಚ** ಇವೆರಡರ ಮಧ್ಯದಲ್ಲಿರುವ ಆಕಾಶವನ್ನೂ ಅಂತರಿಕ್ಷವನ್ನೂ **ಕ್ರಮತಃ ಚ** ಆಕ್ರಮಿಸುವ **ಅಸ್ಯ** ಈ ವಾಮನನ **ತಾರ್ತೀಯಸ್ಯ** ಮೂರನೆಯ ಹೆಜ್ಜೆಗೆ **ಗತಿಃ** ಬೇಕಾದ ಸ್ಥಳವು **ಕುತಃ** ಎಲ್ಲಿಯದು?

ನಿನ್ನದೇನೂ ಉಳಿದಿರುವುದಿಲ್ಲವೆಂದು ಭಾವ. ಮೂರು ಪಾದ ಭೂಮಿಯನ್ನು ಕೊಡುತ್ತೇನೆಂಬ ನಿನ್ನ ಪ್ರತಿಜ್ಞೆಯೂ ಈಡೇರಲಾರದು ಎಂದು ಭಾವ. ।।೩೪।।

**ನಿಷ್ಠಾಂತಂ ನರಕಂ ಮನ್ಯೇ ಹ್ಯಪ್ರದಾತುಃ ಪ್ರತಿಶ್ರುತಮ್ ।**
**ಪ್ರತಿಶ್ರುತಸ್ಯ ಯೋಽನೀಶಃ ಪ್ರತಿಪಾದಯಿತುಂ ಭವಾನ್ ।।೩೫।।**

ಹೇ ಬಲಿಯೇ **ಯಃ ಭವಾನ್** ಯಾವ ನೀನು **ಪ್ರತಿಶ್ರುತಸ್ಯ** ಪ್ರತಿಜ್ಞೆ ಮಾಡಿದ್ದನ್ನು **ಪ್ರತಿಪಾದಯಿತುಂ** ಪೂರೈಸಲು **ಅನೀಶಃ** ಮೇಲೆ ಹೇಳಿದಂತೆ ಅಸಮರ್ಥನು **ತಸ್ಯ ತೇ** ಅಂಥ ನಿನಗೆ **ನಿಷ್ಠಾಂತಂ** ಪ್ರತಿಜ್ಞೆ ಪೂರ್ಣ ಮಾಡುವವರೆಗೂ **ನರಕಂ ಮನ್ಯೇ** ನರಕದಲ್ಲಿ ದುಃಖವೇ ಎಂದು ತಿಳಿಯುವೆ. **ಹಿ** ಏಕೆಂದರೆ **ಪ್ರತಿಶ್ರುತಂ** ಪ್ರತಿಜ್ಞೆ ಮಾಡಿದ್ದನ್ನು **ಅಪ್ರದಾತುಃ** ಕೊಡದಿರುವವನಿಗೆ **ನರಕಂ** ನರಕವೂ **ನಿಷ್ಠಾಂತಂ** ಪೂರ್ಣಮಾಡುವವರೆಗೆ **ಪ್ರತಿಶ್ರುತಂ** ಶ್ರುತಿಯಲ್ಲಿ ಪ್ರತಿಜ್ಞಾತವಾಗಿದೆ.

ವಾಚಾ ದತ್ತಂ ಮನೋದತ್ತಂ ಧಾರಾದತ್ತಂ ನ ದೀಯತೇ ।
ಷಷ್ಠಿವರ್ಷಸಹಸ್ರಾಣಿ ವಿಷ್ಠಾಯಾಂ ಜಾಯತೇ ಕೃಮಿಃ ।।

ಎಂದು ಶ್ರುತಿ ಹೇಳುತ್ತದೆ. ಮಾತಿನಿಂದ, ಮನಸ್ಸಿನಿಂದ, ಜಲಧಾರೆಯಿಂದ ಕೊಟ್ಟದ್ದನ್ನು ಯಾವನು ಕೊಡುವುದಿಲ್ಲವೋ ಅವನ ಅರವತ್ತು ಸಾವಿರ ವರ್ಷಗಳು ಮಲದಲ್ಲಿ ಕ್ರಿಮಿಯಾಗಿ ಹುಟ್ಟುತ್ತಿರುವನು. ।।೩೫।।

**ನ ತದ್ದಾನಂ ಪ್ರಶಂಸಂತಿ ಯೇನ ವೃತ್ತಿರ್ವಿಪದ್ಯತೇ ।**
**ದಾನಂ ಯಜ್ಞಸ್ತಪಃ ಕರ್ಮ ಲೋಕವೃತ್ತಿಮತೋ ಯತಃ ।।೩೬।।**

**ಯೇನ** ಯಾವ ದಾನದಿಂದ **ವೃತ್ತಿಃ** ಜೀವನೋಪಾಯವು **ವಿಪದ್ಯತೇ** ನಷ್ಟ ಆಗುವದೋ **ತದ್ದಾನಂ** ಅಂತಹ ದಾನವನ್ನು **ನ ಪ್ರಶಂಸಂತಿ** ಜ್ಞಾನಿಗಳಾಗಲಿ ಶ್ರುತಿ-ಸ್ಮೃತಿಗಳಾಗಲಿ ಹೊಗಳುವುದಿಲ್ಲ (ಮೆಚ್ಚುವುದಿಲ್ಲ) **ಯತಃ** ಏಕೆಂದರೆ **ಲೋಕವೃತ್ತಿಮತಃ** ಲೋಕದಲ್ಲಿ ಜೀವನೋಪಾಯ ಉಳ್ಳವನಿಗೆ **ದಾನಂ** ದಾನವು **ಯಜ್ಞಃ** ಯಜ್ಞವು **ತಪಃ** ತಪಸ್ಸು **ಕರ್ಮ** ಕರ್ಮಗಳು **ವಿಧೀಯತೇ** ಶಾಸ್ತ್ರದಲ್ಲಿ ವಿಹಿತವಾಗಿದೆ.

♦ ವೃತ್ತಿಶಬ್ದಕ್ಕೆ ಜೀವನ ಎಂದರ್ಥ ಇಟ್ಟುಕೊಂಡಾಗ ''ಸಂಭಾವಿತಸ್ಯ ಚಾಕೀರ್ತಿರ್ಮರಣಾದತಿರಿಚ್ಯತೇ'' ಎಂದಿರುವುದರಿಂದ ದಾನಶೂರನೆಂದು ಸಂಭಾವಿತನಾದ ನಿನಗೆ ದಾನ ಮಾಡಲಾಗಲಿಲ್ಲವೆಂಬ ಅಪಕೀರ್ತಿಯು ಸಾವಿಗಿಂತ ಮಿಗಿಲಾಗಿದ್ದರಿಂದ ನೀನು ಬದುಕಿದ್ದೂ ಸತ್ತಂತೆಯೇ ಎಂದರ್ಥ.

♦ ''ದಾನಂ ಯಜ್ಞಾನಾಂ ವರೂಥಂ'' ಎಂದು ದಾನವು ವಿಹಿತವಾಗಿದೆ. ''ದಾನೇನಾರಾತೀರಪಾನುದಂತ ದಾನೇನ ದ್ವಿಷಂತೋ ಮಿತ್ರಾ ಭವಂತಿ ದಾನೇ ಸರ್ವಂ ಪ್ರತಿಷ್ಠಿತಂ ತಸ್ಮಾದ್ದಾನಂ ಪರಮಂ ವದಂತಿ'' ಎಂಬ ಶ್ರುತಿಯಲ್ಲಿ ಕಂಡು ಬರುವ ದಾನದ ಪ್ರಶಂಸೆಯೂ ಜೀವನನಾಶಕಾರಿಯಲ್ಲದ ದಾನದ್ದೇ ಹೊರತು ಜೀವನ ನಾಶಕಾರಿಯಾದ ದಾನದ್ದಲ್ಲ. ಜೀವನೋಪಾಯವಿದ್ದರಲ್ಲವೇ ದಾನಾದಿವಿಧಿಯು ಸಾರ್ಥಕವಾಗುವುದು ಎಂದು ಅಭಿಪ್ರಾಯ. ।।೩೬।।

**ಧರ್ಮಾಯ ಯಶಸೇಽರ್ಥಾಯ ಕಾಮಾಯ ಸ್ವಜನಾಯ ಚ ।**
**ಪಂಚಧಾ ವಿಭಜನ್ ವಿತ್ತಮಿಹಾಮುತ್ರ ಚ ಮೋದತೇ ।।೩೭।।**

**ಧರ್ಮಾಯ** ಸತ್ಪಾತ್ರರಾದ ಬ್ರಾಹ್ಮಣರಿಗೆ ದಾನ ಮಾಡಿ ಪುಣ್ಯ ಪಡೆಯಲು **ಯಶಸೇ** ಮಠ-ಮಂದಿರಗಳಿಗೆ, ನಟ-ನರ್ತಕಿಯರಿಗೆ ಕೊಟ್ಟು ಕೀರ್ತಿ ಪಡೆಯಲು **ಕಾಮಾಯ** ತನ್ನ ಭೋಗಕ್ಕಾಗಿ **ಸ್ವಜನಾಯ** ಹೆಂಡತಿ-ಮಕ್ಕಳು ಮುಂತಾದ ಬಂಧುಗಳಿಗೆ ಕೊಡಲು **ಅರ್ಥಾಯ** ವ್ಯವಹಾರಮುಖದಿಂದ ಹಣವನ್ನು ಬೆಳೆಸಲು ಹೀಗೆ **ವಿತ್ತಂ** ತಾನು ನ್ಯಾಯವಾಗಿ ಸಂಪಾದಿಸಿದ ಹಣವನ್ನು **ಪಂಚಧಾ ವಿಭಜನ್** ಐದು ಭಾಗ ಮಾಡಿ ಜೀವಿಸುವವನು **ಇಹ** ಈ ಲೋಕದಲ್ಲಿ **ಅಮುತ್ರ** ಪರಲೋಕದಲ್ಲಿಯೂ **ಮೋದತೇ** ಸುಖ ಪಡುತ್ತಾನೆ. ।।೩೭।।

ನನ್ನ ಮಾತಿಗೆ ಋಗ್ವೇದವೇ ಪ್ರಮಾಣವೆಂದು ಹೇಳುತ್ತಾರೆ-

**ಅತ್ರಾಪಿ ಬಹ್ವೃಚೈರ್ಗೀತಂ ಶೃಣುಷ್ವಾಸುರಸತ್ತಮ ।**
**ಸತ್ಯಮೋಮಿತಿ ಯತ್ ಪ್ರೋಕ್ತಂ ಯನ್ನೇತ್ಯಾಹಾನೃತಂ ಹಿ ತತ್ ।।೩೮।।**

**ಹೇ ಅಸುರಸತ್ತಮ** ದಾನವಶ್ರೇಷ್ಠನಾದ ಬಲಿಯೇ **ಅತ್ರ ಅಪಿ** ದಾನ ವಿಷಯದಲ್ಲಿಯೂ **ಬಹ್ವೃಚೈಃ** ಋಗ್ವೇದಿಗಳಿಂದ **ಗೀತಂ** ಹೇಳಲ್ಪಟ್ಟ ವಾಕ್ಯವನ್ನು **ಶೃಣುಷ್ವ** ಹೇಳುತ್ತೇನೆ ಕೇಳು ಅರ್ಥತಃ ಅದನ್ನು ಅನುವಾದಿಸುವರು. ಯಾಚಕನನ್ನು ಕುರಿತು **ಓಂ ಇತಿ ಯತ್ ಪ್ರೋಕ್ತಂ** ಆಗಲಿ ಕೊಡುತ್ತೇನೆ ಎಂದು ಹೇಳಿದ್ದು **ಸತ್ಯಂ** ಸತ್ಯವೆಂದು ತಿಳಿಯಬೇಕು. **ನ ಇತಿ ಯತ್ ಆಹ** ಇಲ್ಲವೆಂದು ಏನು ಹೇಳಿದನೋ **ತತ್** ಅದು **ಅನೃತಂ** ಸುಳ್ಳೆಂದು ತಿಳಿಯಬೇಕು. **ಹಿ** ಇವೆರಡು ಪರಸ್ಪರ ವಿರುದ್ಧವಾಗಿವೆ.

ಈ ಶ್ಲೋಕಕ್ಕೆ ಮೂಲವಾದ ಉಪನಿಷತ್ತು ಹೀಗಿದೆ. ಶುಕ್ರಾಚಾರ್ಯರು ಹೀಗೆ ಹೇಳುತ್ತಾರೆ. ಹೇ ಬಲಿಯೇ! ನೀನು ನನ್ನ ಶಿಷ್ಯನೆಂದು ದಯೆಯಿಂದ ಸರ್ವಸ್ವದಾನ ಮಾಡಬೇಡ ಎಂದು ಹೇಳುತ್ತಿಲ್ಲ. ಕಿಂತು ಬೃಹತೀಸಹಸ್ರದಲ್ಲಿ, ಐತರೇಯಭಾಷ್ಯದಲ್ಲಿ ಋಗ್ವೇದಿಗಳಿಂದ ತಿಳಿಸಲ್ಪಟ್ಟಿರುವ, ''ತನ್ನ ವೃತ್ತಿನಾಶಕ್ಕೆ ಕಾರಣವಾದ ದಾನ ಮಾಡಬಾರದು'' ಎಂಬ ವಿಷಯವನ್ನು ಹೇಳುತ್ತೇನೆ. ಕೇಳು. ಆ ಉಪನಿಷತ್ತು ಹೀಗಿದೆ.

''ಓಮಿತಿ ಸತ್ಯಂ ನೇತ್ಯನೃತಂ ತದೇತತ್ಪುಷ್ಪಂ ಫಲಂ ವಾಚೋ ಯತ್ಸತ್ಯಂ ಸಹೇಶ್ವರೋ ಯಶಸ್ವೀ ಕಲ್ಯಾಣಕೀರ್ತಿರ್ಭವಿತೋಃ ಪುಷ್ಪಂ ಹಿ ಫಲಂ ವಾಚಃ ಸತ್ಯಂ ವದತ್ಯಥೈತನ್ಮೂಲಂ ವಾಚೋ ಯದನೃತಂ ತದ್ಯಥಾ ವೃಕ್ಷ ಆವಿರ್ಮೂಲಃ ಶುಷ್ಯತಿ ಸ ಉದ್ವರ್ತತ ಏತಮೇವಾನೃತಂ ವದನ್ನಾವಿರ್ಮೂಲಮಾತ್ಮಾನಂ ಕರೋತಿ ಸ ಶುಷ್ಯತಿ ಸ ಉದ್ವರ್ತತೇ ತಸ್ಮಾದನೃತಂ ನ ವದೇದ್ ದಯೇತ ತ್ವೇನೇನ ಪರಾಗ್ವಾ ಏತದ್ರಿಕ್ತಮಕ್ಷರಂ ಯದೇತದೋಮಿತಿ ತದ್ಯತ್ಕಿಂಚೋಮಿತ್ಯಾಹಾತ್ರೈವಾಸ್ಮೈ ತದ್ರಿಚ್ಯತೇ ಸ ಯತ್ಸರ್ವಮೋಂಕುರ್ಯಾದ್ರಿಚ್ಯಾದ್ ಆತ್ಮಾನಂ ಸಕಾಮೇಭ್ಯೋ ನಾಲಂ ಸ್ಯಾದಥೈತತ್ಪೂರ್ಣಮಭ್ಯಾತ್ಮಂ ಯನ್ನೇತಿ ಸ ಯತ್ಸರ್ವಂ ನೇತಿ ಬ್ರೂಯಾತ್ ಪಾಪಿಕಾऽಸ್ಯ ಕೀರ್ತಿರ್ಜಾಯೇತ ಸೈನಂ ತತ್ರೈವ ಹನ್ಯಾತ್ ತಸ್ಮಾತ್ ಕಾಲ ಏವ ದದ್ಯಾತ್ ಕಾಲೇ ನ ದದ್ಯಾತ್ ತತ್ಸತ್ಯಾನೃತೇ ಮಿಥುನೀಕರೋತಿ ತಯೋರ್ಮಿಥುನಾತ್ ಪ್ರಜಾಯತೇ ಭೂಯಾನ್ ಭವತಿ ಯೋ ವೈ ತಾಂ ವಾಚಂ ವೇದ ಯಸ್ಯಾ ಏಷ ವಿಕಾರಃ ಸ ಸಂಪ್ರತಿವಿದಕಾರೋ ವೈ ಸರ್ವಾ ವಾಕ್ ಸೈಷಾ ಸ್ಪರ್ಶೋಷ್ಮಭಿರ್ವ್ಯಜ್ಯಮಾನಾ ಬಹ್ವೀ ನಾನಾರೂಪಾ ಭವತಿ ತಸ್ಯೈ...'' ॥ ಇತಿ ಎಂದು ಇದೆ.

ಈ ವಿಷಯವನ್ನು ಐತರೇಯಭಾಷ್ಯ ಮತ್ತು ಟಿಪ್ಪಣಿಗಳನ್ನು ನೋಡಿ ತಿಳಿಯಬೇಕೆಂದು ಶ್ರೀಸತ್ಯಧರ್ಮರು ತಿಳಿಸುತ್ತಾರೆ.

♦ ತನಗಾಗುವಷ್ಟು ಉಳಿಸಿಕೊಂಡು ದಾನಮಾಡಬೇಕೆಂಬ ವಿಷಯದಲ್ಲಿ ಈ ಪ್ರಮಾಣವೆಂದರ್ಥ. ಯಾಚಕನಿಗೆ ನೀನು ಕೇಳಿದ್ದೆಲ್ಲವನ್ನು ಕೊಡುತ್ತೇನೆ ಎಂಬುದು ಸತ್ಯ. ಇಲ್ಲವೆಂಬುದು ಸುಳ್ಳು. ।।೩೮।।

**ಸತ್ಯಂ ಪುಷ್ಪಫಲಂ ವಿದ್ಯಾದಾತ್ಮವೃಕ್ಷಸ್ಯ ಜೀವತಃ ।**
**ವೃಕ್ಷೇऽಜೀವತಿ ತನ್ನ ಸ್ಯಾದನೃತಂ ಮೂಲಮಾತ್ಮನಃ ।।೩೯।।**

**ಜೀವತಃ** ಪ್ರಾಣಧಾರಕನ **ಆತ್ಮವೃಕ್ಷಸ್ಯ** ದೇಹವೆಂಬ ಗಿಡದ **ಪುಷ್ಪಫಲಂ** ಹೂ ಮತ್ತು ಹಣ್ಣು **ಸತ್ಯಂ** ಕೊಡುತ್ತೇನೆಂಬ ಓಂಕಾರವು ಸತ್ಯವು ಎಂದು **ವಿದ್ಯಾತ್** ತಿಳಿಯಬೇಕು. ಹೇಗೆ ಒಣಗದಿರುವ ಮರಕ್ಕೆ ಹೂ-ಹಣ್ಣುಗಳಾಗುತ್ತವೋ ಹಾಗೆ ಸಾಯದಿರುವ ದೇಹಕ್ಕೆ ದಾನದ

ಒಪ್ಪಿಗೆಯ ಮಾತು ಫಲಿಸುತ್ತದೆ ಎಂದು ಅರ್ಥ. **ವೃಕ್ಷೇ** ದೇಹವೆಂಬ ಮರವೇ **ಅಜೀವತಿ ಸತಿ** ಒಣಗಿದಾಗ ಸತ್ತು ಹೋದಾಗ **ತತ್** ಸತ್ಯವೆಂಬ ಹೂ-ಹಣ್ಣುಗಳು **ನ ಸ್ಯಾತಾಂ** ಆಗುವಂತಿಲ್ಲ ಆದ್ದರಿಂದ **ಆತ್ಮನಃ** ದೇಹವೆಂಬ ಮರಕ್ಕೆ **ಅನೃತಂ** ಎಲ್ಲವನ್ನು ಕೊಡುವುದಿಲ್ಲವೆಂಬ ನಕಾರವೇ **ಮೂಲಂ** ಬುಡವು, ಗಿಡದ ಉಳಿವಿಗೆ ಕಾರಣ. ।।೩೯।।

ಅನೃತವಿಲ್ಲದಿದ್ದರೆ ಬಾಧಕ ಹೇಳುವರು-

**ತದ್ ಯಥಾ ವೃಕ್ಷ ಉನ್ಮೂಲಃ ಶುಷ್ಯತ್ಯುದ್ವರ್ತತೇಽಚಿರಾತ್ ।**
**ಏವಂ ನಷ್ಟಾನೃತಃ ಸದ್ಯ ಆತ್ಮಾ ಶುಷ್ಯೇನ್ನ ಸಂಶಯಃ ।।೪೦।।**

**ತತ್ ಯಥಾ** ಅದು ಹೇಗೆಂದರೆ ಹೇಳುತ್ತೇನೆ **ಉನ್ಮೂಲಃ** ಬೇರು ಕಿತ್ತು ಹಾಕಿದ **ವೃಕ್ಷಃ** ಗಿಡವು **ಅಚಿರಾತ್** ವೇಗದಲ್ಲಿಯೇ **ಶುಷ್ಯತಿ** ಒಣಗುತ್ತದೋ **ಉದ್ವರ್ತತೇ** ಉರುಳುತ್ತದೋ ನಾಶವಾಗುತ್ತದೋ **ಏವಂ** ಅದರಂತೆ **ನಷ್ಟಾನೃತಃ** ಮೇಲೆ ಹೇಳಿದಂತೆ ಸುಳ್ಳು ಹೇಳದವನು (ತನ್ನ ಜೀವನಕ್ಕೆ ಬೇಕಾದಷ್ಟು ಇಟ್ಟುಕೊಂಡು ಕೊಡುವೆನೆನ್ನದವನು) **ಆತ್ಮಾ** ದೇಹವು **ಸದ್ಯಃ** ಕೂಡಲೇ **ಶುಷ್ಯೇತ್** ಒಣಗುತ್ತದೆ ಜೀವನ ನಾಶವಾಗುತ್ತದೆ. **ನ ಸಂಶಯಃ** ಇದರಲ್ಲಿ ಸಂದೇಹವಿಲ್ಲ. ।।೪೦।।

ಸತ್ಯ ಃ- ''ಕುರು ಮಾಂ ಬಹುದಾಯಿನಃ ಕರಂ'' ಮುಂತಾದ ಮಾತೂ ಕೂಡ ತನ್ನ ಜೀವನಕ್ಕೆ ಅವಿರೋಧಿಯಾದ ವಿಪರೀತ ಕರಪರವೆಂದು ತಿಳಿಯಬೇಕು. ಹಿಂದೆ ಮುಂದೆ ನೋಡದೇ (ಕಲಿತಜಲಕಲಶಃ ತವ ಶಯೋ ನ ಸುಶಯಃ ಇತ್ಯಾಶಯಃ) ನೀರು ತುಂಬಿದ ಕಲಶ ಹಿಡಿದ ನಿನ್ನ ಕೈ ಒಳ್ಳೆಯದಕ್ಕಲ್ಲವೆಂದು ಅರ್ಥ. ।।೪೦।।

**ಪರಾಗ್ರಿಕ್ತಮಪೂರ್ಣಂ ವಾ ಅಕ್ಷರಂ ಯತ್ ತದೋಮಿತಿ ।**
**ತದ್ ಯತ್ ಕಿಂಚೋಮಿತಿ ಬ್ರೂಯನ್ನ ಸ ರಿಚ್ಯೇತ ವೈ ಪುಮಾನ್ ।।೪೧।।**

**ಯತ್ ಓಂ ಇತಿ ಅಕ್ಷರಂ** ದಾನದ ಅಂಗೀಕಾರವನ್ನು ಪ್ರತಿಪಾದಿಸುವ ಓಂ ಎಂಬುವ ಮಾತು ಏನಿದೆಯೋ **ತತ್** ಆ ಮಾತು **ಪರಾಕ್** ತನಗೆ ಪ್ರತಿಕೂಲವಾಗಿದೆ **ಅಪೂರ್ಣಂ** ತನಗೆ ಅಪೂರ್ಣತ್ವವನ್ನು ತಂದುಕೊಡುವುದಾಗಿದೆ **ತತ್** ಆದ್ದರಿಂದ **ಪುಮಾನ್** ಅಧಿಕಾರಿಯು **ಯತ್ ಕಿಂ ಚ ಓಂ ಇತಿ ಬ್ರೂಯಾತ್** ತನ್ನ ಜೀವನಕ್ಕೆ ಬೇಕಾದಷ್ಟು ಪದಾರ್ಥಗಳನ್ನು ಬಿಟ್ಟು ಉಳಿದುದನ್ನು ಕೊಡುತ್ತೇನೆಂದು ಯಾಚಕನಿಗೆ ಹೇಳಬೇಕು **ಸಃ** ಹಾಗೆ ಪ್ರತಿಜ್ಞೆ ಮಾಡಿದವನು **ನ ರಿಚ್ಯೇತ್** ನಾಶ ಹೊಂದುವುದಿಲ್ಲ. **ವೈ** ಇದು ಶ್ರುತಿಪ್ರಸಿದ್ಧವಾಗಿದೆ.

ಛಲಾರೀ ಃ- ''ಪರಾಗ್ವಾ ಏತದ್ರಿಕ್ತಮಕ್ಷರಂ ಯದೇತದೋಮಿತಿ ತದ್ಯತ್ಕಿಂಚೋ-ಮಿತ್ಯಾಹಾತ್ರೈವಾಸ್ಮೈ ತದ್ರಿಚ್ಯತೇ ಸ ಯತ್ಸರ್ವಮೋಂಕುರ್ಯಾತ್ ರಿಚ್ಯಾದಾತ್ಮಾನಂ ಸ ಕಾಮೇಭ್ಯೋ ನಾಲಂ ಸ್ಯಾತ್'' ಎಂಬ ಶ್ರುತ್ಯರ್ಥವನ್ನು ಈ ಶ್ಲೋಕವು ಅನುವಾದ ಮಾಡುತ್ತಿದೆ. ।।೪೧।।

**ಭಿಕ್ಷವೇ ಸರ್ವಮೋಂಕುರ್ವನ್ ನಾಲಂ ಕಾಮೇಭ್ಯ ಆತ್ಮನೇ ।**
**ಅಥೈತತ್ಪೂರ್ಣಮಭ್ಯಾತ್ಮಂ ಯಚ್ಚ ನೇತ್ಯನೃತಂ ವಚಃ ॥೪೨॥**

**ಭಿಕ್ಷವೇ** ಯಾಚಕನಿಗೆ **ಸರ್ವಂ** ಎಲ್ಲವನ್ನೂ **ಓಂ ಕುರ್ವನ್** ಕೊಡುವವನು **ಕಾಮೇಭ್ಯಃ** ಭೋಗವಸ್ತುಗಳಿಂದ **ಆತ್ಮನೇ** ತನಗೆ **ನ ಅಲಂ** ಸಾಕಷ್ಟು ಹೊಂದಲಾರ ಎಲ್ಲವನ್ನು ದಾನ ಮಾಡಿದ್ದರಿಂದ ಭೋಗ್ಯವಾದ ವಸ್ತುಗಳೇ ಇಲ್ಲದಿದ್ದುದರಿಂದ ನಾಶ ಹೊಂದುವವನು. **ಅಥ** ಆದ್ದರಿಂದ **ನ ಇತಿ** ಎಲ್ಲವನ್ನು ಕೊಡುವುದಿಲ್ಲವೆಂದು **ಯತ್** ಯಾವ **ಅನೃತಂ ವಚಃ** ಸುಳ್ಳು ಮಾತು **ಏತತ್** ಇದು **ಅಭ್ಯಾತ್ಮಂ** ಆತ್ಮನಿಗೆ **ಪೂರ್ಣಂ** ಸಾಕಷ್ಟು ಭೋಗಕ್ಕೆ ಕಾರಣ-ವಾಗುವುದು. ಎಲ್ಲ ಕೊಡದಿರುವುದರಿಂದ ತನ್ನ ಜೀವನವು ಸಂಪನ್ನವಾಗುವುದೆಂದರ್ಥ.

**ಸರ್ವಂ ನೇತ್ಯಥಿತಿಂ ಬ್ರೂಯಾತ್ ಸ ದುಷ್ಕೀರ್ತಿಃ ಶ್ವಸನ್ಮೃತಃ ।**

ಆದರೆ **ಅರ್ಥಿನಂ** ಯಾಚಕನಿಗೆ **ಸರ್ವಂ** ಏನನ್ನೂ **ನ ಇತಿ ಬ್ರೂಯಾತ್** ಕೊಡುವುದಿಲ್ಲವೆಂದು ಹೇಳಿದರೆ **ಸಃ** ಅವನು **ದುಷ್ಕೀರ್ತಿಃ** ಅಪಕೀರ್ತಿವಂತನಾಗುತ್ತಾನೆ. ಮತ್ತು **ಶ್ವಸನ್ ಮೃತಃ** ಅಂಥವನು ಬದುಕಿದ್ದೂ ಸತ್ತವನು.

ಯಾಚಕನಿಗೆ ಎಲ್ಲ ಕೊಟ್ಟರೇ ತನ್ನ ಜೀವನವೇ ನಿಲ್ಲುತ್ತದೆ. ಏನೂ ಕೊಡದಿದ್ದರೇ ಅಪಕೀರ್ತಿಯು ಬರುತ್ತದೆ. ಅಂಥವನು ಬದುಕಿಯು ಸತ್ತಂತೆ. ಆದ್ದರಿಂದ ಎಷ್ಟು ವಿಹಿತವೋ ಅಷ್ಟೇ ದಾನ ಮಾಡಬೇಕು ಎಂದು ಅಭಿಪ್ರಾಯ. ॥

ತಾವು ಹೇಳಿದ್ದು ಸರಿ ಆದರೆ ನಾನು ಪ್ರತಿಜ್ಞೆ ಮಾಡಿದ್ದೇನೆ, ಕೊಡದಿದ್ದರೆ ನನ್ನ ಮಾತು ಸುಳ್ಳಾಗುತ್ತದೆ. ಅದು ಮಹಾಪಾಪ ಎಂದರೆ ಹೇಳುವರು-

**ಸ್ತ್ರೀಷು ನರ್ಮೇ ವಿವಾಹೇ ಚ ವೃತ್ತ್ಯರ್ಥೇ ಪ್ರಾಣಸಂಕಟೇ ।**
**ಗೋಬ್ರಾಹ್ಮಣಾರ್ಥೇ ಹಿಂಸಾಯಾಂ ನಾನೃತಂ ಸ್ಯಾಜ್ಜುಗುಪ್ಸಿತಮ್ ॥೪೩॥**

**॥ ಇತಿ ಶ್ರೀಮದ್ಭಾಗವತೇ ಅಷ್ಟಮಸ್ಕಂಧೇ ಅಷ್ಟಾದಶೋಽಧ್ಯಾಯಃ ॥**

**ಸ್ತ್ರೀಷು** ಕಾಮುಕಸ್ತ್ರೀಯರ ವಿಷಯದಲ್ಲಿ **ನರ್ಮೇ** ಹಾಸ್ಯಮಾಡುವಾಗ **ವಿವಾಹೇ** ಮದುವೆಯ ಕಾಲದಲ್ಲಿ **ವೃತ್ತ್ಯರ್ಥೇ** ಜೀವನಕ್ಕಾಗಿ **ಪ್ರಾಣಸಂಕಟೇ** ಪ್ರಾಣಾಪಾಯ ಬಂದಾಗ **ಗೋಬ್ರಾಹ್ಮಣಾರ್ಥೇ** ಆಕಳು ಮತ್ತು ಬ್ರಾಹ್ಮಣರ ಹಿತಕ್ಕಾಗಿ **ಹಿಂಸಾಯಾಂ** ತ್ರಿವರ್ಣದವರ ಹಿಂಸೆಯಾಗುತ್ತಿದ್ದಾಗ ಹೇಳಿದ **ಅನೃತಂ** ಸುಳ್ಳು **ಜುಗುಪ್ಸಿತಂ ನ ಸ್ಯಾತ್** ನಿಂದಿತವಲ್ಲ ಪಾಪಜನಕವಾಗುವುದಿಲ್ಲ. ಈಗ ನಿನ್ನ ಜೀವನ ಹಾನಿಯಾಗುವುದು. ಆದ್ದರಿಂದ ಈಗ ಸುಳ್ಳು ಹೇಳುವುದರಿಂದ ಪಾಪ ಬರುವುದಿಲ್ಲ. ॥೪೩॥

**ಇಲ್ಲಿಗೆ ಹದಿನೆಂಟನೇ ಅಧ್ಯಾಯವು ಮುಗಿಯಿತು.**

# ಅಥ ಏಕೋನವಿಂಶೋಽಧ್ಯಾಯಃ

ಶೀಹರಿಯಲ್ಲಿ ಭಕ್ತಿ ಮಾಡಲು ಭಗವಂತನ ಮಹಿಮೆಯನ್ನು ತಿಳಿದಿರಬೇಕು. ಅದಕ್ಕಾಗಿ ತ್ರಿವಿಕ್ರಮನ ಪರಾಕ್ರಮವನ್ನು ಹೇಳಲು ಉತ್ಕಂಠರಾಗಿದ್ದಾರೆ ಶುಕಾಚಾರ್ಯರು. ಶುಕ್ರಾಚಾರ್ಯರ ಉಪದೇಶವನ್ನು ಪಡೆದರೂ ಬಲಿಯ ನಿರ್ಧಾರ ಏನಿತ್ತೆಂಬುದನ್ನು ಶುಕಾಚಾರ್ಯರು ತಿಳಿಸುತ್ತಿದ್ದಾರೆ-

**ಶ್ರೀಶುಕ ಉವಾಚ**

**ಬಲಿರೇವಂ ಗೃಹಪತಿಃ ಕುಲಾಚಾರ್ಯೇಣ ಭಾಷಿತಃ ।**
**ತೂಷ್ಣೀಂ ಭೂತ್ವಾ ಕ್ಷಣಂ ರಾಜನ್ನುವಾಚಾವಹಿತೋ ಗುರುಮ್ ॥೧॥**

**ಹೇ ರಾಜನ್** ಪರೀಕ್ಷಿತನೇ **ಗೃಹಪತಿಃ** ಗೃಹಸ್ಥನಾದ **ಬಲಿಃ** ಬಲಿಚಕ್ರವರ್ತಿಯು (ಯಜ್ಞಾಧಿಕಾರಿಯು) **ಏವಂ** ಮೇಲೆ ಹೇಳಿದಂತೆ ಸುಳ್ಳು ಹೇಳಿ ಜೀವನವನ್ನು ಉಳಿಸಿಕೊಳ್ಳಬೇಕೆಂದು **ಕುಲಾಚಾರ್ಯೇಣ** ದೈತ್ಯಕುಲದ ಗುರುಗಳಾದ ಶುಕ್ರಾಚಾರ್ಯರಿಂದ **ಭಾಷಿತಃ ಸನ್** ಹೇಳಲ್ಪಟ್ಟವನಾಗಿ **ಕ್ಷಣಂ** ಸ್ವಲ್ಪ ಹೊತ್ತು **ತೂಷ್ಣೀಂ ಭೂತ್ವಾ** ಸುಮ್ಮನಿದ್ದು ಅನಂತರ **ಅವಹಿತಃ** ಸಾವಧಾನಮನಸ್ಕನಾಗಿ **ಗುರುಂ** ಶುಕ್ರಾಚಾರ್ಯರನ್ನು ಕುರಿತು **ಉವಾಚ** ಮಾತನಾಡಿದನು. ॥೧॥

**ಬಲಿರುವಾಚ**

**ಸತ್ಯಂ ಭಗವತಾ ಪ್ರೋಕ್ತಂ ಧರ್ಮೋಽಯಂ ಗೃಹಮೇಧಿನಃ ।**
**ಅರ್ಥಂ ಕಾಮಂ ಯಶೋ ವೃತ್ತಿಂ ಯೋ ನ ಬಾಧೇತ ಕರ್ಹಿಚಿತ್ ॥೨॥**

ಆಚಾರ್ಯರೇ **ಯಃ** ಯಾವ ದಾನವು **ಅರ್ಥಂ** ಧನವನ್ನು **ಕಾಮಂ** ವಿಷಯೇಚ್ಛೆಯನ್ನು (ವಿಷಯಭೋಗವನ್ನು) **ಯಶಃ** ಕೀರ್ತಿಯನ್ನು **ವೃತ್ತಿಂ** ಜೀವನೋಪಾಯವನ್ನು **ಕರ್ಹಿಚಿತ್** ಎಂದಿಗೂ **ನ ಬಾಧೇತ** ಹಾಳು ಮಾಡುವುದಿಲ್ಲವೋ **ಅಯಂ** ಅಂಥ ದಾನವೇ **ಗೃಹಮೇಧಿನಃ** ಗೃಹಸ್ಥನ **ಧರ್ಮಃ** ಧರ್ಮವು ಎಂದು **ಯತ್** ಏನು **ಭಗವತಾ** ಪೂಜ್ಯರಾದ ತಮ್ಮಿಂದ

**ಉಕ್ತಂ** ಹೇಳಲ್ಪಟ್ಟಿತೋ **ತತ್** ಅದು **ಸತ್ಯಂ** ನಿಜವಾದುದು. ಆ ವಿಷಯವನ್ನು ಅಲ್ಲಗಳೆಯುವುದಿಲ್ಲ ಎಂದು ಅಭಿಪ್ರಾಯ. ।।೨।।

ತಾವು ಗುರುಗಳು. ತಾವು ಹೇಳಿದ್ದೇ ಧರ್ಮ. ಹಾಗೆಯೇ ಮಾಡಬೇಕು. ಆದರೆ ಈಗ ನಾನು ಪ್ರತಿಜ್ಞೆ ಮಾಡಿಯಾಗಿದೆ. ಆದ್ದರಿಂದ ತಮ್ಮ ಮಾತು ನನಗೆ ಸಮ್ಮತವಲ್ಲ. ಎಂದು ವಿಜ್ಞಾಪಿಸುತ್ತಿದ್ದಾನೆ-

**ಸ ಚಾಹಂ ವಿತ್ತಲೋಭೇನ ಪ್ರತ್ಯಾಚಕ್ಷೇ ಕಥಂ ದ್ವಿಜಮ್ ।**
**ಪ್ರತಿಶ್ರುತ್ಯ ದದಾಮೀತಿ ಪ್ರಾಹ್ಲಾದಿಃ ಕಿತವೋ ಯಥಾ ।।೩।।**

**ಪ್ರಾಹ್ಲಾದಿಃ** ಪ್ರಹ್ಲಾದನ ವಂಶಜನಾದ **ಸಃ** ಸತ್ಯವಾದ ಪ್ರತಿಜ್ಞೆಯುಳ್ಳ **ಅಹಂ** ನಾನು **ದ್ವಿಜಂ** ಬ್ರಾಹ್ಮಣನಿಗೆ **ದದಾಮಿ ಇತಿ** ಕೇಳಿದ್ದನ್ನು ಕೊಡುತ್ತೇನೆ ಎಂದು **ಪ್ರತಿಶ್ರುತ್ಯ** ಮಾತು ಕೊಟ್ಟು **ಕಥಂ** ಹೇಗೆ **ಕಿತವಃ ಯಥಾ** ವಂಚಕನಂತೆ **ವಿತ್ತಲೋಭೇನ** ದ್ರವ್ಯದ ಮೇಲಿನ ಆಸೆಯಿಂದ ಜೀವನಾಕಾಂಕ್ಷೆಯಿಂದ **ಪ್ರತ್ಯಾಚಕ್ಷೇ** ಕೊಡುವುದಿಲ್ಲವೆಂದು ಹೇಗೆ ಹೇಳಲಿ? **ಚ** ಹಾಗೆ ಹೇಳಿದರೆ ಅಪಕೀರ್ತಿಗೆ ಈಡಾಗುವೆನು. ಹಾಗೆ ಮಾಡುವುದು ಪ್ರಹ್ಲಾದರ ವಂಶದಲ್ಲಿ ಹುಟ್ಟಿದ ನನಗೆ ಶೋಭಿಸುವುದಿಲ್ಲವೆಂದರ್ಥ.

ಸತ್ಯ ಃ- ಬ್ರಾಹ್ಮಣವೇಷಧಾರಿಗಳಾದ ದೇವತೆಗಳಿಗೆ ವಿರೋಚನನು ವಿರೋಚಮಾನ ಏವ ಶೋಭಿಸುತ್ತಲೇ ತನ್ನ ಶರೀರವನ್ನೇ ಇತ್ತನು. ಇಂಥ ಮಹಾಮಾಹಾತ್ಮ್ಯ ಉಳ್ಳ ತಂದೆಯನ್ನು ಬಿಟ್ಟು **ಪ್ರಾಹ್ಲಾದಿಃ** ಎಂದು ಅಜ್ಜನ ಸಂಬಂಧವನ್ನು ಬುದ್ಧಿವಂತನಾದ ಬಲಿಯು ಯಾಕೆ ಹೇಳುತ್ತಿದ್ದಾನೆ? ಎಂಬ ಶಂಕೆಯು ಬರುತ್ತದೆ. ನಿಜ. ಆಯುಷ್ಮಂತನೇ! ಈ ಶಂಕೆಯನ್ನು ಹೀಗೆ ಪರಿಹರಿಸಿಕೊಳ್ಳಬಹುದು.

ಯದ್ಯಪಿ ತಂದೆಯಾದ ವಿರೋಚನ ಅದ್ಭುತವಾದ ರೀತಿಯಲ್ಲಿ ದಾನವನ್ನೇನೋ ಮಾಡಿದ. ಆದರೂ ನನಗೂ ಅಜ್ಜನಾದ ಪ್ರಹ್ಲಾದರಿಗೂ ಸಾಮ್ಯ ಇದೆ. ಅದೇನೆಂದರೆ, ಪ್ರಹ್ಲಾದನಿಗಾಗಿ ಭಗವಂತ ನರಸಿಂಹನಾಗಿ ಅವತರಿಸಿದ. ಹಾಗೆ ಈಗ ನನಗಾಗಿ ಭಗವಂತನು ವಾಮನನಾಗಿ ಅವತರಿಸಿದ್ದಾನೆ. ಈ ಸಾಮ್ಯವು ಪ್ರಹ್ಲಾದರಲ್ಲಿ ನನ್ನಲ್ಲಿ ಇದೆ. ಆದ್ದರಿಂದ **ಪ್ರಾಹ್ಲಾದಿಃ** ಎಂದು ಬಲಿಯು ಹೇಳುತ್ತಿದ್ದಾನೆ ಎಂದು ತಿಳಿಯಬೇಕು. ।।೩।।

ಕಿವುಡನ ಮುಂದೆ ಕಿನ್ನರಿ ಬಾರಿಸಿದಂತೆ ಋಗ್ವೇದದಲ್ಲಿ ಹೇಳಿದ್ದು ಹಿತವೆಂದು ಹೇಳಿದೆ. ನಿನಗದು ಹಿತವಾಗಲಿಲ್ಲ ಎನ್ನಬೇಡಿರಿ. ಭೂಮಿಯು ಎಲ್ಲವನ್ನು ಸಹಿಸಿದರೂ ಇವನನ್ನು ಮಾತ್ರ ದುಃಸಹವೆಂದು ತಿಳಿಯುವಳು. ಹಾಗೆ ಹೇಳಿರುವಳು ಎಂದು ಬಲಿಯು ಹೇಳುತ್ತಿದ್ದಾನೆ-

**ನ ಹ್ಯಸತ್ಯಾತ್ ಪರೋಽಧರ್ಮ ಇತಿ ಹೋವಾಚ ಭೂರಿಯಮ್ ।**
**ಸರ್ವಂ ವೋಢುಮಲಂ ಮನ್ಯೇ ಋತೇಽಲೀಕಪರಂ ನರಮ್ ।।೪।।**

**ಅಸತ್ಯಾತ್** ಸುಳ್ಳಿಗಿಂತ **ಪರಃ** ಭಿನ್ನವಾದ **ಅಧರ್ಮಃ** ಪಾಪವು **ನ ಹಿ** ಇಲ್ಲ **ಇಯಂ** ಕ್ಷಮಾಶೀಲಳೆಂದು ಪ್ರಸಿದ್ಧಳಾದ **ಭೂಃ** ಈ ಭೂಮಿಯು **ಅಲೀಕಪರಂ** ಸುಳ್ಳು ಹೇಳುವ **ನರಂ ಋತೇ** ಮನುಷ್ಯರನ್ನು ಬಿಟ್ಟು **ಸರ್ವಂ** ಎಲ್ಲವನ್ನು **ವೋಢುಂ** ಹೊತ್ತು ಕೊಳ್ಳಲು **ಅಲಂ** ಸಮರ್ಥಳು **ಇತಿ** ಎಂದು **ಮನ್ಯೇ** ನಾನು ತಿಳಿದಿದ್ದೇನೆ. **ಇತಿ** ಎಂದು **ಉವಾಚ ಹ** ಭೂಮಿಯು ಹೇಳಿರುವಳು.

♦ ಹಿ ಶಬ್ದದಿಂದ ''ನಾನ್ಯತಾತ್ ಪಾತಕಂ ಪರಂ'' ಎಂಬ ಪ್ರಮಾಣವನ್ನು ಸೂಚಿಸುವರು. ಹ ಎಂಬುದರಿಂದ ಈ ಮಾತು ವೇದಸಮಾನವೆಂದು ತಿಳಿಸಿರುವರು.

''ಅಲೀಕಂ ತ್ವಪ್ರಿಯೇಽನೃತೇ'' ಎಂದು ವಿಶ್ವವಿದೆ. ಯಾವ ಭೂಮಿಗಾಗಿ ಇಷ್ಟು ವಿವಾದವಾಯಿತೋ ಅವಳ ವಚನವೇ ಆದರೆ ವಿಶ್ವಸನೀಯವೆಂದು ಅವಳ ಮಾತನ್ನು ಹೇಳಿರುವರು. ||೪||

**ನಾಹಂ ಬಿಭೇಮಿ ನಿರಾಯನ್ನಾಧರ್ಮಾದಸುಖಾರ್ಣವಾತ್ ।**
**ನ ಸ್ಥಾನಚ್ಯವನಾನ್ಮೃತ್ಯೋರ್ಯಥಾ ವಿಪ್ರಪ್ರಲೋಭನಾತ್** ||೫||

**ಅಹಂ** ನಾನು **ವಿಪ್ರಪ್ರಲೋಭನಾತ್** ಬ್ರಾಹ್ಮಣನಿಗೆ ಆಸೆ ಹುಟ್ಟಿಸಿ ವಂಚನೆ ಮಾಡುವ ಪಾಪದಿಂದ **ಯಥಾ** ಎಷ್ಟು **ಬಿಭೇಮಿ** ಹೆದರುವೆನೋ **ತಥಾ** ಹಾಗೆ **ನಿರಯಾತ್** ನರಕದಿಂದ **ನ ಬಿಭೇಮಿ** ಹೆದರುವುದಿಲ್ಲ **ಅಧರ್ಮಾತ್** ಬೇರೆ ಪಾಪಗಳಿಂದ **ಅಸುಖಾರ್ಣವಾತ್** ದುಃಖಸಮುದ್ರದಿಂದ **ಸ್ಥಾನಚ್ಯವನಾತ್** ನನ್ನ ವಾಸಸ್ಥಳವಾದ ಸ್ವರ್ಗಭ್ರಂಶದಿಂದ **ಮೃತ್ಯೋಃ** ಮರಣದಿಂದಲೂ **ನ ಬಿಭೇಮಿ** ಹೆದರುವುದಿಲ್ಲ.

ಸತ್ಯ ಃ- ವಿಪ್ರ ಪ್ರಲೋಭನಾತ್ ಎಂಬುದಾಗಿ ಬಿಡಿಸಿಕೊಂಡೂ ಅರ್ಥವನ್ನು ಹೇಳಬಹುದು. **ಹೇ ವಿಪ್ರ** ಶುಕ್ರಾಚಾರ್ಯರೇ **ಪ್ರಲೋಭನಾತ್** ಪ್ರಸ್ತುತವಾದ ಪರಮಾತ್ಮನು ಮಾಡುವ ವಂಚನೆಯಿಂದ **ಅಸುಖಾರ್ಣವಾತ್ ನಿರಯಾತ್** ''ತಾರ್ತೀಯಸ್ಯ ಕುತೋ ಗತಿಃ'' ಎಂದು ನೀವು ಹೇಳಿದಂತೆ ಮೂರನೆಯ ಪಾದಕ್ಕೆ ಸ್ಥಾನವೇ ಇಲ್ಲದಿದ್ದುದರಿಂದ ನಾನು ಪ್ರತಿಜ್ಞೆ ಮಾಡಿದ್ದನ್ನು ಸಮಗ್ರವಾಗಿ ಕೊಡಲು ಆಗದೇ ಇದ್ದುದರಿಂದ ಪ್ರಾಪ್ತವಾಗುವ ದುಃಖಸಮುದ್ರವಾದ ನರಕದಿಂದಲೂ **ನಾಹಂ ಬಿಭೇಮಿ** ನನಗೆ ಭಯವಿಲ್ಲ. ಎಂಬುದಾಗಿಯೂ ಅನ್ವಯ ಮಾಡಿಕೊಳ್ಳಬಹುದು.

ಅಥವಾ ವಿಗತಃ ಪ್ರವರ್ಣಃ ಯಸ್ಮಿನ್ ತತ್ ವಿಪ್ರಂ ತತ್ ಚ ತತ್ ಪ್ರಲೋಭನಂ ಚ ವಿಪ್ರಪ್ರಲೋಭನಂ ಪ್ರ ಎಂಬ ಅಕ್ಷರ ಇಲ್ಲದ ಪ್ರಲೋಭನ ಅಂದರೆ ಲೋಭನಾತ್ ಎಂದಾಗುತ್ತದೆ. ನೀನು ಉಪದೇಶಿಸಿದ ಹಣದ ಆಸೆಯಿಂದ, ಜೀವನೋಪಾಯದ ಆಸೆಯಿಂದ **ಯಥಾ ಬಿಭೇಮಿ** ಹೇಗೆ ಹೆದರುವೆನೋ ಹಾಗೆ ಹಿಂದಿನ ಯಾವುದರಿಂದಲೂ ಹೆದರುವುದಿಲ್ಲ ಎಂದು ಅರ್ಥ

ಛಲಾರೀ ಃ- ಛಲಾರೀ ಆಚಾರ್ಯರು ಅಧರ್ಮಾತ್ ಎಂಬುದರ ಬದಲು ಅಧನ್ಯಾತ್ ಎಂದು ಪಠಿಸಿ ದಾರಿದ್ರ್ಯದಿಂದ ಎಂದು ಅರ್ಥ ಮಾಡಿದ್ದಾರೆ. ।।೫।।

**ಯದ್ ಯದ್ ಹಾಸ್ಯತಿ ಲೋಕೇಽಸ್ಮಿನ್ ಸಂಪರೇತೋ ಧರಾದಿಕಮ್ ।**
**ತಸ್ಯಾಸ್ತ್ಯಾಗೇ ನಿಮಿತ್ತಂ ಕಿಂ ವಿಪ್ರಸ್ತುಷ್ಯೇತ ತೇನ ಚೇತ್ ।।೬।।**

**ಅಸ್ಮಿನ್ ಲೋಕೇ** ಈ ಮನುಷ್ಯಲೋಕದಲ್ಲಿ **ಸಂಪರೇತಃ** ಮೃತನಾದ ವ್ಯಕ್ತಿಯು **ಯತ್ ಯತ್** ಯಾವ ಯಾವ **ಧರಾದಿಕಂ** ಭೂಮಿ ಹಣ ಮೊದಲಾದವುಗಳನ್ನು **ಹಾಸ್ಯತಿ** ಇಲ್ಲಿಯೇ ಬಿಟ್ಟು ಹೋಗುವನೋ **ತೇನ** ಹೇಗಾದರೂ ಬಿಟ್ಟು ಹೋಗಲೇ ಬೇಕಾದ ಆ ಪದಾರ್ಥಗಳಿಂದ **ವಿಪ್ರಃ** ಬ್ರಾಹ್ಮಣನು **ತುಷ್ಯೇತ ಚೇತ್** ಸಂತೃಪ್ತನಾಗುವುದಾದರೆ **ತಸ್ಯ** ಬಿಡಲೇಬೇಕಾದ ಪ್ರಯೋಜನಕರವಾದ ಪದಾರ್ಥಗಳನ್ನು **ಅತ್ಯಾಗೇ** ದಾನ ಮಾಡದಿರಲು **ನಿಮಿತ್ತಂ ಕಿಂ** ಕಾರಣವಾದರೂ ಏನು? ಯಾವ ಕಾರಣವೂ ಇಲ್ಲವೆಂದರ್ಥ.

ವ್ಯರ್ಥವಾಗಿ ಭೂಮಿ ಮುಂತಾದ ಆಯಾ ಪದಾರ್ಥಗಳನ್ನು ಬಿಡುವುದಕ್ಕಿಂತ, ಬ್ರಾಹ್ಮಣರಿಗೆ, ಸಜ್ಜನರಿಗೆ ದಾನಮಾಡುವ ಮೂಲಕ ಅವುಗಳನ್ನು ಪರಿತ್ಯಜಿಸಿ ಜೀವನವನ್ನು ಸಾರ್ಥಕಮಾಡಿಕೊಳ್ಳುವುದು ಉತ್ತಮ ಎಂದು ಅಭಿಪ್ರಾಯ. ಹೊಗುವಾಗ ನಮ್ಮ ಜೊತೆ ಯಾವುದನ್ನೂ ಒಯ್ಯುವುದಿಲ್ಲ. ಅಂದ ಮೇಲೆ ತನ್ನನ್ನು ಅನುಸರಿಸಿ ಬರದಿರುವುದನ್ನು ಕೊಡದಿರಲೂ ಏನೂ ಕಾರಣವಿಲ್ಲವೆಂದು ಭಾವ. ।।೬।।

ಜೀವನ ರಕ್ಷಣೆ ಆಗುವುದಿಲ್ಲವಾದ್ದರಿಂದ ವಂಚನೆ ಮಾಡಬೇಕು ಎಂಬ ಮಾತು ಶಾಸ್ತ್ರಶ್ರವಣ ಮಾಡಿದವರಿಗೆ ರುಚಿಸುವುದಿಲ್ಲವೆಂದು ಹೇಳುತ್ತಾರೆ-

**ಶ್ರೇಯಃ ಕುರ್ವಂತಿ ಭೂತಾನಾಂ ಸಾಧವೋ ದುಸ್ತ್ಯಜಾಸುಭಿಃ ।**
**ದಧ್ಯಙ್‌ಶಿಬಿಪ್ರಭೃತಯಃ ಕೋ ವಿಕಲ್ಪೋ ಧರಾದಿಷು ।।೭।।**

**ದಧ್ಯಙ್‌ಶಿಬಿಪ್ರಭೃತಯಃ ದಧ್ಯಙ್** ಅಥರ್ವಣ ವೇದಾಧ್ಯಾಯಿಗಳಾದ ದಧೀಚಿ ಋಷಿಗಳು ದೇವತೆಗಳ ಪ್ರಯೋಜನಕ್ಕಾಗಿ **ಶಿಬಿ** ಶಿಬಿಚಕ್ರವರ್ತಿಯು ಪಾರಿವಾಳದ ಪ್ರಯೋಜನಕ್ಕಾಗಿ **ಪ್ರಭೃತಯಃ** ಇವರೇ ಮೊದಲಾದ **ಸಾಧವಃ** ಸಜ್ಜನರು **ದುಸ್ತ್ಯಜಾಸುಭಿಃ** ಬಿಡಲು ಸಾಧ್ಯವಲ್ಲದ ತಮ್ಮ ಪ್ರಾಣಗಳಿಂದ **ಭೂತಾನಾಂ** ಪ್ರಾಣಿಗಳ **ಶ್ರೇಯಃ** ಕ್ಷೇಮವನ್ನು **ಕುರ್ವಂತಿ** ಮಾಡಿರುವವರು ಅಂದಮೇಲೆ **ಧರಾದಿಷು** ಪ್ರತಿಜ್ಞೆ ಮಾಡಿರುವ ಭೂಮಿ ಮೊದಲಾದುವನ್ನು ಕೊಟ್ಟು ಬ್ರಾಹ್ಮಣನಿಗೆ ಕ್ಷೇಮವನ್ನು ಮಾಡುವಲ್ಲಿ **ವಿಕಲ್ಪಃ** ಕೊಡಬೇಕೆ? ಬೇಡವೇ ? ಎಂಬ ಸಂಶಯವು **ಕಃ** ಯಾವುದು? ಯಾವ ಸಂಶಯವೂ ಇಲ್ಲವೆಂದರ್ಥ.

ಸತ್ಯ ಃ- ಪ್ರಕರ್ಷೇಣ ಭೃತಿಃ ಮಮ ಪೋಷಣಂ ಯೇನ ಸಃ ಪ್ರಭೃತಿಃ ಅಂದರೆ ನನ್ನನ್ನು ರಕ್ಷಿಸಿದ ವಿರೋಚನ ಎಂದು ಅರ್ಥ. ಉಪಲಕ್ಷಣಯಾ ಬೇರೆಯವರನ್ನು

ತೆಗೆದುಕೊಳ್ಳಬೇಕು. ಅಥವಾ ವಿರೋಚನನು ದಾನವ. ಮುಕ್ತಿಯೋಗ್ಯನಲ್ಲ. ಸ್ವಯಂ ತಾನು ಬಲಿಯು ಕರ್ಮಜದೇವನಾದ್ದರಿಂದ ಮುಕ್ತಿಯೋಗ್ಯರ ಸಾಲಿನಲ್ಲಿ ಸಾಕ್ಷಾತ್ ತಂದೆಯ ಹೆಸರನ್ನು ತೆಗೆದುಕೊಂಡಿಲ್ಲವೆಂದು ತಿಳಿಯಿರಿ.

ಲಿಂಗೇರೀ ಃ- ಹೀಗೆ ದುಸ್ತ್ಯಜವಾದ ಪ್ರಾಣಗಳ ತ್ಯಾಗವನ್ನೇ ಮಾಡಿದ ಉದಾಹರಣೆಗಳು ಸಾಕಷ್ಟು ಇರುವಾಗ ತ್ಯಾಜ್ಯವಾದ ಭೂಮಿಯನ್ನು ಕೊಡುವಲ್ಲಿ ನಾನು ಸಂದೇಹಿಸಬೇಕಿಲ್ಲ. ಎಂಬ ಕೈಮುತ್ಯನ್ಯಾಯವನ್ನು ತಿಳಿಸಿದಂತಾಯಿತು.

ದಧೀಚಿಯು ಇಂದ್ರನಿಗೆ ವಜ್ರನಿರ್ಮಾಣಕ್ಕೆ ತಮ್ಮ ಅಸ್ಥಿಗಳನ್ನೇ ಕೊಟ್ಟರು. ಇದು ಪ್ರಸಿದ್ಧವಾಗಿದೆ. ಶಿಬಿಚಕ್ರವರ್ತಿಯು ಪಾರಿವಾಳ ವೇಷದ ಅಗ್ನಿಯ ರಕ್ಷಣೆಗೆ ಗಿಡಗದ ರೂಪದ ಇಂದ್ರನಿಗೆ ತನ್ನ ಮಾಂಸವನ್ನು ಕೊಟ್ಟದ್ದೂ ಪುರಾಣಗಳಲ್ಲಿ ಪ್ರಸಿದ್ಧವಾಗಿದೆ. ॥೭॥

''ಕೋ ವಿಕಲ್ಪೋ ೀ ಧರಾದಿಷು'' ಎಂಬುದರಿಂದ ಕೈಮುತ್ಯದಿಂದ ಭೂದಾನ ಮಾಡುವುದು ಸುಲಭವೆಂದು ಬಲಿಯು ಉಪಪಾದಿಸಿದನು. ಆದರೂ ಹಣ ಮುಂತಾದವುಗಳ ಆಸೆಯ ಮಾಹಾತ್ಮ್ಯವನ್ನು ಮನಸ್ಸಿಗೆ ತಂದುಕೊಂಡು ಈಗ ಕೀರ್ತಿಯೊಂದೇ ಸಂಪಾದಿಸಬೇಕಾದುದು. ಆ ಕೀರ್ತಿಯೇ ಯಾವಾಗಲೂ ಉಳಿಯುವುದು. ದೇಹ ಬಿಡುವವರು ಸಾಕಷ್ಟು ಸಿಗುವರು. ಧನ ಬಿಡುವವರು ಸಿಗಲಾರರು ಎಂದು ಎರಡು ಶ್ಲೋಕದಿಂದ ಹೇಳುತ್ತಾರೆ.

ಸಂಪತ್ತಿದ್ದಾಗಲೂ, ಯೋಗ್ಯನಾದ ಯಾಚಕನು ಬಂದಾಗಲೂ ಲೋಭದಿಂದ ಯಾರು ದಾನ ಮಾಡುವುದಿಲ್ಲವೋ ಅವರಿಗೆ ಐಹಿಕ-ಆಮುಷ್ಮಿಕ ಸುಖಗಳು ಸಿದ್ಧಿಸುವುದಿಲ್ಲ ಎಂಬ ಅಭಿಪ್ರಾಯದಿಂದ ಬಲಿಯು ಹೇಳುತ್ತಿದ್ದಾನೆ-

**ಯೈರಿಯಂ ಭುಜ್ಯತೇ ಬ್ರಹ್ಮನ್ ದೈತ್ಯೇಂದ್ರೈರನಿವರ್ತಿಭಿಃ ।**
**ತೇಷಾಂ ಕಾಲೋಽಗ್ರಸೀಲ್ಲೋಕಾನ್ ನ ಯಶೋಽಧಿಗತಂ ಭುವಿ ॥೮॥**

**ಹೇ ಬ್ರಹ್ಮನ್** ಶುಕ್ರಾಚಾರ್ಯರೇ **ಅನಿವರ್ತಿಭಿಃ** ಯುದ್ಧದಲ್ಲಿ ಹಿಂತಿರುಗದ **ಯೈಃ** ಯಾವ **ದೈತ್ಯೇಂದ್ರೈಃ** ದೈತ್ಯಶ್ರೇಷ್ಠರಿಂದ **ಇಯಂ** ಈ ತ್ರಿಲೋಕಗಳು **ಭುಜ್ಯತೇ** ಅನುಭವಿಸಲ್ಪಟ್ಟವೆಯೋ **ತೇಷಾಂ** ಆ ದೈತ್ಯರಾಜರ **ಲೋಕಾನ್** ಎಲ್ಲ ಲೋಕಗಳನ್ನೂ **ಕಾಲಃ** ಕಾಲನಾಮಕ ಭಗವಂತನಿಂದ ಪ್ರೇರಿತನಾದ ಪ್ರಸಿದ್ಧಕಾಲನು ಅಂದರೆ ಯಮನು **ಅಗ್ರಸೀತ್** ನುಂಗಿದನು. ಅವರನ್ನು ಸಾಯಿಸಿ ಅವರಿಗೆ ಲೋಕಗಳ ಸ್ವಾಮಿತ್ವವಿಲ್ಲದಂತೆ ಮಾಡಿದನು. ಆ ದೈತ್ಯರಿಂದ **ಭುವಿ** ಭೂಮಿಯಲ್ಲಿ **ಅಧಿಗತಂ** ಸಂಪಾದಿತವಾದ **ಯಶಃ** ಕೀರ್ತಿಯನ್ನು **ನ ಅಗ್ರಸೀತ್** ನುಂಗಲಿಲ್ಲ. ನಾಶ ಮಾಡಲಿಲ್ಲ.

ಸತ್ಯ ಃ- ಯುದ್ಧಪರಾಙ್ಮುಖರಾಗದ ಯಾವ ದೈತ್ಯರು ಈ ಭೂಮಿಯನ್ನು ಭೋಗ ಮಾಡಿದರೋ ಆ ಎಲ್ಲ ದೈತ್ಯರನ್ನು ಭಗವಂತನಿಂದ ಪ್ರೇರಿತವಾದ ಕಾಲವು ನುಂಗಿಹಾಕಿದೆ. ಅವರ ಐಹಿಕಾಮುಷ್ಮಿಕವಾದ ಲೋಕಗಳನ್ನೂ ನುಂಗಿಹಾಕಿದೆ. ''ಕ್ಷೀಣೇ ಪುಣ್ಯೇ ಮರ್ತ್ಯಲೋಕಂ ವಿಶಂತಿ'' ಎಂಬ ವಚನದಿಂದ ಈ ವಿಷಯವು ಸಿದ್ಧವಾಗಿದೆ. ಆದರೆ ಅವರ ಕೀರ್ತಿಯನ್ನು ಮಾತ್ರ ನುಂಗಲು ಕಾಲಕ್ಕೆ ಆಗಿಲ್ಲ. ಅವರ ಆ ಕೀರ್ತಿಯು ಈಗಲೂ ಇದೆ. ಹೀಗಾಗಿ ಕೀರ್ತಿಯನ್ನೇ ಸಂಪಾದಿಸಬೇಕೆಂದು ಅಭಿಪ್ರಾಯ.

ಇಲ್ಲಿ ನಯಶೋಧಿ ಗತಂ ಎಂಬುದಾಗಿ ಬಿಡಿಸಿಕೊಂಡು ಅರ್ಥವನ್ನು ಹೀಗೆ ತಿಳಿಯಬೇಕು. **ತೇಷಾಂ** ಅವರ **ಗತಂ** ಗತಿಯು **ಭುವಿ** ಭೂಮಿಯಲ್ಲಿ **ನಯಶೋಧಿ** ರಾಜನೀತಿಯಿಂದ ಶೋಧಿಸಲ್ಪಟ್ಟುದು ಎಂದರ್ಥ.

♦ ಕಾಲವಶದಿಂದ ನಾಶವಾಗುವ ಲೋಕಗಳ ದಾನದಿಂದ ನಾಶವಾಗದ ಕೀರ್ತಿ ಬರುವಾಗ ನಾನೇಕೆ ದಾನ ಮಾಡಬಾರದು ಎಂದು ಭಾವ.

♦ ''ಯೇ ಲೋಕಾ ದಾನಶೀಲಾನಾಂ ನ ತಾನಾಪ್ನೋತಿ ಪುಷ್ಕಲಾನ್'' ಎಂಬ ಸ್ಮೃತಿಯಲ್ಲಿ ಹೇಳಿದಂತೆ ದಾನಶೀಲರಿಗೆ ಲಭ್ಯವಾಗುವ ಲೋಕಗಳು ದಾನ ಮಾಡದವರಿಗೆ ಸಿಗುವುದಿಲ್ಲ. ||೮||

**ಸುಲಭಾ ಯುಧಿ ವಿಪ್ರರ್ಷೇ ಹ್ಯನಿವೃತ್ತಾಸ್ತನುತ್ಯಜಃ ।**
**ನ ತಥಾ ತೀರ್ಥ ಆಯಾತೇ ಶ್ರದ್ಧಯಾ ಯೇ ಧನತ್ಯಜಃ ||೯||**

**ಹೇ ವಿಪ್ರರ್ಷೇ** ಬ್ರಾಹ್ಮಣರೂ ಜ್ಞಾನಿಗಳೂ ಆದ ಶುಕ್ರಾಚಾರ್ಯರೇ **ಯುಧಿ** ಯುದ್ಧದಲ್ಲಿ **ಅನಿವೃತ್ತಾಃ** ಹಿಂದಿರುಗದವರಾಗಿ **ತನುತ್ಯಜಃ** ದೇಹ ಬಿಡುವ ಶೂರರು **ಯಥಾ ಸುಲಭಾಃ** ಹೇಗೆ ಅನೇಕರು ಸಿಗುವರೋ **ತಥಾ** ಹಾಗೆ **ತೀರ್ಥೇ ಆಯಾತೇ** ಸತ್ಪಾತ್ರರು ಬಂದಾಗ ಯಜ್ಞಾದಿಗಳು ತಾವಾಗಿ ಬಂದಾಗ **ಶ್ರದ್ಧಯಾ** ಶ್ರದ್ಧೆಯಿಂದ **ಯೇ** ಯಾರು **ಧನತ್ಯಜಃ** ದ್ರವ್ಯದಾನ ಮಾಡುವವರೋ **ತೇ** ಅವರು **ನ ಸುಲಭಾಃ** ಅನೇಕರು ಕಂಡುಬಂದಿಲ್ಲ. ಅಂಥವರು ಅಪರೂಪವೆಂದು ಭಾವ.

ಸತ್ಯ ಃ- ಹೀಗೆ ಹೇಳುವುದರಿಂದ ಯುದ್ಧದಲ್ಲಿ ದೇಹತ್ಯಾಗ ಮಾಡುವದಕ್ಕಿಂತ ರಾಜರಿಗೆ ದಾನವೇ ಶ್ರೇಯಸ್ಕರವೆಂದು ತಿಳಿಸಿದಂತಾಯಿತು. ಹಿಶಬ್ದದಿಂದ ''ಯೇ ಯುಧ್ಯಂತೇ ಪ್ರಧನೇಷು ಶೂರಾಸೋ ಯೇ ತನುತ್ಯಜಃ । ಯೇ ಏವ ಸಹಸ್ರದಕ್ಷಿಣಾಃ'' ಎಂಬ ಉಕ್ತಿಯನ್ನು ಮತ್ತು ಅನುಭವವನ್ನು ಪ್ರಮಾಣವಾಗಿ ಸೂಚಿಸುವರು. ''ಪರಾಚಿಚ್ಛೀರ್ಷಾವನ್ವಜುಸ್ತ ಇಂದ್ರಾವಜ್ವಾನೋ ಯಜ್ವಭಿಃ ಸ್ಪರ್ಧಮಾನಾಃ'' ಎಂಬ ಶ್ರುತಿಯು ಯುದ್ಧದಲ್ಲಿ ದೇಹತ್ಯಾಗ ಮಾಡಿದವರ ಬಾಹುಲ್ಯವನ್ನು ತಿಳಿಸುತ್ತದೆ. ||೯||

ಸರ್ವಸ್ವದಾನ ಮಾಡಿದರೇ ಬಹಳ ಕಷ್ಟವಾಗುತ್ತದೆ ಎಂಬುದಕ್ಕೆ ಉತ್ತರಿಸುವನು-

**ಮನಸ್ವಿನಃ ಕಾರುಣಿಕಸ್ಯ ಶೋಭನಂ**
**ಯದರ್ಥಿಕಾಮೋಪನಯೇನ ದುರ್ಗತಿಃ ।**
**ಕುತಃ ಪುನರ್ಬ್ರಹ್ಮವಿದಾಂ ಭವಾದೃಶಾಂ**
**ತತೋ ವಟೋರಸ್ಯ ದದಾಮಿ ವಾಂಛಿತಮ್** ॥೧೦॥

**ಅರ್ಥಿಕಾಮೋಪನಯೇನ** ದ್ರವ್ಯಾಪೇಕ್ಷೆಯಿಂದ ಬಂದ ಯಾಚಕನಿಗೆ ಬೇಕಾದುದನ್ನು ಕೊಡುವುದರಿಂದ **ಯತ್ ದುರ್ಗತಿಃ ಇತಿ ಉಕ್ತಂ** ದಾರಿದ್ರ್ಯ ಮತ್ತು ನರಕವಾಗುತ್ತದೆಂದು ತಾವು ಏನು ಹೇಳಿದಿರೋ **ತತ್** ಅದು **ಕಾರುಣಿಕಸ್ಯ ಚ** ಕರುಣಾಶಾಲಿಯಾದ **ಮನಸ್ವಿನಃ** ಉದಾರಿಯಾದವನಿಗೆ **ಶೋಭನಂ** ಈ ಲೋಕದಲ್ಲಿಯೂ ಪರಲೋಕದಲ್ಲಿಯೂ ಸುಖಕ್ಕೆ ಸಾಧನವು. ಅಂದ ಮೇಲೆ **ಭವಾದೃಶಾಂ** ತಮ್ಮಂತಹ **ಬ್ರಹ್ಮವಿದಾಂ** ಬ್ರಹ್ಮಜ್ಞಾನಿಗಳಿಗೆ **ಕಾಮೋಪನಯೇನ** ದಾನ ಮಾಡಿದಲ್ಲಿ ಬರುವ ಕ್ಲೇಶವು ಸುಖಕಾರಣವೆಂದು **ಕುತಃ ಪುನಃ** ಪ್ರತ್ಯೇಕ ಹೇಳಬೇಕಿಲ್ಲ. **ತತಃ** ಆದ್ದರಿಂದ ಬ್ರಹ್ಮಚಾರಿಗೆ ಸರ್ವಸ್ವದಾನ ಮಾಡುವುದು ಸುಖಕಾರಣವಾದ್ದರಿಂದ **ಅಸ್ಯ ವಟೋಃ** ಈ ಬ್ರಹ್ಮಚಾರಿಗೆ **ವಾಂಛಿತಂ** ಇಷ್ಟವಾದ ಮೂರು ಹೆಜ್ಜೆಯ ಭೂಮಿಯನ್ನು **ದದಾಮಿ** ಕೊಡುತ್ತೇನೆ. ಕೀರ್ತಿಕಾಮುಕನಾದ ದಾನಶೀಲನಿಗೆ ಅಪಕೀರ್ತಿಗಿಂತ ಬಡತನವೇ ಲೇಸು ಎಂದರ್ಥ.

ಸತ್ಯ :- ''ದುರ್ಗತಿರ್ನರಕೇ ನಿಃಸ್ವೇ'' ಎಂದು ವಿಶ್ವವಿದೆ. ದಾನದಿಂದ ಇಲ್ಲಿ ಕ್ಲೇಶವಾಗಬಹುದು. ಪರಲೋಕದಲ್ಲಿ ಸುಖವಾಗುತ್ತದೆ ಎಂಬ ವಿಷಯದಲ್ಲಿ ''ಇಹ ಕ್ಲೇಶಾಯ ಮಹತೇ ಪ್ರೇತ್ಯಾನಂತಸುಖಾಯ ಚ'' ಎಂಬ ವಚನವು ಪ್ರಮಾಣವಾಗಿದೆ.

ದುರ್ಗತಿಃ ಕುತಃ? ದುರ್ಗತಿ ಏಕಾಗುವದು? ಆಗಲಾರದೆಂದು ಭಾವ.

ಭವಾದೃಶಾಂ ಪಶ್ಯತಾಂ ಸತಾಂ ಅಸ್ಯ ವಟೋಃ ವಾಂಛಿತಂ ದದಾಮಿ ಎಂದಾದರೂ ಅನ್ವಯ. ಮಹಾತ್ಮರ ಸಾಕ್ಷಿಕವಾಗಿ ಕೊಟ್ಟದ್ದು ಮಹಾಫಲ ಜನಕವಾಗಿದೆ ಎಂದು ಭಾವ. **ಭವಾದೃಶಾಂ ವಿದಾಂ** ತಮ್ಮಂತಹ ಜ್ಞಾನಿಗಳಿಗೆ **ಯದ್ ಬ್ರಹ್ಮ** ಯಾವ ಬ್ರಹ್ಮನೋ **ಅಸ್ಯ ವಟೋಃ** ಅಂಥ ಈ ವಟುವಿಗೆ ಎಂದೂ ಅರ್ಥ ಮಾಡಿರುವರು. ॥೧೦॥

ಇವನು ಶ್ರೀಹರಿಯಾಗಿದ್ದಾನೆ. ಸ್ವರ್ಗವನ್ನು ನಿನ್ನಿಂದ ಕಸೆದುಕೊಂಡು ಇಂದ್ರನಿಗೆ ಕೊಡುವನು ಎಂದು ನೀವು ಹೇಳಿದಿರಿ. ಅದು ನಿಜವೇ. ಈ ಯಜ್ಞಸಮಾರಂಭವನ್ನು ಯಾರ ಉದ್ದೇಶದಿಂದ ನಮ್ಮಿಂದ ಮಾಡಿಸುತ್ತಿರುವಿರೋ ಅವನೇ ಇವನಾದರೆ ಮತ್ತಷ್ಟೂ ಲಾಭವೇ ಎಂದು ಹೇಳುವನು-

**ಯಜಂತಿ ಯಜ್ಞಕ್ರತುಭಿರ್ಯಮಾದೃತಾಃ**
**ಭವಂತ ಆಮ್ನಾಯವಿಧಾನಕೋವಿದಾಃ ।**
**ಸ ಏವ ವಿಷ್ಣುರ್ವರದೋऽಸ್ತು ವಾ ಪರೋ**
**ದಾಸ್ಯಾಮ್ಯಮುಷ್ಮೈ ಕ್ಷಿತಿಮೀಪ್ಸಿತಾಂ ಮುನೇ ॥೧೧॥**

**ಹೇ ಮುನೇ** ಮನನಶೀಲರಾದ ಶುಕ್ರಾಚಾರ್ಯರೇ **ಆಮ್ನಾಯವಿಧಾನಕೋವಿದಾಃ** ವೇದವಿಹಿತವಾದ ಕರ್ಮಗಳನ್ನು ಮಾಡುವುದರಲ್ಲಿ ಕುಶಲರಾದ **ಭವಂತಃ** ತಾವು **ಆದೃತಾಃ ಸಂತಃ** ಭಕ್ತಿಯುಳ್ಳವರಾಗಿ **ಯಂ** ಯಾರನ್ನು **ಯಜ್ಞಕ್ರತುಭಿಃ** ಸಾಧಾರಣವಾದ ಯಜ್ಞಗಳಿಂದ, ವಿಶಿಷ್ಟವಾದ ಅಶ್ವಮೇಧಾದಿಕ್ರತುಗಳಿಂದ ಅಥವಾ ಯಜ್ಞವೆಂದರೆ ಅಶ್ವಮೇಧಾದಿಗಳು ಕ್ರತುಗಳು ಅಂದರೆ ಸಪ್ತಸಂಸ್ಥವೆಂಬ ಕರ್ಮಗಳಿಂದ ಜ್ಯೋತಿಷ್ಟೋಮಾದಿಗಳಿಂದ **ಯಜಂತಿ** ಪೂಜಿಸುವಿರೋ **ಸಃ ವಿಷ್ಣುಃ** ಆ ವಿಷ್ಣುವೇ **ವರದೋ ವಾ ಅಸ್ತು** ವರಪ್ರದನೇ ಆಗಲಿ ಅನುಗ್ರಹವನ್ನೇ ಮಾಡಲಿ **ಪರೋ ವಾ ಅಸ್ತು** ಶತ್ರುವೇ ಆಗಿರಲಿ ನಿಗ್ರಹವನ್ನೇ ಮಾಡಲಿ **ಅಮುಷ್ಮೈ** ಈ ವಟುವಿಗೆ **ಈಪ್ಸಿತಾಂ** ಇಷ್ಟವಾದ **ಕ್ಷಿತಿಂ** ಮೂರು ಪಾದ ಭೂಮಿಯನ್ನು **ದಾಸ್ಯಾಮಿ** ಕೊಡುತ್ತೇನೆ.

ಸತ್ಯ :- **ಮುನೇ** ಎಂದು ಸಂಬೋಧಿಸುವ ಮೂಲಕ ಈ ವಿಷಯದಲ್ಲಿ ನಿಮಗೆ ಮೌನವೇ ಒಳ್ಳೆಯದು ಎಂದು ಸೂಚಿಸಿರುವನು. ॥೧೧॥

ಕರ್ಮಜದೇವತೆಯಾದ ಬಲಿಚಕ್ರವರ್ತಿಯು ಬಲಿ ಎಂಬ ಅಸುರಾವೇಶದಿಂದ ಹೇಳುತ್ತಾನೆ. (ಲಿಂಗೇರೀ ಆಚಾರ್ಯರು ಹೀಗೆ ಅವತರಣಿಕೆಯನ್ನು ನೀಡಿದ್ದಾರೆ.)

**ಯದ್ಯಪ್ಯಸಾವಧರ್ಮೇಣ ಮಾಂ ಬಧ್ನೀಯಾದನಾಗಸಮ್ ।**
**ತಥಾಪ್ಯೇನಂ ನ ಹಿಂಸಿಷ್ಯೇ ಭೀತಂ ಬ್ರಹ್ಮತನುಂ ರಿಪುಮ್ ॥೧೨॥**

**ಅಸೌ** ನೀವು ಹೇಳಿದಂತೆ ವಂಚಿಸಲು ಬಂದಿರುವ ಈ ವಟುವು **ಅಧರ್ಮೇಣ** ಮೋಸದಿಂದ **ಅನಾಗಸಂ** ಮಾತಿನಂತೆ ಬೇಡಿದ್ದನ್ನು ಕೊಟ್ಟು ಅಪರಾಧಿಯಾಗದ **ಮಾಂ** ನನ್ನನ್ನು **ಯದ್ಯಪಿ ಬಧ್ನೀಯಾತ್** ಒಂದು ವೇಳೆ ಕಟ್ಟಿಸಿಯಾನು **ತಥಾ ಅಪಿ** ಆದರೂ **ಭೀತಂ** ಭಯಗೊಂಡಿರುವ **ಬ್ರಹ್ಮತನುಂ** ಬ್ರಾಹ್ಮಣ ಶರೀರದ ವಟುವಾಗಿ ಬಂದ **ಏನಂ ರಿಪುಂ** ಈ ದೈತ್ಯಶತ್ರುವನ್ನು **ನ ಹಿಂಸಿಷ್ಯೇ** ಹಿಂಸಿಸುವುದಿಲ್ಲ. (ಕೊಲ್ಲುವುದಿಲ್ಲ). ॥೧೨॥

**ಏಷ ವಾ ಉತ್ತಮಶ್ಲೋಕೇ ನ ಜಿಹಾಸತಿ ಯದ್ ಯಶಃ ।**
**ಹತ್ವಾ ಮೈನಾಂ ಹರೇದ್ ಯುದ್ಧೇ ಶಯೀತ ನಿಹತೋ ಮಯಾ ॥೧೩॥**

**ಏಷಃ** ಇವನು **ಉತ್ತಮಶ್ಲೋಕಃ** ಪವಿತ್ರಕೀರ್ತಿಯುಳ್ಳ ವಿಷ್ಣುವೋ **ವಾ** ಅಥವಾ ಮತ್ತೊಬ್ಬನೋ **ಅಸ್ತು** ಆಗಿರಲಿ **ಮಾ** ನನ್ನನ್ನು **ಹತ್ವಾ** ಕೊಂದು (ಮೋಸದಿಂದ ಎಲ್ಲವನ್ನು

ಕಸಿದುಕೊಂಡು) **ಏನಾಂ** ಈ ಭೂಮಿಯನ್ನೆಲ್ಲ **ಹರೇತ್** ಅಪಹರಿಸಬಹುದು ಅನಂತರ ಇವನ ವಂಚನೆಯಿಂದ ಕ್ರುದ್ಧನಾದ **ಮಯಾ** ನನ್ನಿಂದ **ಯುದ್ಧೇ** ಯುದ್ಧದಲ್ಲಿ **ನಿಹತಃ** ಸಾಯಿಸಲ್ಪಟ್ಟು **ಶಯೀತ** ಮಲಗಬಹುದು. ಈ ಎರಡೂ ಪಕ್ಷದಲ್ಲಿಯೂ **ಯತ್** ಯಾವ ನನ್ನಿಂದ ಅಪೇಕ್ಷಿತವಾದ **ಯಶಃ** ಕೀರ್ತಿಯು **ನ ಜಿಹಾಸತಿ** ನನ್ನನ್ನು ಬಿಡಲಿಚ್ಛಿಸುವುದಿಲ್ಲ. ನನಗೆ ಕೀರ್ತಿ ಬಂದೇ ಬರುವುದು ಎಂದು ಭಾವ.

**ಯದಿ** ಒಂದು ವೇಳೆ **ಏಷಃ** ಇವನು **ಉತ್ತಮಶ್ಲೋಕಃ** ಒಳ್ಳೆ ಕೀರ್ತಿಯುಳ್ಳವನು **ಯಶಃ ನ ಜಹಾತಿ** ಕೀರ್ತಿಯನ್ನು ಬಿಡಲು ಇಚ್ಛಿಸುವುದಿಲ್ಲ. ಯುದ್ಧ ಮಾಡುವನೆಂದರ್ಥ. **ತರ್ಹಿ** ಆಗ **ಮಾಂ ಹತ್ವಾ** ನನ್ನನ್ನು ಕೊಂದು **ಏನಾಂ** ಭೂಮಿಯನ್ನು **ಹರೇತ್** ಅಪರಿಸುವನು **ಮಯಾ ನಿಹತಃ ಶಯಿತಃ ವಾ** ತಾನೇ ಸತ್ತು ಮಲಗುವನೋ (ಹೀಗೆ ತಿಳಿದದ್ದೂ ಬಂಧನಕ್ಕೆ ಒಂದು ಕಾರಣ) **ಏಷಃ ಉತ್ತಮಶ್ಲೋಕಃ ಏನಾಂ ನ ಜಿಹಾಸತಿ** ಇದನ್ನು ಬಿಡಲಿಚ್ಛಿಸುವುದಿಲ್ಲ **ಮಾಂ ಹತ್ವಾ ನ ಹರೇತ್** ನನ್ನನ್ನು ಕೊಂದು ತೆಗೆದುಕೊಳ್ಳುವುದೂ ಇಲ್ಲ. **ನ ಮಯಾ ಯುದ್ಧೇ ನಿಹತಃ ಶಯೀತ** ನಿನ್ನಿಂದ ಸತ್ತು ಮಲಗುವುದೂ ಇಲ್ಲ **ಯತ್** ಯಾವಕಾರಣ **ತತಃ** ಆದ್ದರಿಂದ **ಯಶಃ** ಬರುವ ಕೀರ್ತಿಯನ್ನು **ನ ಹಿಂಸಿಷ್ಯೇ** ನಾಶ ಮಾಡಿಕೊಳ್ಳುವುದಿಲ್ಲವೆಂದು ಬಲಿಯ ಅಂತರಂಗ ಅಭಿಪ್ರಾಯ. (ಇವನು ಮೋಸದಿಂದ ರಾಜ್ಯ ಅಪಹಾರ ಮಾಡುವನೋ ಅಥವಾ ಯುದ್ಧದಿಂದಲೋ ಎಂದು ಎರಡು ರೀತಿಯ ಪ್ರಶ್ನೆ. ಮೊದಲನೆಯ ಪಕ್ಷಕ್ಕೆ ಉತ್ತರ ೧೨ ನೇ ಶ್ಲೋಕದಲ್ಲಿ ಇದೆ. ಎರಡನೆಯ ಪಕ್ಷಕ್ಕೆ ೧೩ನೇ ಶ್ಲೋಕವು ಉತ್ತರವಾಗಿದೆ.) ।।೧೩।।

**ಶ್ರೀಶುಕ ಉವಾಚ**

**ಏವಮಶ್ರದ್ಧಿತಂ ಶಿಷ್ಯಮನಾದೇಶಕರಂ ಗುರುಃ ।**
**ಶಶಾಪ ದೈವಪ್ರಹಿತಃ ಸತ್ಯಸಂಧಂ ಮನಸ್ವಿನಮ್** ।।೧೪।।

**ಗುರುಃ** ಬಲಿಯ ಗುರುಗಳಾದ ಶುಕ್ರಾಚಾರ್ಯರು **ಏವಂ** ಈ ರೀತಿಯಾಗಿ **ಅನಾದೇಶಕರಂ** ತಮ್ಮ ಅಪ್ಪಣೆಯನ್ನು ಪರಿಪಾಲನೆ ಮಾಡದಿರುವ ಆದ್ದರಿಂದಲೇ **ಅಶ್ರದ್ಧಿತಂ** ತಮ್ಮಲ್ಲಿ ವಿಶ್ವಾಸವಿಲ್ಲದ ಶ್ರದ್ಧೆಯಿಲ್ಲದ ಆದರೆ **ಮನಸ್ವಿನಂ** ಶುದ್ಧಾಂತಃಕರಣನಾದ, ಪ್ರಶಸ್ತವಾದ ಮನಸ್ಸುಳ್ಳ, ದಾನಿಯಾದ, **ಸತ್ಯಸಂಧಂ** ಸತ್ಯ- ಪ್ರತಿಜ್ಞನಾದ **ಶಿಷ್ಯಂ** ಶಾಸನಾರ್ಹನಾದ ಬಲಿಯನ್ನು **ದೈವಪ್ರಹಿತಃ** ಬಲಿಯ ಅದೃಷ್ಟನಿಯಾಮಕನಾದ ಹರಿಯಿಂದ ಪ್ರೇರಿತರಾಗಿ **ಶಶಾಪ** ಶಪಿಸಿದರು.

ಆ ಶಾಪವನ್ನೇ ತಿಳಿಸುವರು-

**ದೃಢಂ ಪಂಡಿತಮಾನ್ಯಜ್ಞಃ ಸ್ತಬ್ಧೋಽಸ್ಯಸ್ಮದುಪೇಕ್ಷಯಾ ।**
**ಮಚ್ಛಾಸನಾತಿಗೋ ಯಸ್ತ್ವಮಚಿರಾದ್ ಭ್ರಶ್ಯಸೇ ಶ್ರಿಯಃ** ।।೧೫।।

**ಹೇ ಅಜ್ಞ** ನಿನ್ನ ಹಿತವನ್ನೂ ತಿಳಿಯದ ಬಲಿಯೇ **ದೃಢಂ** ನಿಶ್ಚಯವಾಗಿಯೂ **ಪಂಡಿತಮಾನೀ** ನಾನೇ ಪಂಡಿತನೆಂಬ ಅಹಂಕಾರ ಉಳ್ಳವನು **ಸ್ತಬ್ಧಃ** ಶಠನೂ ಮೂರ್ಖನು **ಅಸಿ** ಆಗಿರುವಿ **ಯಃ ತ್ವಂ** ಯಾವ ನೀನು **ಅಸ್ಮದುಪೇಕ್ಷಯಾ** ನಮ್ಮಲ್ಲಿ ಉದಾಸೀನ ಮಾಡಿ **ಮಚ್ಛಾಸನಾತಿಗಃ** ನಮ್ಮ ಅಪ್ಪಣೆಯನ್ನು ಉಲ್ಲಂಘಿಸಿದೆಯೋ **ಸಃ ತ್ವಂ** ಆ ನೀನು **ಅಚಿರಾತ್** ಬೇಗನೇ **ಶ್ರಿಯಃ** ನಿನ್ನ ಸಂಪತ್ತಿನಿಂದ **ಭ್ರಶ್ಯಸೇ** ಭ್ರಷ್ಟನಾಗುವಿ ಎಂದು ಶಾಪವಿತ್ತರು.

ಸತ್ಯ ಃ- ಪಂಡಿತಮಾನ್ಯಜ್ಞಃ ಎಂಬುದು ಒಂದೇ ಪದವೆಂದು ಇಟ್ಟುಕೊಳ್ಳಬೇಕು. ಪಂಡಿತಮಾನ್ಯಃ ಇತಿ ಜಾನಾತೀತಿ ಪಂಡಿತಮಾನ್ಯಜ್ಞಃ ಪಂಡಿತರಿಂದ ಗೌರವಿಸಲ್ಪಟ್ಟವನೆಂದು ತನ್ನನ್ನು ತಾನು ತಿಳಿದು **ದೃಢಂ** ನಿಶ್ಚಯವಾಗಿ **ಸ್ತಬ್ಧಃ** ಗರ್ವಿಷ್ಠನು ಅಜ್ಞನು ಆಗಿರುವಿ. ಎಂದೂ ಅರ್ಥವನ್ನು ತಿಳಿಯಬಹುದು.

ಛಲಾರೀ ಃ- ಪಂಡಿತನೆಂದು ಗರ್ವ ಉಳ್ಳವನು ನೀನಾಗಿರುವಿ. ವಾಸ್ತವಿಕವಾಗಿ ಅಜ್ಞಾನಿಯೇ ಆಗಿರುವಿ ಎಂಬುದನ್ನು ಅಜ್ಞಃ ಎಂಬ ಪದದಿಂದ ತಿಳಿಸುತ್ತಿದ್ದಾರೆ. ।।೧೫।।

**ಏವಂ ಶಪ್ತಃ ಸ್ವಗುರುಣಾ ಸತ್ಯಾನ್ನ ಚಲಿತೋ ಮಹಾನ್ ।**
**ವಾಮನಾಯ ದದಾವೇತಾಮರ್ಚಿತ್ವೋದಕಪೂರ್ವಕಮ್ ।।೧೬।।**

**ಮಹಾನ್** ಸತ್ಯವಚನ ಮುಂತಾದ ಗುಣಗಳಿಂದ ಉತ್ತಮನಾದ **ಸಃ** ಬಲಿಚಕ್ರವರ್ತಿಯು **ಗುರುಣಾ** ಶುಕ್ರಾಚಾರ್ಯರಿಂದ **ಏವಂ** ಸಂಪತ್ತಿಲ್ಲದಂತಾಗುವಿ ಎಂದು **ಶಪ್ತಃ ಅಪಿ** ಶಾಪಿಸಲ್ಪಟ್ಟವನಾದರೂ **ಸತ್ಯಾತ್ ನ ಚಲಿತಃ** ಸತ್ಯವನ್ನು ಬಿಡಲಿಲ್ಲ. **ಅರ್ಚಿತ್ವಾ** ಅರ್ಘ್ಯ-ಪಾದ್ಯಾದಿಗಳಿಂದ ವಾಮನನನ್ನು ಪೂಜಿಸಿ **ವಾಮನಾಯ** ವಾಮನನಿಗೆ **ಉದಕಪೂರ್ವಕಂ** ನೀರಿನ ಧಾರೆಯೊಂದಿಗೆ **ಏತಾಂ** ತಾನು ಸಂಕಲ್ಪಿಸಿದ ಮೂರು ಪಾದದ ಭೂಮಿಯನ್ನು **ದದೌ** ದಾನ ಮಾಡಿದನು. ।।೧೬।।

**ವಿಂಧ್ಯಾವಲಿಸ್ತದಾಽಽಗತ್ಯ ಪತ್ನೀ ಜಾಲಕಮಾಲಿನೀ ।**
**ಆನಿನ್ಯೇ ಕಲಶಂ ಹೈಮಮಾವನೇಜನ್ಯಪಾಂ ಭೃತಮ್ ।।೧೭।।**

**ಜಾಲಕಮಾಲಿನೀ** ಮೊಗ್ಗಿನ ಮಾಲೆಯನ್ನು ಹಾಕಿಕೊಂಡಿದ್ದ **ವಿಂಧ್ಯಾವಲೀ** ವಿಂಧ್ಯಾವಲೀ ಎಂಬ ಹೆಸರಿನ **ಪತ್ನೀ** ಬಲಿಯ ಹೆಂಡತಿಯು **ತದಾ** ಆ ಸಂದರ್ಭದಲ್ಲಿ **ಆವನೇಜನ್ಯಪಾಂ ಭೃತಂ** ಪಾದತೊಳೆಯುವ ನೀರಿನಿಂದ ತುಂಬಿದ **ಹೈಮಂ ಕಲಶಂ** ಬಂಗಾರದ ಕೊಡವನ್ನು **ಆನಿನ್ಯೇ** ತಂದಳು.

ಸತ್ಯ ಃ- ಮುಂದಿರುವ **ತತ್ಪಾದಯುಗಂ** ಎಂಬುದನ್ನು ಇಲ್ಲಿ ಅನ್ವಯಿಸಬೇಕು. ವಾಮನನ ಪಾದದ್ವಂದ್ವ ತೊಳೆಯುವುದು ಎಷ್ಟು ನೀರಿನಿಂದ ಆಗುವುದೋ ಅಷ್ಟು ನೀರಿನಿಂದ ತುಂಬಿದ ಎಂದೂ ಅರ್ಥ.

**ಜಾಲಕಮಾಲಿನೀ** ಎಂಬುದಕ್ಕೆ ಅಭಿಧಾನವನ್ನು ಹೇಳದೇ ಜಾಲಕಂ ಮುಕ್ತಾಭರಣವಿಶೇಷಃ ತನ್ಮಾಲಾವತೀ ಎಂದು ಬೇರೆಯವರು ವ್ಯಾಖ್ಯಾನಿಸಿದ್ದಾರೆ. ಆದರೆ ಜಾಲಕ ಎಂದರೆ ಮೊಗ್ಗುಗಳು ಅವುಗಳಿಂದ ಮಾಡಿದ ಮಾಲೆಯುಳ್ಳವಳು ಎಂದರ್ಥ. ''ಜಾಲಕಕೋರಕಕಲಿಕಾಕುಡ್ಮಲಮುಕುಲಾನಿ ತುಲ್ಯಾನಿ'' ಎಂದು ಹಲಾಯುಧಕೋಶ ಇದೆ ಎಂದು ಪೂರ್ವಿಕರು ವ್ಯಾಖ್ಯಾನಿಸಿರುವರು.

ಛಲಾರೀ :- **ಅವನೇಜನೀ** ಎಂದು ಛಲಾರೀ ಆಚಾರ್ಯರು ಪಠಿಸಿ, ಪಾದತೊಳೆಯಲು ಬಯಸಿದ ವಿಂಧ್ಯಾವಲಿಯು ಎಂದು ಅರ್ಥವನ್ನು ಮಾಡಿರುವರು. ॥೧೭॥

**ಯಜಮಾನಃ ಸ್ವಯಂ ತಸ್ಯ ಶ್ರೀಮತ್ಪಾದಯುಗಂ ಮುದಾ ।**
**ಅವನಿಜ್ಯಾವಹನ್ ಮೂರ್ಧ್ನಿ ತದಪೋ ವಿಶ್ವಪಾವನೀಃ** ॥೧೮॥

**ಯಜಮಾನಃ** ಯಜ್ಞದೀಕ್ಷಿತನಾದ ಬಲಿಚಕ್ರವರ್ತಿಯು **ಸ್ವಯಂ** ತಾನೇ **ಮುದಾ** ಸಂತೋಷದಿಂದ **ತಸ್ಯ** ವಾಮನನ **ಶ್ರೀಮತ್** ಕಾಂತಿಯುತವಾದ **ಪಾದಯುಗಂ** ಎರಡು ಪಾದಗಳನ್ನು **ಅವನಿಜ್ಯ** ತೊಳೆದು **ವಿಶ್ವಪಾವನೀಃ** ಸಮಸ್ತ ಪ್ರಪಂಚವನ್ನೇ ಪವಿತ್ರಗೊಳಿಸುವ **ತದಪಃ** ಆ ಪಾದೋದಕವನ್ನು **ಮೂರ್ಧ್ನಿ** ತಲೆಯಲ್ಲಿ **ಅವಹತ್** ಭಕ್ತಿಯಿಂದ ಧರಿಸಿದನು.

ಸತ್ಯ :- **ವಿಶ್ವಪಃ ಅವನಿಃ ಯಾಸಾಂ ತಾಃ ವಿಶ್ವಪಾವನೀಃ** ವಿಶ್ವೇಶ್ವರನಾದ ಹರನು ಭೂಮಿಯಂತೆ ಯಾವ ಜಲಕ್ಕೆ ಆಶ್ರಯನಾಗಿರುವನೋ ಅಂದರೆ ತನ್ನ ತಲೆಯಲ್ಲಿ ಯಾವ ಜಲವನ್ನು ಧರಿಸಿರುವನೋ ಅಂಥ ಜಲಗಳು ವಿಶ್ವಪಾವನೀಃ ಎಂದು ತಿಳಿಯಬೇಕು. ''ಸೇಶಂ ಪುನಾತಿ'' ''ಯಚ್ಛೌಚನಿಃಸೃತ'' ಮುಂತಾಗಿ ಹೇಳಿದೆ.

ತದಾ ಎಂಬ ಪಾಠದಲ್ಲಿ ವಿಂಧ್ಯಾವಲಿಯು ಕಲಶವನ್ನು ತಂದಾಗ ಎಂದರ್ಥ. ಈಗ ಚರಣಪ್ರಸರಣಸಮಯತ್ವಾತ್ ಪದೇತ್ಯವದನ್ ಪಾದೇತಿ ಜಗಾದ. ಈಗ ಪಾದಗಳನ್ನು ಬೆಳೆಸುವ ಸಮಯವಾದ್ದರಿಂದ ಹಿಂದಿನಂತೆ ಹ್ರಸ್ವಯುಕ್ತವಾದ ಪದ ಎಂದು ಹೇಳದೇ ದೀರ್ಘಯುಕ್ತವಾದ ಪಾದಪದವನ್ನು ಪ್ರಯೋಗಿಸಿದ್ದಾರೆ ಎಂದು ತಿಳಿಯಬೇಕು. ॥೧೮॥

**ತದಾಽಸುರೇಂದ್ರಂ ದಿವಿ ದೇವತಾಗಣಾಃ**
**ಗಂಧರ್ವವಿದ್ಯಾಧರಸಿದ್ಧಚಾರಣಾಃ ।**
**ತತ್ಕರ್ಮ ಸರ್ವೇಽಪಿ ಗೃಣಂತ ಆರ್ಜವಂ**
**ಪ್ರಸೂನವರ್ಷೈಃ ವವೃಷುರ್ಮುದಾನ್ವಿತಾಃ** ॥೧೯॥

**ತದಾ** ಆಗ **ದಿವಿ** ಅಂತರಿಕ್ಷದಲ್ಲಿ ವಾಮನನ ಪೂಜೆಯನ್ನು ನೋಡಲು ಸೇರಿದ್ದ **ದೇವತಾಗಣಾಃ** ದೇವತೆಗಳ ಸಮೂಹಗಳು **ಗಂಧರ್ವವಿದ್ಯಾಧರಸಿದ್ಧಚಾರಣಾಃ**

ಗಂಧರ್ವರು-ವಿದ್ಯಾಧರರು-ಸಿದ್ಧರು-ಚಾರಣರು **ಸರ್ವೇ ಅಪಿ** ಎಲ್ಲರೂ **ಮುದಾನ್ವಿತಾಃ ಚ** ಸಂತೋಷಗೊಂಡವರಾಗಿ **ಆರ್ಜವಂ** ಶತ್ರುವಿಗೂ ದಾನ ಕೊಡುವಂಥ ಋಜುವಾದ ಗುಣವನ್ನು **ತತ್ಕರ್ಮ** ಬಲಿರಾಜನ ಕಾರ್ಯವನ್ನು **ಗೃಣಂತಃ** ಪ್ರಶಂಸಿಸುವವರಾಗಿ **ಅಸುರೇಂದ್ರಂ** ಬಲಿಚಕ್ರವರ್ತಿಯನ್ನು **ಪ್ರಸೂನುವರ್ಷೈಃ ವವೃಷುಃ** ಹೂಮಳೆ ಗರೆದರು.

ಸತ್ಯ :- ಆರ್ಜವಂ ಎಂಬುದರ ಬದಲಾಗಿ **ಆರ್ಯಂ** ಎಂಬ ಪಾಠದಲ್ಲಿ ಅಸುರೇಂದ್ರಂ ಎಂಬುದಕ್ಕೆ ವಿಶೇಷಣ ಎಂಬುದಾಗಿ ತಿಳಿಯಬೇಕು. ಜ್ಞಾನಿಯಾದ ಎಂದು ಅರ್ಥ. ।।೧೯।।

**ನೇದುರ್ಮುಹುರ್ದುಂದುಭಯಃ ಸಹಸ್ರಶೋ**
**ಗಂಧರ್ವಕಿಂಪೂರುಷಕಿನ್ನರಾ ಜಗುಃ ।**
**ಮನಸ್ವಿನಾಽನೇನ ಕೃತಂ ಸುದುಷ್ಕರಂ**
**ವಿದ್ವಾನದಾದ್ ಯದ್ ರಿಪವೇ ಜಗತ್ತ್ರಯಮ್ ।।೨೦।।**

ಬಲಿಯು ದಾನ ಮಾಡುವ ಸಂದರ್ಭದಲ್ಲಿ **ಸಹಸ್ರಶಃ** ಸಾವಿರಾರು **ದುಂದುಭಯಃ** ನಗಾರಿಗಳು **ಮುಹುಃ** ಮತ್ತೆ ಮತ್ತೆ **ನೇದುಃ** ಮೊಳಗಿದವು ಶಬ್ದ ಮಾಡಿದವು. **ಗಂಧರ್ವಕಿಂಪೂರುಷಕಿನ್ನರಾಃ** ಗಂಧರ್ವರು-ಕಿಂಪುರುಷರು ಮತ್ತು ಕಿನ್ನರರು **ಯತ್** ಯಾವ ಕಾರಣ **ವಿದ್ವಾನಪಿ** ದೈತ್ಯರಿಗೆ ಶತ್ರು ಎಂದು ತಿಳಿದೂ ದಾನದ ಫಲವನ್ನು ತಿಳಿದೂ **ರಿಪವೇ** ಶತ್ರುವಾದ ವಾಮನನಿಗೆ **ಜಗತ್ತ್ರಯಂ** ಮೂರು ಲೋಕವನ್ನು **ಅದಾತ್** ದಾನಮಾಡಿದನೋ **ತತ್** ಆ ಕಾರಣ **ಸುದುಷ್ಕರಂ** ಬೇರೆಯವರಿಗೆ ಮಾಡಲಾಗದ ಕಾರ್ಯವು **ಮನಸ್ವಿನಾ** ಮನೋನಿಗ್ರಹ ಉಳ್ಳ **ಅನೇನ** ಬಲಿಚಕ್ರವರ್ತಿಯಿಂದ **ಕೃತಂ** ಮಾಡಲ್ಪಟ್ಟಿತು **ಇತಿ** ಎಂದು **ಜಗುಃ** ಗಾನ ಮಾಡಿದರು. ।।೨೦।।

**ತದ್ವಾಮನಂ ರೂಪಮವರ್ಧತಾದ್ಭುತಂ**
**ಹರೇರನಂತಸ್ಯ ಗುಣತ್ರಯಾತ್ಮಕಮ್ ।**
**ಭೂಃ ಖಂ ದಿಶೋ ದ್ಯೌರ್ವಿವರಾಃ ಪಯೋಧಯಃ**
**ತಿರ್ಯಙ್ನೃದೇವಾ ಋಷಯಸ್ತದಾಸನ್ ।।೨೧।।**

**ಯತ್** ಯಾವ ರೂಪದಲ್ಲಿ **ಭೂಃ** ಭೂಮಿಯು **ಖಂ** ಆಕಾಶವು **ದಿಶಃ** ದಿಕ್ಕುಗಳು **ದ್ಯೌಃ** ಸ್ವರ್ಗವು **ವಿವರಾಃ** ಪಾತಾಳಾದಿಲೋಕಗಳು **ಪಯೋಧಯಃ** ಸಮುದ್ರಗಳು **ತಿರ್ಯಙ್** ಪಶು ಮುಂತಾದವುಗಳು ನೃ ಮನುಷ್ಯರು **ದೇವಾಃ** ದೇವತೆಗಳು **ಋಷಯಃ** ಋಷಿಗಳು **ಆಸನ್** ಅವಕಾಶ ಸಹಿತರಾಗಿ ಇದ್ದರೋ **ತತ್** ಅಂತಹ **ಅನಂತಸ್ಯ** ಅಪರಿಚ್ಛಿನ್ನನಾದ **ಹರೇಃ** ಶ್ರೀಹರಿಯ **ಅದ್ಭುತಂ** ಆಶ್ಚರ್ಯಕರವಾದ **ಗುಣತ್ರಯಾತ್ಮಕಂ** ಸತ್ತ್ವರಜಸ್ತಮೋಗುಣಗಳಿಗೆ ಕಾರಣವಾದ **ವಾಮನಂ ರೂಪಂ** ಸಣ್ಣದಾದ ರೂಪವು **ಅವರ್ಧತ** ಬೆಳೆಯಿತು. ।।೨೧।।

ಸತ್ಯ ಃ- **ಗುಣತ್ರಯಾತ್ಮಕಂ** ಗುಣತ್ರಯಗಳು ಯಾವನ ದೇಹದಲ್ಲಿರುವವೋ, ಗುಣತ್ರಯಾತ್ಮಕ ದೇಹದಿಂದ **ಕಂ** ಸುಖವು ತದುಪಲಕ್ಷಿತವಾದ ಯೋಗ್ಯ ದುಃಖಾದಿಗಳು ಯಾವನಿಂದ ಆಗುವವೋ, ಅಂಥ ಗುಣತ್ರಯಗಳಿಗೆ ಸ್ವಾಮಿಯಾದ ಸುಖಾತ್ಮಕವೂ ಆದ ಎಂದು ಅರ್ಥಗಳನ್ನು ತಿಳಿಯಬೇಕು.

**ಕಾಯೇ ಬಲಿಸ್ತಸ್ಯ ಮಹಾವಿಭೂತೇಃ**
**ಸಹರ್ತ್ವಿಗಾಚಾರ್ಯಸದಸ್ಯ ಏತತ್ ।**
**ದದರ್ಶ ವಿಶ್ವಂ ತ್ರಿಗುಣಂ ಗುಣಾತ್ಮಕೇ**
**ಭೂತೇಂದ್ರಿಯಾರ್ಥಾಶಯಜೀವಯುಕ್ತಮ್** ॥೨೨॥

**ಸಹರ್ತ್ವಿಗಾಚಾರ್ಯಸದಸ್ಯಃ** ಋತ್ವಿಜರಿಂದಲೂ, ಶುಕ್ರಾಚಾರ್ಯರಿಂದಲೂ, ಸಭಿಕರಿಂದಲೂ ಸಹಿತನಾದ **ಬಲಿಃ** ಬಲಿಚಕ್ರವರ್ತಿಯು **ಮಹಾವಿಭೂತೇಃ** ಮಹಾ ಐಶ್ವರ್ಯ ಉಳ್ಳ ವಾಮನನ **ಗುಣಾತ್ಮಕೇ** ಸಚ್ಚಿದಾನಂದಸ್ವರೂಪವಾದ **ಕಾಯೇ** ದೇಹದಲ್ಲಿ **ತ್ರಿಗುಣಂ** ಸತ್ವರಜಸ್ತಮೋಗುಣಗಳ ಕಾರ್ಯವಾದ **ಭೂತೇಂದ್ರಿಯಾರ್ಥಾಶಯ-ಜೀವಯುಕ್ತಂ** ಪಂಚಭೂತಗಳು, ದಶೇಂದ್ರಿಯಗಳು ಶಬ್ದಾದಿವಿಷಯಗಳು ಮನಸ್ಸು ಬುದ್ಧಿ ಇವುಗಳ ಅಭಿಮಾನಿಗಳಾದ ಜೀವರು, ಇತರ ಜೀವರಾಶಿಗಳು ಇವುಗಳಿಂದ ಕೂಡಿದ **ವಿಶ್ವಂ** ಜಗತ್ತನ್ನೇ **ದದರ್ಶ** ಕಂಡರು. ॥೨೨॥

**ರಸಾಮಚಷ್ಟಾಂಘ್ರಿತಲೇಽಥ ಪಾದಯೋಃ**
**ಮಹೀಂ ಮಹೀಧ್ರಾನ್ ಪುರುಷಸ್ಯ ಜಂಘಯೋಃ ।**
**ಪತತ್ರಿಣೋ ಜಾನುನಿ ವಿಶ್ವಮೂರ್ತೇ-**
**ರೂರ್ವೋರ್ಗಣಂ ಮರುತಾಮಿಂದ್ರಸೇನಃ** ॥೨೩॥

**ಅಥ** ಅನಂತರ **ಇಂದ್ರಸೇನಃ** ಬಲಿಚಕ್ರವರ್ತಿಯು (ಬಲಿಯ ಮತ್ತೊಂದು ಹೆಸರು ಎಂದು ಸಾಂಪ್ರದಾಯಿಕರು ಹೇಳುತ್ತಾರೆ.) ಇಂದ್ರನಂತೆ ಸೇನೆಯುಳ್ಳ ಬಲಿಯು **ವಿಶ್ವಮೂರ್ತೇಃ** ವಿಶ್ವವನ್ನು ವ್ಯಾಪಿಸಿದ ಆಕಾರ ಉಳ್ಳ **ಪುರುಷಸ್ಯ** ವಾಮನರೂಪಿಯಾದ ವಿಷ್ಣುವಿನ **ಅಂಘ್ರಿತಲೇ** ಪಾದತಳದಲ್ಲಿ **ರಸಾಂ** ರಸಾತಲ ಮೊದಲಾದ ಲೋಕಗಳನ್ನು **ಪಾದಯೋಃ** ಪಾದಗಳಲ್ಲಿ **ಮಹೀಂ** ಭೂಮಿಯನ್ನು **ಜಂಘಯೋಃ** ಮೊಳಕಾಲಿನ ಕೆಳಗೆ **ಮಹೀಧ್ರಾನ್** ಪರ್ವತಗಳನ್ನು **ಜಾನುನಿ** ಮೊಳಕಾಲಿನಲ್ಲಿ **ಪತತ್ರಿಣಃ** ಪಕ್ಷಿಗಳನ್ನು **ಊರ್ವೋಃ ಚ** ತೊಡೆಗಳಲ್ಲಿ **ಮರುತಾಂ ಗಣಂ** ಮರುದ್ಗಣಗಳನ್ನು **ಅಚಷ್ಟ** ನೋಡಿದನು. ॥೨೩॥

ಸತ್ಯ ಃ- ಇಂದ್ರಸೇನ ಇತಿ ಬಲೇರೇವ ನಾಮಾಂತರಮಿತಿ ಸಂಪ್ರದಾಯವಿದಃ । ಇಂದ್ರಸೇನ ಎಂಬುದು ಬಲಿಯ ಮತ್ತೊಂದು ಹೆಸರೆಂದು ಸಾಂಪ್ರದಾಯಿಕರು ಹೇಳುತ್ತಾರೆ.

♦ ಇಂದ್ರಸೇನ ಇತಿ ನೂನಂ ಬಲೇರ್ನಾಮೈವ । ಸ ಇಂದ್ರಸೇನೋ ಭಗವತ್ಪದಾಂಬುಜಂ (೧೦.೭೪.೩೮) ಇತಿ ಶ್ರೀದಶಮಾತ್ । ಇಂದ್ರಸೇನ ಎಂಬುದು ಬಲಿಯ ಹೆಸರೇ ಆಗಿದೆ. ಭಾಗವತ ದಶಮಸ್ಕಂಧದ ಈ ವಚನವೇ ಈ ವಿಷಯದಲ್ಲಿ ಪ್ರಮಾಣವಾಗಿದೆ. ಎಂದು ಜೀವಗೋಸ್ವಾಮಿಗಳ ಕ್ರಮಸಂದರ್ಭ ಎಂಬ ವ್ಯಾಖ್ಯಾನದಲ್ಲಿಯೂ ಇದೆ.

**ಸಂಧ್ಯಾಂ ವಿಭೋರ್ವಾಸಸಿ ಗುಹ್ಯ ಐಕ್ಷತ್**
**ಪ್ರಜಾಪತೀನ್ ಜಘನೇ ಸ್ವಾತ್ಮಮುಖ್ಯಾನ್ ।**
**ನಾಭ್ಯಾಂ ನಭಃ ಕುಕ್ಷಿಷು ಸಪ್ತಸಿಂಧೂನು-**
**ರುಕ್ರಮಸ್ಯೋರಸಿ ಋಕ್ಷಮಾಲಾಮ್** ॥೨೪॥

**ಉರುಕ್ರಮಸ್ಯ ಚ** ಮಹಾನಡಿಗೆಯುಳ್ಳ ಮೂರು ಹೆಜ್ಜೆಗಳನ್ನಿರಿಸಿದ **ವಿಭೋಃ ಚ** ವ್ಯಾಪ್ತನಾದ ವಾಮನನ **ವಾಸಸಿ** ಪೀತಾಂಬರದಲ್ಲಿ **ಸಂಧ್ಯಾಂ** ಸಂಧ್ಯಾಭಿಮಾನಿಯಾದ ದೇವತೆಯನ್ನೂ **ಗುಹ್ಯೇ** ಜನನೇಂದ್ರಿಯದಲ್ಲಿ **ಪ್ರಜಾಪತೀನ್** ಪ್ರಜೇಶ್ವರರನ್ನು **ಜಘನೇ** ಪೃಷ್ಠದಲ್ಲಿ (ಸೊಂಟದ ಹಿಂಭಾಗದಲ್ಲಿ) **ಸ್ವಾತ್ಮಮುಖ್ಯಾನ್** ತಾನೇ (ಬಲಿಯು) ಮುಖ್ಯವಾಗಿ ಉಳ್ಳ ಭೃತ್ಯರನ್ನು **ನಾಭ್ಯಾಂ** ಹೊಕ್ಕಳಿನಲ್ಲಿ **ನಭಃ** ಆಕಾಶವನ್ನು **ಕುಕ್ಷಿಷು** ಹೊಟ್ಟೆಯಲ್ಲಿ **ಸಪ್ತಸಿಂಧೂನ್** ಏಳು ಸಾಗರಗಳನ್ನು **ಉರಸಿ** ವಕ್ಷಸ್ಥಳದಲ್ಲಿ **ಋಕ್ಷಮಾಲಾಂ** ನಕ್ಷತ್ರಗಳ ಸಾಲುಗಳನ್ನು **ಐಕ್ಷತ** ಕಂಡನು. ॥೨೪॥

ಸತ್ಯ :- ಉದರವು ಒಂದೇ ಇರುವಾಗ ಕುಕ್ಷೌ ಎಂದು ಏಕವಚನ ಪ್ರಯೋಗವನ್ನು ಮಾಡಬೇಕಾಗಿತ್ತು. ಕುಕ್ಷಿಸು ಎಂದು ಬಹುವಚನವನ್ನು ಯಾಕೆ ಪ್ರಯೋಗಿಸಿದ್ದಾರೆ. ಎಂಬ ಪ್ರಶ್ನೆಯು ಬರುತ್ತದೆ. ಆದರೆ **ಅದಿತಿಃ ಪಾಶಾನ್** ಎಂಬಲ್ಲಿಯಂತೆ ಉದರವು ಬಹಳವಾಗದಿದ್ದರೂ ಒಂದೇಯಾಗಿದ್ದರೂ ಉದರದಲ್ಲಿ ಪ್ರದೇಶಬಾಹುಲ್ಯ-ವಿರುವುದರಿಂದ ಕುಕ್ಷಿಷು ಎಂದು ಬಹುವಚನಪ್ರಯೋಗ ಮಾಡಿದ್ದಾರೆ ಎಂದು ತಿಳಿಯಬೇಕು. ॥೨೪॥

**ಹೃದ್ಯಂಗ ಧರ್ಮಂ ಸ್ತನಯೋರ್ಮುರಾರೇ-**
**ರ್ಋತಂ ಚ ಸತ್ಯಂ ಚ ಮನಸ್ಯಥೇಂದುಮ್ ।**
**ಶ್ರಿಯಂ ಚ ವಕ್ಷಸ್ಯರವಿಂದಹಸ್ತಾಂ**
**ಕಂಠೇ ಚ ಸಾಮಾನಿ ಸಮಸ್ತರೇಘಾನ್** ॥೨೫॥

**ಹೇ ಅಂಗ** ಪರೀಕ್ಷಿತನೇ, ಬಲಿಚಕ್ರವರ್ತಿಯು **ಮುರಾರೇಃ** ವಾಮನರೂಪಿಯಾದ ವಿಷ್ಣುವಿನ **ಹೃದಿ** ಹೃದಯದಲ್ಲಿ **ಧರ್ಮಂ** ಧರ್ಮವನ್ನು, ಧರ್ಮಾಭಿಮಾನಿ ದೇವತೆಯನ್ನು **ಸ್ತನಯೋಃ ಚ** ಸ್ತನಗಳಲ್ಲಿ **ಋತಂ** ಯಥಾರ್ಥಜ್ಞಾನವನ್ನು **ಸತ್ಯಂ** ಯಥಾರ್ಥಭಾಷಣವನ್ನು

ತದಭಿಮಾನಿದೇವತೆಗಳನ್ನು **ಮನಸಿ** ಮನಸ್ಸಿನಲ್ಲಿ **ಇಂದುಂ** ಚಂದ್ರನನ್ನು **ವಕ್ಷಸಿ** ವಕ್ಷಃಸ್ಥಳದಲ್ಲಿ **ಅರವಿಂದಹಸ್ತಾಂ** ಕಮಲವನ್ನು ಕೈಯಲ್ಲಿ ಹಿಡಿದ **ಶ್ರಿಯಂ** ಲಕ್ಷ್ಮೀದೇವಿಯನ್ನು **ಕಂಠೇ** ಕುತ್ತಿಗೆಯಲ್ಲಿ **ಸಾಮಾನಿ** ರಥಂತರ ಮೊದಲಾದ ಸಾಮಗಳನ್ನು ಸಾಮಾಭಿಮಾನಿ ದೇವತೆಗಳನ್ನು **ಚ** ಮತ್ತು **ಸಮಸ್ತರೇಫಾನ್** ಎಲ್ಲ ಶಬ್ದಗಳನ್ನೂ **ಐಕ್ಷತ್** ನೋಡಿದನು.

''ರೇಫೋ ರವರ್ಣೇ ಶಬ್ದೇ ಚ ಕುತ್ಸಿತೇ ವಾಚ್ಯವತ್ತುನಃ'' ಎಂದು ಧನಂಜಯ ಕೋಶವಿದೆ. ।।೨೫।।

**ಇಂದ್ರಪ್ರಧಾನಾನಮರಾನ್ ಭುಜೇಷು**
**ತತ್ಕರ್ಣಯೋಃ ಕಕುಭೋ ದ್ಯೌಶ್ಚ ಮೂರ್ಧ್ನಿ ।**
**ಕೇಶೇಷು ಮೇಘಾನ್ ಶ್ವಸನಂ ನಾಸಿಕಾಯಾ**
**ಮಕ್ಷ್ಣೋಶ್ಚ ಸೂರ್ಯಂ ವದನೇ ಚ ವಹ್ನಿಮ್** ।।೨೬।।

ಹಾಗೆಯೇ **ಭುಜೇಷು** ಭುಜಗಳಲ್ಲಿ **ಇಂದ್ರಪ್ರಧಾನಾನ್ ಅಮರಾನ್** ಇಂದ್ರನೇ ಮುಖ್ಯವಾಗಿ ಉಳ್ಳ ದೇವತೆಗಳನ್ನು **ತತ್ಕರ್ಣಯೋಃ** ಅವನ ಕಿವಿಗಳಲ್ಲಿ **ಕಕುಭಃ** ದಿಕ್ಕುಗಳನ್ನು **ಮೂರ್ಧ್ನಿ** ತಲೆಯಲ್ಲಿ **ದ್ಯೌಃ** ದ್ಯುಲೋಕವನ್ನು ಅಂತರಿಕ್ಷದ ಮೇಲಿನ ಪ್ರದೇಶವನ್ನು **ಕೇಶೇಷು** ಕೂದಲಿನಲ್ಲಿ **ಮೇಘಾನ್** ಮೋಡಗಳನ್ನು **ನಾಸಿಕಾಯಾಂ** ಮೂಗಿನಲ್ಲಿ **ಶ್ವಸನಂ** ನಾಸಿಕ್ಯವಾಯುವನ್ನು **ಅಕ್ಷ್ಣೋಃ** ಕಣ್ಣುಗಳಲ್ಲಿ **ಸೂರ್ಯಂ** ಸೂರ್ಯನನ್ನು **ವದನೇ** ಬಾಯಿಯಲ್ಲಿ **ವಹ್ನಿಂ** ಅಗ್ನಿಯನ್ನು **ಐಕ್ಷತ್** ನೋಡಿದನು. ।।೨೬।।

**ವಾಣ್ಯಾಂ ಚ ಛಂದಾಂಸಿ ರಸೇ ಜಲೇಶಂ**
**ಭ್ರುವೋರ್ನಿಷೇಧಂ ಚ ವಿಧಿಂ ಚ ಪಕ್ಷ್ಮಸು ।**
**ಅಹಶ್ಚ ರಾತ್ರಿಂ ಚ ಪರಸ್ಯ ಪುಂಸೋ**
**ಮನ್ಯುಂ ಲಲಾಟೇಽಧರ ಏವ ಲೋಭಮ್** ।।೨೭।।

**ಪರಸ್ಯ ಪುಂಸಃ** ಸರ್ವೋತ್ತಮಪುರುಷನಾದ ವಾಮನನ **ವಾಣ್ಯಾಂ** ಮಾತಿನಲ್ಲಿ **ಛಂದಾಂಸಿ** ವೇದಗಳನ್ನು ಗಾಯತ್ರೀ ಮುಂತಾದ ಛಂದಸ್ಸುಗಳನ್ನು **ರಸೇ** ನಾಲಿಗೆಯಲ್ಲಿ **ಜಲೇಶಂ** ವರುಣನನ್ನು **ಭ್ರುವೋಃ ಚ** ಹುಬ್ಬುಗಳಲ್ಲಿ **ನಿಷೇಧವಿಧಿಂ ಚ** ವಿಧಿ-ನಿಷೇಧಗಳನ್ನು **ಪಕ್ಷ್ಮಸು** ರೆಪ್ಪೆಗಳಲ್ಲಿ **ಅಹಶ್ಚ ರಾತ್ರಿಂ ಚ** ಹಗಲು-ರಾತ್ರಿಗಳನ್ನು **ಲಲಾಟೇ** ಹಣೆಯಲ್ಲಿ **ಮನ್ಯುಂ** ಕೋಪವನ್ನು ಕಂಡನು. ಎಲ್ಲ ಕಡೆಗೂ ಅಭಿಮಾನಿ ದೇವತೆಗಳನ್ನು ತೆಗೆದುಕೊಳ್ಳಬೇಕು.

**ಸ್ಪರ್ಶೇ ಚ ಕಾಮಂ ನೃಪ ರೇತಸ್ಯಮಂಭಃ**
**ಪೃಷ್ಠೇ ತ್ವಧರ್ಮಂ ಕ್ರಮಣೇಷು ಯಜ್ಞಮ್ ।**
**ಛಾಯಾಸು ಮೃತ್ಯುಂ ಹಸಿತೇ ಚ ಮಾಯಾಂ**
**ತನೂರುಹೇಷ್ವೌಷಧಿಜಾತಯಶ್ಚ** ।।೨೮।।

**ಹೇ ನೃಪ** ಪರೀಕ್ಷಿದ್ರಾಜನೇ **ಸ್ಪರ್ಶೇ ಚ** ತ್ವಗಿಂದ್ರಿಯದಲ್ಲಿ ಅದರ ಗುಣವಾದ ಸ್ಪರ್ಶದಲ್ಲಿ **ಕಾಮಂ** ಕಾಮನನ್ನು **ಅಂಭಃ** ನೀರನ್ನು **ರೇತಸ್ಯಂ** ರೇತಸ್ಸಿನಿಂದ ಹುಟ್ಟಿದ್ದನ್ನಾಗಿ **ಪೃಷ್ಠೇ** ಬೆನ್ನಿನಲ್ಲಿ **ಅಧರ್ಮಂ** ಪಾಪವನ್ನು **ಕ್ರಮಣೇಷು** ಹೆಜ್ಜೆಗಳಲ್ಲಿ **ಯಜ್ಞಂ** ಯಜ್ಞನಾಮಕನಾದ ಹರಿಯನ್ನೇ **ಛಾಯಾಸು** ಸೃಷ್ಟಿಸಿದ ನೆರಳಿನಲ್ಲಿ **ಮೃತ್ಯುಂ** ಮೃತ್ಯುವನ್ನು **ಹಸಿತೇ ಚ** ನಗುವಿನಲ್ಲಿ **ಮಾಯಾಂ** ಮೋಹಕಶಕ್ತಿಯನ್ನು **ತನೂರುಹೇಷು** ಮೈಗೂದಲುಗಳಲ್ಲಿ **ಓಷಧಿಜಾತಯಃ** ವೃಕ್ಷಜಾತಿಗಳನ್ನು ಕಂಡನು. ।।೨೮।।

♦ **ರೇತಸಿ** ಎಂದು ಪಠಿಸಿ ರೇತಸ್ಸಿನಲ್ಲಿ **ಅಂಭಃ** ನೀರನ್ನು ನೀರಿಗೆ ಅಭಿಮಾನಿಯಾದ ದೇವತೆಯನ್ನು ಕಂಡನು ಎಂದು ಛಲಾರೀ ಆಚಾರ್ಯರು ಮತ್ತು ಲಿಂಗೇರೀ ಆಚಾರ್ಯರು ವ್ಯಾಖ್ಯಾನಿಸಿದ್ದಾರೆ.

♦ ರೇತಸ ಉದ್ಭೂತಂ ರೇತಸ್ಯಂ ಎಂಬುದಾಗಿ ಶ್ರೀವಿಜಯಧ್ವಜರು ರೇತಸ್ಯಂ ಎಂಬ ಪಾಠವನ್ನೇ ಸ್ವೀಕರಿಸಿದ್ದಾರೆ.

♦ ರೇತಸೋಽಂಭಃ ಎಂಬ ಪಾಠವನ್ನು ಸ್ವೀಕರಿಸಿ ಶ್ರೀಧರೀ ಮುಂತಾದ ವ್ಯಾಖ್ಯಾನಕಾರರು ರೇತಸಃ ಎಂಬುದಕ್ಕೇ ರೇತಸಿ ಎಂಬ ಸಪ್ತಮೀವಿಭಕ್ತಿಯ ಅರ್ಥವನ್ನು ಹೇಳಿದ್ದಾರೆ.

♦ ಶುಕದೇವ ಮುಂತಾದವರು ರೇತಸಾ ಎಂಬ ತೃತೀಯಾಂತವಾದ ಪಾಠವನ್ನು ಸ್ವೀಕರಿಸಿ ರೇತಸಿ ಎಂದು ಸಪ್ತಮ್ಯರ್ಥವನ್ನೇ ಹೇಳಿದ್ದಾರೆ.

**ನದೀಶ್ಚ ನಾಡೀಷು ಶಿಲಾ ನಖೇಷು**
**ಬುದ್ಧಾವಜಂ ದೇವಗಣಾನೃಷೀಂಶ್ಚ ।**
**ಪ್ರಾಣೇಷು ಗಾತ್ರೇ ಸ್ಥಿರಜಂಗಮಾನಿ**
**ಕ್ಷಣಾರ್ಧಮಾತ್ರೇಣ ವಿವೃದ್ಧಮೂರ್ತೇಃ ।।೨೯।।**

**ಕ್ಷಣಾರ್ಧಮಾತ್ರೇಣ** ಅರ್ಧಕ್ಷಣದಲ್ಲಿಯೇ **ವಿವೃದ್ಧಮೂರ್ತೇಃ** ಬೆಳೆದು ನಿಂತ ದೇಹ ಉಳ್ಳ ವಾಮನನ **ನಾಡೀಷು** ಸುಷುಮ್ನಾದಿ ನಾಡಿಗಳಲ್ಲಿ **ನದೀಃ** ನದಿಗಳನ್ನು **ನಖೇಷು** ಉಗುರುಗಳಲ್ಲಿ **ಶಿಲಾಃ** ಕಲ್ಲುಗಳನ್ನು **ಬುದ್ಧೌ** ಬುದ್ಧಿಯಲ್ಲಿ **ಅಜಂ** ಬ್ರಹ್ಮದೇವರನ್ನು **ಪ್ರಾಣೇಷು** ಪ್ರಾಣಗಳಲ್ಲಿ **ದೇವಗಣಾನ್** ದೇವತೆಗಳ ಸಮೂಹವನ್ನು **ಋಷೀನ್** ಋಷಿಗಳನ್ನು **ಗಾತ್ರೇ** ಮಿಕ್ಕ ದೇಹದಲ್ಲಿ ಅಥವಾ ಈ ರೀತಿಯಾಗಿ ದೇಹದಲ್ಲಿ **ಸ್ಥಿರಜಂಗಮಾನಿ** ಚರಾಚರ ಪ್ರಪಂಚವನ್ನು ನೋಡಿದನು. ।।೨೯।।

**ಸರ್ವಾತ್ಮನೀದಂ ಭುವನಂ ನಿರೀಕ್ಷ್ಯ**
**ಸರ್ವೇಽಸುರಾಃ ಕಶ್ಮಲಮಾಪುರಂಗ ।**

**ಸುದರ್ಶನಂ ಚಕ್ರಮಸಹ್ಯತೇಜೋ**
**ಧನುಶ್ಚ ಶಾರ್ಙ್ಗಂ ಸ್ತನಯಿತ್ನುಘೋಷಮ್** ॥೩೦॥

**ಪರ್ಜನ್ಯಘೋಷೋ ಜಲಜಃ ಪಾಂಚಜನ್ಯಃ**
**ಕೌಮೋದಕೀ ವಿಷ್ಣುಗದಾ ತರಸ್ವಿನೀ ।**
**ವೈದ್ಯಾಧರೋಽಸಿಃ ಶತಚಂದ್ರಯುಕ್ತ-**
**ಸ್ತೂಣೋತ್ತಮಾವಕ್ಷಯಸಾಯಕೌ ಚ** ॥೩೧॥

**ಹೇ ಅಂಗ** ಪ್ರಿಯನಾದ ಪರೀಕ್ಷಿತನೇ **ಸರ್ವೇ ಅಸುರಾಃ** ಬಲಿಯನ್ನು ಬಿಟ್ಟು ಉಳಿದ ಎಲ್ಲ ದೈತ್ಯರು **ಸರ್ವಾತ್ಮನಿ** ಸರ್ವಸ್ವಾಮಿಯಾದ, ಸರ್ವತ್ರ ವ್ಯಾಪ್ತನಾದ ವಾಮನನಲ್ಲಿ **ಇದಂ ಭುವನಂ** ಮೇಲೆ ಹೇಳಿದ ಈ ಜಗತ್ತನ್ನೇ **ನಿರೀಕ್ಷ್ಯ** ನೋಡಿ **ಕಶ್ಮಲಂ ಆಪುಃ** ಮೂರ್ಛೆ ಹೊಂದಿದರು ಆಗ ವಾಮನನಲ್ಲಿ **ಅಸಹ್ಯತೇಜಃ** ದೈತ್ಯರಿಗೆ ಸಹಿಸಲಾಗದ ಸಾಮರ್ಥ್ಯ ಉಳ್ಳ **ಸುದರ್ಶನಂ ಚಕ್ರಂ** ಸುದರ್ಶನವೆಂಬ ಚಕ್ರವು ದೇವತೆಗಳಿಗೆ ಮಂಗಳಕರದರ್ಶನ ಉಳ್ಳ ಚಕ್ರವು **ಸ್ತನಯಿತ್ನುಘೋಷಂ** ಗುಡಿಗಿನಂತೆ ಶಬ್ದ ಉಳ್ಳ **ಶಾರ್ಙ್ಗಂ ಧನುಃ** ಶಾರ್ಙ್ಗವೆಂಬ ಧನುಸ್ಸು **ಪರ್ಜನ್ಯಘೋಷಃ** ಮೇಘಗರ್ಜನೆಯಂತೆ ಶಬ್ದ ಉಳ್ಳ **ಪಾಂಚಜನ್ಯಜಲಜಃ** ಪಾಂಚಜನ್ಯವೆಂಬ ಶಂಖವು **ತರಸ್ವಿನೀ** ವೇಗ ಉಳ್ಳ **ವಿಷ್ಣುಗದಾ** ವಿಷ್ಣುವಿನಿಂದ ತನ್ನ ದ್ವಾರಾ ವೈರಿಗಳಿಗೆ **ಗದ** ರೋಗಗಳನ್ನು ಕೊಡುವ **ಕೌಮೋದಕೀ** ಕೌಮದಕಿ ಎಂಬ ಗದೆಯು **ಶತಚಂದ್ರಯುಕ್ತಃ** ಶತಚಂದ್ರವೆಂಬ ಗುರಾಣಿಯಿಂದ ಕೂಡಿದ ಅಥವಾ ತನ್ನ ಮೇಲೆ ಚಂದ್ರಾಕಾರವಾದ ನೂರು ರೇಖೆಗಳುಳ್ಳ **ವೈದ್ಯಾಧರಃ** ವಿದ್ಯಾಧರಾಧಿಷ್ಠಿತವಾದ **ಅಸಿಃ** ಖಡ್ಗವು **ಅಕ್ಷಯಸಾಯಕೌ** ಮುಗಿಯದ ಬಾಣಗಳುಳ್ಳ **ತೂಣೋತ್ತಮೌ** ಎರಡು ಶ್ರೇಷ್ಠ ಬತ್ತಳಿಕೆಗಳು ಕಾಣಿಸಿದವು. ॥೩೦-೩೧॥

**ಸುನಂದನಂದಾ ಉಪತಸ್ಥುರೀಶಂ**
**ಪಾರ್ಷದಮುಖ್ಯಾಃ ಸಹಲೋಕಪಾಲಾಃ ।**
**ಸ್ಫುರತ್ಕಿರೀಟಾಂಗದಮೀನಕುಂಡಲ-**
**ಶ್ರೀವತ್ಸರತ್ನೋತ್ತಮಮೇಖಲಾಂಬರೈಃ ।**
**ಮಧುವ್ರತಸ್ರಗ್ವನಮಾಲಯಾಽಽವೃತೋ**
**ರರಾಜ ರಾಜನ್ ಭಗವಾನುರುಕ್ರಮಃ** ॥೩೨॥

**ಸಹಲೋಕಪಾಲಾಃ** ಇಂದ್ರಾದಿಲೋಕಪಾಲಕರಿಂದ ಕೂಡಿದ **ಸುನಂದನಂದಾಃ** ಸುನಂದ-ನಂದರು **ಪಾರ್ಷಾದಮುಖ್ಯಾಃ** ದ್ವಾರಪಾಲಕರಲ್ಲಿ ಮುಖ್ಯರಾದ ಜಯ-ವಿಜಯರು **ಈಶಂ** ಸರ್ವನಿಯಾಮಕನಾದ ಶ್ರೀಹರಿಯನ್ನು **ಉಪತಸ್ಥುಃ** ಸೇವಿಸಿದರು **ಹೇ ರಾಜನ್** ಪರೀಕ್ಷಿತನೇ **ಸ್ಫುರತ್** ಪ್ರಕಾಶಮಾನವಾದ **ಕಿರೀಟ** ತಲೆಯಲ್ಲಿ ಧರಿಸುವ ಕಿರೀಟ

**ಅಂಗದ** ತೋಳಿನ ಭೂಷಣ **ಮೀನಕುಂಡಲ** ಮಕರಕುಂಡಲ **ಶ್ರೀವತ್ಸ** ಶ್ರೀವತ್ಸವು **ರತ್ನೋತ್ತಮ** ರತ್ನಶ್ರೇಷ್ಠವಾದ ಕೌಸ್ತುಭ **ಮೇಖಲಾ** ಉಡುದಾರ **ಅಂಬರೈಃ** ಪಿತಾಂಬರಗಳಿಂದ **ಮಧುವ್ರತಸ್ರಗ್ವನಮಾಲಯಾ** ದುಂಬಿಗಳಿಂದ ಕೂಡಿದ ವೈಜಯಂತಿ ವನಮಾಲೆಗಳಿಂದ **ಆವೃತಃ** ಕೂಡಿದ **ಭಗವಾನ್ ಉರುಕ್ರಮಃ** ವಾಮನರೂಪಿ ವಿಷ್ಣುವು **ರರಾಜ** ಶೋಭಿಸಿದನು.

ಯಾವಾಗಲೂ ಪ್ರಕಾಶಿಸುವ ಶ್ರೀಹರಿಯು ಆಗ ಲೌಕಿಕರಿಗೆ ಹೆಚ್ಚು ಪ್ರಕಾಶಿಸಿದಂತೆ ಕಂಡನು ಎಂದು ತಾತ್ಪರ್ಯ. ಪಾರ್ಷದಾ ಏವ ಪಾರ್ಷಾದಾಃ ಪಾರ್ಷದ ಮತ್ತು ಪಾರ್ಷಾದ ಎರಡೂ ಒಂದೇ. ||೩೨||

**ಕ್ಷಿತಿಂ ಪದೈಕೇನ ಬಲೇರ್ವಿಚಕ್ರಮೇ**
**ನಭಃ ಶರೀರೇಣ ದಿಶಶ್ಚ ಬಾಹುಭಿಃ ।**
**ಪದಂ ದ್ವಿತೀಯಂ ಕ್ರಮತಸ್ತ್ರಿವಿಷ್ಟಪಂ**
**ನ ವೈ ತೃತೀಯಸ್ಯ ತದೀಯಮಣ್ವಪಿ ।**
**ಉರುಕ್ರಮಸ್ಯಾಂಘ್ರಿರುಪರ್ಯಥೋ ದಿವೋ**
**ಮಹರ್ಜನಾಭ್ಯಾಂ ತಪಸಃ ಪರಂಗತಃ** **||೩೩||**

**|| ಇತಿ ಶ್ರೀಮದ್ಭಾಗವತೇ ಅಷ್ಟಮಸ್ಕಂಧೇ ಏಕೋನವಿಂಶೋಽಧ್ಯಾಯಃ ||**

ಆ ತ್ರಿವಿಕ್ರಮನಾದ ವಾಮನನು **ಏಕೇನ ಪದಾ** ಒಂದು ಹೆಜ್ಜೆಯಿಂದ **ಬಲೇಃ** ಬಲಿರಾಜನ **ಕ್ಷಿತಿಂ** ಭೂಮಿಯನ್ನು **ಶರೀರೇಣ** ಶರೀರದಿಂದ **ನಭಃ ಚ** ಅಂತರಿಕ್ಷವನ್ನು **ಬಾಹುಭಿಃ** ಭುಜಗಳಿಂದ **ದಿಶಃ** ದಿಕ್ಕುಗಳನ್ನು **ವಿಚಕ್ರಮೇ** ಆಕ್ರಮಿಸಿದನು. **ದ್ವಿತೀಯಂ ಪದಂ** ಎರಡನೆಯ ಹೆಜ್ಜೆಯನ್ನು **(ನಿಧಾಯ)** ಇಟ್ಟು **ತ್ರಿವಿಷ್ಟಪಂ** ಸ್ವರ್ಗವನ್ನು **ಕ್ರಮತಃ** ಆಕ್ರಮಿಸಿದ ವಾಮನನ **ತೃತೀಯಸ್ಯ** ಮೂರನೇ ಹೆಜ್ಜೆಗೆ **ತದೀಯಂ** ಬಲಿರಾಜನ **ಅಣು ಅಪಿ** ಸ್ವಲ್ಪವೂ ಕೂಡ ಸ್ಥಾನವು **ನ** ಇರಲಿಲ್ಲ. **ವೈ** ಇದು ಪ್ರಸಿದ್ಧವು. ಈ ರೀತಿಯಲ್ಲಿ ತ್ರಿವಿಕ್ರಮನ ಪಾದವು **ದಿವಃ** ಸ್ವರ್ಗದ **ಉಪರಿ** ಮೇಲೆ **ಅಧಃ ಚ** ಕೆಳಗೂ ವ್ಯಾಪ್ತವಾಗಿ **ಮಹರ್ಜನಾಭ್ಯಾಂ** ಮಹರ್ಲೋಕ-ಜನಲೋಕಗಳನ್ನು ಮೀರಿ **ತಪಸಃ** ತಪೋಲೋಕಕ್ಕೂ **ಪರಂ** ಮೇಲೆ ಇರುವ ಪ್ರದೇಶಕ್ಕೆ **ಅರ್ಥಾತ್** ಸತ್ಯಲೋಕಕ್ಕೆ **ಗತಃ** ಹೋಯಿತು. **ತೃತೀಯಂ ಪದಂ ಕ್ರಮತಃ** ಮೂರನೆಯ ಹೆಜ್ಜೆ ಇಡುವವನಿಗೆ **ತ್ರಿವಿಷ್ಟಪಂ** ಸ್ವರ್ಗವು **ಅಣು ಜಾತಂ** ಸ್ವಲ್ಪವಾಯಿತು.

ಸತ್ಯ :- ಬಲಿಯ ಅಧೀನವಾದ ಲೋಕಗಳು ಮುಗಿದು ಹೋದುದರಿಂದ ಅಪೂರ್ಣವಾಯಿತು. ಆದ್ದರಿಂದ ಮೂರನೆಯ ಪಾದಕ್ಕೆ **ತದೀಯಂ ಅಣ್ವಪಿ** ಬಲಿಯ ಅಧೀನವಾದ ಸ್ಥಳವು ಸ್ವಲ್ಪವೂ ನ ಇರಲಿಲ್ಲ. ||೩೩||

**ಇಲ್ಲಿಗೆ ಹತ್ತೊಂಬತ್ತನೇ ಅಧ್ಯಾಯವು ಮುಗಿಯಿತು.**

# ಅಥ ವಿಂಶೋಽಧ್ಯಾಯಃ

ಎಲ್ಲವನ್ನು ಅಪಹರಿಸಿದರೂ ಸ್ವಾಭಾವಿಕವಾಗಿಯೇ ಭಗವಂತನ ಭಕ್ತನಾದ ಬಲಿಗೆ ಕೋಪವಾಗಲಿ, ತಾಪವಾಗಲಿ ಆಗಲಿಲ್ಲವೆಂದು ತಿಳಿಸಲು ಈ ಅಧ್ಯಾಯವು ಹೊರಟಿದೆ. ಅದರಲ್ಲಿಯೂ ಪ್ರಾರಂಭದಲ್ಲಿ ತನ್ನ ಲೋಕಕ್ಕೆ ಆಗಮಿಸಿದ ಅತಿಥಿಯಾದ ಭಗವಂತನಿಗೆ ಗೃಹಸ್ಥಧರ್ಮದ ಅನುಸಾರ ಬ್ರಹ್ಮದೇವರು ಏನು ಅರ್ಪಿಸಿದರೆಂದು ತಿಳಿಸುತ್ತಿದ್ದಾರೆ-

**ಶ್ರೀಶುಕ ಉವಾಚ**

**ಸ ತಂ ಸಮೀಕ್ಷ್ಯಾಬ್ಜಭವೋ ನಖೇಂದುಭಿಃ**
**ಹೃತಸ್ವಧಾಮದ್ಯುತಿರಾವೃತೋಽಭ್ಯಗಾತ್ ।**
**ಮರೀಚಿಮಿಶ್ರಾ ಋಷಯೋ ಬೃಹದ್ವ್ರತಾಃ**
**ಸನಂದನಾದ್ಯಾ ನರದೇವ ಯೋಗಿನಃ** ॥೧॥

**ಹೇ ನರದೇವ** ಪರೀಕ್ಷಿದ್ರಾಜನೇ **ನಖೇಂದುಭಿಃ** ಶ್ರೀಹರಿಯ ಕಾಲಿನ ಉಗುರುಗಳೆಂಬ ಚಂದ್ರರ ಕಾಂತಿಯಿಂದ **ಹೃತಸ್ವಧಾಮದ್ಯುತಿಃ** ಅಪಹೃತವಾದ ತಮ್ಮ ವಾಸಸ್ಥಳವಾದ ಸತ್ಯಲೋಕದ ಕಾಂತಿಯುಳ್ಳವರಾದ **ಅಬ್ಜಭವಃ** ಪರಮಾತ್ಮನ ನಾಭಿಕಮಲದಿಂದ ಹುಟ್ಟಿದ **ಸಃ** ಪ್ರಸಿದ್ಧರಾದ ಬ್ರಹ್ಮದೇವರು **ತಂ** ತಮ್ಮ ಲೋಕಕ್ಕೆ ಬಂದ ತ್ರಿವಿಕ್ರಮನ ಪಾದವನ್ನು **ಸಮೀಕ್ಷ್ಯ** ನೋಡಿ **ಆವೃತಃ** ಪರಿವಾರದಿಂದ ಸುತ್ತುವರಿಯಲ್ಪಟ್ಟು **ಅಭ್ಯಗಾತ್** ಪಾದವಿದ್ದ ಪ್ರದೇಶಕ್ಕೆ ಧಾವಿಸಿ ಬಂದರು. **ಬೃಹದ್ವ್ರತಾಃ** ಭಗವದುಪಾಸನಾರೂಪವಾದ ಹಿರಿದಾದ ವ್ರತವನ್ನು ಆಚರಿಸುವ **ಮರೀಚಿಮಿಶ್ರಾಃ** ಮರೀಚಿಗಳಿಂದ ಸಹಿತರಾದ **ಋಷಯಃ** ಋಷಿಗಳೂ **ಸನಂದನಾದ್ಯಾಃ ಯೋಗಿನಃ** ಸನಂದನ ಮೊದಲಾದ ಯೋಗಿಗಳು **ಅಭ್ಯಗುಃ** ಪಾದದ ಸಮೀಪಕ್ಕೆ ಬಂದರು. ॥೧॥

**ವೇದೋಪವೇದಾ ನಿಯಮಾ ಯಮಾನ್ವಿತಾ-**
**ಸ್ತರ್ಕೇತಿಹಾಸಾಂಗಪುರಾಣಸಂಹಿತಾಃ ।**

**ಯೇ ಚಾಪರೇ ಯೋಗಸಮೀರದೀಪಿತ-**
**ಜ್ಞಾನಾಗ್ನಿನಾ ರಂಧಿತಕರ್ಮಕಲ್ಮಷಾಃ ।**
**ವವಂದಿರೇ ಯತ್ಸ್ಮರಣಾನುಭಾವತಃ**
**ಸ್ವಾಯಂಭುವಂ ಧಾಮಗತಾ ಅಕರ್ಮಕಮ್** ॥೨॥

**ವೇದೋಪವೇದಾಃ** ಮೂಲವೇದರಾಶಿಗಳು ಅವಾಂತರವೇದಗಳು ಅಥವಾ ಋಗ್ವೇದ ಮೊದಲಾದ ವೇದಗಳು, ಧನುರ್ವೇದ-ಆಯುರ್ವೇದ-ಗಾಂಧರ್ವ- ಅರ್ಥಶಾಸ್ತ್ರಗಳೆಂಬ ಉಪವೇದಾಭಿಮಾನಿಗಳು **ಯಮಾನ್ವಿತಾಃ ಚ** ಯಮಾಭಿಮಾನಿಗಳಿಂದ ಸಹಿತರಾದ **ನಿಯಮಾಃ** ನಿಯಮಾಭಿಮಾನಿಗಳು **ತರ್ಕೇತಿಹಾಸಾಂಗಪುರಾಣಸಂಹಿತಾಃ** ಬ್ರಹ್ಮತರ್ಕ, ಮಹಾಭಾರತ-ಪಂಚರಾತ್ರಾಗಮ-ಮೂಲರಾಮಾಯಣಗಳೆಂಬ ಇತಿಹಾಸವು, ಶಿಕ್ಷಾ-ಕಲ್ಪ-ವ್ಯಾಕರಣ-ಛಂದಸ್ಸು-ಜ್ಯೋತಿಷ್ಯ-ನಿರುಕ್ತಗಳೆಂಬ ಆರು ಅಂಗಗಳು, ಅಷ್ಟಾದಶ ಪುರಾಣಗಳು **ಸಂಹಿತಾಃ** ಸಂಹಿತಾಭಿಮಾನಿಗಳು **ಯೇ ಚ ಅಪರೇ** ಇನ್ನುಳಿದ ಯೋಗ-ಸಮಾಧಿ-ಧ್ಯಾನಗಳೆಂಬ **ಯೋಗಸಮೀರದೀಪಿತಜ್ಞಾನಾಗ್ನಿನಾ** ಯೋಗರೂಪವಾದ ಗಾಳಿಯಿಂದ ಪ್ರಜ್ವಲಿಸಲ್ಪಟ್ಟ ಜ್ಞಾನವೆಂಬ ಬೆಂಕಿಯಿಂದ **ರಂಧಿತ- ಕರ್ಮಕಲ್ಮಷಾಃ** ದಗ್ಧವಾದ ಪಾಪಗಳುಳ್ಳ ಅಧಿಕಾರಿಗಳು **ಅಗುಃ** ಬಂದರು. ಇವರು **ಯತ್ಸ್ಮರಣಾನುಭಾವತಃ** ಯಾವ ಶ್ರೀಹರಿಯ ನಿರಂತರ ಚಿಂತನದ ಪ್ರಭಾವದಿಂದ **ಅಕರ್ಮಕಂ** ಕರ್ಮಭಿನ್ನವಾದ, ಜ್ಞಾನದಿಂದ ಹೊಂದಲ್ಪಡುವ **ಸ್ವಾಯಂಭುವಂ ಧಾಮ** ಬ್ರಹ್ಮದೇವರ ನಿವಾಸಸ್ಥಳವಾದ ಸತ್ಯಲೋಕವನ್ನು **ಗತಾಃ** ಸೇರಿದ್ದರೋ ಆ ಎಲ್ಲ ಮರೀಚಿ ಮೊದಲಾದವರು ಜ್ಞಾನಪ್ರಾಪ್ಯವಾದ ಪರಮಾತ್ಮನ ಪಾದವನ್ನು ಅಥವಾ ಅಕರ್ಮಪ್ರಾಪ್ಯವಾದ ಪರಮಾತ್ಮನ ಪಾದವನ್ನು ಅಥವಾ ಅಕರ್ಮಪ್ರಾಪ್ಯವಾದ **ಕಂ** ಮೋಕ್ಷಸುಖ ಕೊಡುವ ಪಾದವನ್ನು **ವವಂದಿರೇ** ನಮಸ್ಕರಿಸಿದರು. ಸ್ತೋತ್ರಮಾಡಿದರು ಎಂದನ್ವಯ. ''ಜ್ಞಾನೇನೈವ ತದುತ್ತರಾನ್'' ಎಂದು ಪ್ರಮಾಣವಿರುವದರಿಂದ ''ಅಕರ್ಮಕಂ'' ಎಂಬುದನ್ನು ಸತ್ಯಲೋಕಕ್ಕೂ ವಿಶೇಷಣ ಮಾಡಿದೆ. ॥೨॥

**ಅಥಾಂಘ್ರಯೇ ಪ್ರೋನ್ನಮಿತಾಯ ವಿಷ್ಣೋ-**
**ರುಪಾಹರತ್ ಪದ್ಮಭವೋಽರ್ಹಣೋದಕಮ್ ।**
**ಸಮರ್ಚ್ಯ ಭಕ್ತ್ಯಾಽಭ್ಯಗೃಣಾಚ್ಛುಚಿಶ್ರವಾ**
**ಯನ್ನಾಭಿಪಂಕೇರುಹಸಂಭವಃ ಸ್ವಯಮ್** ॥೩॥

**ಅಥ** ನಮಸ್ಕಾರ ಮಾಡಿದ ನಂತರ **ಪದ್ಮಭವಃ** ಬ್ರಹ್ಮದೇವರು **ಪ್ರೋನ್ನಮಿತಾಯ** ಮೇಲಕ್ಕೆ ಮಾಡಿದ ತಳಭಾಗ ಉಳ್ಳ **ವಿಷ್ಣೋಃ ಅಂಘ್ರಯೇ** ಶ್ರೀಹರಿಯ ಪಾದಕ್ಕೆ **ಅರ್ಹಣೋದಕಂ** ತೊಳೆಯಲು ಬೇಕಾಗುವ ನೀರನ್ನು **ಉಪಾಹರತ್** ತಂದರು. ಪದ್ಮಭವಃ

ಎಂದು ಹೇಳಿದ್ದನ್ನು ಗ್ರಂಥಕಾರರು ತಾವೇ ವಿವರಿಸುವರು. **ಸ್ವಯಂ** ತಾನು **ಯನ್ನಾಭಿಪಂಕೇರುಹಸಂಭವಃ** ಯಾವ ಶ್ರೀಹರಿಯ ಹೊಕ್ಕಳಲ್ಲಿ ಜನಿಸಿದ ಕಮಲದಿಂದ ಹುಟ್ಟಿದರೋ ಯಾವನ ಅನುಗ್ರಹದಿಂದ **ಶುಚಿಶ್ರವಾಃ** ಶುದ್ಧಕೀರ್ತಿಯುಳ್ಳವರಾಗಿರುವರೋ ಆ ವಿಷ್ಣುವನ್ನು **ಭಕ್ತ್ಯಾ ಸಮರ್ಚ್ಯ** ಭಕ್ತಿಯಿಂದ ಸಾಂಗೋಪಾಂಗವಾಗಿ ಪೂಜಿಸಿ **ಅಭ್ಯಗೃಣಾತ್** ಸ್ತೋತ್ರಮಾಡಿದರು. ।।೩।।

**ಧಾತುಃ ಕಮಂಡಲುಜಲಂ ತದುರುಕ್ರಮಸ್ಯ**
**ಪಾದಾವನೇಜನಪವಿತ್ರತಯಾ ನರೇಂದ್ರ ।**
**ಸ್ವರ್ಧುನ್ಯಭೂನ್ನಭಸಿ ಸಾ ಪತತೀ ನಿಮಾರ್ಷ್ಟಿ**
**ಲೋಕತ್ರಯಂ ಭಗವತೋ ವಿಶದೇವ ಕೀರ್ತಿಃ** ।।೪।।

**ಹೇ ನರೇಂದ್ರ** ಪರೀಕ್ಷಿದ್ರಾಜನೇ **ಉರುಕ್ರಮಸ್ಯ** ಬಹುದೊಡ್ಡ ಹೆಜ್ಜೆಯುಳ್ಳ ತ್ರಿವಿಕ್ರಮನ **ಪಾದಾವನೇಜನಪವಿತ್ರತಯಾ** ಪಾದ ತೊಳೆದ ಜಲದಿಂದ ಪವಿತ್ರವಾದ **ಧಾತುಃ** ಬ್ರಹ್ಮದೇವರ ಯಾವ **ಕಮಂಡಲುಜಲಂ** ಕಮಂಡಲು ನೀರಿದೆಯೋ **ತತ್** ಆ ನೀರು **ನಭಸಿ** ಅಂತರಿಕ್ಷದಲ್ಲಿ **ಸ್ವರ್ಧುನಿ** ಸ್ವರ್ಗ ಗಂಗಾನದಿಯಾಗಿ **ಅಭೂತ್** ಆಯಿತು. **ಪತತೀ** ಕೆಳಗಿನ ಲೋಕಗಳಿಗೆ ಹರಿದ **ಸಾ** ಸ್ವರ್ಗಗಂಗೆಯು **ಭಗವತಃ** ಭಗವಂತನ **ವಿಶದಾ** ಶುದ್ಧವಾದ **ಕೀರ್ತಿಃ ಇವ** ಯಶಸ್ಸಿನಂತೆ **ಲೋಕತ್ರಯಂ** ಮೂರು ಲೋಕಗಳನ್ನು **ನಿಮಾರ್ಷ್ಟಿ** ಶುದ್ಧಿ ಮಾಡುವದು. ಭೂಲೋಕ-ಭುವರ್ಲೋಕ-ಸ್ವರ್ಗಲೋಕನಿವಾಸಿಗಳನ್ನು ಆ ಶ್ರೀಹರಿಪಾದೋದಕವು ಪವಿತ್ರಗೊಳಿಸುತ್ತಿರುವುದು ಎಂದರ್ಥ.

ಸತ್ಯ ಃ- ಭಗವತೋ ವಿಶದಾ ಕೀರ್ತಿರಿವ ಎಂದರೆ ಭಗವಂತನ ಕೀರ್ತಿಯು ಹೇಗೆ ಶುಭ್ರವೋ ಅದರಂತೆ ಶುಭ್ರವಾದ ಜಲ ಉಳ್ಳದ್ದು ಗಂಗಾನದಿ ಎಂದು ಅಭಿಪ್ರಾಯ. ಭಗವಂತನ ಕೀರ್ತಿಯಾದ ಈ ಗಂಗಾನದಿಯು ಲೋಕತ್ರಯವನ್ನು ಪ್ರವೇಶಿಸಿತು.

ಬ್ರಹ್ಮದೇವರ ಕಮಂಡಲುಜಲವು **ವಿಶದೇ**=ಕ್ಷೀರಮಾಧುರ್ಯೇ ಹಾಲಿನ ವಿಶದ ಎಂಬ ಮಾಧುರ್ಯದಲ್ಲಿ **ಯಾ ಕೀರ್ತಿಃ** ಯಾವ ಕೀರ್ತಿಯು ಇದೆಯೋ **ತಾಂ** ಆ ಕೀರ್ತಿಯನ್ನು **ನಿಮಾರ್ಷ್ಟಿ** ತೊಳೆಯುವುದು. ಅಂದರೆ ಹಾಲಿನ ಮಾಧುರ್ಯಕ್ಕಿಂತಲೂ ಹೆಚ್ಚಿನ ಮಾಧುರ್ಯ ಬ್ರಹ್ಮದೇವರ ಕಮಂಡಲುವಿನಲ್ಲಿಯ ವಿಷ್ಣುಪಾದೋದಕಕ್ಕೆ ಇದೆ ಎಂದು ತಾತ್ಪರ್ಯ. ''ವಿಶದಂ ಕ್ಷೀರಮಾಧುರ್ಯಂ ಸ್ಥಿರಮಾಜ್ಯಸ್ಯ ತೀಕ್ಷ್ಣಕಮ್ । ಗುಡಸ್ಯ ಪನಸಾದೀನಾಂ ನಿರ್ಹಾರೀತ್ಯಭಿಧೀಯತೇ'' ಎಂದು ಶ್ರೀಮನ್ನ್ಯಾಯಸುಧೆಯಲ್ಲಿ ಹೇಳಿದೆ.

ವೇಃ ಗರುಡಸ್ಯ ಶಮಿವ ಶಂ ಯಸ್ಯ ಸಃ ವಿಶಃ, ವಿಶಶ್ಚಾಸೌ ದೇವಶ್ಚ ವಿಶದೇವಃ ತಸ್ಯ ಕೀರ್ತಿಃ ಯಯಾ ಸಾ ವಿಶದೇವಕೀರ್ತಿಃ ಇದು ಸ್ವರ್ಧುನಿಗೆ ವಿಶೇಷಣವಾಗಿದೆ. ಗರುಡನಿಗೆ

ಸಮಾನರಾದುದರಿಂದ ಗರುಡನಂತೆ ಸುಖ ಉಳ್ಳ ದೇವ ಎಂದರೆ ರುದ್ರದೇವರು ಎಂದು ಅರ್ಥ. ಅಂಥ ರುದ್ರದೇವರಿಗೆ ಕೀರ್ತಿಪ್ರದಳಾದ ಗಂಗಾ ಎಂದರ್ಥ. ಈ ಜಲವು ಬಹಿರಾವರಣವಾದ ನೀರು ಎಂಬುದಾಗಿ ಐದನೇ ಸ್ಕಂಧದಲ್ಲಿ ವಿವರಿಸಿದ ಪ್ರಕಾರವನ್ನು ತಿಳಿಯಬೇಕು.

**ವಿಶದೇ** ಕ್ಷೀರಮಾಧುರ್ಯದಲ್ಲಿ **ಅವಕೀರ್ತಿಃ** ಅಪ್ರಸಾದವು ಯೇನ ಯಾವ ಜಲ ಮಾಧುರ್ಯದಿಂದಲೋ ಅಂಥ ಜಲವು ಎಂದು ಅರ್ಥ. ಭಗವತ್ಪಾದಜಲದಲ್ಲಿಯ ಮಾಧುರ್ಯವನ್ನು ಕಂಡು ಕ್ಷೀರಮಾಧುರ್ಯ ಅಪ್ರಸನ್ನವಾಯಿತು ಎಂದು ಅಭಿಪ್ರಾಯ. ಕ್ಷೀರಗತ ಮಾಧುರ್ಯಕ್ಕಿಂತಲೂ ಭಗವತ್ಪಾದಜಲದಲ್ಲಿಯ ಮಾಧುರ್ಯವೇ ಅತ್ಯಧಿಕ ಎಂದು ಅಭಿಪ್ರಾಯ. ''ಕೀರ್ತಿಃ ಪ್ರಸಾದೇ ಯಶಸೋ ವಿಸ್ತಾರೇ ಕರ್ದಮೇಽಪಿ ಚ'' ಎಂದು ವಿಶ್ವವಿದೆ. ।।೪।।

**ಬ್ರಹ್ಮಾದಯೋ ಲೋಕನಾಥಾಃ ಸ್ವನಾಥಾಯ ಸಮಾದೃತಾಃ ।**
**ಸಾನುಗಾ ಬಲಿಮಾಜಹ್ರುರಸಂಕ್ಷಿಪ್ತಾತ್ಮಭೂತಯೇ ।।೫।।**

**ಸಾನುಗಾಃ** ಪರಿವಾರಸಹಿತರಾದ **ಲೋಕನಾಥಾಃ** ಲೋಕಪಾಲಕರಾದ **ಬ್ರಹ್ಮಾದಯಃ** ಬ್ರಹ್ಮ ಮೊದಲಾದ ದೇವತೆಗಳು **ಸಮಾದೃತಾಃ** ನಿರ್ನಿಮಿತ್ತವಾದ ಭಕ್ತಿಯುಳ್ಳವರಾಗಿ **ಅಸಂಕ್ಷಿಪ್ತಾತ್ಮಭೂತಯೇ** ಸಂಕೋಚವಿಲ್ಲದ ಅಪರಿಮಿತವಾದ ಸ್ವರೂಪ-ಸಾಮರ್ಥ್ಯ-ಸಂಪತ್ತಿನಿಂದ ಯುಕ್ತನಾದ **ಸ್ವನಾಥಾಯ** ತಮ್ಮ ಸ್ವಾಮಿಯಾದ ತ್ರಿವಿಕ್ರಮನಿಗೆ **ಬಲಿಂ** ಪೂಜಾಸಾಮಗ್ರಿಯನ್ನು **ಆಜಹ್ರುಃ** ತಂದರು. ಕಾಣಿಕೆಗಳನ್ನು ಒಪ್ಪಿಸಿದರೆಂದರ್ಥ.

ಸತ್ಯ ಃ- ಸಾನುಗಾಃ ಎನ್ನುವಲ್ಲಿ ಸಾನುಂ ಅಥವಾ ಸಾನು ಗಚ್ಛಂತೀತಿ ಸಾನುಗಾಃ ಎಂದು ವಿಗ್ರಹವನ್ನು ಮಾಡಿ ಹೀಗೆ ಅರ್ಥ ತಿಳಿಯಬೇಕು. ಸಾನುಂ ಪರ್ವತಶೃಂಗವನ್ನು, ವಾತ್ಯಾವನ್ನು, ಕೇವಲಭೂಮಿಯನ್ನೋ ಗಚ್ಛಂತೀತಿ ತಪಸ್ಸು ಮಾಡಲು ಹೋದ ಭಕ್ತರು ಪೂಜಾಸಾಮಗ್ರಗಳನ್ನು ತಂದರು ಎಂದರ್ಥ. ''ಸಾನು ಶೃಂಗೇ ಬುಧೇ ಮಾರ್ಗೇ ವಾತ್ಯಾಯಾಂ ಪಲ್ಲವೇಽವನೌ'' ಎಂದು ವಿಶ್ವವಿದೆ. ಸ್ನುಃ ಪ್ರಸ್ಥಃ ಸಾನು ನ ಸ್ತ್ರಿಯಾಂ'' ಎಂದು ಅಮರವಿದೆ.

◆ ಬಲಿಂ ಪೂಜಾಂ ಪೂಜೆಯನ್ನು ಆಜಹ್ರುಃ ಚಕ್ರುಃ ಮಾಡಿದರು. ಎಂದು ಛಲಾರೀ ಆಚಾರ್ಯರು ಅನ್ವಯ ಮಾಡಿರುವರು. ।।೫।।

ಪೂಜಾ ಸಾಧನಗಳನ್ನೇ ವಿವರಿಸುವರು-

**ತೋಯೈಃ ಸಮರ್ಹಣೈಃ ಸ್ರಗ್ಭಿರ್ದಿವ್ಯಗಂಧಾನುಲೇಪನೈಃ ।**
**ಧೂಪೈರ್ದೀಪೈಃ ಸುರಭಿಭಿರ್ಲಾಜಾಕ್ಷತಫಲಾಂಕುರೈಃ ।।೬।।**

**ಸ್ತವನೈರ್ಜಯಶಬ್ದೈಶ್ಚ ಕೀರ್ತಿಭಿರ್ನಿಯಮಾಂಕಿತೈಃ ।**
**(ತದ್ವೀರ್ಯಮಹಾಮಾಂಕಿತೈಃ) ।**
**ನೃತ್ತವಾದಿತ್ರಗೀತೈಶ್ಚ ಶಂಖದುಂದುಭಿನಿಃಸ್ವನೈಃ ॥೭॥**

**ಜಾಂಬವಾನೃಕ್ಷರಾಜಸ್ತು ಭೇರೀಶಬ್ದೈರ್ಮನೋಜವಃ ।**
**ವಿಜಯಂ ದಿಕ್ಷು ಸರ್ವಾಸು ಮಹೋತ್ಸವಮಘೋಷಯತ್ ॥೮॥**

ಬ್ರಹ್ಮಾದಿದೇವತೆಗಳು **ಸಮರ್ಹಣೈಃ** ಪೂಜಾಸಾಧನಗಳಾದ **ತೋಯೈಃ** ನೀರುಗಳಿಂದ **ಸ್ರಗ್ಭಿಃ** ಮಾಲೆಗಳಿಂದ, **ದಿವ್ಯಗಂಧಾನುಲೈಪನೈಃ** ಶ್ರೇಷ್ಠವಾದ ವಾಸನೆಯುಳ್ಳ ದೇಹಕ್ಕೆ ಹಚ್ಚಿಕೊಳ್ಳುವ ಚಂದನಗಂಧಗಳಿಂದ **ಸುರಭಿಭಿಃ** ಸುವಾಸನೆಯ **ಧೂಪೈಃ** ಧೂಪಗಳಿಂದಲೂ **ದೀಪೈಃ** ದೀಪಗಳಿಂದ **ಲಾಜಾಕ್ಷತಫಲಾಂಕುರೈಃ** ಭತ್ತದ ಅರಳುಗಳಿಂದ ಅಕ್ಷತೆಗಳಿಂದ, ಹಣ್ಣುಗಳಿಂದ, ಅಂಕುರಗಳಿಂದ ॥೬॥

**ತದೀಯಮಹಿಮಾಂಕಿತೈಃ** ತ್ರಿವಿಕ್ರಮನ ಪರಾಕ್ರಮ ಮಾಹಾತ್ಮ್ಯದಿಂದ ಚಿಹ್ನಿತವಾದ **ಸ್ತವನೈಃ** ಸ್ತೋತ್ರಗಳಿಂದ **ಜಯಶಬ್ದೈಃ** ಜಯಕಾರಗಳಿಂದ (**ನಿಯಮಾಂಕಿತೈಃ** ನಿಯಮಗಳಿಂದ ಚಿಹ್ನಿತವಾದ **ಕೀರ್ತಿಭಿಃ** ಕೀರ್ತಿಗಳಿಂದ **ನೃತ್ತವಾದಿತ್ರಗೀತೈಃ ಚ** ನರ್ತನ-ವಾದ್ಯ-ಗಾನಗಳಿಂದ ಮತ್ತು **ಶಂಖದುಂದುಭಿನಿಃಸ್ವನೈಃ** ಶಂಖ-ನಗಾರಿಗಳ ಶಬ್ದಗಳಿಂದ ಶ್ರೀಹರಿಯನ್ನು ಪೂಜಿಸಿದರು. ॥೭॥

**ಮನೋಜವಃ** ಮನಸ್ಸಿನಷ್ಟು ವೇಗ ಉಳ್ಳ **ಋಕ್ಷರಾಜಃ** ಶ್ರೇಷ್ಠ ಕರಡಿಯಾದ ಜಾಂಬವಂತನು **ಭೇರೀಶಬ್ದೈಃ** ನಗಾರಿಶಬ್ದಗಳಿಂದ **ಸರ್ವಾಸು ದಿಕ್ಷು** ಎಲ್ಲ ದಿಕ್ಕುಗಳಲ್ಲಿ **ವಿಜಯಮಹೋತ್ಸವಂ ಅಘೋಷಯತ್** ತ್ರಿವಿಕ್ರಮನ ವಿಜಯಮಹೋತ್ಸವವನ್ನು ಸಾರಿದನು. ॥೮॥

**ಮಹೀಂ ಸರ್ವಾಂ ಹೃತಾಂ ದೃಷ್ಟ್ವಾ ತ್ರಿಪದವ್ಯಾಜಯಾಂಚ್ಯಯಾ ।**
**ಊಚುಃ ಸ್ವಭರ್ತುರಸುರಾ ದೀಕ್ಷಿತಸ್ಯಾತ್ಯಮರ್ಷಿತಾಃ ॥೯॥**

**ತ್ರಿಪದವ್ಯಾಜಯಾಂಚ್ಯಯಾ** ಮೂರು ಹೆಜ್ಜೆ ಕೊಡು ಎಂಬ ನೆಪದಿಂದ **ಸ್ವಭರ್ತುಃ** ತಮ್ಮ ಸ್ವಾಮಿಯಾದ **ದೀಕ್ಷಿತಸ್ಯ** ಯಜ್ಞದೀಕ್ಷಿತನಾದ ಬಲಿಯ **ಸರ್ವಾಂ ಮಹೀಂ** ಎಲ್ಲ ಭೂಮಿಯನ್ನು **ಅಪಹೃತಾಂ** ಅಪಹರಿಸಿದ್ದನ್ನು **ದೃಷ್ಟ್ವಾ** ನೋಡಿ **ಅಸುರಾಃ** ಅಸುರರು **ಅತ್ಯಮರ್ಷಿತಾಃ** ಬಹಳ ಅಸಹನೆಯಿಂದ **ಊಚುಃ** ಮಾತನಾಡಿದರು. ॥೯॥

**ನ ವಾ ಅಯಂ ಬ್ರಹ್ಮಬಂಧುರ್ವಿಷ್ಣುರ್ಮಾಯಾವಿನಾಂ ವರಃ ।**
**ದ್ವಿಜರೂಪಪ್ರತಿಚ್ಛನ್ನೋ ದೇವಕಾರ್ಯಂ ಚಿಕೀರ್ಷತಿ ॥೧೦॥**

**ಅಯಂ** ಯಾಚಕನಾಗಿ ಬಂದಿರುವ ಇವನು **ಬ್ರಹ್ಮಬಂಧುಃ** ಬ್ರಾಹ್ಮಣಪುತ್ರನು **ನ ವೈ** ಅಲ್ಲವೇ ಅಲ್ಲ **ಮಾಯಾವಿನಾಂ ವರಃ** ವಂಚಕರಲ್ಲಿ ಶ್ರೇಷ್ಠನಾದ **ವಿಷ್ಣುಃ** ಶ್ರೀಹರಿಯು **ದ್ವಿಜರೂಪಪ್ರತಿಚ್ಛನ್ನಃ** ಬ್ರಾಹ್ಮಣವೇಷದಿಂದ ಅಡಗಿದ ಸ್ವರೂಪ ಉಳ್ಳವನಾಗಿ **ದೇವಕಾರ್ಯಂ ಚಿಕೀರ್ಷತಿ** ದೇವತೆಗಳಿಗೆ ಸ್ವರ್ಗ ದೊರೆಯಬೇಕೆಂದು ಇಚ್ಛಿಸುವನು.

**ಅನೇನ ಯಾಚಮಾನೇನ ಶತ್ರುಣಾ ಬಹುರೂಪಿಣಾ ।**
**ಸರ್ವಸ್ವಂ ನೋ ಹೃತಂ ಭರ್ತುರ್ನ್ಯಸ್ತದಂಡಸ್ಯ ಬರ್ಹಿಷಿ ॥೧೧॥**

**ಬಹುರೂಪಿಣಾ** ನಾನಾ ವೇಷ ಉಳ್ಳ (ಸಣ್ಣ ದೊಡ್ಡ ಆಕಾರ ಉಳ್ಳ) **ಶತ್ರುಣಾ** ನಮ್ಮ ಶತ್ರುವಾದ **ಯಾಚಮಾನೇನ** ಮೂರು ಹೆಜ್ಜೆಯನ್ನು ಬೇಡಿದ **ಅನೇನ** ಈ ವಾಮನರೂಪಿಯಾದ ವಿಷ್ಣುವಿನಿಂದ **ಬರ್ಹಿಷಿ (ದೀಕ್ಷಿತಸ್ಯ)** ಯಜ್ಞದಲ್ಲಿ ದೀಕ್ಷಿತನಾದ ಆದ್ದರಿಂದಲೇ **ನ್ಯಸ್ತದಂಡಸ್ಯ** ಶತ್ರುನಿಗ್ರಹ ಮಾಡದಿರುವ **ನಃ ಭರ್ತುಃ** ನಮ್ಮ ಸ್ವಾಮಿಯಾದ ಬಲಿಯ **ಸರ್ವಸ್ವಂ** ಎಲ್ಲವೂ **ಹೃತಂ** ಅಪಹರಿಸಲ್ಪಟ್ಟಿತು. ಇದು ಬಹುಮೋಸವೆಂದರ್ಥ.

ಸತ್ಯ ಃ- **ಅಬಹುರೂಪಿಣಾ (ತನುತನುಮತಾ)** ಸಣ್ಣದೇಹ ಉಳ್ಳ **ಅನೇನ** ಇವನಿಂದ **ಬಹುರೂಪಿಣಾ** ವಿಪುಲವಾದ ರೂಪ ಉಳ್ಳ **ಅಬಹುರೂಪಿಣಾ** ನಿಃಸುವರ್ಣೇನ ಅಂದರೆ ಸ್ವರ್ಣಮುಂತಾದ ಸಂಪತ್ತುಗಳಿಂದ ರಹಿತನಾದ ಶುದ್ಧದರಿದ್ರನಾದ ಎಂದು ಅರ್ಥ. ''ಬಹುರೂಪಂ ಚ ಪುರಟಂ ಕಾರ್ತಸ್ವರಮಿತೀರ್ಯತೇ'' ಎಂದು ಕಾಠಕಭಾಷ್ಯದಲ್ಲಿ ಹೇಳಿದೆ.

♦ ''ಬಹು ಸ್ಯಾದ್ ವಿಪುಲೇ ತ್ರ್ಯಾದಿಸಂಖ್ಯಾಸ್ವಪ್ಯಭಿಧೇಯವತ್'' ಎಂದು ವಿಶ್ವ ಇದೆ. ''ಬರ್ಹಿರುಕ್ತೋ ಬೃಹದ್ಭಾನುಃ'' ಎಂದು ಅಮರಮಾಲಾಪುಂಸ್ಕಾಂಡದಲ್ಲಿ ಹೇಳಿದೆ. ''ಶುಕ್ರೋ ವೈಶ್ವಾನರೋ ಬರ್ಹಿಃ ಷರ್ಹಿಃ ಶುಷ್ಮಾ ತನೂನಪಾತ್'' ಎಂದು ಶಬ್ದಾರ್ಣವ ಇದೆ. ''ಬರ್ಹಿಃ ಕುಶಹುತಾಶಯೋಃ'' ಎಂದು ವಿಶ್ವಕೋಶ ಇದೆ. ''ಬರ್ಹಿರ್ದರ್ಭೇ ಚ ಯಜ್ಞೇ ಚ'' ಎಂದು ನಾನಾರ್ಥಮುಕ್ತಾವಲೀ ಇದೆ.

♦ **ಬರ್ಹಿಷಿ** ಅಗ್ನಿಸಮೇ ಅಗ್ನಿಸಾಕ್ಷಿಕವಾಗಿ ಸಂಕಲ್ಪಪೂರ್ವಕವಾಗಿ **ನ್ಯಸ್ತದಂಡಸ್ಯ** ದಂಡವನ್ನು ಬಿಟ್ಟ ಎಂದರ್ಥ. ವಾಮನನ ಜೊತೆ ಯುದ್ಧ ಮಾಡದಿರಲು ಇದೇ ಕಾರಣವಾಗಿದೆ. ॥೧೧॥

ವಾಮನರೂಪಿಯಾದ ನಿನ್ನ ಸಣ್ಣವಾದ ಮೂರು ಹೆಜ್ಜೆ ಭೂದಾನದ ಪ್ರತಿಜ್ಞೆಯನ್ನು ನಾನು ಮಾಡಿದ್ದೇನೆ. ಹೊರತು ಈ ಅತ್ಯದ್ಭುತವಾಗಿ ಬೆಳೆದ ತ್ರಿವಿಕ್ರಮರೂಪದ ಮೂರು ಹೆಜ್ಜೆ ಭೂದಾನದ ಪ್ರತಿಜ್ಞೆಯನ್ನು ನಾನು ಮಾಡಿಲ್ಲ. ಆದ್ದರಿಂದ ನಾನು ಇಂಥ ಭೂದಾನ ಮಾಡುವುದಿಲ್ಲ ಎಂದು ಬಲಿಯು ಏಕೆ ಹೇಳಲಿಲ್ಲ ಎಂದರೆ ಹೇಳುವರು-

**ಸತ್ಯವ್ರತಸ್ಯ ಸತತಂ ದೀಕ್ಷಿತಸ್ಯ ವಿಶೇಷತಃ ।**
**ನಾನೃತಂ ಭಾಷಿತುಂ ಶಕ್ಯಂ ಬ್ರಹ್ಮಣ್ಯಸ್ಯ ದಯಾವತಃ ॥೧೨॥**

**ಸತತಂ** ಯಾವಾಗಲು **ಸತ್ಯವ್ರತಸ್ಯ** ಸತ್ಯವನ್ನೇ ಹೇಳುವ ನಿಯಮ ಉಳ್ಳ ಅದರಲ್ಲಿಯೂ **ದೀಕ್ಷಿತಸ್ಯ** ಯಜ್ಞದೀಕ್ಷಿತನಾದ **ವಿಶೇಷತಃ** ವಿಶೇಷವಾಗಿ ಸತ್ಯನಿಯಮವನ್ನು ಪರಿಪಾಲಿಸುವ **ಬ್ರಹ್ಮಣ್ಯಸ್ಯ** ಬ್ರಾಹ್ಮಣರಲ್ಲಿ ಭಕ್ತಿಯುಳ್ಳ **ದಯಾವತಃ** ದಯಾವಂತನಾದ ಬಲಿಚಕ್ರವರ್ತಿಗೆ **ಅನೃತಂ ಭಾಷಿತುಂ ನ ಶಕ್ಯಂ** ಈ ಬಗೆಯ ಮೂರು ಹೆಜ್ಜೆ ಕೊಡುವುದಿಲ್ಲವೆಂದು ಸುಳ್ಳು ಹೇಳಲು ಆಗುವುದಿಲ್ಲ. ॥೧೨॥

**ತಸ್ಮಾದ್ಯಸ್ಯ ವಧೋ ಧರ್ಮೋ ಭರ್ತುಃ ಶುಶ್ರೂಷಣಂ ಚ ನಃ ।**
**ಇತ್ಯಾಯುಧಾನಿ ಜಗೃಹುರ್ಬಲೇರನುಚರಾಸುರಾಃ ॥೧೩॥**

**ತಸ್ಮಾತ್** ಈ ವಾಮನನು ವಂಚಿಸಿರುವುದರಿಂದ, ನಮ್ಮ ಸ್ವಾಮಿಯು ದೀಕ್ಷಿತನಾದ್ದರಿಂದ ನಿಗ್ರಹಿಸುವಂತಿಲ್ಲವಾದ್ದರಿಂದ **ಅಸ್ಯ** ತ್ರಿವಿಕ್ರಮನ **ವಧಃ** ಸಂಹಾರವು **ಧರ್ಮಃ** ನಮ್ಮ ಧರ್ಮವು ಮತ್ತು **ಭರ್ತುಃ** ನಮ್ಮ ಸ್ವಾಮಿಯ **ಶುಶ್ರೂಷಣಂ** ಸೇವೆಯು ನಮ್ಮ ಕರ್ತವ್ಯವು **ಇತಿ** ಹೀಗೆ ತಿಳಿದು **ಬಲೇಃ** ಬಲಿರಾಜನ **ಅನುಚರಾಸುರಾಃ** ಸೇವಕರಾದ ದೈತ್ಯರು **ಆಯುಧಾನಿ ಜಗೃಹುಃ** ತಮ್ಮ ತಮ್ಮ ಆಯುಧಗಳನ್ನು ಸ್ವೀಕರಿಸಿದರು. ॥೧೩॥

**ತೇ ಸರ್ವೇ ವಾಮನಂ ಹಂತುಂ ಶೂಲಪಟ್ಟಿಶಪಾಣಯಃ ।**
**ಅನಿಚ್ಛತೋ ಬಲೇ ರಾಜನ್ ಪ್ರಾದ್ರವನ್ ಜಾತಮನ್ಯವಃ ॥೧೪॥**

**ಹೇ ರಾಜನ್** ಪರೀಕ್ಷಿತನೇ **ಜಾತಮನ್ಯವಃ** ತಾವಾಗಿಯೇ ಕೋಪಗೊಂಡ **ಶೂಲಪಟ್ಟಿಶಪಾಣಯಃ** ಶೂಲ-ಪಟ್ಟಿಶ ಮೊದಲಾದ ಆಯುಧಗಳನ್ನು ಕೈಯಲ್ಲಿ ಹಿಡಿದ **ತೇ ಸರ್ವೇ** ಆ ಎಲ್ಲ ಅಸುರರು **ಬಲೇಃ ಅನಿಚ್ಛತಃ ಅಪಿ** ಬಲಿರಾಜನಿಗೆ ವಾಮನನ್ನು ಕೊಲ್ಲುವ ಇಚ್ಛೆ ಇಲ್ಲದಿದ್ದರೂ ಅವನನ್ನು ಲೆಕ್ಕಿಸದೆ ಅನಾದರ ಮಾಡಿ **ಪ್ರಾದ್ರವತ್** ವಾಮನನನ್ನು ಕೊಲ್ಲಲು ವಾಮನನ ಕಡೆಗೆ ಧಾವಿಸಿದರು. ॥೧೪॥

**ತಾನಭಿದ್ರವತೋ ದೃಷ್ಟ್ವಾ ದಿತಿಜಾನೀಕಪಾನ್ ನೃಪ ।**
**ಪ್ರಹಸ್ಯಾನುಚರಾ ವಿಷ್ಣೋಃ ಪ್ರತ್ಯಷೇಧನ್ನುದಾಯುಧಾಃ ॥೧೫॥**

**ಹೇ ನೃಪ** ರಾಜನೇ **ಅಭಿದ್ರವತಃ** ತಮ್ಮನ್ನೆದುರಿಸಿ ಬರುತ್ತಿದ್ದ **ದಿತಿಜಾನೀಕಪಾನ್** ದೈತ್ಯಸೇನಾನಾಯಕರನ್ನು **ದೃಷ್ಟ್ವಾ** ನೋಡಿ **ವಿಷ್ಣೋಃ ಅನುಚರಾಃ** ವಿಷ್ಣುವಿನ ಸೇವಕರು **ಪ್ರಹಸ್ಯ** ಗಹ ಗಹಿಸಿ ನಕ್ಕು **ಉದಾಯುಧಾಃ ಸಂತಃ** ಆಯುಧಗಳನ್ನು ಎತ್ತಿಕೊಂಡವರಾಗಿ **ತಾನ್** ಅವರನ್ನು **ಪ್ರತ್ಯಷೇಧನ್** ತಡೆದರು. ॥೧೫॥

ವಿಷ್ಣುಭೃತ್ಯರ ಹೆಸರನ್ನು ಹೇಳುವರು-

**ನಂದಃ ಸುನಂದೋಽಥ ಜಯೋ ವಿಜಯಃ ಪ್ರಬಲೋ ಬಲಃ ।**
**ಕುಮುದಃ ಕುಮುದಾಕ್ಷಶ್ಚ ವಿಷ್ವಕ್ಸೇನಃ ಪತತ್ರಿರಾಟ್ ॥೧೬॥**

**ಜಯಂತಃ ಶ್ರುತದೇವಶ್ಚ ಪುಷ್ಪದಂತೋಽಥ ಸಾತ್ವತಃ ।**
**ಸರ್ವೇ ನಾಗಾಯುತಪ್ರಾಣಾಃ ಸ್ವಾಂ ಸ್ವಾಂ ತೇ ಜಘ್ನುರಾಸುರೀಮ್ ॥೧೭॥**

**ನಂದಃ** ನಂದನು, **ಸುನಂದಃ** ಸುನಂದನು, **ಅಥ** ಮತ್ತು **ಜಯಃ** ಜಯನು, **ವಿಜಯಃ** ವಿಜಯನು, **ಪ್ರಬಲಃ** ಪ್ರಹಲನು, **ಬಲಃ** ಬಲನು, **ಕುಮುದಃ** ಕುಮುದನು, **ಕುಮುದಾಕ್ಷಃ** ಕುಮುದಾಕ್ಷನು, **ವಿಷ್ವಕ್ಸೇನಃ** ವಿಷ್ವಕ್ಸೇನನು, **ಪತತ್ರಿರಾಟ್** ಗರುಡನು,

**ಜಯಂತಃ** ಜಯಂನು, **ಶ್ರುತದೇವಃ** ಶ್ರುತದೇವನು, **ಪುಷ್ಪದಂತಃ** ಪುಷ್ಪದಂತನು, **ಸಾತ್ವತಃ** ಸಾತ್ವತನು **ಸರ್ವೇ** ಈ ಅನುಚರರೆಲ್ಲರೂ **ನಾಗಾಯುತಪ್ರಾಣಾಃ** ಒಬ್ಬೊಬ್ಬರೂ ಹತ್ತುಸಾವಿರ ಆನೆಯ ಬಲ ಉಳ್ಳವರು **ತೇ** ಅವರೆಲ್ಲರೂ **ಸ್ವಾಂ ಸ್ವಾಂ** ತಮ್ಮ ತಮ್ಮನ್ನು ಎದುರಿಸಿದ **ಆಸುರೀಂ** ಅಸುರಸೇನೆಯನ್ನು **ಜಘ್ನುಃ** ಸಂಹರಿಸಿದರು. ॥೧೬-೧೭॥

**ಹನ್ಯಮಾನಾನ್ ಸ್ವಕಾನ್ ದೃಷ್ಟ್ವಾ ಪುರುಷಾನುಚರೈರ್ಬಲಿಃ ।**
**ವಾರಯಾಮಾಸ ಸಂರಬ್ಧಾನ್ ಕಾವ್ಯಶಾಪಮನುಸ್ಮರನ್ ॥೧೮॥**

**ಬಲಿಃ** ಬಲಿರಾಜನು **ಪುರುಷಾನುಚರೈಃ** ಪೂರ್ಣ ಷಡ್ಗುಣನಾದ ವಾಮನನ ಸೇವಕರಿಂದ **ಹನ್ಯಮಾನಾನ್** ಕೊಲ್ಲಲ್ಪಡುತ್ತಿರುವ **ಸ್ವಕಾನ್** ತಮ್ಮವರನ್ನು **ದೃಷ್ಟ್ವಾ** ನೋಡಿ **ಕಾವ್ಯಶಾಪಂ** ನೀನು ಕೂಡಲೇ ಎಲ್ಲ ಸಂಪತ್ತನ್ನು ಕಳೆದುಕೊಳ್ಳುವಿ ಎಂದು ಶುಕ್ರಾಚಾರ್ಯರು ನೀಡಿದ ಶಾಪವನ್ನು **ಅನುಸ್ಮರನ್** ನೆನಪಿಸಿಕೊಂಡವನಾಗಿ **ಸಂರಬ್ಧಾನ್** ಕೋಪಾಟೋಪದಿಂದ ಯುದ್ಧಕ್ಕೆ ಸನ್ನದ್ಧರಾದ ತನ್ನ ಭೃತ್ಯರನ್ನು **ವಾರಯಾಮಾಸ** ಯುದ್ಧ ಮಾಡಬೇಡಿರೆಂದು ತಡೆದನು. ॥೧೮॥

**ಹೇ ವಿಪ್ರಚಿತ್ತೇ ಹೇ ರಾಹೋ ಹೇ ಹೇತೇ ಶ್ರೂಯತಾಂ ವಚಃ ।**
**ಮಾ ಯುಧ್ಯತ ನಿವರ್ತಧ್ವಂ ನ ನಃ ಕಾಲೋಽಯಮರ್ಥಕೃತ್ ॥೧೯॥**

**ಹೇ ವಿಪ್ರಚಿತ್ತೇ** ಎಲೋ ವಿಪ್ರಚಿತ್ತಿಯೇ **ಹೇ ರಾಹೋ** ರಾಹುವೇ **ಹೇ ಹೇತೇ** ಹೇ ಹೇತಿಯೇ **ವಚಃ** ನನ್ನ ಮಾತನ್ನು **ಶ್ರೂಯತಾಂ** ಕೇಳಿರಿ **ಮಾ ಯುಧ್ಯತ** ಯುದ್ಧ ಮಾಡಬೇಡಿರಿ. **ನಿವರ್ತಧ್ವಂ** ಹಿಂತಿರುಗಿರಿ **ಅಯಂ ಕಾಲಃ** ಈ ಕಾಲವು ಕಾಲರೂಪಿಯಾದ ಪರಮಾತ್ಮನು **ನಃ** ನಮಗೆ **ಅರ್ಥಕೃತ್ ನ** ಜಯರೂಪ ಪ್ರಯೋಜನಕಾರಿಯಲ್ಲ ಈಗ ನಾವು ಗೆಲ್ಲುವುದಿಲ್ಲವೆಂದು ಅವರನ್ನು ನಿವಾರಿಸಿದನು.

**ಯಃ ಪ್ರಭುಃ ಸರ್ವಭೂತಾನಾಂ ಸುಖದುಃಖೋಪಪತ್ತಯೇ ।**
**ತಂ ನಾತಿವರ್ತಿತುಂ ದೈತ್ಯಾಃ ಪೌರುಷೈರೀಶ್ವರಃ ಪುಮಾನ್ ॥೨೦॥**

**ಹೇ ದೈತ್ಯಾಃ** ವಿಪ್ರಚಿತ್ತಿ ಮುಂತಾದವರೇ **ಸರ್ವಭೂತಾನಾಂ** ಎಲ್ಲ ಪ್ರಾಣಿಗಳ **ಸುಖದುಃಖೋಪಪತ್ತಯೇ** ಸುಖದುಃಖಗಳ ಪ್ರಾಪ್ತಿಗೆ **ಯಃ** ಯಾವ ಶ್ರೀಹರಿಯು **ಪ್ರಭುಃ** ಸಮರ್ಥನೋ **ತಂ** ಆ ಕಾಲನಾಮಕ ಪರಮಾತ್ಮನನ್ನು **ಪುಮಾನ್** ಯಾವ ಪುರುಷನೂ **ಪೌರುಷೈಃ** ತಮ್ಮ ಪರಾಕ್ರಮಗಳಿಂದ **ಅತಿವರ್ತಿತುಂ** ಅತಿಕ್ರಮಿಸಲು **ಈಶ್ವರಃ** ನ ಸಮರ್ಥನು ಅಲ್ಲ. ಅವನನ್ನು ಮೀರಲು ಯಾರಿಂದಲೂ ಸಾಧ್ಯವಿಲ್ಲವೆಂದು ಅಭಿಪ್ರಾಯ. ॥೨೦॥

**ಯೋ ನೋ ಭವಾಯ ಪ್ರಾಗಾಸೀದಭವಾಯ ದಿವೌಕಸಾಮ್ ।**
**ಸ ಏವ ಭಗವಾನದ್ಯ ವರ್ತತೇ ತದ್ವಿಪರ್ಯಯಮ್ ॥೨೧॥**

**ಪ್ರಾಕ್** ಸ್ವಲ್ಪಕಾಲದ ಹಿಂದೆ **ಯಃ** ಯಾವ ಕಾಲನಾಮಕ ಶ್ರೀಹರಿಯು **ನಃ** ದೈತ್ಯರಾದ ನಮ್ಮ **ಭವಾಯ** ರಾಜ್ಯ ಮೊದಲಾದ ಶ್ರೇಯಸ್ಸಿಗೆ **ದಿವೌಕಸಾಂ** ದೇವತೆಗಳ **ಅಭವಾಯ** ಅಪಜಯಕ್ಕೂ **ಆಸೀತ್** ಕಾರಣನಾಗಿದ್ದನೋ **ಸ ಏವ ಭಗವಾನ್** ಆ ಪರಮಾತ್ಮನೇ **ತದ್ವಿಪರ್ಯಯಂ** ಅದಕ್ಕೆ ವಿರುದ್ಧವಾಗಿ ಅಂದರೆ ದೈತ್ಯರಿಗೆ ಅಮಂಗಲದೇವತೆಗಳಿಗೆ ಮಂಗಲಕರನಾಗಿ **ವರ್ತತೇ** ಇರುವನು. ॥೨೧॥

**ಬಲೇನ ಸಚಿವೈರ್ಬುದ್ಧ್ಯಾ ದುರ್ಗಮಂತ್ರೌಷಧಾದಿಭಿಃ ।**
**ಸಾಮಾದಿಭಿರುಪಾಯೈಶ್ಚ ಕಾಲಂ ನಾತ್ಯೇತಿ ವೈ ಜನಃ ॥೨೨॥**

**ಜನಃ** ಜನರು **ಬಲೇನ** ಚತುರಂಗಸೈನ್ಯದಿಂದ **ಸಚಿವೈಃ** ಮಂತ್ರಿಗಳ ಸಹಾಯದಿಂದಾಗಲಿ **ಬುದ್ಧ್ಯಾ** ಬುದ್ಧಿಯಿಂದಲಾಗಲಿ **ದುರ್ಗಮಂತ್ರೌಷಧಾದಿಭಿಃ** ಕೋಟೆ, ಮಂತ್ರಸಿದ್ಧಿ, ಔಷಧ ಮುಂತಾದವುಗಳಿಂದಾಗಲಿ **ಸಾಮಾದಿಭಿಃ ಉಪಾಯೈಃ** ಸಾಮ-ದಾನ-ಭೇದ-ದಂಡ ಮುಂತಾದ ಉಪಾಯಗಳಿಂದಾಗಲಿ **ಕಾಲಂ** ಕಾಲನನ್ನು **ನಾತ್ಯೇತಿ** ಗೆಲ್ಲಲಾರನು. **ವೈ** ಇದು ಅನುಭವಸಿದ್ಧವಾಗಿದೆ. ।೨೨॥

ಈಗ ಶ್ರೀಹರಿಯು ನಮಗೆ ಅನೂಕಲಕರನಾಗಿಲ್ಲ ಎಂಬುದನ್ನು ತಿಳಿಸುತ್ತಿದ್ದಾರೆ-

**ಭವದ್ಭಿರ್ನಿರ್ಜಿತಾ ಹ್ಯೇತೇ ಬಹುಶೋಽನುಚರಾ ಹರೇಃ ।**
**ದೈವರುದ್ಧಾಸ್ತ ಏವಾದ್ಯ ಯುಧಿ ಜಿತ್ವಾ ನದಂತಿ ನಃ ॥೨೩॥**

ಹೇ ದೈತ್ಯರೇ **ದೈವರುದ್ಧಾಃ** ಹಿಂದೆ ಅದೃಷ್ಟಪ್ರೇರಕನಾದ ಶ್ರೀಹರಿಯಿಂದ ತಡೆಯಲ್ಪಟ್ಟ **ಏತೇ ಹರೇಃ ಅನುಚರಾಃ** ಭಗವಂತನ ಸೇವಕರಾದ ಈ ದೇವತೆಗಳು **ಭವದ್ಭಿಃ** ನಿಮ್ಮಿಂದ **ಬಹುಶಃ** ಅನೇಕಬಾರಿ **ನಿರ್ಜಿತಾಃ** ಸೋತಿದ್ದಾರೆ. **ತೇ ಏವ** ಅವರೇ **ಅದ್ಯ** ಈಗ

ಅದೃಷ್ಟಪ್ರೇರಕನಾದ ಹರಿಯ ಅನೂಕೂಲವಿರುವ ಈ ಕಾಲದಲ್ಲಿ **ಯುಧಿ** ಯುದ್ಧದಲ್ಲಿ **ನಃ ಜಿತ್ವಾ** ನಮ್ಮನ್ನು ಗೆದ್ದು **ನದಂತಿ** ಸಿಂಹನಾದ ಮಾಡುತ್ತಿರುವರು.

♦ ದೈವರುದ್ಧೈಃ ಎಂಬ ಪಾಠದಲ್ಲಿ ಅದೃಷ್ಟಪ್ರೇರಕನಿಂದ ಅನೂಕೂಲಿತರಾದ **ಭವದ್ಭಿಃ** ನಿಮ್ಮಿಂದ ಎಂದು ಅನ್ವಯಾರ್ಥ. ।।೨೩।।

**ಏತಾನ್ ವಯಂ ವಿಜೇಷ್ಯಾಮೋ ಯದಿ ದೈವಂ ಪ್ರಸೀದತಿ ।**
**ತಸ್ಮಾತ್ ಕಾಲಂ ಪ್ರತೀಕ್ಷಧ್ವಂ ಯೋ ನೋಽರ್ಥತ್ವಾಯ ಕಲ್ಪತೇ ।।೨೪।।**

**ಯದಿ ದೈವಃ ಪ್ರಸೀದತಿ** ಅದೃಷ್ಟನಿಯಾಮಕನಾದ ಶ್ರೀಹರಿಯು ಪ್ರಸನ್ನನಾದದ್ದೇ ಆದರೆ **ವಯಂ** ನಾವು **ಏತಾನ್** ಇವರನ್ನು **ವಿಜೇಷ್ಯಾಮಃ** ಗೆಲ್ಲುವೆವು **ತಸ್ಮಾತ್** ಆದ್ದರಿಂದ **ಯಃ ಕಾಲಃ** ಯಾವ ಕಾಲವು **ನಃ** ನಮಗೆ **ಅರ್ಥತ್ವಾಯ** ವಿಜಯವೆಂಬ ಪ್ರಯೋಜನಕ್ಕಾಗಿ **ಕಲ್ಪತೇ** ಸಹಾಯವಾಗುವುದೋ **ತಂ ಕಾಲಂ** ಆ ಕಾಲವನ್ನು **ಪ್ರತೀಕ್ಷಧ್ವಂ** ನಿರೀಕ್ಷಿಸಿರಿ ಕಾಯಿರಿ ಎಂದರ್ಥ.

ಸತ್ಯ ಃ- ಅಮೃತತ್ವಸ್ಯ ಎಂಬುದಕ್ಕೆ ಮುಕ್ತವರ್ಗಸ್ಯ ಎಂದು ಅರ್ಥ ಮಾಡಿದಂತೆ **ಅರ್ಥತ್ವಸ್ಯ** ಎಂದರೆ **ಅರ್ಥಸಾರ್ಥಾಯ** ಅಂದರೆ ಪ್ರಯೋಜನಸಮುದಾಯಕ್ಕೆ ಅನುಕೂಲವಾಗುವುದೋ ಎಂದು ಹೀಗೂ ಅರ್ಥವನ್ನು ಮಾಡಬೇಕು. ।।೨೪।।

**ಶ್ರೀಶುಕ ಉವಾಚ**

**ಪತ್ಯುರ್ನಿಗದಿತಂ ಶ್ರುತ್ವಾ ದೈತ್ಯದಾನವಯೂಥಪಾಃ ।**
**ರಸಾಂ ನಿರ್ವಿವಿಶೂ ರಾಜನ್ ವಿಷ್ಣುಪಾರ್ಷದತಾಡಿತಾಃ ।।೨೫।।**

**ರಾಜನ್** ಪರೀಕ್ಷಿತನೇ **ಪತ್ಯುಃ** ತಮ್ಮ ಯಜಮಾನನ **ನಿಗದಿತಂ** ಮಾತನ್ನು **ಶ್ರುತ್ವಾ** ಕೇಳಿ **ದೈತ್ಯದಾನವಯೂಥಪಾಃ** ದೈತ್ಯದಾನವರ ಸೇನಾಪತಿಗಳು **ವಿಷ್ಣುಪಾರ್ಷದತಾಡಿತಾಃ** ಶ್ರೀಹರಿಯ ದ್ವಾರಪಾಲಕರಿಂದ ಪೆಟ್ಟು ತಿಂದವರಾಗಿ **ರಸಾಂ** ರಸಾತಲವನ್ನು **ನಿರ್ವಿವಿಶುಃ** ಪ್ರವೇಶಿಸಿದರು. ।।೨೫।।

**ಅಥ ತಾರ್ಕ್ಷ್ಯಸುತೋ ಜ್ಞಾತ್ವಾ ವಿರಾಡ್ವಿಭುಚಿಕೀರ್ಷಿತಮ್ ।**
**ಬಬಂಧ ವಾರುಣೈಃ ಪಾಶೈರ್ಬಲಂ ಸೂತ್ಯೇಽಹನಿ ಕ್ರತೋಃ ।।೨೬।।**

**ಅಥ** ದೈತ್ಯ-ದಾನವರು ಹೋದ ಮೇಲೆ **ತಾರ್ಕ್ಷ್ಯಸುತಃ** ಕಶ್ಯಪರ ಮಗನಾದ **ವಿರಾಟ್** ಪಕ್ಷಿಶ್ರೇಷ್ಠನಾದ ಗರುಡನು **ವಿರಾಡ್ವಿಭುಚಿಕೀರ್ಷಿತಂ** ವಿರಾಡ್ ರೂಪಿಯಾದ ಶ್ರೀಹರಿಯ ಇಚ್ಛೆಯನ್ನು **ಜ್ಞಾತ್ವಾ** ತಿಳಿದು **ಕ್ರತೋಃ** ಯಾಗದ **ಸೂತ್ಯೇ ಅಹನಿ** ಸೋಮಲತೆಯನ್ನು ಹಿಂಡುವ ದಿನ (ಸೋಮಪಾನ ಮಾಡುವ ದಿನ) ದಲ್ಲಿ **ಬಲಿಂ** ಬಲಿರಾಜನನ್ನು **ವಾರುಣೈಃ ಪಾಶೈಃ** ವರುಣಪಾಶದಿಂದ **ಬಬಂಧ** ಕಟ್ಟಿದನು. ।।೨೬।।

ಸತ್ಯ :- ಇಲ್ಲಿ ಒಂದು ಸಂದೇಹ. ಅದೇನೆಂದರೆ ಪಾಶಗಳು ಅನೇಕ ಇರುವಾಗ ಅವುಗಳನ್ನು ಬಿಟ್ಟು (ಪಾಶಿಪಾಶಗ್ರಹಣೇ) ವರುಣಪಾಶವನ್ನೇ ಸ್ವೀಕರಿಸಲು ಏನು ಕಾರಣ ಎಂದರೆ, ಗರುಡನು ನಾಗಾಂತಕನಾದುದರಿಂದ ನಾಗಪಾಶದಿಂದ ಬಂಧನ ಮಾಡುವುದು ಅಸಂಬದ್ಧವಾಗಿದೆ. ಈ ಕಾಲದಲ್ಲಿ ಕಾಲಪಾಶದಿಂದ ಬಲಿಯನ್ನು ಬಂಧಿಸುವುದು ಸರಿಯಲ್ಲ. ಅರ್ಥಾತ್ ಬಲಿಯನ್ನು ಸಂಹರಿಸುವುದು ಈ ಕಾಲದಲ್ಲಿ ಸಾಧ್ಯವಿಲ್ಲ. ಈ ಕಾಲಪಾಶದಿಂದ ಬಲಿಯು ಬದ್ಧನೂ ಅಲ್ಲ. ಬಲಿಗೆ ಈಗ ಮರಣವಿಲ್ಲವೆಂದು ತಾತ್ಪರ್ಯ. ''ಅಶ್ವತ್ಥಾಮಾ ಬಲಿರ್ವ್ಯಾಸಃ'' ಎಂದು ಬಲಿಯನ್ನು ಚಿರಂಜೀವಿ ಎಂಬುದಾಗಿ ಹೇಳಿದ್ದಾರೆ. ಆದ್ದರಿಂದ ಕಾಲಪಾಶದಿಂದ ಬಲಿಯನ್ನು ಬಂಧನ ಮಾಡಲು ಸಾಧ್ಯವಿಲ್ಲ. ಆದ್ದರಿಂದ ವಾರುಣಪಾಶದಿಂದ ಬಂಧಿಸಿದ್ದಾರೆ ಎಂದು ತಿಳಿಯಬೇಕು.

ಬಲಿಯನ್ನು ಕಟ್ಟಲು ನಾಗಪಾಶ-ಕಾಲಪಾಶಗಳನ್ನು ಬಿಟ್ಟು ಬೇರೇ ಪಾಶಗಳನ್ನು ಉಪಯೋಗಿಸಬಹುದಲ್ಲ. ವರುಣಪಾಶವನ್ನೇ ಯಾಕೆ ಉಪಯೋಗಿಸಿದ್ದಾರೆ? ಎಂದು ಪ್ರಶ್ನಿಸುವವರಿಗೆ ನಾವು ಹೇಳುವ ಮಾತುಗಳು ಹೀಗಿವೆ. ವರುಣಪಾಶವನ್ನು ಉಪಯೋಗಿಸಿದ್ದರ ಕೃತ್ಯ ನಿನಗೆ ತಿಳಿದಿಲ್ಲ. ಆದ್ದರಿಂದ ಹೀಗೆ ಮಾತನಾಡುತ್ತಿರುವಿ. ಅಲ್ಲದೇ ವರುಣಪಾಶವನ್ನು ಉಪಯೋಗಿಸುವುದು ಬೇಡ ಎಂದು ನೀನಾದರೂ ಯಾಕೆ ಹೇಳುತ್ತಿರುವಿ? ಹೀಗೆ ನಿನಗೆ ಪ್ರಶ್ನಿಸಿದರೆ ನಿನಗೆ ಉತ್ತರ ಇಲ್ಲ. ಆದ್ದರಿಂದ ನೀನು ಈ ಪ್ರಶ್ನೆಯನ್ನು ಕೇಳಬೇಡ. ಸುಮ್ಮನಿರು.

ನಾನು ಚಿಕ್ಕವನು. ನೀವು ಕೇಳಿದ ಪ್ರಶ್ನೆಗೆ ಉತ್ತರ ನನಗೆ ಗೊತ್ತಿಲ್ಲ. ಆದರೆ ದಯಮಾಡಿ ವರುಣಪಾಶವನ್ನು ಉಪಯೋಗಿಸದ್ದಕ್ಕೆ ಕಾರಣವನ್ನು ಜ್ಞಾನಿಗಳಾದ ತಾವು ಹೇಳಬೇಕು. ಎಂದು ಪ್ರಾರ್ಥಿಸಿದರೆ ಅದಕ್ಕೆ ಉತ್ತರವನ್ನು ನಾವು ಹೇಳುತ್ತೇವೆ.

ಅಚ್ಛಾ ತವ ಪೃಚ್ಛಾ ನೇಚ್ಛಾತಸ್ತುಚ್ಛೀಕರ್ತುಂ ಕ್ಷಮೇತಿ ಕ್ಷಣಂ ಕ್ಷಮಸ್ವ। ಗರುಡನು ವರುಣಪಾಶವನ್ನೇ ಯಾಕೆ ಸ್ವೀಕರಿಸಿದ ಎಂಬ ನಿನ್ನ ಪ್ರಶ್ನೆಯು ಸರಿಯಾಗಿಯೇ ಇದೆ. ಆ ಪಶ್ನೆಯನ್ನು ಸುಮ್ಮನೇ ತುಚ್ಛ ಎಂದು ಹೇಳಲು ಬರುವುದಿಲ್ಲ. ಕ್ಷಣ ತಾಳು. ಅವಸರ ಮಾಡಬೇಡ. ನಿನ್ನ ಪ್ರಶ್ನೆಗೆ ಉತ್ತರ ನೀಡುತ್ತೇವೆ.

ಸಂಕಲ್ಪಪೂರ್ವಕವಾಗಿ ಜಲಧಾರೆಯನ್ನು ಬಿಟ್ಟಾಗಲೇ ಭೂದಾನವು ಸಂಪೂರ್ಣ-ವಾಗುತ್ತದೆ. ಆದರೆ ಈಗ ಜಲಧಾರೆಯನ್ನು ಬಿಟ್ಟರೂ ದಾನ ಸಂಪೂರ್ಣವಾಗಲಿಲ್ಲ. ಆದ್ದರಿಂದ ಅಂಥ ನೀರಿಗೆ ಅಭಿಮಾನಿಯಾದ ವರುಣನ ಪಾಶವನ್ನೇ ಗರುಡ ಈಗ ಸ್ವೀಕರಿಸಿದ್ದಾನೆ ಎಂಬ ಉತ್ತರವು ಸಂಭಾವಿತವಾಗುತ್ತದೆ.

ಹಗ್ಗದಿಂದ ಕಳ್ಳರನ್ನು ಕಟ್ಟುವಾಗ ಆ ಹಗ್ಗ ಗಟ್ಟಿಯಾಗಿರಲು ಆ ಹಗ್ಗಕ್ಕೆ ನೀರು ಹಾಕಿ ಮತ್ತೆ ಹೊಸೆಯುತ್ತಾರೆ. ಇದರಿಂದ ಹಗ್ಗ ಮತ್ತಿಷ್ಟು ಗಟ್ಟಿಯಾಗುತ್ತದೆ. ಸ್ವಯಂ

ವರುಣಪಾಶವೇ ಆಗಿದ್ದರೆ ಆ ಪಾಶ ಅತ್ಯಂತ ದೃಢವಾಗಿರುತ್ತದೆ ಎಂದು ತಿಳಿದು ವರುಣಪಾಶವನ್ನು ಗ್ರಹಣ ಮಾಡಿದ್ದಾರೆ. ಎಂಬುದಾಗಿ ಉತ್ತರವನ್ನು ತಿಳಿ.

ನಂದ-ಸುನಂದಾದಿ ಸೇವಕರಿರುವಾಗ ಗರುಡನೇ ಯಾಕೆ ಬಲಿಯನ್ನು ಬಂಧಿಸಿದ. ಈ ಸೇವೆಗೆ ಗರುಡನನ್ನೇ ಯಾಕೆ ಆಯ್ದುಕೊಂಡ ಎಂದರೆ,

ಭಗವಂತ ಭೂಮಿಯಲ್ಲಿ ಅವತಾರ ತಾಳಿದಾಗ ಉಳಿದ ದೇವತೆಗಳು ಭೂಮಿಯಲ್ಲಿ ಅವತರಿಸುತ್ತಾರೆ. ಭಗವಂತನ ಸೇವೆ ಮಾಡುತ್ತಾರೆ. ಗರುಡನಿಗೆ ಭೂಮಿಯಲ್ಲಿ ಅವತಾರ ಇಲ್ಲ. ಅವತಾರ ತಾಳಿ ಸೇವೆ ಮಾಡಲಾಗುವುದಿಲ್ಲ. ಆದ್ದರಿಂದ ಈ ಸೇವೆಗೆ ಭಗವಂತ ಗರುಡನನ್ನು ಆಯ್ದುಕೊಂಡಿದ್ದಾನೆ ಎಂದು ಹೇಳುವುದು ಸೂಕ್ತವಾಗುತ್ತದೆ.

ಮತ್ತು ದೇವತೆಗಳು ಸಮುದ್ರಮಥನದಿಂದ ಶ್ರಾಂತರಾಗಿರುವರು. ಗರುಡನಾದರೋ ಮಂದರಪರ್ವತವನ್ನು ಮಾತ್ರ ತಂದು ವಿಹಿತಸ್ಥಳದಲ್ಲಿ ಇರಿಸಿದ್ದಾನೆ. ಹೀಗಾಗಿ ಗರುಡನಿಗೆ ಬಹಳ ಶ್ರಮವಾಗಿಲ್ಲ. ಉಳಿದ ದೇವತೆಗಳಿಗೆ ಅವತಾರದಲ್ಲಿ, ಮತ್ತು ಸಮುದ್ರಮಥನದಲ್ಲಿ ಭಗವಂತನ ಸೇವೆ ಮಾಡುವ ಅವಕಾಶ ಸಿಕ್ಕಿದೆ. ಗರುಡನಿಗೆ ಈ ಎರಡು ಪ್ರಸಂಗಗಳಲ್ಲಿಯೂ ಸೇವೆಯು ಸಿಕ್ಕಿಲ್ಲ. ಈ ಗರುಡನು ಭಗವಂತನಿಗೆ ವಾಹನವಾಗಿದ್ದಾನೆ. ಆದ್ದರಿಂದ ವಾಹನಸೇವೆಯನ್ನು ಮಾಡಬಹುದಲ್ಲ. ಎಂಬ ಸಂದೇಹ ಬರುತ್ತದೆ. ನಿಜ. ಆದರೆ ಲೋಕವೆಲ್ಲ ಬೆಳೆದು ನಿಂತ ಈ ಮಹಾತ್ರಿವಿಕ್ರಮನಿಗೆ ಗರುಡನು ಈ ಪ್ರಸಂಗದಲ್ಲಿ ವಾಹನವಾಗಲು ಸಾಧ್ಯವಿಲ್ಲ. ಹೀಗಾಗಿ ಈಗ ಶ್ರೀಹರಿಗೆ ವಾಹನವಾಗಿ ಸೇವಿಸುವುದೂ ಸಾಧ್ಯವಿಲ್ಲ. ಆದ್ದರಿಂದ ಈ ಬಲಿಬಂಧನ ಸೇವೆಯಲ್ಲಿ ಗರುಡನನ್ನು ಯೋಜಿಸಿದ್ದಾನೆ ಎಂದು ತಿಳಿಯಬೇಕು.

ಮುಂದೆ ಶ್ರೀಹರಿಯು ನಿದ್ರೆಯನ್ನು ನಟಿಸುತ್ತಿರುವಾಗ ಬಲಿಯು ಭಗವಂತನ ಕಿರೀಟವನ್ನು ಅಪಹರಿಸಿದ. ಭಗವಂತ ನಿದ್ರಿಸುತ್ತಿರುವ ಆ ಸಂದರ್ಭದಲ್ಲಿ ಗರುಡನಿಗೆ ವಾಹನ ಸೇವೆ ಇರುವುದಿಲ್ಲ. ಆದ್ದರಿಂದ ಬಲಿಯನ್ನು ಜಯಿಸಲು ಭಗವಂತ ಗರುಡನಿಗೆ ಆಜ್ಞಾಪಿಸಿದ ಎಂದೂ ತಿಳಿಯಬೇಕು.

**ತದಾ ದುಗ್ಧಾಬ್ಧೌ ಸಂಸ್ಥಿತಿಸ್ಥೈಃ ಸುರಾದ್ಯೈಃ**
**ಪೂಜಾಂ ಪ್ರಾಪ್ತುಂ ಸ್ಥಾನಮೇಷಾಂ ಚ ಯೋಗ್ಯಮ್ ।**
**ಮುಕ್ತಸ್ಥಾನಾದಾಪ ನಾರಾಯಣೋಽಜೋ**
**ಬಲಿಶ್ಚಾಽಗಾತ್ತತ್ರ ಸಂದ್ರಷ್ಟುಮೀಶಮ್ ॥ತಾ.ನಿ.೧೬.೪॥**

**ತತ್ರಾಸುರಾವೇಶಮಮುಷ್ಯ ವಿಷ್ಣುಃ**
**ಸಂದರ್ಶಯನ್ ಸುಪ್ತಿಹೀನೋಽಪಿ ನಿತ್ಯಂ**

**ಸಂಸುಪ್ತವತ್ ಶಿಷ್ಯ ಉದಾರಕರ್ಮಾ**
**ಸಂಜ್ಞಾಯೈ ದೇವಾನಾಂ ಮುಖಮೀಕ್ಷ್ಯಾಪ್ರಮೇಯಃ ॥ತಾ.ನಿ.೧೬.೫॥**
**ದೇವಾಶ್ಚ ತದ್ಭಾವವಿದೋಽಖಿಲಾಶ್ಚ**
**ನಿಮೀಲಿತಾಕ್ಷಾಃ ಶಯನೇಷು ಶಿಶ್ಯಿರೇ ।**
**ತದಾ ಬಲಿಸ್ತಸ್ಯ ವಿಷ್ಣೋಃ ಕಿರೀಟಂ**
**ಆದಾಯಾಗಾಜ್ಜಹಸುಃ ಸರ್ವದೇವಾಃ ॥ತಾ.ನಿ.೧೬.೬॥**
**ನಾರಾಯಣೇ ಸರ್ವದೇವೈಃ ಸಮೇತೇ**
**ಬ್ರಹ್ಮಾದಿಭಿರ್ಹಾಸಮಾನೇ ಸುಪರ್ಣಃ ।**
**ಗತ್ವಾ ಪಾತಾಲಂ ಯುಧಿ ಜಿತ್ವಾ ಬಲಿಂ ಚ**
**ಕಿರೀಟಮಾದಾಯಾಭ್ಯಯಾದ್ಯತ್ರ ಕೃಷ್ಣಃ ॥ತಾ.ನಿ.೧೬.೭॥**

ಈ ರೀತಿಯಾಗಿ ತಾತ್ಪರ್ಯನಿರ್ಣಯದಲ್ಲಿ ಹೇಳಿದ ಕಥೆಯನ್ನು ಅನುಸಂಧಾನ ಮಾಡಿಕೊಳ್ಳಬೇಕು. ॥೨೬॥

**ಹಾಹಾಕಾರೋ ಮಹಾನಾಸೀದ್ ರೋದಸ್ಯೋಃ ಸರ್ವತೋ ದಿಶಮ್ ।**
**ಗೃಹ್ಯಮಾಣೇಽಸುರಪತೌ ವಿಷ್ಣುನಾ ಪ್ರಭವಿಷ್ಣುನಾ ॥೨೭॥**

**ಪ್ರಭವಿಷ್ಣುನಾ** ಇಷ್ಟ ಬಂದ ರೂಪವನ್ನು ಅಭಿವ್ಯಕ್ತಮಾಡುವ ಸಾಮರ್ಥ್ಯ ಉಳ್ಳ **ವಿಷ್ಣುನಾ** ಶ್ರೀಹರಿಯಿಂದ **ಅಸುರಪತೌ** ಬಲಿರಾಜನು **ಗೃಹ್ಯಮಾಣೇ ಸತಿ** ಪಾಶದಿಂದ ಕಟ್ಟಲ್ಪಡುತ್ತಿರಲು **ರೋದಸ್ಯೋಃ** ಭೂಮಿ-ಅಂತರಿಕ್ಷಗಳಲ್ಲಿಯೂ **ಸರ್ವತೋ ದಿಶಂ** ಎಲ್ಲ ದಿಕ್ಕುಗಳಲ್ಲಿಯೂ **ಮಹಾನ್** ಅತಿ ದೊಡ್ಡದಾದ **ಹಾಹಾಕಾರಃ ಆಸೀತ್** ಹಾಹಾ ಎಂದು ಜನರು ಕೂಗಿಕೊಂಡರು. ॥೨೭॥

**ತಂ ಬದ್ಧಂ ವಾರುಣೈಃ ಪಾಶೈರ್ಭಗವಾನಾಹ ವಾಮನಃ ।**
**ನಷ್ಟಶ್ರಿಯಂ ಸ್ಥಿರಪ್ರಜ್ಞಮುದಾರಯಶಸಂ ನೃಪ ॥೨೮॥**

**ಹೇ ನೃಪ** ಪರೀಕ್ಷಿತನೇ **ಭಗವಾನ್ ವಾಮನಃ** ವಾಮನರೂಪಿಯಾದ ಶ್ರೀಹರಿಯು **ವಾರುಣೈಃ ಪಾಶೈಃ ಬದ್ಧಂ** ವರುಣಪಾಶದಿಂದ ಕಟ್ಟಲ್ಪಟ್ಟ **ನಷ್ಟಶ್ರಿಯಂ** ಸಂಪತ್ತನ್ನು ಕಳೆದುಕೊಂಡ ಆದರೂ **ಸ್ಥಿರಪ್ರಜ್ಞಂ** ಶ್ರೀಹರಿಯು ಸರ್ವೋತ್ತಮನೆಂಬ ಅಚಲವಾದ ಬುದ್ಧಿಯುಳ್ಳ **ಉದಾರಯಶಸಂ** ವಿಸ್ತಾರವಾದ ಕೀರ್ತಿಯುಳ್ಳ ಬಲಿರಾಜನನ್ನು ಕುರಿತು **ಆಹ** ಹೇಳಿದನು. ॥೨೮॥

ಅನಾಹವಾಮನ ಎಂಬುದು ಸಂಬುದ್ಧ್ಯಂತವಾದ ಪದವೆಂದು ಇಟ್ಟುಕೊಳ್ಳಬೇಕು. ಅದು ಮುಂದಿನ ಶ್ಲೋಕದಲ್ಲಿಯ ಅಸುರ ಎಂಬುದಕ್ಕೆ ವಿಶೇಷಣ.

**ಶ್ರೀಭಗವಾನುವಾಚ**

**ಪದಾನಿ ತ್ರೀಣಿ ದತ್ತಾನಿ ಭೂಮೇರ್ಮಹ್ಯಂ ತ್ವಯಾಽಸುರ ।**
**ದ್ವಾಭ್ಯಾಂ ಕ್ರಾಂತಾ ಮಹೀ ಸರ್ವಾ ತೃತೀಯಮುಪಕಲ್ಪಯ ॥೨೯॥**

ಆಹವೇ ನ ವಿದ್ಯತೇ ಮನಃ ಯಸ್ಯ ಸಃ ತಸ್ಯ ಸಂಬುದ್ಧಿಃ **ಅನಾಹವಾಮನ** ಯುದ್ಧದಲ್ಲಿ ಮನಸ್ಸಿಲ್ಲದ **ಅಸುರ** ಅಸುರನಾದ ಬಲಿಯೇ **ತ್ವಯಾ** ನಿನ್ನಿಂದ **ಮಹ್ಯಂ** ನನಗೆ **ಭೂಮೇಃ ತ್ರೀಣಿ ಪದಾನಿ ದತ್ತಾನಿ** ಭೂಮಿಯ ಮೂರು ಹೆಜ್ಜೆಗಳು ದಾನವಾಗಿ ಕೊಡಲ್ಪಟ್ಟವು **ಸರ್ವಾ ಮಹೀ** ನಿನ್ನ ಎಲ್ಲ ಭೂಮಿಯೂ **ದ್ವಾಭ್ಯಾಂ** ಎರಡು ಹೆಜ್ಜೆಗಳಿಂದ **ಕ್ರಾಂತಾ** ಆಕ್ರಮಿಸಲ್ಪಟ್ಟಿದೆ. **ತೃತೀಯಂ ಉಪಕಲ್ಪ**ಯ ಮೂರನೆಯ ಹೆಜ್ಜೆಗೆ ಸ್ಥಳಮಾಡಿಕೊಡು. ॥೨೯॥

**ಯಾವತ್ ತಪತ್ಯಸೌ ಗೋಭಿರ್ಯಾವದಿಂದುಃ ಸಹೋಡುಭಿಃ ।**
**ಯಾವದ್ ವರ್ಷತಿ ಪರ್ಜನ್ಯಸ್ತಾವತೀ ಭೂರಿಯಂ ತವ ॥೩೦॥**

**ಅಸೌ** ಈ ಕಣ್ಣಿಗೆ ಕಾಣುವ ಸೂರ್ಯನು **ಗೋಭಿಃ** ತನ್ನ ಕಿರಣಗಳಿಂದ **ಯಾವತ್** ಎಲ್ಲಿಯವರೆಗೆ **ತಪತಿ** ಪ್ರಕಾಶಿಸುವನೋ **ಇಂದುಃ** ಚಂದ್ರನು **ಉಡುಭಿಃ ಸಹ** ನಕ್ಷತ್ರಗಳೊಂದಿಗೆ **ಯಾವತ್** ಎಲ್ಲಿಯವರೆಗೆ **ತಪತಿ** ಬೆಳದಿಂಗಳನ್ನು ಹರಡುವನೋ **ಪರ್ಜನ್ಯಃ** ಇಂದ್ರನು **ಯಾವತ್** ಎಲ್ಲಿಯವರೆಗೆ **ವರ್ಷತಿ** ಮಳೆಗರಿಯುವನೋ **ತಾವತೀ** ಅಲ್ಲಿಯವರೆಗೆ **ಇಯಂ ಭೂಃ** ಈ ಭೂಮಿಯು **ತವ** ನಿನ್ನ ಒಡೆತನಕ್ಕೆ ಸೇರಿದ್ದು. ॥೩೦॥

ಇಷ್ಟು ನನ್ನದಾಗಲಿ ಆದರೂ ಮೂರನೇ ಹೆಜ್ಜೆಗೆ ಸ್ಥಳವೇಕಿಲ್ಲ ಎಂದರೆ, ನನ್ನ ಈ ಪಾದ ಲೋಕವಿಲಕ್ಷಣವಾದದ್ದು ಅದಕ್ಕೆ ಈ ದೊಡ್ಡ ಭೂಮಿಯೂ ಸಾಲದು ಎನ್ನುತ್ತಾನೆ ಶ್ರೀಹರಿ-

**ಪದ್ಯೈಕೇನ ಮಯಾ ಕ್ರಾಂತೋ ಭೂರ್ಲೋಕೋ ವಿವರೈಃ ಸಹ ।**
**ಸ್ವರ್ಲೋಕಸ್ತು ದ್ವಿತೀಯೇನ ಪಶ್ಯತಸ್ತೇ ಮಯಾತ್ಮನಾ ॥೩೧॥**

**ಮಯಾ** ನನ್ನಿಂದ **ವಿವರೈಃ ಸಹ** ಕೆಳಗಿನ ಲೋಕಗಳೊಂದಿಗೆ **ಭೂಲೋಕಃ** ಭೂಲೋಕವು **ಏಕೇನ ಪದಾ** ಒಂದೇ ಹೆಜ್ಜೆಯಿಂದ (ಪದ್ಯೈಕೇನ ಎಂಬುದರಿಂದ ಮೊದಲು ತೋರಿಸಿದ ಪಾದದಿಂದಲೇ ಎಂಬ ಅರ್ಥವನ್ನು ಸೂಚಿಸುವನು.) **ಕ್ರಾಂತಾ** ಆಕ್ರಮಿಸಲ್ಪಟ್ಟಿತು **ತೇ ಪಶ್ಯತಃ** ನೀನು ನೋಡುತ್ತ ಇದ್ದಂತೆಯೇ **ಆತ್ಮನಾ** ವ್ಯಾಪ್ತವಾದ **ಮಯಾ** ನನ್ನಿಂದ **ದ್ವಿತೀಯೇನ ತು** ಎರಡನೇ ಹೆಜ್ಜೆಯಿಂದಲಾದರೋ **ಸ್ವರ್ಲೋಕಃ** ಸ್ವರ್ಗಲೋಕವು **ಕ್ರಾಂತಃ** ಆಕ್ರಮಿಸಲ್ಪಟ್ಟಿತು.

ಸತ್ಯ :- ಇಲ್ಲಿ ಆತ್ಮನಾ ಎಂಬುದಕ್ಕೆ ಮುಂದೆ ಅನ್ವಯ. ಅಥವಾ ಆತ್ಮನಾ ದೇಹದಿಂದ ಆಂತರಾಲಿಕೋ ಲೋಕಃ ಆಕ್ರಾಂತಃ ಮಧ್ಯದ ಲೋಕಗಳೆಲ್ಲ ಆಕ್ರಮಿಸಲ್ಪಟ್ಟಿವೆ. ಆದ್ದರಿಂದ ಮೂರನೇ ಹೆಜ್ಜೆಗೆ ಸ್ಥಳವಿಲ್ಲವೆಂದರ್ಥ ಹೀಗೂ ಮಾಡಬಹುದು.

**ಪ್ರತಿಶ್ರುತಮದಾತುಸ್ತೇ ನಿರಯೇ ವಾಸ ಇಷ್ಯತೇ ।**
**ವಿಶ ತ್ವಂ ನಿರಯಂ ತಸ್ಮಾದ್ ಗುರುಣಾ ಚಾನುಮೋದಿತಃ ॥೩೨॥**

**ಆತ್ಮನಾ** ತನ್ನಿಂದಲೇ **ಪ್ರತಿಶ್ರುತಂ** ಪ್ರತಿಜ್ಞಾತವಾದುದನ್ನು **ಅದಾತುಃ** ಕೊಡದಿರುವ **ತೇ** ನಿನಗೆ **ನಿರಯೇ ವಾಸಃ ಇಷ್ಯತೇ** ನರಕದಲ್ಲಿ ವಾಸವು ಪ್ರಾಮಾಣಿಕರಿಂದ ಅಂಗೀಕರಿಸಲ್ಪಟ್ಟಿದೆ. **ತಸ್ಮಾತ್** ಪ್ರತಿಜ್ಞೆಯನ್ನು ಪೂರ್ಣ ಮಾಡದಿದ್ದುದರಿಂದ **ತ್ವಂ** ನೀನು **ನರಕಂ ವಿಶ** ನರಕವನ್ನು ಪ್ರವೇಶಿಸು **ಗುರುಣಾ ಚ** ಶುಕ್ರಾಚಾರ್ಯರಿಂದಲೂ **ಅನುಮೋದಿತಃ** ಅನುಮೋದಿಸಲ್ಪಟ್ಟಿರುವಿ.

ಲಿಂಗೇರೀ ಃ- ''ವಾಚಾ ದತ್ತಂ ಮನೋದತ್ತಂ ಧಾರಾದತ್ತಂ ನ ದೀಯತೇ । ಷಷ್ಟಿವರ್ಷಸಹಸ್ರಾಣಿ ವಿಷ್ಠಾಯಾಂ ಜಾಯತೇ ಕೃಮಿಃ'' ಮಾತಿನಿಂದ, ಮನಸ್ಸಿನಿಂದ, ಜಲಧಾರಾಪೂರ್ವಕವಾಗಿ ಕೊಡುತ್ತೇನೆ ಎಂದು ಹೇಳಿದ ವಸ್ತುವನ್ನು ದಾನ ಮಾಡದಿದ್ದರೇ ಅರವತ್ತುಸಾವಿರ ವರ್ಷಗಳ ತನಕ ಹೇಸಿಗೆಯಲ್ಲಿ ಕ್ರಿಮಿಯಾಗಿ ಜನಿಸುತ್ತಾನೆ. ಎಂದು ದುರ್ಗತಿಯನ್ನು ಹೇಳಿದೆ. ಆದ್ದರಿಂದ ಮೂರನೆಯ ಪಾದವನ್ನು ಕೊಡಬೇಕು ಎಂದು ತಾತ್ಪರ್ಯ. ॥೩೨॥

**ಯೋ ವಿಪ್ರಾಯ ಪ್ರತಿಶ್ರುತ್ಯ ನ ತದರ್ಪಯತೇ ಕ್ವಚಿತ್ ।**
**ವೃಥಾ ಮನೋರಥಸ್ತಸ್ಯ ದೂರಸ್ವರ್ಗಃ ಪತತ್ಯಧಃ ॥೩೩॥**

**ಯಃ** ಯಾವನು **ವಿಪ್ರಾಯ** ಬ್ರಾಹ್ಮಣನಿಗೆ **ಪ್ರತಿಶ್ರುತ್ಯ** ದಾನ ಮಾಡುವೆ ಎಂದು ಪ್ರತಿಜ್ಞೆ ಮಾಡಿ **ಕ್ವಚಿತ್** ಒಂದು ಸಲವೂ **ತತ್ ನ ಅರ್ಪಯತೇ** ಸಂಕಲ್ಪಿತವಾದ ದ್ರವ್ಯವನ್ನು ಕೊಡುವುದಿಲ್ಲವೋ **ತಸ್ಯ** ಅವನ **ಮನೋರಥಃ** ಐಹಿಕಭೋಗವಿಷಯಕವಾದ ಮನೋರಥಗಳು **ವೃಥಾ** ವ್ಯರ್ಥವಾಗುವವು. **ದೂರಸ್ವರ್ಗಃ** ಸ್ವರ್ಗವಂತೂ ದೂರವಾಗುತ್ತದೆ. ಸ್ವರ್ಗ ದೊರೆಯದು ಎಂದು ತಾತ್ಪರ್ಯ. ದೂರೇ ಸ್ವರ್ಗೋ ಯಸ್ಯ ಸಃ ದೂರಸ್ವರ್ಗಃ **ಅಧಃ ಪತತಿ** ನೀಚಯೋನಿಯನ್ನು ಹೊಂದುವನು.

♦ **ಮನೋರಥಃ** ಸ್ವರ್ಗವನ್ನು ಸೇರುವೆನೆಂಬ ಇಚ್ಛೆಯು **ವೃಥಾ** ವ್ಯರ್ಥವಾಗುವುದು. ಹೀಗೂ ಅರ್ಥ ಮಾಡಿದೆ. ಅವನಿಗೆ **ಚಿತ್ ಕ್ವ** ಜ್ಞಾನವೆಲ್ಲಿಯದು.

ಲಿಂಗೇರೀ ಃ- ಪ್ರತಿಜ್ಞಾತವಾದ ಸಮಗ್ರಪದಾರ್ಥವನ್ನು ದಾನ ಮಾಡದಿದ್ದರೆ ನರಕಪ್ರಾಪ್ತಿಯಾಗುತ್ತದೆ. ಆದರೆ ಈಗ ಅಂಥ ಪ್ರಸಂಗವಿಲ್ಲ. ಮೂರು ಪಾದ ಭೂಮಿಯನ್ನು ಕೊಡುತ್ತೇನೆಂದು ಹೇಳಿ ಎರಡು ಪಾದವನ್ನು ಕೊಟ್ಟಿರುವೆನು. ಆದ್ದರಿಂದ ನಾನು ಸ್ವರ್ಗಕ್ಕೆ ಹೋಗುತ್ತೇನೆ. ಯಾವ ಪ್ರತಿಬಂಧಕವೂ ಇಲ್ಲ. ಎಂದರೆ ಸತ್ಯ. ಪ್ರತಿಜ್ಞಾತವಾದದ್ದರಲ್ಲಿ ಎರಡು ಪಾದ ಭೂಮಿಯನ್ನು ಕೊಟ್ಟಿರುವುದರಿಂದ ಸ್ವರ್ಗವು

ಆಗುತ್ತದೆ. ಆದರೆ ಪ್ರತಿಜ್ಞಾತವಾದ ಸಮಗ್ರವನ್ನು ಕೊಡದಿರುವುದರಿಂದ ದೋಷವು ಬಂದೇ ಬರುತ್ತದೆ. ಆ ದೋಷದಿಂದ ಸ್ವರ್ಗದಿಂದ ಪ್ರಚ್ಯುತನಾಗಿ ಪಶ್ವಾದಿಯೋನಿಗಳು ಪ್ರಾಪ್ತವಾಗುತ್ತವೆ. ಅದನ್ನು ತಪ್ಪಿಸಿಕೊಳ್ಳಲಾಗುವುದಿಲ್ಲ ಎಂದು ಅಭಿಪ್ರಾಯ. ।।೩೩।।

ಎಲೋ ಬಲಿಯೇ ! ನಿನಗೆ ಕೇವಲ ಪ್ರತಿಜ್ಞೆ ಮಾಡಿದ್ದನ್ನು ಪೂರೈಸಿ ಕೊಡದಿರುವ ದೋಷವಷ್ಟೇ ಅಲ್ಲ ವಂಚನೆ ಮಾಡಿದ ದೋಷವೂ ಇದೆ. ಕಾರಣ ನರಕವಾಸವೇ ನಿನಗೆ ಯೋಗ್ಯವೆಂದು ಹೇಳುವನು-

**ವಿಪ್ರಲಬ್ಧೋ ದದಾಮೀತಿ ತ್ವಯಾಽಹಂ ಚಾಽದ್ಯ ಮಾನಿನಾ ।**
**ತದ್ವ್ಯಲೀಕಫಲಂ ಭುಂಕ್ಷ್ವ ನಿರಯಂ ಕತಿಚಿತ್ ಸಮಾಃ ।।೩೪।।**

**ಮಾನಿನಾ** ನಾನು ಸಾರ್ವಭೌಮ ನೀನು ಕೇಳಿದ್ದನ್ನೆಲ್ಲ ಕೊಡಲು ಸಮರ್ಥ ದಡ್ಡನಂತೆ ನೀನೇ ಮೂರು ಪಾದ ಭೂಮಿ ಬೇಡಿದಿ ಮುಂತಾಗಿ ಅಹಂಕಾರಕ್ಕೆ ಒಳಗಾದ **ತ್ವಯಾ** ನಿನ್ನಿಂದ **ಅದ್ಯ** ಈಗ **ಅಹಂ** ನಾನು **ವಿಪ್ರಲಬ್ಧಃ** ವಂಚಿಸಲ್ಪಟ್ಟಿರುವೆನು **ದದಾನೀತಿ** (ಇಷ್ಟು ಕೊಡುವೆನೆಂದು) **ತತ್** ಆದ್ದರಿಂದ **ತ್ವಂ** ನೀನು **ವ್ಯಲೀಕಫಲಂ** ಸುಳ್ಳಾಡಿದ ಫಲವನ್ನು **ಕ್ವಚಿತ್ ಸಮಾಃ** ಕೆಲವು ವರ್ಷ **ನಿರಯಂ ಭುಂಕ್ಷ್ವ** ನರಕವನ್ನು ಅನುಭವಿಸು. ।।೩೪।।

ವಿಜಯಧ್ವಜರ ಪ್ರಕಾರ ಇಲ್ಲಿಗೆ ೨೦ನೇ ಅಧ್ಯಾಯದ ಸಮಾಪ್ತಿಯಾಗುತ್ತದೆ.

ಬಲಿಚಕ್ರವರ್ತಿಯು ತಾನು ಮೋಸ ಮಾಡಿಲ್ಲವೆಂದು ತಿಳಿಸಲು ಮತ್ತೊಂದು ರೀತಿಯಿಂದ ಹೇಳುತ್ತಾನೆ-

**ಶ್ರೀಶುಕ ಉವಾಚ**

**ಏವಂ ವಿಪ್ರಕೃತೋ ರಾಜನ್ ಬಲಿರ್ಭಗವತಾಸುರಃ ।**
**ಭಿದ್ಯಮಾನೋಽಪ್ಯಭಿನ್ನಾತ್ಮಾ ಪ್ರತ್ಯಾಹಾವಿಕ್ಲವಂ ವಚಃ ।।೩೫।।**

**ಹೇ ರಾಜನ್** ಪರೀಕ್ಷಿತನೇ **ಏವಂ** ಮೇಲೆ ಹೇಳಿದಂತೆ **ವಿಪ್ರಕೃತಃ ಚ** ತಿರಸ್ಕೃತನಾದ **ಅಸುರಃ** ಅಸುರ ಜನ್ಮದಲ್ಲಿ ಬಂದ **ಬಲಿಃ** ಬಲಿರಾಜನು **ಭಿದ್ಯಮಾನಃ ಅಪಿ** ನಿಷ್ಠುರ ಮಾತನಾಡಿಸಿಕೊಂಡರೂ **ಅಭಿನ್ನಾತ್ಮಾ** ನಿರ್ವಿಕಾರವಾದ ಮನಸ್ಸುಳ್ಳವನಾಗಿ **ಪ್ರತಿ** ಭಗವಂತನನ್ನು ಕುರಿತು **ಅವಿಕ್ಲವಂ** ದೈನ್ಯವಿಲ್ಲದ **ವಚಃ** ಮಾತನ್ನು **ಆಹ** ಹೇಳಿದನು. ।।೩೫।।

**ಬಲಿರುವಾಚ**

**ಯದ್ಯುತ್ತಮಶ್ಲೋಕ ಭವಾನ್ ಮಮೇರಿತಂ**
**ವಚೋ ವ್ಯಲೀಕಂ ಸುರವರ್ಯ ಮನ್ಯಸೇ ।**

**ಕರೋಮ್ಯೃತಂ ತನ್ನ ಭವೇತ್ ಪ್ರಲಂಭನಂ**
**ಪದಂ ತೃತೀಯಂ ಕುರು ಶೀರ್ಷ್ಣಿ ಮೇ ನಿಜಮ್** ॥೩೬॥

**ಹೇ ಉತ್ತಮಶ್ಲೋಕ** ಶ್ರೇಷ್ಠರಾದ ಬ್ರಹ್ಮಾದಿಗಳಿಂದ ಸ್ತುತ್ಯವಾದ ಕೀರ್ತಿಯುಳ್ಳ **ಸುರವರ್ಯ** ದೇವೋತ್ತಮನೇ **ಭವಾನ್** ನೀನು **ಈರಿತಂ** ಹೇಳಲ್ಪಟ್ಟ **ಮಮ ವಚಃ** ನನ್ನ ಮಾತನ್ನು **ವ್ಯಲೀಕಂ** ಸುಳ್ಳೆಂದು ಮೋಸವೆಂದು **ಯದಿ ಮನ್ಯಸೇ** ತಿಳಿಯುವಿಯಾದರೆ **ತತ್** ಅದನ್ನು **ಋತಂ** ಸತ್ಯವಾಗಿ **ಕರೋಮಿ** ಮಾಡುವೆನು **ತತ್** ಆದ್ದರಿಂದ **ಪ್ರಲಂಭನಂ ನ ಭವೇತ್** ವಂಚನವಾಗಲಾರದು. ಅದರ ಫಲವಾದ ನರಕವಾಸವೂ ಆಗಲಾರದು,

ಮೂರನೆಯ ಹೆಜ್ಜೆಯ ಭೂಮಿಯನ್ನು ನೀಡಲು ನಿನ್ನದೇನಿಲ್ಲ. ನಿನ್ನ ಮಾತನ್ನು ಹೇಗೆ ಸತ್ಯ ಮಾಡುವಿ ಎಂದರೆ ಹೇಳುವನು. **ಮೇ ಶೀರ್ಷ್ಣಿ** ನನ್ನ ತಲೆಯಲ್ಲಿ **ನಿಜಂ** ನಿನ್ನ **ತೃತೀಯಂ** ಮೂರನೇ ಹೆಜ್ಜೆಯನ್ನು **ಕುರು** ಇಡು. ಇದರಿಂದ ಪ್ರತಿಜ್ಞಾಪಾಲನೆಯಾಗುವುದು ಎಂದು ಅಭಿಪ್ರಾಯ.

ಸತ್ಯ :- ನಿಜಂ ಎಂದದ್ದರಿಂದ ಮೊದಲು ನೀನು ಯಾವ ಪಾದವನ್ನು ನನಗೆ ತೋರಿಸಿದೆಯೋ ಅದೇ ಪಾದವನ್ನು ನನ್ನ ತಲೆಯ ಮೇಲೆ ಇಡು ಎಂದು ಹೇಳುವ ಮೂಲಕ ನೀನೇ ವಂಚನ ಮಾಡುತ್ತಿರುವಿ. ನಾನಲ್ಲ ಎಂದು ಬಲಿಯು ಮಾರ್ಮಿಕವಾಗಿ ಸೂಚಿಸುತ್ತಿದ್ದಾನೆ ಎಂದು ತಿಳಿಯಬಹುದು.

ಅಥವಾ ಯತ್ ನಿಜಂ ಉರ್ವರಿತಂ ನನ್ನದಾಗಿ ಉಳಿದ ಶೀರ್ಷ್ಣಿ ತಲೆಯಲ್ಲಿ ಎಂದಾದರೂ ಅನ್ವಯ. ॥೩೬॥

''ಆಪದರ್ಥೇ ಧನಂ ರಕ್ಷೇದ್ ದಾರಾನ್ ರಕ್ಷೇದ್ ಧನೈರಪಿ । ಆತ್ಮಾನಂ ಸತತಂ ರಕ್ಷೇದ್ದಾರೈರಪಿ ಧನೈರಪಿ ॥ ಎಂದಿರುವುದರಿಂದ ತನ್ನ ಭಯ ಪರಿಹಾರಕ್ಕಾಗಿ ಸರ್ವಸ್ವತ್ಯಾಗ ಮಾಡುವರು. ನೀನಾದರೂ ಯಾವುದಕ್ಕೆ ಹೆದರಿ ಆತ್ಮ ಸಮರ್ಪಣೆ ಮಾಡುತ್ತಿರುವಿ ಎಂದರೆ ಹೇಳುವರು. ತನ್ನ ಸತ್ಯದಲ್ಲಿಯ ಸ್ಥೈರ್ಯವನ್ನು ಆರ್ಯರಿಗೆ ವಿಜ್ಞಾಪಿಸುತ್ತಿದ್ದಾನೆ-

**ಬಿಭೇಮಿ ನಾಹಂ ನಿರಯಾತ್ ಪದಚ್ಯುತೋ**
**ನ ಪಾಶಬಂಧಾದ್ ವ್ಯಸನಾದ್ ದುರತ್ಯಯಾತ್ ।**
**ನೈವಾರ್ಥಕೃಚ್ಛ್ರಾದ್ ಭವತೋ ವಿನಿಗ್ರಹಾತ್**
**ಅಸಾಧುವಾದಾತ್ ಭೃಶಮುದ್ವಿಜೇ ಯಥಾ** ॥೩೭॥

**ಅಹಂ** ನಾನು **ನಿರಯಾತ್** ನರಕದಿಂದ **ಪದಚ್ಯುತೇಃ** ಸ್ವರ್ಗದ ಪದಚ್ಯುತಿಯಿಂದ **ಪಾಶಬಂಧಾತ್** ವರುಣಪಾಶದ ಬಂಧನದಿಂದ **ಅರ್ಥಕೃಚ್ಛ್ರಾತ್** ಸಂಸಾರಯಾತ್ರಾಕ್ಕೆ

ಉಪಯುಕ್ತವಾದ ಹಣದ ಅಭಾವದಿಂದ ಒದಗಿದ ಕಷ್ಟದಿಂದ **ದುರತ್ಯಯಾತ್ ವ್ಯಸನಾತ್** ಇವೇ ಮೊದಲಾದ ದಾಟಲು ಅಸಾಧ್ಯವಾದ ಕಷ್ಟಗಳಿಂದಾಗಲಿ **ಭವತಃ ವಿನಿಗ್ರಹಾತ್** ನಿನ್ನ ನಿಗ್ರಹದಿಂದಾಗಲಿ **ನ ತಥಾ ಬಿಭೇಮಿ** ಆ ರೀತಿ ಹೆದರುವುದಿಲ್ಲ. ಹಾಗಾದರೆ ಯಾವುದರಿಂದ ಹೆದರುವಿ ಎಂದರೆ **ಅಸಾಧುವಾದಾತ್** ಇವನು ಸುಳ್ಳು ಮಾತಾಡುವವನು ಕಾರಣ ಅಸಾಧು ಎಂಬ ಜನರ ಮಾತಿನಿಂದ **ಯಥಾ** ಹೇಗೆ **ಭೃಶಂ** ಬಹಳವಾಗಿ **ಉದ್ವಿಜೇ** ಹೆದರುವೇನೂ ಹಾಗೆ ಎಂದರ್ಥ.

ಸತ್ಯ ಃ- ಈ ರೀತಿಯ ದುಃಖದ ಸಂದರ್ಭದಲ್ಲಿಯೂ ''ಪದಚ್ಯುತೋ ನ'' ಮೂರನೆಯ ಪದದಿಂದ ಚ್ಯುತನಾಗಿಲ್ಲ ಅಂದರೆ ಅದರ ಸಂಬಂಧ ಉಳ್ಳವನಾಗಿದ್ದೇನೆ. ಮೂರನೆಯ ಪಾದವನ್ನು ತನ್ನ ತಲೆಯ ಮೇಲೇಯೇ ಧರಿಸಿದ್ದೇನೆ. ಆದ್ದರಿಂದ **ನೋದ್ವಿಜೇ** ಹೆದರುವುದಿಲ್ಲ. ನಿನ್ನ ಚರಣಸ್ಪರ್ಶವಾದರೇ ಯಾವ ಶೋಕವೂ ಇರುವುದಿಲ್ಲವೆಂದು ಭಾವ.

''ಭಿದ್ಯಮಾನೋಽಪ್ಯಭಿನ್ನಾತ್ಮಾ'' ಎಂದು ಹಿಂದೆ ಶುಕಾಚಾರ್ಯರು ಹೇಳಿದ್ದನ್ನು ಗ್ರಂಥಕಾರರು ಬಲಿಯ ಮಾತಿನಿಂದಲೇ ತೋರಿಸುವರು-

**ಪುಂಸಾಂ ಶ್ಲಾಘ್ಯತಮಂ ಮನ್ಯೇ ದಂಡಮರ್ಹತ್ತಮಾರ್ಪಿತಮ್ ।**
**ಯಂ ಸ ಮಾತಾ ಪಿತಾ ಭ್ರಾತಾ ಸುಹೃದಶ್ಚಾದಿಶಂತಿ ಹಿ ।।೩೮।।**

**ಅರ್ಹತ್ತಮಾರ್ಪಿತಂ** ಪೂಜ್ಯರಲ್ಲಿ ಶ್ರೇಷ್ಠನಾದ, ಧರ್ಮಜ್ಞಾನಿಗಳಲ್ಲಿ ಶ್ರೇಷ್ಠನಾದ ಶ್ರೀಹರಿಯಿಂದ ಮಾಡಲ್ಪಟ್ಟ **ದಂಡಂ** ಶಿಕ್ಷೆಯನ್ನು **ಪುಂಸಾಂ** ಜನರಿಗೆ **ಶ್ಲಾಘ್ಯತಮಂ** ಅತ್ಯಂತ ಶ್ಲಾಘ್ಯವೆಂದು **ಮನ್ಯೇ** ತಿಳಿಯುವೆನು. **ಯಂ ದಂಡಂ** ಯಾವ ಶಿಕ್ಷೆಯನ್ನು **ಮಾತಾ** ತಾಯಿಯು **ಪಿತಾ** ತಂದೆಯು **ಭ್ರಾತಾ** ಅಣ್ಣ-ತಮ್ಮಂದಿರು **ಸುಹೃದಶ್ಚ** ಸ್ನೇಹಿತರು ಮತ್ತು ಬಂಧುಗಳು **ನ ಆದಿಶಂತಿ** ಮಾಡುವುದಿಲ್ಲವೆಂದು ಅರ್ಥ.

ಸತ್ಯ ಃ- ಹಿ ಶಬ್ದದಿಂದ, ಈ ವಿಷಯದಲ್ಲಿ ತಮ್ಮ ಅನುಭವವೇ ಪ್ರಮಾಣವೆಂದು ತಿಳಿಸುವರು. ಇಲ್ಲಿ ಮಾತಾ ಪಿತಾ ಭ್ರಾತಾ ಇತ್ಯಾದಿಯಾಗಿ ಹೇಳುತ್ತಾ ಗುರುಗಳನ್ನು ಮಾತ್ರ ಸ್ವೀಕಾರ ಮಾಡಿಲ್ಲ. ಯಾಕೆಂದರೆ ಗುರುಗಳಾದ ಶುಕ್ರಾಚಾರ್ಯರು ದಾನದ ವಿಷಯದಲ್ಲಿ ವಿಪರೀತವಾಗಿ ಹೇಳಿದ್ದಾರೆ. ಅದು ಸರ್ವಜನಪ್ರಸಿದ್ಧವಾಗಿದೆ. ಆದ್ದರಿಂದ ಗುರುಗಳನ್ನು ಇಲ್ಲಿ ಸ್ವೀಕರಿಸಿಲ್ಲ ಎಂಬುದನ್ನು ಗಮನಿಸಬೇಕು. ಮತ್ತು ಗುರುತ್ವವು ನಿಜವಾಗಿ ಪರಮಾತ್ಮನಿಗೇ ಇರುವುದೆಂಬುದನ್ನು ಮುಂದಿನ ಶ್ಲೋಕದಲ್ಲಿ ತಿಳಿಸುತ್ತಿದ್ದಾರೆ. ಆದ್ದರಿಂದ ಗುರುಗಳನ್ನು ಸ್ವೀಕರಿಸದೇ ಇದ್ದದ್ದು ಯುಕ್ತವೇ ಆಗಿದೆ ಎಂದು ತಿಳಿಯಬೇಕು.

**ಹೇ ಅರ್ಹತ್ತಮ** ಅತ್ಯಂತಪೂಜ್ಯನಾದ ವಾಮನನೇ **ತ್ವಯಾ** ನಿನ್ನಿಂದ **ಪುಂಸಾಂ** ಪುರುಷರಿಗೆ **ಅರ್ಪಿತಂ** ಕೊಡಲ್ಪಟ್ಟ **ದಂಡಂ** ಶಿಕ್ಷೆಯು **ಪುಂಸಾಂ** ಪುರುಷರಿಗೆ **ಶ್ಲಾಘ್ಯತಮಂ**

**ಮನ್ಯೇ** ಅತ್ಯಂತ ಪ್ರಶಂಸಾರ್ಹವೆಂದು ತಿಳಿಯುತ್ತೇನೆ. ಎಂಬುದಾಗಿ ಲಿಂಗೇರೀ ಆಚಾರ್ಯರು ಅನ್ವಯಾರ್ಥವನ್ನು ತಿಳಿಸಿದ್ದಾರೆ. ||೩೭||

ಗುರುಗಳೇ ಮೊದಲಾದ ಆಪ್ತರು ಹಿತೈಷಿಗಳು ನೀಡಿರುವ ಶಿಕ್ಷೆಯು ಶ್ಲಾಘ್ಯವಾಗುವದು. ಶತ್ರುವಾದ ನನ್ನಂಥವರು ನೀಡಿದ ಶಿಕ್ಷೆಯು ಹೇಗೆ ಶ್ಲಾಘ್ಯವಾದೀತು ಎಂದರೆ ಹೇಳುತ್ತಾರೆ-

**ತ್ವಂ ನೂನಮಸುರಾಣಾಂ ನಃ ಪಾರೋಕ್ಷ್ಯಂ ಪರಮೋ ಗುರುಃ ।**
**ಯೋ ನೋऽನೇಕಮದಾಂಧಾನಾಂ ತದ್ಭ್ರಂಶಂ ಚಕ್ಷುರಾದಿಶಃ ||೩೯||**

**ಅಸುರಾಣಾಂ** ಅಸುರರಾದ **ಮದಾಂಧಾನಾಂ** ವಿದ್ಯಾ-ಐಶ್ವರ್ಯ ಮುಂತಾದ ಅನೇಕ ಮದಗಳಿಂದ ಕುರುಡರಾದ **ನಃ** ನಮಗೆ **ತ್ವಂ** ನೀನು **ಪಾರೋಕ್ಷ್ಯಂ** ಸಾಕ್ಷಾತ್ತಾಗಿ ಕಾಣದಿರುವ **ಪರಮಃ ಗುರುಃ** ಅತ್ಯುತ್ತಮವಾದ ಗುರುವು ಶಿಕ್ಷಕನು. **ತದ್ಭ್ರಂಶಂ** ನಮ್ಮ ಮದದಿಂದ ಬಂದ ಕುರುಡುತನವನ್ನು ಹೋಗಲಾಡಿಸುವ **ಚಕ್ಷುಃ** ಕಣ್ಣನ್ನು **ಆದಿಶಃ** ಕೊಟ್ಟಿರುವೆ.

ನೀನು ಕೊಟ್ಟ ಶಿಕ್ಷೆಯಿಂದ ನಮಗೆ ಜ್ಞಾನೋದಯವಾಗಿ ನಮ್ಮ ಹಿತಾಹಿತಗಳ ಅರಿವಾಗಿ ಕರ್ತವ್ಯಾಕರ್ತವ್ಯಜ್ಞಾನ ಬಂದಿರುವುದರಿಂದ ನೀನು ಉತ್ತಮ ಹಿತವನ್ನು ಹೇಳುವ ಉಪದೇಶಕ ಗುರುವೆಂದರ್ಥ. ||೩೯||

ಪರಮಗುರುತ್ವವನ್ನು ತಿಳಿಸುವನು. ಅಥವಾ ಈ ವಿಧವಾದ ಜ್ಞಾನದಿಂದ ಯಾರೂ ಸಂಸಾರವನ್ನು ದಾಟಿಲ್ಲ. ಆದ್ದರಿಂದ ಇದನ್ನು ಹೇಗೆ ಕಣ್ಣು ತೆರಿಸಿದಂತೆ ತಿಳಿಯುವಿ ಎಂದರೆ ಹೇಳುವನು-

**ಯಸ್ಮಿನ್ ವೈರಾನುಬಂಧೇನ ರೂಢೇನ ವಿಬುಧೇತರಾಃ ।**
**ಬಹವೋ ಲೇಭಿರೇ ಸಿದ್ಧಿಂ ಯಾಮಿಹೈಕಾಂತಯೋಗಿನಃ ||೪೦||**

**ವಿಬುಧೇತರಾಃ** ಅಸುರಯೋನಿಗಳಲ್ಲಿ ಬಂದ **ಬಹವಃ** ಮುಕ್ತಿಯೋಗ್ಯರಾದ ಹಿರಣ್ಯಕಶಿಪು ಮುಂತಾದ ಅನೇಕರು **ಇಹ** ಅಧಿಕಾರಿವರ್ಗದಲ್ಲಿ **ಏಕಾಂತಯೋಗಿನಃ** ಏಕಾಂತಯೋಗಿಗಳು **ಯಾಂ ಸಿದ್ಧಿಂ** ಯಾವ ಮೋಕ್ಷವನ್ನು **ಲೇಭಿರೇ** ಹೊಂದಿದರೋ **ತಾಂ ಸಿದ್ಧಿಂ** ಅಂತಹ ಮೋಕ್ಷವನ್ನು **ಯಸ್ಮಿನ್** ಯಾವ ನಿನ್ನಲ್ಲಿ **ರೂಢೇನ** ಅಭಿವೃದ್ಧವಾದ **ವೈರಾನುಬಂಧೇನ** ದ್ವೇಷಯುಕ್ತವಾದ ಭಕ್ತಿಯಿಂದ **ಲೇಭಿರೇ** ಹೊಂದಿರುವರು. **ಏಕಾಂತಯೋಗಿನಃ** ಸನಕಾದಿಗಳು **ವಿಬುಧಾಃ** ದೇವತೆಗಳು **ಯಾಂ ಸಿದ್ಧಿಂ** ಯಾವ ಮೋಕ್ಷವನ್ನು **ಕೇವಲಾನುಬಂಧೇನ** ಕೇವಲ ಭಕ್ತಿಯಿಂದ **ಲೇಭಿರೇ** ಹೊಂದಿರುವರೋ **ತಾಂ ಸಿದ್ಧಿಂ** ಅದನ್ನು **ಇತರೇ ಬಹವಃ** ಶಿಶುಪಾಲಾದಿ ದೈತ್ಯರೂ **ಲೇಭಿರೇ** ಹೊಂದಿದರು.

ಸತ್ಯ ಃ- ''ವೈರೇಣ ಯನ್ನೃಪತಯಃ'' ಮುಂತಾದ ಸ್ಕಂಧಾಂತರಗಳಲ್ಲಿಯ ತಾತ್ಪರ್ಯದಿಂದ ವಿಶೇಷವನ್ನು ತಿಳಿಯಬೇಕು.

♦ **ಬಹವಃ** ಎಂದು ಹೇಳಿದ್ದರಿಂದ ಎಲ್ಲ ಅಸುರರಿಗೆ ಈ ಗತಿ ಇಲ್ಲವೆಂದು ತಿಳಿಸಿರುವರು.

ಸಿದ್ಧಿಪಡೆದ ಅನೇಕರು ಜೀವದ್ವಯ ಸಮಾವೇಶ ಉಳ್ಳವರು. ಅಯೋಗ್ಯನಾದ ಜೀವನ ಸಹವಾಸದಿಂದ ದ್ವೇಷಯುಕ್ತವಾದ ಭಕ್ತಿಯನ್ನು ಮಾಡಿದರೂ, ಅಸ್ವಾಭಾವಿಕವಾಗಿ ಆ ಯೋಗ್ಯರು ಮಾಡಿದ ದ್ವೇಷವನ್ನು ಲೆಕ್ಕಿಸದೆ, ಸ್ವಾಭಾವಿಕವಾದ ಭಕ್ತಿಯನ್ನು ಪರಿಗಣಿಸಿಯೇ ಭಗವಂತ ಅನುಗ್ರಹಿಸುತ್ತಾನೆ. ಶುದ್ಧಭಕ್ತಿಯನ್ನು ಮಾಡಿದ ಭಕ್ತರನ್ನು ಅನುಗ್ರಹಿಸುತ್ತಾನೆ ಎಂಬುದು ಕೈಮುತ್ಯಸಿದ್ಧ ಎಂಬುದನ್ನು ತಿಳಿಸಲು ಇದನ್ನು ಹೇಳಿದ್ದಾರೆ. ಇದಕ್ಕೆ ಉದಾಹರಣೆಗಳು ಕೃಷ್ಣಾವತಾರದಲ್ಲಿ ಹೆಚ್ಚಾಗಿ ಕಾಣಸಿಗುತ್ತವೆ. ।।೪೦।।

**ತೇನಾಹಂ ನಿಗೃಹಿತೋಽಸ್ಮಿ ಭವತಾ ಭೂರಿಕರ್ಮಣಾ ।**
**ಬದ್ಧಶ್ಚ ವಾರುಣೈಃ ಪಾಶೈರ್ನಾನುವ್ರೀಡೇ ನ ವಿವ್ಯಥೇ ।।೪೧।।**

**ತೇನ** ಭಕ್ತರ ತಪ್ಪನ್ನು ಎಣಿಸದೇ ಅನುಗ್ರಹಿಸುವ **ಭೂರಿಕರ್ಮಣಾ** ಅಪರಿಮಿತ ಚರಿತ್ರೆಯುಳ್ಳ **ಭವತಾ** ವಿಷ್ಣುವಾದ ನಿನ್ನಿಂದ **ಅಹಂ** ನಾನು **ನಿಗೃಹಿತಃ ಅಸ್ಮಿ** ಹಿಡಿದು ಹಾಕಲ್ಪಟ್ಟರುವೆನು **ವಾರುಣೈಃ ಪಾಶೈಃ ಬದ್ಧಃ ಚ** ವರುಣಪಾಶದಿಂದ ಕಟ್ಟಲ್ಪಟ್ಟಿರುವೆನು. ಆದ್ದರಿಂದ **ನ ಅನುವ್ರಿಡೇ** ನಾಚುವುದಿಲ್ಲ **ನ ವಿವ್ಯಥೇ** ವ್ಯಥೆ ಪಡುವುದಿಲ್ಲ.

ಸತ್ಯ ಃ- ''ವ್ಯಥಾಕ್ವಥಿತತಾ ಕುತೋ ನ ತವ ಬಲೇ'' ಹೇ ಬಲಿಯೇ ನೀನು ವ್ಯಥೆಯಿಂದ ಕುದಿಯುತ್ತಿಲ್ಲವೇಕೆ? ಎಂದರೆ ನಮ್ಮ ಅಜ್ಜನಾದ ಪ್ರಹ್ಲಾದನ ಮಾಹಾತ್ಮ್ಯವನ್ನು ಧ್ಯಾನ ಮಾಡುತ್ತಿರುವೆನು. ಆದ್ದರಿಂದ ನನಗೆ ವ್ಯಥೆಯಾಗುತ್ತಿಲ್ಲ. ಎಂದು ಹೇಳುತ್ತಿದ್ದಾನೆ.

ಈ ಶ್ಲೋಕದಲ್ಲಿ ''ನಾನುವ್ರೀಡೇ ನ ವಿವ್ಯಥೇ'' ಎಂದು ಬಲಿಯು ತಾನು ಪ್ರಹ್ಲಾದನಂತೆ ಶುದ್ಧಭಕ್ತನೆಂದು ಹೇಳಿಕೊಂಡಂತೆ ತೋರುತ್ತದೆ. ಅದು ಕಿರೀಟ ಅಪಹಾರ ಮುಂತಾದ ಅಸುರಾವೇಶದಿಂದ ಮಾಡಿದ ಕಾರ್ಯಗಳಿಂದ ಬಾಧಿತವಾಗಿದೆ. ಆದ್ದರಿಂದ ಪ್ರಮಾಣದಿಂದ ಬಲಿಯ ಅಜ್ಜನಾದ ಪ್ರಹ್ಲಾದನ ಸ್ವರೂಪವನ್ನು ನಿರೂಪಿಸುವರು.

**...ತಾತ್ಪರ್ಯ...**

**ಬಲಿರಪ್ಯಸುರಾವೇಶಾತ್ ಸ್ತುವನ್ನಪಿ ಜನಾರ್ದನಮ್ ।**
**ಆಕ್ಷಿಪತ್ಯಂತರಾ ಕ್ವಾಽಪಿ ಪ್ರಹ್ಲಾದೋ ನಿತ್ಯಭಕ್ತಿಮಾನ್ ।।ಇತಿ ಬ್ರಹ್ಮಾಂಡೇ।।**

ಬಲಿಯು ಕರ್ಮಜದೇವತೆಯಾಗಿದ್ದಾನೆ. ಹೀಗಾಗಿ ಶ್ರೀಹರಿಯನ್ನು ಸ್ತುತಿಸಿದರೂ ಅಸುರಾವೇಶದಿಂದ ಮಧ್ಯೇ ಮಧ್ಯೇ ಕೆಲವು ಸಲ ''ಭೀತಂ ಬ್ರಹ್ಮತನುಂ ರಿಪುಮ್ ಮುಂತಾಗಿ ಭಗವಂತನನ್ನು ಆಕ್ಷೇಪಿಸುತ್ತಾನೆ. ಸ್ತುತಿಮಂತರಾ ಸ್ತುತಿ ಮಾಡದೇ ಎಂದೂ ಅರ್ಥ ಮಾಡಿಕೊಳ್ಳಬಹುದು. ಪ್ರಹ್ಲಾದನಾದರೋ ಸರ್ವದಾ ಭಕ್ತಿಯುಳ್ಳವನು ಎಂದು **ತಿಳಿಯಬೇಕು**. ಎಂದು ಬ್ರಹ್ಮಾಂಡಪುರಾಣದಲ್ಲಿದೆ. ।।೪೧।।

ನೀನು ದಂಡರೂಪವಾದ ಅನುಗ್ರಹವನ್ನು ನನ್ನ ಮೇಲೆ ಮಾಡಿರುವಿ. ಆ ಅನುಗ್ರಹ ನಿನ್ನ ಭಕ್ತನ ಮೊಮ್ಮಗನೆಂದು ಮಾಡಿದ್ದೇ ಹೊರತು ನಾನು ಅನುಗ್ರಹ ಪಾತ್ರನೆಂದಲ್ಲ. ಎಂಬ ಅಭಿಪ್ರಾಯದಿಂದ ಹೇಳುವನು.

ಅಲ್ಲದೇ ಅಸುರಜಾತಿಯಲ್ಲಿ ಹುಟ್ಟಿದವರು ಯಾರಾದರೂ ಶ್ರೀಹರಿಯಲ್ಲಿ ಭಕ್ತಿಯನ್ನು ಮಾಡಿ ಶ್ರೇಯಸ್ಸನ್ನು ಪಡೆದದ್ದು ಕಂಡಿದ್ದರೆ, ನೀನೂ ಭಕ್ತಿಯನ್ನು ಮಾಡಬಹುದಾಗಿತ್ತು. ಶ್ರೇಯಸ್ಸನ್ನು ಹೊಂದಬಹುದಿತ್ತು. ಎಂದರೆ ಅದಕ್ಕೆ ಪ್ರಹ್ಲಾದನೇ ದೃಷ್ಟಾಂತವೆಂದು ತೋರಿಸುವನು-

**ಪಿತಾಮಹೋ ಮೇ ಭವದೀಯಸಮ್ಮತಃ**
**ಪ್ರಹ್ಲಾದ ಆವಿಷ್ಕೃತಸಾಧುವಾದಃ**
**ಭವದ್ವಿಪಕ್ಷೇಣ ವಿಚಿತ್ರವೈಶಸಂ**
**ಸಂಪ್ರಾಪಿತಸ್ತ್ವತ್ಪರಮಃ ಸ್ವಪಿತ್ರಾ** ।।೪೨।।

**ಆವಿಷ್ಕೃತಸಾಧುವಾದಃ** ಸ್ಪಷ್ಟವಾಗಿ ಹೇಳಿದ ಶ್ರೀಹರಿಯೇ ಸರ್ವಪ್ರೇರಕನು ಸರ್ವೇಶ್ವರನೆಂಬ ಶ್ರೇಷ್ಠ ಮಾತುಗಳುಳ್ಳ ಆದ್ದರಿಂದಲೇ **ಭವದೀಯಸಮ್ಮತಃ** ನಿನ್ನ ಭಕ್ತರಿಗೆ ಸಮ್ಮತನಾದ ಅಥವಾ ನಿನ್ನವನೆಂದು ಸಮ್ಮತನಾದ **ಮೇ ಪಿತಾಮಹಃ** ನನ್ನ ಅಜ್ಜನಾದ **ಪ್ರಹ್ಲಾದಃ** ಪ್ರಹ್ಲಾದನು **ಭವದ್ವಿಪಕ್ಷೇಣ** ನಿನ್ನ ಶತ್ರುವಾದ **ಸ್ವಪಿತ್ರಾ** ತನ್ನ ತಂದೆಯಾದ ಹಿರಣ್ಯಕಶಿಪುವಿನಿಂದ **ವಿಚಿತ್ರವೈಶಸಂ** ಅನೇಕ ಬಗೆಯ ದುಃಖಗಳನ್ನು **ಸಂಪ್ರಾಪಿತಃ** ಹೊಂದಿಸಲ್ಪಟ್ಟರು. ಆದರೂ **ತ್ವತ್ಪರಮಃ** ನಿನೇ ಸರ್ವೋತ್ತಮನೆಂಬ ಭಕ್ತಿಯುಳ್ಳವನಾಗಿದ್ದನು. ಹಾಗೆಯೇ ನಾನೂ ನಿನ್ನನ್ನು ಬಿಡುವುದಿಲ್ಲವೆಂದು ಅರ್ಥ. ।।೪೨।।

ನಾನಾವಿಧ ವ್ಯಸನಕ್ಕೀಡಾದ ಪ್ರಹ್ಲಾದ ರಾಜರು ಏನು ಮಾಡಿದರೆಂದು ಹೇಳುವರು-

**ಕಿಮಾತ್ಮನಾಽನೇನ ಜಹಾತಿ ಯೋಽಂತತಃ**
**ಕಿಂ ರಿಕ್ಥಹಾರೈಃ ಸ್ವಜನಾಖ್ಯದಸ್ಯುಭಿಃ ।**
**ಕಿಂ ಜಾಯಯಾ ಸಂಸೃತಿಹೇತುಭೂತಯಾ**
**ಮರ್ತ್ಯಸ್ಯ ಗೇಹೈಃ ಕಿಮಿಹಾಯುಷೋ ವ್ಯಯಃ** ।।೪೩।।

**ಇತ್ಥಂ ಸ ನಿಶ್ಚಿತ್ಯ ಪಿತಾಮಹೋ ಮಹಾನ್**
**ಅಗಾಧಬೋಧೋ ಭವತಃ ಪಾದಪದ್ಮಮ್ ।**
**ಧ್ರುವಂ ಪ್ರಪೇದೇ ಹ್ಯಕುತೋಭಯಂ ಜನಾದ್**
**ಭೀತಃ ಸ್ವಪಕ್ಷಕ್ಷಪಣಸ್ಯ ಸತ್ತಮಃ ।।೪೪।।**

**ಸಃ** ಪ್ರಸಿದ್ಧನಾದ **ಮೇ** ನನ್ನ **ಪಿತಾಮಹಃ** ತಾತನಾದ ಪ್ರಹ್ಲಾದನು **ಜನಾತ್** ದುರ್ಜನಸಹವಾಸದಿಂದ **ಭೀತಃ ಸನ್** ಹೆದರಿದವನಾಗಿ **ಯಃ** ಯಾವ ದೇಹವು **ಅಂತತಃ** ಆಯುಷ್ಯ ಮುಗಿದ ಮೇಲೆ **ಜಹಾತಿ** ಜೀವನನ್ನು ಬಿಡುವುದೋ **ತೇನ** ಆ **ಆತ್ಮನಾ** ದೇಹದಿಂದ **ಕಿಂ** ಏನು ಪ್ರಯೋಜನ? ಏನೂ ಇಲ್ಲ. **ರಿಕ್ಥಹಾರೈಃ** ಪಿತ್ರಾರ್ಜಿತಧನವನ್ನು ಹಂಚಿಕೊಳ್ಳುವ **ಏಭಿಃ** ಈ **ಸ್ವಜನಾಖ್ಯದಸ್ಯುಭಿಃ** ಸಂಬಂಧಿಗಳೆಂಬ ಕಳ್ಳರಿಂದ **ಕಿಂ** ಏನು ಪ್ರಯೋಜನ? ಅಥವಾ **ಕಿಂ ರಿಕ್ಥಹಾರೈಃ** ಮಕ್ಕಳಿಂದ ಏನು ಪ್ರಯೋಜನ? **ಸಂಸೃತಿಹೇತುಭೂತಯಾ** ಸಂಸಾರಕ್ಕೆ ಕಾರಣಳಾದ **ಜಾಯಯಾ ಕಿಂ** ಹೆಂಡತಿಯಿಂದ ಏನು ಪ್ರಯೋಜನ? **ಮರ್ತ್ಯಸ್ಯ** ಸಾಯುವ ಸ್ವಭಾವದವನಾದ ಇವನಿಗೆ **ಗೇಹೈಃ ಕಿಂ** ಮನೆಗಳಿಂದ ಏನು ಪ್ರಯೋಜನ ? ಏನೂ ಪ್ರಯೋಜನ ಇಲ್ಲ. ಅಷ್ಟೇ ಅಲ್ಲ. ಇವುಗಳಲ್ಲಿ ಆಸಕ್ತನಾದವನಿಗೆ **ಇಹ** ಈ ಶರೀರದಲ್ಲಿ **ಆಯುಷೋ ವ್ಯಯಃ** ಆಯುಷ್ಯದ ನಾಶವು ಆಗುವುದು **ಇತ್ಥಂ** ಈ ರೀತಿಯಾಗಿ **ನಿಶ್ಚಿತ್ಯ** ತೀರ್ಮಾನ ಮಾಡಿಕೊಂಡು **ಸ್ವಪಕ್ಷಕ್ಷಪಣಸ್ಯ** ತಮ್ಮ ಪಕ್ಷದವರಾದ ದೈತ್ಯರ ನಾಶಕನಾದ **ಭವತಃ** ವಿಷ್ಣುವಾದ ನಿನ್ನ **ಅಕುತೋಭಯಂ** ಯಾವ ಭಯವೂ ಇಲ್ಲದ **ಪಾದಪದ್ಮಂ** ಚರಣಕಮಲಗಳನ್ನು **ಧ್ರುವಂ** ದೃಢವಾಗಿ **ಪ್ರಪೇದೇ** ಶರಣು ಹೊಂದಿದನು. **ಹಿ** ಆದ್ದರಿಂದ **ಅಗಾಧಬೋಧಃ** ಆಳವಾದ ಜ್ಞಾನಿಯು **ಮಹಾನ್** ತಮ್ಮ ಗುಂಪಿನಲ್ಲಿ ದೊಡ್ಡವರು **ಸತ್ತಮಃ** ಸಜ್ಜನರಲ್ಲಿ ಉತ್ತಮರು ಎಂದು ನನ್ನ ಭಾವನೆ. ।।೪೩-೪೪।।

ಪ್ರಹ್ಲಾದರಾಜರ ಅನುಗ್ರಹದಿಂದ ನಾನೂ ಹಾಗೆಯೇ ನಿಶ್ಚಯಿಸಿಕೊಂಡಿರುವೆನು ಎಂದು ಹೇಳುತ್ತಿದ್ದಾರೆ-

**ಅಥಾಹಮಪ್ಯಾತ್ಮರಿಪೋಸ್ತವಾಂತಿಕಂ**
**ದೈವೇನ ನೀತಃ ಪ್ರಸಭಂ ತ್ಯಾಜಿತಶ್ರೀಃ ।**
**ಇದಂ ಕೃತಾಂತಾಂತಿಕವರ್ತಿ ಜೀವಿತಂ**
**ಯಯಾ ಧ್ರುವಂ ಸ್ತಬ್ಧಮತಿರ್ನ ಬುದ್ಧ್ಯತೇ ।।೪೫।।**

**ಅಥ** ಆದ್ದರಿಂದಲೇ **ಅಹಂ ಅಪಿ** ಅಸುರಯೋನಿಯಲ್ಲಿ ಬಂದಿರುವ ನಾನೂ ಸಹ **ದೈವೇನ** ನನ್ನ ಹಿಂದಿನ ಜನ್ಮಗಳ ಪುಣ್ಯಫಲಪ್ರದನಾದ ನಿನ್ನಿಂದ **ಆತ್ಮರಿಪೋಃ** ಅಸುರಜಾತಿಯಾದ ಮಾತ್ರದಿಂದ ನನಗೆ ಶತ್ರುವಾದ **ತವ** ನಿನ್ನ **ಅಂತಿಕಂ** ಸಮೀಪಕ್ಕೆ **ನೀತಃ**

ತರಲ್ಪಟ್ಟೆನು. ಅಷ್ಟೇ ಅಲ್ಲ **ಪ್ರಸಭಂ** ಬಲಾತ್ಕಾರವಾಗಿ **ತ್ಯಾಜಿತಶ್ರೀಃ** ಬಿಡಿಸಲ್ಪಟ್ಟ ರಾಜ್ಯ ಮೊದಲಾದ ಸಂಪತ್ತುಳ್ಳವನಾದೆನು. ಯೋಗ್ಯನಾದವನು, ಜ್ಞಾನೇಚ್ಛುವು ಸಂಪತ್ತನ್ನು ಪ್ರಯತ್ನಪೂರ್ವಕವಾಗಿ ಪರಿತ್ಯಜಿಸಬೇಕು. ಇಲ್ಲದಿದ್ದರೇ ಅನರ್ಥವು ತಪ್ಪಿದ್ದಲ್ಲವೆಂಬ ಅಭಿಪ್ರಾಯದಿಂದ ಹೇಳುತ್ತಾರೆ. **ಯಯಾ** ಯಾವ ಬಂಧಕವಾದ ಈ ಸಂಪತ್ತಿನಿಂದ **ಸ್ತಬ್ಧಮತಿಃ** ಬುದ್ಧಿಯನ್ನು ಕಳೆದುಕೊಂಡ (ವಿವೇಕ ರಹಿತನಾದ) ಮಾನವನು **ಇದಂ ಜೀವಿತಂ** ಈ ಜೀವನವು **ಕೃತಾಂತಾಂತಿಕವರ್ತಿ** ಮೃತ್ಯುವಿನ ಸಮೀಪದಲ್ಲಿದೆ ಎಂದು **ಧ್ರುವಂ** ನಿಶ್ಚಿತವಾಗಿಯೂ **ನ ಬುದ್ಧ್ಯತೇ** ತಿಳಿಯಲಾರನು. ಇಂತಹ ಅನರ್ಥಕಾರಿ ಸಂಪತ್ತನ್ನು ನೀನು ಬಿಡಿಸಿದ್ದು ಪುಣ್ಯದ ಫಲವೆಂದು ಹೇಳಿದ್ದು ಯುಕ್ತವೇ ಆಗಿದೆ ಎಂದು ಅಭಿಪ್ರಾಯ. ।।೪೫।।

ಪ್ರಹ್ಲಾದರಾಜರ ಅತಿಶಯವಾದ ಭಕ್ತಿಯನ್ನು ತಿಳಿಸುವುದಕ್ಕಾಗಿ ಬಲಿಚಕ್ರವರ್ತಿಯು ಮಾಡಿದ ಸ್ತೋತ್ರದಿಂದ ಭಗವಂತನಲ್ಲಿ ಭಕ್ತಿವಿಶೇಷವನ್ನರಿತು ಪ್ರಹ್ಲಾದರು ಅಲ್ಲಿಗೆ ದೈವಾತ್ ದೇವರನ್ನು ನೋಡಬೇಕೆಂದು ಬಂದರೆಂದು ಶುಕಾಚಾರ್ಯರು ಹೇಳುವರು-

**ಶ್ರೀಶುಕ ಉವಾಚ**

**ತಸ್ಯೇತ್ಥಂ ಭಾಷಮಾಣಸ್ಯ ಪ್ರಹ್ಲಾದೋ ಭಗವತ್ಪ್ರಿಯಃ ।**
**ಆಜಗಾಮ ಕುರುಶ್ರೇಷ್ಠ ರಾಕಾಪತಿರಿವೋತ್ಥಿತಃ ।।೪೬।।**

**ಹೇ ಕುರುಶ್ರೇಷ್ಠ** ಪರೀಕ್ಷಿತನೇ **ತಸ್ಯ** ಬಲಿರಾಜನು **ಇತ್ಥಂ ಭಾಷಮಾಣಸ್ಯ ಸತಃ** ಹೀಗೆ ಪರಮಾತ್ಮನನ್ನು ಸ್ತುತಿಸುತ್ತಿರಲು **ಭಗವತ್ಪ್ರಿಯಃ** ಶ್ರೀಹರಿಗೆ ಪ್ರಿಯರಾದ ಪ್ರಹ್ಲಾದರಾಜರು **ಉತ್ಥಿತಃ** ಉದಯಿಸಿದ **ರಾಕಾಪತಿಃ ಇವ** ಹುಣ್ಣಿಮೆಯ ಚಂದ್ರನಂತೆ **ಆಜಗಾಮ** ಆ ಯಜ್ಞಶಾಲೆಗೆ ಬಂದರು. ಪ್ರಹ್ಲಾದರಾಜರು ತಾಪ ಕಳೆಯುವುದರಿಂದ ಚಂದ್ರಸಾಮ್ಯವು ಹೇಳಿದ್ದು ಯುಕ್ತವೇ ಆಗಿದೆ. ।।೪೬।।

**ತಮಿಂದ್ರಸೇನಃ ಸ್ವಪಿತಾಮಹಂ ಶ್ರಿಯಾ**
**ವಿರಾಜಮಾನಂ ನಲಿನಾಯತೇಕ್ಷಣಮ್ ।**
**ಪ್ರಾಂಶುಂ ಪಿಶಂಗಾಂಬರಮಂಜನತ್ವಿಷಂ**
**ಪ್ರಲಂಬಬಾಹುಂ ಸುಭಗಂ ಸಮೈಕ್ಷತ ।।೪೭।।**

**ಇಂದ್ರಸೇನಃ** ಬಲಿಚಕ್ರವರ್ತಿಯು **ನಲಿನಾಯತೇಕ್ಷಣಂ** ಕಮಲದಂತೆ ವಿಶಾಲವಾದ ಕಣ್ಣುಗಳುಳ್ಳ **ಪ್ರಾಂಶುಂ** ಎತ್ತರವಾಗಿದ್ದ **ಪಿಶಂಗಾಂಬರಂ** ಹಳದಿ ಬಟ್ಟೆಯನ್ನುಟ್ಟಿರುವ (ಪೀತಾಂಬರಧಾರಿಯಾದ) **ಅಂಜನತ್ವಿಷಂ** ಕಾಡಿಗೆಯ ಕಾಂತಿಯಂತೆ ಕಾಂತಿಯುಳ್ಳ **ಪ್ರಲಂಬಬಾಹುಂ** ಮೊಣಕಾಲಿನ ವರೆಗೆ ಉದ್ದವಾದ ತೋಳುಗಳುಳ್ಳ **ಸುಭಗಂ**

ಸುಂದರನಾದ ಆದ್ದರಿಂದಲೇ **ಶ್ರಿಯಾ ವಿರಾಜಮಾನಂ** ಕಾಂತಿಯೇ ಮೊದಲಾದ ಸಂಪತ್ತಿನಿಂದ ಶೋಭಿಸುವ **ಸ್ವಪಿತಾಮಹಂ** ತಮ್ಮ ತಾತಂದಿರಾದ **ತಂ** ಪ್ರಸಿದ್ಧರಾದ ಅಲ್ಲಿಗೆ ಬಂದ ಪ್ರಹ್ಲಾದರಾಜರನ್ನು **ಸಮೈಕ್ಷತ** ಚೆನ್ನಾಗಿ ನೋಡಿದರು. ।।೪೭।।

**ತಸ್ಮೈ ಬಲಿರ್ವಾರುಣಪಾಶಯಂತ್ರಿತಃ**
**ಸಮರ್ಹಣಂ ನೋಪಜಹಾರ ಪೂರ್ವವತ್ ।**
**ನನಾಮ ಮೂರ್ಧ್ನಾऽಶ್ರುವಿಲೋಲಲೋಚನಃ**
**ಸವ್ರೀಡನೀಚೀನಮುಖೋ ಬಭೂವ ಹ** ।।೪೮।।

**ವಾರುಣಪಾಶಯಂತ್ರಿತಃ** ವರುಣಪಾಶದಿಂದ ಬದ್ಧನಾದ **ಬಲಿಃ** ಬಲಿರಾಜನು **ಪೂರ್ವವತ್** ಹಿಂದೆ ತಾನು ಬದ್ಧನಾಗದೇ ಇರುವಾಗ ಪ್ರಹ್ಲಾದರಾಜರು ಬಂದಾಗಲೆಲ್ಲ ಮಾಡುತ್ತಿರುವಂತೆ **ತಸ್ಮೈ** ಆ ಪ್ರಹ್ಲಾದರಾಜರಿಗೆ **ಸಮರ್ಹಣಂ** ಅರ್ಘ್ಯ-ಪಾದ್ಯಾದಿಗಳಿಗೆ ಉಪಯುಕ್ತವಾದ ಪೂಜಾಸಾಮಗ್ರಿಗಳನ್ನು **ನ ಉಪಜಹಾರ** ಈಗ ತರಲಾಗಲಿಲ್ಲವಲ್ಲ ಎಂದು **ಅಶ್ರುವಿಲೋಲಲೋಚನಃ** ಕಣ್ಣೀರಿನಿಂದ ಚಂಚಲವಾದ ಕಣ್ಣುಳ್ಳವನಾಗಿ **ಬಭೂವ** ಆದನು. ಅದಕ್ಕಾಗಿ **ಸವ್ರೀಡನೀಚೀನಮುಖಃ** ನಾಚಿಕೆಯಿಂದ ತಗ್ಗಿಸಿದ ಮುಖವುಳ್ಳವನಾದನು. ಆದರೂ **ಮೂರ್ಧ್ನಾ ನನಾಮ** ಶಿರಸ್ಸಿನಿಂದ ನಮಸ್ಕರಿಸಿದನು. **ಹ** ಇದು ಆಶ್ಚರ್ಯ. ಖೇದ. ।।೪೮।।

**ಸ ತತ್ರ ಹಾಸೀನಮುದೀಕ್ಷ್ಯ ಸತ್ಪತಿಂ**
**ಸುನಂದನಂದಾದ್ಯನುಗೈರುಪಾಸಿತಮ್ ।**
**ಉಪೇತ್ಯ ಭೂಮೌ ತರಸಾ ಮಹಾಮನಾ**
**ನನಾಮ ಮೂರ್ಧ್ನಾ ಪುಲಕಾಶ್ರುವಿಹ್ವಲಃ** ।।೪೯।।

**ಮಹಾಮನಾಃ** ತಮ್ಮ ಮೊಮ್ಮಗನು ಈ ರೀತಿಯಲ್ಲಿ ವಿಪತ್ತಿಗೊಳಗಾಗಿದ್ದರೂ ವಿಕಾರವನ್ನು ಹೊಂದದಿದ್ದ **ಸಃ** ಪ್ರಹ್ಲಾದರಾಜರು **ತತ್ರ** ಯಜ್ಞಶಾಲೆಯಲ್ಲಿ **ಆಸೀನಂ** ಕುಳಿತಿದ್ದ **ಸುನಂದನಂದಾದ್ಯನುಗೈಃ** ಸುನಂದ-ನಂದ ಮೊದಲಾದ ಅನುಚರರಿಂದ **ಉಪಾಸಿತಂ** ಸೇವಿತನಾದ **ಸತ್ಪತಿಂ** ಸಜ್ಜನಪಾಲಕನಾದ ವಾಮನರೂಪಿಯಾದ ಶ್ರೀಹರಿಯನ್ನು **ಉದೀಕ್ಷ್ಯ** ನೋಡಿ **ತರಸಾ** ಬೇಗನೇ **ಉಪೇತ್ಯ** ಸಮೀಪಿಸಿ **ಪುಲಕಾಶ್ರುವಿಹ್ವಲಃ ಸನ್** ಭಕ್ತಿಯಿಂದ ಉಂಟಾದ ರೋಮಾಂಚನ ಮತ್ತು ಆನಂದ ಬಾಷ್ಪಗಳಿಂದ ಪರವಶನಾಗಿ **ಭೂಮೌ** ಭೂಮಿಯಲ್ಲಿ **ಮೂರ್ಧ್ನಾ ನನಾಮ** ಶಿರಸಾ ನಮಸ್ಕರಿಸಿದರು. **ಹ** ಆಶ್ಚರ್ಯ.

**ಸತ್ಪತಿಂ** ನಕ್ಷತ್ರಗಳಿಗೆ ಸ್ವಾಮಿಯಾದ ಸೋಮನಂತೆ ಇರುವ ವಾಮನನನ್ನು ಎಂದಾದರೂ ಅರ್ಥ ತಿಳಿಯಬೇಕು. ।।೪೯।।

**ಪ್ರಹ್ಲಾದ ಉವಾಚ**

**ತ್ವಯೈವ ದತ್ತಂ ಪದಮೈಂದ್ರಮೂರ್ಜಿತಂ**
**ಹೃತಂ ತ್ವಯೈವಾದ್ಯ ತದೇವ ಶೋಭನಮ್ ।**
**ಮನ್ಯೇ ಮಹಾನಸ್ಯ ಕೃತೋಽಪ್ಯನುಗ್ರಹೋ**
**ವಿಭ್ರಂಶಿತೋ ಯಚ್ಛ್ರಿಯ ಆತ್ಮಮೋಹನಮ್** ॥೫೦॥

ಹೇ ವಾಮನನೇ **ಅಸ್ಯ** ಈ ನನ್ನ ಮೊಮ್ಮಗನಿಗೆ **ಊರ್ಜಿತಂ** ಉತ್ಕೃಷ್ಟವಾದ **ಐಂದ್ರಂ ಪದಂ** ಇಂದ್ರಪದವಿಯು **ತ್ವಯೈವ** ನಿನ್ನಿಂದಲೇ **ದತ್ತಂ** ಕೊಡಲಾಗಿತ್ತು **ಅದ್ಯ** ಈಗ **ತ್ವಯೈವ** ನಿನ್ನಿಂದಲೇ **ಹೃತಂ** ಕಸಿದುಕೊಳ್ಳಲಾಯಿತು. **ತಥಾ** ನೀನು ಹಾಗೆ ಮಾಡಿದ್ದು **ಶೋಭನಂ ಏವ** ಶ್ರೇಯಸ್ಕರವೇ **ಯತ್** ಯಾವಕಾರಣ **ಆತ್ಮಮೋಹನಾತ್** ಸರ್ವಸ್ವಾಮಿಯಾದ ನಿನ್ನ ವಿಷಯದಲ್ಲಿ ಅಜ್ಞಾನವನ್ನುಂಟು ಮಾಡುವ ಬಲಿಗೆ ಸ್ವಾಂತ್ರ್ಯಾಭಿಮಾನ ಹುಟ್ಟಿಸುವ **ಶ್ರಿಯಃ** ಈ ಇಂದ್ರಪದವಿ ಎಂಬ ಬಂಧಕವಾದ ಸಂಪತ್ತಿನಿಂದ **ವಿಭ್ರಂಶಿತಃ ಇತಿ ಯತ್** ತಪ್ಪಿಸಲ್ಪಟ್ಟನು ಎಂಬುದೇನುಂಟೋ ಅದು **ಅಸ್ಯ** ಈ ಬಲಿಯ ವಿಷಯದಲ್ಲಿ **ಕೃತಃ** ನೀನು ಮಾಡಿದ **ಮಹಾನ್ ಅನುಗ್ರಹಃ** ಬಹುದೊಡ್ಡ ಪ್ರಸಾದವು **ಇತಿ ಅಪಿ** ಎಂದೂ **ಮನ್ಯೇ** ನಾನು ತಿಳಿಯುವೆನು. ॥೫೦॥

**ಯಯಾ ಹಿ ವಿದ್ವಾನಪಿ ಮುಹ್ಯತೇ ಜನಃ**
**ತತ್ಕೋಽಭಿಚಷ್ಟೇ ಗತಿಮಾತ್ಮನೋ ಯಥಾ ।**
**ತಸ್ಮೈ ನಮಸ್ತೇ ಜಗದೀಶ್ವರಾಯ ವೈ**
**ನಾರಾಯಣಾಯಾಖಿಲಲೋಕಸಾಕ್ಷಿಣೇ** ॥೫೧॥

**ಹಿ** ಏಕೆಂದರೇ **ವಿದ್ವಾನ್ ಅಪಿ ಜನಃ** ನಿನ್ನ ಸ್ವಾತಂತ್ರ್ಯ ಜ್ಞಾನವುಳ್ಳವರಾದ ಅಧಿಕಾರಿ ಚೇತನರು ಕೂಡಾ **ಯಯಾ** ಯಾವ ಸಂಪತ್ತಿನಿಂದ **ಮುಹ್ಯತೇ** ತಾನೇ ಸ್ವತಂತ್ರನೆಂದು ಮೋಹಗೊಳ್ಳುವನೋ **ತತ್** ಆ ಕಾರಣದಿಂದ **ಕಃ** ಯಾವನು ತಾನೇ **ಆತ್ಮನಃ ಗತಿಂ** ತನ್ನ ಅಸ್ವಾತಂತ್ರ್ಯತೆಯ ಸ್ಥಿತಿಯನ್ನು **ಯಥಾ** ಯಥಾವತ್ತಾಗಿ (ಇದ್ದಂತೆ ಸರಿಯಾಗಿ) **ಅಭಿಚಷ್ಟೇ** ವಿಮರ್ಶಿಸಿ ತಿಳಿದಾನು? ಯಾವನೂ ತಿಳಿಯುವುದಿಲ್ಲವೆಂದರ್ಥ. ಅಥವಾ **ಯಥಾ** ಹೇಗೆ **ಆತ್ಮನಃ** ತನ್ನ **ಗತಿಂ** ಸ್ವತಂತ್ರತೆಯನ್ನು **ಅಭಿಚಷ್ಟೇ** ಭ್ರಾಂತಿಯಿಂದ ತಿಳಿಯುವನೋ **ತಥಾ** ಹಾಗೆ **ಕಃ** ಯಾವನು ತಾನೇ **ಆತ್ಮನಃ** ಅಂತರ್ಯಾಮಿಯಾದ ಶ್ರೀಹರಿಯ **ಗತಿಂ** ಸ್ವತಂತ್ರನೆಂಬ ಪರಿಸ್ಥಿತಿಯನ್ನು **ಅಭಿಚಷ್ಟೇ** ವಿಮರ್ಶಿಸಿ ತಿಳಿಯುವನು? ಬಂಧಕ ಸಂಪತ್ತಿನಿಂದ ತಾನೇ ಸ್ವತಂತ್ರನೆಂದು ಭ್ರಾಂತನಾಗುವನೇ ಹೊರತು ಶ್ರೀಹರಿಯೇ ಸ್ವತಂತ್ರನೆಂಬ ಸರಿಯಾದ ಜ್ಞಾನ ಉಳ್ಳವನಾಗುವುದಿಲ್ಲವೆಂದಾದರೂ ಅರ್ಥ. **ತಸ್ಮೈ** ಭಕ್ತರಲ್ಲಿ ಕನಿಕರ ಉಳ್ಳ **ಅಖಿಲಲೋಕಸಾಕ್ಷಿಣೇ** ಎಲ್ಲ ಜನರ ಎಲ್ಲ ವ್ಯಾಪಾರಗಳನ್ನು ಸಾಕ್ಷಾತ್ತಾಗಿ ಕಾಣುವ

**ಜಗದೀಶ್ವರಾಯ** ಜಗತ್ಸ್ವಾಮಿಯಾದ **ನಾರಾಯಣಾಯ** ನಾರಾಯಣನಾದ **ತೇ** ಎದುರಿಗಿರುವ ವಾಮನನಾದ ನಿನಗೆ **ನಮಃ** ನಮಸ್ಕಾರವು. **ವೈ** ನಿನ್ನ ರೂಪಗಳಿಗೆ ಭೇದವಿಲ್ಲವೆಂಬುದು ''ನೇಹ ನಾನಾಽಸ್ತಿ ಕಿಂಚನ'' ಎಂಬ ಶ್ರುತಿಯಿಂದ ಸಿದ್ಧವಾಗಿದೆ. ||೫೦||

**ಶ್ರೀಶುಕ ಉವಾಚ**

**ಬದ್ಧಂ ವೀಕ್ಷ್ಯ ಪತಿಂ ಸಾಧ್ವೀ ತತ್ಪತ್ನೀ ಭಯವಿಹ್ವಲಾ ।**
**ಪ್ರಾಂಜಲಿಃ ಪ್ರಣತೋಪೇಂದ್ರಂ ಬಭಾಷೇಽವಾಙ್ಮುಖೀ ನೃಪ ||೫೨||**

**ಹೇ ನೃಪ** ಪರೀಕ್ಷಿದ್ರಾಜನೇ **ಸಾಧ್ವೀ** ಪತಿವ್ರತೆಯಾದ **ತತ್ಪತ್ನೀ** ಬಲಿಯ ಹೆಂಡತಿಯಾದ ವಿಂಧ್ಯಾವಳಿಯು **ಬದ್ಧಂ** ವರುಣಪಾಶದಿಂದ ಬದ್ಧನಾದ **ಪತಿಂ** ಗಂಡನಾದ ಬಲಿಯನ್ನು **ವೀಕ್ಷ್ಯ** ನೋಡಿ **ಭಯವಿಹ್ವಲಾ** ಭಯದಿಂದ ಉದ್ವಿಗ್ನಳಾಗಿ **ಪ್ರಾಂಜಲಿಃ** ಭಕ್ತಿಯಿಂದ ಕೈಜೋಡಿಸಿ **ಪ್ರಣತಾ** ನಮಸ್ಕಾರಮಾಡಿ ಸ್ತುತಿಸಿ **ಅವಾಙ್ಮುಖೀ ಸತೀ** ತಾನು ವಿನೀತಳೆಂದು ತಿಳಿಸಲು ಕೆಳಗೆ ಮುಖ ಮಾಡಿದವಳಾಗಿ **ಉಪೇಂದ್ರಂ ಪ್ರತಿ** ಇಂದ್ರನ ತಮ್ಮನಾದ ವಾಮನನನ್ನು ಕುರಿತು **ಬಭಾಷೇ** ಮಾತನಾಡಿದಳು. ||೫೨||

ತನ್ನ ಪತಿಯು ಅತಿಶಯಗರ್ವದಿಂದ ಕೂಡಿದ್ದನೆಂದು ಸೂಚಿಸುತ್ತಾ ಶ್ರೀಹರಿಯನ್ನು ಸ್ತುತಿಸುತ್ತಿದ್ದಾಳೆ-

**ವಿಂಧ್ಯಾವಲಿರುವಾಚ**

**ಕ್ರೀಡಾರ್ಥಮಾತ್ಮನ ಇದಂ ತ್ರಿಜಗತ್ ಕೃತಂ ತೇ**
**ಸ್ವಾಮ್ಯಂ ತು ತತ್ರ ಕುಧಿಯೋಽಪರ ಈಶ ಕುರ್ಯುಃ ।**
**ಕರ್ತುಃ ಪ್ರಭೋಸ್ತವ ಕಿಮಸ್ಯ ತ ಆವಹಂತಿ**
**ತ್ಯಕ್ತಹ್ರಿಯಸ್ತ್ವದವರೋಪಿತಕರ್ತೃವಾದಾಃ ||೫೩||**

**ತೇ** ನಿನ್ನಿಂದ **ಇದಂ ತ್ರಿಜಗತ್** ಈ ಮೂರು ಲೋಕವು (ಬ್ರಹ್ಮಾಂಡವು) **ಆತ್ಮನಃ** ನಿನ್ನ **ಕ್ರೀಡಾರ್ಥಂ** ಕ್ರೀಡೆಗಾಗಿ **ಕೃತಂ** ಸೃಷ್ಟಿಸಲ್ಪಟ್ಟಿದೆ. **ಹೇ ಈಶ** ನಿಯಾಮಕನೇ **ತತ್ರ** ನೀನೇ ಸ್ವಾಮಿಯಾದ ಈ ಜಗತ್ತಿನ ವಿಷಯದಲ್ಲಿ **ಅಪರೇ ಕುಧಿಯಃ** ಅಸುರಾವೇಶಯುಕ್ತ-ರಾದದ್ದರಿಂದ ಅಜ್ಞಾನಿಗಳಾದ ಸಜ್ಜನರು, ಸ್ವಾಭಾವಿಕವಾಗಿಯೇ ಅನ್ಯಥಾಜ್ಞಾನಿಗಳಾದ ದೈತ್ಯರು **ಸ್ವಾಮ್ಯಂ** ತಾವೇ ಅಧಿಪತಿಗಳು ಎಂಬ ಭಾವನೆಯನ್ನು **ಕುರ್ಯುಃ** ಮಾಡುವರು ನಾವೇ ಇದಕ್ಕೆ ಸ್ವಾಮಿಗಳೆಂದು ಹರಟುವರು. **ತು** ಇದರಲ್ಲಿ ಮಹಾವಿಶೇಷವಿದೆ. ಅವರು ಹೀಗೆ ಹೇಳಿದ ಮಾತ್ರಕ್ಕೆ ನಿನ್ನ ಸ್ವಾಮಿತ್ವಕ್ಕೆ ಯಾವ ಹಾನಿಯನ್ನು ಮಾಡುತ್ತಿಲ್ಲವೆಂದು ಹೇಳುತ್ತಾರೆ. **ತ್ವತ್** ನಿನ್ನಿಂದ **ಅವರೋಪಿತಕರ್ತೃವಾದಾಃ** ತಮ್ಮಲ್ಲಿ ತಿಳಿದುಕೊಂಡ

ಸ್ವಾತಂತ್ರ್ಯವನ್ನು ನಿನ್ನಿಂದಲೇ ಕಳೆದುಕೊಂಡಿರುವ **ತ್ಯಕ್ತಹ್ರಿಯಃ** ನಾನೇ ಜಗತ್ತಿಗೆ ಸ್ವಾಮಿ ಎಂದು ಹೇಳಿಕೊಳ್ಳಲು ನಾಚಿಕೆಯೇ ಇಲ್ಲದ **ತೇ** ಅವರು **ಅಸ್ಯ** ಈ ಜಗತ್ತಿನ ಸೃಷ್ಟಿಯಲ್ಲಿ **ಪ್ರಭೋಃ** ಸಮರ್ಥನಾದ ಅಧಿಪತಿಯಾದ **ಕರ್ತುಃ** ಸರ್ವಕರ್ತೃವಾದ **ತವ** ನಿನಗೆ **ಕಿಂ** ಯಾವ ಹಾನಿಯನ್ನು ತಾನೇ **ಆವಹಂತಿ** ಮಾಡಿಯಾರು? ಅವರಿಂದ ನಿನ್ನ ಸ್ವಾಮಿತ್ವಕ್ಕೆ ಚ್ಯುತಿ ಇಲ್ಲವೆಂದರ್ಥ.

♦ ಜಗತ್ತಿಗೆ ನಾನೇ ಸ್ವಾಮಿ ಎಂದು ನನ್ನ ಪತಿಯು ತಿಳಿದಿದ್ದರು. ಅದು ಅವರು ಮಾಡಿದ ಅಪರಾಧ. ಆದರೆ ನೀನು ದಯಾಸಾಗರ. ನನ್ನ ಪತಿಯ ಅಪರಾಧವನ್ನು ಕ್ಷಮಿಸಲು ನೀನೇ ಅರ್ಹ. ಎಂದು ಈ ಮೂಲಕ ವಿಂಧ್ಯಾವಳಿಯು ಸೂಚಿಸುತ್ತಿದ್ದಾಳೆ.

ಸತ್ಯ ಃ- ಜಗತ್ಸ್ವಾಮಿತ್ವವು ಅನುಭವಬಾಧಿತವಾಗಿದೆ. ಅಂಥ ಸ್ವಾಮಿತ್ವವನ್ನು ಬಲಿ ಮುಂತಾದವರು ತಮ್ಮಲ್ಲಿ ಹೇಗೆ ತಿಳಿದುಕೊಂಡರು ಎಂಬ ಶಂಕೆಯು ಬರುತ್ತದೆ. ಅದಕ್ಕೆ **ತ್ಯಕ್ತಹ್ರಿಯಃ** ಎಂದು ಹೇಳುತ್ತಿದ್ದಾರೆ. ನಾಚಿಕೆ ಇಲ್ಲದಿರುವುದರಿಂದ ಅನುಭವಬಾಧಿತವಾಗಿದ್ದರೂ ಜಗತ್ಸ್ವಾಮಿತ್ವವನ್ನು ತಮ್ಮಲ್ಲಿ ತಿಳಿಯುತ್ತಾರೆ ಎಂಬುದು ಯುಕ್ತವೇ ಆಗಿದೆ.

**ಕರ್ತುಃ ಪ್ರಭೋಃ** ಯಾರ ಅಪೇಕ್ಷೆಯೂ ಇಲ್ಲದೇ ಎಲ್ಲವನ್ನೂ ಮಾಡಲು ಸಮರ್ಥನಾದ **ತೇ** ನಿನಗೆ ನಿನ್ನ ಕರ್ತೃತ್ವವನ್ನು ತಮ್ಮಲ್ಲಿ ತಿಳಿದಿರುವ ಆ ವ್ಯಕ್ತಿಗಳು **ಕಿಂ ಆವಹಂತಿ** ಏನು ಸಹಾಯ ಮಾಡುವರು? ನಿನಗೆ ಸಹಾಯವನ್ನು ಮಾಡಲಾರರು ಎಂದು ಅಭಿಪ್ರಾಯ. ಅವರು ಎಂಥವರೆಂದು ಹೇಳುವರು. ''ತ್ವದವರೋಪಿತ ಕರ್ತೃವಾದಾಃ'' ಅಂತರಾ ಅಂತರಾಯಯಾಪನೇ ಗಮಿತಕರ್ತೃತ್ವವ್ಯವಹಾರಾಃ ಅಂದರೆ ಮಧ್ಯದಲ್ಲಿ ವಿಘ್ನಗಳು ಬಂದು ತಾವು ಮಾಡುತ್ತಿರುವ ಕರ್ಮವು ಅರ್ಧಕ್ಕೆ ನಿಂತಾಗ ನಾವು ಕರ್ತೃಗಳಲ್ಲ. ಭಗವಂತನೇ ಕರ್ತಾ ಎಂದು ತಿಳಿದವವರು ಎಂದು ಅರ್ಥ. ಆದ್ದರಿಂದಲೇ ತ್ಯಕ್ತಹ್ರಿಯಃ ನಾಚಿಕೆಯನ್ನು ಬಿಟ್ಟವರಾಗಿ ಎಂದಾದರೂ ಅರ್ಥ. ಅರ್ಥಾತ್ ಅಹಂಕಾರದ ಫಲವೇ ಇದು. ಇನ್ನು ಈ ಅಹಂಕಾರ ಸಾಕು ಎಂದು ಅವರ ಅಹಂಕಾರವನ್ನು ತಾನೇ ಪರಿಹರಿಸುವನು ಎಂದು ತಿಳಿದ ಸುಂದರಿಯಾದ ವಿಂಧ್ಯಾವಳಿಯು ಪ್ರತ್ಯೇಕವಾಗಿ ಮೋಚಯ ಎಂದು ಇಲ್ಲಿ ಪ್ರಾರ್ಥಿಸಲಿಲ್ಲ ಎಂದು ತಿಳಿಯಬೇಕು.

ಈ ವಿಷಯವನ್ನು ತಿಳಿಸುವ ಶ್ರೀಸತ್ಯಧರ್ಮರ ವಚನಗಳು ಪ್ರಾಸದಿಂದ ಮನಃಪ್ರಸಾದಕವಾಗುತ್ತವೆ. ಆ ವಾಕ್ಯಗಳನ್ನು ಅವಲೋಕಿಸಿ.

ಅರ್ಥಾದಹಂತಾಫಲಮಿದಂ ಪರ್ಯಾಪ್ತಮಿತಿ ಮೋಚಯತಿ ಸ್ವತ ಏವೇತಿ ಮತಿಮತೀ ಮೋಚಯೇತಿ ಮೋಚೋರುರ್ನ ಸೂಚಯಾಮಾಸೇತಿ ಚಾತುರೀಮತ್ಯಾತುರಾಯಾಮಪೀತಿ ಜ್ಞೇಯಮ್ ।।೫೩।।

**ಶ್ರೀಶುಕ ಉವಾಚ**

**ತಸ್ಯಾನು ಶ್ರುಣ್ವತೋ ರಾಜನ್ ಪ್ರಹ್ಲಾದಸ್ಯ ಕೃತಾಂಜಲೇಃ ।**
**ಹಿರಣ್ಯಗರ್ಭೋ ಭಗವಾನುವಾಚ ಮಧೂಸೂದನಮ್ ॥೩೪॥**

ಇಲ್ಲಿ ತಸ್ಯ ಅನುಶ್ರುಣ್ವತಃ ಎಂದು ಪದಚ್ಛೇದ ಮಾಡಿಕೊಂಡು ಸುಲಭವಾದ ರೀತಿಯಲ್ಲಿ ಅರ್ಥ ಮಾಡಿಕೊಳ್ಳಬಹುದು. ಅಲ್ಲದೇ ತಸ್ಯಾಃ ನು ಎಂದೂ ಪದಚ್ಛೇದ ಮಾಡಿಕೊಂಡು ಅರ್ಥವನ್ನು ತಿಳಿಯಬೇಕು.

**ಹೇ ರಾಜನ್** ಪರೀಕ್ಷಿತನೇ **ನು** ನಮಸ್ಕರಿಸುತ್ತೇನೆ ಎಂದು **ಕೃತಾಂಜಲೇಃ** ಕೈ ಜೋಡಿಸಿದ **ಪ್ರಹ್ಲಾದಸ್ಯ ಚ** ಪ್ರಹ್ಲಾದನು, ಮತ್ತು **ತಸ್ಯಾಃ** ಕೈಜೋಡಿಸಿ ನಿಂತಿರುವ ವಿಂಧ್ಯಾವಲಿಯು **ಶೃಣ್ವತಃ** ಕೇಳುತ್ತಿರಲು **ಭಗವಾನ್ ಹಿರಣ್ಯಗರ್ಭಃ** ಪೂಜ್ಯರಾದ ಬ್ರಹ್ಮದೇವರು **ಮಧುಸೂದನಂ** ಮಧುವೆಂಬ ದೈತ್ಯನ ಸಂಹಾರಕನಾದ ವಾಮನನನ್ನು ಕುರಿತು **ಉವಾಚ** ಪ್ರಾರ್ಥಿಸಿದರು.

**ನು ನುಮಃ** ನಮಸ್ಕಾರ ಮಾಡುವೆನು ಎಂದು **ಕೃತಾಂಜಲೇಃ** ಕೈ ಮುಗಿದ ವಿಂಧ್ಯಾವಳಿಯು ಎಂದನ್ವಯ ಮಾಡಿಕೊಳ್ಳಬೇಕು.

ವಿಂಧ್ಯಾವಲಿಯ ಸ್ತುತಿಯಿಂದ ಪ್ರಹ್ಲಾದನ ಪ್ರಸ್ತಾವವು ವ್ಯವಹಿತವಾಗಿದೆ. ಆದ್ದರಿಂದ ತಸ್ಯ ಎಂದು ಪ್ರಹ್ಲಾದನನ್ನು ಪರಾಮರ್ಶ ಮಾಡುವುದು ಕ್ಲಿಷ್ಟ ಎಂಬ ಶಂಕೆಯು ಹೀಗೆ ಅನ್ವಯ ಮಾಡುವುದರಿಂದ ದೂರತೋಽಪಾಸ್ತವಾಗುತ್ತದೆ.

ಮಧುಸೂದನಂ ಎಂಬಲ್ಲಿ ಮಧು ಸೂದನಂ ಎಂದು ಪದಚ್ಛೇದ ಮಾಡಿಕೊಂಡು ಹೀಗೆ ಅರ್ಥವನ್ನು ಶ್ರೀಸತ್ಯಧರ್ಮರು ತಿಳಿಸುತ್ತಾರೆ. ಸೂದಯತಿ ಇತಿ ಸೂದನಃ ತಂ **ಸೂದನಂ** ನೋಡುವ ಹರಿಯನ್ನು ಕುರಿತು ಮಧು ಯಥಾ ಭವತಿ ತಥಾ **ಮಧು** ಉವಾಚ ಮಧುರವಾಗಿ ಮಾತನಾಡಿದರು ಎಂದು ಅನ್ವಯ. ಮಧು ಎಂಬುದು ಉವಾಚ ಎಂಬುದಕ್ಕೆ ವಿಶೇಷಣವಾಗಿದೆ. ದಯೆ ಹುಟ್ಟುವಂತೆ ಮಾತಾಡಿದನು ಹೀಗೂ ಅನ್ವಯ. ॥೩೪॥

**ಬ್ರಹ್ಮೋವಾಚ**

**ಭೂತಭಾವನ ಭೂತೇಶ ದೇವದೇವ ಜಗನ್ಮಯ ।**
**ಮುಂಚೈನಂ ಹೃತಸರ್ವಸ್ವಂ ನಾಯಮರ್ಹತಿ ನಿಗ್ರಹಮ್ ॥೩೫॥**

**ಹೇ ಭೂತಭಾವನ** ಪ್ರಾಣಿಗಳ ಆಕಾಶಾದಿಪಂಚಭೂತಗಳ ಉತ್ಪಾದಕನೇ **ಭೂತೇಶ** ಎಲ್ಲ ಪ್ರಾಣಿಗಳ ನಿಯಾಮಕನೇ **ದೇವದೇವ** ಬ್ರಹ್ಮಾದಿದೇವತೆಗಳಿಂದ ಸ್ತುತ್ಯನಾದ ದೇವನೇ **ಜಗನ್ಮಯ** ಜಗತ್ಪ್ರಧಾನನೇ **ಹೃತಸರ್ವಸ್ವಂ** ತನ್ನದೆಲ್ಲವನ್ನು ಕಳೆದುಕೊಂಡಿರುವ **ಏನಂ** ಈ

ಬಲಿಯನ್ನು **ಮುಂಚ** ವರುಣಪಾಶದಿಂದ ಬಿಡಿಸು **ಅಯಂ** ನಿನ್ನ ಭಕ್ತನಾದ ಇವನು **ನಿಗ್ರಹಂ** ನಿನ್ನಿಂದ ಶಿಕ್ಷೆಯನ್ನು **ನ ಅರ್ಹತಿ** ಪಡೆಯಲು ಯೋಗ್ಯನಲ್ಲ. ।।೩೪।।

**ಕೃತ್ಸ್ನಾ ತೇऽನೇನ ದತ್ತಾ ಭೂರ್ಲೋಕಾಃ ಕರ್ಮಾರ್ಜಿತಾಶ್ಚ ಯೇ ।**
**ನಿವೇದಿತಂ ಚ ಸರ್ವಸ್ವಮಾತ್ಮವಿಕ್ಲವಯಾ ಧಿಯಾ ।।೩೬।।**

**ಅನೇನ** ಭಕ್ತನಾದ ಬಲಿಯಿಂದ **ತೇ** ನಿನಗೆ **ಕೃತ್ಸ್ನಾ ಭೂಃ** ಸಮಗ್ರವಾದ ಭೂಮಿಯು **ದತ್ತಾ** ದಾನಮಾಡಲ್ಪಟ್ಟಿತು. **ಚ** ಮತ್ತು **ಕರ್ಮಾರ್ಜಿತಾಃ** ಪುಣ್ಯಕರ್ಮಗಳಿಂದ ಅಥವಾ ಯುದ್ಧಾದಿಗಳಿಂದ ಸಂಪಾದಿತವಾದ **ಯೇ ಲೋಕಾಃ ಚ** ಯಾವ ಲೋಕಗಳಿದ್ದವೋ **ತೇ** ಆ ಎಲ್ಲ ಲೋಕಗಳು **ದತ್ತಾಃ** ದಾನ ಮಾಡಲ್ಪಟ್ಟವು. **ಆತ್ಮವಿಕ್ಲವಯಾ ಧಿಯಾ** ಸ್ವಾಮಿಯಾದ ನಿನ್ನ ಅಧೀನವಾದ ಬುದ್ಧಿಯಿಂದ **ಸರ್ವಸ್ವಂ** ದೇಹ ಮೊದಲಾದ ಎಲ್ಲವೂ **ನಿವೇದಿತಂ ಚ** ನಿನಗೆ ಸಮರ್ಪಿತವಾಗಿರುವುದು.

**ಆತ್ಮಾವಿಕ್ಲವಯಾ** ಎಂಬ ಪಾಠದಲ್ಲಿ ಆತ್ಮಾ ಅವಿಕ್ಲವಯಾ ಎಂದು ಪದಚ್ಛೇದ ಮಾಡಿಕೊಳ್ಳಬೇಕು. **ಅವಿಕ್ಲವಯಾ** ಚಂಚಲವಾಗದ **ಧಿಯಾ** ಬುದ್ಧಿಯಿಂದ **ಆತ್ಮಾ** ದೇಹರೂಪವಾದ ಸರ್ವವೂ ಭಗವಂತನಿಗೆ ಅರ್ಪಿತವಾಗಿದೆ ಎಂದರ್ಥ. ಆದ್ದರಿಂದ ಈ ಬಲಿಯು ಶಿಕ್ಷೆಗೆ ಅರ್ಹನಲ್ಲವೆಂದರ್ಥ. ।।೩೬।।

ಅವತರಣಿಕಾ- ಭಗವಂತನ ಚಿತ್ತವನ್ನರಿತ ಬ್ರಹ್ಮದೇವರು, ಮಗನೆಂಬ ದಾಕ್ಷಿಣ್ಯದಿಂದ ಈ ಬಲಿಯ ಅಪರಾಧವನ್ನು ಸಹನ ಮಾಡು ಎಂದು, ಈ ಬಲಿಯನ್ನು ಕೂಡಲೇ ಮೋಚನೆ ಮಾಡು ಎಂದು ಹೇಳಿ ಈಗ ಪರ್ಯಾಯವಾಗಿ ಬಲಿಯು ಮಾಡಿದ ಸಪರ್ಯೆಯನ್ನು ಹೇಳುತ್ತಿದ್ದಾರೆ-

**ಯತ್ಪಾದಯೋರಶಠಧೀಃ ಸಲಿಲಂ ಪ್ರದಾಯ**
**ದೂರ್ವಾಂಕುರೈರಪಿ ವಿಧಾಯ ಸತೀಂ ಸಪರ್ಯಾಮ್ ।**
**ಅಪ್ಯುತ್ತಮಾಂ ಗತಿಮಸೌ ಭಜತೇ ತ್ರಿಲೋಕೀಂ**
**ದತ್ವಾ ನ ವಿಕ್ಲವಮನಾಃ ಕಥಮಾರ್ತಿಮೃಚ್ಛೇತ್ ।।೩೭।।**

**ಅಶಠಧೀಃ** ಕಪಟವಿಲ್ಲದ ಬುದ್ಧಿಯುಳ್ಳ ಯಾವನೂ **ಯತ್ಪಾದಯೋಃ** ಯಾವ ನಿನ್ನ ಪಾದಗಳಲ್ಲಿ **ಸಲಿಲಂ** ನೀರನ್ನು **ಪ್ರದಾಯ** ಕೊಟ್ಟು ಪಾದ್ಯವೆಂಬ ಉಪಚಾರವನ್ನು ಸಮರ್ಪಿಸಿ **ದೂರ್ವಾಂಕುರೈಃ** ಗರಿಕೆಗಳಿಂದ **ಸತೀಂ** ಭಕ್ತಿಯುಕ್ತವಾದ **ಸಪರ್ಯಾಂ** ಪೂಜೆಯನ್ನು **ವಿಧಾಯ ಅಪಿ** ಮಾಡಿದರೂ **ಉತ್ತಮಾಂ ಗತಿಂ** ಮೋಕ್ಷವನ್ನು ಉತ್ತಮಲೋಕವನ್ನು **ಭಜತೇ** ಹೊಂದುವನು **ತ್ರಿಲೋಕೀಂ ದತ್ವಾ** ಮೂರು ಲೋಕಗಳನ್ನು ಕೊಟ್ಟು **ನ ವಿಕ್ಲವಮನಾಃ** ಮನೋವಿಕಾರ ಹೊಂದದಿರುವ **ಅಸೌ** ಈ ಭಕ್ತನಾದ ಬಲಿಯು

**ಆರ್ತಿಂ** ದುಃಖವನ್ನು **ಕಥಂ ಋಚ್ಛೇತ್** ಹೇಗೆ ಹೊಂದಿಯಾನು? ಈ ಬಲಿಯು ದುಃಖಪಡಬಾರದು ಎಂದು ಅರ್ಥ.

ತನ್ನನ್ನು ಕುರಿತು ಹೇಳುತ್ತಿರುವ ಬ್ರಹ್ಮದೇವರನ್ನು ಸಂಬೋಧಿಸಿ ಇತರರಿಗೂ ತನ್ನ ಅಭಿಪ್ರಾಯವನ್ನು ಪರಮಾತ್ಮ ಹೇಳುತ್ತಿದ್ದಾನೆ-

**ಶ್ರೀಭಗವಾನುವಾಚ**

**ಬ್ರಹ್ಮನ್ ಯಮನುಗೃಹ್ಣಾಮಿ ತದ್ವಿತ್ತಂ ವಿಧುನೋಮ್ಯಹಮ್ ।**
**ಯನ್ಮದಃ ಪುರುಷಃ ಸ್ತಬ್ಧೋ ಲೋಕಂ ಮಾಂ ಚಾವಮನ್ಯತೇ** ॥೨೮॥

**ಬ್ರಹ್ಮನ್** ಚತುರ್ಮುಖನೇ **ಯಂ ಅನುಗೃಹ್ಣಾಮಿ** ಯಾರನ್ನು ಅನುಗ್ರಹಿಸಲು ಇಚ್ಛಿಸುವೆನೋ **ತಸ್ಯ** ಅವನ **ವಿತ್ತಂ** ಧನವನ್ನು **ವಿಧುನೋಮಿ** ನಾಶ ಮಾಡುವೆನು. **ಯನ್ಮದಃ** ಯಾವ ಸಂಪತ್ತಿನಿಂದ ಮದೋನ್ಮತ್ತನಾದ ಮನುಷ್ಯನು **ಸ್ತಬ್ಧಃ** ಅಹಂಕಾರಿಯಾಗಿ **ಲೋಕಂ** ಭಕ್ತರಾದ ಜ್ಞಾನಿಜನರನ್ನು ಅಥವಾ ಪರಲೋಕವನ್ನು **ಮಾಂ ಚ** ನನ್ನನ್ನೂ **ಅವಮನ್ಯತೇ** ಅವಮಾನ ಮಾಡುವನು ಆದ್ದರಿಂದ ಅದನ್ನು ಅವನಿಂದ ಅಪಹರಿಸಿ ನನ್ನಲ್ಲಿ ಅವನಿಗೆ ಭಕ್ತಿಯನ್ನು ಹುಟ್ಟಿಸುವೆನು ಎಂದರ್ಥ. ॥೨೮॥

ಅವತರಣಿಕಾ- ಮನುಷ್ಯಜನ್ಮ ದುರ್ಲಭವಾಗಿದೆ. ಅದು ಬಂದಾಗ ಮದ ಬಂದರೆ ಮನುಷ್ಯ ನಷ್ಟನಾಗುತ್ತಾನೆ. ಆದ್ದರಿಂದ ಬಲಿಯ ಮೇಲೆ ದಯೆ ಮಾಡಲೆಂದೇ ಮದಕ್ಕೆ ಕಾರಣವಾದ ಅವನ ಸಂಪತ್ತನ್ನು ಅಪಹರಿಸಿದ್ದೇನೆ. ಮತ್ತು ಮನುಷ್ಯಜನ್ಮ ಬಂದಾಗ ನನ್ನಿಂದ ಅನುಗ್ರಹೀತನಾದವನಿಗೆ ಮಾತ್ರ ಮದ ಬರಲಾರದು. ಎಂಬುದಾಗಿ ಈ ಎರಡು ಶ್ಲೋಕಗಳಿಂದ ತಿಳಿಸುತ್ತಿದ್ದಾರೆ-

**ಯದಾ ಕದಾಚಿಜ್ಜೀವಾತ್ಮಾ ಸಂಸರನ್ ನಿಜಕರ್ಮಭಿಃ ।**
**ನಾನಾಯೋನಿಷ್ವನೀಶೋಽಯಂ ಪೌರುಷೀಂ ಗತಿಮಾವ್ರಜೇತ್** ॥೨೯॥

**ಅನೀಶಃ** ಅಸ್ವತಂತ್ರನಾದ ಅನಾದ್ಯನಂತಕಾಲದಲ್ಲಿಯೂ ಈಶ್ವರನಿಂದ ಅತ್ಯಂತ ಭಿನ್ನನಾದ **ಅಯಂ ಜೀವಾತ್ಮಾ** ಈ ಜೀವನು **ನಿಜಕರ್ಮಭಿಃ** ತಾನು ಮಾಡಿದ ಪೂರ್ವಕರ್ಮಗಳಿಂದ **ನಾನಾಯೋನಿಷು ಸಂಸರನ್** ಬೇರೆ ಬೇರೆ ಯೋನಿಗಳಲ್ಲಿ ಹುಟ್ಟುತ್ತಾ **ಯದಾ ಕದಾಚಿತ್** ಯಾವಾಗಲೋ ಒಮ್ಮೆ **ಪೌರುಷೀಂ ಗತಿಂ ಆವ್ರಜೇತ್** ಕಾಲ ಬಂದಾಗ ನನ್ನ ಇಚ್ಛೆಯಿಂದ ಮನುಷ್ಯದೇಹವನ್ನು ಹೊಂದುವನು. ॥೨೯॥

**ಜನ್ಮಕರ್ಮವಯೋರೂಪವಿದ್ಯೈಶ್ವರ್ಯಧನಾದಿಭಿಃ ।**
**ಯದ್ಯಸ್ಯ ನ ಭವೇತ್ ಸ್ತಂಭಸ್ತತ್ರಾಽಯಂ ಮದನುಗ್ರಹಃ** ॥೩೦॥

ಬಲಿಯನ್ನು **ಮುಂಚ** ವರುಣಪಾಶದಿಂದ ಬಿಡಿಸು **ಅಯಂ** ನಿನ್ನ ಭಕ್ತನಾದ ಇವನು **ನಿಗ್ರಹಂ** ನಿನ್ನಿಂದ ಶಿಕ್ಷೆಯನ್ನು **ನ ಅರ್ಹತಿ** ಪಡೆಯಲು ಯೋಗ್ಯನಲ್ಲ. ।।೩೪।।

**ಕೃತ್ಸ್ನಾ ತೇಽನೇನ ದತ್ತಾ ಭೂರ್ಲೋಕಾಃ ಕರ್ಮಾರ್ಜಿತಾಶ್ಚ ಯೇ ।**
**ನಿವೇದಿತಂ ಚ ಸರ್ವಸ್ವಮಾತ್ಮವಿಕ್ಲವಯಾ ಧಿಯಾ ।।೩೬।।**

**ಅನೇನ** ಭಕ್ತನಾದ ಬಲಿಯಿಂದ **ತೇ** ನಿನಗೆ **ಕೃತ್ಸ್ನಾ ಭೂಃ** ಸಮಗ್ರವಾದ ಭೂಮಿಯು **ದತ್ತಾ** ದಾನಮಾಡಲ್ಪಟ್ಟಿತು. **ಚ** ಮತ್ತು **ಕರ್ಮಾರ್ಜಿತಾಃ** ಪುಣ್ಯಕರ್ಮಗಳಿಂದ ಅಥವಾ ಯುದ್ಧಾದಿಗಳಿಂದ ಸಂಪಾದಿತವಾದ **ಯೇ ಲೋಕಾಃ ಚ** ಯಾವ ಲೋಕಗಳಿದ್ದವೋ **ತೇ** ಆ ಎಲ್ಲ ಲೋಕಗಳು **ದತ್ತಾಃ** ದಾನ ಮಾಡಲ್ಪಟ್ಟವು. **ಆತ್ಮವಿಕ್ಲವಯಾ ಧಿಯಾ** ಸ್ವಾಮಿಯಾದ ನಿನ್ನ ಅಧೀನವಾದ ಬುದ್ಧಿಯಿಂದ **ಸರ್ವಸ್ವಂ** ದೇಹ ಮೊದಲಾದ ಎಲ್ಲವೂ **ನಿವೇದಿತಂ ಚ** ನಿನಗೆ ಸಮರ್ಪಿತವಾಗಿರುವುದು.

**ಆತ್ಮಾವಿಕ್ಲವಯಾ** ಎಂಬ ಪಾಠದಲ್ಲಿ ಆತ್ಮಾ ಅವಿಕ್ಲವಯಾ ಎಂದು ಪದಚ್ಛೇದ ಮಾಡಿಕೊಳ್ಳಬೇಕು. **ಅವಿಕ್ಲವಯಾ** ಚಂಚಲವಾಗದ **ಧಿಯಾ** ಬುದ್ಧಿಯಿಂದ **ಆತ್ಮಾ** ದೇಹರೂಪವಾದ ಸರ್ವವೂ ಭಗವಂತನಿಗೆ ಅರ್ಪಿತವಾಗಿದೆ ಎಂದರ್ಥ. ಆದ್ದರಿಂದ ಈ ಬಲಿಯು ಶಿಕ್ಷೆಗೆ ಅರ್ಹನಲ್ಲವೆಂದರ್ಥ. ।।೩೬।।

ಅವತರಣಿಕಾ- ಭಗವಂತನ ಚಿತ್ತವನ್ನರಿತ ಬ್ರಹ್ಮದೇವರು, ಮಗನೆಂಬ ದಾಕ್ಷಿಣ್ಯದಿಂದ ಈ ಬಲಿಯ ಅಪರಾಧವನ್ನು ಸಹನ ಮಾಡು ಎಂದು, ಈ ಬಲಿಯನ್ನು ಕೂಡಲೇ ಮೋಚನೆ ಮಾಡು ಎಂದು ಹೇಳಿ ಈಗ ಪರ್ಯಾಯವಾಗಿ ಬಲಿಯು ಮಾಡಿದ ಸಪರ್ಯೆಯನ್ನು ಹೇಳುತ್ತಿದ್ದಾರೆ-

**ಯತ್ಪಾದಯೋರಶಠಧೀಃ ಸಲಿಲಂ ಪ್ರದಾಯ**
**ದೂರ್ವಾಂಕುರೈರಪಿ ವಿಧಾಯ ಸತೀಂ ಸಪರ್ಯಾಮ್ ।**
**ಅಪ್ಯುತ್ತಮಾಂ ಗತಿಮಸೌ ಭಜತೇ ತ್ರಿಲೋಕೀಂ**
**ದತ್ವಾ ನ ವಿಕ್ಲವಮನಾಃ ಕಥಮಾರ್ತಿಮೃಚ್ಛೇತ್ ।।೩೭।।**

**ಅಶಠಧೀಃ** ಕಪಟವಿಲ್ಲದ ಬುದ್ಧಿಯುಳ್ಳ ಯಾವನೂ **ಯತ್ಪಾದಯೋಃ** ಯಾವ ನಿನ್ನ ಪಾದಗಳಲ್ಲಿ **ಸಲಿಲಂ** ನೀರನ್ನು **ಪ್ರದಾಯ** ಕೊಟ್ಟು ಪಾದ್ಯವೆಂಬ ಉಪಚಾರವನ್ನು ಸಮರ್ಪಿಸಿ **ದೂರ್ವಾಂಕುರೈಃ** ಗರಿಕೆಗಳಿಂದ **ಸತೀಂ** ಭಕ್ತಿಯುಕ್ತವಾದ **ಸಪರ್ಯಾಂ** ಪೂಜೆಯನ್ನು **ವಿಧಾಯ ಅಪಿ** ಮಾಡಿದರೂ **ಉತ್ತಮಾಂ ಗತಿಂ** ಮೋಕ್ಷವನ್ನು ಉತ್ತಮಲೋಕವನ್ನು **ಭಜತೇ** ಹೊಂದುವನು **ತ್ರಿಲೋಕೀಂ ದತ್ವಾ** ಮೂರು ಲೋಕಗಳನ್ನು ಕೊಟ್ಟು **ನ ವಿಕ್ಲವಮನಾಃ** ಮನೋವಿಕಾರ ಹೊಂದದಿರುವ **ಅಸೌ** ಈ ಭಕ್ತನಾದ ಬಲಿಯು

**ಆರ್ತಿಂ** ದುಃಖವನ್ನು **ಕಥಂ ಋಚ್ಛೇತ್** ಹೇಗೆ ಹೊಂದಿಯಾನು? ಈ ಬಲಿಯು ದುಃಖಪಡಬಾರದು ಎಂದು ಅರ್ಥ.

ತನ್ನನ್ನು ಕುರಿತು ಹೇಳುತ್ತಿರುವ ಬ್ರಹ್ಮದೇವರನ್ನು ಸಂಬೋಧಿಸಿ ಇತರರಿಗೂ ತನ್ನ ಅಭಿಪ್ರಾಯವನ್ನು ಪರಮಾತ್ಮ ಹೇಳುತ್ತಿದ್ದಾನೆ-

**ಶ್ರೀಭಗವಾನುವಾಚ**

**ಬ್ರಹ್ಮನ್ ಯಮನುಗೃಹ್ಣಾಮಿ ತದ್ವಿತ್ತಂ ವಿಧುನೋಮ್ಯಹಮ್ ।**
**ಯನ್ಮದಃ ಪುರುಷಃ ಸ್ತಬ್ಧೋ ಲೋಕಂ ಮಾಂ ಚಾವಮನ್ಯತೇ ॥೫೮॥**

**ಬ್ರಹ್ಮನ್** ಚತುರ್ಮುಖನೇ **ಯಂ ಅನುಗೃಹ್ಣಾಮಿ** ಯಾರನ್ನು ಅನುಗ್ರಹಿಸಲು ಇಚ್ಛಿಸುವೆನೋ **ತಸ್ಯ** ಅವನ **ವಿತ್ತಂ** ಧನವನ್ನು **ವಿಧುನೋಮಿ** ನಾಶ ಮಾಡುವೆನು. **ಯನ್ಮದಃ** ಯಾವ ಸಂಪತ್ತಿನಿಂದ ಮದೋನ್ಮತ್ತನಾದ ಮನುಷ್ಯನು **ಸ್ತಬ್ಧಃ** ಅಹಂಕಾರಿಯಾಗಿ **ಲೋಕಂ** ಭಕ್ತರಾದ ಜ್ಞಾನಿಜನರನ್ನು ಅಥವಾ ಪರಲೋಕವನ್ನು **ಮಾಂ ಚ** ನನ್ನನ್ನೂ **ಅವಮನ್ಯತೇ** ಅವಮಾನ ಮಾಡುವನು ಆದ್ದರಿಂದ ಅದನ್ನು ಅವನಿಂದ ಅಪಹರಿಸಿ ನನ್ನಲ್ಲಿ ಅವನಿಗೆ ಭಕ್ತಿಯನ್ನು ಹುಟ್ಟಿಸುವೆನು ಎಂದರ್ಥ. ॥೫೮॥

ಅವತರಣಿಕಾ- ಮನುಷ್ಯಜನ್ಮ ದುರ್ಲಭವಾಗಿದೆ. ಅದು ಬಂದಾಗ ಮದ ಬಂದರೆ ಮನುಷ್ಯ ನಷ್ಟನಾಗುತ್ತಾನೆ. ಆದ್ದರಿಂದ ಬಲಿಯ ಮೇಲೆ ದಯೆ ಮಾಡಲೆಂದೇ ಮದಕ್ಕೆ ಕಾರಣವಾದ ಅವನ ಸಂಪತ್ತನ್ನು ಅಪಹರಿಸಿದ್ದೇನೆ. ಮತ್ತು ಮನುಷ್ಯಜನ್ಮ ಬಂದಾಗ ನನ್ನಿಂದ ಅನುಗ್ರಹೀತನಾದವನಿಗೆ ಮಾತ್ರ ಮದ ಬರಲಾರದು. ಎಂಬುದಾಗಿ ಈ ಎರಡು ಶ್ಲೋಕಗಳಿಂದ ತಿಳಿಸುತ್ತಿದ್ದಾರೆ-

**ಯದಾ ಕದಾಚಿಜ್ಜೀವಾತ್ಮಾ ಸಂಸರನ್ ನಿಜಕರ್ಮಭಿಃ ।**
**ನಾನಾಯೋನಿಷ್ವನೀಶೋಽಯಂ ಪೌರುಷೀಂ ಗತಿಮಾವ್ರಜೇತ್ ॥೫೯॥**

**ಅನೀಶಃ** ಅಸ್ವತಂತ್ರನಾದ ಅನಾದ್ಯನಂತಕಾಲದಲ್ಲಿಯೂ ಈಶ್ವರನಿಂದ ಅತ್ಯಂತ ಭಿನ್ನನಾದ **ಅಯಂ ಜೀವಾತ್ಮಾ** ಈ ಜೀವನು **ನಿಜಕರ್ಮಭಿಃ** ತಾನು ಮಾಡಿದ ಪೂರ್ವಕರ್ಮಗಳಿಂದ **ನಾನಾಯೋನಿಷು ಸಂಸರನ್** ಬೇರೆ ಬೇರೆ ಯೋನಿಗಳಲ್ಲಿ ಹುಟ್ಟುತ್ತಾ **ಯದಾ ಕದಾಚಿತ್** ಯಾವಾಗಲೋ ಒಮ್ಮೆ **ಪೌರುಷೀಂ ಗತಿಂ ಆವ್ರಜೇತ್** ಕಾಲ ಬಂದಾಗ ನನ್ನ ಇಚ್ಛೆಯಿಂದ ಮನುಷ್ಯದೇಹವನ್ನು ಹೊಂದುವನು. ॥೫೯॥

**ಜನ್ಮಕರ್ಮವಯೋರೂಪವಿದ್ಯೈಶ್ವರ್ಯಧನಾದಿಭಿಃ ।**
**ಯದ್ಯಸ್ಯ ನ ಭವೇತ್ ಸ್ತಂಭಸ್ತತ್ರಾಽಯಂ ಮದನುಗ್ರಹಃ ॥೬೦॥**

**ತತ್ರ** ಅಪರೂಪಕ್ಕೆ ಬಂದ ಮನುಷ್ಯದೇಹದಲ್ಲಿ **ಅಸ್ಯ** ಈ ಜೀವನಿಗೆ **ಜನ್ಮ** ಸತ್ಕುಲದಲ್ಲಿ ಹುಟ್ಟುವುದು **ಕರ್ಮ** ವರ್ಣಾಶ್ರಮೋಚಿತವಾದ ಕರ್ಮಾಚಾರಣೆಯು **ವಯಃ** ಯೌವನ **ರೂಪ** ಸೌಂದರ್ಯ **ವಿದ್ಯಾ** ಶಾಸ್ತ್ರಜನ್ಯವಾದ ಜ್ಞಾನ **ಐಶ್ವರ್ಯ** ಅಧಿಕಾರ **ಧನಾದಿಭಿಃ** ದ್ರವ್ಯ ಆದಿ ಪದದಿಂದ ಒಳ್ಳೆ ಮಕ್ಕಳೇ ಮುಂತಾದ ಸಂಪತ್ತುಗಳಿಂದ **ಸ್ತಂಭಃ** ನನ್ನ ವಿಷಯದಲ್ಲಿ ಮತ್ತು ಭಕ್ತರ ವಿಷಯದಲ್ಲಿ ಅನಾದರವು ಅಗೌರವವು ಆಸಲ್ಯವು **ಯದಿ ನ ಭವೇತ್** ಬರದಿದ್ದರೇ **ಅಯಂ** ಇದು **ಮದನುಗ್ರಹಃ** ನನ್ನ ಅನುಗ್ರಹವು ಎಂದು ತಿಳಿಯಬೇಕು. ॥೬೦॥

ಬಲಿಯು ತನ್ನ ಭಕ್ತನೆಂದು ತಿಳಿಸಲು ಭಕ್ತರ ಲಕ್ಷಣವನ್ನು ಹೇಳುತ್ತಾನೆ-

**ಮಾನಸ್ತಂಭನಿಮಿತ್ತಾನಾಂ ಜನ್ಮಾದೀನಾಂ ಸಮಂತತಃ ।**
**ಸರ್ವಶ್ರೇಯಃಪ್ರತೀಪಾನಾಂ ಹಂತ ಮುಹ್ಯೇನ್ನ ಮತ್ಪರಃ ॥೬೧॥**

**ಮತ್ಪರಃ** ನನ್ನ ಭಕ್ತನು **ಮಾನಸ್ತಂಭನಿಮಿತ್ತಾನಾಂ** ದುರಭಿಮಾನ ಅಹಂಕಾರಗಳಿಗೆ ಕಾರಣಗಳಾದ **ಸಮಂತತಃ** ಎಲ್ಲ ರೀತಿಯಿಂದಲೂ **ಸರ್ವಶ್ರೇಯಃಪ್ರತೀಪಾನಾಂ** ಎಲ್ಲರ ಶ್ರೇಯಸ್ಸಿಗೆ ವಿರುದ್ಧಗಳಾದ **ಜನ್ಮಾದೀನಾಂ** ಸತ್ಕುಲಪ್ರಸೂತಿ ಮೊದಲಾದವುಗಳಿಗೆ **ನ ಮುಹ್ಯೇತ್** ಭ್ರಾಂತನಾಗುವುದಿಲ್ಲವೋ ಅವನೇ ನನ್ನ ಭಕ್ತನು. **ಹಂತ** ಮೋಹ ಹೊಂದಿದರೆ ಅನರ್ಥವಾಗುವುದು ಅದು ಖೇದಕರವೆಂದು ಭಾವ. ॥೬೧॥

ಮೇಲೆ ಹೇಳಿದ ಭಕ್ತಲಕ್ಷಣವನ್ನು ಬಲಿಯಲ್ಲಿ ಕಾಣಬಹುದು ಎಂಬ ಅಭಿಪ್ರಾಯದಿಂದ ಹೇಳುವನು-

**ಏಷ ದಾನವದೈತ್ಯಾನಾಮಗ್ರಣೀಃ ಕೀರ್ತಿವರ್ಧನಃ ।**
**ಅಜೈಷೀದಜಯಾಂ ಮಾಯಾಂ ಸೀದನ್ನಪಿ ನ ಮುಹ್ಯತಿ ॥೬೨॥**

**ದಾನವದೈತ್ಯಾನಾಂ ಅಗ್ರಣೀಃ** ದಾನವ-ದೈತ್ಯರ ಪ್ರಮುಖನಾದ **ಕೀರ್ತಿವರ್ಧನಃ** ಕೀರ್ತಿಯನ್ನು ಬೆಳೆಸುವ **ಏಷಃ** ಈ ಬಲಿಯು **ಸೀದನ್ ಅಪಿ** ಪಾಶಬಂಧಾದಿಗಳಿಂದ ದುಃಖಕ್ಕೆ ಒಳಗಾಗಿದ್ದರೂ **ನ ಮುಹ್ಯತಿ** ನನ್ನ ಸ್ವಾತಂತ್ರ್ಯವನ್ನು, ಸರ್ವೋತ್ಕೃಷ್ಟತೆಯನ್ನು ತನ್ನಲ್ಲಿ ಆರೋಪಿಸಿಕೊಂಡು ಭ್ರಾಂತನಾಗುತ್ತಿಲ್ಲ. ಆದ್ದರಿಂದ **ಅಜಯಾಂ** ನನ್ನ ಅನುಗ್ರಹವಿಲ್ಲದೇ ಜಯಿಸಲಾಗದ **ಮಾಯಾಂ** ನನ್ನ ಬಂಧಕಶಕ್ತಿಯನ್ನು ಜಡಪ್ರಕೃತಿಯನ್ನು **ಅಜೈಷಿತ್** ಗೆದ್ದಿರುವನು.

ಆದ್ದರಿಂದ ಇವನು ದಾನವಯೋನಿಯಲ್ಲಿ ಬಂದಿದ್ದರೂ ಉತ್ತಮನು ಕೀರ್ತಿವಂತನು ಎಂದರ್ಥ. ॥೬೨॥

**ಕ್ಷಣಾದ್ ವಿಭ್ರಂಶಿತಃ ಸ್ಥಾನಾತ್ ಕ್ಷಿಪ್ತೋ ಬದ್ಧಶ್ಚ ಶತ್ರುಭಿಃ ।**
**ಜ್ಞಾತಿಭಿಶ್ಚ ಪರಿತ್ಯಕ್ತೋ ಯಾತನಾಮನುಯಾಪಿತಃ ॥೬೩॥**

**ಗುರುಣಾ ಭರ್ತ್ಸಿತಃ ಶಪ್ತೋ ಜಹೌ ಸತ್ಯಂ ನ ಸುವ್ರತಃ ।**
**ಛಲೈರುಕ್ತೋ ಮಯಾ ಧರ್ಮೋ ನಾಽಯಂ ತ್ಯಜತಿ ಸತ್ಪಥಮ್ ॥೬೪॥**

**ಶತ್ರುಭಿಃ** ಶತ್ರುಗಳಾದ ದೇವತೆಗಳಿಂದ **ಕ್ಷಿಪ್ತಃ** ಹಿಯಾಳಿಸಲ್ಪಟ್ಟನು **ಬದ್ಧಃ ಚ** ಗರುಡಾದಿಗಳಿಂದ ಕಟ್ಟಲ್ಪಟ್ಟನು **ಕ್ಷಣಾತ್** ಅತ್ಯಲ್ಪಕಾಲದಲ್ಲಿ **ಸ್ಥಾನಾತ್ ವಿಭ್ರಂಶಿತಃ ಚ** ಗೆದ್ದಿದ್ದ ಸ್ವರ್ಗಾದಿ ಸ್ಥಾನದಿಂದ ತಪ್ಪಿಸಲ್ಪಟ್ಟನು **ಜ್ಞಾತಿಭಿಃ** ಜ್ಞಾತಿಗಳಿಂದ **ಪರಿತ್ಯಕ್ತಃ** ಬಿಡಲ್ಪಟ್ಟನು. **ಯಾತನಾಂ ಅನುಯಾಪಿತಃ** ಬಹುವೇದನೆಯನ್ನು ಹೊಂದಿಸಲ್ಪಟ್ಟನು. ॥೬೩॥

ಇಷ್ಟೇ ಅಲ್ಲ. **ಗುರುಣಾ** ಶುಕ್ರಾಚಾರ್ಯರಿಂದ **ಭರ್ತ್ಸಿತಃ** ''ಮೂಢ ವರ್ತಿಷ್ಯಸೇ ಕಥಂ'' ಎಂದು ಗದರಿಸಲ್ಪಟ್ಟನು. **ಶಪ್ತಃ** ''ಅಚಿರಾತ್ ಭ್ರಶ್ಯಸೇ ಶ್ರಿಯಃ'' ಕೂಡಲೇ ಐಶ್ವರ್ಯಭ್ರಷ್ಟನಾಗೆಂದು ಶಪ್ತನಾದನು. ಆದರೂ **ಸುವ್ರತಃ** ಸತ್ಯವನ್ನು ಬಿಡುವುದಿಲ್ಲವೆಂಬ ಒಳ್ಳೆಯ ವ್ರತ ಉಳ್ಳ ಇವನು **ಸತ್ಯಂ** ಮೂರು ಹೆಜ್ಜೆ ಕೊಡುತ್ತೇನೆ ಎಂಬ ಪ್ರತಿಜ್ಞೆಯನ್ನು **ನ ಜಹೌ** ಬಿಡಲಿಲ್ಲ. ಅದರಂತೆ ದಾನ ಮಾಡಿದನು **ಛಲೈಃ** ನೆಪಗಳಿಂದ ನಿನ್ನ ಕುಲದಲ್ಲಿ ಯಾರೂ ಪ್ರತಿಜ್ಞೆ ಮಾಡಿ ಕೊಡದಿರುವವರು ಇಲ್ಲ ಮುಂತಾಗಿ **ಮಯಾ** ನನ್ನಿಂದ **ಧರ್ಮಃ** ಧರ್ಮವು **ಉಕ್ತಃ** ಹೇಳಲ್ಪಟ್ಟಿತು. ಸತ್ಯಭಾಷಿಯಾದ ಇವನು **ನ ತ್ಯಜತಿ** ಸತ್ಯವನ್ನು ಬಿಡಲಿಲ್ಲ, ಧರ್ಮಭ್ರಷ್ಟನಾಗಲಿಲ್ಲ **ಸತ್ಪಥಂ** ಸಜ್ಜನರ ಮಾರ್ಗವನ್ನು ಬಿಡಲಿಲ್ಲ. ಸತ್ಯಭ್ರಷ್ಟನಾಗಲು ಬೇಕಾದಷ್ಟು ಕಾರಣಗಳಿದ್ದರೂ ಸತ್ಯವನ್ನು ಬಿಡದಿದ್ದರಿಂದ ಉತ್ತಮಭಕ್ತನೆಂದು ಭಾವ.

ಸತ್ಯ ಃ- **ತ್ಯಜತಿ** ಎಂಬುದಕ್ಕೆ ತತ್ಯಾಜ ಎಂದು ಅರ್ಥ ಮಾಡಿದೆ. ಈಗಲೂ ಬೇರೆ ಮಾತಾಡುತ್ತಿಲ್ಲವಾದ್ದರಿಂದ ತ್ಯಜತಿ ಎಂದು ವರ್ತಮಾನ ಪ್ರಯೋಗ ಮಾಡಿರುವರು.

ಸತಾಂ ಪಂಥಾಃ ಸತ್ಪಥಃ ತಂ ಸತ್ಪಥಂ ಎಂಬುದಾಗಿ ರೂಪವಾಗುತ್ತದೆ. ಅಥವಾ ಪಥಃ ಎಂಬ ಅಕಾರಾಂತಪುಲ್ಲಿಂಗ ಶಬ್ದವೇ ಇದೆ. ಆವಾಗ ಸತಾಂ ಪಥಃ ಸತ್ಪಥಃ ತಂ ಸತ್ಪಥಂ ಎಂಬ ರೂಪ ಎಂಬುದಾಗಿಯೂ ತಿಳಿಯಬಹುದು. ''ವಾಟಃ ಪಥಶ್ಚ'' ಎಂಬುದಾಗಿ ಅಮರವಿದೆ. ॥೬೩,೬೪॥

ಅವತರಣಿಕಾ- ರಾಜ್ಯವನ್ನು ಅಪರಹರಿಸಿದಿ. ಬಲಿಯನ್ನು ಕಟ್ಟಿಯೂ ಹಾಕಿದಿ. ತಲೆಯ ಮೇಲೆ ಪಾದವನ್ನೂ ಇಟ್ಟಿ. ಅವನಿಗೆ ಏನನ್ನಾದರೂ ಮಾಡಬೇಕೆಂದು ನಿನಗನಿಸಿದೆಯೇ ಎಂದರೆ ಹೇಳುವರು-

**ಏವಂ ಮೇ ಪ್ರಾಪಿತಂ ಸ್ಥಾನಂ ದುಷ್ಪ್ರಾಪಮಮರೈರಪಿ ।**
**ಸಾವರ್ಣೇರಂತರಸ್ಯಾಽಯಂ ಭವಿತೇಂದ್ರೋ ಮದಾಶ್ರಯಃ ॥೬೫॥**

**ಏವಂ ಕೃತ್ವಾ** ಹೇಳಿದಂತೆಯೇ ನಡೆದುಕೊಂಡ ಭಕ್ತನಾದ **ಅಯಂ** ಈ ಬಲಿಯು **ಮೇ** ನನ್ನಿಂದ **ಅಮರೈರಪಿ** ಇಂದ್ರಪದವಿಗೆ ಯೋಗ್ಯರಲ್ಲದ ದೇವತೆಗಳಿಂದ **ದುಷ್ಪ್ರಾಪಂ** ಹೊಂದಲಾಗದ **ಸ್ಥಾನಂ** ಪದವಿಯನ್ನು **ಪ್ರಾಪಿತಃ ಚ** ಹೊಂದಿಸಲ್ಪಟ್ಟಿರುವನು. **ಸಾವರ್ಣೇಃ ಅಂತರಸ್ಯ** ಸಾವರ್ಣಿಮನ್ವಂತರದ ಕಾಲದಲ್ಲಿ **ಇಂದ್ರೋ ಭವಿತಾ** ಈ ಬಲಿಯು ಇಂದ್ರನಾಗುವನು. ಮನಸ್ಸಿನಲ್ಲಿ ಸಂಕಲ್ಪಿಸಿದ್ದರಿಂದ **ಪ್ರಾಪಿತಃ** ಎಂದಿರುವುದು. **ಇದಾನೀಂ ಅಮದಾಶ್ರಯಃ** ಈಗ ಮದಕ್ಕೆ ಗರ್ವಕ್ಕೆ ಆಶ್ರಯನಾಗದಿದ್ದುದರಿಂದ ಈ ಬಲಿಯು **ಮದಾಶ್ರಯಃ ಭವತಿ** ನಾನೇ ಆಶ್ರಯವಾಗಿ ಉಳ್ಳವನಾಗುವನು. ।।೬೫।।

ಹಾಗಾದರೆ ಅಲ್ಲಿಯ ವರೆಗೂ ಇವನು ಈ ಬಗೆಯ ಕಷ್ಟವನ್ನು ಅನುಭವಿಸಿ ಕೊಂಡಿರಬೇಕೇ? ಎಂದರೆ ಹೇಳುತ್ತಾರೆ-

**ತಾವತ್ ಸುತಲಮಧ್ಯಾಸ್ತಾಂ ವಿಶ್ವಕರ್ಮವಿನಿರ್ಮಿತಮ್ ।**
**ಯತ್ರಾಧಯೋ ವ್ಯಾಧಯಶ್ಚ ಕ್ಲಮಸ್ತಂದ್ರೀ ಪರಾಭವಃ ।।೬೬।।**

**ನೋಪಸರ್ಗಾ ನಿವಸತಾಂ ಸಂಭವಂತಿ ಮಮೇಚ್ಛಯಾ ।**
**ಇಂದ್ರಸೇನ ಮಹಾರಾಜ ಯಾಹಿ ಭೋ ಭದ್ರಮಸ್ತು ತೇ ।।೬೭।।**

**ಸುತಲಂ ಸ್ವರ್ಗಿಭಿಃ ಪ್ರಾರ್ಥ್ಯಂ ಜ್ಞಾತಿಭಿಃ ಪರಿವಾರಿತಃ ।**
**ನ ತ್ವಾಮಭಿಭವಿಷ್ಯಂತಿ ಲೋಕೇಶಾಃ ಕಿಮುತಾಪರೇ ।।೬೮।।**

**ತಾವತ್** ಸಾವರ್ಣಿಮನ್ವಂತರ ಬರುವವರೆಗೂ **ವಿಶ್ವಕರ್ಮವಿನಿರ್ಮಿತಂ** ವಿಶ್ವಕರ್ಮನಿಂದ ನಿರ್ಮಿಸಲ್ಪಟ್ಟ **ಸುತಲಂ ಅಧ್ಯಾಸ್ತಾಂ** ಸುತಲಲೋಕದಲ್ಲಿ ಬಲಿಯು ಇರಲಿ **ಯತ್ರ ನಿವಸತಾಂ** ಯಾವ ಸುತಲದಲ್ಲಿ ವಾಸಿಸುವವರಿಗೆ **ಮಮ ಇಚ್ಛಯಾ** ನನ್ನ ಇಚ್ಛೆಯಿಂದ **ಆಧಯಃ ಚ** ಮನೋದುಃಖಗಳೂ **ವ್ಯಾಧಯಃ** ದೈಹಿಕವಾದ ರೋಗಗಳು **ಕ್ಲಮಃ** ಶ್ರಮವು **ತಂದ್ರೀ** ಆಲಸ್ಯವು **ಉಪಸರ್ಗಾಃ** ಪೀಡೆಗಳು **ನ ಸಂಭವಂತಿ** ಆಗುವುದಿಲ್ಲ. **ಮಹಾರಾಜ** ಮಹಾರಾಜನಾದ **ಇಂದ್ರಸೇನ** ಬಲಿಯೇ **ಮಮ ಇಚ್ಛಯಾ** ನನ್ನ ಸಮ್ಮತಿಯಿಂದ **ಜ್ಞಾತಿಭಿಃ ಪರಿವಾರಿತಃ** ಸಂಬಂಧಿಕರಿಂದ ಕೂಡಿಕೊಂಡು **ಸ್ವರ್ಗಿಭಿಃ ಪ್ರಾರ್ಥ್ಯಂ** ಸ್ವರ್ಗದಲ್ಲಿರುವವ-ರಿಂದಲೂ ಅಪೇಕ್ಷಣೀಯವಾದ **ಸುತಲಂ ಯಾಹಿ** ಸುತಲಲೋಕಕ್ಕೆ ಹೋಗು. **ಭೋ** ಎಲೋ ಬಲಿಯೇ **ತೇ** ನಿನಗೆ **ಭದ್ರಂ ಅಸ್ತು** ಕಲ್ಯಾಣವಾಗಲಿ **ತ್ವಾಂ** ನಿನ್ನನ್ನು **ಲೋಕೇಶಾಃ** ಲೋಕಪಾಲಕರು **ನ ಅಭಿಭವಿಷ್ಯಂತಿ** ಸೋಲಿಸಲಾರರು **ಅಪರೇ ಕಿಮುತ** ಇತರರು ಸೋಲಿಸಲಾರರೆಂದೇನು ಹೇಳುವುದು.

ಸುತಲಂ ಅಧ್ಯಾಸ್ತಾಂ ಈ ಬಲಿಯು ಸುತಲದಲ್ಲಿ ವಾಸವಾಗಿರಲಿ ಎಂದು ಬ್ರಹ್ಮದೇವರಿಗೆ ಹೇಳಿದ ಭಗವಂತ ಹೇಳಿದ. ನಂತರ ನಾಲ್ಕು ಶ್ಲೋಕಗಳಿಂದ ಬಲಿಯನ್ನು ಕುರಿತು ಹೇಳುತ್ತಿದ್ದಾನೆ.

ನಿನ್ನ ಆಜ್ಞೆ ಇಲ್ಲದೇ ಹೇಗೆ ಹೋಗಲಿ ಎಂದು ಬಲಿಯು ಶಂಕಿಸಿದರೆ **ಮಮೇಚ್ಛಯಾ** ಎಂದು ತನ್ನ ಇಚ್ಛೆಯಂತೆಯೇ ನನ್ನ ಆಜ್ಞೆಯಿಂದಲೇ ನೀನು ಸುತಲಕ್ಕೆ ಹೋಗು ಎಂದು ಹೇಳುತ್ತಿದ್ದಾರೆ.

ಮೃತನಾದವನು ಎಲ್ಲರನ್ನು ಬಿಟ್ಟು ತಾನೊಬ್ಬನೇ ಹೋಗುತ್ತಾನೆ. ಹಾಗೆ ನಾನು ಹೋಗಲೇ ಎಂದರೆ ''ಜ್ಞಾತಿಭಿಃ ಪರಿವಾರಿತಃ'' ಜ್ಞಾತಿಗಳೊಂದಿಗೆ ಹೋಗು ಎಂದಿದ್ದಾರೆ.

ಸುತಲಲೋಕವು ದೇವತೆಗಳಿಂದಲೂ ಅಪೇಕ್ಷಿತವೆಂದಾದರೆ ದಿಕ್ಪಾಲಕರು ನನ್ನ ಮೇಲೆ ದಂಡೆತ್ತಿ ಬರಬಹುದಲ್ಲ ಎಂಬ ಶಂಕೆಗೆ ಲೋಕೇಶಾಃ ನ ತ್ವಾಮಭಿಭವಿಷ್ಯಂತಿ ಯಾವ ಲೋಕಪಾಲರೂ ನಿನ್ನನ್ನು ಸೋಲಿಸಲಾರರು ಎಂದು ಹೇಳುತ್ತಿದ್ದಾನೆ. ।।೬೬-೬೭-೬೮।।

ಆ ಸುತಲಲೋಕದಲ್ಲಿ ನಿನ್ನ ಆಜ್ಞೆಯನ್ನು ತಿರಸ್ಕರಿಸುವ ಅಜ್ಞರಾದ ಅಸುರರ ಅವಸ್ಥೆ ಹೇಗಾಗುತ್ತದೆಂದು ಹೇಳುತ್ತಿದ್ದಾರೆ-

**ತ್ವಚ್ಛಾಸನಾತಿಗಾನ್ ದೈತ್ಯಾನ್ ಚಕ್ರಂ ಮೇ ಸೂದಯಿಷ್ಯತಿ ।**
**ರಕ್ಷಿಷ್ಯೇ ಸರ್ವತೋಽಹಂ ತ್ವಾಂ ಸಾನುಗಂ ಸಪರಿಚ್ಛದಮ್ ।।೬೯।।**

**ತ್ವಚ್ಛಾಸನಾತಿಗಾನ್** ನಿನ್ನ ಅಪ್ಪಣೆಯನ್ನು ಮೀರುವ ದೈತ್ಯರನ್ನು **ಮೇ** ನನ್ನ **ಚಕ್ರಂ** ಚಕ್ರವು **ಸೂದಯಿಷ್ಯತಿ** ಸಂಹರಿಸುವುದು. ಹೆಚ್ಚಿಗೆ ಹೇಳುವುದೇನು **ಅಹಂ** ನಾನು **ಸಾನುಗಂ ಸಪರಿಚ್ಛದಂ** ಅನುಚರಸಹಿತನಾದ ಸಾಮಾಗ್ರಿಸಹಿತನಾದ **ತ್ವಾಂ** ನಿನ್ನನ್ನು **ಸರ್ವತಃ** ಎಲ್ಲ ರೀತಿಯಿಂದ **ರಕ್ಷಿಷ್ಯೇ** ರಕ್ಷಿಸುವೆನು.

ಸತ್ಯ ಃ- ಚಕ್ರವು ಸಂಹರಿಸುವುದು ಎಂದಾಗ ಚಕ್ರವನ್ನು ಮಾತ್ರ ನಿನ್ನಲ್ಲಿ ಇಡುವೆನು ಎಂದಂತಾಗುತ್ತದೆ. ಆದ್ದರಿಂದ ''ಸರ್ವತಃ ರಕ್ಷಿಷ್ಯೇ'' ನಾನು ಕೂಡಾ ಸ್ವಯಂ ಅಲ್ಲಿಯೇ ಇದ್ದು ನಿನ್ನನ್ನು ಸಂರಕ್ಷಿಸುತ್ತೇನೆ ಎಂದು ತಿಳಿಸಿದ್ದಾರೆ. ।।೬೯।।

ನಿನ್ನ ದರ್ಶನವಾಗದಿದ್ದರೇ ಸಕಲ ಭೋಗ-ಭಾಗ್ಯಗಳೂ ವ್ಯರ್ಥ. ಅಲ್ಲಿ ಇದ್ದೂ ಪ್ರಯೋಜನವಿಲ್ಲವೆಂದರೇ ಹೇಳುತ್ತಾರೆ-

**ಸದಾ ಸನ್ನಿಹಿತಂ ವೀರ ತತ್ರ ಮಾಂ ದ್ರಕ್ಷ್ಯತೇ ಭವಾನ್ ।।೭೦।।**

**ವೀರ** ವೀರನಾದ ಬಲಿಯೇ **ತತ್ರ** ಸುತಲದಲ್ಲಿ **ಸನ್ನಿಹಿತಂ** ಸನ್ನಿಹಿತನಾದ **ಮಾಂ** ನನ್ನನ್ನು **ಭವಾನ್** ನೀನು **ದ್ರಕ್ಷ್ಯತೇ** ನೋಡುವಿ.

ರಾವಣನು ತನ್ನ ದ್ವಾರಪಾಲಕ ಜಯನೇ ಆಗಿದ್ದಾನೆ. ಆದ್ದರಿಂದ ಅವನ ಪರಾಜಯ ದ್ವಾರಪಾಲಕನಾದ ರೂಪಧರಿಸಿದವನಿಂದಾಗಬೇಕು ಎಂಬ ಉದ್ದೇಶದಿಂದ ಭಗವಂತ ದ್ವಾರಪಾಲಕನಾದ ಎಂದು ತಿಳಿಯಬೇಕು.

**ತತ್ರ ದಾನವದೈತ್ಯಾನಾಂ ಸಂಗಾತ್ ತೇ ಭಾವ ಆಸುರಃ ।**
**ದೃಷ್ಟ್ವಾ ಮದನುಭಾವಂ ವೈ ಸದ್ಯಃ ಕುಂಠೋ ವಿನಂಕ್ಷ್ಯತಿ ॥೬೦॥**

**॥ ಇತಿ ಶ್ರೀಮದ್ಭಾಗವತೇ ಅಷ್ಟಮಸ್ಕಂಧೇ ವಿಂಶೋಽಧ್ಯಾಯಃ ॥**

**ತತ್ರ** ಅಲ್ಲಿ **ದಾನವದೈತ್ಯಾನಾಂ ಸಂಗಾತ್** ದಾನವ ಮತ್ತು ದೈತ್ಯರ ಸಹವಾಸದಿಂದ ನಿನಗೆ ಬರಬಹುದಾದ **ಆಸುರಃ ಭಾವಃ** ಅಸುರಸ್ವಭಾವವು **ಮದನುಭಾವಂ** ನನ್ನ ಸಾಮರ್ಥ್ಯವನ್ನು **ದೃಷ್ಟ್ವಾ** ನೋಡಿ **ಸದ್ಯಃ ಕುಂಠಃ** ಕೂಡಲೇ ಛಿನ್ನವಾಗಿ **ವಿನಂಕ್ಷ್ಯತಿ** ಸಂಪೂರ್ಣ ನಾಶವಾಗುವುದು.

ಸತ್ಯ :- ಸದಾಸಂ ನಿಹಿತಂ ಎಂದು ಬಿಡಿಸಿಕೊಂಡೂ ಹಿಗೆ ಅನ್ವಯ ಮಾಡಿಕೊಳ್ಳಬಹುದು. ನಾನಿದ್ದ ಮೇಲೆ ಎಲ್ಲ ದೇವತೆಗಳು ವಿರೋಧವಿಲ್ಲದೇ ಇದ್ದಂತೆಯೇ ಎಂದು ಹೇಳುವನು. **ಸದಾಸಂ** ದಾಸರಿಂದ ಸಹಿತನಾದ **ನಿಹಿತಂ** ಸನ್ನಿಹಿತನಾದ ಎಂದರ್ಥ ನನ್ನನ್ನು ದರ್ಶನ ಮಾಡಿಕೊಳ್ಳುವಿ ಎಂದು ಅರ್ಥ.

ನನ್ನ ಅನಿಷ್ಟವು ನಿವೃತ್ತವಾಯಿತು. ಇಷ್ಟವಾದ ಮುಕ್ತಿಯು ನನಗೆ ಇಲ್ಲವೇ ಎಂದರೆ, **ವೈಸದ್ಯಃ ಕುಂಠಃ** ಎಂದು ವಿಭಾಗ ಮಾಡಿಕೊಂಡು ಈ ಶಂಕೆಯನ್ನು ಪರಿಹರಿಸಿಕೊಳ್ಳಬೇಕು. ವೈಸದ್ಯಃ **ವೈ** ವೈ ಎಂಬ ಅಕ್ಷರವು **ಸದ್ಯಃ** ಪ್ರಾಪಣೀಯ ಸಂಗಮನೀಯ ಅಂದರೆ ಹೊಂದಿಸಲು ಯೋಗ್ಯವಾದ **ಕುಂಠಃ** ಕುಂಠ ಎಂಬ ಪದವು. ಅಂದರೆ ವೈಸದ್ಯಃ ಕುಂಠಃ ಎಂದರೆ ವೈಕಾರದಿಂದ ಸಂಗತವಾಗಬೇಕಾದ ಕುಂಠಪದವು ಅಂದರೆ ವೈಕುಂಠ ಎಂಬ ಪದ ಎಂದು ಅರ್ಥವಾಗುತ್ತದೆ. ಅಂಥ ವೈಕುಂಠವೂ ನಿನಗೆ ಆಗುತ್ತದೆ. ಎಂದು ಆಂತರಂಗಿಕವಾದ ಅಭಿಪ್ರಾಯ. ॥೬೦॥

**ಇಲ್ಲಿಗೆ ಇಪ್ಪತ್ತನೇ ಅಧ್ಯಾಯವು ಮುಗಿಯಿತು.**

★★★

# ಅಥ ಏಕವಿಂಶೋಽಧ್ಯಾಯಃ

ಭಗವಂತನ ಭಕ್ತಿಗೆ ಅಸಾಧ್ಯವಾದುದು ಯಾವುದೂ ಇಲ್ಲವೆಂದು ತಿಳಿಸಲು ಈ ಅಧ್ಯಾಯ ಹೊರಟಿದೆ. ಅದರಲ್ಲಿ ಮೊದಲು ಶ್ರೀಹರಿಯು ಮಾಡಿದ ಆಜ್ಞೆಯನ್ನು ಹೇಳಿ ನಂತರ ಬಲಿಯು ಏನು ಮಾಡಿದನೆಂದು ತಿಳಿಸುತ್ತಾರೆ.

**ಇತ್ಯುಕ್ತವಂತಂ ಪುರುಷಂ ಪುರಾತನಂ**
**ಮಹಾನುಭಾವೋಽಖಿಲಸಾಧುಸಮ್ಮತಃ ।**
**ಬದ್ಧಾಂಜಲಿರ್ಬಾಷ್ಪಕಲಾಕುಲೇಕ್ಷಣೋ**
**ಭಕ್ತ್ಯುತ್ಕಲೋ ಗದ್ಗದಯಾ ಗಿರಾಽಬ್ರವೀತ್ ॥೧॥**

**ಮಹಾನುಭಾವಃ** ಎಷ್ಟು ಕಷ್ಟ ಬಂದರೂ ಸಹಿಸಿಕೊಳ್ಳುವ ಸಾಮರ್ಥ್ಯ ಉಳ್ಳ ಆದ್ದರಿಂದಲೇ **ಅಖಿಲಸಾಧುಸಮ್ಮತಃ** ಎಲ್ಲ ಸಜ್ಜನರಿಗೆ ಸಮ್ಮತನಾದ **ಬದ್ಧಾಂಜಲಿಃ** ಕೈ ಕಟ್ಟಿಕೊಂಡಿರುವ ಬಲಿರಾಜನು **ಭಕ್ತ್ಯುತ್ಕಲಃ** ಪರಮಾತ್ಮನ ಅನುಗ್ರಹವಚನ ಕೇಳಿ ಮತ್ತಿಷ್ಟು ಭಕ್ತಿಯ ಉದ್ರೇಕ ಉಳ್ಳವನಾಗಿ **ಬಾಷ್ಪಕಲಾಕುಲೇಕ್ಷಣಃ** ಆನಂದಬಾಷ್ಪಗಳಿಂದ ಅಸ್ಪಷ್ಟವಾದ ನೋಟ ಉಳ್ಳ **ಗದ್ಗದಯಾ ಗಿರಾ** ಬಿಗಿದ ಕಂಠದಿಂದ, ಸ್ಪಷ್ಟವಾಗಿ ಉಚ್ಚರಿಸಲಾಗದ ಮಾತಿನಿಂದ **ಇತಿ ಉಕ್ತವಂತಂ** ಅನುಗ್ರಹಪೂರ್ವಕವಾಗಿ ಮಾತನಾಡಿದ **ಪುರಾತನಂ ಪುರುಷಂ** ಪುರಾತನ ಪುರುಷನಾದ ವಾಮನನನ್ನು ಕುರಿತು **ಅಬ್ರವೀತ್** ವಿಜ್ಞಾಪಿಸಿಕೊಂಡನು.

ಸತ್ಯ :- ''ಭಕ್ತ್ಯುದ್ಗಲಃ'' ಎಂದು ಪಠಿಸಿ ಸತ್ಯಧರ್ಮರು ಹೀಗೆ ವ್ಯಾಖ್ಯಾನಿಸಿದ್ದಾರೆ. ಈ ಪಾಠದಲ್ಲಿ, ಭಕ್ತ್ಯಾ ಉದ್ಗತಃ ಭಾಷಣಪ್ರತಿಬಂಧಕತಯಾ ತತ್ರಾಯಃ ಗಲಃ ಯಸ್ಯ ಸಃ ಎಂದು ವಿಗ್ರಹ ತೋರಿಸಿ, ಮಾತನಾಡಲು ಭಕ್ತಿಯು ಪ್ರತಿಬಂಧಕವಾಗಿರುವುದರಿಂದ ಕಂಠವು ಹೊದಂತೆ ಇರುವ ಎಂದು ಅರ್ಥ ಹೇಳಿದ್ದಾರೆ. ಅಥವಾ ಭಕ್ತ್ಯಾ ಉದ್ಗಲನಂ ಯಸ್ಯ ಸಃ ಸದ್ಭಕ್ತಿರಸದ ಉದ್ಗಲನ ಉಳ್ಳವನಾದ, ಭಕ್ತಿಯಿಂದ ಸಂಪನ್ನನಾದ ಎಂದು ಅರ್ಥವನ್ನು ತಿಳಿಸಿದ್ದಾರೆ. ॥೧॥

**ಬಲಿರುವಾಚ**

**ಅಹೋ ಪ್ರಸಾದೋಽಸ್ಯ ಕೃತಃ ಸಮುದ್ಯತಃ**
**ಪ್ರಪನ್ನಭಕ್ತಾರ್ಥವಿಧೌ ಸಮಾಹಿತಃ ।**
**ಯಲ್ಲೋಕಪಾಲೈಸ್ತದನುಗ್ರಹೋಽಮರ್ತ್ಯೈಃ**
**ಅಲಬ್ಧಪೂರ್ವೋಽಪಸದೇಽಸುರೇಽರ್ಪಿತಃ ॥೨॥**

**ಸಮುದ್ಯತಃ** ತ್ರಿವಿಕ್ರಮನಾಗಿ ಬೆಳೆದಿರುವ **ಅಸ್ಯ(ತವ)** ಈ ನೀನು **ಕೃತಃ** ನನ್ನಲ್ಲಿ ಮಾಡಿರುವ **ಪ್ರಸಾದಃ** ಅನುಗ್ರಹವು **ಅಹೋ** ಆಶ್ಚರ್ಯಕರವಾದುದು. ಈ ನಿನ್ನ ಪ್ರಸಾದವು **ಪ್ರಪನ್ನಭಕ್ತಾರ್ಥವಿಧೌ** ಶರಣುಹೊಂದಿದ ಭಕ್ತರ ಪ್ರಯೋಜನವನ್ನುಂಟುಮಾಡು-ವುದರಲ್ಲಿಯೇ **ಸಮಾಹಿತಃ** ಉದ್ಯುಕ್ತವಾಗಿದೆ. ಅದು ಮತ್ತೊಬ್ಬರಿಗೆ ದೊರೆಯತಕ್ಕುದಲ್ಲ. ಇಂತಹ ಪ್ರಸಾದ ನನಗೆ ದೊರೆತದ್ದು ಮತ್ತಿಷ್ಟು ಆಶ್ಚರ್ಯವೆಂದರ್ಥ. ನೀನು ಅಂಥ ಭಕ್ತರಲ್ಲಿ ಒಬ್ಬನಾಗಿರುವಿ. ಕಾರಣ ಇದರಲ್ಲಿ ಏನಾಶ್ಚರ್ಯವೆಂದರೆ, ತಾನು ಅಂಥ ಭಕ್ತನಲ್ಲವೆಂದು ತನ್ನನ್ನು ನಿಂದಿಸಿಕೊಳ್ಳುತ್ತಾನೆ ಬಲಿ. **ಯತ್** ಯಾವ ನೀನು ಮಾಡಿದ **ಅನುಗ್ರಹಃ** ಈ ಅನುಗ್ರಹವು **ಅಮರ್ತ್ಯೈಃ** ದೇವತೆಗಳಾದ **ಲೋಕಪಾಲೈಃ** ಲೋಕಪಾಲಕರಿಂದಲೂ **ಅಲಬ್ಧಪೂರ್ವಃ** ಹಿಂದೆಂದೂ ಹೊಂದಿದ್ದಲ್ಲವೋ **ತದನುಗ್ರಹಃ** ಅಂತಹ ಅನುಗ್ರಹವು **ಅಪಸದೇ** ನೀಚನಾದ **ಅಸುರೇ** ಅಸುರಯೋನಿಯಲ್ಲಿ ಜನಿಸಿರುವ **ಮಯಿ** ನನ್ನಲ್ಲಿ **ಅರ್ಪಿತಃ** ಮಾಡಲ್ಪಟ್ಟಿದೆ.

ಸತ್ಯ ಃ- ಅಸ್ಯಕೃತಃ ಎಂಬುದು ಒಂದೇ ಪದವೆಂದು ಇಟ್ಟುಕೊಳ್ಳಬೇಕು. ಯಃ ಅಹಂ ಅಸ್ಯಕೃತಃ ನಿರಸ್ಯತ್ವೇನ ಕೃತಃ ಅಂದರೆ ನಿರಸ್ಯನೆಂದು ಮಾಡಲ್ಪಟ್ಟಿರುವೆನೋ, ಪ್ರಸಾದಃ ಪ್ರಕೃಷ್ಟಃ ಸಾದಃ ಕಾರ್ಶ್ಯಂ ಯಸ್ಯ ಸಃ ಅತ್ಯಂತ ಕೃಶನಾಗಿರುವೆನೋ **ತಸ್ಮಿನ್ ಅಪಸದೇ** ಅಂಥ ನೀಚನಾದ **ಅಸುರೇ** ದೈತ್ಯನಲ್ಲಿ **ಯಃ ಪ್ರಪನ್ನಭಕ್ತಾರ್ಥವಿಧೌ** ಶರಣಾಗತರಿಗೆ ಪ್ರಯೋಜನ **ಕೊಡುವಲ್ಲಿ, ಸಮಾಹಿತಃ** ಸಮಾಃ ಅಹಿತಾಃ ಯಸ್ಯ ಸಃ ಸಮಾಹಿತಃ ಎಂದು ವಿಗ್ರಹ ಮಾಡಿಕೊಂಡು ಅರ್ಥ ತಿಳಿಯಬೇಕು. ಯಾವ ಭಗವಂತನಿಗೆ ವೈರಿಗಳು ಕೂಡಾ ಭಕ್ತರಿಗೆ ಸಮಾನರಾಗಿರುವರೋ, ಅಂದರೆ ಭಕ್ತರಲ್ಲಿ ಮಾಡಿದಂತೆ ದೈತ್ಯರಲ್ಲಿಯೂ ಭಗವಂತ ಅನುಗ್ರಹ ಮಾಡುವನೋ ಅಂಥ ಪರಮಾತ್ಮ ಸಮಾಹಿತ ಎಂದರ್ಥ. ಅಂಥ ಪರಮಾತ್ಮನು ಹಿಂದೆ ದೇವತೆಗಳಿಗೂ ಮಾಡದ ಅನುಗ್ರಹವನ್ನು ನನ್ನ ಮೇಲೆ ಮಾಡಿರುವನು. ಇದು ಆಶ್ಚರ್ಯ ಎಂದು ಅರ್ಥ.

ಈಗ (ಮುದಾ ಸಹಿತಃ) ಸಮುತ್ ಯತಃ ಎಂದು ಪದವಿಭಾಗ ಮಾಡಿ ಹೀಗೆ ಅರ್ಥ ತಿಳಿಯಬೇಕು. **ಯತಃ** ಇಂಥ ಅನುಗ್ರಹವನ್ನು ನನ್ನ ಮೇಲೆ ಮಾಡಿರುವುದರಿಂದ ನಾನು **ಸಮುತ್** ಸಂತೋಷಯುಕ್ತನಾಗಿದ್ದೇನೆ. ಎಂದು ತಾತ್ಪರ್ಯ. ಅಹೋ ಆಶ್ಚರ್ಯ.

ಸಮುದ್ಯತಃ ಎಂಬುದು ಷಷ್ಠೀವಿಭಕ್ತ್ಯಂತವಾಗಿದೆ. ಅಸ್ಯ ಎಂಬುದಕ್ಕೆ ವಿಶೇಷಣ ಎಂದು ತಿಳಿಯಬೇಕು.

ವಃ ಯುಷ್ಮಾಭಿಃ ಲೋಕಪಾಲೈಃ ಅಮರ್ತ್ಯೈಃ **ಅಲಬ್ಧಪೂಃ** ಅಲಬ್ಧಾ ಪೂಃ ಯಸ್ಯ ಸಃ ಅಲಬ್ಧಪೂಃ ಎಂದು ವಿಗ್ರಹ ಮಾಡಿಕೊಳ್ಳಬೇಕು. **ಅಲಬ್ಧಾ** ಯುದ್ಧಸನ್ನದ್ಧರಾದ ದೇವತೆಗಳಿಂದ ಹೊಂದಲ್ಪಡದಿರುವ **ಪೂಃ** ಸುತಲ ನಗರ ಉಳ್ಳವನು. ಆದ್ದರಿಂದ ತದನುಗ್ರಹಃ ಅಂಥ ಸುತಲನಗರವನ್ನು ನನಗಾಗಿ ನೀಡಿದ್ದು ಅಹೋ ಆಶ್ಚರ್ಯ. ''ನ ತ್ವಾಮಭಿಭವಿಷ್ಯಂತಿ ಲೋಕೇಶಾಃ'' ಎಂದು ಹೇಳಿದ್ದಾನೆ. ॥೨॥

ಲಿಂಗೇರೀ ಃ- ಭಕ್ತರಿಗೆ ಮಾತ್ರವೇ ಮೀಸಲಾದ ಅನುಗ್ರಹವು ನನಗೆ ಆದುದು ಆಶ್ಚರ್ಯವೆಂದರ್ಥ. ಬಲಿಯ ಯೋಗ್ಯತೆಗೆ ತಕ್ಕಷ್ಟು ಬಲಿಯಲ್ಲಿ ಲೋಕಪಾಲಕರ ಯೋಗ್ಯತೆಗೆ ತಕ್ಕಷ್ಟು ಲೋಕಪಾಲಕರಲ್ಲಿ ಶ್ರೀಹರಿಯು ಅನುಗ್ರಹಿಸುತ್ತಾನೆ. ಆದ್ದರಿಂದ ಬಲಿಯು ಲೋಕಪಾಲಕರಿಗಿಂತಲೂ ದೊಡ್ಡವನು ಎಂಬ ಶಂಕೆಗೆ ಅವಕಾಶವಿಲ್ಲ. ॥೨॥

**ಶ್ರೀಶುಕ ಉವಾಚ**

**ಇತ್ಯುಕ್ತ್ವಾ ಹರಿಮಾನಮ್ಯ ಬ್ರಹ್ಮಾಣಂ ಸಭವಂ ತತಃ ।**
**ವಿವೇಶ ಸುತಲಂ ಪ್ರೀತೋ ಬಲಿರ್ಮುಕ್ತಃ ಸಹಾಸುರೈಃ ॥೩॥**

**ಮುಕ್ತಃ** ವರುಣಪಾಶದಿಂದ ಬಿಡುಗಡೆ ಹೊಂದಿದ **ಬಲಿಃ** ಬಲಿರಾಜನು **ಪ್ರೀತಃ** ಸಂತುಷ್ಟನಾಗಿ **ಇತಿ ಉಕ್ತ್ವಾ** ಮೇಲೆ ಹೇಳಿದಂತೆ ಬಿನ್ನವಿಸಿ **ಹರಿಂ ಆನಮ್ಯ** ವಾಮನನಿಗೆ ನಮಸ್ಕರಿಸಿ **ತತಃ** ಅನಂತರ **ಸಭವಂ** ರುದ್ರದೇವರಿಂದ ಸಹಿತರಾದ **ಬ್ರಹ್ಮಾಣಂ** ಬ್ರಹ್ಮದೇವರನ್ನೂ ಆನಮ್ಯ ನಮಸ್ಕರಿಸಿ **ಅಸುರೈಃ ಸಹ** ಅನುಯಾಯಿಗಳಾದ ಅಸುರರೊಡನೆ **ಸುತಲಂ ವಿವೇಶ** ಸುತಲವನ್ನು ಪ್ರವೇಶಿಸಿದನು.

◆ ಹಿಂದೆ ಎಲ್ಲಿಯೂ ರುದ್ರದೇವರ ಪ್ರಸಕ್ತಿ ಬಂದಿಲ್ಲ. ಆದರೂ ಇಲ್ಲಿ ಸಭವಂ ಎಂದು ಹೇಳುತ್ತಿದ್ದಾರೆ. ಅದು ಹೇಗೆ ಎಂದರೆ ಇದಕ್ಕೆ ಮೂರು ವಿಧವಾಗಿ ಉತ್ತರ ತಿಳಿಯಬಹುದು.

೧. ಹಿಂದೆ ಹೇಳದಿದ್ದರೂ ಇಲ್ಲಿ ಹೇಳುತ್ತಿದ್ದಾರೆ. ಆದ್ದರಿಂದ ರುದ್ರದೇವರು ಬಂದಿದ್ದರೆಂದು ತಿಳಿಯಬೇಕು.

೨. ರುದ್ರದೇವರ ಪ್ರಸಕ್ತಿಯೇ ಇಲ್ಲದಿರುವಾಗ ಅವರನ್ನು ಈಗಲಾದರೂ ಯಾಕೆ ಸ್ವೀಕರಿಸಬೇಕೆಂದು ಆಗ್ರಹ ಮಾಡಿದರೇ, ಸಭವಂ ಎಂಬುದಕ್ಕೆ ಹೀಗಾದರೂ ಅರ್ಥವನ್ನು ತಿಳಿಯಬಹುದು. ಭವೇನ ಸಹಿತಃ ಸಭವಃ ತಂ ಸಭವಂ ಎಂದು ವಿಗ್ರಹ ಮಾಡಿಕೊಂಡು ಅರ್ಥ ತಿಳಿಯಬೇಕು. ಭವ ಎಂದರೆ ಜನ್ಮ ಎಂದು ಅರ್ಥ. ಭಗವಂತನಿಂದ ಜನ್ಮ ಉಳ್ಳವರು ಬ್ರಹ್ಮದೇವರು. ಅಂಥ ಬ್ರಹ್ಮದೇವರಿಂದ ಸಹಿತನಾದ ಭಗವಂತನನ್ನು ನಮಸ್ಕರಿಸಿ ಎಂದು

ಅನ್ವಯ ಮಾಡಿಕೊಳ್ಳಬಹುದು. ಬ್ರಹ್ಮದೇವರ ಪ್ರಸಕ್ತಿ ಇದ್ದುದರಿಂದ ಹೀಗೆ ಅರ್ಥ ಮಾಡುವುದು ಅನುಪಪನ್ನವಲ್ಲ.

೩. ಅಥವಾ ಭವ ಎಂದರೆ ಮಂಗಳ ಎಂದು ಅರ್ಥ. ಮಂಗಲದಿಂದ ಸಮೇತನಾದ ಭಗವಂತನನ್ನು ಎಂದಾದರೂ ಅರ್ಥ ತಿಳಿಯಬೇಕು. ।।೩।।

**ಏವಮಿಂದ್ರಾಯ ಭಗವಾನ್ ಪ್ರೀತ್ಯಾನೀಯ ತ್ರಿವಿಷ್ಟಪಮ್ ।**
**ಪೂರಯಿತ್ವಾऽದಿತೇಃ ಕಾಮಮಶಾಸತ್ ಸಕಲಂ ಜಗತ್ ।।೪।।**

**ಏವಂ** ಈ ರೀತಿಯಾಗಿ **ಭಗವಾನ್** ವಾಮನನು ಬಲಿಯನ್ನು ನಿಗ್ರಹಿಸಿ **ಪ್ರೀತ್ಯಾ** ಕರುಣೆಯಿಂದ **ಇಂದ್ರಾಯ** ಇಂದ್ರನಿಗೆ **ತ್ರಿವಿಷ್ಟಪಂ** ಸ್ವರ್ಗವನ್ನು **ಆನೀಯ** ಮತ್ತೆ ತಂದುಕೊಟ್ಟು **ಅದಿತೇಃ** ತನ್ನ ತಾಯಿಯ **ಕಾಮಂ** ಅಭಿಲಾಷೆಯನ್ನು **ಪೂರಯಿತ್ವಾ** ಪೂರ್ಣ ಮಾಡಿ **ಸಕಲಂ ಜಗತ್** ಎಲ್ಲ ಜಗತ್ತನ್ನು **ಅಶಾಸತ್** ರಕ್ಷಿಸಿದನು.

ಸತ್ಯ ಃ- **ಅದಿತೇಃ** ಯುದ್ಧ ಮಾಡುವುದು, ಸೈನ್ಯವನ್ನು ಖಂಡಿಸುವುದು ಮುಂತಾದ ಯಾವ ಪ್ರಯತ್ನಗಳಿಲ್ಲದೇ ಸ್ವರ್ಗವನ್ನು ನೀಡಿ ಎಂದೂ ಅರ್ಥ. ''ದಿತಿಃ ಸ್ಯಾತ್ ಖಂಡನೇ ದನೌ'' ಇತಿ ವಿಶ್ವಃ ।।೪।।

**ಲಬ್ಧಪ್ರಸಾದನಿರ್ಮುಕ್ತಂ ಪೌತ್ರಂ ವಂಶಧರಂ ಬಲಿಮ್ ।**
**ನಿಶಾಮ್ಯ ಭಕ್ತಿಪ್ರವಣಃ ಪ್ರಹ್ಲಾದ ಇದಮಬ್ರವೀತ್ ।।೫।।**

**ಪ್ರಹ್ಲಾದಃ** ಪ್ರಹ್ಲಾದರಾಜರು **ಲಬ್ಧಪ್ರಸಾದನಿರ್ಮುಕ್ತಂ** ಶ್ರೀಹರಿಯ ಪ್ರಸಾದವನ್ನು ಹೊಂದಿ ಆ ಪ್ರಸಾದದಿಂದ ಪಾಶಮುಕ್ತನಾದ **ವಂಶಧರಂ** ತಮ್ಮ ವಂಶದ ಕೀರ್ತಿಯನ್ನು ಉಳಿಸಿದ **ಪೌತ್ರಂ** ಮೊಮ್ಮಗನಾದ **ಬಲಿಂ** ಬಲಿಯನ್ನು **ದೃಷ್ಟ್ವಾ** ನೋಡಿ **ಭಕ್ತಿಪ್ರವಣಃ** ಶ್ರೀಹರಿಯಲ್ಲಿ ಮತ್ತಿಷ್ಟು ಭಕ್ತಿಯಿಂದ ನಮ್ರನಾಗಿ **ಇದಂ ಅಬ್ರವೀತ್** ಮುಂದೆ ಹೇಳುವಂತೆ ಮಾತನಾಡಿದನು. ।।೫।।

**ನೇಮಂ ವಿರಿಂಚೋ ಲಭತೇ ಪ್ರಸಾದಂ**
**ನ ಶ್ರೀರ್ನ ಶರ್ವಃ ಕಿಮುತಾಪರೇ ತೇ ।**
**ಯನ್ನೋऽಸುರಾಣಾಮಸಿ ದುರ್ಗಪಾಲೋ**
**ವಿಶ್ವಾಭಿವಂದ್ಯೈರಭಿವಂದಿತಾಂಘ್ರಿಃ ।।೬।।**

**ವಿಶ್ವಾಭಿವಂದ್ಯೈಃ** ಎಲ್ಲ ಜಗತ್ತಿನಿಂದ ನಮಸ್ಕರಿಸಲ್ಪಟ್ಟ ಬ್ರಹ್ಮಾದಿಗಳಿಂದ **ಅಭಿವಂದಿತಾಂಘ್ರಿಃ** ನಮಸ್ಕೃತವಾದ ಪಾದಗಳುಳ್ಳ **ತ್ವಂ** ವಾಮನರೂಪಿಯಾದ ನೀನು **ಅಸುರಾಣಾಂ ನಃ** ಅಸುರಯೋನಿಯಲ್ಲಿ ಬಂದಿರುವ ನಮ್ಮ **ದುರ್ಗಪಾಲಃ** ಕೋಟೆ ಬಾಗಿಲು

ಕಾಯುವವನು **ಅಸಿ** ಆಗಿರುವಿ **ಇತಿ ಯತ್** ಇದು ಏನಿದೆಯೋ **ಇಮಂ ಪ್ರಸಾದಂ** ಬಲಿಗೆ ತಕ್ಕ ನೀನು ಮಾಡಿದ ಈ ಅನುಗ್ರಹವನ್ನು **ಶ್ರೀಃ** ಲಕ್ಷ್ಮಿಯು **ನ ಲಭತೇ** ಹೊಂದುವುದಿಲ್ಲ **ವಿರಿಂಚಃ** ಬ್ರಹ್ಮದೇವರು **ನ ಲಭತೇ** ಹೊಂದುವುದಿಲ್ಲ **ಶರ್ವಃ ಚ** ರುದ್ರದೇವರು ಹೊಂದುವುದಿಲ್ಲ **ಅಪರೇ ಯೇ** ಉಳಿದವರು ಯಾರೋ **ತೇ** ಅವರು ಹೊಂದುವುದಿಲ್ಲವೆಂದು **ಕಿಮುತ** ಹೇಳುವುದೇನು?

♦ ರಮಾ-ಬ್ರಹ್ಮಾದಿಗಳೆಲ್ಲರೂ ತಮ್ಮ ಯೋಗ್ಯತೆಗೆ ತಕ್ಕಂತೆ ಬಲಿಗಿಂತಲೂ ಅತ್ಯಧಿಕವಾದ ಅನುಗ್ರಹಕ್ಕೆ ಪಾತ್ರರಾಗಿದ್ದಾರೆ. ಬಲಿಯು ಪಡೆದಷ್ಟೇ ಅಲ್ಲ ಎಂದು ಭಾವ. ಇದರ ತಾತ್ಪರ್ಯವನ್ನು ಸಪ್ತಮಸ್ಕಂಧದಲ್ಲಿ ಪ್ರಹ್ಲಾದನ ವಿಷಯದಲ್ಲಿ, ನವಮಸ್ಕಂಧ ಮುಂತಾದವುಗಳಲ್ಲಿ ಅಂಬರೀಷಾದಿಗಳ ವಿಷಯದಲ್ಲಿ ಸ್ಪಷ್ಟಪಡಿಸಿದ್ದನ್ನು ತಿಳಿಯಬೇಕು.

**ಯತ್ಪಾದಪದ್ಮಮಕರಂದನಿಷೇವಣೇನ**
**ಬ್ರಹ್ಮಾದಯಃ ಶರಣದಾಶ್ನುವತೇ ವಿಭೂತೀಃ ।**
**ಕಸ್ಮಾದ್ ವಯಂ ಕುಸೃತಯಃ ಖಲಯೋನಯಸ್ತೇ**
**ದಾಕ್ಷಿಣ್ಯದೃಷ್ಟಿಪದವೀಂ ಭವತಃ ಪ್ರಣೀತಾಃ ॥೭॥**

**ಹೇ ಶರಣದ** ಮೊರೆ ಹೊಕ್ಕವರಿಗೆ ರಕ್ಷಣೆಕೊಡುವ ಶ್ರೀಹರಿಯೇ **ಬ್ರಹ್ಮಾದಯಃ** ಬ್ರಹ್ಮದೇವರೇ ಮೊದಲಾದ ದೇವತೆಗಳು **ಯತ್ಪಾದಪದ್ಮಮಕರಂದನಿಷೇವಣೇನ** ಯಾವ ನಿನ್ನ ಪಾದಕಮಲಗಳ ರಸದ ಸೇವನೆಯಿಂದ **ವಿಭೂತೀಃ ಚ** ಸತ್ಯಲೋಕಾಧಿಪತ್ಯ ಮೊದಲಾದ ಐಶ್ವರ್ಯಗಳನ್ನು **ಅಶ್ನುವತೇ** ಅನುಭವಿಸುವರೋ **ತೇ** ಅಂತಹ ಸರ್ವೋತ್ತಮನಾದ ನಿನ್ನ **ದಾಕ್ಷಿಣ್ಯದೃಷ್ಟಿಪದವೀಂ** ಬಲಗಣ್ಣಿನ ಅಥವಾ ಕೃಪಾದೃಷ್ಟಿಯ ಮಾರ್ಗವನ್ನು, ಉದಾರದೃಷ್ಟಿಯ ವಿಷಯತೆಯನ್ನು **ಕುಸೃತಯಃ** ಕುತ್ಸಿತ ಮಾರ್ಗ ಉಳ್ಳ, ದುಷ್ಟವಾದ ನಡಿಗೆಯುಳ್ಳ, ಕೆಟ್ಟ ಸೃಷ್ಟಿಗೆ ವಿಷಯರಾದ **ಖಲಯೋನಯಃ** ದುಷ್ಟವಾದ ಅಸುರಯೋನಿಯಲ್ಲಿ ಜನಿಸಿದ **ವಯಂ** ನಾವು **ಭವತಃ** ನಿನ್ನಿಂದ **ಕಸ್ಮಾತ್** ಯಾವ ಕಾರಣದಿಂದ ತಾನೇ **ಪ್ರಣೀತಾಃ ಚ** ಹೊಂದಿಸಲ್ಪಟ್ಟಿದ್ದೇವೆ?

ಸತ್ಯ ಃ- ಈ ರೀತಿ ಛಲದಿಂದ ಬಲಿಯನ್ನು ನಿಗ್ರಹಿಸಿದ ಭಗವಂತನಿಗೆ ಸ್ತುತ್ಯತೆಯು ಹೇಗೆ ಉಪಪನ್ನವಾಗುವುದು ಎಂದರೆ ಹೇಳುತ್ತಾರೆ. **ಭವತಃ** ನಿಮ್ಮ **ವಿಭೂತೀಃ** ಅವತಾರಗಳು **ಕುಸೃತಯಃ** ನ ಛಲ ಮಾರ್ಗ ಉಳ್ಳವುಗಳಲ್ಲ. ಹಾಗಾದರೆ ಹಾಗೇಕೆ ಕಾಣುವವು ಎಂದರೆ ಹೇಳುವನು. **ಖಲಾಃ ವಯಮೇವ ಯೋನಯಃ** ದುಷ್ಟರಾದ ನಾವೇ ನೀನು ಹಾಗೆ ನಡೆದುಕೊಳ್ಳಲು ಕಾರಣರಾಗಿದ್ದೇವೆ. ನಮ್ಮ ದುರಿತದಿಂದ ನೀನು ಹಾಗೆ ಮಾಡುವಿ ಎಂದು ಭಾವ. ಈ ಪಕ್ಷದಲ್ಲಿ ನಿಷೇವಣೇ ಎಂಬುದು ಸತಿ ಸಪ್ತಮೀ ಎಂದು ತಿಳಿಯಬೇಕು. ॥೭॥

ಲಿಂಗೇರೀ ಃ- ನೀನು ಅನುಗ್ರಹಿಸಿದ್ದು ನಿನ್ನ ಕರುಣೆಯೇ ಹೊರತು ಆ ನಿನ್ನ ಅನುಗ್ರಹವನ್ನು ಸಂಪಾದಿಸಲು ನಾವು ಮಾಡಿದ ಪ್ರಯತ್ನ ಏನೂ ಇಲ್ಲ. ನಮ್ಮಲ್ಲಿ ಯಾವ ಗುಣವೂ ಇಲ್ಲ. ಎಂದು ತಾತ್ಪರ್ಯ. ''ಯಮೇವೈಷ ವೃಣುತೇ ತೇನ ಲಭ್ಯಃ'' ಎಂದು ಶ್ರುತಿ ಇದೆ. (ಯಾವನನ್ನು ಭಕ್ತನೆಂದು ಸ್ವೀಕರಿಸುವನೋ ಅವನಿಗೆ ಮಾತ್ರ ಭಗವಂತ ಲಭ್ಯನಾಗುತ್ತಾನೆ.)

**ಚಿತ್ರಂ ತವೇಹಿತಮಹೋಽಮಿತಯೋಗಮಾಯಾ**
**ಲೀಲಾವಿಸೃಷ್ಟಭುವನಸ್ಯ ವಿಶಾರದಸ್ಯ ।**
**ಸರ್ವಾತ್ಮನಃ ಸಮದೃಶೋ ವಿಷಮಸ್ವಭಾವೋ**
**ಭಕ್ತಪ್ರಿಯೋ ಯದಸಿ ಕಲ್ಪತರುಸ್ವಭಾವಃ ॥೮॥**

**ಅಮಿತ** ಯಾರಿಂದಲೂ ಸಂಪೂರ್ಣ ತಿಳಿಯಲಾಗದ ಹೇ ವಾಮನನೇ **ಯೋಗಮಾಯಯಾ** ನಿನ್ನ ಸ್ವರೂಪಶಕ್ತಿಯಿಂದ **ಲೀಲಾವಿಸೃಷ್ಟಭುವನಸ್ಯ** ಅನಾಯಾಸವಾಗಿ ಅನೇಕ ರೀತಿಯಿಂದ ಸೃಷ್ಟವಾದ ಪ್ರಪಂಚ ಉಳ್ಳ **ವಿಶಾರದಸ್ಯ** ಅವರವರ ಕರ್ಮಾನುಸಾರ ಪ್ರೇರಿಸುವಲ್ಲಿ ಅತ್ಯಂತ ಕುಶಲನಾದ **ಸರ್ವಾತ್ಮನಃ** ಎಲ್ಲರ ಅಂತರ್ಯಾಮಿಯಾದ **ಸಮದೃಶಃ** ಅವರವರ ಯೋಗ್ಯತೆಗೆ ಅನುಗುಣವಾಗಿ ಅವರವರನ್ನು ಅನುಗ್ರಹಿಸುವ **ತವ** ನಿನ್ನ **ಈಹಿತಂ** ಚೆಷ್ಟೇಯು **ಚಿತ್ರಂ** ಅತ್ಯಾಶ್ಚರ್ಯಕರವಾಗಿದೆ **ಅಹೋ** ಅದ್ಭುತವು ಅದನ್ನೇ ಪ್ರತಿಪಾದಿಸುವರು. **ವಿಷಯಸ್ವಭಾವಃ** ಅವರವರಿಗೆ ಬೇರೆ ಬೇರೆ ಫಲಕೊಡುವ ಸ್ವಭಾವ ಉಳ್ಳವನು **ಅಸಿ** ಆಗಿರುವಿ **ಭಕ್ತಪ್ರಿಯಃ ಅಸಿ** ಭಕ್ತರನ್ನು ಪ್ರೀತಿಸುವವನಾಗಿರುವಿ **ಯತ್** ಯಾವ ಕಾರಣದಿಂದ **ಕಲ್ಪತರುಸ್ವಭಾವಃ** ಕಲ್ಪವೃಕ್ಷದಂತೆ ನಿನ್ನನ್ನು ಆರಾಧಿಸಿದವರಿಗೆ ಮಾತ್ರ ಅವರವರ ಆರಾಧನೆಗೆ ತಕ್ಕಂತೆ ಒಲಿಯುವನಾಗಿರುವೆಯೋ ಆ ಕಾರಣದಿಂದ ನಿನ್ನ ಚರಿತ್ರೆಯು ವಿಚಿತ್ರವೆಂದರ್ಥ.

ವಿಷಮಸ್ವಭಾವವೆಂಬುದರಿಂದ ಬಲಿ-ಪ್ರಹ್ಲಾದರಿಬ್ಬರೂ ಅಸುರಯೋನಿಯಲ್ಲಿ ಜನಿಸಿದ ಭಕ್ತರಾದರೂ ಬಲಿಗೆ ಬಂಧನಾದಿದುಃಖವನ್ನು ಭಗವಂತ ನೀಡಿದ. ಪ್ರಹ್ಲಾದನಿಗೆ ಯಾವ ವಿಧವಾದ ದುಃಖವನ್ನೂ ನಿಡಲಿಲ್ಲ. ಇದನ್ನು ನೋಡಿದರೆ ವಿಸ್ಮಯವಾಗುವುದು ಎಂದು ಸೂಚಿಸಿರುವರು. ಇದಕ್ಕೆ ಕಾರಣವೇನು ಎಂಬ ಶಂಕೆಗೆ ಭಾಗವತತಾತ್ಪರ್ಯೋ-ದಾಹೃತವಾದ ಈ ಪ್ರಮಾಣವು ಉತ್ತರಿಸುತ್ತದೆ-

**...ತಾತ್ಪರ್ಯ...**

**ಬಲಿರಪ್ಯಸುರಾವೇಶಾತ್ ಸ್ತುವನ್ನಪಿ ಜರ್ನಾದನಮ್ ।**
**ಆಕ್ಷಿಪತ್ಯಂತರಾ ಕ್ವಾಽಪಿ ಪ್ರಹ್ಲಾದೋ ನಿತ್ಯಭಕ್ತಿಮಾನ್ ॥**

ಬಲಿಯು ಪರಮಾತ್ಮನನ್ನು ಸ್ತೋತ್ರ ಮಾಡುತ್ತಿದ್ದರೂ ಅಸುರಾವೇಶದಿಂದ ಆಗಾಗ ನಿಂದಿಸುತ್ತಿದ್ದನು. ಪ್ರಹ್ಲಾದನು ಯಾವಾಗಲೂ ಭಕ್ತನೇ ಆಗಿದ್ದಾನೆ. ಆದ್ದರಿಂದ ಆಕ್ಷೇಪದ ಫಲವಾಗಿ ಬಲಿಗೆ ಬಂಧನ ಮುಂತಾದ ದುಃಖವು ಸಮುಚಿತವೆಂದು ತಿಳಿಯಬೇಕು. ||೮||

ಹೀಗೆ ಪ್ರಹ್ಲಾದನಿಂದ ಸ್ತುತನಾದ ವಾಮನನು ವಾತ್ಸಲ್ಯದಿಂದ ಹೇಳುತ್ತಾನೆ-

**ಶ್ರೀಭಗವಾನುವಾಚ**

**ವತ್ಸ ಪ್ರಹ್ಲಾದ ಭದ್ರಂ ತೇ ಪ್ರಯಾಹಿ ಸುತಲಾಲಯಮ್ ।**
**ಮೋದಮಾನಃ ಸ್ವಪೌತ್ರೇಣ ಜ್ಞಾತೀನಾಂ ಸುಖಮಾವಹ ||೯||**

**ವತ್ಸ** ಎಲೋ ಮಗುವೇ **ಪ್ರಹ್ಲಾದ** ಪ್ರಹ್ಲಾದನೇ **ತೇ** ನಿನಗೆ **ಭದ್ರಂ** ಮಂಗಳವಾಗಲಿ **ಸುತಲಾಲಯಂ** ಸುತಲವೆಂಬ ಮನೆಗೆ ಸುತಲಾತಲಂ ಎಂಬ ಪಾಠದಲ್ಲಿ ಸುತಲಲೋಕಕ್ಕೆ ಎಂದರ್ಥ. **ಪ್ರಯಾಹಿ** ಹೋಗು. ಅಲ್ಲಿ **ಸ್ವಪೌತ್ರೇಣ** ನಿನ್ನ ಮೊಮ್ಮಗನೊಂದಿಗೆ **ಮೋದಮಾನಃ** ಸಂತೋಷಪಡುವವನಾಗಿ **ಜ್ಞಾತೀನಾಂ** ನಿನ್ನವರಾದ ಅಸುರರಿಗೆ **ಸುಖಂ ಆವಹ** ಸುಖವನ್ನುಂಟು ಮಾಡು. ||೯||

**ನಿತ್ಯಂ ದ್ರಷ್ಟಾಽಸಿ ಮಾಂ ತತ್ರ ಗದಾಪಾಣಿಮವಸ್ಥಿತಮ್ ।**
**ಮದ್ದರ್ಶನಮಹಾಹ್ಲಾದಧ್ವಸ್ತಕರ್ಮನಿಬಂಧನಃ ||೧೦||**

**ತತ್ರ** ಆ ಸುತಲಲೋಕದಲ್ಲಿ **ಗದಾಪಾಣಿಂ ಅವಸ್ಥಿತಂ** ಕೈಯಲ್ಲಿ ಗದೆಯನ್ನು ಹಿಡಿದು ನಿಂತಿರುವ **ಮಾಂ** ನನ್ನನ್ನು **ನಿತ್ಯಂ** ಯಾವಾಗಲೂ **ದ್ರಷ್ಟಾ ಅಸಿ** ನೋಡುವವನಾಗುತ್ತಿ **ಮದ್ದರ್ಶನಮಹಾಹ್ಲಾದಧ್ವಸ್ತಕರ್ಮನಿಬಂಧನಃ** ನನ್ನ ದರ್ಶನದಿಂದುಂಟಾದ ಅತಿಶಯವಾದ ಆನಂದದಿಂದ ದುಷ್ಕರ್ಮದಿಂದುಂಟಾಗುವ ಬಂಧನರಹಿತನಾಗುವಿ. ದುಃಖರಹಿತನಾಗುವಿ ಎಂದರ್ಥ. ||೧೦||

ಸತ್ಯ ಃ- ಚಕ್ರವನ್ನು ಬೇರೆ ಕೆಲಸದಲ್ಲಿ ನಿಯೋಜಿಸಿದ್ದರಿಂದ ಚಕ್ರಪಾಣಿ ಎನ್ನದೇ ಗದಾಪಾಣಿ ಎಂದು ಹೇಳಿರುವರು. ''ತ್ವಚ್ಛಾಸನಾತಿಗಾನ್ ದೈತ್ಯಾನ್ ಚಕ್ರಂ ಮೇ ಸೂದಯಿಷ್ಯತಿ'' ಎಂದು ಹಿಂದೆಯೇ ಹೇಳಿದೆ.

**ಶ್ರೀಶುಕ ಉವಾಚ**

**ಆಜ್ಞಾಂ ಭಗವತೋ ರಾಜನ್ ಪ್ರಹ್ಲಾದೋ ಬಲಿನಾ ಸಹ ।**
**ಬಾಢಮಿತ್ಯಮಲಪ್ರಜ್ಞೋ ಮೂರ್ಧ್ನ್ಯಾಧಾಯ ಕೃತಾಂಜಲಿಃ ||೧೧||**

**ಹೇ ರಾಜನ್** ಪರೀಕ್ಷಿತನೇ **ಅಮಲಪ್ರಜ್ಞಃ** ದೋಷವಿಲ್ಲದ ಭಗವದ್ವಿಷಯಕವಾದ ಜ್ಞಾನ ಉಳ್ಳ **ಪ್ರಹ್ಲಾದಃ** ಪ್ರಹ್ಲಾದನು **ಬಲಿನಾ ಸಹ** ಬಲಿಯೊಡನೆ **ಭಗವತಃ ಆಜ್ಞಾಂ** ಭಗವಂತನ

ಅಪ್ಪಣೆಯನ್ನು **ಬಾಢಂ ಇತಿ** ಹಾಗೆ ಆಗಲಿ ಎಂದು **ಮೂರ್ಧ್ನಿ ಆಧಾಯ** ಶಿರಸ್ಸಿನಲ್ಲಿಟ್ಟು-ಕೊಂಡು **ಕೃತಾಂಜಲಿಃ** ಕೈ ಜೋಡಿಸಿದವನಾಗಿ ॥೧೧॥

**ಪರಿಕ್ರಮ್ಯಾದಿಪುರುಷಂ ಸರ್ವಾಸುರಚಮೂಪತಿಃ ।**
**ಪ್ರಣತಸ್ತದನುಜ್ಞಾತಃ ಪ್ರವಿವೇಶ ಮಹಾಬಿಲಮ್ ॥೧೨॥**

**ಸರ್ವಾಸುರಚಮೂಪತಿಃ** ಎಲ್ಲ ಅಸುರರ ಸೇನಾಪತಿಯಾದ ಪ್ರಹ್ಲಾದನು **ಆದಿಪುರುಷಂ** ಆದಿಪುರುಷನಾದ ವಾಮನನನ್ನು **ಪರಿಕ್ರಮ್ಯ** ಪ್ರದಕ್ಷಿಣೆ ಮಾಡಿ **ಪ್ರಣತಃ** ಭಕ್ತಿಯಿಂದ ನಮಸ್ಕಾರ ಮಾಡಿದವನಾಗಿ **ತದನುಜ್ಞಾತಃ** ಅವನಿಂದ ಅಪ್ಪಣೆ ಪಡೆದು **ಮಹಾಬಿಲಂ** ಸುತಲವನ್ನು **ಪ್ರವಿವೇಶ** ಪ್ರವೇಶಮಾಡಿದನು. ॥೧೨॥

**ಅಥ ಹೋಶನಸಂ ರಾಜನ್ ಹರಿರ್ನಾರಾಯಣೋಽಂತಿಕೇ ।**
**ಆಸೀನಮೃತ್ವಿಜಾಂ ಮಧ್ಯೇ ಸದಸಿ ಬ್ರಹ್ಮವಾದಿನಾಮ್ ॥೧೩॥**

**ರಾಜನ್** ಪರೀಕ್ಷಿತನೇ **ಅಥ** ಪ್ರಹ್ಲಾದನು ಬಲಿಯೊಂದಿಗೆ ಬಿಲಪ್ರವೇಶ ಮಾಡಿದ ನಂತರ **ಹರಿಃ** ಭಕ್ತರ ಅನಿಷ್ಟಗಳನ್ನು ಪರಿಹರಿಸಿ ಇಷ್ಟಗಳನ್ನು ತಂದುಕೊಡುವ **ನಾರಾಯಣಃ** ನಾರಾಯಣಾವತಾರನಾದ ವಾಮನನು **ಬ್ರಹ್ಮವಾದಿನಾಂ** ಶ್ರೀಹರಿಯು ಸರ್ವವೇದ-ಪ್ರತಿಪಾದ್ಯನೆಂದು ಸಮರ್ಥಿಸುತ್ತಿದ್ದ ಜ್ಞಾನಿಗಳ **ಸದಸಿ** ಸಭೆಯಲ್ಲಿ **ಋತ್ವಿಜಾಂ ಮಧ್ಯೇ** ಋತ್ವಿಜರ ನಡುವೆ **ಅಂತಿಕೇ** ಸಮೀಪದಲ್ಲಿ **ಆಸೀನಂ** ಕುಳಿತಿರುವ **ಉಶನಸಂ** ಶುಕ್ರಾಚಾರ್ಯರನ್ನು ಕುರಿತು **ಆಹ** ಹೇಳಿದನು.

**ಶ್ರೀಭಗವಾನುವಾಚ**

**ಬ್ರಹ್ಮನ್ ಸಂತನು ಶಿಷ್ಯಸ್ಯ ಕರ್ಮಚ್ಛಿದ್ರಂ ವಿತನ್ವತಃ ।**
**ಯತ್ತತ್ಕರ್ಮಸು ವೈಷಮ್ಯಂ ಬ್ರಹ್ಮದೃಷ್ಟಂ ಸಮಂ ಭವೇತ್ ॥೧೪॥**

**ಹೇ ಬ್ರಹ್ಮನ್** ಬ್ರಹ್ಮಜ್ಞಾನಿಗಳಾದ ಶುಕ್ರಾಚಾರ್ಯರೇ **ಶಿಷ್ಯಸ್ಯ** ನಿಮ್ಮ ಶಿಷ್ಯನಾದ ಬಲಿಯು **ಕರ್ಮ ವಿತನ್ವತಃ** ಯಜ್ಞ ಮಾಡುತ್ತಿರಲು **ಯತ್ ಛಿದ್ರಂ** ಆಗಿರುವ ಕರ್ಮಲೋಪವನ್ನು **ಸಂತನು** ಪ್ರಾಯಶ್ಚಿತ್ತ ಹೋಮದಿಂದ ಪೂರ್ಣಫಲ ಕೊಡುವ ಹಾಗೆ ಮಾಡು. **ಯತ್ ಕರ್ಮಸು ವೈಷಮ್ಯಂ** ಕರ್ಮಗಳಲ್ಲಿ ಯಾವ ನ್ಯೂನತೆ ಲೋಪವು ಇದೆಯೋ **ತತ್** ಆ ಲೋಪವು **ಬ್ರಹ್ಮದೃಷ್ಟಂ** ಬ್ರಾಹ್ಮಣರು ನೋಡಿದ್ದಾದರೆ **ಸಮಂ ಭವೇತ್** ಪೂರ್ಣಫಲಕೊಡುವ ಯೋಗ್ಯತೆಯುಳ್ಳದ್ದಾಗುತ್ತದೆ.

♦ ಬ್ರಾಹ್ಮಣರು ನೋಡಿದರೇ ಕರ್ಮ ಪೂರ್ಣವಾಗುತ್ತದೆಂದ ಮೇಲೆ ಆ ಬ್ರಾಹ್ಮಣರು ಅನುಷ್ಠಾನ ಮಾಡಿದರೆ ಪೂರ್ಣಫಲಪ್ರದ ಎಂಬುದು ಕೈಮುತ್ಯಸಿದ್ಧ. ಆದ್ದರಿಂದ ನಿಮ್ಮ ಶಿಷ್ಯನ ಕರ್ಮವೈಷಮ್ಯವನ್ನು **ಸಂತನು** ಹೋಗುವಂತೆ ಮಾಡು. ಅಥವಾ

**ಬ್ರಹ್ಮದೃಷ್ಟಂ** ಕರ್ಮದಲ್ಲಿ ಬ್ರಹ್ಮಸ್ಥಾನದಲ್ಲಿ ಕುಳಿತಿರುವ ಜ್ಞಾನಿಯಿಂದ ಕಂಡು ಹಿಡಿಯಲ್ಪಟ್ಟ ವೈಷಮ್ಯವನ್ನು ಪೂರ್ಣಮಾಡು ಎಂದಾದರೂ ಅರ್ಥ. ||೧೪||

ಲೋಪವಿದ್ದರೆ ಅದರ ಪರಿಹಾರ ಮಾಡಬೇಕು. ಪ್ರಕೃತ ಯಾವ ಲೋಪವೂ ಇಲ್ಲ. ಎಂಬುದನ್ನು ಸಕಾರಣವಾಗಿ ಶುಕ್ರಾಚಾರ್ಯರು ಹೇಳುತ್ತಾರೆ-

**ಶ್ರೀಶುಕ್ರ ಉವಾಚ**

**ಕುತಸ್ತತ್ಕರ್ಮವೈಷಮ್ಯಂ ಯಸ್ಯ ಕರ್ಮೇಶ್ವರೋ ಭವಾನ್ ।**
**ಯಜ್ಞೇಶೋ ಯಜ್ಞಪುರುಷಃ ಸರ್ವಭಾವೇನ ಪೂಜಿತಃ ||೧೫||**

**ಯಜ್ಞೇಶಃ** ಎಲ್ಲ ಯಜ್ಞಗಳಿಗೆ ನಿಯಾಮಕನಾದ **ಯಜ್ಞಪುರುಷಃ** ಯಜ್ಞನಾಮಕನಾದ, ಪೂರ್ಣಷಡ್ಗುಣನಾದ **ಕರ್ಮೇಶ್ವರಃ** ಸಕಲಕರ್ಮಸ್ವಾಮಿಯಾದ, ಫಲದಾತೃವಾದ ಎಂದು ಭಾವ **ಭವಾನ್** ನೀನು **ಯಸ್ಯ** ಯಾವನಿಂದ **ಸರ್ವಭಾವೇನ** ಆತ್ಮಾರ್ಪಣ ಮುಂತಾದ ಎಲ್ಲ ರೀತಿಯಿಂದ **ಪೂಜಿತಃ** ಪೂಜಿಸಲ್ಪಟ್ಟಿರುವಿಯೋ **ತತ್ ಕರ್ಮವೈಷಮ್ಯಂ ಕುತಃ** ಆ ಕರ್ಮದಲ್ಲಿ ವೈಷಮ್ಯ ಏಕೆ ಬರುವುದು? ಸರ್ವಥಾ ಬರಲಾರದು.

ಪರೋಕ್ಷವಾಗಿ ಯಾವನ ಪ್ರೀತ್ಯರ್ಥ ಕರ್ಮ ಮಾಡುತ್ತೇವೆಯೋ ಅವನೇ ಎದುರಿಗೆ ಇರುವಾಗ ಏನು ದೋಷ ಬರುವುದು? ಯಾವ ದೋಷವೂ ಬರಲಾರದು ಎಂದು ಭಾವ. ||೧೫||

**ಮಂತ್ರತಸ್ತಂತ್ರತಶ್ಛಿದ್ರಂ ದೇಶಕಾಲಾರ್ಹವಸ್ತುತಃ ।**
**ಸರ್ವಂ ಕರೋತಿ ನಿಶ್ಛಿದ್ರಮನುಸಂಕೀರ್ತನಂ ತವ ||೧೬||**

**ತವ** ಸರ್ವೋತ್ತಮನಾದ ನಿನ್ನ **ಅನುಸಂಕೀರ್ತನಂ** ಭಕ್ತಿಪೂರ್ವಕವಾದ ನಾಮೋಚ್ಚಾರಣವು **ಮಂತ್ರತಃ** ಮಂತ್ರೋಚ್ಚಾರಣಾದಿಗಳಿಂದ **ತಂತ್ರತಃ** ಕ್ರಿಯೆಗಳಿಂದ **ದೇಶಕಾಲಾರ್ಹವಸ್ತುತಃ** ಸ್ಥಾನವ್ಯತ್ಯಾಸದಿಂದ, ಕಾಲವ್ಯತ್ಯಾಸದಿಂದ ಹೋಮಾರ್ಹವಸ್ತುಗಳ ವ್ಯತ್ಯಾಸದಿಂದ ಆದ **ಛಿದ್ರಂ** ದೋಷವನ್ನು **ಸರ್ವಂ** ಎಲ್ಲವನ್ನು ಅಚ್ಯುತಾಯ ನಮಃ ಅನಂತಾಯ ನಮಃ ಗೋವಿಂದಾಯ ನಮಃ ಮುಂತಾದ ಸಂಕೀರ್ತನವು **ನಿಶ್ಛಿದ್ರಂ ಕರೋತಿ** ದೋಷರಹಿತವನ್ನಾಗಿ ಮಾಡುತ್ತದೆ. ಅಂದ ಮೇಲೆ ನಾನು ಬೇರೇನು ಮಾಡಬೇಕು?

ಸತ್ಯ :- ಕೀರ್ತನದ ಶಕ್ತಿಯೇ ಇಷ್ಟಿರುವಾಗ ಕೀರ್ತನೀಯನಾದ ನಿನ್ನ ಶಕ್ತಿ ಎಷ್ಟೆಂದು ಏನು ಹೇಳುವುದು ಎಂದು ಭಾವ.

ಛಲಾರೀ :- ನಾಮಸಂಕೀರ್ತನವೇ ದೋಷಪರಿಹರಿಸುವಾಗ ಬಲಿಯು ಮಾಡಿದ ನಿನ್ನ ಪೂಜೆ ದೋಷಗಳನ್ನು ಪರಿಹರಿಸುತ್ತದೆಂದೇನು ಹೇಳುವುದು. ||೧೬||

**ತಥಾऽಪಿ ವದತೋ ಭೂಮನ್ ಕರಿಷ್ಯಾಮ್ಯನುಶಾಸನಮ್ ।**
**ಏತಚ್ಛ್ರೇಯಃ ಪರಂ ಪುಂಸಾಂ ಯತ್ ತವಾಜ್ಞಾನುಪಾಲನಮ್ ॥೧೭॥**

**ಹೇ ಭೂಮನ್** ದೇಶ-ಕಾಲ-ಗುಣಗಳಿಂದ ಪೂರ್ಣನಾದ ವಾಮನನೇ **ತಥಾऽಪಿ** ಮೇಲೆ ಹೇಳಿದಂತೆ ಕರ್ಮವು ಪೂರ್ಣವಾಗಿದ್ದರೂ **ವದತಃ** ಪ್ರಾಯಶ್ಚಿತ್ತಾದಿಗಳನ್ನು ಮಾಡಿ ಪೂರ್ಣಗೊಳಿಸು ಎಂದು ಹೇಳುತ್ತಿರುವ **ತವ ಅನುಶಾಸನಂ** ನಿನ್ನ ಆಜ್ಞೆಯಂತೆ **ಕರಿಷ್ಯಾಮಿ** ಮಾಡುವೆನು. **ಏತತ್** ನೀನು ಹೇಳಿದ ಕಾರ್ಯವನ್ನು ಮಾಡುವುದೇ **ಪುಂಸಾಂ** ಭಕ್ತಜನರಿಗೆ **ಪರಂ** ಅತ್ಯುತ್ತಮವಾದ **ಶ್ರೇಯಃ** ಮೋಕ್ಷಸಾಧನವಾಗಿದೆ. ॥೧೭॥

**ಶ್ರೀಶುಕ ಉವಾಚ**

**ಅಭಿನಂದ್ಯ ಹರೇರಾಜ್ಞಾಮುಶನಾ ಭಗವಾನಿತಿ ।**
**ಯಜ್ಞಚ್ಛಿದ್ರಂ ಸಮತನೋದ್ ಬಲೇರ್ವಿಪ್ರರ್ಷಿಭಿಃ ಸಹ ॥೧೮॥**

**ಭಗವಾನ್ ಉಶನಾಃ** ಪೂಜ್ಯರಾದ ಶುಕ್ರಾಚಾರ್ಯರು **ಇತಿ** ಮೇಲೆ ಹೇಳಿದಂತೆ **ಹರೇಃ ಆಜ್ಞಾಂ ಅಭಿನಂದ್ಯ** ಶ್ರೀಹರಿಯ ಆಜ್ಞೆಯನ್ನು ಪ್ರಶಂಸಿಸಿ ಸಂತೋಷದಿಂದ ಅಂಗೀಕರಿಸಿ **ವಿಪ್ರರ್ಷಿಭಿಃ ಸಹ** ಬ್ರಹ್ಮಜ್ಞಾನಿಗಳಾದ ಬ್ರಾಹ್ಮಣರೊಡನೆ **ಬಲೇಃ** ಬಲಿರಾಜನ **ಯಜ್ಞಚ್ಛಿದ್ರಂ** ಯಜ್ಞದಲ್ಲಿ ಉಂಟಾಗಿದ್ದ ನ್ಯೂನತೆಯನ್ನು **ಸಮತನೋತ್** ಪರಿಹರಿಸುವ ಪ್ರಾಯಶ್ಚಿತ್ತ ಹೋಮ ಮಾಡಿ ಯಜ್ಞವನ್ನು ಪೂರ್ಣಗೊಳಿಸಿದರು. ॥೧೮॥

**ಏವಂ ಬಲೇರ್ಮಹೀಂ ರಾಜನ್ ಭಿಕ್ಷಿತ್ವಾ ವಾಮನೋ ಹರಿಃ ।**
**ದದೌ ಭ್ರಾತ್ರೇ ಮಹೇಂದ್ರಾಯ ತ್ರಿದಿವಂ ಯತ್ಪರೈರ್ಹೃತಮ್ ॥೧೯॥**

**ಹೇ ರಾಜನ್** ಪರೀಕ್ಷಿತನೇ **ವಾಮನಃ ಹರಿಃ** ವಾಮನರೂಪಿಯಾದ ಶ್ರೀಹರಿಯು **ಏವಂ** ಹಿಂದೆ ಹೇಳಿದಂತೆ **ಬಲೇಃ** ಬಲಿಯಿಂದ **ಮಹೀಂ** ಭೂಮಿಯನ್ನು **ಭಿಕ್ಷಿತ್ವಾ** ಬೇಡಿ **ಪರೈಃ** ಶತ್ರುಗಳಿಂದ **ಹೃತಂ** ಅಪಹರಿಸಲ್ಪಟ್ಟ **ಯತ್ ತ್ರಿದಿವಂ** ಯಾವ ಸ್ವರ್ಗವಿದೆಯೋ **ತತ್** ಅದನ್ನು **ಭ್ರಾತ್ರೇ** ಅಣ್ಣನಾದ **ಮಹೇಂದ್ರಾಯ** ಪುರಂದರನೆಂಬ ಇಂದ್ರನಿಗೆ **ದದೌ** ಕೊಟ್ಟನು.

**ಪ್ರಜಾಪತಿಪತಿರ್ಬ್ರಹ್ಮಾ ದೇವರ್ಷಿಪಿತೃಭೂಮಿಪೈಃ ।**
**ದಕ್ಷಭೃಗ್ವಂಗಿರೋಮುಖ್ಯೈಃ ಕುಮಾರೇಣ ಭವೇನ ಚ ॥೨೦॥**

**ಕಶ್ಯಪಸ್ಯಾದಿತೇಃ ಪ್ರೀತ್ಯೈ ಸರ್ವಭೂತಭವಾಯ ಚ ।**
**ಲೋಕಾನಾಂ ಲೋಕಪಾಲಾನಾಮಕರೋದ್ ವಾಮನಂ ಪತಿಮ್ ॥೨೧॥**

**ಪ್ರಜಾಪತಿಪತಿಃ** ದಕ್ಷ-ಮರೀಚಿ ಮೊದಲಾದ ಪ್ರಜೇಶ್ವರರಿಗೆ ಅಧಿಪತಿಗಳಾದ **ಬ್ರಹ್ಮಾ** ಬ್ರಹ್ಮದೇವರು **ದೇವರ್ಷಿಪಿತೃಭೂಮಿಪೈಃ** ದೇವತೆಗಳಿಂದಲೂ ಋಷಿಗಳಿಂದಲೂ

ಪಿತೃಗಳಿಂದಲೂ ಚಕ್ರವರ್ತಿಗಳಿಂದಲೂ **ದಕ್ಷಭೃಗ್ವಂಗಿರೋಮುಖ್ಯೈಃ** ದಕ್ಷ-ಭೃಗು-ಆಂಗೀರಸ ಮೊದಲಾದವರಿಂದಲೂ **ಕುಮಾರೇಣ** ಷಣ್ಮುಖನಿಂದಲೂ **ಭವೇನ ಚ** ರುದ್ರದೇವರಿಂದಲೂ ಕೂಡಿಕೊಂಡು **ಕಶ್ಯಪಸ್ಯ ಅದಿತೇಃ** ಕಶ್ಯಪರ ಮತ್ತು ಅದಿತಿಯ **ಪ್ರೀತ್ಯೈ** ಪ್ರೀತಿಗಾಗಿ **ಚ** ಮತ್ತು **ಸರ್ವಭೂತಭವಾಯ** ಎಲ್ಲ ಪ್ರಾಣಿಗಳ ಮಂಗಳಕ್ಕಾಗಿ (**ಸರ್ವಭೂತಾಭಯಾಯ** ಎಂಬ ಪಾಠದಲ್ಲಿ ಎಲ್ಲರ ಅಭಯಕ್ಕಾಗಿ ಎಂದು ಅರ್ಥ) **ವಾಮನಂ** ವಾಮನನನ್ನು **ಲೋಕಾನಾಂ** ಲೋಕಗಳಿಗೂ **ಲೋಕಪಾಲಾನಾಂ** ಲೋಕಪಾಲಕರಿಗೂ **ಪತಿಂ** ಅಧಿಪತಿಯನ್ನಾಗಿ **ಅಕರೋತ್** ಮಾಡಿದರು. ।।೨೦-೨೧।।

ಲೋಕಗಳಿಗೆ ಅಧಿಪತಿಯಾಗಿ ಇಂದ್ರನಿರುವಾಗ ಬ್ರಹ್ಮನು ವಾಮನನನ್ನು ಪತಿಯನ್ನಾಗಿ ಯಾಕೆ ಮಾಡಿದ ಎಂದರೆ ಹೇಳುವರು-

**ದೇವಾನಾಂ ಸರ್ವವೇದಾನಾಂ ಧರ್ಮಸ್ಯ ಯಶಸಃ ಶ್ರಿಯಃ ।**
**ಮಂಗಲಾನಾಂ ವ್ರತಾನಾಂ ಚ ಕಲ್ಪಂ ಸ್ವರ್ಗಾಪವರ್ಗಯೋಃ ।।೨೨।।**

**ಉಪೇಂದ್ರಂ ಕಲ್ಪಯಾಂಚಕ್ರೇ ಪತಿಂ ಸರ್ವವಿಭೂತಯೇ ।**
**ಪದಾ ಸರ್ವಾಣಿ ಭೂತಾನಿ ಭೃಶಂ ಮುಮುದಿರೇ ನೃಪ ।।೨೩।।**

**ಹೇ ನೃಪ** ರಾಜನೇ **ಯದಾ** ಯಾವಾಗ **ದೇವಾನಾಂ** ದೇವತೆಗಳಿಗೂ **ಸರ್ವವೇದಾನಾಂ** ಎಲ್ಲ ವೇದಗಳಿಗೂ **ಧರ್ಮಸ್ಯ** ಧರ್ಮಕ್ಕೂ **ಯಶಸಃ** ಕೀರ್ತಿಗೂ **ಶ್ರಿಯಃ** ಸಂಪತ್ತಿಗೂ **ಮಂಗಲಾನಾಂ** ಮಂಗಳಗಳಿಗೂ **ವ್ರತಾನಾಂ** ಶುಭವಾದ ವ್ರತಗಳಿಗೂ **ಸ್ವರ್ಗಾಪವರ್ಗಯೋಃ** ಸ್ವರ್ಗ ಹಾಗೂ ಮೋಕ್ಷಗಳಿಗೆ ಹೆಚ್ಚೇನು **ಸರ್ವವಿಭೂತಯೇ** ಅವರವರ ಯೋಗ್ಯತೆಗೆ ಅನುಗುಣವಾದ ಸರ್ವವಿಧವಾದ ಐಶ್ವರ್ಯಪ್ರಾಪ್ತಿಗಾಗಿ **ಕಲ್ಪಂ** ಎಲ್ಲರ ರಕ್ಷಣೆಯಲ್ಲಿ ಸಮರ್ಥನಾದ **ಉಪೇಂದ್ರಂ** ಉಪೇಂದ್ರನನ್ನು **ಪತಿಂ ಕಲ್ಪಯಾಂಚಕ್ರೇ** ಪಾಲಕನನ್ನಾಗಿ ಮಾಡಿದರೋ **ತದಾ** ಆಗ **ಸರ್ವಾಣಿ ಭೂತಾನಿ** ಎಲ್ಲ ಪ್ರಾಣಿಗಳು **ಭೃಶಂ** ಬಹಳವಾಗಿ **ಮುಮುದಿರೇ** ಸಂತಸಗೊಂಡರು. ।।೨೨-೨೩।।

ಇಂದ್ರನ ಸಂರಕ್ಷಣೆಗಾಗಿಯೇ ವಾಮನನನ್ನು ಪತಿಯಾಗಿ ಮಾಡಿದ್ದು ಆದ್ದರಿಂದ ಇದರಿಂದ ಇಂದ್ರನಿಗಾಗಲೀ ಇತರರಿಗಾಗಲೀ ಅನಿಷ್ಟವಿಲ್ಲವೆಂದು ಅಭಿಪ್ರಾಯ.

**ತತಸ್ತ್ವಿಂದ್ರಃ ಪುರಸ್ಕೃತ್ಯ ದೇವಯಾನೇನ ವಾಮನಮ್ ।**
**ಲೋಕಪಾಲೈರ್ದಿವಂ ನಿನ್ಯೇ ಬ್ರಹ್ಮಣಾ ಚಾಽನುಮೋದಿತಃ ।।೨೪।।**

**ಇಂದ್ರಃ ತು** ಇಂದ್ರದೇವನಾದರೂ **ಬ್ರಹ್ಮಣಾ ಅನುಮೋದಿತಃ** ಬ್ರಹ್ಮದೇವರಿಂದ ಅಪ್ಪಣೆ ಪಡೆದು **ಲೋಕಪಾಲೈಃ** ಲೋಕಪಾಲಕರಿಂದ ಕೂಡಿಕೊಂಡು **ವಾಮನಂ** ವಾಮನನನ್ನು **ಪುರಸ್ಕೃತ್ಯ** ಮುಂದೆ ಮಾಡಿಕೊಂಡು **ತತಃ ಚ** ಯಜ್ಞಶಾಲೆಯಿಂದ **ದೇವಯಾನೇನ**

ದೇವತೆಗಳ ವಾಹನದಿಂದ ದೇವಮಾರ್ಗದಿಂದ **ದಿವಂ ನಿನ್ಯೇ** ಸ್ವರ್ಗಕ್ಕೆ ಕರೆದೊಯ್ದನು. ।।೨೪।।

**ಆಪ್ಯ ತ್ರಿಭುವನಂ ಚೇಂದ್ರ ಉಪೇಂದ್ರಭುಜಪಾಲಿತಮ್ ।**
**ಶ್ರಿಯಾ ಪರಮಯಾ ಜುಷ್ಟೋ ಮುಮುದೇ ಗತಸಾಧ್ವಸಃ ।।೨೫।।**

**ಇಂದ್ರಃ** ಇಂದ್ರದೇವರು **ಉಪೇಂದ್ರಭುಜಪಾಲಿತಂ** ಉಪೇಂದ್ರನ ಬಾಹುಗಳಿಂದ ರಕ್ಷಿತವಾದ **ತ್ರಿಭುವನಂ** ಮೂರು ಲೋಕಗಳನ್ನು **ಪ್ರಾಪ್ಯ** ತಿರುಗಿ ಪಡೆದು **ಪರಮಯಾ ಶ್ರಿಯಾ ಜುಷ್ಟಃ** ಬಹು ಸಂಪತ್ತಿನಿಂದ ಕೂಡಿದವರಾಗಿ **ಗತಸಾಧ್ವಸಃ** ಭಯರಹಿತರಾಗಿ **ಮುಮುದೇ** ಸಂತೋಷಪಟ್ಟರು. ।।೨೫।।

**ಬ್ರಹ್ಮಾ ಶರ್ವಃ ಕುಮಾರಶ್ಚ ಭೃಗ್ವಾದ್ಯಾ ಮುನಯೋ ನೃಪ ।**
**ಪಿತರಃ ಸರ್ವಭೂತಾನಿ ಸಿದ್ಧಾ ವೈಮಾನಿಕಾಶ್ಚ ಯೇ ।।೨೬।।**

**ಸುಮಹತ್ ಕರ್ಮ ತದ್ವಿಷ್ಣೋರ್ಗಾಯಂತಃ ಪರಮಾದ್ಭುತಮ್ ।**
**ಧಿಷ್ಣ್ಯಾನಿ ಸ್ವಾನಿ ತೇ ಜಗ್ಮುರದಿತಿಂ ಚ ಶಶಂಸಿರೇ ।।೨೭।।**

**ಹೇ ನೃಪ** ರಾಜನೇ **ಬ್ರಹ್ಮಾ** ಬ್ರಹ್ಮದೇವರು **ಶರ್ವಃ** ರುದ್ರದೇವರು **ಕುಮಾರಃ** ಸ್ಕಂದನು **ಚ** ಮತ್ತು **ಭೃಗ್ವಾದ್ಯಾಃ ಮುನಯಃ** ಭೃಗು ಮೊದಲಾದ ಋಷಿಗಳು **ಪಿತರಃ** ಪಿತೃಗಳು **ಸರ್ವಭೂತಾನಿ** ಎಲ್ಲ ಪ್ರಾಣಿಗಳು **ಸಿದ್ಧಾಃ** ಸಿದ್ಧರು **ಚ** ಮತ್ತು **ಯೇ ವೈಮಾನಿಕಾಃ** ವಿಮಾನದಲ್ಲಿ ಸಂಚರಿಸುವ ಜನರಾರೋ **ತೇ** ಅವರೆಲ್ಲರೂ,

**ಪರಮಾದ್ಭುತಂ** ಅತ್ಯಂತ ಆಶ್ಚರ್ಯಕರವಾದ **ವಿಷ್ಣೋಃ** ಆ ಶ್ರೀಹರಿಯ **ತತ್ ಸುಮಹತ್ ಕರ್ಮ** ಬಲಿಯ ಉದ್ಧಾರರೂಪವಾದ ಮತ್ತೊಬ್ಬರು ಮಾಡಲಾಗದ ಮಹಾಕಾರ್ಯವನ್ನು **ಗಾಯಂತಃ** ಹಾಡುತ್ತಾ **ಸ್ವಾನಿ** ತಮ್ಮ **ಧಿಷ್ಣ್ಯಾನಿ** ಮನೆಗಳನ್ನು ಸ್ಥಾನಗಳನ್ನು **ಜಗ್ಮುಃ ಚ** ಸೇರಿದರು ಮತ್ತು **ಅದಿತಿಂ ಚ ಶಶಂಸಿರೇ** ಇದಕ್ಕೆ ಕಾರಣಳಾದ ಅದಿತಿಯನ್ನು ಹೊಗಳಿದರು. ।।೨೬-೨೭।।

**ಸರ್ವಮೇತನ್ಮಯಾಖ್ಯಾತಂ ಭವತಃ ಕುಲ(ರು) ನಂದನ ।**
**ಉರುಕ್ರಮಸ್ಯ ಚರಿತಂ ಶ್ರೋತೄಣಾಮಘಮೋಚನಮ್ ।।೨೮।।**

**ಭವತಃ** ನಿನ್ನ **ಕುಲನಂದನ** (ಕುರುನಂದನ) ಕುರುಕುಲವನ್ನೇ ಸಂತೋಷ ಪಡಿಸುವ ಪರೀಕ್ಷಿತನೇ **ಶ್ರೋತೄಣಾಂ** ಕೇಳುವವರ **ಅಘನಾಶನಂ** ಪಾಪಗಳನ್ನು ಸಂಸಾರವನ್ನೂ ಪರಿಹರಿಸುವ **ಉರುಕ್ರಮಸ್ಯ** ಮಹಾಪರಾಕ್ರಮಿಯಾದ ವಿಷ್ಣುವಿನ ತ್ರಿವಿಕ್ರಮನ **ಸರ್ವಂ** ಎಲ್ಲ **ಏತತ್** ಈ **ಚರಿತಂ** ಚರಿತ್ರೆಯು **ಮಯಾ** ನನ್ನಿಂದ **ಭವತಃ** ನಿನಗೆ **ಆಖ್ಯಾತಂ** ಹೇಳಲ್ಪಟ್ಟಿತು.

ಸತ್ಯ ಃ- ಸರ್ವಂ ಎಂಬುದು ಕಾಕುವಾಗಿದೆ. ಎಲ್ಲ ಹೇಳಿಲ್ಲ. ಕಿಂತು ಅಲ್ಪವೇ ಹೇಳಿದ್ದೇನೆ ಎಂದು ಅರ್ಥ. ಸರ್ವಂ ಆಖ್ಯಾತಂ ಎಂಬ ಪದಗಳನ್ನು ಆವರ್ತನ ಮಾಡಿಕೊಳ್ಳಬೇಕು. ಸರ್ವಂ ಆಖ್ಯಾತಂ ಎಂಬಲ್ಲಿ ಸರ್ವ ಎಂಬ ಶಬ್ದಕ್ಕೆ ಎಲ್ಲವೂ ಅಂತಲೇ ಅರ್ಥ. ಆದರೆ ನನ್ನ ನಿನ್ನ ಯೋಗ್ಯತೆಗೆ ಅನುಗುಣವಾಗಿ ಎಲ್ಲವನ್ನು ಹೇಳಿದ್ದೇನೆ. ಎಂದು ಅರ್ಥ. ಎರಡನೆಯ ಬಾರಿಯ ಸರ್ವಂ ಎಂಬ ಪದ ಕಾಕುವಾಗಿದೆ. ಸರ್ವಂ ಎಂದರೆ ಅಲ್ಪ ಎಂದರ್ಥ. ನನ್ನ ನಿನ್ನ ಯೋಗ್ಯತೆಗೆ ಅನುಗುಣವಾಗಿ ವಾಮನನ ಎಲ್ಲ ಚರಿತೆಯನ್ನು ತಿಳಿದಿದ್ದರೂ ಕೂಡಾ ಅದು ಅಲ್ಪವೇ ಹೇಳಲ್ಪಟ್ಟಿದೆ ಎಂದು ಅರ್ಥವನ್ನು ತಿಳಿಯಬೇಕು.

ವಾಮನನ ಅಲ್ಪವಾದ ಚರಿತ್ರೆಯೇ ಹೇಳಲಾಗಿದೆ ಎಂದರೆ ಉಳಿದ ಚರಿತ್ರೆಯನ್ನು ಪೂರ್ಣವಾಗಿ ಹೇಳಿರಿ ಎಂದು ಕೇಳಿದರೆ, ಪೂರ್ಣವಾದ ಚರಿತ್ರೆಯನ್ನು ಹೇಳಲಾಗುವುದಿಲ್ಲ ಎಂಬುದನ್ನು ಹೇಳುತ್ತಾ ಆ ವಿಷಯದಲ್ಲಿ ಪ್ರಮಾಣವನ್ನೂ ತಿಳಿಸುತ್ತಿದ್ದಾರೆ-

**ಪಾರಂ ಮಹಿಮ್ನ ಉರುವಿಕ್ರಮತೋ ಮುರಾರೇ-**
**ರ್ಯಃ ಪಾರ್ಥಿವಾನ್ಯಪಿ ಕವಿರ್ವಿಮಮೇ ರಜಾಂಸಿ ।**
**ಕಿಂ ಜಾಯಮಾನ ಉತ ಜಾತ ಉಪೈತಿ ಮರ್ತ್ಯಃ**
**ಇತ್ಯಾಹ ಮಂತ್ರದೃಗೃಷಿಃ ಪುರುಷಸ್ಯ ಯಸ್ಯ ॥೨೯॥**

**ಮಂತ್ರದೃಕ್** ''ವಿಷ್ಣೋರ್ನು ಕಂ ವೀರ್ಯಾಣಿ ಪ್ರವೋಚಂ'' ಎಂಬ ವಿಷ್ಣುಸೂಕ್ತಮಂತ್ರವನ್ನು ಕಂಡ **ಋಷಿಃ** ಋಷಿಗಳು **ಯಃ** ಯಾವ **ಕವಿಃ** ತ್ರಿಕಾಲದರ್ಶಿಯಾದ ಜ್ಞಾನಿಯು **ಮರ್ತ್ಯಃ** ಪರಿಮಿತವಾದ ಆಯುಷ್ಯ ಉಳ್ಳ ಮನುಷ್ಯನು **ಜಾಯಮಾನಃ** ಈಗ ಹುಟ್ಟಿರುವ **ಜಾತಃ** ಹಿಂದೆ ಹುಟ್ಟಿದ್ದ **ಉತ** ಮುಂದೆ ಹುಟ್ಟುವ ಅಧಿಕಾರಿಯಾದ ಚೇತನನು **ಪಾರ್ಥಿವಾನಿ** ಭೂಮಿಯ **ರಜಾಂಸಿ** ಧೂಳಿನ ಕಣಗಳನ್ನು **ವಿಮಮೇ ಅಪಿ** ಏಣಿಸುತ್ತಾನಾದರೂ **ಯಸ್ಯ** ಯಾವ **ಪುರುಷಸ್ಯ** ಪುರುಷನಾಮಕನಾದ **ಉರುವಿಕ್ರಮತಃ** ಎಲ್ಲರ ಮಹಿಮೆಗಿಂತಲೂ ಅತಿಶಯವಾಗಿ ಪರಾಕ್ರಮವನ್ನು ತೋರುವ **ಮುರಾರೇಃ** ಶ್ರೀಹರಿಯ **ಮಹಿಮ್ನಃ** ಮಹಿಮೆಗಳ **ಪಾರಂ** ಕೊನೆಯನ್ನು **ಉಪೈತಿ ಕಿಂ** ಹೊಂದುವುನೇನು? ಸರ್ವಥಾ ಹೊಂದುವುದಿಲ್ಲ. **ಇತಿ** ಎಂದು **ಆಹ** ತಾವು ಕಂಡ ಮಂತ್ರದ ಮೂಲಕ ತಿಳಿಸಿರುವರು.

ಮುರಾರೇಃ ಎಂಬುದರಿಂದ ಪುರುಷನು ಯಾರೆಂಬುದನ್ನು ಉರುವಿಕ್ರಮತಃ ಎಂಬುದರಿಂದ ಅವನು ಸಾಮಾನ್ಯ ಯಾದುವಂಶತಿಲಕನಲ್ಲವೆಂದೂ ಸೂಚಿಸಿರುವರು.

ವಿಮಾತಿ ಎಂಬರ್ಥದಲ್ಲಿ ವಿಮಮೇ ಎಂದು ಪ್ರಯೋಗಿಸಿದ್ದಾರೆ. ''ವ್ಯತ್ಯಯೋ ಬಹುಲಮ್'' ಛಂದಸ್ಸಿನಲ್ಲಿ ಅಲ್ಲಲ್ಲಿ ಪ್ರಯೋಗವ್ಯತ್ಯಾಸಗಳು ಉಂಟೆಂಬ ನಿಯಮವನ್ನು ಅನುಸರಿಸಿ ಈ ಪ್ರಯೋಗವೆಂದು ತಿಳಿಯಬೇಕು. ॥೨೯॥

**ಯ ಇದಂ ದೇವದೇವಸ್ಯ ಹರೇರದ್ಭುತಕರ್ಮಣಃ**
**ಅವತಾರಾನುಚರಿತಂ ಶೃಣ್ವನ್ ಯಾತಿ ಪರಾಂ ಗತಿಮ್ ।।೩೦।।**

**ಯಃ** ಯಾವನು **ದೇವದೇವಸ್ಯ** ಬ್ರಹ್ಮಾದಿಗಳಿಗೆ ಆರಾಧ್ಯದೇವನಾದ **ಅದ್ಭುತಕರ್ಮಣಃ** ಆಶ್ಚರ್ಯಕರವಾದ ಕಾರ್ಯಗಳನ್ನು ಮಾಡುವ **ಹರೇಃ** ಶ್ರೀಹರಿಯ **ಇದಂ ಅವತಾರಾನುಚರಿತಂ** ಈ ವಾಮನಾವತಾರಚರಿತ್ರೆಯನ್ನು **ಶೃಣ್ವನ್** ಕೇಳುತ್ತಾ ಇರುತ್ತಾನೋ ಅವನು **ಪರಾಂ ಗತಿಂ ಯಾತಿ** ಅತ್ಯುತ್ತಮ ಸ್ಥಾನವಾದ ವೈಕುಂಠವನ್ನು ಹೊಂದುತ್ತಾನೆ. ।।೩೦।।

ಎಲ್ಲ ಕರ್ಮಗಳನ್ನು ಮಾಡುವಾಗ ಈ ಚರಿತ್ರೆಯನ್ನು ಹೇಳಿದರೆ ಆ ಕರ್ಮವು ಸಂಪೂರ್ಣ ಫಲಪ್ರದವಾಗುವುದು ಎಂದು ಹೇಳುವರು-

**ಕ್ರಿಯಮಾಣೇ ಕರ್ಮಣೀದಂ ದೈವೇ ಪಿತ್ರ್ಯೇಽಥ ಮಾನುಷೇ ।**
**ಯತ್ರ ಯತ್ರಾಽನುಕೀರ್ತ್ಯೇತ ತತ್ತೇಷಾಂ ಸುಕೃತಂ ವಿದುಃ ।।೩೧।।**

**।। ಇತಿ ಶ್ರೀಮದ್ಭಾಗವತೇ ಅಷ್ಟಮಸ್ಕಂಧೇ ಏಕವಿಂಶೋಽಧ್ಯಾಯಃ ।।**

**ದೈವೇ** ದೇವತಾಸಂಬಂಧಿಯಾದ **ಪಿತ್ರ್ಯೇ** ಪಿತೃಶ್ರಾದ್ಧಮುಂತಾದ **ಅಥ** ಮತ್ತು **ಮಾನುಷೇ** ಬ್ರಾಹ್ಮಣಾದಿ ಸತ್ಕಾರರೂಪವಾದ **ಕರ್ಮಣಿ** ಕಾರ್ಯಗಳಲ್ಲಿ **ಇದಂ** ಈ ವಾಮನಚರಿತ್ರೆಯು **ಯತ್ರ ಯತ್ರ** ಯಾವ ಯಾವ ಪ್ರಸಂಗಗಳಲ್ಲಿ **ಅನುಕೀರ್ತ್ಯೇತ** ಭಕ್ತಿಯಿಂದ ಹೇಳಲ್ಪಡುವುದೋ **ತೇಷಾಂ** ಅಂತಹ ಅಧಿಕಾರಿಗಳ **ತತ್** ಆಯಾ ಕರ್ಮಗಳು **ಸುಕೃತಂ** ಪುಣ್ಯಪ್ರಾಪಕವೆಂದು **ವಿದುಃ** ಜ್ಞಾನಿಗಳು ತಿಳಿಯುತ್ತಾರೆ. ।।೩೧।।

ಕರ್ಮರಹಸ್ಯವನ್ನು ಬಲ್ಲವರೆಲ್ಲರ ಅಭಿಪ್ರಾಯ ಇದಾಗಿದೆ. ವಾಮನನ ಚರಿತಾಮೃತದ ಶ್ರವಣವು ಮೋಕ್ಷದಾಯಕವಾದ್ದರಿಂದ ಶ್ರೀಹರಿಯಲ್ಲಿ ಭಕ್ತರಿಗೆ ಭಕ್ತಿ ಹೆಚ್ಚುವುದೆಂದು ಹೇಳಿರುವರು.

**ಇಲ್ಲಿಗೆ ಇಪ್ಪತ್ತೊಂದನೇ ಅಧ್ಯಾಯವು ಮುಗಿಯಿತು.**

★★★

# ಅಥ ದ್ವಾವಿಂಶೋಽಧ್ಯಾಯಃ

ಸತ್ಯ ಃ- ''ಜಹೌ ಸತ್ಯಂ ನತು ವ್ರತಂ'' ಎಂದು ವಿಶಕಲಿತವಾಗಿ (ಬೇರೆಬೇರೆಯಾಗಿ) ಸತ್ಯವ್ರತ ಎಂಬುದನ್ನು ಕೇಳಿಸಿಕೊಂಡ ಪರೀಕ್ಷಿತ. ಅದರಿಂದ ಸತ್ಯವ್ರತನ ನೆನಪಾಯಿತು. ಮತ್ಸ್ಯರೂಪವನ್ನು ಧರಿಸಿದ ಪರಮಾತ್ಮ ಆ ಸತ್ಯವ್ರತನನ್ನು ರಕ್ಷಿಸಿದ ಮಾಹಾತ್ಮ್ಯ ನೆನಪಾಯಿತು. ಹೀಗಾಗಿ ಆ ಕಥೆಯನ್ನು ಕೇಳುತ್ತಿದ್ದಾನೇನೋ?

ಅಥವಾ ಶ್ರೀಹರಿಯು ವಾಮನ ಮುಂತಾದ ನಮ್ಮಂಥ ಮಾನುಷ ದೇಹ ಉಳ್ಳವನಾಗಲಿ. ಯಾವ ತೊಂದರೆ ಇಲ್ಲ. ಅಸಂಗನಾದ ಅವನಿಗೆ ದುರ್ಭಗವಾದ ಮತ್ಸ್ಯದೇಹದ ಸಂಗ ಹೇಗಾಯಿತು ಎಂಬ ಜನಸಂದೋಹದ ಸಂದೇಹವನ್ನು ಪರೀಕ್ಷಿತರಾಜನು ತಾನೇ ಊಹಿಸಿಕೊಂಡ. ಭಗವಂತ ಯಾವುದೇ ಯೋನಿಯನ್ನು ಧರಿಸಲಿ. ತೊಂದರೆ ಇಲ್ಲ. ಅವನ ಜ್ಞಾನಾನಂದಾದಿಗುಣಗಳಲ್ಲಿ ಕಿಂಚಿತ್ತೂ ವ್ಯತ್ಯಾಸವಾಗುವುದಿಲ್ಲ. ಆದ್ದರಿಂದ ಮತ್ಸ್ಯನಾದರೂ ಭಗವಂತನು ನಿರ್ದೋಷನಾಗಿದ್ದಾನೆ. ಎಂಬ ಮಹಾಮಹಿಮೆಯನ್ನು ಶುಕಾಚಾರ್ಯರ ಮುಖದಿಂದ ಹೇಳಿಸಬೇಕೆಂದುಕೊಂಡ. ಹೀಗಾಗಿ ಮೊದಲ ಅವತಾರ ಮತ್ಸ್ಯವಾದದ್ದರಿಂದ ಅನಿಮಿಷವಪುಷನಾದ ರೆಪ್ಪೆಗಳ ಬಡಿತವಿಲ್ಲದ ಮತ್ಸ್ಯದೇಹ ಉಳ್ಳ ಭಗವಂತ ತನ್ನ ಜಾತಿಯವನೇ ಆದ ಅರ್ಥಾತ್ ಕ್ಷತ್ರಿಯನಾದ ಸತ್ಯವ್ರತನನ್ನು ರಕ್ಷಿಸಿದ ಚರಿತೆಯನ್ನು ಉತ್ಸಾಹದಿಂದ ಕೇಳುತ್ತಿದ್ದಾನೆ ಎಂಬುದನ್ನು ಈ ಶ್ಲೋಕದಲ್ಲಿ ತಿಳಿಸುತ್ತಿದ್ದಾರೆ.

ಅಥವಾ ವಾಮನನು ಬೆಳೆದಂತೆ ಮತ್ಸ್ಯ ಕೂಡಾ ಬೆಳೆಯಿತು. ಈ ಅಭಿವೃದ್ಧಿ ವಾಮನ ಮತ್ತು ಮತ್ಸ್ಯಾವತಾರಗಳಲ್ಲಿ ಸಮವಾಗಿದೆ. ಆದ್ದರಿಂದ ವಾಮನಾವತಾರವಾದ ಕೂಡಲೇ ಹಾಗೆಯೇ ಬೆಳೆದ ಮತ್ಸ್ಯಾವತಾರದ ನೆನಪಾಗಿ ಮತ್ಸ್ಯಾವತಾರದ ಕಥೆಯನ್ನು ಹೇಳಿರೆಂದು ಶುಕಾಚಾರ್ಯರಿಗೆ ಪರೀಕ್ಷಿತರು ಕೇಳುತ್ತಿದ್ದಾರೆ.

ತ್ರಿವಿಕ್ರಮನ ಪಾದದಿಂದ ಗಂಗೆಯ ಉತ್ಪತ್ತಿಯಾಯಿತು ಎಂಬ ವಾರ್ತೆಯನ್ನು ಪರೀಕ್ಷಿತ ಕೇಳಿದ. ನಂತರ ಜೀವನ್ನೈಕಜೀವನಾನಾಂ ಮೀನಾನಾಂ ಕರ್ಮವಿಶೇಷತೋ

ಜಾತಾನಾಂ ತದಾದಿಜಲಾಲಂಕಾರಕಾರಣತಾ ಭವತು । ಭಗವತಸ್ತು ಕುತಸ್ತದವತಾರೋ ನಿಷ್ಕಾರಣಮಿತಿ ಸಕೌತುಕೋ ರಾಜಾ ಶುಕಂ ಪೃಚ್ಛತೀತ್ಯವತಾರಯಂತಿ । ಅಂದರೆ ಜೀವನ ಎಂದರೆ ನೀರು ಎಂದರ್ಥ. ನೀರಿನಲ್ಲಿಯೇ ಬದುಕುವ, ಕರ್ಮವಿಶೇಷದಿಂದ ಜನಿಸಿದ ಮೀನುಗಳು ತಮ್ಮ ಜೀವನಕಾರಣವಾದ ಜಲದ ಅಲಂಕರಣಕ್ಕೆ ಕಾರಣವಾಗಿವೆ ಎಂದಾಗಲಿ. ಆದರೆ ಕರ್ಮಸಂಗವಿಲ್ಲದ ಭಗವಂತನಿಗೆ ಮತ್ಸ್ಯಾವತಾರ ನಿಷ್ಕಾರಣವೆಂದು ಕೂತೂಹಲದಿಂದ ರಾಜನು ಪ್ರಶ್ನಿಸುತ್ತಿದ್ದಾನೆಂದು ಕೆಲವರು ಅವತರಿಣಿಕೆ ಕೊಡುವರು.

''ಉದಙ್ಮುಖೋ ದಕ್ಷಿಣಕೂಲ ಆಸ್ತೇ ಸಮುದ್ರಪತ್ನ್ಯಾಃ'' ''ಉಪಾವಿಶತ್ ಪ್ರಾಯಮಮರ್ತ್ಯನದ್ಯಾಮ್'' ಎಂದು ಪ್ರಥಮಸ್ಕಂಧದಲ್ಲಿ ಮತ್ತು ತಾತ್ಪರ್ಯದಲ್ಲಿಯೂ ''ಗಂಗಾಯಾಂ ಉದಕೇ ಏವ ಕಿಂಚಿದ್ದಕ್ಷಿಣಭಾಗೇ ಪ್ರಾಸಾದೇ'' ಎಂದು ಹೇಳಿ ತಥಾಹಿ ಭಾರತೇ ಚ ಆದಿಪರ್ವಣಿ ಆಸ್ತೀಕೀಯೇ ''ಪ್ರಾಸಾದಂ ಕಾರಯಾಮಾಸ ಏಕಸ್ತಂಭಂ ಸುರಕ್ಷಿತಮ್'' ಮುಂತಾಗಿ ಹೇಳಿದೆ. ಅಂತು ನೀರಲ್ಲಿರುವ ಮನೆಯಲ್ಲಿ ಪ್ರಾಯೋಪವೇಶಕ್ಕೆ ಕುಳಿತ ಪರೀಕ್ಷಿತನು ನೀರನ್ನು ನೋಡುವಾಗ ಒಂದು ಮೀನನ್ನು ನೋಡಿದ. ಆ ರೂಪದ ಭಗವಂತನ ಸ್ಮರಣೆಯಾಗಿ ಅವನ ಚರಿತ್ರೆ ಹೇಳೆಂದು ಕೇಳಿದ. ಎಂದು ಕೆಲವರು ಅವತರಣಿಕೆ ನೀಡುತ್ತಾರೆ ಎಂದು ಶ್ರೀಸತ್ಯಧರ್ಮರು ತಿಳಿಸುತ್ತಾರೆ.

**ರಾಜೋವಾಚ**

**ಭಗವನ್ ಶ್ರೋತುಮಿಚ್ಛಾಮಿ ಹರೇರದ್ಭುತಕರ್ಮಣಃ ।**
**ಅವತಾರಕಥಾಮಾದ್ಯಾಂ ಮಾಯಾಮತ್ಸ್ಯವಿಡಂಬನಾಮ್ ॥೧॥**

**ಭಗವನ್** ಪೂಜ್ಯರೇ **ಅದ್ಭುತಕರ್ಮಣಃ** ಮೋಕ್ಷಾದಿಸಮಸ್ತ ಇಷ್ಟಾರ್ಥ ಪ್ರದವಾಗಿ ಅತ್ಯಾಶ್ಚರ್ಯಕರವಾದ ಕೆಲಸಗಳನ್ನು ಮಾಡುವ **ಹರೇಃ** ಶ್ರೀಹರಿಯ **ಮಯಾಮತ್ಸ್ಯ-ವಿಡಂಬನಂ** ತನ್ನ ಇಚ್ಛೆಯಿಂದಲೇ ತೆಗೆದುಕೊಂಡ ಮೀನಿನ ರೂಪಕ್ಕೆ ತಕ್ಕಂತೆ ಸ್ವಭಾವವನ್ನು ತೋರಿದ **ಆದ್ಯಾಂ** ದಶಾವತಾರಗಳಲ್ಲಿ ಮೊದಲನೆಯದಾದ ಮತ್ಸ್ಯಾವತಾರದ ಕಥೆಯನ್ನು **ಶ್ರೋತುಂ** ಕೇಳಲು **ಇಚ್ಛಾಮಿ** ಬಯಸುತ್ತೇನೆ.

ಸತ್ಯ :- ಆದ್ಯಾಂ ಎಂಬ ಪಾಠಕ್ಕೆ ಬದಲಾಗಿ **ಅನ್ಯಾಂ** ಎಂಬ ಪಾಠದಲ್ಲಿ ಈಗ ತಾನೇ ಕೇಳಿದ ವಾಮನಾವತಾರದಿಂದ ಭಿನ್ನವಾದ ಮತ್ಸ್ಯಾವತಾರದ ಕಥೆಯನ್ನು ಹೇಳಿರಿ ಎಂದು ಅರ್ಥ. ॥೧॥

**ಯದರ್ಥಮದಧಾದ್ ರೂಪಂ ಮಾತ್ಸ್ಯಂ ಲೋಕಜುಗುಪ್ಸಿತಮ್ ।**
**ತಮಃಪ್ರಕೃತಿ ದುರ್ಮರ್ಷಂ ಕರ್ಮಗ್ರಸ್ತ ಇವೇಶ್ವರಃ ॥೨॥**

**ಈಶ್ವರಃ** ಸರ್ವೋತ್ತಮ ನಿಯಾಮಕನಾದ ಶ್ರೀಹರಿಯು **ಕರ್ಮಗ್ರಸ್ತ ಇವ** ತನ್ನ ಪ್ರಾರಬ್ಧಕರ್ಮಾನುಗುಣವಾಗಿ ದೇಹಗಳನ್ನು ಹೊಂದುವ ಜೀವನಂತೆ **ತಮಃಪ್ರಕೃತಿ** ತಾಮಸ (ಅಜ್ಞಾನ) ಸ್ವಭಾವದ **ದುರ್ಮರ್ಷಂ** ವಾಸನೆ ಮುಂತಾದವುಗಳಿಂದ ಇತರರಿಗೆ ಸಹಿಸಲಾಗದ ಆದ್ದರಿಂದಲೇ **ಲೋಕಜುಗುಪ್ಸಿತಂ** ಜನರಿಂದ ಹೇಯವೆಂದು ನಿಂದಿತವಾದ **ಮಾತ್ಸ್ಯಂ ರೂಪಂ** ಮೀನಿನಂತೆ ಕಾಣುವ ರೂಪವನ್ನು **ಯದರ್ಥಂ** ಯಾವ ಪ್ರಯೋಜನಕ್ಕಾಗಿ **ಅದಧಾತ್** ಧರಿಸಿದನು.

ಛಲಾರೀ ಃ- ಅಕಸ್ಮಾತ್ತಾಗಿ ಮತ್ಸ್ಯಾವತಾರಶ್ರವಣೇಚ್ಛಾ ಯಾಕೆ? ಮತ್ಸ್ಯಾವತಾರಕ್ಕೆ ವಾಮನಾವತಾರಕ್ಕೆ ಸಾದೃಶ್ಯ ಏನೂ ಇಲ್ಲವಲ್ಲ ಎಂದರೆ ಹೇಳುತ್ತಾರೆ. ಬಲಿಯ ಅನುಗ್ರಹಕ್ಕಾಗಿ ನಿಂದಿತವಾದ ಯಾಚಕ ವಾಮನರೂಪವನ್ನು ಭಗವಂತ ಧರಿಸಿದನು. ಹಾಗೆಯೇ ಸತ್ಯವ್ರತನನ್ನು ಅನುಗ್ರಹಿಸುವುದಕ್ಕಾಗಿ ನಿಂದಿತವಾದ ಈ ಮತ್ಸ್ಯರೂಪವನ್ನು ಭಗವಂತ ಧರಿಸಿದ. ಹೀಗಾಗಿ ವಾಮನರೂಪವೂ ನಿಂದಿತ. ಮತ್ಸ್ಯರೂಪವೂ ನಿಂದಿತ. ನಿಂದಿತತ್ವಸಾಮ್ಯವಿದ್ದುದರಿಂದ ವಾಮನರೂಪದ ಶ್ರವಣವಾದ ನಂತರ ಮತ್ಸ್ಯಾವತಾರದ ಸ್ಮರಣೆ ಪರೀಕ್ಷಿತನಿಗೆ ಆಗಿದೆ. ।।೨।।

**ಏತನ್ನೋ ಭಗವನ್ ಸರ್ವಂ ಯಥಾವದ್ ವಕ್ತುಮರ್ಹಸಿ ।**
**ಉತ್ತಮಶ್ಲೋಕಚರಿತಂ ಸರ್ವಲೋಕಸುಖಾವಹಮ್ ।।೩।।**

**ಭಗವನ್** ಪೂಜ್ಯರೇ **ಏತತ್ ಸರ್ವಂ** ಈ ಎಲ್ಲ ವಿಷಯವನ್ನು **ಯಥಾವತ್** ನಡೆದಂತೆ **ವಕ್ತುಂ** ಹೇಳಲು **ಅರ್ಹಸಿ** ನೀವು ಯೋಗ್ಯರಾಗಿದ್ದೀರಿ. ಲೋಕಜುಗುಪ್ಸಿತವಾದ ಈ ಚರಿತೆಯನ್ನು ಯಾಕೆ ಹೇಳಬೇಕೆಂದರೇ ಹೇಳುವರು **ಉತ್ತಮಶ್ಲೋಕಚರಿತಂ** ನಿರ್ದೋಷವಾದ ಕೀರ್ತಿಯುಳ್ಳ ಶ್ರೀಹರಿಯ ಚರಿತ್ರೆಯು **ಸರ್ವಲೋಕಸುಖಾವಹಂ** ಹೇಳುವ ಕೇಳುವ ಎಲ್ಲ ಜನರಿಗೆ ಸುಖದಾಯಕವು. ಆದ್ದರಿಂದ ಈ ಚರಿತ್ರೆಯು ಶ್ರವಣ-ಕಥನಯೋಗ್ಯವಾಗಿದೆ ಎಂದು ಭಾವ. ।।೩।।

**ಸೂತ ಉವಾಚ**

**ಇತ್ಯುಕ್ತೋ ವಿಷ್ಣುರಾತೇನ ಭಗವಾನ್ ಬಾದರಾಯಣಃ ।**
**ಉವಾಚ ಚರಿತಂ ವಿಷ್ಣೋರ್ಮತ್ಸ್ಯರೂಪೇಣ ಯತ್ಕೃತಮ್ ।।೪।।**

**ವಿಷ್ಣುರಾತೇನ ಇತ್ಯುಕ್ತಃ** ಹೀಗೆ ಪರೀಕ್ಷಿತನಿಂದ ಪ್ರಾರ್ಥಿತರಾದ **ಭಗವಾನ್ ಬಾದರಾಯಣಃ** ಪೂಜ್ಯರಾದ ವೇದವ್ಯಾಸಪುತ್ರರಾದ ಶುಕಾಚಾರ್ಯರು **ಮತ್ಸ್ಯರೂಪೇಣ ಯತ್ಕೃತಂ** ಮತ್ಸ್ಯಾಕಾರ ರೂಪದಿಂದ ಏನು ಮಾಡಿದನೋ **ತತ್ ವಿಷ್ಣೋಃ ಚರಿತಂ ಉವಾಚ** ಅಂಥ ಶ್ರೀಹರಿಯ ಚರಿತ್ರೆಯನ್ನು ಪರೀಕ್ಷಿತನಿಗೆ ಹೇಳಿದರು. ।।೪।।

ಸಾಮಾನ್ಯವಾಗಿ ಅವತಾರ ಪ್ರಯೋಜನವನ್ನು ಹೇಳುವರು-

**ಶ್ರೀಶುಕ ಉವಾಚ**

**ಗೋವಿಪ್ರಸುರಸಾಧೂನಾಂ ಛಂದಸಾಮಪಿ ಚೇಶ್ವರಃ ।**
**ರಕ್ಷಾಮಿಚ್ಛನ್ ತನೂರ್ಧತ್ತೇ ಧರ್ಮಸ್ಯಾರ್ಥಸ್ಯ ಚೈವ ಹಿ ॥೫॥**

**ಈಶ್ವರಃ** ಸರ್ವನಿಯಾಮಕನಾದ ಶ್ರೀಹರಿಯು **ಗೋ** ಆಕಳು ಹಾಗೂ ಭೂಮಿ **ವಿಪ್ರ** ಬ್ರಾಹ್ಮಣರು **ಸುರ** ದೇವತೆಗಳು **ಸಾಧೂನಾಂ** ಸಜ್ಜನರ **ಛಂದಸಾಂ** ವೇದಗಳ **ಧರ್ಮಸ್ಯ ಅರ್ಥಸ್ಯ** ಧರ್ಮದ ಮತ್ತು ಅರ್ಥದ (ಹಣದ, ಮೋಕ್ಷದ) **ರಕ್ಷಾಂ ಇಚ್ಛನ್** ರಕ್ಷಣೆಯನ್ನು ಮಾಡಲಿಚ್ಛಿಸಿ **ತನೂಃ** ಸಚ್ಚಿದಾನಾಂದಾತ್ಮಕ ದೇಹಗಳನ್ನು **ಧತ್ತೇ** ಸ್ವೀಕರಿಸುತ್ತಾನೆ.

ವೇದಗಳನ್ನು ಅಪಹರಿಸಿದ ಹಯಗ್ರೀವಾಸುರನಿಂದ ವೇದಗಳನ್ನು ರಕ್ಷಿಸುವುದಕ್ಕಾಗಿ ಭಗವಂತ ಮತ್ಸ್ಯಾವತಾರ ಮಾಡಿದನೆಂದರ್ಥ. ॥೫॥

ಮತ್ಸ್ಯ-ಕೂರ್ಮ-ವರಾಹರೂಪಗಳಿಂದ ಪ್ರಸಕ್ತವಾದ ನಿಂದಿತತ್ವವನ್ನು ಪರಿಹರಿಸುತ್ತಾರೆ-

**ಉಚ್ಚಾವಚೇಷು ಭೂತೇಷು ಚರನ್ ವಾಯುರಿವೇಶ್ವರಃ ।**
**ನೋಚ್ಚಾವಚತ್ವಂ ಭಜತೇ ನಿರ್ಗುಣತ್ವಾದ್ ಧಿಯೋ ಗುಣೈಃ ॥೬॥**

**ಈಶ್ವರಃ** ಶ್ರೀಹರಿಯು **ವಾಯುಃ ಇವ** ಶ್ವಾಸಾಧಾರಕರಾದ ವಾಯುದೇವರಂತೆ **ಉಚ್ಚಾವಚೇಷು ಭೂತೇಷು** ಉತ್ತಮಾಧಮಪ್ರಾಣಿಶರೀರಗಳಲ್ಲಿ **ಚರನ್ ಅಪಿ** ಅವತರಿಸುವುದಕ್ಕಾಗಿ ಸಂಚರಿಸಿದರೂ **ನಿರ್ಗುಣತ್ವಾತ್** ಪ್ರಾಕೃತಗುಣಸಂಬಂಧ ರಹಿತನಾದ್ದರಿಂದ **ಧಿಯಃ** ಮನ ಆದಿ ಇಂದ್ರಿಯಗಳ **ಗುಣೈಃ** ಆಯಾ ವಿಷಯಗಳ ಸಂಪರ್ಕದಿಂದಾಗಿ **ಉಚ್ಚಾವಚತ್ವಂ ನ ಭಜತೇ** ಉತ್ತಮತೆಯನ್ನಾಗಲಿ ಅಧಮತೆಯನ್ನಾಗಲಿ ಹೊಂದುವುದಿಲ್ಲ.

ಸತ್ಯ ಃ- ಇದರಿಂದ ''ಕರ್ಮಗ್ರಸ್ತ ಇವ'' ಎಂಬುದಕ್ಕೆ ಉತ್ತರಿಸಿದಂತಾಯಿತು. ನಿರ್ಗುಣತ್ವಾತ್ ಎಂಬುದರಿಂದ ನಿಚೋಚ್ಚತೆಗೆ ಕಾರಣವಾದ ಸತ್ವರಜಸ್ತಮೋ ಗುಣಗಳಿಲ್ಲದರಿಂದ ನೀಚೋಚ್ಚಶರೀರ ತೆಗೆದುಕೊಂಡ ಮಾತ್ರಕ್ಕೆ ನೀಚೋಚ್ಚತೆಗಳು ಬರುವುದಿಲ್ಲ. ಅಗ್ನಿಸ್ತಂಭನ ವಿದ್ಯೆಯನ್ನು ಬಲ್ಲವನು ಅಗ್ನಿಯಲ್ಲಿದ್ದರೂ ತಾನು ಸುಡದಿರುವಂತೆ ಎಂದು ತಿಳಿಯಬೇಕು. ॥೬॥

ರಾಜನ ಪ್ರಶ್ನೆಗೆ ಮೊದಲು ಉತ್ತರಿಸುವರು-

**ಆಸೀದತೀತಕಾಲಾಂತೇ ಬ್ರಾಹ್ಮೋ ನೈಮಿತ್ತಿಕೋ ಲಯಃ ।**
**ಸಮುದ್ರೋಪಪ್ಲುತಾಸ್ತತ್ರ ಲೋಕಾ ಭೂರಾದಯೋಽನಘ ॥೭॥**

**ಹೇ ಅನಘ** ಪಾಪರಹಿತನಾದ ಪರೀಕ್ಷಿತನೇ **ಅತೀತಕಲ್ಪಾಂತೇ** ಕಳೆದು ಹೋದ ದಿನಕಲ್ಪದ ಕೊನೆಯಲ್ಲಿ **ಬ್ರಾಹ್ಮಃ** ಬ್ರಹ್ಮದೇವರ **ನೈಮಿತ್ತಿಕಃ** ನಿದ್ರಾಕಾಲದ ನಿಮಿತ್ತಿಕವಾಗಿ **ಲಯಃ** ಪ್ರಳಯವು **ಆಸೀತ್** ಆಯಿತು **ತತ್ರ** ಆ ಪ್ರಳಯದಲ್ಲಿ **ಭೂರಾದಯಃ ಲೋಕಾಃ** ಭೂಲೋಕ-ಭುವರ್ಲೋಕ-ಸ್ವರ್ಗಲೋಕಗಳು ಸತ್ಯಲೋಕಪರ್ಯಂತವಾಗಿ **ಸಮುದ್ರೋಪಪ್ಲುತಾಃ** ಸಮುದ್ರದಲ್ಲಿ ಮುಳುಗಿ ಹೋದವು. ॥೭॥

**ಕಾಲೇನಾಗತನಿದ್ರಸ್ಯ ಧಾತುಃ ಶಿಶಯಿಷೋರ್ಬಲೀ ।**
**ಮುಖತೋ ನಿಃಸೃತಾನ್ ವೇದಾನ್ ಹಯಗ್ರೀವೋಂತಿಕೇಽಹರತ್ ॥೮॥**

**ಬಲೀ** ಬಲಿಷ್ಠನಾದ **ಹಯಗ್ರೀವಃ** ಹಯಗ್ರೀವನೆಂಬ ದೈತ್ಯನು **ಕಾಲೇನ** ಭಗವಂತನಿಂದ ಪ್ರಸಿದ್ಧವಾದ ರಾತ್ರಿಕಾಲದಿಂದ ಅರ್ಥಾತ್ ಪ್ರಲಯಕಾಲದಿಂದ **ಆಗತನಿದ್ರಸ್ಯ** ನಿದ್ರೆ ಬಂದಿರುವ ಆದ್ದರಿಂದ **ಶಿಶಯಿಷೋಃ** ಮಲಗಲು ಇಚ್ಛಿಸಿದ **ಧಾತುಃ** ಬ್ರಹ್ಮದೇವರ **ಮುಖತಃ** ಮುಖದಿಂದ **ನಿಃಸೃತಾನ್** ಉಚ್ಚರಿತವಾದ ವೇದಗಳನ್ನು **ಅಂತಿಕೇ** ಸಮೀಪದಲ್ಲಿದ್ದು **ಆಹರತ್** ಕಳವು ಮಾಡಿದನು. ಕಳ್ಳತನದಿಂದ ವೇದಗಳನ್ನು ಕಲಿತನು ಎಂದು ಅಭಿಪ್ರಾಯ.

♦ **ಬಲೇಃ** ಎಂಬ ಪಾಠದಲ್ಲಿ ಬಲಿಯ ಸಮೀಪದಲ್ಲಿದ್ದು ಎಂದರ್ಥ. ಬ್ರಹ್ಮದೇವರ ಮುಖದಿಂದ ಹೊರಬಂದ ದೇಹಧಾರಿಗಳಾದ ವೇದಾಭಿಮಾನಿಗಳನ್ನು ಅಪಹರಿಸದನೆಂದೂ ಅರ್ಥ. ॥೮॥

**ಜ್ಞಾತ್ವಾ ತದ್ ದಾನವೇಂದ್ರಸ್ಯ ಹಯಗ್ರೀವಸ್ಯ ಚೇಷ್ಟಿತಮ್ ।**
**ದಧಾರ ಶಫರೀರೂಪಂ ಭಗವಾನ್ ಹರಿರೀಶ್ವರಃ ॥೯॥**

**ಭಗವಾನ್** ಸಮಗ್ರ ಐಶ್ವರ್ಯ ಸಂಪನ್ನನಾದ **ಈಶ್ವರಃ** ಸರ್ವನಿಯಾಮಕನಾದ ಆಯಾ ಕಾಲಕ್ಕೆ ಅವರವರಿಗೆ ತಕ್ಕ ಇಷ್ಟಪ್ರಾಪ್ತಿ ಅನಿಷ್ಟ ನಿವಾರಣೆಗಳನ್ನು ಮಾಡುವ ಶ್ರೀಹರಿಯು **ದಾನವೇಂದ್ರಸ್ಯ** ದಾನವಶ್ರೇಷ್ಠನಾದ **ಹಯಗ್ರೀವಸ್ಯ** ಹಯಗ್ರೀವಾಸುರನ **ತತ್ ಚೇಷ್ಟಿತಂ** ವೇದಗಳ ಅಪಹರಣವೆಂಬ ವ್ಯಾಪಾರವನ್ನು **ಜ್ಞಾತ್ವಾ** ತಿಳಿದು **ಶಫರೀರೂಪಂ** ಮತ್ಸ್ಯರೂಪವನ್ನು **ದಧಾರ** ಧರಿಸಿದನು ವ್ಯಕ್ತಗೊಳಿಸಿದನು.

ಈ ಮೊದಲನೆಯ ಮತ್ಸ್ಯಾವತಾರದಲ್ಲಿ ಹಯಗ್ರೀವನನ್ನು ಸಂಹರಿಸಿ ಬ್ರಹ್ಮದೇವರಿಗೆ ಮತ್ತೆ ವೇದಗಳನ್ನು ಉಪದೇಶಿಸಿದನು ಎಂದು ಭಾವ. ॥೯॥

ದಿನಕಲ್ಪದಲ್ಲಿ ಮತ್ಸ್ಯರೂಪಿಯಾದ ಹರಿಯು, ವೇದಗಳನ್ನು ಅಪಹರಿಸಿದ ಹಯಗ್ರೀವಾಸುರನನ್ನು ಸಂಹರಿಸಿ, ವೇದಗಳನ್ನು ಬ್ರಹ್ಮದೇವರಿಗೆ ನೀಡಿದ ಒಂದು ಲೀಲೆಯನ್ನು ಹೇಳಿ, ಮನುಕಲ್ಪದಲ್ಲಿ ಮಾಡುವ ಮತ್ತೊಂದು ವ್ಯಾಪಾರವನ್ನು ಹೇಳುತ್ತಾರೆ-

**ತತ್ರ ರಾಜಋಷಿಃ ಕಶ್ಚಿತ್ ನಾಮ್ನಾ ಸತ್ಯವ್ರತೋ ಮಹಾನ್ ।**
**ನಾರಾಯಣಪರೋಽತಪ್ಯತ್ ತಪಸ್ತತ್ಸಲಿಲಾಶಯೇ ॥೧೦॥**

**ತತ್ರ** ಆ ದಿನಪ್ರಳಯದಲ್ಲಿ **ಮಹಾನ್** ರಾಜರಲ್ಲಿ ಉತ್ತಮನಾದ **ನಾರಾಯಣಪರಃ** ನಾರಾಯಣನ ಭಕ್ತನಾದ **ನಾಮ್ನಾ ಸತ್ಯವ್ರತಃ** ಸತ್ಯವ್ರತನೆಂಬ ಹೆಸರಿನ **ರಾಜರ್ಷಿಃ** ಜ್ಞಾನಿಯಾದ ರಾಜನು **ಕಶ್ಚಿತ್** ಒಬ್ಬನು **ತತ್ಸಲಿಲಾಶಯೇ** ಆ ನೀರಿನಲ್ಲಿ **ಅತಪ್ಯತ್** ತಪಸ್ಸು ಮಾಡಿದನು. ॥೧೦॥

ಸತ್ಯವ್ರತರಾಜರು ಅಷ್ಟು ಪ್ರಸಿದ್ಧರಲ್ಲ. ಆದ್ದರಿಂದ ಪ್ರಸಿದ್ಧ ಹೆಸರಿನಿಂದ ತಿಳಿಸುವರು-

**ಯೋಽಸಾವಸ್ಮಿನ್ ಮಹಾಕಲ್ಪೇ ತನಯಃ ಸ ವಿವಸ್ವತಃ ।**
**ಶ್ರಾದ್ಧದೇವ ಇತಿ ಖ್ಯಾತೋ ಮನುತ್ವೇ ಹರಿಣಾರ್ಪಿತಃ ॥೧೧॥**

**ಅಸೌ** ಈ ಸತ್ಯವ್ರತನು **ಅಸ್ಮಿನ್** ಈಗ ನಡೆಯುತ್ತಿರುವ **ಮಹಾಕಲ್ಪೇ** ಶ್ವೇತವರಾಹಕಲ್ಪದಲ್ಲಿ (ದಿನಕಲ್ಪ) **ವಿವಸ್ವತಃ** ವಿವಸ್ವಾನ್ ಎಂಬ ಸೂರ್ಯನ **ತನಯಃ** ಮಗನು **ಶ್ರಾದ್ಧದೇವಃ ಇತಿ ಖ್ಯಾತಃ** ಶ್ರಾದ್ಧದೇವ ಎಂದು ಪುರಾಣದಲ್ಲಿ ಪ್ರಸಿದ್ಧನು **ಸಃ** ಅವನು **ಹರಿಣಾ** ಪರಮಾತ್ಮನಿಂದ **ಮನುತ್ವೇ** ಏಳನೆಯ ವೈವಸ್ವತ ಮನ್ವಂತರದಲ್ಲಿ ಅಧಿಪತಿಯಾಗಿ **ಅರ್ಪಿತಃ** ನಿಯಮಿತನಾಗಿರುವನು. ॥೧೧॥

**ಏಕದಾ ಕೃತಮಾಲಾಯಾಂ ಕುರ್ವತೋ ಜಲತರ್ಪಣಮ್ ।**
**ತಸ್ಯಾಂಜಲ್ಯುದಕೇ ಕಾಚಿತ್ ಶಫರ್ಯೇಕಾಽಭ್ಯಪದ್ಯತ ॥೧೨॥**

**ಏಕದಾ** ಒಂದು ಸಲ **ಕೃತಮಾಲಾಯಾಂ** ದ್ರಾವಿಡ ದೇಶದಲ್ಲಿರುವ ಕೃತಮಾಲಾ ಎಂಬ ನದಿಯಲ್ಲಿ **ಜಲತರ್ಪಣಂ ಕುರ್ವತಃ** ಪಿತೃಗಳಿಗೆ ಜಲತರ್ಪಣ ಕೊಡುತ್ತಿದ್ದ **ತಸ್ಯ** ಆ ಸತ್ಯವ್ರತನ **ಅಂಜಲ್ಯುದಕೇ** ಬೊಗಸೆಯಲ್ಲಿದ್ದ ನೀರಿನಲ್ಲಿ **ಕಾಚಿತ್** ಲೋಕವಿಲಕ್ಷಣವಾದ **ಏಕಾ** ಒಂದು **ಶಫರೀ** ಹೆಣ್ಣು ಮೀನು **ಅಭ್ಯಪದ್ಯತ** ಅವರಿಗೆ ಕಾಣಿಸಿಕೊಂಡಿತು. ॥೧೨॥

**ಸತ್ಯವ್ರತೋಽಂಜಲಿಗತಾಂ ಸಹತೋಯೇನ ಭಾರತ ।**
**ಉತ್ಸಸರ್ಜ ನದೀತೋಯೇ ಶಫರೀಂ ದ್ರವಿಡೇಶ್ವರಃ ॥೧೩॥**

**ಹೇ ಭಾರತ** ಪರೀಕ್ಷಿತನೇ **ದ್ರವಿಡೇಶ್ವರಃ** ದ್ರವಿಡದೇಶದ ಅಧಿಪತಿಯಾದ **ಸತ್ಯವ್ರತಃ** ಸತ್ಯವ್ರತನು **ಅಂಜಲಿಗತಾಂ** ಬೊಗಸೆಯಲ್ಲಿದ್ದ **ಶಫರೀಂ** ಮೀನನ್ನು **ತೋಯೇನ ಸಹ**

ನೀರಿನೊಡನೆ **ನದೀತೋಯೇ** ಕೃತಮಾಲಾನದಿಯ ನೀರಿನಲ್ಲಿ **ಉತ್ಸಸರ್ಜ** ಬಿಟ್ಟನು. ||೧೩||

**ತಮಾಹ ಸಾಽತಿಕರುಣಂ ಮಹಾಕಾರುಣಿಕಂ ನೃಪಮ್ ।**
**ಯಾದೋಭ್ಯೋ ಜ್ಞಾತಿಘಾತಿಭ್ಯೋ ದೀನಾಂ ಮಾಂ ದೀನವತ್ಸಲ ।**
**ಕಥಂ ವಿಸೃಜಸೇ ರಾಜನ್ ಭೀತಾಮಸ್ಮಿನ್ ಸರಿಜ್ಜಲೇ ||೧೪||**

**ಸಾ** ಹಾಗೆ ನದಿಗೆ ಎಸೆಯಲ್ಪಟ್ಟ ಆ ಮತ್ಸ್ಯವು **ಮಹಾಕಾರುಣಿಕಂ** ಅತ್ಯಂತ ದಯಾಶೀಲನಾದ **ನೃಪಂ** ಆ ಸತ್ಯವ್ರತರಾಜನನ್ನು ಕುರಿತು **ಅತಿಕರುಣಂ ಯಥಾ ತಥಾ** ರಾಜನಿಗೆ ಬಹಳ ಕನಿಕರ ಹುಟ್ಟುವಂತೆ **ದೀನವತ್ಸಲ** ಕಷ್ಟಕ್ಕೆ ಸಿಲುಕಿದವರಲ್ಲಿ ವಾತ್ಸಲ್ಯ ಉಳ್ಳ **ರಾಜನ್** ಸತ್ಯವ್ರತನೇ **ಜ್ಞಾತಿಘಾತಿಭ್ಯಃ** ತಮ್ಮ ಜಾತಿಯವರನ್ನೇ ಕೊಂದು ತಿಂದು ಬದುಕುವ **ಯಾದೋಭ್ಯಃ** ಜಲಚರಪ್ರಾಣಿಗಳಿಂದ **ಭೀತಾಂ** ಹೆದರಿದ **ದೀನಾಂ** ದುಃಖಿತನಾದ **ಮಾಂ** ನನ್ನನ್ನು **ಅಸ್ಮಿನ್ ಸರಿಜ್ಜಲೇ** ಈ ನದಿಯ ನೀರಿನಲ್ಲಿ **ಕಥಂ ವಿಸೃಜಸೇ** ಹೇಗೆ ಬಿಡುವಿ? **ಇತಿ** ಎಂದು **ಆಹ** ಹೇಳಿತು. ಶರಣಾದವರನ್ನು ಬಿಡುವುದು ರಾಜರ ಧರ್ಮವಲ್ಲವೆಂದು ಭಾವ.

**ಶ್ರೀಶುಕ ಉವಾಚ**

**ತಮಾತ್ಮನೋಽನುಗ್ರಹಾರ್ಥಂ ಪ್ರಾಪ್ತಂ ಮತ್ಸ್ಯವಪುರ್ಧರಮ್ ।**
**ಅಜಾನನ್ ರಕ್ಷಣಾರ್ಥಾಯ ಶಫರ್ಯಾಃ ಸ ಮನೋ ದಧೇ ||೧೫||**

**ಸಃ** ವೈವಸ್ವತಮನುವಾದ **ಸಃ** ಸತ್ಯವ್ರತನು **ಆತ್ಮನಃ** ತನ್ನನ್ನು **ಅನುಗ್ರಹಾರ್ಥಂ** ಅನುಗ್ರಹಿಸಲು **ಪ್ರೀತ್ಯಾ** ಕರುಣೆಯಿಂದ **ಮತ್ಸ್ಯವಪುರ್ಧರಂ** ಮೀನಿನಂತಿರುವ ಸಚ್ಚಿದಾನಂದದೇಹವನ್ನು ಧರಿಸಿದ **ಅಜಾನನ್** ಶ್ರೀಹರಿ ಎಂದು ತಿಳಿಯದೇ **ರಕ್ಷಣಾರ್ಥಾಯ** ಆ ಮೀನನ್ನು ರಕ್ಷಿಸುವುದಕ್ಕಾಗಿ **ಮನೋ ದಧೇ** ಮನಸ್ಸು ಮಾಡಿದನು.

ಸತ್ಯ ಃ- ರಕ್ಷಣಾಯ ಎಂದಿಷ್ಟೇ ಹೇಳಿದರೂ ವಿಷಯವನ್ನು ಪೂರ್ಣವಾಗಿ ಹೇಳಿದಂತೆ ಆಗುತ್ತದೆ. ಆದರೂ ಅರ್ಥಾಯ ಎಂದು ಹೇಳುವುದು ವ್ಯರ್ಥ. ನಿಜ. ಆದರೆ ಪರಮಾತ್ಮನ ರೂಪವಾದ ಈ ಮತ್ಸ್ಯದ ರಕ್ಷಣೆಯು ಅಪಹಾಸ್ಯಕ್ಕೆ ವಿಷಯವಾಗಿದೆ. ಇದನ್ನು ತಿಳಿಸುವುದಕ್ಕಾಗಿಯೇ ವ್ಯರ್ಥವಾದ ಅರ್ಥಾಯ ಎಂಬ ಪದವನ್ನು ಪ್ರಯೋಗಿಸಿದ್ದಾರೆ ಎಂದು ತಿಳಿಯಬೇಕು. ''ಪರಿಹಾಸಪ್ರಲಾಪಾದಿಷ್ವನರ್ಥಾ ವಾಗಪೀಷ್ಯತೇ'' ಎಂದಿದೆ. ಅಂದರೆ ಪರಿಹಾಸ-ಪ್ರಲಾಪ ಮುಂತಾದ ಸಂದರ್ಭದಲ್ಲಿ ವ್ಯರ್ಥವಾದ ಮಾತುಗಳನ್ನು ಆಡುವುದು ಉಂಟು. ಆದ್ದರಿಂದ ಪ್ರಕೃತ ಪರಿಹಾಸದ ಪ್ರಸಂಗ ಇರುವುದರಿಂದ ವ್ಯರ್ಥವಾಗಿ ಅರ್ಥಾಯ ಎಂದು ಪ್ರಯೋಗಿಸಿದರೂ ಯಾವ ದೋಷವೂ ಇಲ್ಲ ಎಂದು ಕೆಲವರು ವ್ಯಾಖ್ಯಾನಿಸುತ್ತಾರೆ. ||೧೫||

**ತಸ್ಯಾ ದೀನತರಂ ವಾಕ್ಯಮಾಶ್ರುತ್ಯ ಸ ಮಹೀಪತಿಃ ।**
**ಕಲಶಾಪ್ಸು ನಿಧಾಯೈನಾಂ ದಯಾಲುರ್ನಿನ್ಯ ಆಶ್ರಮಮ್ ॥೧೬॥**

**ದಯಾಲುಃ ಸಃ ಮಹೀಪತಿಃ** ಕರುಣಾವಂತನಾದ ಆ ಸತ್ಯವ್ರತರಾಜನು **ತಸ್ಯಾಃ** ಆ ಮೀನಿನ **ದೀನತರಂ** ದೈನ್ಯಯುಕ್ತವಾದ **ವಾಕ್ಯಂ** ಮಾತನ್ನು **ಆಶ್ರುತ್ಯ** ಕೇಳಿ **ಏನಾಂ** ಈ ಮೀನನ್ನು **ಕಲಶಾಪ್ಸು** ಕಮಂಡಲುವಿನಲ್ಲಿಯ ನೀರಿನಲ್ಲಿ **ನಿಧಾಯ** ಹಾಕಿಕೊಂಡು **ಆಶ್ರಮಂ ನಿನ್ಯೇ** ಆಶ್ರಮಕ್ಕೆ ತೆಗೆದುಕೊಂಡು ಹೋದನು. ॥೧೬॥

**ಸಾ ತು ತತ್ರೈಕರಾತ್ರೇಣ ವರ್ಧಮಾನಾ ಕಮಂಡಲೌ ।**
**ಅಲಬ್ಧಾತ್ಮಾವಕಾಶಂ ವಾ ಇದಮಾಹ ಮಹೀಪತಿಮ್ ॥೧೭॥**

**ಸಾ ತು** ಆ ಮೀನಾದರೂ **ತತ್ರ** ಆ ಕಮಂಡಲುವಿನಲ್ಲಿ **ಏಕರಾತ್ರೇಣ** ಒಂದೇ ರಾತ್ರಿಯ ಕಾಲದಲ್ಲಿ **ಅಲಬ್ಧಾತ್ಮಾವಕಾಶಂ** ತನಗೆ ಅಲ್ಲಿ ಅವಕಾಶ ದೊರೆಯದಿರುವಂತೆ **ವರ್ಧಮಾನಾ** ಬೆಳೆದದ್ದಾಗಿ **ಮಹೀಪತಿಂ** ರಾಜನನ್ನು ಕುರಿತು ಇದಂ ಮುಂದೆ ಹೇಳುವುದನ್ನು **ಆಹ** ಹೇಳಿತು. **ವೈ** ಪುರಾಣ ಪ್ರಸಿದ್ಧ.

ಲಿಂಗೇರೀ :- **ಅಲಬ್ಧಾತ್ಮಾವಕಾಶಂ** ತನಗೆ ಅವಕಾಶವಿಲ್ಲದ **ವಾಃ** ನೀರನ್ನು ನೋಡಿ ರಾಜನಿಗೆ ಹೇಳಿತು ಹೀಗೂ ಅರ್ಥ. ॥೧೭॥

**ನಾಹಂ ಕಮಂಡಲಾವಸ್ಮಿನ್ ಕೃಚ್ಛ್ರಂ ವಸ್ತುಮಿಹೋತ್ಸಹೇ ।**
**ಕಲ್ಪಯೌಕಃ ಸುವಿಪುಲಂ ಯತ್ರಾಹಂ ನಿವಸೇ ಸುಖಮ್ ॥೧೮॥**

**ಅಹಂ** ಬೆಳೆದಿರುವ ನಾನು **ಇಹ** ಈ ನಿನ್ನ ಪರ್ಣಶಾಲೆಯಲ್ಲಿ **ಅಸ್ಮಿನ್ ಕಮಂಡಲೌ** ಈ ಕಮಂಡಲುವಿನಲ್ಲಿ **ಕೃಚ್ಛ್ರಂ ಯಥಾ ತಥಾ** ಬಹುಕಷ್ಟವಾಗುವಂತೆ **ವಸ್ತುಂ** ವಾಸಿಸಲು **ನ ಉತ್ಸಹೇ** ಇಷ್ಟಪಡುವುದಿಲ್ಲ. ಆದ್ದರಿಂದ **ಯತ್ರ** ಯಾವ ಜಲಾಶಯದಲ್ಲಿ ನಾನು **ಸುಖಂ** ಸುಖವಾಗಿ ಕಷ್ಟವಿಲ್ಲದೇ **ನಿವಸೇ** ವಾಸಿಸುತ್ತೇನೆಯೋ ಅಂತಹ **ಸುವಿಪುಲಂ** ವಿಸ್ತಾರವಾದ **ಓಕಃ** ವಾಸಸ್ಥಾನವನ್ನು **ಕಲ್ಪಯ** ಮಾಡಿಕೊಡು ಎಂದು ಹೇಳಿತು. ॥೧೮॥

**ಸ ಏನಾಂ ತತ ಆದಾಯ ನ್ಯಧಾದೌದಂಚನೋದಕೇ ।**
**ತತ್ರ ಕ್ಷಿಪ್ತಾ ಮುಹೂರ್ತೇನ ಹಸ್ತತ್ರಯಮವರ್ಧತ ॥೧೯॥**

**ಸಃ** ಹೀಗೆ ಹೇಳಿಸಿಕೊಂಡು ಸತ್ಯವ್ರತರಾಜನು **ಏನಾಂ** ಈ ಮೀನನ್ನು **ತತಃ** ಆ ಕಮಂಡಲುವಿನಿಂದ ಎತ್ತಿಕೊಂಡು **ಔದಂಚನೋದಕೇ** ಬಾವಿಯ ನೀರಿನಲ್ಲಿ **ನ್ಯಧಾತ್** ಇಟ್ಟನು **ತತ್ರ** ಆ ಬಾವಿಯಲ್ಲಿ **ಕ್ಷಿಪ್ತಾ** ಹಾಕಲ್ಪಟ್ಟ ಆ ಮೀನು **ಮುಹೂರ್ತೇನ** ಒಂದೇ ಮುಹೂರ್ತದಲ್ಲಿ **ಹಸ್ತತ್ರಯಂ** ಮೂರು ವ್ಯಾಮದಷ್ಟು (ಮೂರು ಮಾರು) **ಅವರ್ಧತ** ಬೆಳೆಯಿತು. ॥೧೯॥

**ಮೀನ ಉವಾಚ**

**ನ ಮ ಏತದಲಂ ರಾಜನ್ ಸುಖಂ ವಸ್ತುಮುದಂಚನಮ್ ।**
**ಪೃಥು ದೇಹಿ ಪದಂ ಮಹ್ಯಂ ಯತ್ ತ್ವಾऽಹಂ ಶರಣಂ ಗತಾ ॥೨೦॥**

**ಹೇ ರಾಜನ್** ಸತ್ಯವ್ರತ ರಾಜನೇ **ಏತತ್ ಉದಂಚನಂ** ಈ ಬಾವಿಯೂ **ಮೇ** ನನಗೆ **ಸುಖಂ ವಸ್ತುಂ** ಸುಖವಾಗಿ ವಾಸಮಾಡಲು **ನ ಅಲಂ** ಸಾಕಾಗಲಾರದು. **ಅಹಂ** ನಾನು **ಯತ್** ಯಾವ ಕಾರಣ **ತ್ವಾ** ನಿನ್ನನ್ನು **ಶರಣಂ ಗತಾ** ರಕ್ಷಣೆಗಾಗಿ ಆಶ್ರಯಿಸಿರುವೆನೋ **ತತ್** ಆ ಕಾರಣ **ಮಹ್ಯಂ** ನನಗೆ **ಪೃಥು** ಇದಕ್ಕಿಂತ ವಿಸ್ತಾರವಾದ **ಪದಂ** ಸ್ಥಾನವನ್ನು **ದೇಹಿ** ವಾಸಿಸಲು ಕೊಡು. ॥೨೦॥

ಮತ್ಸ್ಯರೂಪಿಯಾದ ಶ್ರೀಹರಿಯು ತನ್ನ ದೃಷ್ಟಿಯಲ್ಲಿ ಸಾಮಾನ್ಯನಾದ ಒಬ್ಬ ರಾಜನನ್ನು ವಿಸ್ತಾರವಾದ ಸ್ಥಳವನ್ನು ಕೊಡು ಎಂದು ಹೇಗೆ ಕೇಳಿದನು? ಈ ಯಾಚನೆಯು ಸರ್ವಥಾ ಸಂಭಾವಿತವಲ್ಲ. ಎಂದು ಶಂಕೆಯು ಬರುತ್ತದೆ. ಈ ಶಂಕೆಯನ್ನು ಶ್ರೀಮದಾಚಾರ್ಯರು ಪ್ರಮಾಣಪೂರ್ವಕವಾಗಿ ಪರಿಹರಿಸುತ್ತಿದ್ದಾರೆ.

**...ತಾತ್ಪರ್ಯ ...**

**ಅನಂತಶಕ್ತಿರ್ಭಗವಾನ್ ಮತ್ಸ್ಯರೂಪೀ ಜನಾರ್ದನಃ । ಕ್ರೀಡಾರ್ಥಂ**
**ಯಾಚಯಾಮಾಸ ಸ್ವಯಂ ಸತ್ಯವ್ರತಂ ನೃಪಮ್ ॥ಇತಿ ಮಾತ್ಸ್ಯೇ**

ಅನಂತಶಕ್ತಿಯುಳ್ಳ ಸಮಗ್ರೈಶ್ವರ್ಯಸಂಪನ್ನನಾದ ಮತ್ಸ್ಯರೂಪಿಯಾದ ಜನಾರ್ದನನು ಸತ್ಯವ್ರತರಾಜನನ್ನು ಕ್ರೀಡಾರೂಪವಾಗಿ ತಾನು ಬೇಡಿದನು. ಆದ್ದರಿಂದ ಅನುಚಿತವಲ್ಲ. ॥೨೦॥

**ಶ್ರೀಶುಕ ಉವಾಚ**

**ತತ ಆದಾಯ ಸಾ ರಾಜ್ಞಾ ಕ್ಷಿಪ್ತಾ ರಾಜನ್ ಸರೋವರೇ ।**
**ತದಾವೃತ್ಯಾತ್ಮನಾ ಸರ್ವಂ ಮಹಾಮೀನೋऽನ್ವವರ್ಧತ ॥೨೧॥**

**ಹೇ ರಾಜನ್** ಪರೀಕ್ಷಿತನೇ **ಸಾ** ಆ ಮೀನು **ರಾಜ್ಞಾ** ಸತ್ಯವ್ರತರಾಜನಿಂದ **ತತಃ** ಬಾವಿಯಿಂದ **ಆದಾಯ** ಎತ್ತಿಕೊಂಡು **ಸರೋವರೇ ಕ್ಷಿಪ್ತಾ** ಸರೋವರದಲ್ಲಿ ಹಾಕಲ್ಪಟ್ಟಿತು. **ಮಹಾಮೀನಃ** ದೊಡ್ಡದಾದ ಆ ಮತ್ಸ್ಯವು **ಆತ್ಮನಾ** ತನ್ನ ದೇಹದಿಂದ **ತತ್ ಸರ್ವಂ** ಆ ಸರೋವರವೆಲ್ಲವನ್ನೂ **ಆವೃತ್ಯ** ವ್ಯಾಪಿಸಿ ನ್ಯವರ್ಧತ **(ಅನ್ವವರ್ಧತ)** ಬೆಳೆಯಿತು. ॥೨೧॥

**ಮೀನ ಉವಾಚ**

**ನೈತನ್ಮೇ ಸ್ವಸ್ತಯೇ ರಾಜನ್ನುದಕಂ ಸಲಿಲೌಕಸಃ ।**
**ನಿಧೇಹಿ ರಕ್ಷಾಯೋಗೇನ ಹ್ರದೇ ಮಾಮವಿದಾಸಿನಿ ॥೨೨॥**

**ರಾಜನ್** ಸತ್ಯವ್ರತನೇ **ಸಲಿಲೌಕಸಃ** ನೀರಿನಲ್ಲಿಯೇ ವಾಸಿಸುವ **ಮೇ** ನನಗೆ **ಏತತ್** ಈ ಸರೋವರದಲ್ಲಿರುವ **ಉದಕಂ** ನೀರು **ಸ್ವಸ್ತಯೇ ನ** ಸುಖಕ್ಕೆ ಸಾಕಾಗುತ್ತಿಲ್ಲ ಆದ್ದರಿಂದ **ರಕ್ಷಾಯೋಗೇನ** ನನ್ನನ್ನು ರಕ್ಷಿಸುವ ಉಪಾಯವಾಗಿ **ಅವಿದಾಸಿನಿ** ಆಳವಾದ ತಲದ ಸ್ಪರ್ಶವೇ ಆಗದಿರುವಷ್ಟು ಅಗಾಧವಾದ **ಹ್ರದೇ** ಮಡುವಿನಲ್ಲಿ **ನಿಧೇಹಿ** ಹಾಕು.

ಸತ್ಯ ಃ- ವಿ ಉಪಸರ್ಗಪೂರ್ವಕ **ದಸೂ ಉಪಕ್ಷಯೇ** ಎಂದು ಧಾತು. ಅದರ ಮೇಲೆ ಘಞಪ್ರತ್ಯಯ ಬಂದು ವಿದಾಸಃ ಎಂದಾಗುತ್ತದೆ. ವಿದಾಸಃ ಉಪಕ್ಷಯಃ ಅಸ್ಯ ಅಸ್ತೀತಿ ವಿದಾಸೀ ಸಃ ನ ಇತಿ ಅವಿದಾಸೀ ತಸ್ಮಿನ್ ಒಣಗದಿರುವ ನೀರುಳ್ಳ ಎಂದರ್ಥವನ್ನು ಕೆಲವರು ಹೇಳಿರುವರು.

**ದಸ ಭೇದನೇ** ಎಂಬ ಧಾತು ಇಟ್ಟುಕೊಂಡು ಅಭೇದ್ಯವಾದ ಇತರರು ಬರದಿರುವ ಎಂದರ್ಥ. ಕೆಲವು ಕಡೆ ತಾಲವ್ಯಪಾಠವಿದೆ. ಅಂದರೆ ವಿದಾಶಿನಿ ಎಂದು ಆಗ ವಿವಿಧಾಃ ದಾಶಾಃ ಸಂತಿ ಅಸ್ಮಿನ್ ಸಮೀಪೇ ಇತಿ ವಿದಾಶೀ ಸ ನ ಭವತೀತಿ ಅವಿದಾಶೀ ಅಂದರೆ ಸಮೀಪದಲ್ಲಿ ಬೆಸ್ತರು ಇಲ್ಲದಿರುವ ಎಂದರ್ಥ. ಬೆಸ್ತರೂ ನನ್ನನ್ನು ತಿನ್ನುವವರೇ. ಆದ್ದರಿಂದ ಅವರಿಲ್ಲದಿರುವಂಥ ಜಲಾಶಯದಲ್ಲಿ ನನ್ನನ್ನು ಹಾಕು ಎಂದು ತಾತ್ಪರ್ಯ.

ವಿದಾಸೀ ಉನ್ನತಃ ಅಭಿನ್ನಃ ವಾ ।

**ತ್ರಿವಿಧಾಃ ಪುರುಷಾ ಲೋಕೇ ನೀಚಮಧ್ಯವಿದಾಸಿನಃ ।**
**ಚತುರ್ಧಾ ವರ್ಣರೂಪೇಣ ಜಗದೇತದ್ವಿದಾಸಿತಮ್ ॥**

ಎಂದು ಪ್ರಥಮತಾತ್ಪರ್ಯದಲ್ಲಿದೆ. ಸ ನ ಭವತೀತಿ ಅವದಾಸೀ ನಿಮ್ನೋ ಅಭಿನ್ನೋ ವಾ ತಸ್ಮಿನ್ ।

ಇವೆಲ್ಲವುಗಳಿಗಿಂತಲೂ ಉತ್ತಮವಾದ, ಈ ಜಲಾಶಯಗಳಿಗಿಂತಲೂ ಭಿನ್ನವಾದ ಜಲಾಶಯದಲ್ಲಿ ನನ್ನನ್ನು ಹಾಕು ಎಂದು ಭಾವ.

**ಇತ್ಯುಕ್ತಃ ಸೋಽನಯನ್ಮತ್ಸ್ಯಂ ತತ್ರ ತತ್ರಾವಿದಾಸಿನಿ ।**
**ಜಲಾಶಯೇ ಸಮ್ಮಿತಂ ತಂ ಸಮುದ್ರೇ ಪ್ರಾಕ್ಷಿಪತ್ ಝಷಮ್ ॥೨೩॥**

**ಇತಿ ಉಕ್ತಃ** ಹೀಗೆ ಹೇಳಿಸಿಕೊಂಡ **ಸಃ** ಸತ್ಯವ್ರತರಾಜನು **ಅವಿದಾಸಿನಿ** ಆಳವಾದ **ತತ್ರ ತತ್ರ** ದೊಡ್ಡ ದೊಡ್ಡ ಮಡವುಗಳಲ್ಲಿ **ಮತ್ಸ್ಯಂ** ಮೀನನ್ನು **ಅನಯತ್** ಒಯ್ದು ಇಡುತ್ತ ಬಂದನು. ಕೊನೆಗೆ **ಜಲಾಶಯೇ** ಆ ಮಡುವಿನಲ್ಲಿ **ಸಮ್ಮಿತಂ** ಸಂಪೂರ್ಣವಾಗಿ ವ್ಯಾಪಿಸಿದ (**ಅಸಮ್ಮಿತಂ** ಎಂದು ಪದಚ್ಛೇದ ಮಾಡಿದಾಗ ಜಲಾಶಯ ಹಿಡಿಸದಾದಾಗ) **ತಂ ಝಷಂ** ಆ ಮೀನನ್ನು **ಸಮುದ್ರೇ ಪ್ರಾಕ್ಷಿಪತ್** ಸಮುದ್ರದಲ್ಲಿ ಹಾಕಿದನು. ॥೨೩॥

**ಕ್ಷಿಪ್ಯಮಾಣಸ್ತಮಾಹೇದಮಿಹ ಮಾಂ ಮಕರಾದಯಃ ।**
**ಅದಂತ್ಯತಿಬಲಾ ವೀರ ಮಾಂ ನೇಹೋತ್ಸ್ರಷ್ಟುಮರ್ಹಸಿ ॥೨೪॥**

**ಕ್ಷಿಪ್ಯಮಾಣಃ** ಸಮುದ್ರಕ್ಕೆ ಹಾಕಲ್ಪಟ್ಟಿದ್ದ ಆ ಮತ್ಸ್ಯವು **ತಂ** ಆ ಸತ್ಯವ್ರತನನ್ನು ಕುರಿತು **ಇದಂ** ಮುಂದೆ ಹೇಳುವ ಮಾತನ್ನು **ಆಹ** ಹೇಳಿತು **ಹೇ ವೀರ** ಪ್ರಾರಂಭಿಸಿದ್ದನ್ನು ಕೊನೆಗಾಣಿಸುವ ರಾಜನೇ **ಇಹ** ಈ ಸಮುದ್ರದಲ್ಲಿ **ಅತಿಬಲಾಃ** ಬಹಳ ಬಲ ಉಳ್ಳ **ಮಕರಾದಯಃ** ಮೊಸಳೆ ಮೊದಲಾದವುಗಳು **ಮಾಂ** ನನ್ನನ್ನು **ಅದಂತಿ** ತಿನ್ನುವವು. ಆದ್ದರಿಂದ **ಮಾಂ** ನನ್ನನ್ನು **ಉತ್ಸ್ರಷ್ಟುಂ** ಸಮುದ್ರದಲ್ಲಿ ಬಿಡಲು **ನ ಅರ್ಹಸಿ** ಯೋಗ್ಯನಲ್ಲ. ಎಂದಿತು.

**ಏವಂ ವಿಮೋಹಿತಸ್ತೇನ ವದತಾ ವಲ್ಗು ಭಾರತೀಮ್ ।**
**ತಮಾಹ ಕೋ ಭವಾನಸ್ಮಾನ್ ಮತ್ಸ್ಯರೂಪೇಣ ಮೋಹಯನ್ ॥೨೫॥**

**ಏವಂ** ಮೇಲೆ ಹೇಳಿದಂತೆ **ವಲ್ಗು** ಮನೋಹರವಾಗಿ ದಯ ಬರುವಂತೆ **ಭಾರತೀಂ** ಮಾತನ್ನು **ವದತಾ** ಆಡುತ್ತಿದ್ದ **ತೇನ** ಆ ಮತ್ಸ್ಯರೂಪಿಯಾದ ಹರಿಯಿಂದ **ವಿಮೋಹಿತಃ** ಹೆಚ್ಚಾಗಿ ಮೋಹಗೊಳಿಸಲ್ಪಟ್ಟ **ಸಃ** ಸತ್ಯವ್ರತರಾಜನು **ತಂ** ಆ ಮೀನನ್ನು ಕುರಿತು **ಮತ್ಸ್ಯರೂಪೇಣ** ಮೀನಿನಂತಿರುವ ಆಕಾರದಿಂದ **ಅಸ್ಮಾನ್** ನಮ್ಮನ್ನು **ಮೋಹಯನ್** ಮೋಹಗೊಳಿಸುತ್ತಿರುವ **ಭವಾನ್** ನೀನು **ಕಃ** ಯಾರು **ಇತಿ ಆಹ** ಎಂದು ಕೇಳಿದನು. ನೀನು ಎಲ್ಲ ಮೀನುಗಳಂತಲ್ಲ. ವಿಲಕ್ಷಣನಾಗಿರುವಿ. ನೀನು ಯಾರೆಂದು ಕೇಳಿದನೆಂದು ಅಭಿಪ್ರಾಯ. ॥೨೫॥

**ನೈವಂವೀರ್ಯೋ ಜಲಚರೋ ದೃಷ್ಟೋಽಸ್ಮಾಭಿಃ ಶ್ರುತೋಽಪಿ ವಾ ।**
**ಯೋ ಭವಾನ್ ಯೋಜನಶತಮಹ್ನಾಯ ವ್ಯಾನಶೇ ಸರಃ ॥೨೬॥**

**ಏವಂವೀರ್ಯಃ** ಈ ಬಗೆಯ ಬೆಳೆಯುವ ಸಾಮರ್ಥ್ಯವುಳ್ಳ **ಜಲಚರಃ** ನೀರಿನಲ್ಲಿರುವ ಪ್ರಾಣಿಯು **ಅಸ್ಮಾಭಿಃ** ನಮ್ಮಿಂದ **ನ ದೃಷ್ಟಃ** ಕಾಣಲ್ಪಟ್ಟಿಲ್ಲ **ವಾ** ಅಥವಾ **ನ ಶ್ರುತಃ ಅಪಿ** ಕೇಳಲ್ಪಟ್ಟೂ ಇಲ್ಲ **ಯಃ** ಯಾವ **ಭವಾನ್** ನೀನು **ಅಹ್ನಾಯ** ಕೂಡಲೇ **ಯೋಜನಶತಂ** ನೂರು ಯೋಜನ ಅಗಲದ **ಸರಃ** ಸರೋವರವನ್ನು **ವ್ಯಾನಶೇ** ದೇಹದಿಂದ ವ್ಯಾಪಿಸಿರುವಿ. ಆದ್ದರಿಂದ ನೀನು ವಿಲಕ್ಷಣ.

ಭಲಾರೀ :- ಅಹ್ನಾಽಭಿವ್ಯಾನಸೇ ಎಂಬ ಪಾಠದಲ್ಲಿ **ಅಹ್ನಾ** ಒಂದು ದಿನದಲ್ಲಿಯೇ **ಅಭಿವ್ಯಾನಶೇ** ಸುತ್ತಲೂ ವ್ಯಾಪಿಸಿತು ಎಂದರ್ಥ. ॥೨೬॥

ಯದ್ಯಪಿ ಸತ್ಯವ್ರತರಾಜ ಮೋಹಿತನಾದ. ಆದರೂ ಸಣ್ಣದಾದ ಆ ಮತ್ಸ್ಯವನ್ನು ಸಂರಕ್ಷಿಸಿದ ಪುಣ್ಯದಿಂದ ಈ ಮತ್ಸ್ಯ ಯಾರೆಂದು ಊಹಿಸಲು ಸಮರ್ಥನಾದ. ನಂತರ ಮಾತನಾಡಿದ-

**ನೂನಂ ತ್ವಂ ಭಗವಾನ್ ಸಾಕ್ಷಾದ್ ಹರಿರ್ನಾರಾಯಣೋऽವ್ಯಯಃ ।**
**ಅನುಗ್ರಹಾಯ ಭೂತಾನಾಂ ಧತ್ಸೇ ರೂಪಂ ಜಲೌಕಸಾಮ್ ॥೨೭॥**

**ಹೇ ಮತ್ಸ್ಯ** ಮೀನವೇ **ತ್ವಂ** ನೀನು **ಭಗವಾನ್** ಸಮಗ್ರ ಐಶ್ವರ್ಯ ಸಂಪನ್ನನಾದ **ಅವ್ಯಯಃ** ನಾಶರಹಿತನಾದ **ಹರಿಃ** ಭಕ್ತರ ಇಷ್ಟವನ್ನು ಕೊಡುವ **ಸಾಕ್ಷಾತ್** ಮುಖ್ಯವಾಗಿ ಭಗವಚ್ಛಬ್ದವಾಚ್ಯನಾದ **ನಾರಾಯಣಃ** ನಾರಾಯಣನೇ **ನೂನಂ** ಇದು ನಿಶ್ಚಯ. **ಭೂತಾನಾಂ** ನಮ್ಮಂಥ ಪ್ರಾಣಿಗಳ **ಅನುಗ್ರಹಾಯ** ಅನುಗ್ರಹಕ್ಕಾಗಿ **ಜಲೌಕಸಾಂ ರೂಪಂ** ನೀರೇ ಮನೆಯಾಗಿ ಉಳ್ಳ ಮೀನಿನ ರೂಪವನ್ನು **ಧತ್ಸೇ** ಧರಿಸಿರುವಿ.

ಸತ್ಯ ಃ- ನ ರೀಯತೇ ಇತಿ ನರಃ ನಾಶರಹಿತನಾದ್ದರಿಂದ ನರ ಎಂದರೆ ವಿಷ್ಣು. ಅವನಿಂದ ಹುಟ್ಟಿದ್ದರಿಂದ ನಾರಾಃ ಎಂದರೆ ನೀರು. ಅವೇ ಅಯನಂ ಆಶ್ರಯವಾಗಿ ಉಳ್ಳ ಎಂದರೆ ಜಲಚರ ಎಂಬರ್ಥವಾಗುವುದು. ॥೨೭॥

ನೂನಂ ಎಂದು ಹೇಳಿದ ನಿಶ್ಚಯವು ಭ್ರಾಂತಿರೂಪವಲ್ಲ ಎಂದು ಹೇಳುತ್ತಾ ನಮಸ್ಕರಿಸುವನು-

**ನಮಸ್ತೇ ಪುರುಷಶ್ರೇಷ್ಠ ಸ್ಥಿತ್ಯುತ್ಪತ್ತ್ಯಪ್ಯಯೇಶ್ವರ ।**
**ಭಕ್ತಾನಾಂ ನಃ ಪ್ರಪನ್ನಾನಾಂ ಮುಖ್ಯೋ ಹ್ಯಾತ್ಮಾ ಗತಿರ್ವಿಭೋ ॥೨೮॥**

**ಹೇ ಪುರುಷೋತ್ತಮ** ಕ್ಷರಾಕ್ಷರಪುರುಷರಿಗಿಂತ ಉತ್ತಮನೇ **ಸ್ಥಿತ್ಯುತ್ಪತ್ತ್ಯಪ್ಯಯೇಶ್ವರ** ಜಗತ್ತಿನ ರಕ್ಷಣೆ-ಉತ್ಪತ್ತಿ-ನಾಶಗಳಿಗೆ ನಿಯಾಮಕನೇ **ವಿಭೋ** ದೇಶಕಾಲಗುಣಗಳಿಂದ ವ್ಯಾಪ್ತನೇ **ತೇ** ನಿನಗೆ **ನಮಃ** ನಮಸ್ಕಾರ **ಪ್ರಪನ್ನಾನಾಂ** ಶರಣಾಗತರಾದ **ಭಕ್ತಾನಾಂ** ಭಕ್ತರಾದ **ನಃ** ನಮಗೆ ನೀನು **ಮುಖ್ಯಃ ಆತ್ಮಾ** ಮುಖ್ಯನಾದ ಸ್ವಾಮಿಯು **ಗತಿಃ** ಪ್ರಾಪ್ಯನು **ಗತಿಃ** ಗತಿಪ್ರದನು **ಹಿ** ಪ್ರಮಾಣಸಿದ್ಧವಿದು. ॥೨೮॥

ಸತ್ಯ ಃ- ಉತ್ಪತ್ತಿಸ್ಥಿತ್ಯಪ್ಯಯೇಶ್ವರ ಎಂದು ಕ್ರಮವಾಗಿ ಹೇಳಬೇಕಿತ್ತು. ಆದರೂ ಈಗ ಮೀನಿನ ರೂಪದಿಂದ ಸ್ಥಿತಿ ಮಾಡಲು ಬಂದಿರುವನೆಂದು ತಿಳಿಸಲು ಸ್ಥಿತಿಗೆ ಮೊದಲ ಸ್ಥಿತಿಕೊಟ್ಟದ್ದು ವಸ್ತುಸ್ಥಿತಿ.

**ಸರ್ವೇ ಲೀಲಾವತಾರಾಸ್ತೇ ಭೂತಾನಾಂ ಭೂತಿಹೇತವೇ ।**
**ಜ್ಞಾತುಮಿಚ್ಛಾಮ್ಯದೋ ರೂಪಂ ಯದರ್ಥಂ ಭವತಾ ಧೃತಮ್ ॥೨೯॥**

**ತೇ** ನಿನ್ನ **ಸರ್ವೇ** ಎಲ್ಲ **ಲೀಲಾವತಾರಾಃ** ಲೀಲಾರೂಪವಾದ ಅವತಾರಗಳು **ಭೂತಾನಾಂ** ಪ್ರಾಣಿಗಳ **ಭೂತಿಹೇತವೇ** ಮೋಕ್ಷ ಮೊದಲಾದ ಅಭ್ಯುದಯಕ್ಕೆ ಶ್ರೇಯಸ್ಸಿಗೆ ಸಾಧನವಾಗಿವೆ. ಅಂದ ಮೇಲೆ **ಅದಃ ರೂಪಂ** ಈ ಮತ್ಸ್ಯರೂಪವು **ಯದರ್ಥಂ** ಯಾವ

ಪ್ರಯೋಜನಕ್ಕಾಗಿ **ಭವತಾ** ನಿನ್ನಿಂದ **ಧೃತಂ** ಧರಿಸಲ್ಪಟ್ಟಿತು. ಅದನ್ನು **ಜ್ಞಾತುಂ ಇಚ್ಛಾಮಿ** ತಿಳಿಯಲು ಇಚ್ಛಿಸುವೆನು. ।।೨೯।।

**ನ ತೇಽರವಿಂದಾಕ್ಷ ಪದೋಪಸರ್ಪಣಂ**
**ಮುಧಾ ಭವೇತ್ಸರ್ವಸುಹೃತ್ಪ್ರಿಯಾತ್ಮನಃ ।**
**ಯಥೇತರೇಷಾಂ ಪೃಥಗಾತ್ಮನಾಂ ಸತಾ-**
**ಮದೀದೃಶೋ ಯದ್ವಪುರದ್ಭುತಂ ಹಿ ನಃ ।।೩೦।।**

**ಹೇ ಅರವಿಂದಾಕ್ಷ** ಕಮಲಗಳಂತೆ ಕಣ್ಣುಗಳುಳ್ಳ ಶ್ರೀಹರಿಯೇ **ಹಿ** ಯಾವ ಕಾರಣದಿಂದ **ನಃ** ನಮಗೆ **ಅದ್ಭುತಂ** ಅತ್ಯಾಶ್ಚರ್ಯಕರವಾದ **ಯತ್** ಯಾವ **ತೇ** ನಿನ್ನ **ವಪುಃ** ಜಗತ್ಸೃಷ್ಟ್ಯಾದಿ ಸಾಮರ್ಥ್ಯ ಉಳ್ಳ ಸಚ್ಚಿದಾನಂದಾತ್ಮಕ ಮತ್ಸ್ಯರೂಪವನ್ನು **ಅದೀದೃಶಃ** ತೋರಿಸಿರುವಿಯೋ **ತಸ್ಮಾತ್** ಆ ಕಾರಣದಿಂದ **ಸರ್ವಸುಹೃತ್ಪ್ರಿಯಾತ್ಮನಃ** ಎಲ್ಲ ಸಜ್ಜನರಿಗೂ ಅನಿಮಿತ್ತ ಬಂಧುವಾದ, ಅವರವರ ಹೆಂಡತಿ-ಮಕ್ಕಳು-ಹಣ ಮೊದಲಾದವುಗಳಿಗಿಂತ ಅತ್ಯಂತಪ್ರಿಯನಾದ **ತೇ** ನಿನ್ನ **ಪದೋಪಸರ್ಪಣಂ** ಪಾದವನ್ನು ಆಶ್ರಯಿಸುವುದು **ಪೃಥಗಾತ್ಮನಾಂ** ಬೇರೆ ವಿಷಯಗಳಲ್ಲಿ ಮನಸ್ಸುಳ್ಳ **ಇತರೇಷಾಂ** ಸಜ್ಜನರಲ್ಲದ ದುರ್ಜನರಿಗೆ **ಯಥಾ** ಹೇಗೆ **ಮುಧಾ** ವ್ಯರ್ಥವೋ **ತಥಾ** ಹಾಗೆ **ಸತಾಂ** ಸಜ್ಜನರಿಗೆ **ಮುಧಾ ನ** ವ್ಯರ್ಥವಲ್ಲ.

ಸತ್ಯ :- ಶ್ರೀಹರಿಯು ಎಲ್ಲಕ್ಕಿಂತ ಅತಿಪ್ರಿಯನೆಂಬುದಕ್ಕೆ ''ಪುತ್ರಾತ್ಪ್ರೇಯೋ ಮಿತ್ರಾತ್ಪ್ರೇಯಃ'' ಎಂಬ ಶ್ರುತಿಯು ಪ್ರಮಾಣವಾಗಿದೆ. ಪುತ್ರಾದಿಗಳು ಪ್ರಿಯವಾಗುವುದಕ್ಕೆ ಇವನ ಸನ್ನಿಧಾನವೇ ಕಾರಣವಾದ್ದರಿಂದ ಇವನೇ ಪುತ್ರಾದಿಗಳಿಗಿಂತ ಪ್ರಿಯನೆಂದರ್ಥ. ಭಗವಂತನನ್ನು ಆಶ್ರಯಿಸುವುದು ಮುಂತಾದ ಪುಣ್ಯಕರ್ಮಗಳು ಅಸಜ್ಜನರಿಗೆ ವ್ಯರ್ಥವೆಂಬುದಕ್ಕೆ ''ಯದ್ಯಪ್ಯನೇವಂವಿತ್ ಮಹತ್ಪುಣ್ಯಂ ಕರ್ಮ ಕರೋತಿ ತದ್ಧಾಸ್ಯಾಂತತಃ ಕ್ಷೀಯತ ಏವ'' ಎಂಬ ಶ್ರುತಿಯು ಪ್ರಮಾಣವಾಗಿದೆ.

ವಿಷಮಸ್ವಭಾವದವನಾದ್ದರಿಂದ ಸಜ್ಜನ-ದುರ್ಜನರಿಗೆ ವಿಪರೀತ ಫಲದಾಯಕನಾಗಿರುವಿ ಎಂಬ ಶಂಕೆಯನ್ನು ''ಸರ್ವಸುಹೃತ್ಪ್ರಿಯಾತ್ಮನಃ'' ಎಂಬ ವಿಶೇಷಣದಿಂದ ಪರಿಹರಿಸಿರುವರು. ಅವರವರ ಯೋಗ್ಯತೆ-ಅಯೋಗ್ಯತೆಗಳೇ ಕಾರಣವೇ ಹೊರತು ನಿನ್ನಲ್ಲಿ ವೈಷಮ್ಯವಿಲ್ಲವೆಂದು ಅಭಿಪ್ರಾಯ. ಸಜ್ಜನನಾದ ನನಗೆ ಈ ನಿನ್ನ ದರ್ಶನದಿಂದ ಮಹತ್ ಪ್ರಯೋಜನವಾಗುವುದು ಎಂದು ಪ್ರಾರ್ಥಿಸಿದಂತಾಯಿತು.

**ಸತಾಂ** ಸಜ್ಜನರಿಗೆ **ತೇ ಪದೋಪಸರ್ಪಣಂ** ನಿನ್ನ ಪಾದಸೇವೆಯು **ಮುಧಾ** ನಿನ್ನ ಸಾಕ್ಷಾತ್ಕಾರ ಹುಟ್ಟಿಸದೇ ವ್ಯರ್ಥವು **ಭವೇತ್ ಕಿಂ** ಆಗುವುದೇನು? ಇಲ್ಲ. **ಪೃಥಗಾತ್ಮನಾಂ** ಮುರ್ಖರಾದ ವಿಷಯಗಳಲ್ಲಿಯೇ ಆಸಕ್ತರಾದ ಹೊರಗೆ ಹರಿಭಕ್ತರಂತೆ ತಮ್ಮನ್ನು

ತೋರಿಸುವವರಿಗೆ **ಮುಧಾ** ನಿನ್ನ ಪಾದಸೇವೆ ವ್ಯರ್ಥ. ಇದಕ್ಕೆ ತಾನೇ ಸಾಕ್ಷಿ ಎಂದು ಹೇಳುವನು. **ನಃ** ನಮಗೆ **ಯತ್ ಯತಃ** ಯಾವ ಕಾರಣ **ಅದ್ಭುತಂ** ಇತರರಿಂದ ನೋಡಲಾಗದೇ ಇರುವುದರಿಂದ ಆಶ್ಚರ್ಯಕರವಾದ **ಇದಂ ವಪುಃ ಅದೀದೃಶಃ** ಈ ರೂಪವನ್ನು ತೋರಿಸಿರುವಿ. ನಾನೂ ಸಜ್ಜನರಲ್ಲೊಬ್ಬ ಆದ್ದರಿಂದಲೇ ತೋರಿಸಿರುವಿ. ಇಲ್ಲವಾದರೆ ಸಾಧ್ಯವಾಗದ ಮಾತಿದು.

**ಸರ್ವಸುಹೃತ್ಪ್ರಿಯಾತ್ಮನಃ** ಎಲ್ಲ ಮಿತ್ರರಿಗಿಂತ ಪ್ರಿಯನಾದ ಎಂದರ್ಥ. ಸರ್ವಸುಹೃತ್ಪ್ರಿಯ ಎಂದು ಸಂಭೋಧನ ಮಾಡಿ ಆತ್ಮನಃ ತೇ ವಪುಃ ಎಂದೂ ಅನ್ವಯ ಮಾಡಿರುವರು. **ಇತರೇಷಾಂ ಕರ್ಮತಂತ್ರಾಣಾಂ ಪೃಥಗಾತ್ಮನಾಂ** ಮೂರ್ಖಜನರಿಗೆ **ಯಥಾ ತಥಾ** ಹೇಗೂ ಹಾಗೆ **ನಃ** ನಮಗೆ **ವಪುಃ** ದುರ್ಭಗವಾದ ಶರೀರವನ್ನು ತೋರಿಸಿದೆ ಎಂಬುದು ಆಶ್ಚರ್ಯ ಎಂದೂ ಯೋಜಿಸುವರು.

ಅಥವಾ ತನ್ನ ಅಹಂಕಾರವನ್ನು ಖಂಡಿಸುವನು. ಸರ್ವಸುಹೃತ್ಪ್ರಿಯಾತ್ಮನಃ ತೇ ಪದೋಪಸರ್ಪಣಂ ಸತಾಂ ಯಥಾ ನ ಮುಧಾ ಭವೇತ್ ಪೃಥಗಾತ್ಮನಾಂ ಇತರೇಷಾಂ ತದ್ಭಿನ್ನಾನಾಂ **ಅಸತಾಂ ನಃ** ಅಸಜ್ಜನರಾದ ನಮಗೆ ಇದಂ ವಪುಃ ಅದೀದೃಶಃ ಇತಿ ಯತ್ ತತ್ ಶಾಠ್ಯೇನ ಕೃತಂ ಪಾದೋಪಸರ್ಪಣಂ ಮುಧಾ ನಾಭೂತ್ ಇತ್ಯದ್ಭುತಂ ಇತಿ. ಸಜ್ಜನರು ನಿನ್ನ ಪಾದಗಳನ್ನು ಭಕ್ತಿಯಿಂದ ಸೇವಿಸುತ್ತಾರೆ. ಅವರಿಗೆ ನಿನ್ನ ರೂಪವನ್ನು ತೋರಿಸುತ್ತಿ . ನಾವು ಶಾಠ್ಯದಿಂದ ನಿನ್ನ ಪಾದಗಳನ್ನು ಭಜಿಸಿದರೂ ನಿನ್ನ ರೂಪವನ್ನು ತೋರಿಸಿರುವಿ. ಇದು ಆಶ್ಚರ್ಯ ಎಂದು ಅಭಿಪ್ರಾಯ. ॥೩೦॥

**ಇತಿ ಬ್ರುವಾಣಂ ನೃಪತಿಂ ಜಗತ್ಪತಿಃ**
**ಸತ್ಯವ್ರತಂ ಮತ್ಸ್ಯವಪುರ್ಯುಗಕ್ಷಯೇ ।**
**ವಿಹರ್ತುಕಾಮಃ ಪ್ರಲಯಾರ್ಣವೇಽಬ್ರವಿತ್**
**ಚಿಕೀರ್ಷುರೇಕಾಂತಜನಪ್ರಿಯಃ ಪ್ರಭುಃ** ॥೩೧॥

**ಜಗತ್ಪತಿಃ** ಜಗದ್ರಕ್ಷಕನಾದ **ಮತ್ಸ್ಯವಪುಃ** ಮತ್ಸ್ಯಾಕಾರನಾದ ಶ್ರೀಹರಿಯು **ಯತಃ** ಯಾವ ಕಾರಣ ತಾನು **ಏಕಾಂತಜನಪ್ರಿಯಃ** ಏಕಾಂತಭಕ್ತರಿಗೆ ಪ್ರಿಯನಾದ **ಪ್ರಭುಃ** ಅವರ ಇಷ್ಟಾರ್ಥಗಳನ್ನು ಕೊಡುವಲ್ಲಿ ಸಮರ್ಥನಾದ **ಯುಗಕ್ಷಯೇ** ಹಿಂದಿನ ದಿನಕಲ್ಪದ ಕೊನೆಯಲ್ಲಿ **ಪ್ರಲಯಾರ್ಣವೇ** ಪ್ರಲಯಸಮುದ್ರದಲ್ಲಿ **ವಿಹರ್ತುಕಾಮಃ** ವಿಹಾರ ಮಾಡ ಬಯಸಿ **ಇತಿ ಬ್ರುವಂತಂ** ಮೇಲೆ ಹೇಳಿದಂತೆ ವಿಜ್ಞಾಪಿಸಿಕೊಳ್ಳುತ್ತಿದ್ದ **ನೃಪತಿಂ** ರಾಜನಾದ ಸತ್ಯವ್ರತನನ್ನು ಕುರಿತು **ಚಿಕೀರ್ಷಿತಂ** ತಾನು ಮಾಡಬೇಕೆಂದಿರುವ ಕೆಲಸವನ್ನು **ಅಬ್ರವೀತ್** ಹೇಳಿದನು. ॥೩೧॥

**ಶ್ರೀಭಗವಾನುವಾಚ**

**ಸಪ್ತಮೇಽದ್ಯತನಾದೂರ್ಧ್ವಮಹನ್ಯೇತದರಿಂದಮ ।**
**ನಿಮಂಕ್ಷ್ಯತ್ಯಪ್ಯಯಾಂಭೋಧೌ ತ್ರೈಲೋಕ್ಯಂ ಭೂರ್ಭುವಾದಿಕಮ್ ॥೩೨॥**

**ಹೇ ಅರಿಂದಮ** ಶತ್ರುಸಂಹಾರಕನಾದ ಸತ್ಯವ್ರತನೇ **ಅದ್ಯತನಾತ್** ಇವತ್ತಿನಿಂದ **ಊರ್ಧ್ವಂ** ಮುಂದಿನ **ಸಪ್ತಮೇ ಅಹನಿ** ಏಳನೆಯ ಹಗಲಿನಲ್ಲಿ **ಭೂರ್ಭುವಾದಿಕಂ** ಭುಲೋಕ, ಭುವರ್ಲೋಕ, ಸ್ವರ್ಗಲೋಕಗಳೆಂಬ **ತ್ರೈಲೋಕ್ಯಂ** ಮೂರು ಲೋಕಗಳು **ಅಪ್ಯಯಾಂಭೋಧೌ** ಪ್ರಳಯಸಮುದ್ರದಲ್ಲಿ **ನಿಮಂಕ್ಷ್ಯಂತಿ** ಮುಳುಗಿ ಹೋಗುತ್ತದೆ. ॥೩೨॥

**ತ್ರಿಲೋಕ್ಯಾಂ ಲೀಯಮಾನಾಯಾಂ ಸಂವರ್ತಾಂಭಸಿ ವೈ ತದಾ ।**
**ಉಪಸ್ಥಾಸ್ಯತಿ ನೌಃ ಕಾಚಿದ್ ವಿಶಾಲಾ ತ್ವಾಂ ಮಯೇರಿತಾ ॥೩೩॥**

**ತ್ರಿಲೋಕ್ಯಾಂ** ಮೂರು ಲೋಕಗಳು **ಸಂವರ್ತಾಂಭಸಿ** ದಿನ ಪ್ರಲಯದ ನೀರಿನಲ್ಲಿ **ಲೀಯಮಾನಾಯಾಂ** ಮುಳುಗಿ ಹೋಗುತ್ತಿರಲು **ತದಾ** ಆಗ **ಮಯಾ** ನನ್ನಿಂದ **ಈರಿತಾ** ಪ್ರೇರಿತವಾದ **ವಿಶಾಲಾ** ವಿಸ್ತಾರವಾದ **ಕಾಚಿತ್** ಅದ್ಭುತವಾದ **ನೌಃ** ದೋಣಿಯು **ತ್ವಾಂ ಉಪಸ್ಥಾಸ್ಯತಿ** ನಿನ್ನ ಸಮೀಪಕ್ಕೆ ಬರುತ್ತದೆ. ॥೩೩॥

ದಂತಕಥೆಯಿಂದೇನು ಪ್ರಯೋಜನ **ಕಥಯ ಉದಂತಂ ಭಾವಿನಂ ಉಪಯೋಗಿನಂ** ಉಪಯುಕ್ತವಾದ ಮುಂದೆ ಆಗುವ ವೃತ್ತಾಂತವನ್ನು ಹೇಳು ಎಂದಾಗ ಹೇಳುವನು-

**ತ್ವಂ ತಾವದೌಷಧೀಃ ಸರ್ವಾ ಬೀಜಾನ್ಯುಚ್ಚಾವಚಾನಿ ಚ ।**
**ಸಪ್ತರ್ಷಿಭಿಃ ಪರಿವೃತಃ ಸರ್ವಸತ್ತ್ವೋಪಬೃಂಹಿತಃ ॥೩೪॥**

**ಆರುಹ್ಯ ಬೃಹತೀಂ ನಾವಂ ವಿಚರಿಷ್ಯಸ್ಯವಿಕ್ಲವಃ ।**
**ಏಕಾರ್ಣವೇ ನಿರಾಲೋಕೇ ಋಷೀಣಾಮೇವ ವರ್ಚಸಾ ॥೩೫॥**

**ತಾವತ್** ಆಗ **ತ್ವಂ** ನೀನು **ಸರ್ವಾಃ** ಎಲ್ಲ **ಓಷಧೀಃ** ಭತ್ತ-ಗೋಧಿ ಮುಂತಾದ ಪೈರುಗಳನ್ನು **ಉಚ್ಚಾವಚಾನಿ ಬೀಜಾನಿ** ಉತ್ತಮ ಅಧಮ ಬೀಜಗಳನ್ನು **ಆದಾಯ** ಸಂಗ್ರಹಿಸಿ **ಸರ್ವಸತ್ತ್ವೋಪಬೃಂಹಿತಃ** ಎಲ್ಲ ಪ್ರಾಣಿಗಳಿಂದ ಯುಕ್ತನಾಗಿ **ಸಪ್ತರ್ಷಿಭಿಃ ಪರಿವೃತಃ** ಸಪ್ತಋಷಿಗಳಿಂದ ಕೂಡಿದವನಾಗಿ **ನಿರಾಲೋಕೇ** ಸೂರ್ಯ-ಚಂದ್ರರಿಲ್ಲದ್ದರಿಂದ ಬೆಳಕಿಲ್ಲದ **ಏಕಾರ್ಣವೇ** ಸಮುದ್ರಗಳೆಲ್ಲ ಒಂದಾಗಿರುವ ಆ ದೊಡ್ಡ ಸಾಗರದಲ್ಲಿ **ಋಷೀಣಾಂ ಏವ ತೇಜಸಾ** ಋಷಿಗಳ ತೇಜಸ್ಸಿನಿಂದಲೇ **ಬೃಹತೀಂ** ವಿಶಾಲವಾದ **ನಾವಂ** ದೋಣಿಯನ್ನು **ಆರುಹ್ಯ** ಹತ್ತಿ **ಅವಿಕ್ಲವಃ** ಆತಂಕವಿಲ್ಲದೇ **ವಿಚರಿಷ್ಯಸಿ** ಸಂಚರಿಸುವಿ. ॥೩೪-೩೫॥

**ದೊಧೂಯಮಾನಾಂ ತಾಂ ನಾವಂ ಸಮೀರೇಣ ಬಲೀಯಸಾ ।**
**ಉಪಸ್ಥಿತಸ್ಯ ಮೇ ಶೃಂಗೇ ನಿಬಧ್ನೀಹಿ ಮಹಾಹಿನಾ** ॥೩೬॥

**ಬಲೀಯಸಾ** ಅತ್ಯಂತ ವೇಗವಾಗಿ ಬೀಸುವ **ಸಮಿರೇಣ** ಜಂಝಾ ಮಾರುತದಿಂದ **ದೋಧೂಯಮಾನಾಂ** ಅತ್ತ ಇತ್ತ ಮುಳುಗುವಂತೆ ಅಲೆಗಳಲ್ಲಿ ಹೊಯ್ದಾಡುವ **ತಾಂ ನಾವಂ** ಆ ಹಡಗನ್ನು **ಉಪಸ್ಥಿತಸ್ಯ** ನಿನ್ನ ಸಮೀಪ ಬಂದ **ಮೇ** ನನ್ನ **ಶೃಂಗೇ** ಕೋಡಿಗೆ **ಮಹಾಹಿನಾ** ದೊಡ್ಡ ಸರ್ಪದಿಂದ **ನಿಬಧ್ನೀಹಿ** ಬಲವಾಗಿ ಕಟ್ಟಿ ಬಿಡು. ॥೩೬॥

**ಅಹಂ ತ್ವಾಂ ಋಷಿಭಿಃ ಸಾಕಂ ಸಹ ನಾವಮುದನ್ವತಿ ।**
**ವಿಕರ್ಷನ್ವಿಚರಿಷ್ಯಾಮಿ ಯಾವದ್ಬ್ರಾಹ್ಮೀ ನಿಶಾ ಪ್ರಭೋ** ॥೩೭॥

**ಹೇ ಪ್ರಭೋ** ಇದನ್ನು ಮಾಡಲು ಸಮರ್ಥನಾದ ಸತ್ಯವ್ರತನೇ **ಅಹಂ** ನಾನು **ಋಷಿಭಿಃ ಸಾಕಂ** ಋಷಿಗಳೊಂದಿಗೆ **ಸನಾವಂ** ಹಡಗು ಸಮೇತ ಇರುವ **ತ್ವಾಂ** ನಿನ್ನನ್ನು **ಬ್ರಾಹ್ಮೀ** ಬ್ರಹ್ಮದೇವರ **ನಿಶಾ ಯಾವತ್** ರಾತ್ರಿಯು ಕಳೆಯುವವರೆಗೆ **ಉದನ್ವತಿ** ದಿನಪ್ರಳಯದ ಸಮುದ್ರದಲ್ಲಿ **ವಿಕರ್ಷನ್** ಎಳೆಯುತ್ತ **ವಿಚರಿಷ್ಯಾಮಿ** ಸುತ್ತಾಡುತ್ತೇನೆ.

ಛಲಾರೀ ಃ- ಇಲ್ಲಿ ಬ್ರಾಹ್ಮೀ ನಿಶಾ ಶಬ್ದದಿಂದ ಲಕ್ಷಣಯಾ ಚಾಕ್ಷುಷಮನುಪ್ರಲಯ-ವನ್ನು ಸ್ವೀಕರಿಸಬೇಕು. ಆ ಪ್ರಲಯವು ಕೂಡಾ ಬ್ರಹ್ಮನ ದಿನದಲ್ಲಿಯೇ ಆಗುವುದಾದ್ದರಿಂದ ಬ್ರಹ್ಮಸಂಬಂಧಿಯಾಗಿದೆ. ಸರಿ, ಆದರೂ ಲಕ್ಷಣಾ ಯಾಕೆ ಮಾಡಬೇಕೆಂದರೇ, ಮಹಾಪ್ರಲಯ ಮತ್ತು ದಿನಪ್ರಲಯಗಳಲ್ಲಿ ''ತ್ವಂ ತಾವದೌಷಧೀಃ ಸರ್ವಾಃ'' ಎಂದು ಹೇಳಿದ ಔಷಧಿ ಮುಂತಾದವು ಉಳಿಯುವುದು ಅಸಂಭಾವಿತವಾದ್ದರಿಂದ ಅವುಗಳನ್ನು ತೆಗೆದುಕೊಳ್ಳುವುದು ಬಾಧಿತವಾಗುವುದು. ''ರೂಪಂ ಸ ಜಗೃಹೇ ಮಾತ್ಸ್ಯಂ ಚಾಕ್ಷುಷಾಂತರಸಂಪ್ಲವೇ । ನಾವ್ಯಾರೋಪ್ಯ ಮಹೀಮಯ್ಯಾಮಪಾದ್ವೈವಸ್ವತಂ ಮನುಮ್ । ಎಂದು ಪ್ರಥಮಸ್ಕಂಧದಲ್ಲಿ ಹೇಳಿದ ಪೃಥಿವ್ಯಾದ್ಯವಶೇಷಗಳು ಅಸಂಭಾವಿತವಾಗುವುದು. ಏನೂ ಇಲ್ಲದ ಎರಡೂ ಪ್ರಲಯಗಳಲ್ಲಿ ಸತ್ಯವ್ರತಾದಿಗಳಿಗೆ ಪೃಥಿವ್ಯಾತ್ಮಕ ನೌಕೆಯಲ್ಲಿ ಹತ್ತುವುದು ಸಂಭವಿಸಲಾರದು. ಆಗಲಿ, ಚಾಕ್ಷುಷಮನು-ಪ್ರಲಯವನ್ನು ಸ್ವೀಕರಿಸಲು ಏನು ಪ್ರಮಾಣವೆಂದರೆ ''ರೂಪಂ ಸ ಜಗೃಹೇ ಮಾತ್ಸ್ಯಂ ಚಾಕ್ಷುಷಾಂತರಸಂಪ್ಲವೇ'' ಎಂದು ಚಾಕ್ಷುಷಮನುಪ್ರಲಯದಲ್ಲಿ ಮೀನಿನ ರೂಪ ತೆಗೆದುಕೊಂಡನೆಂದು ಪ್ರಥಮಸ್ಕಂಧದಲ್ಲಿ ಹೇಳಿದ್ದೇ ಪ್ರಮಾಣ. ॥೩೭॥

**ಮದೀಯಂ ಮಹಿಮಾನಂ ಚ ಪರಂ ಬ್ರಹ್ಮೇತಿ ಶಬ್ದಿತಮ್ ।**
**ವೇತ್ಸ್ಯಸ್ಯನುಗೃಹೀತಂ ಮೇ ಸಂಪ್ರಶ್ನೈರ್ವಿವೃತಂ ಹೃದಿ** ॥೩೮॥

**ಸಂಪ್ರಶ್ನೈಃ** ನಿನ್ನ ಅರ್ಥಪೂರ್ಣವಾದ ಪ್ರಶ್ನೆಗಳಿಂದ ಅವುಗಳಿಗೆ ಉತ್ತರವಾಗಿ **ಹೃದಿ** ಮನಮುಟ್ಟುವಂತೆ (ಮನಸ್ಸಿನಲ್ಲಿ) **ವಿವೃತಂ** ಸ್ಪಷ್ಟಮಾಡಿದ **ಮೇ** ನನ್ನಿಂದ **ಅನುಗೃಹೀತಂ** ಅನುಗ್ರಹಪೂರ್ವಕವಾಗಿ ಉಪದಿಷ್ಟವಾದ **ಮದೀಯಂ** ನನ್ನ ಸಂಬಂಧಿಯಾದ **ಪರಂ** ಸರ್ವೋತ್ತಮನೆಂದು **ಬ್ರಹ್ಮ ಇತಿ** ಪೂರ್ಣಗುಣನೆಂದು **ಶಬ್ದಿತಂ** ಶಾಸ್ತ್ರಗಳಲ್ಲಿ ಕರೆಯಲ್ಪಡುವ **ಮಹಿಮಾನಂ** ಮಹಿಮೆಯನ್ನು **ವೇತ್ಸ್ಯಸಿ** ತಿಳಿಯುವೆ.

ಸತ್ಯ ಃ- ಪ್ರಸನ್ನನಾದ ನಾನು ನನ್ನ ಮಹಿಮೆಯನ್ನು ನಿನಗೆ ಉಪದೇಶಿಸುವೆನು ಎಂದರ್ಥ. ಧರ್ಮಗಳು ಭಗವಂತನಿಂದ ಅಭಿನ್ನವಾದದ್ದರಿಂದ ''ಪರಂ ಬ್ರಹ್ಮೇತಿ ಶಬ್ದಿತಂ ಮಹಿಮಾನಂ'' ಎಂದು ಸಾಮಾನಾಧಿಕರಣ್ಯದಿಂದ ವ್ಯವಹಾರ ಮಾಡಿದ್ದಾರೆ. ಅಥವಾ ಪರಂ ಬ್ರಹ್ಮೇತಿ ಶಬ್ದಿತಂ ಮಾಂ ಎಂದು ಶೇಷ ಮಾಡಿರುವರು. ಪರಬ್ರಹ್ಮಶಬ್ದಿತನಾದ ನನ್ನ ಮಹಿಮೆಯನ್ನು ಎಂದಾದರೂ ಮಾಡಬಹುದು. ।।೩೮।।

**ಇತ್ಥಮಾದಿಶ್ಯ ರಾಜಾನಂ ಹರಿರಂತರಧೀಯತ ।**
**ಸೋಽನ್ವವೈಕ್ಷತ ತಂ ಕಾಲಂ ಯಂ ಹೃಷೀಕೇಶ ಆದಿಶತ್ ।।೩೯।।**

**ಹರಿಃ** ಮತ್ಸ್ಯರೂಪಿಯಾದ ಶ್ರೀಹರಿಯು **ರಾಜಾನಂ** ಸತ್ಯವ್ರತರಾಜನನ್ನು ಕುರಿತು **ಇತ್ಥಂ** ಮೇಲೆ ಹೇಳಿದಂತೆ **ಆದಿಶ್ಯ** ಅಪ್ಪಣೆ ಮಾಡಿ **ಅಂತರಧೀಯತ** ಅದೃಶ್ಯನಾದನು. **ಸಃ** ಸತ್ಯವ್ರತರಾಜನು **ಹೃಷೀಕೇಶಃ** ಇಂದ್ರಿಯನಿಯಾಮಕನಾದ, ಆನಂದರೂಪವಾದ ಕೇಶಗಳುಳ್ಳ ಶ್ರೀಹರಿಯು **ಯಂ ಕಾಲಂ** ಯಾವ ಪ್ರಳಯ ಕಾಲವನ್ನು **ಆದಿಶತ್** ಹೇಳಿದ್ದನೋ **ತಂ ಅನ್ವವೈಕ್ಷತ** ಅದನ್ನು ಕಾಯುತ್ತ ಕುಳಿತನು. ।।೩೯।।

**ಆಸ್ತೀರ್ಯ ದರ್ಭಾನ್ ಪ್ರಾಕ್ಕೂಲಾನ್ ರಾಜರ್ಷಿಃ ಪ್ರಾಗುದಙ್ಮುಖಃ ।**
**ನಿಷಸಾದ ಹರೇಃ ಪಾದೌ ಚಿಂತಯನ್ ಮತ್ಸ್ಯರೂಪಿಣಃ ।।೪೦।।**

**ರಾಜರ್ಷಿಃ** ರಾಜನೂ ಋಷಿಯೂ ಆದ ಸತ್ಯವ್ರತನು **ಪ್ರಾಕ್ಕೂಲಾನ್** ಪೂರ್ವದಿಕ್ಕಿಗೆ ಅಗ್ರಗಳಿರುವಂತೆ **ದರ್ಭಾನ್** ದರ್ಭೆಗಳನ್ನು **ಆಸ್ತೀರ್ಯ** ಹರಡಿ **ಪ್ರಾಗುದಙ್ಮುಖಃ** ಪೂರ್ವೋತ್ತರ ಮುಖವಾಗಿ ಅಂದರೆ ಈಶಾನ್ಯಕ್ಕೆ ಮುಖ ಮಾಡಿ **ಮತ್ಸ್ಯರೂಪಿಣಃ ಹರೇಃ** ಮತ್ಸ್ಯಾವತಾರಿಯಾದ ಶ್ರೀಹರಿಯ **ಪಾದೌ** ಪಾದಗಳನ್ನು **ಚಿಂತಯನ್** ಮನಸ್ಸಿನಿಂದ ಆಲೋಚಿಸುತ್ತ **ನಿಷಸಾದ** ಕುಳಿತಿದ್ದನು. ।।೪೦।।

**ತತಃ ಸಮುದ್ರ ಉದ್ವೇಲಃ ಸರ್ವತಃ ಪ್ಲಾವಯನ್ ಮಹೀಮ್ ।**
**ವರ್ಧಮಾನೋ ಮಹಾಮೇಘೈರ್ವರ್ಷದ್ಭಿಃ ಸಮದೃಶ್ಯತ ।।೪೧।।**

**ತತಃ** ಏಳು ದಿನಗಳ ನಂತರ **ವರ್ಷದ್ಭಿಃ** ಮಳೆಗರೆಯುತ್ತಿರುವ **ಮಹಾಮೇಘೈಃ** ಪ್ರಳಯಕಾಲದ ಮೋಡಗಳಿಂದ **ವರ್ಧಮಾನಃ** ನೀರು ಹೆಚ್ಚಾಗುತ್ತಿದ್ದ **ಸಮುದ್ರಃ** ಸಮುದ್ರವು

**ಉದ್ವೇಲಃ ಸನ್** ಎಲ್ಲೆ ಮೀರಿದುದರಿಂದ **ಸರ್ವತಃ** ಎಲ್ಲ ಕಡೆಯಿಂದಲೂ **ಮಹೀಂ** ಮೂರು ಲೋಕಗಳನ್ನು **ಪ್ಲಾವಯನ್** ಮುಳುಗಿಸುತ್ತಿರುವುದಾಗಿ **ಸಮದೃಶ್ಯತ** ಕಾಣಿಸಿತು. ।।೪೦।।

**ಧ್ಯಾಯನ್ ಭಗವದಾದೇಶಂ ದದೃಶೇ ನಾವಮಾಗತಮ್ ।**
**ತಾಮಾರುರೋಹ ವಿಪ್ರೇಂದ್ರೈರಾದಾಯೌಷಧಿವೀರುಧಃ ।।೪೧।।**

**ಸಃ** ಆ ಸತ್ಯವ್ರತರಾಜನು **ಭಗವದಾದೇಶಂ** ಮತ್ಸ್ಯರೂಪಿಯಾದ ಶ್ರೀಹರಿಯ ಆಜ್ಞೆಯನ್ನು **ಧ್ಯಾಯನ್** ಸ್ಮರಿಸುತ್ತ **ಆಗತಾಂ** ಬಂದಿರುವ **ನಾವಂ** ದೋಣಿಯನ್ನು **ದದೃಶೇ** ನೋಡಿದನು. **ಔಷಧಿವೀರುಧಃ** ಬೀಜಗಳನ್ನೂ ಬಳ್ಳಿಗಳನ್ನೂ **ಆದಾಯ** ತೆಗೆದುಕೊಂಡು **ವಿಪ್ರೇಂದ್ರೈಃ** ಸಪ್ತಋಷಿಗಳೊಂದಿಗೆ **ತಾಂ** ಆ ನೌಕೆಯನ್ನು **ಆರುರೋಹ** ಹತ್ತಿದನು. ।।೪೧।।

ಯದ್ಯಪಿ ''ಪಾದೌ ಚಿಂತಯನ್'' ಎಂದು ಮೊದಲು ಹೇಳಿದ್ದರಿಂದ ಮೊದಲೇ ರಾಜನು ಭಗವಂತನ ಚಿಂತನದಲ್ಲಿ ರತನು. ಆದರೂ ಸಜ್ಜನರಿಂದ ಉಪದಿಷ್ಟವಾದುದು ಅಭೀಷ್ಟವನ್ನು ಕೊಡಲು ಸಮರ್ಥವೆಂದು ತಿಳಿದು ಆ ಮುನಿಗಳೂ ಹೇಳಿದರೆಂದು ಹೇಳುವರು-

**ತಮೂಚುರ್ಮುನಯಃ ಪ್ರೀತಂ ರಾಜನ್ ಧ್ಯಾಯಸ್ವ ಕೇಶವಮ್ ।**
**ಸ ವೈ ನಃ ಸಂಕಟಾದಸ್ಮಾದವಿತಾ ಶಂ ವಿಧಾಸ್ಯತಿ ।।೪೩।।**

**ರಾಜನ್** ರಾಜನೇ **ಮುನಯಃ** ಋಷಿಗಳು **ಪ್ರೀತಂ** ಶ್ರೀಹರಿಯ ಪ್ರೀತಿಗೆ ವಿಷಯನಾದ **ತಂ** ಆ ಸತ್ಯವ್ರತನನ್ನು ಕುರಿತು **ಕೇಶವಂ** ಶ್ರೀಹರಿಯನ್ನು **ಧ್ಯಾಯಸ್ವ** ಧ್ಯಾನ ಮಾಡು **ಸಃ ವೈ** ಅವನೇ **ನಃ** ನಮ್ಮನ್ನು **ಅಸ್ಮಾತ್ ಸಂಕಟಾತ್** ಈ ಕಷ್ಟದಿಂದ **ಅವಿತಾ** ರಕ್ಷಿಸುವವನು ಮತ್ತು **ಶಂ** ಸುಖವನ್ನು **ವಿಧಾಸ್ಯತಿ** ಉಂಟುಮಾಡುವವನು **ಇತಿ** ಎಂದು **ಊಚುಃ** ಹೇಳಿದರು.

ಸತ್ಯ :- ಅವಿನಾಶಂ ವಿಧಾಸ್ಯತಿ ಎಂಬ ಪಾಠದಲ್ಲಿ ನಾಶವಾಗದಂತೆ ಮಾಡುವನು ಎಂದು ಅರ್ಥ. ವಿನಾಶಸ್ಯ ಅಕ್ಷೇಮಸ್ಯ ಅಭಾವಃ ಹಿ ಕ್ಷೇಮಃ ಅವಿನಾಶಃ ತಂ ಅಂದರೆ ಕ್ಷೇಮವನ್ನುಂಟು ಮಾಡುವನು ಎಂದು ಅರ್ಥ. ।।೪೩।।

**ಸೋಽನುಧ್ಯಾತಸ್ತತೋ ರಾಜ್ಞಾ ಪ್ರಾದುರಾಸೀನ್ಮಹಾರ್ಣವೇ ।**
**ಏಕಶೃಂಗಧರೋ ಮತ್ಸ್ಯೋ ಹೈಮೋ ನಿಯುತಯೋಜನಃ ।।೪೪।।**

**ತತಃ** ಋಷಿಗಳು ಹೇಳಿದ ನಂತರ **ರಾಜ್ಞಾ** ಸತ್ಯವ್ರತರಾಜನಿಂದ **ಅನುಧ್ಯಾತಃ** ಭಕ್ತಿಪೂರ್ವಕವಾಗಿ ಧ್ಯಾನಮಾಡಿಸಿಕೊಳ್ಳಲ್ಪಟ್ಟ **ಏಕಶೃಂಗಧರಃ** ಒಂದೇ ಕೊಂಬನ್ನು ಧರಿಸಿದ **ಹೈಮಃ** ಬಂಗಾರಬಣ್ಣದ **ನಿಯುತಯೋಜನಃ** ಲಕ್ಷ ಯೋಜನ ವಿಸ್ತಾರದ ಶರೀರ ಉಳ್ಳ ಹಿಂದೆ ಸತ್ಯವ್ರತನಿಗೆ ಕಾಣಿಸಿಕೊಂಡ **ಮತ್ಸ್ಯಃ** ಮತ್ಸ್ಯರೂಪಿಯಾದ ಶ್ರೀಹರಿಯು **ಪ್ರಾದುರಾಸೀತ್** ಪ್ರಳಯ ಸಮುದ್ರದಲ್ಲಿ ವ್ಯಕ್ತನಾದನು. ।।೪೪।।

**ನಿಬದ್ಧ್ಯ ನಾವಂ ತಚ್ಛೃಂಗೇ ಯಥೋಕ್ತೋ ಹರಿಣಾ ಪುರಾ ।**
**ವರತ್ರೇಣಾಹಿನಾ ತುಷ್ಟಸ್ತುಷ್ಟಾವ ಮಧೂಸೂದನಮ್ ॥೪೫॥**

**ಸಃ** ಸತ್ಯವ್ರತರಾಜನು **ಪುರಾ** ಹಿಂದೆ **ಹರಿಣಾ** ಶ್ರೀಹರಿಯಿಂದ **ಯಥೋಕ್ತಃ** ಹೇಗೆ ಹೇಳಲ್ಪಟ್ಟಿದ್ದನೋ ಹಾಗೆ **ನಾವಂ** ಆ ದೋಣಿಯನ್ನು **ತಚ್ಛೃಂಗೇ** ಆ ಮೀನಿನ ಕೋಡಿಗೆ **ವರತ್ರೇಣ** ಹಗ್ಗವಾಗಿ ಉಪಯೋಗಿಸಿಕೊಂಡ **ಅಹಿನಾ** ಹಾವಿನಿಂದ **ನಿಬದ್ಧ್ಯ** ದೃಢವಾಗಿ ಕಟ್ಟಿ **ತುಷ್ಟಃ** ಶ್ರೀಹರಿಯ ಆಜ್ಞೆಯಂತೆ ನಡೆದುಕೊಂಡಿದ್ದೇನೆಂದು ತೃಪ್ತನಾಗಿ **ಮಧುಸೂದನಂ** ಶ್ರೀಹರಿಯನ್ನು **ತುಷ್ಟಾವ** ಸ್ತೋತ್ರಮಾಡಿದನು.

ಸತ್ಯ ಃ- ಎಲ್ಲ ಅವತಾರಗಳಿಗೆ ಮೂಲರೂಪದಿಂದ ಅಭೇದ ಇರುವುದರಿಂದ ಮಧುಸೂದನ ಎಂದು ಹೇಳಿರುವರು. ಅಥವಾ ಮಧು ಸೂದಯತಿ ಇತಿ ಮಧುಸೂದಃ ಮಧುಸೂದೇ ನಯತೀತಿ ಮಧುಸೂದನಃ ತಂ ಎಂಬುದಾಗಿ ವಿಗ್ರಹ ಮಾಡಿಕೊಂಡು ಹೀಗೆ ಅರ್ಥ ತಿಳಿಯಬೇಕು. ಮಧು ಎಂದರೆ ನದಿಯ ನೀರಿನ ಮಾಧುರ್ಯ, ಅದನ್ನು ಸೂದಯತೀತಿ ನಾಶ ಮಾಡುವುದರಿಂದ ಮಧುಸೂದ ಎಂದರೆ ಉಪ್ಪಿನ ಸಮುದ್ರ. **ಮಧುಸೂದೇ** ಉಪ್ಪಿನ ಸಮುದ್ರದಲ್ಲಿ ನ ನಯತಿ ಸೆಳೆದುಕೊಂಡು ಹೋಗುವವನು. ಹೀಗೆ ಯೋಗವನ್ನು ಆಶ್ರಯಿಸಿದಾಗ ಮತ್ಸ್ಯ ಎಂದೇ ಅರ್ಥವಾಗುತ್ತದೆ.

♦ ಅಹಿನಾ ತನ್ನ ಮತ್ಸ್ಯರೂಪಕ್ಕೆ ಶೃಂಗವನ್ನು ಹೇಗೆ ಸೃಷ್ಟಿಮಾಡಿಕೊಂಡಿದ್ದನೋ ಹಾಗೆ ಸೃಷ್ಟಿಮಾಡಿದ ಸರ್ಪದಿಂದ ಎಂದು ಅರ್ಥ. ವೀರರಾಘವ ಮುಂತಾದ ವ್ಯಾಖ್ಯಾನಕಾರರು ಅಹಿನಾ ಎಂದರೆ ವಾಸುಕಿಯಿಂದ ಎಂದು ಅರ್ಥ ಮಾಡಿದ್ದಾರೆ. ಇದಕ್ಕೆ ಮೂಲವು ಕಾಣಿಸುವುದಿಲ್ಲ. ॥೪೫॥

ಭಗವಂತ ಈಗ ಸಾಗರವನ್ನು ದಾಟಿಸುತ್ತಿದ್ದಾನೆ. ಹೀಗೆಯೇ ಸಂಸಾರಸಾಗರವನ್ನೂ ದಾಟಿಸಲಿ ಎಂದು ಬಯಸಿ ಎಂಟು ಶ್ಲೋಕಗಳಿಂದ ಭಗವಂತನ ಸ್ತೋತ್ರವನ್ನು ಮಾಡುತ್ತಿದ್ದಾನೆ. ಅದರಲ್ಲಿಯೂ ನಾನಾ ಯೋನಿಗಳಲ್ಲಿ ತಿರುಗುವ ತನಗೆ ಭಗವಂತನ ಕೃಪೆಯಿಂದಲೇ ಭಗವತ್ಪ್ರಾಪ್ತಿಯಾದುದನ್ನು ಕಂಡು ಮುಕ್ತಿಗಾಗಿ ಅವನನ್ನೇ ಪ್ರಾರ್ಥಿಸುವನು-

**ಅನಾದ್ಯವಿದ್ಯೋಪಹತಾತ್ಮಸಂವಿದ-**
**ಸ್ತನ್ಮೂಲಸಂಸಾರಪರಿಭ್ರಮಾತುರಾಃ ।**
**ಯದೃಚ್ಛಯೇಹೋಪಸೃತಾ ಯಮಾಪ್ನುಯು-**
**ರ್ವಿಮುಕ್ತಿದೋ ನಃ ಪರಮೋ ಗುರುರ್ಭವಾನ್ ॥೪೬॥**

**ಅನಾದ್ಯವಿದ್ಯಾ** ಭಾವರೂಪ ಅಜ್ಞಾನದಿಂದ **ಉಪಹತ** ಆವೃತವಾದ (ವ್ಯಕ್ತವಾಗದಿರುವ) **ಆತ್ಮಸಂವಿದಃ** ಅಂತರ್ಯಾಮಿಯಾದ ಪರಮಾತ್ಮನ ಮತ್ತು ತನ್ನ ಜ್ಞಾನ

ಉಳ್ಳ **ತನ್ಮೂಲ** ಆ ಅವಿದ್ಯಾಮೂಲಕವಾದ ಸಂಸಾರದಲ್ಲಿ **ಪರಿಶ್ರ(ಭ್ರ)ಮಾತುರಾಃ** ಸುತ್ತಾಡುವುದರಿಂದ ಕಷ್ಟಕ್ಕೀಡಾದ ಅಥವಾ ಪರಿಶ್ರಮದಿಂದ ದುಃಖಿತರಾದ ಆದರೆ **ಯದೃಚ್ಛಯಾ** ಹಿಂದಿನ ಜನ್ಮಗಳ ಪುಣ್ಯದ ಫಲವಾಗಿ ಸುಮುಖನಾದ ಶ್ರೀಹರಿಯ ಇಚ್ಛೆಯಿಂದ **ಇಹ** ಈ ಲೋಕದಲ್ಲಿ ಸಂಸಾರದಲ್ಲಿ **ಉಪಸೃತಾಃ** ವಿಶಿಷ್ಟವಾದ ದೇಹವನ್ನು ಹೊಂದಿದ ಅಧಿಕಾರಿಗಳು, ಅಥವಾ **ಉಪಂ** ಅಧಿಕನಾದ ಗುರುವನ್ನು **ಸೃತಾಃ** ಹೊಂದಿದವರು, ಅಥವಾ **ಈಹೋಪಸೃತಾಃ** ಈಹಾ ವಿಷಯೇಚ್ಛೆಯು ಉಪಸೃತಾ ಗತಾ ಯೇಷಾಂ ತೇ ಹೋಗಲ್ಪಟ್ಟವರು **ಯಂ** ಯಾವ ಭಗವಂತನನ್ನು **ಆಪ್ನುಯುಃ** ಶರಣು ಹೊಂದುವರೋ **ಸಃ ಪರಮಃ ಗುರುಃ** ಆ ಅತ್ಯುತ್ತಮಜ್ಞಾನಪ್ರದನಾದ ಗುರುವಾದ **ಭವಾನ್** ನೀನು **ನಃ** ನಮಗೆ **ವಿಮುಕ್ತಿದಃ ಚ** ಯೋಗ್ಯತಾನುಗುಣ ಆನಂದಾನುಭವರೂಪ ಮೋಕ್ಷಪ್ರದನಾಗು.

ಸತ್ಯ ಃ- ಭವ ಅನ್ ಎಂದು ಪದಚ್ಛೇದ ಅ ಇವ ಆಚರನ್ ಅನ್. ವಿಷ್ಣುವಿನಂತೆ ಆಚರಿಸುವ ಎಂದರ್ಥ. ವಿಷ್ಣುವಿನಂತೆ ವಿಷ್ಣುವೇ ಆಚರಿಸುತ್ತಾನೆ ಆದ್ದರಿಂದ ಭೇದಪ್ರತೀತಿವಿರೋಧ ಇಲ್ಲ. ''ಸ್ವದೃಷ್ಟಾಂತೋ ಹರೇರ್ಭವೇತ್'' ಎಂದು ಋಗ್ಭಾಷ್ಯದಲ್ಲಿ ಹೇಳಿದೆ. ನಃ ಮುಕ್ತಿದೋ ಭವ ಎಂದನ್ವಯ.

''ಗುರುರ್ಹಿ ಜಗತೋ ಬ್ರಹ್ಮಾ'' ಎಂದಿರುವುದರಿಂದ ಚತುರ್ಮುಖನೂ ಗುರುವೇ. ಆದ್ದರಿಂದ ಪರಮಃ ಎಂದಿರುವರು. ವಾಯುದೇವರು ಕೂಡಾ ಮುಕ್ತಿದಾತೃಗಳಾಗಿದ್ದಾರೆ. ಭಗವಂತನನ್ನು ಪ್ರತ್ಯೇಕವಾಗಿ ಮುಕ್ತಿದಾತೃಗಳೆಂದು ಏನು ಸ್ತುತಿಸುವುದು? ಎಂದರೆ ವಿಮುಕ್ತಿದೋನಃ ಎಂದಿರುವರು. ವಿಮುಕ್ತಿದಾತ್ ಊನಃ ಎಂದು ವಿಗ್ರಹ ಮಾಡಿಕೊಳ್ಳಬೇಕು. ಅಂದರೆ ಮುಕ್ತಿದಾತೃವಾದ ವಾಯುದೇವರು ಕೂಡಾ ನಿನಗಿಂತ ಊನರಾಗಿದ್ದಾರೆ ಕಡಿಮೆಯಾಗಿದ್ದಾರೆ ಎಂದರ್ಥ.

ಮುಕ್ತಿವಿರುದ್ಧವಾದ್ದರಿಂದ ವಿಮುಕ್ತಿ ಎಂದರೆ ಸಂಸಾರ ಎಂದರ್ಥ. ಅದನ್ನು ದ್ಯತಿ ಖಂಡಯತೀತಿ ವಿಮುಕ್ತಿದಃ ಸಂಸಾರಮೋಚಕನೆಂದರ್ಥ. ।।೪೬।।

ವೈರಾಗ್ಯವಿಲ್ಲದೇ ಮುಕ್ತಿ ಹೇಗಾದೀತು? ಎಂದರೆ ಹಾಗಾದರೆ ಅದು ಕೂಡಾ ನಿನ್ನ ಸೇವೆಯಿಂದಲೇ ಬರುವುದಾದ್ದರಿಂದ ನಿನ್ನ ಸೇವೆಯನ್ನೇ ಕೊಡು ಎಂಬ ಅಭಿಪ್ರಾಯದಿಂದ ಸಂಸಾರಕ್ಕೆ ಕಾರಣವಾದ ಅವಿದ್ಯಾನಾಶವನ್ನು ಪ್ರಾರ್ಥಿಸುವನು-

**ಜನೋಽಬುಧೋಽಯಂ ನಿಜಕರ್ಮಬಂಧನಃ**
**ಸುಖೇಚ್ಛಯಾ ಕರ್ಮ ಸಮೀಹತೇಽಸುಖಮ್ ।**
**ಯತ್ಸೇವಯಾ ತಾಂ ವಿಧುನೋತ್ಯಸನ್ಮತಿಂ**
**ಗ್ರಂಥಿಂ ವಿಭಿಂದ್ಯಾತ್ ಹೃದಯೇ ಸ ನೋ ಗುರುಃ** ।।೪೭।।

**ನಿಜಕರ್ಮಬಂಧನಃ** ಕರ್ಮದ ಫಲವಾಗಿ ಸಂಸಾರಬಂಧನಕ್ಕೊಳಗಾದ **ಅಯಂ** ಈ **ಅಬುಧಃ ಜನಃ** ಅಜ್ಞಾನಿಯಾದ ಮನುಷ್ಯನು **ಸುಖೇಚ್ಛಯಾ** ಸುಖವನ್ನು ಹೊಂದುವ ಇಚ್ಛೆಯಿಂದ **ಕರ್ಮ** ಪ್ರವೃತ್ತಕರ್ಮವನ್ನು **ಸಮೀಹತೇ** ಮಾಡುತ್ತಾನೆ. **ಇತಿ ಯತ್ ತತಃ** ಹೀಗೇನುಂಟೋ ಆ ಕಾರಣದಿಂದ **(ಬುಧಃ ಜನಃ)** ಜ್ಞಾನಿಗಳಾದ ಜನರು **ಯತ್ಸೇವಯಾ** ಯಾವ ನಿನ್ನ ಸೇವೆಯಿಂದ **ತಾಂ** ಅಬುಧನೆಂದು ಹೇಳಿದ **ಅಸನ್ಮತಿಂ** ಪ್ರವೃತ್ತಕರ್ಮ ಮಾಡಬೇಕೆಂಬ ಮೋಕ್ಷಕ್ಕೆ ಪ್ರತಿಬಂಧಕವಾದ ದುಷ್ಟಬುದ್ಧಿಯನ್ನು **ವಿಧುನೋತಿ** ಬಿಡುತ್ತಾನೆ. ಅದರಿಂದ ಕರ್ಮಕ್ಷಯವನ್ನು ಹೊಂದುತ್ತಾನೆ. **ಗುರುಃ** ಜ್ಞಾನೋಪದೇಶಕನಾದ **ಸಃ** ಆ ನೀನು **ಹೃದಯೇ** ಹೃದಯದಲ್ಲಿರುವ **ಗ್ರಂಥಿಂ** ಕರ್ಮಪಾಶದಿಂದ ಬಂದ ಅಜ್ಞಾನವನ್ನು **ಭಿಂದ್ಯಾತ್** ಭೇದಿಸು ನಾಶಪಡಿಸು.

ಸತ್ಯ ಃ- ಸನಃ ಗುರುಃ ಎಂದಿಟ್ಟುಕೊಂಡು ಹೀಗೆ ಅರ್ಥ ತಿಳಿಯಬೇಕು. ಜಗತ್ತಿನಲ್ಲಿ ಗುರು ಒಬ್ಬನು, ಫಲದಾತಾ ಬೇರೊಬ್ಬನು. ನೀನು ಹಾಗಲ್ಲ. ನೀನು **ಸನೋ ಗುರುಃ** ಆಗಿರುವಿ. ಅಂದರೆ ಯೋಗ್ಯತಾನುಸಾರ ಫಲವನ್ನು ವಿಭಾಗ ಮಾಡಿಕೊಡುವ ಮುಖ್ಯಗುರು ನೀನೇ ಎಂದರ್ಥ. ''ವನ ಷಣ ಸಂಭಕ್ತೌ'' ಎಂಬ ಕ್ರಿಯಾಪದವಿರುವುದರಿಂದ **ಸನಃ ಗುರುಃ** ಎಂದರೆ ಫಲದಾತೃವಾದ ಗುರು ಎಂದರ್ಥ. ||೪೭||

ಯಜ್ಞದಾನಾದಿಗಳಿಲ್ಲದೇ, ಅಂತಃಕರಣಶುದ್ಧಿ ಇಲ್ಲದೇ, ಹೃದಯಗ್ರಂಥಿಭೇದನ ಹೇಗೆ ಸಾಧ್ಯ? ಎಂದರೆ ನಾನಾದೃಷ್ಟಾಂತಗಳ ಮೂಲಕ ಜ್ಞಾನವನ್ನೇ ಪ್ರಾರ್ಥಿಸುವರು-

**ಯತ್ಸೇವಯಾಽಗ್ನೇರಿವ ರುದ್ರರೋದನಂ**
**ಪುಮಾನ್ ವಿಜಹ್ಯಾನ್ಮಲಮಾತ್ಮನಸ್ತಮಃ ।**
**ಭಜೇತ ವರ್ಣಂ ನಿಜಮೇಷ(ವ) ಸೋಽವ್ಯಯೋ**
**ಭೂಯಾತ್ ಸ ಈಶಃ ಪರಮೋ ಗುರೋರ್ಗುರುಃ** ||೪೮||

ಹೇಗೆ **ರುದ್ರರೋದನಂ** ಬಂಗಾರವು **ಅಗ್ನೇಃ ಸೇವಯಾ** ಬೆಂಕಿಯು ಸುಡುವಿಕೆ ಎಂಬ ಸೇವೆಯಿಂದ **ಆತ್ಮನಃ** ತನ್ನಲ್ಲಿ ಸೇರಿಕೊಂಡಿದ್ದ **ಮಲಂ** ಕೊಳೆಯನ್ನು **ವಿಜಹ್ಯಾತ್** ಕಳೆದುಕೊಳ್ಳುವುದೋ ಮತ್ತು **ನಿಜಂ** ತನ್ನ ಸ್ವಾಭಾವಿಕವಾದ **ವರ್ಣಂ ಏವ** ಬಣ್ಣವನ್ನೇ **ಭಜೇತ** ಹೊಂದುತ್ತದೆಯೋ **ಇವ** ಹಾಗೆಯೇ **ಪುಮಾನ್** ಅಧಿಕಾರಿಯು **ಯತ್ಸೇವಯಾ** ಯಾವ ನಿನ್ನ ಆರಾಧನೆಯಿಂದ **ಆತ್ಮನಃ** ತನ್ನ **ಮಲಂ** ದೋಷವಾದ **ತಮಃ** ಅಜ್ಞಾನವನ್ನು **ವಿಜಹ್ಯಾತ್** ಬಿಡುವನು ಕಳೆದುಕೊಳ್ಳುವನು **ನಿಜಂ ವರ್ಣಂ** ತನ್ನ ಶ್ರೇಷ್ಠವಾದ ಆನಂದಾತ್ಮಕವಾದ ರೂಪವನ್ನು **ಭಜತೇ** ಹೊಂದುವನು. **ಅವ್ಯಯಃ** ನಾಶಶೂನ್ಯನಾಗುವನು ಮುಕ್ತನಾಗುವನೆಂದರ್ಥ **ಸಃ** ಆ ಸಜ್ಜನಾರಾಧ್ಯನಾದ **ಈಶಃ** ಮೋಕ್ಷಾದಿ ಸಮಸ್ತಪುರುಷಾರ್ಥಗಳನ್ನು ದಾನಮಾಡಲು ಸಮರ್ಥನಾದ, ಲಕ್ಷ್ಮೀದೇವಿಗೆ

ಸುಖಕರನಾದ **ಗುರೋಃ** ಎಲ್ಲ ಮುಮುಕ್ಷುಗಳಿಗೆ ಗುರುಗಳಾದ ಬ್ರಹ್ಮದೇವರಿಗೆ **ಗುರುಃ** ಉಪದೇಶಕನಾದ **ಪರಮಃ** ಸರ್ವೋತ್ತಮನಾದ, ಮಹಾಜ್ಞಾನಿಯಾದ, ಮಹಾಸಂಪತ್ತುಳ್ಳ ನೀನು ನಮಗೆ ಮುಕ್ತಿಪ್ರದನಾಗು ಎಂದನ್ವಯ.

ಸತ್ಯ ಃ- ''ಈಕಾರಃ ಕಜ್ಜಲೇ ಲಕ್ಷ್ಮ್ಯಾಂ ವಾಣ್ಯಾಂ ಕಮಲಕೇಶರೇ'' ಎಂದು ಏಕಾಕ್ಷರಕೌಮುದೀ ಎಂಬ ಕೋಶವಿದೆ. ''ಜಾತರೂಪಂ ಶ್ರೀಮುಕುಟಂ ಹಿರಣ್ಯಂ ರುದ್ರರೋದನಮ್'' ಎಂದು ಅಭಿದಾನ. ''ಸೋಽರೋದೀತ್ ಯದರೋದೀತ್ ತದ್ರುದ್ರಸ್ಯ ರುದ್ರತ್ವಂ ಯದವಶೀರ್ಯತ ತದ್ರಜತಂ ಹಿರಣ್ಯಮಭವತ್'' ರುದ್ರದೇವರ ಜನನವಾದ ಕೂಡಲೇ ಅವಳು ಅತ್ತರು. ಅವರು ಅತ್ತಾಗ ಬಿದ್ದ ಅಶ್ರುಗಳಿಂದ ಬೆಳ್ಳಿ ಮತ್ತು ಬಂಗಾರವು ಜನಿಸಿತು. ಆದ್ದರಿಂದ ರುದ್ರರೋದನ ಎಂದರೆ ಬಂಗಾರ ಎಂದು ಪ್ರಕೃತ ಅರ್ಥ ಮಾಡಿದೆ.

ಯದ್ಯಪಿ ಸಂತಿ ಪುರವೋ ಗುರವಃ ತಥಾಽಪಿ ತೇ ಲಘವ ಇತಿ ಶ್ಲಾಘಾಪದಂ ತ್ವಮೇವೇತಿ ಶರಣಕರಣೀಯ ಇತ್ಯಾಹ ॥ ನೇತಿ ॥ ಅನೇಕ ಜನ ಗುರುಗಳಿದ್ದಾರೆ. ಆದರೂ ಅವರೆಲ್ಲರೂ ಸಣ್ಣವರೇ. ಎಲ್ಲರಿಂದಲೂ ಪೂಜ್ಯನಾದವನು ನೀನೇ ಆಗಿರುವಿ. ಆದ್ದರಿಂದ ನಿನ್ನನ್ನೇ ಶರಣು ಹೋಗಬೇಕೆಂದು ಈ ಶ್ಲೋಕದಲ್ಲಿ ಹೇಳುತ್ತಿದ್ದಾರೆ-

**ನ ಯತ್ಪ್ರಸಾದಾಯುತಭಾಗಲೇಶಮನ್ಯೇ ಚ**
**ದೇವಾ ಗುರವೋ ಜನಾಃ ಸ್ವಯಮ್ ।**
**ಕರ್ತುಂ ಸಮೇತಾಃ ಪ್ರಭವಂತಿ ಪುಂಸಸ್ತ-**
**ಮೀಶ್ವರಂ ತ್ವಾಂ ಶರಣಂ ಪ್ರಪದ್ಯೇ ॥೪೯॥**

**ಅನ್ಯೇ** ನಿನ್ನಿಂದ ಭಿನ್ನರಾದ **ದೇವಾಃ** ದೇವತೆಗಳು **ಗುರವಃ** ಗುರುಗಳೂ **ಜನಾಃ ಚ** ಇತರ ಜನರು **ಸಮೇತಾಃ** ತಾವೆಲ್ಲರೂ ಸೇರಿದರೂ **ಪುಂಸಃ** ಅಧಿಕಾರಿ ಚೇತನರಿಗೆ **ಯತ್ಪ್ರಸಾದಾಯುತಭಾಗಲೇಶಂ** ಯಾವ ನಿನ್ನ ಅನುಗ್ರಹದ ಅನಂತಭಾಗದಲ್ಲಿಯ ಲೇಶವನ್ನೂ **ಕರ್ತುಂ** ಮಾಡಲು **ಸ್ವಯಂ** ಸ್ವತಂತ್ರವಾಗಿ **ನ ಪ್ರಭವಂತಿ** ಸಮರ್ಥರಾಗುವುದಿಲ್ಲವೋ ಅಂತಹ **ತ್ವಾಂ** ನಿನ್ನನ್ನು **ಈಶ್ವರಂ** ಸರ್ವನಿಯಾಮಕನನ್ನು **ಶರಣಂ ಪ್ರಪದ್ಯೇ** ಮೊರೆ ಹೊಕ್ಕಿರುವೆನು. ರಕ್ಷಕನೆಂದು ಆಶ್ರಯಿಸಿರುವೆನು. ॥೪೯॥

ಸತ್ಯ ಃ- **ಸಮೇತಾಃ** ಒಂದೊಂದೇ ಜಾಜಿಕಾಯಿ ಮದಜನಕವಾಗುವುದಿಲ್ಲ. ಮದಿರಾದ್ರವ್ಯಗಳೆಲ್ಲ ಸೇರಿ ಮದಜನಕವಾಗುತ್ತವೆ. ಹಾಗೆ ಒಬ್ಬೊಬ್ಬರು ಅನುಗ್ರಹಮಾಡಲು ಸಮರ್ಥರಾಗದಿದ್ದರೂ ಎಲ್ಲರೂ ಸೇರಿ ಅನುಗ್ರಹಸಮರ್ಥರಾಗಬಹುದಲ್ಲ ಎಂಬ ಶಂಕೆಯು ಬರುತ್ತದೆ. ಸಮೇತಾಃ ಎಂದು ಹೇಳುವುದರಿಂದ ಎಲ್ಲರು ಸೇರಿದರೂ ಅನುಗ್ರಹಸಮರ್ಥರಾಗುವುದಿಲ್ಲ ಎಂದು ತಿಳಿಸುತ್ತಿದ್ದಾರೆ.

ದೇವತೆಗಳು ಮುಂತಾದವರು ಅನುಗ್ರಹಸಮರ್ಥರಲ್ಲವೆಂದರೆ ಅವರ ಆರಾಧನೆ ಬೇಕಾಗಿಲ್ಲ ಎಂದಾಗುತ್ತದೆ. ಆದ್ದರಿಂದ ಸ್ವಯಂ ಎಂದಿದ್ದಾರೆ. ಅಂದರೆ ದೇವತೆಗಳು ಮುಂತಾದವರು ಸ್ವತಂತ್ರವಾಗಿ ಅನುಗ್ರಹ ಮಾಡಲು ಸಮರ್ಥರಾಗದಿದ್ದರೂ ನಿನ್ನ ಕೃಪೆಯಿಂದ ಅವರು ಕೂಡಾ ಅನುಗ್ರಹಸಮರ್ಥರಾಗುತ್ತಾರೆ. ಆದ್ದರಿಂದ ಅವರ ಆರಾಧನೆ ಆವಶ್ಯಕ ಎಂದು ತಿಳಿಸಿರುವರು. ||೪೯||

ವ್ಯತಿರೇಕಮುಖೇನ ಭಗವಂತನೇ ಗುರುವೆಂದು ಹೇಳುವನು. ಯಾರೊಬ್ಬನನ್ನೂ ಗುರುಗಳನ್ನಾಗಿಸಿಕೊಳ್ಳದೇ ನನ್ನನ್ನು ಗುರುತಮನೆಂದು ಏಕೆ ಸ್ತುತಿಸುವಿ ಎಂದರೆ ಹೇಳುವನು-

**ಸಚಕ್ಷುರಂಧಸ್ಯ ಯಥಾಗ್ರಣೀಃ ಕೃತ-**
**ಸ್ತಥಾ ಜನಸ್ಯಾವಿದುಷೋ ಬುಧೋ ಗುರುಃ ।**
**ತ್ವಮರ್ಥದೃಕ್ ಸರ್ವದೃಶಾಂ ಸಮೀಕ್ಷಣೋ**
**ವೃತೋ ಗುರುರ್ನಃ ಸುಗತಿಂ ವಿವಿತ್ಸತಾಮ್ ||೫೦||**

**ಯಥಾ** ಹೇಗೆ **ಅಂಧಸ್ಯ** ಕುರುಡನಿಗೆ **ಸಚಕ್ಷುಃ** ಸಮರ್ಥವಾದ ಕಣ್ಣುಳ್ಳವನು **ಅಗ್ರಣೀಃ** ಮಾರ್ಗದರ್ಶಕನು **ಕೃತಃ** ವಿವೇಕಿಗಳಿಂದ ಮಾಡಲ್ಪಟ್ಟಿರುವನೋ **ಯಥಾ** ಹೇಗೆ **ಅವಿದುಷಃ** ಅಜ್ಞಾನಿಗಳಿಗೆ **ಬುಧಃ** ಜ್ಞಾನಿಯು **ಗುರುಃ ಕೃತಃ** ಶಾಸ್ತ್ರಜ್ಞಾನಿಗಳಿಂದ ಗುರುವಾಗಿ ಮಾಡಲ್ಪಟ್ಟಿರುವನೋ **ತಥಾ** ಹಾಗೆ **ಅರ್ಥದೃಕ್** ಪುರುಷಾರ್ಥವನ್ನು ತಿಳಿದ **ಸರ್ವದೃಶಾಂ** ಎಲ್ಲ ಇಂದ್ರಿಯಗಳಿಗೂ **ಸಮೀಕ್ಷಣಃ** ಸಾಕ್ಷಿಯಾದ **ತ್ವಂ** ನೀನು **ಸುಗತಿಂ** ಮೋಕ್ಷಕ್ಕೆ ಕಾರಣನಾದ ಶ್ರೀಹರಿಯನ್ನು **ವಿವಿತ್ಸತಾಂ** ತಿಳಿಯಬೇಕೆಂದಿರುವ **ನಃ** ನಮಗೆ **ಗುರುಃ** ಗುರುವೆಂದು **ವೃತಃ** ನಮ್ಮಿಂದ ವರಿಸಲ್ಪಟ್ಟಿರುವೆ.

ಸತ್ಯಧರ್ಮರು ಮತ್ತು ಛಲಾರೀ ಆಚಾರ್ಯರು ಅಚಕ್ಷುರಂಧಸ್ಯ ಎಂದು ಪಠಿಸಿದ್ದಾರೆ. ಅಚಕ್ಷುರಂಧಸ್ಯ ಎಂಬ ಪಾಠದಲ್ಲಿ ಶ್ಲೋಕಾರ್ಥವನ್ನು ಹೀಗೆ ತಿಳಿಯಬೇಕು. ನಿನ್ನ ಹೊರತು ಬೇರೆಯವರು ಸಮ್ಯಗ್ ಜ್ಞಾನಿಗಳಲ್ಲ. ಆದ್ದರಿಂದ ಅವರನ್ನು ಗುರಗಳೆಂದು ಮಾಡಿಕೊಳ್ಳುವುದು ಪುರುಷಾರ್ಥಕ್ಕೆ ಉಪಯೋಗವಿಲ್ಲ ಎಂದು ಹೇಳುತ್ತಿದ್ದಾರೆ.

ಹೇಗೆ, **ಅಂಧಸ್ಯ** ಕುರುಡನಿಗೆ **ಅಚಕ್ಷುಃ** ಕುರುಡನು **ಅಗ್ರಣೀಃ** ಮಾರ್ಗದರ್ಶಕನಾಗಿ **ಕೃತಃ ಚೇತ್** ಮಾಡಲ್ಪಟ್ಟರೆ ಇಷ್ಟವಾದ ಸಾಧನವನ್ನು ಹೊಂದುವುದಿಲ್ಲವೋ ಹೇಗೆ **ಅವಿದುಷಃ ಜನಸ್ಯ** ಅಜ್ಞಾನಿಗಳಿಗೆ **ಅಬುಧಃ ಗುರುಃ ಚೇತ್** ಅಜ್ಞಾನಿಯೇ ಗುರುವಾದರೇ ಅದರಿಂದ ಪ್ರಯೋಜನವಾಗದು ಅನರ್ಥವೇ ಆಗುವುದು. ''ಅಂಧೇನೈವ ನೀಯಮಾನಾ ಯಥಾಂಧಾಃ'' ಎಂಬ ಶ್ರುತಿಯು ''ಉಭಾವಪ್ಯಶ್ರುತಗಂಥೌ ಉಭಾವಪಿ ಜಡಾತ್ಮಕೌ''

ಎಂದು ಸ್ಮೃತಿ. ಗುರುಶಿಷ್ಯರಿಬ್ಬರೂ ಗ್ರಂಥಶ್ರವಣ ಮಾಡದವರು ಇಬ್ಬರೂ ಅಜ್ಞಾನಿಗಳು ಎಂದರ್ಥ. ಸ್ಮೃತಿಯು ಇದನ್ನು ತಿಳಿಸುವದು. ನೀನಾದರೋ ''ಅರ್ಥದೃಕ್ ಶಿಷ್ಯನಿಗೆ ಅಪೇಕ್ಷಿತವಾದ ಪುರುಷಾರ್ಥವನ್ನು ತಿಳಿದವನು. ''ಸರ್ವದೃಶಾಂ ಸಮೀಕ್ಷಣಃ'' ಜ್ಞಾನಸಾಧನಗಳಾದ ಇಂದ್ರಿಯಗಳಿಗೂ ನೀನು ಸಾಕ್ಷಿಯಾಗಿರುವಿ. ಆ ನಿನ್ನನ್ನು ನಾವು ಗುರುಃ ವೃತಃ ಗುರುವೆಂದು ವರಿಸಿದ್ದೇವೆ ಎಂದರ್ಥ. ।।೫೦।।

ಪ್ರಾಕೃತಗುರುವು ಅನರ್ಥಕಾರಣನಾಗಿದ್ದಾನೆ. ಆದ್ದರಿಂದಲೂ ನೀನೇ ಗುರು ಎಂದು ಸ್ವೀಕರಿಸಬೇಕೆಂದು ಹೇಳುವನು-

**ಜನೋ ಜನಸ್ಯಾದಿಶತೇಽಸತೀಂ ಗತಿಂ**
**ಯಯಾ ಪ್ರಪದ್ಯೇತ ದುರತ್ಯಯಂ ತಮಃ ।**
**ತ್ವಮವ್ಯಯಂ ಜ್ಞಾನಮಮೋಘಮಂಜಸಾ**
**ಪ್ರಪದ್ಯತೇ ಯೇನ ಜನೋ ನಿಜಂ ಪದಮ್ ।।೫೧।।**

**ಜನಃ** ಪಾಮರನಾದವನು **ಜನಸ್ಯ** ಪಾಮರನಿಗೆ **ಅಸತೀಂ ಗತೀಂ (ಮತಿಂ)** ದುಷ್ಟಮಾರ್ಗವನ್ನೇ (ಐಹಿಕ-ಆಮುಷ್ಮಿಕಫಲಗಳೇ ಪುರುಷಾರ್ಥವೆಂಬ ಅನ್ಯಥಾಜ್ಞಾನವನ್ನೇ) **ಆದಿಶತೇ** ಉಪದೇಶಿಸುವನು **ಯಯಾ** ಯಾವ ಅನ್ಯಥಾಜ್ಞಾನದಿಂದ (ಶ್ರೀಹರಿ ಸರ್ವೋತ್ತಮನಲ್ಲ, ಅಸ್ವತಂತ್ರ, ಜೀವಾಭಿನ್ನ ಮುಂತಾದ ಅಯಥಾರ್ಥಜ್ಞಾನದಿಂದ) **ದುರತ್ಯಯಂ** ಹಿಂತಿರುಗಿ ಬಾರದ **ತಮಃ** ಅಂಧಂತಮಸ್ಸನ್ನೇ **ಪ್ರಪದ್ಯೇತ** ಹೊಂದುವನು. **ತ್ವಂ** ನೀನು ಸರಿಯಾದ ಗುರುವಾದ್ದರಿಂದ **ಯೇನ** ಯಾವ ಜ್ಞಾನದಿಂದ **ಜನಃ** ಸಜ್ಜನರು (ಮುಕ್ತಿಯೋಗ್ಯರು) **ನಿಜಂ ಪದಂ** ತನ್ನ ಸ್ವಾಭಾವಿಕವಾದ ನಿರ್ದೋಷವಾಗಿ ನಿನ್ನ ರೂಪಕ್ಕೆ ಸದೃಶವಾದ ಸಚ್ಚಿದಾನಂದಮಯವಾದ ಸ್ವರೂಪವನ್ನು **ಅವ್ಯಯಂ** ವ್ಯವಧಾನವಿಲ್ಲದೇ **ಅಂಜಸಾ** ಚೆನ್ನಾಗಿ **ಪ್ರಪದ್ಯತೇ** ಹೊಂದುವನೋ ಅನುಭವಿಸುವನೋ ಮತ್ತು ಯಾವುದು **ಅವ್ಯಯಂ** ನಾಶರಹಿತವೋ ಮತ್ತು **ಅಮೋಘಂ** ತಪ್ಪದೇ ಸುಖರೂಪ ಫಲಕೊಡುವದೋ ಅಂಥ **ಜ್ಞಾನಂ** ಜ್ಞಾನವನ್ನೇ **ಆದಿಶಸಿ** ಉಪದೇಶಿಸುವಿ. ಆದ್ದರಿಂದ ನಿನ್ನನ್ನು ಗುರುವಾಗಿ ಸ್ವೀಕರಿಸಿರುವೆವು ಎಂದು ಭಾವ. ।।೫೧।।

ವಿಷ್ಣುವು ಸರ್ವೋತ್ತಮನಲ್ಲ, ಸ್ವತಂತ್ರನಲ್ಲ, ಜೀವನಿಂದ ಭಿನ್ನನಲ್ಲವೆಂದು ಅಜ್ಞಾನಿಗಳು ಉಪದೇಶಿಸುವರು. ಹಾಗೆಯೇ ಉಪಾಸನ ಮಾಡಿದ ಚೇತನನು ಆ ಉಪಾಸನೆಯ ಫಲವಾಗಿ ನಿತ್ಯದುಃಖಕರವಾದ ತಮಸ್ಸನ್ನು ಸೇರುವನು.

ನಿನ್ನನ್ನು ಗುರುವನ್ನಾಗಿ ಸ್ವೀಕರಿಸಿದರೆ ನಿನ್ನ ಯಥಾರ್ಥಜ್ಞಾನವನ್ನು ಉಪದೇಶಿಸುವಿ. ನೀನು ಕ್ಷರಾಕ್ಷರ ಪುರುಷರಿಗಿಂತ ಭಿನ್ನನು, ಉತ್ತಮನು ಎಂದು ಉಪದೇಶಿಸುವಿ. ಅದರ

ಫಲವಾಗಿ ಯೋಗ್ಯಚೇತನರು ಅವರಿಗೆ ಯೋಗ್ಯವಾದ ವೈಕುಂಠಾದಿ ಸ್ಥಾನಗಳನ್ನು ತಪ್ಪದೇ ಪಡೆಯುವನು ಎಂದು ಭಾವ. ।।೫೧।।

ಕೇವಲ ಗುರುವಷ್ಟೇ ಅಲ್ಲ. ನೀನೇ ಸರ್ವವೆಂದು ನಿನ್ನನ್ನು ನಾನು ನಂಬಿದ್ದೇನೆ. ಆದರೆ ಉಳಿದವರು ನಿನ್ನನ್ನು ನಂಬಿಲ್ಲ. ನಿನ್ನನ್ನು ಯಾವುದಕ್ಕೂ ಸ್ವೀಕರಿಸುವುದಿಲ್ಲ. ಎಂದು ಹೇಳುತ್ತಿದ್ದಾನೆ-

ನೀನು ಅನಿಮಿತ್ತಬಂಧುತ್ವ ಮುಂತಾದ ಗುಣಗಳಿಂದ ಪೂರ್ಣನಾಗಿರುವುದರಿಂದ ಭಕ್ತರನ್ನು ವಂಚಿಸುವಿ ಎಂಬ ಶಂಕೆಗೆ ಅವಕಾಶವೇ ಇಲ್ಲ. ನೀನು ಉಪದೇಶಿಸಿದ ಜ್ಞಾನವೇ ನಮಗೆ ಅಪೇಕ್ಷಿತವಾದ ಪುರುಷಾರ್ಥಗಳನ್ನು ಸಾಧಿಸಿಕೊಡುತ್ತದೆ. ಬೇರೊಂದಿಲ್ಲ. ಎಂಬ ಅಭಿಪ್ರಾಯದಿಂದ ಹೇಳುತ್ತಾರೆ-

ಕಾಮಕ್ರೋಧ ಮುಂತಾದ ದೋಷಗಳನ್ನು ಪರಿತ್ಯಾಗ ಮಾಡದ ಹೊರತು ತನ್ನ ಹೃದಯದಲ್ಲಿ ಸನ್ನಿಹಿತನಾದ ಪರಮಾತ್ಮನ ಜ್ಞಾನವಾಗುವುದು ಅಸಾಧ್ಯವೆಂದೂ ಹೇಳುವರು-

**ತ್ವಂ ಸರ್ವಲೋಕಸ್ಯ ಸುಹೃತ್ ಪ್ರಿಯೇಶ್ವರೋ**
**ಹ್ಯಾತ್ಮಾ ಗುರುರ್ಜ್ಞಾನಮಭೀಷ್ಟಸಿದ್ಧಿಃ ।**
**ತಥಾಽಪಿ ಲೋಕೋ ನ ಭವಂತಮಂಧಧೀ-**
**ರ್ಜಾನಾತಿ ಸಂತಂ ಹೃದಿ ಬದ್ಧಕಾಮಃ ।।೫೨।।**

**ತ್ವಂ** ನೀನು **ಸರ್ವಲೋಕಸ್ಯ** ಎಲ್ಲ ಸಜ್ಜನರಿಗೂ **ಸುಹೃತ್** ಪ್ರತ್ಯುಪಕಾರದ ಅಪೇಕ್ಷೆಯಿಲ್ಲದೇ ಉಪಕಾರ ಮಾಡುವವನು **ಪ್ರಿಯೇಶ್ವರಃ** ಅವರಿಂದ ಕರ್ಮಗಳನ್ನು ಮಾಡಿಸಿ ಪ್ರೀತಿ ಮಾಡುವವನು, ಸಮರ್ಥನು, **ಆತ್ಮಾ** ಸ್ವಾಮಿಯು ಅಂತರ್ನಿಯಾಮಕನು **ಗುರುಃ** ಹೊರಗೂ ವ್ಯಾಸಾದಿರೂಪದಿಂದ ಜ್ಞಾನಪ್ರದನು **ಜ್ಞಾನಂ** ಸರ್ವಜ್ಞನು (ಜಾನಾತೀತಿ ಜ್ಞಾನಂ) ಜ್ಞಾನರೂಪಿಯು **ಅಭೀಷ್ಟಸಿದ್ಧಿಃ** ಮೋಕ್ಷಾದಿಗಳನ್ನು ಕೊಡುವವನು **ಜ್ಞಾನಂ** ಜ್ಞಾನವನ್ನು ಉಪದೇಶಿಸುವವನು ಅದ್ದರಿಂದ ಅಭೀಷ್ಟಸಿದ್ಧಿಪ್ರದನು ಹೀಗೂ ಅರ್ಥಮಾಡಿದೆ. ಆದರೂ **ಅಂಧಧೀಃ** ನಷ್ಟಬುದ್ಧಿಗಳು ಮಂದಬುದ್ಧಿಗಳು ಅಂಧೇನ ಬೋಧಕೇನ ಧೀಃ ಯಸ್ಯ ಸಃ ಅಜ್ಞಾನಿಯಾದ ಗುರುವಿನಿಂದ ತಿಳಿದವರು ಎಂದೂ ಅರ್ಥ. (''ಉಭಾವಪ್ಯಶ್ರುತಗ್ರಂಥೌ'' ಮುಂತಾಗಿ ಇದೆ. ''ಅಂಧೇನೈವ ನೀಯಮಾನಾ ಯಥಾಂಧಾಃ'' ಎಂದಿದೆ) **ಹೃದಿ ಸಂತಂ** ಹೃದಯದಲ್ಲಿರುವ **ಭಗವಂತಂ** ನಿನ್ನನ್ನು **ಬದ್ಧಕಾಮಃ** ಇತರವಿಷಯಗಳಲ್ಲಿ ಸಂಬದ್ಧವಾದ ಇಚ್ಛೆಯುಳ್ಳ (ರಾಗದ್ವೇಷ ತುಂಬಿರುವ) **ಲೋಕಃ** ಜನರು **ನ ಜಾನಂತಿ** ತಿಳಿಯಲಾರರು.

ಸತ್ಯ ಃ- **ಲೋಕೋನಭವಂತಂ** ಎಂದು ಒಂದೇ ಪದ. ಲೋಕಾಃ ಊನಾಃ ಯಸ್ಮಾತ್ ಸಃ ಲೋಕೋನಃ ಸ ಚಾऽಸೌ ಭವಾಂಶ್ಚ ತಂ ಎಂದು ವಿಗ್ರಹ ಮಾಡಿಕೊಳ್ಳಬೇಕು. ಲೋಕವಿಲಕ್ಷಣನಾದ ನಿನ್ನನ್ನು ಎಂದರ್ಥ. ನ ಜಾನಾತಿ ಲೋಕವಿಲಕ್ಷಣನೆಂದು ತಿಳಿಯುವುದಿಲ್ಲ ಎಂದಾದರೂ ಅರ್ಥ. ।।೫೨।।

**ತಂ ತ್ವಾಮಹಂ ದೇವವರಂ ವರೇಣ್ಯಂ**
**ಪ್ರಪದ್ಯ ಈಶಂ ಪ್ರತಿಬೋಧನಾಯ ।**
**ಛಿಂಧ್ಯರ್ಥದೀಪೈರ್ಭಗವಾನ್ ವಚೋಭಿಃ**
**ಗ್ರಂಥಿಂ ಹೃದಯ್ಯಾಂ ವಿವೃಣು ಸ್ವಮೋಕಃ ।।೫೩।।**

**ಅಹಂ** ತತ್ತ್ವಜ್ಞಾನಾಪೇಕ್ಷಿಯಾದ ನಾನು **ದೇವವರಂ** ಎಲ್ಲ ದೇವತೆಗಳಿಗಿಂತ ಉತ್ತಮನಾದ **ವರೇಣ್ಯಂ** ಸೌಂದರ್ಯಾದಿಗುಣಗಳಿಂದ ಭಜನೀಯನಾದ **ಈಶಂ** ಈ ನನ್ನ ಇಚ್ಛೆಯನ್ನು ನಿಯಮಿಸುವ ಸ್ವಭಾವ ಉಳ್ಳ (ಈಶನಶೀಲಂ) **ತಂ ತ್ವಾಂ** ಜ್ಞಾನೋಪದೇಶಕತ್ವಾದಿಗುಣಪೂರ್ಣನಾದ ನಿನ್ನನ್ನು **ಪ್ರತಿಬೋಧನಾಯ** ನಿನ್ನ ಸ್ವರೂಪದ ಜ್ಞಾನಕ್ಕಾಗಿ **ಪ್ರಪದ್ಯೇ** ಶರಣು ಹೊಂದಿದ್ದೇನೆ.

**ಹೇ ಭಗವನ್** ಮತ್ಸ್ಯರೂಪಿಯಾದ ಶ್ರೀಹರಿಯೇ **ಹೃದಯ್ಯಾಂ** ಹೃದಯದಲ್ಲಿರುವ **ಗ್ರಂಥಿಂ** ಅಹಂಕಾರ-ಅಜ್ಞಾನಾದಿಗಳನ್ನು **ಅರ್ಥದೀಪೈಃ** ಪರಾಪರಾರ್ಥಪ್ರಕಾಶಕಗಳಾದ **ವಚೋಭಿಃ** ''ಮನ್ಮನಾ ಭವ ಮದ್ಭಕ್ತಃ'' ಮುಂತಾದ ವಾಕ್ಯಗಳಿಂದ **ಛಿಂದಿ** ನಾಶ ಮಾಡು ಪರಿಹರಿಸು ಮತ್ತು **ಸ್ವಂ ಓಕಃ ಚ** ನಿನ್ನ ಸ್ವರೂಪವನ್ನು ನಿನ್ನ ಸಾಧನವಾದ ವೈಕುಂಠವನ್ನು ನನ್ನ ಸ್ವರೂಪವನ್ನೂ **ವಿವೃಣು** ಪ್ರಕಾಶಗೊಳಿಸು. ಅಭಿಪ್ರಾಯ ತಿಳಿದವನನ್ನು ಕುರಿತು ತನ್ನ ಅಭಿಪ್ರಾಯ ಹೇಳುವುದು ಭೃತ್ಯನ ಕೃತ್ಯವೆಂದು ವಿಜ್ಞಾಪಿಸಿರುವೆನು. ।।೫೩।।

**ಶ್ರೀಶುಕ ಉವಾಚ**

**ಇತ್ಯುಕ್ತವಂತಂ ನೃಪತಿಂ ಭಗವಾನಾದಿಪೂರುಷಃ ।**
**ಮತ್ಸ್ಯರೂಪೀ ಮಹಾಂಭೋಧೌ ವಿಹರಂಸ್ತತ್ತ್ವಮಬ್ರವೀತ್ ।।೫೪।।**

**ಇತಿ** ಈ ರೀತಿಯಾಗಿ **ಉಕ್ತವಂತಂ** ಹೇಳಿದ ಪ್ರಾರ್ಥಿಸಿದ **ನೃಪತಿಂ** ಸತ್ಯವ್ರತರಾಜನನ್ನು ಕುರಿತು **ಆದಿಪೂರುಷಃ** ಎಲ್ಲರಿಗೂ ಮೂಲ ಪುರುಷನಾದ **ಮತ್ಸ್ಯರೂಪೀ ಭಗವಾನ್** ಮತ್ಸ್ಯಾವತಾರಿಯಾದ ಶ್ರೀಹರಿಯು **ಮಹಾಂಭೋಧೌ** ಪ್ರಳಯ ಕಾಲದ ದೊಡ್ಡ ಸಮುದ್ರದಲ್ಲಿ **ವಿಹರನ್** ಕ್ರೀಡಿಸುತ್ತ **ತತ್ತ್ವಂ ಅಬ್ರವೀತ್** ರಹಸ್ಯವಾದ ಪ್ರಮೇಯಗಳನ್ನು, ತನ್ನ ಸ್ವರೂಪವನ್ನು ಹೇಳಿದನು. ।।೫೪।।

ಅದು ಯಾವುದೆಂದು ಹೇಳುವರು-

**ಪುರಾಣಸಂಹಿತಾಂ ದಿವ್ಯಾಂ ಸಾಂಖ್ಯಯೋಗಕ್ರಿಯಾವತೀಮ್ ।**
**ಸತ್ಯವ್ರತಸ್ಯ ರಾಜರ್ಷೇರಾತ್ಮಗುಹ್ಯಮಶೇಷತಃ ॥೫೫॥**

**ರಾಜರ್ಷೇಃ** ರಾಜನೂ ಜ್ಞಾನಿಯೂ ಆದ **ಸತ್ಯವ್ರತಸ್ಯ** ಸತ್ಯವ್ರತನಿಗೆ **ಆತ್ಮಗುಹ್ಯಂ** ಶ್ರೀಹರಿಯ ರಹಸ್ಯವನ್ನೊಳಗೊಂಡ **ಸಾಂಖ್ಯಯೋಗಕ್ರಿಯಾವತೀಂ** ಜ್ಞಾನ, ಭಕ್ತಿ, ಕರ್ಮಗಳೆಂಬ ಮೋಕ್ಷೋಪಾಯಗಳನ್ನು ಹೇಳುವ **ದಿವ್ಯಾಂ** ಶ್ರೇಷ್ಠವಾದ **ಪುರಾಣಸಂಹಿತಾಂ** ಮತ್ಸ್ಯಪುರಾಣವನ್ನು **ಅಶೇಷತಃ** ಇವನಿಗೆ ಯೋಗ್ಯವಾದ ಎಲ್ಲವನ್ನೂ **ಅಬ್ರವೀತ್** ಹೇಳಿದನು.

ಸತ್ಯ :- **ರಾಜರ್ಷೇ** ಎಂಬುದರಿಂದ ಶ್ರೋತ್ರಾನುಕೂಲ್ಯವನ್ನು, ಆತ್ಮಗುಹ್ಯಂ ಎಂಬುದರಿಂದ ವಕ್ತ್ರವಿನ ಅವಿಪ್ರಲಿಪ್ಸೆಯನ್ನು ತಿಳಿಸಿರುವರು. ॥೫೫॥

**ಅಶ್ರೌಷೀದ್ ಋಷಿಭಿಃ ಸಾಕಮಾತ್ಮತತ್ತ್ವಮಸಂಶಯಮ್ ।**
**ನಾವ್ಯಾಸೀನೋ ಭಗವತಾ ಪ್ರೋಕ್ತಂ ಬ್ರಹ್ಮ ಸನಾತನಮ್ ॥೫೬॥**

**ನಾವಿ** ನೌಕೆಯಲ್ಲಿ **ಆಸೀನಃ** ಕುಳಿತಿದ್ದ ಸತ್ಯವ್ರತನು **ಋಷಿಭಿಃ ಸಾಕಂ** ಸಪ್ತಋಷಿಗಳೊಂದಿಗೆ **ಭಗವತಾ** ಮತ್ಸ್ಯರೂಪಿಯಿಂದ **ಅಸಂಶಯಂ** ಸಂಶಯ ಬರದಂತೆ **ಪ್ರೋಕ್ತಂ** ಹೇಳಲ್ಪಟ್ಟ **ಸನಾತನಂ** ಸರ್ವದಾ ಏಕ ಪ್ರಕಾರನಾಗಿರುವ **ಬ್ರಹ್ಮ** ಗುಣಪೂರ್ಣನಾದ ಶ್ರೀಹರಿಯನ್ನು **ಅಶ್ರೌಷೀತ್** ಕೇಳಿದನು.

ಸತ್ಯ :- ಸನಾತನಂ ಬ್ರಹ್ಮ ಉದ್ದಿಶ್ಯ ಪ್ರೋಕ್ತಂ ಭಗವಂತನ ವಿಷಯಕವಾಗಿ ಮೊದಲು ತನಗೆ ತಿಳಿಯದಿರುವುದರಿಂದ ರಹಸ್ಯವಾದ ಭಗವತ್ತತ್ತ್ವವನ್ನು ಕೇಳಿದನು ಹೀಗೂ ಅರ್ಥ.

ಆದಿಮತ್ಸ್ಯಾವತಾರಿಯ ಪ್ರಯೋಜನವನ್ನು ಹೇಳುತ್ತಾರೆ-

**ಅತೀತೇ ಪ್ರಲಯಾಪಾಯ ಉತ್ಥಿತಾಯ ಚ ವೇಧಸೇ ।**
**ಹತ್ವಾಽಸುರಂ ಹಯಗ್ರೀವಂ ವೇದಾನ್ ಪ್ರತ್ಯಾಹರದ್ ಹರಿಃ ॥೫೭॥**

**ಪ್ರಲಯಾಪಾಯೇ ಅತೀತೇ** ಪ್ರಳಯದ ತೊಂದರೆಯು ಕಳೆಯುತ್ತಿರಲು **ಉತ್ಥಿತಾಯ** ನಿದ್ರೆಯಿಂದ ಎದ್ದ **ವೇಧಸೇ** ಬ್ರಹ್ಮದೇವರಿಗೆ **ಹಯಗ್ರೀವಾಸುರಂ ಹತ್ವಾ** ಹಯಗ್ರೀವನೆಂಬ ದೈತ್ಯನನ್ನು ಕೊಂದು **ಹರಿಃ** ಶ್ರೀಹರಿಯು **ವೇದಾನ್** ವೇದಗಳನ್ನು **ಪ್ರತ್ಯಾಹರತ್** ಮತ್ತೆ ತಂದುಕೊಟ್ಟನು. ವೇದಾಭಿಮಾನಿಗಳನ್ನು ದೈತ್ಯರಿಂದ ಬಿಡಿಸಿ ಬ್ರಹ್ಮನ ಅಧೀನಕ್ಕೆ ಇತ್ತನು. ವೇದ ಉಪದೇಶಿಸಿದನು ಎಂದು ಅರ್ಥ. ॥೫೭॥

**ಸ ತು ಸತ್ಯವ್ರತೋ ರಾಜಾ ಜ್ಞಾನವಿಜ್ಞಾನಸಂಯುತಃ ।**
**ವಿಷ್ಣೋಃ ಪ್ರಸಾದಾತ್ ಕಲ್ಪೇಽಸ್ಮಿನ್ನಾಸೀದ್ ವೈವಸ್ವತೋ ಮನುಃ ॥೫೮॥**

**ವಿಷ್ಣೋಃ ಪ್ರಸಾದಾತ್** ಮತ್ಸ್ಯರೂಪಿಯಾದ ಶ್ರೀಹರಿಯ ಅನುಗ್ರಹದಿಂದ **ಸ ತು ಸತ್ಯವ್ರತಃ ರಾಜಾ** ಆ ಸತ್ಯವ್ರತರಾಜನಾದರೂ **ಜ್ಞಾನವಿಜ್ಞಾನಸಂಯುತಃ** ಸಾಮಾನ್ಯಜ್ಞಾನ-ಸ್ವಯೋಗ್ಯವಿಶೇಷಜ್ಞಾನಗಳಿಂದ ಕೂಡಿದವನಾಗಿ **ಅಸ್ಮಿನ್ ಕಲ್ಪೇ** ಈ ಶ್ವೇತವರಾಹವೆಂಬ ದಿನಕಲ್ಪದಲ್ಲಿ **ವೈವಸ್ವತೋ ಮನುಃ ಅಭವತ್** ವೈವಸ್ವತನೆಂಬ ಮನುಗಳಾಗಿ ಆದರು. ॥೫೮॥

**ಸತ್ಯವ್ರತಸ್ಯ ರಾಜರ್ಷೇರ್ಮಾಯಾಮತ್ಸ್ಯಸ್ಯ ಶಾರ್ಙ್ಗಿಣಃ ।**
**ಸಂವಾದಂ ಮಹದಾಖ್ಯಾನಂ ಶ್ರುತ್ವಾ ಮುಚ್ಯೇತ ಕಿಲ್ಬಿಷಾತ್ ॥೫೯॥**

**ರಾಜರ್ಷೇಃ** ರಾಜರ್ಷಿಯಾದ **ಸತ್ಯವ್ರತಸ್ಯ** ಸತ್ಯವ್ರತನ **ಮಾಯಾಮತ್ಸ್ಯಸ್ಯ** ಇಚ್ಛೆಯಿಂದಲೇ ಮತ್ಸ್ಯಾವತಾರಿಯಾದ **ಶಾರ್ಙ್ಗಿಣಃ** ಶಾರ್ಙವೆಂಬ ಧನುರ್ಧಾರಿಯಾದ ಶ್ರೀಹರಿಯು **ಸಂವಾದಂ** ಪ್ರಶ್ನೋತ್ತರರೂಪವಾದ **ಮಹದಾಖ್ಯಾನಂ** ಭಗವಂತನ ಕಥೆಯನ್ನು ಇತಿಹಾಸವನ್ನು **ಶ್ರುತ್ವಾ** ಕೇಳಿರುವ ಅಧಿಕಾರಿಯು **ಕಿಲ್ಬಿಷಾತ್** ಮಹಾಪಾಪದಿಂದ **ಮುಚ್ಯತೇ** ಮುಕ್ತನಾಗುವನು. ॥೫೯॥

ಸಂವಾದವು ಪಾಪನಾಶಕವಾದ್ದರಿಂದ ಆದರಣೀಯವಾಗಲಿ, ಆದರೆ ಅವತಾರ ಚರಿತ್ರೆಯನ್ನು ಏಕೆ ಹೇಳುವುದು ಎಂದರೆ ಹೇಳುತ್ತಾರೆ-

**ಅವತಾರಂ ಹರೇರ್ಯೋಽಮುಂ ಕೀರ್ತಯೇದನ್ವಹಂ ನರಃ ।**
**ಸಂಕಲ್ಪಾಸ್ತಸ್ಯ ಸಿಧ್ಯಂತಿ ಪ್ರಯಾತಿ ಪರಮಾಂ ಗತಿಮ್ ॥೬೦॥**

**ಯಃ ನರಃ** ಯಾವ ಅಧಿಕಾರಿಯು **ಹರೇಃ** ಶ್ರೀಹರಿಯ **ಅಮುಂ** ಈ **ಅವತಾರಂ** ಮತ್ಸ್ಯಾವತಾರವನ್ನು **ಅನ್ವಹಂ** ಪ್ರತಿದಿನವೂ **ಕೀರ್ತಯೇತ್** ಹೇಳುವನೋ **ತಸ್ಯ** ಅವನ **ಸಂಕಲ್ಪಾಃ** ಮನಸ್ಸಿನ ಇಷ್ಟಗಳು **ಸಿಧ್ಯಂತಿ** ಸಿದ್ಧಿಸುವವು ಅವನು **ಪರಮಾಂ ಗತಿಂ ಪ್ರಯಾತಿ** ತನಗೆ ಯೋಗ್ಯವಾದ ಉತ್ತಮಗತಿಯನ್ನು ಹೊಂದುವನು. ॥೬೦॥

ಪ್ರಲಯಕಾಲದಲ್ಲಿಯ ಭಗವಂತನ ವಿಲಕ್ಷಣವಾದ ಅವತಾರದ ಚರಿತ್ರೆಯನ್ನು ಸಂಗ್ರಹಿಸಿ ಶುಕಾಚಾರ್ಯರು ಎಲ್ಲ ಜನರಿಗೆ ಅನುಗ್ರಹ ಮಾಡುವುದಕ್ಕಾಗಿ ಹೇಳುವವರಾಗಿ ಆನಂದತುಂದಿಲರಾಗಿ ಶ್ರೀಹರಿಯನ್ನು ನಮಿಸುವರು-

**ಪ್ರಲಯಪಯಸಿ ಧಾತುಃ ಸುಪ್ತಶಕ್ತೇರ್ಮುಖೇಭ್ಯಃ**
**ಶ್ರುತಿಗಣಮಪನೀತಂ ಪ್ರತ್ಯುಪಾದತ್ತ ಹತ್ವಾ ।**

**ದಿತಿಜಮಕಥಯಚ್ಚ ಬ್ರಹ್ಮ ಸತ್ಯವ್ರತಾಯ**
**ತಮಹಮಖಿಲಹೇತುಂ ಜಿಹ್ಮಮೀನಂ ನತೋಽಸ್ಮಿ ॥೬೧॥**

**॥ ಇತಿ ಶ್ರೀಮದ್ಭಾಗವತೇ ಅಷ್ಟಮಸ್ಕಂಧೇ ದ್ವಾವಿಂಶೋಽಧ್ಯಾಯಃ ॥**

**॥ ಇತಿ ಅಷ್ಟಮಸ್ಕಂಧಃ ಸಮಾಪ್ತಃ ॥**

**ಪ್ರಲಯಪಯಸಿ** ಪ್ರಳಯದ ನೀರಿನಲ್ಲಿ **ಸುಪ್ತಶಕ್ತೇಃ** ಶ್ರೀಹರಿಯ ಇಚ್ಛೆಯಂತೆ ವಿಷಯಗಳಲ್ಲಿ ಉಪರತಗಳಾದ ಇಂದ್ರಿಯಗಳ ಶಕ್ತಿಗಳುಳ್ಳ ಸೃಷ್ಟ್ಯಾದಿಕಾರ್ಯಾಭಿಮುಖವಾಗದ ಸ್ವಭಾವಶಕ್ತಿಯುಳ್ಳ **ಧಾತುಃ** ಚತುರ್ಮುಖ ಬ್ರಹ್ಮದೇವರ **ಮುಖೇಭ್ಯಃ** ನಾಲ್ಕು ಮುಖಗಳಿಂದ ಹೊರಟ **ಯೇನ** ಯಾವ ಹಯಗ್ರೀವಾಸುರನಿಂದ **ಅಪನೀತಂ** ಅಪಹರಿಸಲ್ಪಟ್ಟ **ಶ್ರುತಿಗಣಂ** ವೇದ ಸಮೂಹವನ್ನು **ಯಃ** ಯಾವ ಶ್ರೀಹರಿಯು **ದಿತಿಜಂ** ಅಸುರನನ್ನು **ಹತ್ವಾ** ಸಂಹರಿಸಿ **ಪ್ರತ್ಯುಪಾದತ್ತ** ಮತ್ತೆ ಬ್ರಹ್ಮದೇವರಿಗೆ ಕೊಟ್ಟನೋ **ಸತ್ಯವ್ರತಾಯ** ಸತ್ಯವ್ರತ ರಾಜನಿಗೆ **ಬ್ರಹ್ಮ** ಗುಣಪೂರ್ಣವಾದ ತನ್ನ ಸ್ವರೂಪವನ್ನು **ಅಕಥಯತ್** ಪ್ರಶ್ನೆಗಳಿಗೆ ಉತ್ತರವಾಗಿ ಉಪದೇಶಿಸಿದನೋ **ತಂ** ಆ ಪ್ರಸಿದ್ಧನಾದ **ಅಖಿಲಹೇತುಂ** ಸಮಸ್ತ ಜಗತ್ತಿನ ಸೃಷ್ಟ್ಯಾದಿಗಳಿಗೆ ನಿಮಿತ್ತ ಕಾರಣನಾದ **ಜಿಹ್ಮಮೀನಂ** ಮಾಯಾಮತ್ಸ್ಯನನ್ನು ತನ್ನ ಇಚ್ಛೆಯಿಂದಲೇ ಮೀನಿನ ರೂಪ ಧರಿಸಿದ ಶ್ರೀಹರಿಯನ್ನು **ಅಹಂ** ಶುಕಾಚಾರ್ಯನಾದ ನಾನು **ನತಃ ಅಸ್ಮಿ** ನಮಸ್ಕರಿಸುತ್ತೇನೆ. ॥೬೧॥

ಸತ್ಯ ಃ- **ಸತ್ಯವ್ರತಾಯ ಸತ್ಯಂ** ಸತ್ಯಲೋಕವೇ **ವ್ರತಃ ಇತಿ** ತನ್ನ ಆವಾಸವೆಂದು ಸ್ವೀಕರಿಸಿರುವುದರಿಂದ ಸತ್ಯವ್ರತನೆಂದರೆ ಚತುರ್ಮುಖನು ಅವನಿಗೆ ಎಂದು ಆಂತರಂಗಿಕ ಅರ್ಥ.

ಸತ್ಯವ್ರತಾಯತಮಹಂ ಎಂದು ಸಮಸ್ತಪದ ಎಂದು ಇಟ್ಟುಕೊಂಡು ಹೀಗೆ ಅರ್ಥ ತಿಳಿಯಬೇಕು. ಸತ್ಯವ್ರತಃ ಆಯತಃ ವಿಸ್ತೃತಃ ಮಹಃ ಉತ್ಸವಃ ಯೇನ ಸಃ ತಂ ನತೋಽಸ್ಮಿ ಸತ್ಯವ್ರತನು ಯಾವನಿಂದ ವಿಸ್ತೃತವಾದ ಉತ್ಸವ ಉಳ್ಳವನೋ ಅಂಥ ಪರಮಾತ್ಮನನ್ನು ನಮಸ್ಕರಿಸುವೆನು ಎಂದರ್ಥ.

**ಇಲ್ಲಿಗೆ ಇಪ್ಪತ್ತೆರಡನೇ ಅಧ್ಯಾಯವು ಮುಗಿಯಿತು.**

**॥ ಶ್ರೀಕೃಷ್ಣಾರ್ಪಣಮಸ್ತು ॥**

★★★★

# ಶ್ಲೋಕಾರ್ಧಾನುಕ್ರಮಣಿಕಾ

ಖ



ಗ

ನ

### ಯ

ಷ



ಸ

★★★





ಹೇ ಭಗವನ್! ಈ ಎಲ್ಲ ಲೋಕಗಳೂ ನಿನ್ನ ಸೃಷ್ಟಿಯಾಗಿವೆ. ನಿನಗೆ ಅಧೀನವಾಗಿವೆ. ನಿನ್ನಿಂದಲೇ ನಿಯಮ್ಯವಾಗಿವೆ. ನಿನಗೆ ಕ್ರೀಡಾಲಯಗಳಾಗಿವೆ. ಆದರೆ ಹಲವರು ಈ ಜಗಕ್ಕೆ ತಾವೇ ನಾಥರೆಂದು ಭ್ರಮಿಸುತ್ತಾರೆ. ಆ ಭ್ರಮೆಯಿಂದ ಸಂಸಾರದಲ್ಲಿಯೇ ಪರಿಭ್ರಮಿಸುತ್ತಾರೆ. ಅಂಥವರ ಭ್ರಮೆಯಿಂದ ನಿನ್ನ ಸರ್ವಸ್ವಾಮಿತ್ವಕ್ಕೆ ಯಾವುದೇ ಚ್ಯುತಿ ಇಲ್ಲ. ಇದನ್ನು ತಿಳಿಯದವರು ಬದ್ಧರಾಗುತ್ತಾರೆ. ತಿಳಿದವರು ಮುಕ್ತರಾಗುತ್ತಾರೆ. ಆ ತಿಳುವಳಿಕೆಯನ್ನು ನಮಗೆ ನೀಡು.